ಹೆನು. ಕಾಮವಿಲ್ಲದವಂಗೆ ಕಳವಳ ಉಂಟೆ? ಕ್ರೋಧವಿಲ್ಲದವಂಗೆ ರೋಷ ಉಂಟೆ? ಲೋಭವಿಲ್ಲದವಂಗೆ ಆಸೆಯುಂಟೆ? ಮೋಹವಿಲ್ಲದವಂಗೆ ಪಾಶ ಉಂಟೆ? ಮದವಿಲ್ಲದವಂಗೆ ತಾಮಸ ಉಂಟೆ? ಮತ್ಸರವಿಲ್ಲದವಂಗೆ ಮನ ಸಿನಲ್ಲಿ ಮತ್ತೊಂದು ನೆನೆವನೆ? ಇವು ಇಲ್ಲವೆಂದು ಮನವ ಕದ್ದು ನುಡಿವ ಅಪಶಬ್ದರ ಮಾತ ಮೆಚ್ಚುವನೆ ನಮ್ಮ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ?

೧೧. ನಿಶ್ಚಿಂತನಿರಾಳದಲ್ಲಿ ಆಡುವ ಮಹಾದೇವನ ಕರ್ತೃವೆಂದ ರಿಧ ಕಾರಣದಿಂದ, ತತ್ವವೆಂಬುದನರಿದು ಮನವ ನಿಶ್ಚಿಂತವ ಮಾಡಿ, ನಿಜಸುಖದಲ್ಲಿ ನಿಂದು, ಕತ್ತಲೆಯ ಹರಿಯಿಸಿ, ತಮವ ಹಿಂಗಿಸಿ, ವ್ಯಾಕುಲವನಳಿದು, ನಿರಾಕುಳದಲ್ಲಿ ನಿಂದು, ಬೇಕುಬೇಡೆಂಬುಭಯವ ಳಿದು, ಲೋಕದ ಹಂಗ ಹರಿದು, ತಾನು ವಿವೇಕಿಯಾಗಿ ನಿಂದು, ಮುಂದೆ ನೋಡಿದರೆ, ಜ್ಯೋತಿಯ ಬೆಳಗ ಕಾಣಬಹುದೆಂದರು. ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೧೨. ಬ್ರಹ್ಮಾಂಡದಲ್ಲಿ ಹುಟ್ಟಿದವರೆಲ್ಲ ಭವಬಂಧನಕ್ಕೊಳಗಾವ ರಯ್ಯ. ನಿಮ್ಮ ನಂಬಿದ ಸದ್ಭಕ್ತಮಹೇಶ್ವರರು ಭವಬಂಧನವನೆ ಹಿಂಗಿ ಮರಣ ಬಾಧೆಯನೆ ಗೆದ್ದು, ಕರಣಂಗಳ ಸುಟ್ಟು, ಅರಿವ ಮನವ ನಿಲಿಸಿ ಅನಲ ಪವನ ಗುಣವರತು, ಜನನಮರಣ ವಿರಹಿತವಾದ ಶರಣ ಭವಭಾರಿಗಳೆತ್ತ ಬಲ್ಲರು ನಿಮ್ಮ ನೆಲೆಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೧೩. ಕೈಲಾಸ ಮರ್ತ್ಯಲೋಕವೆಂಬರು. ಕೈಲಾಸವೆಂದರೇನೋ? ಮರ್ತ್ಯವೆಂದರೇನೋ? ಅಲ್ಲಿಯು ನಡೆಯು ಒಂದೆ, ಇಲ್ಲಿಯು ನಡೆಯು ಒಂದೆ. ಅಲ್ಲಿಯ ನುಡಿಯು ಒಂದೆ, ಇಲ್ಲಿಯ ನುಡಿಯು ಒಂದೆ ಕ[illegible] ರಯ್ಯ ಎಂಬರು. ಕೈಲಾಸದವರೆ ದೇವರ್ಕಳೆಂಬರು. ಮರ್ತ್ಯಲೋ[illegible] ವರೆ ಮಹಾಗಣಂಗಳೆಂಬರು. ಸುರಲೋಕದೊಳಗೆ ಸಾಸಿರ ಕಾ[illegible] ಲ್ಲದೆ, ಅಳಿವಿಲ್ಲವೆಂಬರು. ನರಲೋಕದೊಳಗೆ ಸತ್ತುಸತ್ತು ಹುಟ್ಟು[illegible] ರೆಂಬರು. ಇದಕಂಡು ನಮ್ಮ ಶಿವಶರಣರು ಸುರಲೋಕವನು ನರಲೋ ಕವನು ತೃಣವೆಂದು ಭಾವಿಸಿ, ಭವವ ದಾಂಟಿ, ತಮ್ಮ ತಮ್ಮ ಹು[illegible] ರಿದು, ಮಹಾ ಬೆಳಗನೆ ಕೂಡಿ, ಬೆಳಗಿನಲ್ಲಿ ಬಯಲಾದರಯ್ಯ [illegible]ಪ್ಪ ಪ್ರಿಯ ಚನ್ನಬಸವಣ್ಣಾ.

೧೪. ತನು ನಷ್ಟವಾದರೇನಯ್ಯಾ, ಮನ ನಷ್ಟವಾಗದನ್ನಕ್ಕ? ವಾಕ್ಕು ನಷ್ಟವಾದರೇನಯ್ಯಾ, ಬೇಕುಬೇಡೆಂಬುದನಳಿಯದನ್ನಕ್ಕ? ಅಂಗ ಸುಖ ನಷ್ಟವಾದಡೇನಯ್ಯಾ, ಕಂಗಳ ಪಟಲ ಹರಿಯದನ್ನಕ್ಕ? ಮನ ಮುಗ್ಧವಾದಡೇನಯ್ಯಾ, ಅಹಂಮೆಂಬುದ ಬಿಡದನ್ನಕ್ಕ? ಇವೆಲ್ಲರೊಳಗಿರ್ದ ವೆಲ್ಲ ನೆನಿಸಿಕೊಂಬವರ ನುಡಿಯ ಒಲ್ಲದು ನಮ್ಮ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೧೫. ಕಾಯವೆಂಬ ಕದಳಿಯನೆ ಹೊಕ್ಕು, ನೂನ ಕದಳಿಯ ದಾಂಟಿ, ಜೀವಪರಮನ ನೆಲೆಯನರಿದು, ಜನನಮರಣವ ಗೆದ್ದು, ಭವವ ದಾಂಟದಲ್ಲದೆ, ಘನವ ಕಾಣಬಾರದೆಂಬರು ನಮ್ಮ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೧೬. ನರರ ಬಿಡೆನು, ಸುರರ ಹಾಡೆನು. ಕರಣಂಗಳ ಹರಿಯ ಬಿಡೆನು. ಕಾಮನ ಬಲಿಗೆ ಸಿಲ್ಕೆನು. ಮರವೆಗೊಳಗಾಗೆನು. ಪ್ರಣವ ಪಂಚಾಕ್ಷರಿಯನೆ ಜಪಿಸಿಹೆನೆಂದು ತನುವ ಮರೆದು ನಿಜಮುಕ್ತಳಾದೆ ನಯ್ಯಾ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

೧೭. ಅಯ್ಯಾ, ಏನೇನು ಇಲ್ಲದ ಬಯಲ ದೇಹಕ್ಕೆ, ತಾಮಸವ ಮುಚ್ಚಿದು ಮಾಡಿ, ಹೀಗೆ ಕೆಟ್ಟಿತ್ತಲ್ಲ ಜಗವೆಲ್ಲ. ಅದೇನು ಕಾರಣವೆಂದರೆ, ಸುಮುಖವ ಕಡೆಗಿತ್ತು ...ನದ ರಚನೆಯ ನೋಡಿತ್ತು. ಇಚ್ಛೆಯ ಮಚ್ಚಿತ್ತು. ಅಂಗಸುಖವ ಬಯಸಿತ್ತು. ಕಂಗಳ ಕಾಮವನೆ ಮುಂದು ಮಾಡಿತ್ತು. ಇದರಿಂದ ಲಿಂಗವ ಮರೆಯಿತ್ತು. ಜಂಗಮವ ತೊರೆಯಿತ್ತು. ಇದು ಕಾರಣದಿಂದ ಜಗದ ಮನುಜರು ಭವಬಂಧನಕ್ಕೊಳಗಾದರು. ಇವೆಲ್ಲವನು ಹಿಂಗಿಸಿ ನಮ್ಮ ಶಿವಶರಣರು ಲಿಂಗದಲ್ಲಿಯೆ ಬೆರೆದರು. ಜಂಗಮಪ್ರಾಣವೆಂದು, ಪಾದೋದಕ ಪ್ರಸಾದವ ಕೊಂಡು, ಆ ಜಂಗಮದ ಪಾದದಲ್ಲಿ ನಿಜಮುಕ್ತರಾದರಯ್ಯಾ ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೧೮. ಮರ್ತ್ಯದ ಮನುಜರು ತಾವು ಸತ್ಯರು ಸತ್ಯರು ಎನುತಿಪ್ಪರು. ಮತ್ತೆಮತ್ತೆ ಮರಳಿ, ಮಲಮೂತ್ರ ಕೀವಿನ ಕೋಣದ ಉಚ್ಚೆಯ

ಬಚ್ಚಲ ಮೆಚ್ಚಿ. ಹುಚ್ಚುಗೊಂಡು ತಿರುಗುವ ಕತ್ತೆ ಮನುಜರ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೧೯. ಮರ್ತ್ಯದ ಮನುಜರು ಸತ್ತರೆನುತ್ತ, ಕತ್ತಲೆಯೊಳು ಮುಳುಗಿ, ಈ ಮಾತು ಕಲಿತುಕೊಂಡು ತೂತು ಬಾಯೊಳಗೆ ನುಡಿದು ಕಾತರಿಸಿ ಕಂಗೆಟ್ಟು, ಹೇಸಿಕೆಯ ಮಲದ ಕೋಣನ ಉಚ್ಚೆಯಬಾವಿಗೆ ಮೆಚ್ಚಿ ಕಚ್ಚಿಯಾಡಿ, ಹುಚ್ಚುಗೊಂಡು ತಿರುಗುವ ಕತ್ತೆ ಮನುಜರ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೦. ಒಡಕ ಮಡಿಕೆಯಂತೆ ಒಡೆದು ಹೋಗುವ, ಹಡಿಕಿಕಾಯವ ನೆಚ್ಚಿ, ತಟತಟನೆ ತಾಗಿ, ಮಠದ ಬೆಕ್ಕಾಗಿ ತಿಟ್ಟನೆ ತಿರುಗಿ, ಬಟ್ಟೆಯ ಲಿಕ್ಕಿ ಕಡಿವ ಕಳ್ಳನನರಿಯದೆ, ತಿಂಬ ಹುಲಿಯನರಿಯದೆ, ಒಡವೆಯ ಗಳಿಸಿಹೆನೆಂದು ಒಡೆಯನ ಮರೆದು, ತನ್ನ ಮಡದಿಮಕ್ಕಳಿಗೆಂದು ಅವರ ಒಡವೆರೆದು ಹೋಗುವ, ಒಡೆಯರೊಡನೆ ನುಡಿಯರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೧. ಬಂಡಿಯ ಮೇಗಣ ಹೆಳವನಂತೆ, ಕಂಡಕಂಡ ಕಡೆಗೆ ಹಲುಬಿದರೆ, ನಿಮಗೆ ಬಂದುದೇನಿರೋ? ಆ ಮಹಾಘನವನರಿಯದನ್ನಕ್ಕ. ಹಾಡಿದರಿಲ್ಲ, ಹರಸಿದರಿಲ್ಲ, ಕೇಳಿದರಿಲ್ಲ. ಏನ ಮಾಡಿದರು ವಾಯುಕ್ಕೆ ನಾಯುವೆ ವೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೨. ಬೈಲು ಬಯಲಲ್ಲಿ ಒಂದು ಮೃಗವು ಹುಟ್ಟಿತ್ತು. ಅದ ಕಂಡಿಹೆನೆಂಬರಿಗೆ ಕಾಣಬಾರದು. ಹೇಳಿಹೆನೆಂಬರಿಗೆ ಹೇಳಬಾರದು. ಅದು ಚಿದ್ರೂಪ ಚಿನ್ಮಯವು. ಅದು ಗೊತ್ತ ಮೆಟ್ಟಿ ಆಡುವದನರಿಯದೆ, ಕತ್ತಲೆಯಲ್ಲಿ ಮುಳುಗಿ ಕಾಮನ ಬಾಧೆಗೆ ಶಿಲ್ಕಿ ಎತ್ತಲೆಂದರಿಯದೆ, ಭವಬಂಧನದಲ್ಲಿ ಮುಳುಗಿ ಕಾಲನ ಬಾಧೆಗೊಳಗಾಗಿ, ಸತ್ತುಹುಟ್ಟುವ ಮನುಜರ ಮತ್ತೆ ಶಿವಶರಣರ ಕೂಡಿ, ತತ್ವವ ಬಲ್ಲೆವೆಂದು, ತರ್ಕಕ್ಕೆ ಬಾಹರು ಇದು ಹುಸಿ. ನಮ್ಮ ಶರಣರು ಇದ ಮೆಚ್ಚರು. ತತ್ವವೆಂಬುದನೆ ಮೆಚ್ಚಿ ಮಿಥ್ಯವ ನುಡಿವರ ತಮ್ಮ ಪುತ್ರರೆಂದು ಭಾವಿಸಿ, ಸತ್ತುಹುಟ್ಟುವ ನೆರೆತ್ತರಿಸಿ, ನಿಶ್ಚಿಂತದಲ್ಲಿ ನಿಜವ ನೆಮ್ಮಿ ಬಟ್ಟಬಯಲೊಳಗಣ ಮೃಗ ಗೊತ್ತ ಮೆಟ್ಟಿ, ಬಚ್ಚ ಬರಿಯ ಬೆಳಗಿನೊಳಗಾಡುವ ಶರಣರ, ಈ ಸತ್ತ

ಸುಟ್ಟಿ ಹುಳಿಸಿಕೊಂಬ, ಮಿಥ್ಯಾವಾದಿಗಳೆತ್ತ ಬಲ್ಲರು ನಿಮ್ಮ ನೆಲೆಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೨೩. ನಾನೊಂದು ಹಾಳೂರಿಗೆ ಹೋದರೆ, ಅಲ್ಲಿ ನಾಯಿಗಳು ಅಟ್ಟಿಕೊಂಡು ಬಂದವು. ಹುಲಿಕರಡಿ ಅಡ್ಡಲಾದವು. ಇವ ಕಂಡು ನಾ ಹೆದರಿಕೊಂಡು, ನನ್ನ ಕೈಗೊಂದು ಕಲ್ಲ ತಕ್ಕೊಂಡು ನೋಡುತ್ತ ಬರುತಿರಲು, ಆ ನಾಯಿಗಳು ಓಡಿದವು. ಹುಲಿಕರಡಿಗಳು ಅಲ್ಲಿಯೇ ಬಯಲಾದವು. ಆ ಊರು ನಿರ್ಮಳವಾಯಿತ್ತು. ಆ ನಿರ್ಮಳವಾದ ಊರ ಹೊಕ್ಕು ನೋಡಲು, ಆ ನೋಡುವ ನೋಟವು, ಆ ಊರನಾಳುವ ಆರಸು ಆ ಊರಲೆ ಕೂಡಿ ಒಂದಾದರು. ಆ ಒಂದಾದುದನೆ ನೋಡಿ, ದ್ವಂದ್ವವನೆ ಹರಿದು, ನಿಮ್ಮ ಸಂಗಸುಖದೊಳಗೋಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೪. ಕಂಡಿಹೆ ಕೇಳಿಹೆನೆಂದು ಮುಂದುಗಾಣದೆ, ಸಂದೇಹದಲ್ಲಿ ಮುಳುಗಿ ಕಳವಳಿಸಿ ಕಾತರಿಸುವ ಅಣ್ಣಗಳಿರಾ, ನೀವು ಕೇಳಿರೋ, ಹೇಳಿಹೆನು. ಕಾಣಬಾರದ ಘನವ ಹೇಳಬಾರದಾಗಿಗೆಯು. ಹೇಳುವುದಕ್ಕೆ ನುಡಿ ಇಲ್ಲ. ನೋಡುವುದಕ್ಕೆ ರೂಪಿನ ತೆರಹಿಲ್ಲ. ಇಂತಾ ನಿರೂಪದ ಮಹಾಘನದ ಶರಣರ ಹೃದಯದಲ್ಲಿ ನೆಲೆಗೊಂಬುದಲ್ಲದೆ, ಈ ಜನನಮರಣಕ್ಕೊಳಗಾಗುವ ಮನುಜರೆತ್ತ ಬಲ್ಲರು ಈ ಮಹಾಘನದ ನೆಲೆಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೨೫. ತನ್ನ ತಾನರಿಯದೆ ಅನ್ಯರಿಗೆ ಬೋಧೆಯ ಹೇಳುವ ಕುನ್ನಿಗಳೇ ನೀವು ಕೇಳಿರೋ. ಅವರ ಬಾಳುವೆ ಎಂತೆಂದರೆ, ಕುರುಡ ಕನ್ನಡಿಯ ಹಿಡಿದಂತೆ, ತನ್ನೊಳಗೆ ಮರೆದು, ಇದಿರಿಂಗೆ ಬೋಧೆಯ ಹೇಳ, ಉದರವ ಹೊರೆವ ಭೀಮಾರಿಗಳೆಲ್ಲರು ಹಿರಿಯರೆ? ಅಲ್ಲಲ್ಲ. ಇದ ಮೆಚ್ಚುವರೆ ನಮ್ಮ ಶರಣರು? ಅವರ ನಡೆ ಎಂತೆಂದರೆ, ಒಳಗನರಿದು ಹೊರಗೆ ಮರೆದು, ತನುವಿನೊಳಗಣ ಅನುವು ಹಸುಗೆಯ ಮಾಡಿದರು. ಪೃಥ್ವಿಗೆ ಅಪ್ಪುವಿನ ಅಧಿಕವ ಮಾಡಿದರು. ಅಗ್ನಿಯ ಹುದುಗಿದರು. ವಾಯುವ ಬೀರಿದರು. ಆಕಾಶದಲ್ಲಿ ನಿಂದರು. ಓಂಕಾರವನೆತ್ತಿದರು. ಅದರೊಡಗೂಡಿದರು. ಪ್ರಾಣದ ನೆಲೆಯನರಿದರು. ಪ್ರಮಾಣವನೊಂದುಗೂಡಿದರು.

# ವೀರಶೈವ ಗ್ರಂಥಕಾರರು.

(ಲೇಖಕ:— ಪಂಡಿತ ಕೆ. ಸಿ. ನಂಜುಂಡಾರಾಧ್ಯ ಮೈಸೂರು)

ವೀರಶೈವ ವಾಙ್ಮಯದಲ್ಲಿ ಸಂಸ್ಕೃತ, ಕನ್ನಡ, ತೆಲಗು, ತಮಿಳ ಭಾಷೆಗಳಲ್ಲಿ ಅನೇಕ ಗ್ರಂಥಗಳು ಇವೆ. ಇತ್ತೀಚೆಗೆ ವೀರಶೈವ ಪಂಡಿತರು ಗ್ರಂಥಪರಿಶೋಧನಕ್ಕಾಗಿ ಕೈಹಚ್ಚಿರುವದು ಸಂತೋಷಪ್ರದವಾಗಿದೆ. ಈ ಪೈಕಿ ಕೆಲವು ಗ್ರಂಥಗಳು ಅಚ್ಚಾಗಿವೆ. ಅಚ್ಚಾಗದೆ ಇರುವ ಗ್ರಂಥಗಳೇ ಹೇರಳವಾಗಿವೆ. ಅನೇಕ ಗ್ರಂಥಗಳು ಇನ್ನೂ ಉಪಲಬ್ಧವಾಗಿಯೂ ಇಲ್ಲ. ಆದರೂ ಇತ್ತೀಚಿನ ಪಂಡಿತೋತ್ತಮರು ಕರ್ಣಾಟಕ ವಾಙ್ಮಯಕ್ಕೆ ಹೆಚ್ಚಾಗಿ ಗಮನಕೊಟ್ಟಂತೆ ಕಾಣುತ್ತಿದೆ. ವೇದ, ಆಗಮ, ಉಪನಿಷತ್ತು, ಶೃತಿ, ಸ್ಮೃತಿ, ಪುರಾಣ, ಇತಿಹಾಸಗಳ ಸಾರವನ್ನೆ ವಿಶದವಾಗಿ ಹರಿಹರ, ರಾಘವಾಂಕ, ಪಾಲ್ಕುರಿಕೆ ಸೋಮನಾರಾಧ್ಯ, ಬಸವೇಶ್ವರಾದಿಗಳು ಕಾವ್ಯರೂಪವಾಗಿಯೂ, ವಚನಶಾಸ್ತ್ರರೂಪವಾಗಿಯೂ ಬರೆದಿರುತ್ತಾರೆಂದು ಪಂಡಿತೋತ್ತಮರಿಗೆ ಅರಿವಾಗದೆ ಇರಲಾರದು. ಕನ್ನಡ ವಾಙ್ಮಯದಲ್ಲಿ ಮುಕ್ಕಾಲು ಮುರುವೀಸ ಪಾಲೆಲ್ಲ ವೀರಶೈವರ ಕವಿಪರ್ಯಾರ ಗ್ರಂಥರಾಶಿಗಳೇ ಎಲ್ಲಿ ನೋಡಿದರೂ ತುಂಬಿ ತುಳುಕಾಡುತ್ತಿವೆ.

ಸುಮಾರು ವೀರಶೈವ ಗ್ರಂಥಗಳೆಷ್ಟಿವೆ, ಯಾವ ಯಾವ ಕವಿಗಳು ಎಷ್ಟೆಷ್ಟು ಗ್ರಂಥಗಳನ್ನು ರಚಿಸಿದ್ದಾರೆ, ಕವಿಗಳ ಕಾಲ, ಮತ್ತು ವಿಮರ್ಶೆ, ಪೂರ್ವಚರಿತ್ರೆ, ಯಾವ ರಾಜರ ಕಾಲದಲ್ಲಿದ್ದರು, ಇವುಗಳನ್ನೆಲ್ಲ ಸಪ್ರಮಾಣವಾಗಿ ವಿವರಿಸಿ ವೀರಶೈವ ಕವಿಚರಿತ್ರೆಗಳನ್ನು ಸಂಪೂರ್ಣವಾಗಿ ಬರೆಯುವದು ಅವಶ್ಯವು. ಈಗ ತಾನೆ ಶಿವಾನುಭವ ಮಾಸಪತ್ರಿಕೆ ಮೊದಲಾದವುಗಳ ಸಾಧನತ್ವ ದೊರೆತದ್ದರಿಂದ ಮುಂದುವರಿಯಲವಕಾಶವುಂಟಾಗಿದೆ.

## ಸಂಸ್ಕೃತ ವಾಙ್ಮಯ.

ರೇಣುಕ ಭಾಷ್ಯ, ದಾರುಕಭಾಷ್ಯ, ಅಧಿಕರಣಭಾಷ್ಯ, ಪಂಡಿತ ಭಾಷ್ಯ, ದಾರುಕ ದಿಗ್ವಿಜಯ, ಇವುಗಳನ್ನು ಆಯಾ ಆಚಾರ್ಯರುಗಳು ರಚಿಸಿದ್ದಾರೆಂದು ತಮ್ಮ ಭಾಷಣಗಳಲ್ಲಿ ಉಪಯೋಗಿಸಿದ್ದಾರೆ.

ಗಳು ಮುಂದೆ ಹೊರಬೀಳುತ್ತವೆಯೋ ಏನೋ? ಈಗ ಆಕಾಶಜನ್ಯ ವಾಗಿವೆ.

ನೀಲಕಂಠಾರಾಧ್ಯರು ಕಾರಿಕಾ ರೂಪವಾಗಿ ಬರೆದ ಕ್ರಿಯಾಸಾರವನ್ನು ನಿರ್ವಾಣಮಂತ್ರಿಯು ಇದರ ವ್ಯಾಖ್ಯಾನರೂಪವಾಗಿ ಕ್ರಿಯಾಸಾರ ಸರ್ವಸ್ವ ಭೂಷಣವನ್ನು, ಶ್ರೀಪತಿ ಪಂಡಿತಾರಾಧ್ಯರು ಬ್ರಹ್ಮಸೂತ್ರಗಳ ಮೇಲೆ ಶ್ರೀಕರಭಾಷ್ಯವನ್ನು, ಜೋಗಯ್ಯಾರಾಧ್ಯರು ಇದಕ್ಕೆ ಲಘು ಗುರುವೃತ್ತಿ ಗಳನ್ನು, ಬಸವ ಪಂಡಿತಾರಾಧ್ಯರು ತೈತ್ತರೀಯೋಪನಿಷತ್ತಿಗೆ ಭಾಷ್ಯ ವನ್ನು ಮಹಾನಾರಾಯಣೋಪನಿಷತ್ ಭಾಷ್ಯವನ್ನು, ಉಪಮನ್ಯು ಶಿವಾ ರಾಧ್ಯನು ಅ. ಇ. ಉ. ಣ್ ಮೊದಲಾದ ಹದಿನಾಲ್ಕು ಸೂತ್ರಗಳ ಮೇಲೆ ಶಿವಾದ್ವೈತಪರವಾದ ವೃತ್ತಿಯನ್ನು, ಇದಕ್ಕೆ ನಂದಿಕೇಶ್ವರಾರಾಧ್ಯನು ನಂದಿಕೇಶ್ವರ ಕಾಶಿಕೆ ಎಂಬ ಟೀಕೆಯನ್ನು, ಕಾಲಹಸ್ತಿಯಾಚಾರ್ಯನು ದಶೋಪನಿಷತ್ತುಗಳ ಮೇಲೆ ಲಿಂಗಧಾರಣಪರವಾದ ಭಾಷ್ಯವನ್ನು, ಶಿವ ಯೋಗಿ ಶಿವಾರಾಧ್ಯನು ಶೈವ ಪರಿಭಾಷೆ ಎಂಬ ಗ್ರಂಥವನ್ನು, ನಂದಿ ಕೇಶ್ವರಾರಾಧ್ಯನು ಲಿಂಗಧಾರಣ ಚಂದ್ರಿಕೆಯನ್ನು, ಭವಾನಿ ಶಂಕರಾರಾ ಧ್ಯನು ಲಿಂಗಧಾರಣದೀಪಿಕೆಯನ್ನು, ಶಿವಯೋಗಿ ಶಿವಾರಾಧ್ಯನು ಸಿದ್ಧಾಂತ ಶಿಖಾಮಣಿಯನ್ನು, ಜಗದಾರಾಧ್ಯ ನಾಗೇಶರು ಶಿವಜ್ಞಾನದೀಪಿಕೆಯನ್ನು ಸುಧಾಪುರದ ಚನ್ನವೀರಾರ್ಯನು ವೀರಶೈವೋತ್ಕರ್ಷ ಪ್ರದೀಪಿಕೆಯನ್ನು ರಚಿಸಿರುವರು.

ಕೆರೆಯ ಪದ್ಮರಸನು ಸಾನಂದ ಚರಿತ್ರೆಯನ್ನು, ಪಾಲ್ಕುರಿಕೆ ಸೋಮಾರಾಧ್ಯನು ತೆನುಗಿನಲ್ಲಿ ಪಂಡಿತಾರಾಧ್ಯ ಚರಿತ್ರೆ ಸಂಸ್ಕೃತದಲ್ಲಿ ಸೋಮನಾಥ ಭಾಷ್ಯ, ತೆಲುಗಿನಲ್ಲಿ ಬಸವಪುರಾಣವನ್ನು, ವಿಜಯಾಚಾ ರ್ಯನು ಬಸವರುದ್ರವನ್ನು, ಮೊಗ್ಗೆಮಾಯಿ ದೇವಾಚಾರ್ಯನು ಅನು ಭವಸೂತ್ರ ವಿಶೇಷಾರ್ಥ ಪ್ರಕಾಶಿಕೆಯನ್ನು, ಕಂಚಿ ಶಂಕರಾರಾಧ್ಯನು ಬಸವಪುರಾಣವನ್ನು, ಮರಿತೋಂಟದಾರ್ಯನು ವೀರಶೈವಾನಂದ ಚರಿತ್ರೆ ಷಟ್‌ಸ್ಥಲಚಂದ್ರಿಕೆ, ಕೈವಲ್ಯಸಾರ, ಸರ್ವಾಗಮ ಸಾರ ಸಂಗ್ರಹ, ವೀರ ಶೈವ ಪ್ರದೀಪಿಕೆ, ಸಿದ್ಧಾಂತಶಿಖಾಮಣಿಗೆ ತತ್ವದೀಪಿಕೆ ಎಂಬ ವ್ಯಾಖ್ಯಾ ನವನ್ನು, ಯಳಂದೂರು ಷಡಕ್ಷರಾರಾಧ್ಯನು ಭಕ್ತಾಧಿಕ್ಯ, ಶಿವಾಧಿಕ್ಯ, ಕವಿಕರ್ಣರಸಾಯನವನ್ನು, ಮೌನೇಶ್ವರರು ವೀರಶೈವಾಚಾರಕೌಸ್ತುಭ

ವನ್ನು, ಷಡಕ್ಷರಮಂತ್ರಿ ವೀರಶೈವ ಧರ್ಮಶಿರೋಮಣಿಯನ್ನು, ಸೋಸಲೆ ವಿಶ್ವನಾಥಾರ್ಯನು ದಶಗ್ರಂಥಿಯನ್ನು, ಇವನ ಮಗ ವೀರಣಾರಾಧ್ಯನು ಇದಕ್ಕೆ ಶಿವಜ್ಞಾನದೀಪಿಕೆ ಎಂಬ ವ್ಯಾಖ್ಯಾನವನ್ನು, ಇವನ ಮೊಮ್ಮಗ ರೇವಣಾರಾಧ್ಯನು ಚೋಳರೇಣುಕ ಸಂವಾದ ರೂಪ ಶಿವಾಧಿಕ್ಯಶಿಖಾ ಮಣಿ ಮಹಿಮ್ನಸ್ತವ ವೀರಶೈವ ಸಿದ್ಧಾಂತಶಿಖಾಮಣಿ ಶಿವಾಧಿಕ್ಯ ಶಿಖಾಮಣಿ ಸದ್ಗುರು ರಗಳೆ ಇವುಗಳಿಗೆ ಕನ್ನಡ ವ್ಯಾಖ್ಯಾನವನ್ನು, ಮತ್ತು ಶಾರೀರಪ್ರಕಾಶಿಕೆ, ಅಂತಃಕರಣ ಪ್ರಕಾಶಿಕೆ, ಸ್ವಸ್ವರೂಪ ಪ್ರಕಾಶಿಕೆ, ಪರಮಾತ್ಮ ಪ್ರಕಾಶಿಕೆ, ನಿಜದೀಪ ಪ್ರಕಾಶಿಕೆ ಎಂದು, ಶ್ರೀರುದ್ರ ಪುರುಷ ಸೂಕ್ತಾದಿಗಳಿಗೆ ವ್ಯಾಖ್ಯಾನವನ್ನು, ಜ್ಯೋತಿರ್ನಾಥಾರ್ಯನು ಶೈವರತ್ನಾಕರವನ್ನು, ಸಂಪಾದನೆಯ ಸಿದ್ಧವೀರಣಾರಾಧ್ಯನು ವೀರಶೈವ ಚಿಂತಾಮಣಿಯನ್ನು. ನೀಲಕಂಠ ನಾಗನಾಥಾರ್ಯನು ಅನಾದಿ ವೀರಶೈವಾಚಾರ ಸಂಗ್ರಹವನ್ನು, ಚನ್ನಬಸವಾರಾಧ್ಯನು ವೀರಶೈವ ಪ್ರದೀಪಿಕೆಯನ್ನು, ಮಲ್ಲಣಾರಾಧ್ಯನು ಶಿವಜ್ಞಾನಪ್ರದೀಪಿಕೆಯನ್ನು, ನೀಲಕಂಠ ಶಿವಾರಾಧ್ಯನು ಭಟ್ಟಭಾಸ್ಕರನೆಂಬ ಸ್ಮಾರ್ತಬ್ರಾಹ್ಮಣನನ್ನು ವಾದದಲ್ಲಿ ಪರಾಜಿತನನ್ನಾಗಿ ಮಾಡಿ ಆತನ ಹೆಸರನ್ನು ವ್ಯಾಖ್ಯಾನ ಮಾಡಲು ಭಟ್ಟಭಾಸ್ಕರಾಚಾರ್ಯನೆಂದು ಪ್ರಸಿದ್ಧನಾಗಿ ಶಿವದೀಕ್ಷೆಯನ್ನು ಹೊಂದಿ ವೀರಶೈವ ಪರವಾಗಿ ಯಜುರ್ವೇದಕ್ಕೆ ಭಟ್ಟಭಾಸ್ಕರಭಾಷ್ಯವನ್ನು, ಚೈತನ್ಯ ಪಂಡಿತಾರಾಧ್ಯರ ಗುರುಪರಂಪರೆಯಲ್ಲಿ ಸೇರಿದ ಕೆರೆಗೋಡು ನಂಜಣಾಚಾರ್ಯನು ಸಿದ್ಧಾಂತಶಿಖಾಮಣಿಗೆ ವ್ಯಾಖ್ಯಾನವನ್ನು, ಗುರುದೇವಾರಾಧ್ಯನು ಪಂಚಶ್ಲೋಕಿಗೆ ವ್ಯಾಖ್ಯಾನವನ್ನು ಬರೆದಿರುವರು.

ಇವರಲ್ಲದೆ ಊರ್ಧ್ವಲೋಚನ ಪಂಡಿತಾರಾಧ್ಯರು ಚೈತನ್ಯಪಂಡಿತಾರಾಧ್ಯರು ಸೋಸಲು ಪಂಡಿತಾರಾಧ್ಯರು ಕೂಷ್ಮಾಂಡಪಂಡಿತಾರಾಧ್ಯರು ರಂಭಾಪಂಡಿತಾರಾಧ್ಯರು ಪಂಪಾವಿರುಪಾಕ್ಷ ಪಂಡಿತಾರಾಧ್ಯರು ಶ್ರೀಶೈಲ ಪಂಡಿತಾರಾಧ್ಯರು ಕೂನಪಂಡಿತಾರಾಧ್ಯರು ಪುರಾತನ ಪಂಡಿತಾರಾಧ್ಯರು ವಜ್ರನಖಾರಾಧ್ಯರು ಸಕಳೇಶ ಮಹಾಪಂಡಿತಾರಾಧ್ಯರು ಹರದತ್ತಾಚಾರ್ಯರು ಶಾಂತಲಿಂಗಾರಾಧ್ಯರು ಪರವಾದಿ ಭಯಂಕರಾರಾಧ್ಯರು ಚಂಡಭೈರವಾರಾಧ್ಯರು ಉದ್ಭಟಾರಾಧ್ಯರು ವೇಮನಾರಾಧ್ಯರು ಶ್ರೀಧರಾರಾಧ್ಯರು ಭಾಸ್ಕರಾರಾಧ್ಯರು ಪರಮತ ನಿಲಯಾರಾಧ್ಯರು ಮೊದಲಾದ ಆರಾಧ್ಯಪುಂಗವರೆಲ್ಲ ಅನೇಕ ಸಂಸ್ಕೃತ ಗ್ರಂಥಗಳನ್ನು ಬರೆದಿದ್ದಾರೆ.

## ಕನ್ನಡ ವಾಙ್ಮಯ.

ಶಿವಾದ್ವೈತ ಸಿದ್ಧಾಂತಸ್ಥಾಪನಾಚಾರ್ಯ ಉಭಯ ಕವಿತಾವಿಶಾರದನಾದ ಪಾಲ್ಕುರಿಕೆ ಸೋಮಾರಾಧ್ಯನು ಸೋಮೇಶ್ವರ ಶತಕ ಅಕ್ಷರಾಂಕನ ಗದ್ಯ ಮೊದಲಾದ ಗ್ರಂಥಗಳನ್ನು, ತೋಂಟದಾರಾಧ್ಯನು ಪಾಲ್ಕುರಿಕೆಸೋಮೇಶ್ವರನ ಪುರಾಣವನ್ನು, ಮರಿತೋಂಟದಾರಾಧ್ಯರು ಷಟ್ಸ್ಥಲತಿಲಕ, ಸಿದ್ಧೇಶ್ವರ ಪುರಾಣ ಮೊದಲಾದ ಹಲವು ಗ್ರಂಥಗಳನ್ನು. ಮಲಬಾರು ಪ್ರಾಂತ್ಯದ ಕುಂಟಿಕಾಪುರದಲ್ಲಿದ್ದ ಆತ್ರೇಯಸಗೋತ್ರ ಕೈಕಲಿ ಯಜುಶ್ಯಾಖಾಧ್ಯಾಯಿ ವೀರಮಾಹೇಶ್ವರ ತಂತ್ರ ಸೂತ್ರದವನಾದ ಕಾಶೀಖಂಡ ಚನ್ನವೀರದೇವಾರಾಧ್ಯರೆಂಬುವರು ಸಾರಸ್ವತ ವ್ಯಾಕರಣವನ್ನು ಪುರಾಣಮಲ್ಲಿಕಾರ್ಜುನಾರಾಧ್ಯನು ವಾತುಳ ತಂತ್ರಕ್ಕೆ ವ್ಯಾಖ್ಯೆನವನ್ನು ಗುಬ್ಬಿಮಲ್ಲಣಾಚಾರ್ಯನು ಭಾವಚಿಂತಾರತ್ನ ಅವನ ಮೊಮ್ಮಗನು ವೀರಶೈವಾಮೃತ ಮಹಾಪುರಾಣವನ್ನು ಉಮ್ಮತ್ತೂರು ರಾಜಗುರುವಾದ ನೀಲಕಂಠಾರಾಧ್ಯನು ಆರಾಧ್ಯಚರಿತ್ರೆಯನ್ನು, ಭೀಮಕವಿಯು ಬಸವಪುರಾಣವನ್ನು. ಯಳಂದೂರು ಷಡಕ್ಷರಾರಾಧ್ಯನು ವೃಷಭೇಶ್ವರವಿಜಯ ಶಬರಶಂಕರವಿಲಾಸವನ್ನು, ಕಾಶ್ಯಪಗೋತ್ರದ ಯಜುರ್ವೇದ ಶಾಖೆಯ ಬೋಧಾಯನ ಸೂತ್ರದ ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರ ಪುರಾಣವನ್ನು, ಚಾಮರಸನು ಪ್ರಭುಲಿಂಗಲೀಲೆಯನ್ನು ನಿಜಗುಣಾರಾಧ್ಯ ಶಿವಯೋಗಿಯು ವಿವೇಕಚಿಂತಾಮಣಿಯೇ ಮೊದಲಾದ ಆರು ಶಾಸ್ತ್ರಗಳನ್ನು, ರಾಘವಾಂಕನು ಹರಿಶ್ಚಂದ್ರ ಕಾವ್ಯವೇ ಮೊದಲಾದವುಗಳನ್ನು, ಶಿವಕವೀಶ್ವರನು ವಸ್ತುಕ ರೂಪದಲ್ಲಿ ಬಸವಪುರಾಣವನ್ನು, ಆರಾಧ್ಯದೇವನು ಭುಜಂಗೇಶ್ವರ ಪುರಾಣವನ್ನು, ನಂಜಣಾಚಾರ್ಯನು ಏಕೋರಾಮಪುರಾಣವನ್ನು, ಪಂಚವಣ್ಣಿಗೆ ಸಿದ್ಧನಂಜೇಶನು ಗುರುರಾಜಚರಿತ್ರೆಯನ್ನು, ಸಂಪಾದನೆಯ ಪರ್ವತಾರಾಧ್ಯನು ಚತುರಾಚಾರ್ಯ ಪುರಾಣವನ್ನು, ಸದಾಶಿವಯೋಗಿಯು ರಾಮನಾಥ ವಿಲಾಸವನ್ನು ಬರೆದಿರುವರು. ಆ ಕವಿಗಳನ್ನೆಲ್ಲ ವಿವರಿಸಲು ವಿಸ್ತಾರವಾಗುತ್ತದೆಂಬ ಭಯದಿಂದ ವಿರಮಿಸುತ್ತೇನೆ.

### ಪರಮತ ದಿಗ್ವಿಜಯ ಸ್ವಮತ ಸ್ಥಾಪನೆ.

ರೇಣುಕಾದ್ಯಾಚಾರ್ಯರು ವೀರಶೈವ ಮತವನ್ನು ಪವಿತ್ರಗೊಳಿಸಿ ಬಸವೇಶ್ವರಾದಿ ಶಿವಶರಣರಿಂದ ಅನುಭವಮಂಟಪದಲ್ಲಿ ನಾಲ್ಕು ಸ್ತಂಭ

# ಶಿವಾನುಭವ.

ವರ್ಷ ೧೩]           ಅಕ್ಟೋಬರ ೧೯೩೮           [ಸಂಚಿಕೆ ೧

## ಶಿವಾನುಭವವೂ ಕರ್ನಾಟಕವೂ.

(ಶ್ರೀ ಸದಾಶಿವಪ್ಪ ತೆನಿಹಳ್ಳಿ ವೀರಶೈವ ಸಾಹಿತ್ಯ ಮಂಡಳ ವಿಜಾಪುರ)

ಶಿವಾನುಭವ ಪತ್ರಿಕೆಯು ಹುಟ್ಟಿ ಈ ಹೊತ್ತಿಗೆ ೧೨ ವರ್ಷಗಳಾದವು. ಈ ಅವಧಿಯಲ್ಲಿ ಅದು ಮಾಡಿದ ಕರ್ನಾಟಕದ ಸೇವೆಯನ್ನು ಸ್ವಲ್ಪದರಲ್ಲಿ ತಿಳಿಸುವದೇ ಈ ಚಿಕ್ಕ ಬರಹದ ಉದ್ದೇಶವಾಗಿದೆ.

ಪ್ರತಿಯೊಂದು ದೇಶ ಕಾಲ ಭಾಷೆ ಇವುಗಳಲ್ಲಿ ನಿಜ್ವ ಸಾಹಿತ್ಯವೊಂದು ಸಮಾಜದ ಪರಿಸ್ಥಿತಿಗೆ ಅನುಗುಣವಾಗಿ ರೂಪುಗೊಂಡು ಜನತೆಯ ಮುಂದೆ ನಿಲ್ಲಲು ಯತ್ನಿಸುತ್ತಲೇ ಇರುವದು. ಅದರಂತೆ ಈಗಿನ ಇಪ್ಪತ್ತನೆಯ ಶತಮಾನದ ಕಾಲದಲ್ಲಿ ಜನಾಂಗ ಜೀವನದ ಉನ್ನತಿಗಾಗಿ ಸಾಹಿತ್ಯದ ಅವಶ್ಯಕತೆ ಇದ್ದು ಶಿವಾನುಭವವು ಸಾಹಿತ್ಯ ಮುಖಾಂತರ ಕರ್ನಾಟಕದ ಸೇವೆಯನ್ನು ಮಾಡಲು ತನ್ನ ಧೋರಣೆಯನ್ನು ಮೊದಲಿನಿಂದಲೂ ನಿಶ್ಚಯಿಸಿ ಅದರಲ್ಲಿ ಚ್ಯುತಿ ಇಲ್ಲದೆ ಈ ವರೆಗೆ ಅನುಸರಿಸುತ್ತ ಬಂದಿದೆ. ಈ ಸಂಗತಿಯು ಅದರ ಯಾವ ಸಂಚಿಕೆಯನ್ನು ತೆಗೆದುಕೊಂಡು ನೋಡಿದರೂ ಲಕ್ಷಕ್ಕೆ ಬಾರದೆ ಇರದು.

ಆಧುನಿಕ ಕರ್ನಾಟಕದಲ್ಲಿ ವಿಶೇಷವಾಗಿ ವೀರಶೈವರಲ್ಲಿ ಬಹುಸಂಖ್ಯಾಕರು ಅಶಿಕ್ಷಿತರಾಗಿರುವರು. ಅವರಲ್ಲಿ ಸುಶಿಕ್ಷಿತರೆನಿಸಿಕೊಳ್ಳುವವರು ಕೆಲವು ಜನರಿದ್ದರೂ, ಅವರಿಗೆ ಕನ್ನಡ ಸಾಹಿತ್ಯದ ರುಚಿ ಇಲ್ಲ. ಉಳಿದ ಜನರಂತೂ ಗತಾನುಗತಿಕೆಯ ಮೂಢ ನಂಬಿಕೆಯ ಕೊಳಚಿಯಲ್ಲಿ ಮುಳುಗಿಹೋದವರಾಗಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಶಿವಾನುಭವವು ಹಳೆಯದನ್ನು ಬಿಡದೆ, ಹೊಸದನ್ನು ನಿರ್ಮಾಣ ಮಾಡಿದೆ.

ನಮ್ಮ ಕರ್ನಾಟಕದಲ್ಲಿಯೇ ಮೊದಲು ಮೊಳೆತು, ಮುಂದೆ ಬೆಳೆದು, ಕೆಲವು ಶತಮಾನಗಳ ಹಿಂದೆ ಅಳಿದು ಹೋದ ವಚನ ಸಾಹಿತ್ಯವನ್ನು ಹೊರಗೆಡವು ವದು ಶಿವಾನುಭವದ ಜೀವಾಳವಾಯಿತು. ಈ ವಚನ ಸಾಹಿತ್ಯವು ಹಳೆಯದಾದರೂ ಅದರಲ್ಲಿ ನವಶಕ್ತಿಯನ್ನು ತಂದು ಕೊಡಬಲ್ಲ ಸಾಮರ್ಥ್ಯವು ಇದೆ. ಆಧುನಿಕ ರಾಷ್ಟ್ರ ಮುಖಂಡರಾದ ಮಹಾತ್ಮಾ ಗಾಂಧೀಯವರು ಸಹ ಬೆಳಗಾವಿಯಲ್ಲಿ ಕೂಡಿದ ಕಾಂಗ್ರೆಸ್ಸಿನ ಕಾಲದಲ್ಲಿ ಬಸವಣ್ಣನವರು ಮಾಡಿದ ಆಂದೋಲನವನ್ನು ತಿಳಿದುಕೊಂಡು ಅವರು ಮಾಡಿದ್ದನ್ನೇ ನಾನು ಮುಂದುವರಿಸುವವನಾಗಿದ್ದೇನೆ ಎಂದು ತಮ್ಮ ಭಾಷಣದಲ್ಲಿ ಹೇಳಿದ್ದು ಅನೇಕರ ಸ್ಮರಣದಲ್ಲಿರಬಹುದು. ಆದ್ದರಿಂದ ಶಿವಾನುಭವವು ತನ್ನ ಈ ಧ್ಯೇಯ ಸಾಧನೆಯಲ್ಲಿ ಅಖಂಡ ಜಯವನ್ನು ಸಂಪಾದನೆ ಮಾಡಿತೆಂಬುದರಲ್ಲಿ ತಿಲಮಾತ್ರ ಸಂಶಯವಿಲ್ಲ.

ಕರ್ನಾಟಕದಲ್ಲಿ ವಿಜಯನಗರದ ಪತನಾನಂತರ ಕನ್ನಡಿಗರ ಸಾಹಿತ್ಯವು ಹರಿದು ಚೂರು ಚೂರಾಗಿ ಬಿದ್ದುಹೋಯಿತು. ಈ ಕಾಲದಲ್ಲಿ ಮುಸಲ್ಮಾನರೂ ಅವರ ತರುವಾಯ ಮರಾಟರೂ ನಮ್ಮ ದೇಶದಲ್ಲಿ ದಾಳಿಯಿಟ್ಟರು. ಆಮೇಲೆ ಬ್ರಿಟಿಶರ ಆಳಿಕೆಯು ಆರಂಭವಾಗಿ, ಅವರ ಕಾಲಕ್ಕೆ ಮೊದಲು ಒಂದು ಮುಖವಾಗಿದ್ದ ಕರ್ನಾಟಕವು ಅನಂತ ಮುಖವಾಗಿ ಅದರ ಅಂತಃಶಕ್ತಿಗೆ ಮತ್ತೊಂದು ಬಲವಾದ ಪೆಟ್ಟು ತಗಲಿತು. ಹೀಗೆ ಒಂದಲ್ಲ, ಎರಡಲ್ಲ, ಅನೇಕ ಕಾರಣಗಳ ಮೂಲಕ ವೀರಶೈವ ಸಾಹಿತ್ಯದ ಸತ್ವವು ಕಡಿಮೆಯಾಯಿತು. ಈ ಪ್ರಕಾರ ಸತ್ವ ಹೀನವಾದ ಸ್ಥಿತಿಯಲ್ಲಿ, ಅದರಲ್ಲಿ ಪುನಃ ಚೇತನವನ್ನು ತುಂಬುವದಕ್ಕಾಗಿ ಶಿವಾನುಭವದ ಹಿನ್ನೆಲೆಯಂತಿದ್ದ ರಾವಸಾಹೇಬ ಹಳಕಟ್ಟಿಯವರು ಕರ್ನಾಟಕ ಮೂಲೆ ಮೂಲೆಯಲ್ಲಿ ಸಂಚರಿಸಿ, ಮೂಲೆ ಗುಂಪಾಗಿದ್ದ ಹಳೆಯ ಗ್ರಂಥಗಳನ್ನೂ ತಾಡವಾಲೆಗಳನ್ನೂ ಹುಡುಕಿ ತೆಗೆದರು. ಇದರಲ್ಲಿ ಅವರು ಆರಂಭದಲ್ಲಿ ಶ್ರಮಪಟ್ಟಿದ್ದು ಮತ್ತು ಮುಂದೆ ೧೨ ವರ್ಷ ಸಂಶೋಧನೆಯಲ್ಲಿ ಮಾನಸಿಕ ಶ್ರಮ ಮಾಡಿದ್ದು ಬಹು ಜನರಿಗೆ ಗೊತ್ತು ಇಲ್ಲ. ಅವರು ಮುಖ್ಯವಾಗಿ ವಚನಗಳು ಮತ್ತು ರಗಳೆಗಳು ಇವುಗಳನ್ನು ಶಿವಾನುಭವದಲ್ಲಿ ಪ್ರಸಿದ್ಧಿಸತೊಡಗಿದರು. ಇದರಿಂದ ಅನೇಕ ಹೊಸ ಗ್ರಂಥಗಳು ಉದಯವಾಗಲು ಆಸ್ಪದವಾಯಿತು. ಈ ಗ್ರಂಥಗಳನ್ನು ಬರೀ ವೀರಶೈವರಷ್ಟೇ ಅಲ್ಲ, ಅನೇಕ ವೀರಶೈವೇತರ ಸಾಹಿತಿಗಳೂ ಬರೆದಿರುವರು.

ಬ್ರಿಟಿಶರ ಪ್ರಭುತ್ವವು ಸ್ಥಾಪನೆಯಾದ ನಂತರ, ಪಾಶ್ಚಿಮಾತ್ಯ ಸಾಹಿತ್ಯವೂ ನಮ್ಮ ಪ್ರಾಂತದಲ್ಲಿ ಸ್ವಲ್ಪಮಟ್ಟಿಗೆ ತಲೆದೋರಹತ್ತಿತು. ಈ

ಇಪ್ಪತ್ತನೆಯ ಶತಮಾನವೆಂದರೆ ಕ್ರಾಂತಿಯ ಕಾಲ, ವೈಜ್ಞಾನಿಕ ಕಾಲ. ಈ ಕಾಲದಲ್ಲಿ ನಮ್ಮ ಮತ್ತು ಪರಕೀಯರ ಜೀವನದ ವ್ಯವಹಾರಗಳು ದಿನ ದಿನಕ್ಕೆ ಹೆಚ್ಚು ಸಂಬಂಧವಾಗುತ್ತಾ ನಡೆದಿವೆ. ಅಂದ ಬಳಿಕ ಪಾಶ್ಚಿಮಾತ್ಯ ಸಾಹಿತ್ಯವೂ ಕೂಡ ನಮ್ಮ ಜೀವನದ ಬೆಳಕಿಗೆ ಸಹಾಯ ಮಾಡಬಲ್ಲದು. ಇದನ್ನು ತಿಳಿದು ಶಿವಾನುಭವವು ಪಾಶ್ಚಿಮಾತ್ಯ ಸಾಹಿತ್ಯದ ಪದ್ಧತಿಯನ್ನನುಸರಿಸಿ ಶಿವಶರಣರ ವಾಙ್ಮಯದಲ್ಲಿಯ ಉಚ್ಚ ರಾಷ್ಟ್ರೀಯ ವಿಚಾರಗಳನ್ನು ಸಂದರ್ಭಾನುಸಾರವಾಗಿ ವ್ಯವಸ್ಥೆಗೊಳಿಸಿ ಕನ್ನಡಿಗರ ಕಣ್ಣೆದುರಿನಲ್ಲಿ ತಂದಿದೆ. ಇದೊಂದು ಅದರ ಮಹತ್ವದ ಕಾರ್ಯವಾಗಿದೆ. ಅಲ್ಲದೆ ಈ ಪತ್ರಿಕೆಯಲ್ಲಿ ಆಧುನಿಕ ಕವಿತೆಗಳೂ ಲೇಖಗಳೂ ಗ್ರಂಥ ವಿಮರ್ಶೆಗಳೂ ಕಾಲಕಾಲಕ್ಕೆ ಪ್ರಸಿದ್ಧವಾಗುತ್ತ ಬಂದಿವೆ ಈ ಪ್ರಕಾರ ಶಿವಾನುಭವವು ಕರ್ನಾಟಕಕ್ಕೆ ಒಂದು ಮಹತ್ವದ ಸೇವೆಯನ್ನು ಸಲ್ಲಿಸಿರುತ್ತದೆ.

ಈಗಿನ ಕಾಲವೆಂದರೆ ರಾಷ್ಟ್ರಜಾಗ್ರತಿಯ ಕಾಲ. ಇಂಥ ಕ್ರಾಂತಿಯ ಕಾಲದಲ್ಲಿ ಸಾಹಿತ್ಯ ಪ್ರಸಾರವು ಅವಶ್ಯವೇ. ಅದರಲ್ಲಿ ಭಿನ್ನ ಭಿನ್ನ ಸಂಸ್ಕೃತಿ ಆಚಾರ ವಿಚಾರಗಳಿಂದ ತುಂಬಿದ ನಮ್ಮ ದೇಶದಲ್ಲಿ ಎಲ್ಲರಿಗೂ ಸಮ್ಮತವಾಗುವಂತೆ ಧಾರ್ಮಿಕ ಸಾಹಿತ್ಯವನ್ನು ಅವರೆದುರಿಗಿಡುವದು ಶಿವಾನುಭವದ ಹಿರಿಯಾಶೆ. ಈ ಉದ್ದೇಶವನ್ನು ಮುಂದಿಟ್ಟುಕೊಂಡು ಶಿವಾನುಭವವು ಶರಣರ ವಚನಗಳನ್ನೂ ರಗಳೆಗಳನ್ನೂ ಕರ್ನಾಟಕದ ಮೂಲೆ ಮೂಲೆಗೂ ಮುಟ್ಟಿಸಿ ಎಚ್ಚರಿಕೆಯ ಕಹಳೆಯನ್ನೂದಿತು. ಆದ್ದರಿಂದ ಇಂಥ ಸಾಹಿತ್ಯದ ಆಧಾರದ ಮೇಲಿಂದ ಕರ್ನಾಟಕದ ಇತರ ಸಾಹಿತಿಗಳಾದ ಶ್ರೀ ರಂಗರಾವ ದಿನಾಕರರು ವಚನ ಶಾಸ್ತ್ರ ರಹಸ್ಯವೆಂಬ ಗ್ರಂಥವನ್ನು ಬರೆದರು. ಇದಲ್ಲದೆ ಬೆಂಗಳೂರಿನ ಸುಪ್ರಸಿದ್ಧ ಶ್ರೀ ಶ್ರೀನಿವಾಸ ಮೂರ್ತಿಗಳು, ಪ್ರೊ॥ ಬಿ. ಎಮ್ ಶ್ರೀಕಂಠಯ್ಯನವರು, ಕೊಲ್ಲಾಪುರದ ರಾಜಾರಾಮ ಕಾಲೇಜದ ಪ್ರೋಫೇಸರರಾದ ಶ್ರೀ ಕುಂದಣಗಾರರು, ಪ್ರೊ॥ ಮುಗಳಿಯವರು, ಪ್ರೊ॥ ವೆಂಕಣ್ಣಯ್ಯನವರು ಈ ಮೊದಲಾದವರು ಭಕ್ತಿ ಭಾಂಡಾರಿ ಬಸವಣ್ಣ, ಪ್ರಭುದೇವರ ರಗಳೆ, ಅಕ್ಕಮಹಾದೇವಿಯ ಚರಿತ್ರೆ, ಹರಿಹರಪ್ರಶಸ್ತಿ ಮೊದಲಾದ ಗ್ರಂಥಗಳನ್ನು ಬರೆದರು, ಮಹತ್ವದ ಲೇಖಗಳನ್ನು ಪ್ರಸಿದ್ಧಿಸಿದರು, ವಚನಕಾರರ ತತ್ವಗಳನ್ನು ನಾಡಿನಲ್ಲೆಲ್ಲ ತಮ್ಮ ವಾಕ್ಚಾತುರ್ಯದಿಂದ ಪಸರಿಸಿದರು. ಇವರೆಲ್ಲರೂ ಪರಮತೀಯರಾದುದರಿಂದ ಸಮಾಜದಲ್ಲಿ ಭೇದಗಳನ್ನಡಗಿಸುವ ಶಿವಾನುಭವದ ಧ್ಯೇಯವು ಕೈಗೂಡಿರುತ್ತದೆಂದು ಹೇಳಲು ಪ್ರತ್ಯವಾಯವಿಲ್ಲ.

ಇಲ್ಲಿಯವರೆಗೆ ಶಿವಾನುಭವ ಪತ್ರಿಕೆಯು ಮಾಡಿದ ಸೇವೆಯನ್ನು ಸ್ವಲ್ಪದರಲ್ಲಿ ತಿಳಿಸಿದ್ದಾಯಿತು. ಆದನೆ ಕರ್ನಾಟಕಕ್ಕೆ ಶಿವಾನುಭವ ಶಾಸ್ತ್ರದ ಅರಿವಿನ ಅವಶ್ಯಕತೆ ಎಷ್ಟಿದೆ ಎಂಬುದನ್ನು ಸ್ವಲ್ಪದರಲ್ಲಿ ಬರೆಯುವೆನು. ಪ್ರಪಂಚದಲ್ಲಿ ಅನೇಕ ಕಷ್ಟಗಳು ಒದಗಿ ಮಂಕು ಕವಿದಾಗ, ಮತ್ತು ಜೀವನವು ಪ್ರಾಪಂಚಿಕ ಒಡಿದಾಟಗಳ ಕೂಗಿನಲ್ಲಿ ಕಸವಿಸಿಗೊಂಡಾಗ ಸಾಹಿತ್ಯವೇ ನಮಗೆ ಶಾಂತಿನಿಕೇತನವು. ಯಾಕಂದರೆ ಸಾಹಿತ್ಯವು ಜೀವನದಲ್ಲಿಯ ಜಾಡ್ಯತೆಯನ್ನು ಕಳೆದು ಮನಸ್ಸನ್ನು ಚಿದಾನಂದದಲ್ಲಿ ತಂದಿರಿಸುವದು. ಆದ್ದರಿಂದ ನಮ್ಮ ಪೂರ್ವಿಕರು ಸಾಹಿತ್ಯ ಮುಖಾಂತರವೇ ತತ್ವ ಬೋಧೆಯನ್ನು ಮಾಡಿದ್ದಾರೆ. ಪಂಡಿತ ಜವಾಹಿರಲಾಲರು ಸಹ ಒಂದು ಸಮಯದಲ್ಲಿ ಸಾಹಿತ್ಯಕ್ಕೆ ತತ್ವದ ಅಧಿಷ್ಠಾನವು ಬೇಕೆಂತಲೂ ಇಲ್ಲದಿದ್ದರೆ ಅದು ಮಾದಕಸಾಹಿತ್ಯವೆಂದೂ ಸಾಹಿತ್ಯದ ವಿಷಯಕ್ಕೆ ತಮ್ಮ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಅಂದ ಬಳಿಕ ನಮ್ಮ ಬಾಳು ತಿಳಿಯಾಗಬೇಕಾದರೆ, ನಮ್ಮ ಜೀವನವು ಅಂಧಕಾರದ ಗಡಿಯನ್ನು ದಾಟಿ ಚಿದಾನಂದದ ಸೀಮೆಯನ್ನು ಮುಟ್ಟಬೇಕಾದರೆ ತತ್ವಪೂರಿತ ಸಾಹಿತ್ಯವು ಬೇಕು. ಈ ಉದಾತ್ತ ಧೋರಣೆಯನ್ನಿಟ್ಟುಕೊಂಡೇ ಶಿವಾನುಭವವು ಷಟ್‌ಸ್ಥಲ ಶಾಸ್ತ್ರವೆಂಬ ತತ್ವದಲ್ಲಿ ತನ್ನ ಸಾಹಿತ್ಯವನ್ನು ರೂಪಿಸಿದೆ. ಈ ಷಟ್‌ಸ್ಥಲ ಶಾಸ್ತ್ರವೆಂದರೆ ಅರ್ಥವಿಲ್ಲದ ಒಂದು ಶಾಸ್ತ್ರವೆಂದು ಎಷ್ಟೋ ಜನರು ಭಾವಿಸಿ ಅದನ್ನು ತಿಳಿದುಕೊಳ್ಳಲು ಸಹ ಪ್ರಯತ್ನಿಸುವದಿಲ್ಲ. ಅಂಥವರಿಗೆ ನಾನು ವಿನಯಪೂರ್ವಕ ವಿನಂತಿ ಮಾಡಿಕೊಳ್ಳುವದೇನಂದರೆ ಷಟ್‌ಸ್ಥಲ ಶಾಸ್ತ್ರವು ಯಾವದೇ ಒಂದು ಕೋಮಿನವರಿಗೆ ಅಥವಾ ಒಂದು ಜನಾಂಗದವರಿಗೆ ಸಂಬಂಧಿಸಿದ ತತ್ವವಲ್ಲ. ಅದು ಒಂದು ಬಹು ಗಹನವಾದ ವಿಷಯವು. ಜೀವನವನ್ನು ಹೇಗೆ ನಡೆಯಿಸಿಕೊಂಡು ಹೋಗಬೇಕೆಂಬುದನ್ನು ತಿಳಿಸುವ ಶ್ರೇಷ್ಠ ಶಾಸ್ತ್ರವು. ಜೀವನದಲ್ಲಿ ಸ್ಥೂಲವಾಗಿಆರು ಸ್ಥಲಗಳನ್ನು ಮಾಡಿ ಜೀವನಕ್ಕೆ ಒಂದು ಗತಿಯನ್ನು ತಂದುಕೊಟ್ಟು ಸಾಕಾರವನ್ನು ನಿರಾಕಾರದತ್ತ ಸೆಳೆದೊಯ್ಯುವ ಸೇತುವೆಯಂತೆ ಅದು ಇದೆ. ಇಂಥ ಶಾಸ್ತ್ರದ ತತ್ವಗಳನ್ನು ಪ್ರಚುರಪಡಿಸಲಪೇಕ್ಷಿಸುವ ಶಿವಾನುಭವ ಪತ್ರಿಕೆಯು ಕರ್ನಾಟಕದ ಪ್ರತಿಯೊಂದು ಮನೆಯಲ್ಲಿಪ್ರತಿ ಒಬ್ಬ ಮನುಷ್ಯನ ಹೃದಯದಲ್ಲಿ ನೆಲೆಯಾಗಿ ನಿಲ್ಲಲೆಂದು ದೇವನನ್ನು ಪ್ರಾರ್ಥಿಸಿ ಈ ಲೇಖನವನ್ನು ಮುಗಿಸುತ್ತೇನೆ.

---

# ಶ್ರೀಕರಭಾಷ್ಯವಿಮರ್ಶವು.

(ಲೇ:— ಶ್ರೀ ಎಸ್. ಡಿ. ಪಾವಟೆ, ಬಿ. ಎ. ಎಲ್. ಎಲ್. ಬಿ., ಹುಬ್ಬಳ್ಳಿ.)

## ಧರ್ಮಮೂಲವಾವುದು?

ಶ್ರೀ ಪಂಡಿತಾಚಾರ್ಯನು ದೇವಧಾರಣಾದಿವಾಕ್ಯಗಳಿಂದಲಿ ಲಿಂಗ ಧಾರಣವನಾಕಾಂಕ್ಷಿಪುದೇಕೆ? ಚೋದನಾಲಕ್ಷಣೋ ಅರ್ಥೋಧರ್ಮಃ ಎಂಬ ಜೈಮಿನಿಯ ಶಾಸ್ತ್ರವು ಸರ್ವ ಧರ್ಮಕ್ಕೂ ವೈದಿಕ ವಿಧಿವಾಕ್ಯವೆ ಮೂಲವೆನ್ನುವುದರಿಂದ ಧರ್ಮವು ನಮ್ಮ ಇಂದ್ರಿಯಂಗಳಿಗೆ ಗೋಚರಿಸದು. ಇಂದ್ರಿಯಂಗಳಿಗೆ ಗೋಚರಿಸದ ವಿಷಯವನ್ನು ಬೋಧಿಸಲು ವೈದಿಕ ವಿಧಿವಾಕ್ಯಗಳಲ್ಲಿ ಶಕ್ತಿಯುಂಟು. ಅತಿ ಸೂಕ್ಷ್ಮವಪ್ಪ ಅರ್ಥವನೂ ವಿಧಿವಾಕ್ಯವು ಬೋಧಿಸಬಲ್ಲದು.

ಇಂತಹ ಶಕ್ತಿಯು ವೈದಿಕ ವಿಧಿಗಳಿಗೆ ಬಂದುದೆಂತು? ಶಬ್ದಕ್ಕೂ ಅರ್ಥಕ್ಕೂ ನಿತ್ಯವಾದ ವಾಚ್ಯ-ವಾಚಕ, ಸೂಚ್ಯ-ಸೂಚಕ, ಬೋಧ್ಯ-ಬೋಧಕ ಸಂಬಂಧವಿಹುದು. ಅದನಾರು ಕಲ್ಪಿಸಲಿಲ್ಲ. ತಾನಾಗಿಯೆ ಶಬ್ದಾರ್ಥಗಳೊಡನೆ ಬಂದಿದೆ. ಸ್ವರ್ಗಕಾಮೋ ಯಜೇತ ಎಂಬ ವಾಕ್ಯವಲ್ಲಿಯ ಪದಗಳಿಂದ ಸ್ವರ್ಗವ ಬಯಸುವನು ಯಾಗಗೆಯ್ಯಬೇಕು ಎಂದು ಬೋಧವಾದವುದು. ಅರ್ಥವು ಬೋಧವಾದಂತೆ ಅದು ಸತ್ಯವಿರಲೇಬೇಕು. ಈ ವಾಕ್ಯದಿಂದ ಬೋಧವಾದ ಅರ್ಥವು ಆವನೊಬ್ಬನಿಗೆ ಆವುದೊಂದು ದೇಶದಲ್ಲಿ ಅನ್ಯಥಾ ಕಂಡುಬಂದಿಲ್ಲ. ಆದುದರಿಂದ ವೇದದ ವಿಧಿವಾಕ್ಯವು ಸತ್ಯವು ನಿತ್ಯಾರ್ಥವು. ಇಂದ್ರಿಯಂಗಳಿಗೆ ಗೋಚರಿಸದ ಸ್ವರ್ಗಯಾಗಾದಿಗಳನ್ನು ವೇದವು ಬೋಧಿಸಿ ಧರ್ಮಮೂಲವಾಗಿದೆ.

ಶಬ್ದಾರ್ಥಗಳಲ್ಲಿ ನಿತ್ಯಸಂಬಂಧವಿದೆ. "ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನಸಂಬಂಧಃ"— ಆವುದೊಂದು ಶಬ್ದದಿಂದ ಆವುದೊಂದು ಅರ್ಥವು ಗೋಚರಿಸಲು ಅದು ಪ್ರಮಾಣಭೂತವಾದುದೇ.

ಹಾಗಾದರೆ ಶಬ್ದಾರ್ಥಗಳಿಗೆ ನಿತ್ಯಸಂಬಂಧವಿರಲು ಮೋಸಗಾರನು ನುಡಿವ ನದೀತೀರದಲ್ಲಿ ಹಣ್ಣುಗಳಿವೆ, ಹೋದರೆ ನಿನಗೆ ದೊರೆವುವು. ಎಂಬ ವಾಕ್ಯವೇಕೆ ಸುಳ್ಳಾಗಿದೆ? — ಶಬ್ದಾರ್ಥ ನಿತ್ಯಸಂಬಂಧವಿಲ್ಲದುದ

ರಿಂದ ಸುಳ್ಳಲ್ಲ. ಆದರೆ ಅರ್ಥದೊಡನೆ ನಿತ್ಯಸಂಬಂಧವನುಳ್ಳ ಪದಗಳನ್ನೆ ರಾಗದ್ವೇಷಗಳಿಂದ ಆ ಅರ್ಥವಿಲ್ಲದಲ್ಲಿ ಪ್ರಯೋಗಿಸುವುದರಿಂದ ಆ ನುಡಿಯು ಸುಳ್ಳು, ವೇದವು ಪುರುಷಕೃತವಲ್ಲ, ಸ್ವಯಂಭುವು. ಆದುದರಿಂದ ವೈದಿಕ ಶಬ್ದಗಳಲ್ಲಿ ಸುಳ್ಳಾಗಲಿ ಮೋಸವಾಗಲಿ ಇಲ್ಲ. ಅದರಲ್ಲಿ ರಾಗದ್ವೇಷಗಳಿಲ್ಲ.

## ಈ ವಾದದ ವಿಮರ್ಶವು.

ಇದು ವಿಚಾರಕ್ಕೆ ನಿಲ್ಲದು. ಶಬ್ದಾರ್ಥಗಳಲ್ಲಿ ನಿತ್ಯಸಂಬಂಧವನ್ನು ನಾವು ಒಪ್ಪುವೆವು. ಆದರೆ ಅಷ್ಟರಿಂದ ವೇದವಿಧಿಗಳಷ್ಟೆ ಧರ್ಮಪ್ರಮಾಣವೆನಲಾಗದು. ಆತ್ಮನ ಜ್ಞಾನವಿಷಯವಾದುದೆಲ್ಲವು ಅರ್ಥವು. ಆ ಅರ್ಥದ ವಚನವೆಲ್ಲವು ಶಬ್ದವು. ಆದುದರಿಂದ ಒಂದೊಂದು ಜ್ಞಾನಕ್ಕೆ ಒಂದೊಂದು ಶಬ್ದವಿದೆ. ಆದರೆ ಆ ಜ್ಞಾನವು ಭ್ರಮಾತ್ಮಕವಿದ್ದರೆ ಆಗಲಿ, ತನಗಾದ ಜ್ಞಾನವನ್ನು ಬಚ್ಚಿ ಅನ್ಯಥವೆಯಾಗಿ ವಿಷಯವನ್ನು ವಚನಿಸುವಲ್ಲಿ ಆಗಲಿ, ಶಬ್ದವು ಯಥಾರ್ಥವಲ್ಲ. ಮೀಮಾಂಸಕನು ವೇದವು ಸ್ವಯಂಭುವೆಂದು ಅದರ ವಿಧಿಗಳಿಗೆ ಪ್ರಮಾಣತ್ವವನ್ನು ಹೇಳುವುದು ಯುಕ್ತವಲ್ಲ.

ವೇದವು ವರ್ಣಮಯ ಶಬ್ದಗಳ ರಾಶಿಯಾಗಿದೆ. ವರ್ಣಗಳು ದೇಹಿಗಳಿಂದಲೆ ಉಚ್ಚರಿತವಾದವುವು. ಪೂರ್ವ ಮೀಮಾಂಸಕನು ಈಶನಿಂದಲು ವೇದಗಳ ಉತ್ಪತ್ತಿಯನ್ನೂ ಒಪ್ಪುವುದಿಲ್ಲ. ಆರೊಬ್ಬನಿಂದ ಉಚ್ಚರಿತವಾಗದೆ ತಾವೆ ಶಬ್ದಗಳುಂಟೆಂಬುದು ಯುಕ್ತವಲ್ಲ. ಆದುದರಿಂದ ವೇದವು ಸಕರ್ತೃಕವೆನಬೇಕು.

## ವೈದಿಕರದೊಂದು ಯುಕ್ತಿ.

ಸಾಂಖ್ಯಾದಿಮತಗಳ ತತ್ವಗಳು ಪ್ರಸರವಾಗಿ ವೈದಿಕ ಮತಕ್ಕೆ ದಾಳಿಬರಬಾರದೆಂದು ವೇದಸ್ವಯಂಭೂತ್ವವಾದವನ್ನು ವೈದಿಕರು ಹೂಡಿದರು. ವೇದವು ಸ್ವಯಂಭುವಾದುದರಿಂದ ರಾಗದ್ವೇಷಗಳಿಗಿಂಬಿಲ್ಲ. ಬುದ್ಧಿದೋಷಕ್ಕೆ ತೆರಪಿಲ್ಲ. ಉಳಿದ ಶಾಸ್ತ್ರಗಳು ಮನುಷ್ಯಕೃತವಾಗಿ ಮೋಹಾಜ್ಞಾನಗಳಿಗೆ ಇಂಬಾಗಿವೆ ಎಂದು ಯುಕ್ತ್ಯಾಭಾಸಗಳಿಂದ ಯಾಗಾದಿ ಧರ್ಮಗಳನ್ನು ಕಾಯ್ದುಕೊಂಡರು. ಶಿವಾಗಮಂಗಳು ಈಶ್ವರನಿಂದ ಬಂದುವೆಂದು ಶೈವರು ಹೇಳುವುದರಿಂದ ವೇದಗಳಿಗೆ ಈಶ್ವರಕೃತವೆಂದರೆ ಶಿವಾಗಮಂಗಳು ಸಮಪ್ರಮಾಣವಾಗಿ ಯಾಗಧರ್ಮಕ್ಕೆ ವಿರೋಧವಹುದೆಂದು ವೇದವು ಈಶ್ವರಕೃತವೂ ಅಲ್ಲೆಂದರು.

## ಉತ್ತರಮೀಮಾಂಸಾಶಾಸ್ತ್ರವು.

ಉತ್ತರಮೀಮಾಂಸಕರು ತುಸ ಬೇರೆಯಾದರು. ಅವರು ವೇದಗಳು ಸ್ವಯಂಭುವಾದುವು ಎಂದರೆ ಪರಬ್ರಹ್ಮದ ನಿಶ್ವಸಿತಂಗಳು ಪರಬ್ರಹ್ಮವು ಇದನ್ನು ಹೇಳಬೇಕೆಂದು ಹೇಳಿಲ್ಲ. ಉಳಿದ ಶಾಸ್ತ್ರಗಳು ಬುದ್ಧಿಪುರಃಸರಕೃತಿಗಳಾದುದರಿಂದ ಅವುಗಳಲ್ಲಿಯು ತತ್ವವಿಚಾರವು ನೇರವಾದುದಲ್ಲ.

ಇವರಲ್ಲಿ ಶಿವಾಗಮಂಗಳನ್ನು ನಂಬಿದವರು ವೇದವು ನಿಶ್ವಸಿತವಾದುದೆಂದೂ ಆಗಮಂಗಳು ಸ್ಪಷ್ಟೋಚ್ಚರಿತಂಗಳೆಂದೂ ಹೇಳಿದರು. ಎರಡೂ ಸಮಾನ ಪ್ರಮಾಣವೆಂದು ಬಾಯ್ಮಾಡಿದರಾದರೂ ವೈದಿಕ ವಿಧಿಗಳಿಗನುಸರಿಸಿ ಆಗಮಂಗಳನ್ನು ತಿರುವಿಕೊಂಡರು. ಆದರೆ ವ್ಯಾಸಸೂತ್ರಗಳಲ್ಲಿ ಆಗಮಂಗಳಿಗೆ ಆವ ಆಶ್ರಯವು ಇಲ್ಲೆಂದು ನಾವು ಮೊದಲು ತೋರಿಸಿದುದನ್ನು ನೆನಪಿನಲ್ಲಿಡತಕ್ಕದ್ದು. ಬೃಹದಾರಣ್ಯಕದಿಂದ ಉದಾಹರಿಸಿದ ಅಸ್ಯ ಮಹತೋ ಭೂತಸ್ಯ ಇತ್ಯಾದಿಯನ್ನು ಮರೆಯತಕ್ಕುದಲ್ಲ.

## ಪೂರ್ವೋತ್ತರ ಮೀಮಾಂಸೆಗಳ ಸಾಮ್ಯವು.

ಶಬ್ದವು ಸ್ವಯಂಭುವಾಗಿರಲಿ ಬ್ರಹ್ಮದ ನಿಶ್ವಸಿತವಾಗಿರಲಿ ಶಬ್ದಸಾಮರ್ಥ್ಯದಿಂದಲೆ ಧರ್ಮಬೋಧವೆಂಬಲ್ಲಿ ಮೀಮಾಂಸಾದ್ವಯವು ಸಮಾನವಾಗಿದೆ. ಶಬ್ದಗಳಿಂದ ವೈದಿಕ ವಿಧಿಗಳಿಂದ ಧರ್ಮಬೋಧವಾದಪುದು. ಬೇರೆ ಪ್ರಮಾಣವಿಲ್ಲೆಂಬುದು ಸರಿಯಲ್ಲ. ವೈದಿಕ ಶಬ್ದರಾಶಿಯು ಸ್ವಯಂಭುವಾದೊಡಾಗಲಿ ಬ್ರಹ್ಮನಿಶ್ವಸಿತವಾದೊಡಾಗಲಿ ಪ್ರಾಣಿಮಾತ್ರದ ಕಿವಿಗೆ ತಾನಾಗಿ ಕೇಳಬೇಕು. ಆಚಾರ್ಯನ ಉಪದೇಶವನಪೇಕ್ಷಿಸಬಾರದು. ಉಚ್ಚಾರವು ಅಭಿವ್ಯಕ್ತಿಗೆ ಬೇಕೆಂದರೆ ನಾವು ಆಡುವ ಶಬ್ದಗಳಿಗೂ ವೈದಿಕ ಶಬ್ದಗಳಿಗೂ ಅಂತರವೇನು ? ನಮ್ಮ ಮಾತುಗಳೂ ನಿತ್ಯವಾಗಿವೆ. ಅಭಿವ್ಯಂಜನಕ್ಕೆ ನಾಲಿಗೆಯು ಬೇಕು. ನಮ್ಮ ಭಾವಗಳು ಬಂದಬಂದಂತೆ ನಮ್ಮ ಶಬ್ದಗಳು ಮೂಡಿ ತೋರ್ಪವು ಭಾವಗಳು ಬಯಲಾದಂತೆ ಶಬ್ದಗಳು ಬಯಲಾದಪುವು. ಮತ್ತು ಭಾವಗಳು ಮೂಡಲು ಅವುಗಳೊಡನೆ ತಾವೂ ಮೂಡಿದಪುವು. ವೈದಿಕ ಶಬ್ದಗಳು ಆರ ಭಾವವನ್ನೂ ಅಪೇಕ್ಷಿಸವು. ಆದುದರಿಂದ ನಿತ್ಯವು ವ್ಯಕ್ತವಿರತಕ್ಕವು. ನಿತ್ಯ ವ್ಯಕ್ತವಾದುದರಿಂದ ನಿತ್ಯ ಶ್ರವಣಗೋಚರವಿರಬೇಕು.

## ಶಬ್ದವಿಚಾರವು

ಸರ್ವ ಶಬ್ದಗಳ ಉಪಾದಾನಕಾರಣವು ಬಿಂದುವು. ಅದಕ್ಕೆ ಪರನಾದವೆಂದೂ ಶಿವಾಗಮಗಳು ಅನ್ನುವುವು. "ಸ ಬಿಂದುಃ ಪರನಾದಾಖ್ಯಃ ನಾದಬಿಂದ್ವರ್ಣಕಾರಣಮ್" ನಾದಕಾರಿಕಾ ೨೨. ಆ ಬಿಂದು ಎಂಬ ಪರನಾದದಿಂದ ಅಪರನಾದ, ಅಪರಬಿಂದು. ಅರ್ಣ ಅಥವಾ ವರ್ಣವೆಂಬ ಕಾರ್ಯಂಗಳು ಜನಿಪುವು. ಇವರಲ್ಲಿ ನಾದವೆಂದರೆ ಅಭಿದೇಯ ಬುದ್ಧಿಗೆ ಹೇತುವಾದುದು. ಬಿಂದುವೆಂದರೆ ಪರಾಮರ್ಶಜ್ಞಾನಮಯವು. ಇದಕ್ಕೆ ಅಕ್ಷರಬಿಂದುವೆಂಬರು, ಇದಕ್ಕೆ ಸೂಕ್ಷ್ಮಶಬ್ದವೆಂಬರು. ಅರ್ಣ ಅಥವಾ ವರ್ಣವೆಂದರೆ ಆಕಾಶವಾಯುಗಳಿಂದ ಜನಿಸಿದ ಸ್ಥೂಲ ಶಬ್ದವು— ಇದುವೆ ನಮ್ಮ ಕಿವಿಗೆ ಗೋಚರವಹುದು. ಶ್ರೀ ಮತ್ತಾಲೋತ್ತರಾಗಮದಲ್ಲಿ ಸ್ಥೂಲ ಶಬ್ದ ಇತಿಪ್ರೋಕ್ತಂ ಸೂಕ್ಷ್ಮಂ ಚಿಂತಾಮಯಂ ಭವೇತ್। ಚಿಂತಯಾರಹಿತಂ ಯತ್ತು ತತ್ಪರಂ ಪರಿಕೀರ್ತಿತಮ್। ಎಂದು ಪರನಾದ ಕಾರ್ಯಂಗಳಾದ ನಾದ-ಬಿಂದು-ವರ್ಣಗಳನ್ನು ಹೇಳುದುದುಂಟು.

ಓದುಗರಿಗಿದು ಹಸನಾಗಿರಲಾರದು. ಬಿಡಿಸಿ ಹೇಳುವೆವು. ಪರಶಿವನು ಚಿತ್ಸ್ವರೂಪನಹನು. ಚಿತ್ ಎಂದರೆ ಜ್ಞಾನವು. ಚಿತ್ತು ಪರಿಪೂರ್ಣವಾಗಿಹುದು. ಸ್ಫುರಣವೆಂಬ ಶಕ್ತಿಯಿಂದೊಡಗೂಡಿಹುದು.

ಆ ಸ್ಫುರಣ ಶಕ್ತಿಯು ಅಸಾಧಾರಣ ಶಕ್ತಿಮಯವು. ಅದು ಶಿವನಿಂದ ಅಭಿನ್ನವಾಗಿ ಶಿವಸಮವೇತವಾಗಿದೆ. ತಾನು ತಾನಾದ ಶಿವತತ್ವವು ಲೀಲೆಯಿಂದ ಜಗದ್ಭೇದವನ್ನು ಕಲ್ಪಿಸಲಪುನಾಗಲು ಆ ಶಕ್ತಿಯಿಂದ ಪರನಾದವೆಂಬ ಬಿಂದುವು ತೋರಿತ್ತು. ಇದು ಜಗತ್ತಿನ ಸರ್ವತತ್ವಗಳಿಗೂ ತತ್ವ ಕಾರ್ಯಂಗಳಾದ ತಾತ್ವಿಕಂಗಳಿಗೂ ವಾಚಕಂಗಳಾದ ಶಬ್ದಗಳಿಗೆ ಉಪಾದಾನಕರಣವು. ಅಂದರೆ ಪರಶಿವ ಶಕ್ತಿಯು ಸರ್ವಸತ್ತೆಗೆ (ಉಳುಮೆಗೆ) ಆಧಾರವಾದ ಪರಶಿವನಲ್ಲಿ ಅಪರ ಸತ್ತಾತ್ಮಕವಾದ ಜಗತ್ತನ್ನು ವಿಕಸಿಸುವಲ್ಲಿ, ಆ ಅನೇಕ ಅಪರ ಸತ್ತೆಗಳಿಗೂ ಆ ಅಪರ ಸತ್ತಾಂತರ್ಗತವಾದ ಪ್ರತಿ ಪದಾರ್ಥ ವರ್ಗಕ್ಕೂ ವಾಚಕ ಶಬ್ದಗಳನ್ನೂ ವಿಸ್ತರಿಸುವಳು. ಈ ವಿಸ್ತರಣ ಕಾರ್ಯಕ್ಕಾಗಿ ಬಿಂದುವೆಂಬ ಸೂಕ್ಷ್ಮೋಪಾದವನ್ನು ಶಕ್ತಿಯು ಕಲ್ಪಿಸಳು. ಈ ಬಿಂದುವು ಸರ್ವ ಕಾರ್ಯಜಾತಕ್ಕೂ ಆಧಾರವಾಗಿ ಶಬ್ದಜಾಲಕ್ಕೆ ಉಪಾದಾನವಾದವುದು. ಬಿಂದು

ಶಬ್ದವು ಬಿದಿ ಅವಯುವೇ ಎಂಬು ಧಾತುವಿಗೆ ಉ ಪ್ರತ್ಯಯುವು ಹೊಂದಿ ಆಗಿದೆ. ಸ್ಥೂಲಕಾರ್ಯಗಳಿಗೆ ಅತಿ ಸೂಕ್ಷ್ಮವಹ ಕಾರಣವೆಂಬರ್ಥವು.

ವಿಶ್ವದ ಅನಂತವಾದ ಅಪರಸತ್ತೆಗಳಿಗೆ- ಮಣ್ಣು ಪರಸತ್ತೆಯಾದರೆ ಮಡಿಕೆಯು ಅಪರಸತ್ತೆಯು. ಬೀಜ ಭೂತವಾದುದೆ ಬಿಂದುವು. ಅದ ರಲ್ಲಿ ಪದಾರ್ಥಗಳಡಗಿದಂತೆ ತದ್ವಾಚಕಗಳೂ ಅಡಗಿಹವು. ಆ ವಾಚಕ ಶಬ್ದಗಳ ಅತ್ಯಂತ ಸೂಕ್ಷ್ಮಾವಸ್ಥೆಯೆ ಪರನಾದವೆಂಬ ಈ ಬಿಂದುವು. ಸರ್ವ ಪದಾರ್ಥಗಳು ಸರ್ವ ಭಾವಗಳು ಪರಸತ್ತಾತ್ಮಕನಾಗಿ ಭವನೆನಿ ಸಿಕೊಂಬ ಪರಶಿವನಿಂದ ತೋರುವಲ್ಲಿ ಅತಿ ಸೂಕ್ಷ್ಮ ಸ್ಥಿತಿಯಲ್ಲಿ ಸರ್ವ ಭೇದಗಳನ್ನು ಗರ್ಭೀಕರಿಸಿದಾಗ ಅದರೊಡನೆ ಸರ್ವ ಶಬ್ದಗಳನ್ನು ಗರ್ಭೀ ಕರಿಸಿ ನಾದವಿಹುದು. ವಾತೂಲಾಗಮದ ದ್ವಿತೀಯ ಪಟಲದಲ್ಲಿ ಶಿವ ತತ್ತ್ವೇಪರೇ ಸೂಕ್ಷ್ಮೇ ಬಿಂದುರೂಪಂತು ಜಾಯತೇ। ಬಿಂದೋರ್ನಾದಃ ಸಮುತ್ಪನ್ನೋ ಎಂದು ಇದೇ ವಿಷಯುವನ್ನು ಹೇಳಿಯದೆ.

ಬೀಜವು ತನ್ನೊಳು ಹುದುಗಿದ ಪತ್ರಪಲ್ಲವ ಶಾಖೆಗಳನ್ನು ತೋರಿ ಸದೆ ಅಂಕುರ ಮುಖವಾದಾಗಿನಂತೆ ಈ ಸ್ಥಿತಿಯು ಬಿಂದುವಿಹುದು. ಆದರಿಂದ ಶ್ರೀಮತ್ಕಾಲೋತ್ತರದಲ್ಲಿ ಚಿಂತಯಾ ರಹಿತಂ ಯತ್ತು ತತ್ಪರಂ ಪರಿಕೀರ್ತಿತಮ್. ಚಿಂತಾ ಶಬ್ದವನ್ನು ಶಬ್ದಸ್ತೋಮ ಮಹಾನಿಧಿ ಕೋಶವು ಪ್ರಾಗನುಭೂತಜ್ಞಾನ ಜನ್ಯೇ ಸಂಸ್ಕಾರೋದ್ಬೋಧೇ ಪೂರ್ವ ದೃಷ್ಟಿ ಪದಾ ರ್ಥಸ್ಮರಣೇಃ ಎಂದು ಹೇಳುವುದು. ಪೂರ್ವದಲ್ಲನುಭವಿಸಿದ ಜ್ಞಾನದಿಂದುಂ ಟಾದ ಸಂಸ್ಕಾರದ ನಿಚ್ಚಳವು ಚಿಂತೆಯು ಹಾಗು ಮೊದಲು ನೋಡಿದ ಪದಾರ್ಥವು ನೆನಹಿಗೆ ಬರುವುದು ಚಿಂತೆಯು. ಪೂರ್ವಾನುಭೂತ ಅಂದರೆ ಹಿಂದಿನ ಸೃಷ್ಟಿಯಲ್ಲನುಭವಿಸಿದ ಪದಾರ್ಥಗಳು ನೆನಹಿಗೆ ಬರಲು ಬಿಂದುವಿನ ಈ ಸ್ಥಿತಿಯಲ್ಲಿ ಅವಕಾಶವಿರಲಾರದು. ಆದುದರಿಂದಿದು ಚಿಂತಾ ರಹಿತವು.

ಬಿಂದುವು ಈ ಅವಸ್ಥೆಯಿಂದ ಸ್ಥೂಲತರವಾದ ಅವಸ್ಥೆಯನ್ನು ಹೊಂದಲು ಅದರಲ್ಲಿ ಲೀನವಾದ ಕಾರ್ಯಗಳು ಹೊರಹೊಮ್ಮಲನು ವಾಗಲು ಅದರೊಡನೆ ನಾದದಲ್ಲಿಯ ಶಬ್ದವು ವ್ಯಕ್ತವಾಗತೊಡಗಿ ಸೂಕ್ಷ್ಮ ಶಬ್ದ ಸ್ಥಿತಿಯನ್ನು ಹೊಂದುವುದು. ಆ ಸ್ಥಿತಿಯಲ್ಲದು ಚಿಂತಾಮಯ ವೆಂದರೆ ಪೂರ್ವ ಸೃಷ್ಟಿಯಲ್ಲಿಯ ಪದಾರ್ಥಗಳ ನೆನಹಿನಿಂದ ಕೂಡಿದು

ದಾದವುದು. ಇದಕ್ಕು ಒಡೆದು ಕಾರ್ಯ ಜಾತಗಳು ಮೂಡಲು ಸ್ಥೂಲ ಶಬ್ದಗಳು ಆ ಕಾರ್ಯ ವಾಚಕಗಳಾಗಿ ವ್ಯಕ್ತವಾದವು.

ಈ ಸ್ಥೂಲ ಶಬ್ದವು ವರ್ಣಮಯವು. ವಾತೂಲಾಗಮವು, ಮೇಲೆ ವಿವರಿಸಿದಂತೆ ನಾಮೋತ್ಪತ್ತಿಯನ್ನು ವಿವರಿಸಿ ನಾದಾಚ್ಛಕ್ತಿ ರಜಾಯತ। ಶಕ್ತೇಸ್ತು ಜಾಯತೇ ಶಬ್ದಃ ಶಬ್ದಾಜ್ಜಾತಂತು ವಾಗ್ಭವಮ್। ವಾಗ್ಭವಾಚ್ಚ ಕಲಾಜಾತಾಃ ಕಲಾಭ್ಯೋ ವಿಕಲಾಸ್ತಥಾ॥ ಎನ್ನುವುದು. ನಾದದನಂತರದಲ್ಲಿ ಸೂಕ್ಷ್ಮ ಶಬ್ದವನ್ನು ಶ್ರೀಮತ್ಕಾಲೋತ್ತರವು ಹೇಳುವಲ್ಲಿ ಶ್ರೀಮದ್ವಾತೂಲವು ಆ ನಾದಕ್ಕೂ ಸೂಕ್ಷ್ಮ ಶಬ್ದವೆಂಬ ಚಿಂತಾಮಯ ಶಬ್ದಕ್ಕೂ ನಡುವೆ ಶಕ್ತಿಯನ್ನು ಹೇಳುವುದು. ಈ ಶಕ್ತಿಯೆಂದರೆ ಚಿಂತಾಮಯ ಸೂಕ್ಷ್ಮ ಶಬ್ದದ ಪ್ರಥಮಾವಸ್ಥೆಯು. ನಾದ ಶಬ್ದವು ಸೂಕ್ಷ್ಮ ಶಬ್ದವಾಗುವ ಹವಣಿಕೆಯು. ಈ ಶಕ್ತ್ಯನಂತರದಲ್ಲಿಯ ಶಬ್ದವೆಂಬುದು ಸೂಕ್ಷ್ಮ ಚಿಂತಾಮಯ ಶಬ್ದವು. ಈ ಶಬ್ದದಿಂದ ಮುಂದಿನ ವಾಗ್ಭವವು ಶಬ್ದದ ವರ್ಣಾತ್ಮರೂಪಕ್ಕುನ್ಮುಖಾವಸ್ಥೆಯು. ಈ ಅವಸ್ಥೆಯಿಂದ ಕಲೆಗಳೆಂಬ ಸ್ವರಗಳು. ಸ್ವರಗಳಿಂದ ವಿಕಲೆಗಳೆಂಬ ವ್ಯಂಜನಗಳುದಯಿಪುವು. ಇಂತಿದೆಲ್ಲ ಸೃಷ್ಟಿಯಲ್ಲಿ ಶಿವಶಕ್ತಿಯು ಆ ಕಾರ್ಯಜನನದಲ್ಲಿ ಪರಾದಿ ಸಂಜ್ಞೆಗಳನ್ನು ತಳೆವುದು. ಚಿಚ್ಛಕ್ತಿಯು ಅಗಾಧ ಮಹಿಮೆಯಿಂದ ಬಿಂದುವನುಂಟುಮಾಡುವಲ್ಲಿ ಪರೆಯೆಂದೂ ನಾದದುತ್ಪತ್ತಿಯಲ್ಲಿ ಆದಿಯೆಂದೂ, ಶಕ್ತಿಯುತ್ಪತ್ತಿಯಲ್ಲಿ ಇಚ್ಛೆಯೆಂದೂ, ಶಬ್ದದಲ್ಲಿ ಜ್ಞಾನವೆಂದೂ, ವಾಗ್ಭವೋತ್ಪತ್ತಿಯಲ್ಲಿ ಕ್ರಿಯೆಯೆಂದೂ ಹೆಸರು ಹೊಂದಿದಳು. ಇದಕ್ಕೆ ಶ್ರೀಮದ್ವಾತೂಲವು ಬಿಂದುರೂಪಾಪರಾಶಕ್ತಿರ್ನಾದಶ್ಚೈವಾದಿರೀರಿತಾ। ಶಕ್ತಿರಿಚ್ಛೇತಿವಿಜ್ಞೇಯಾ ಶಬ್ದಶ್ಚಜ್ಞಾನಮೀರಿತಃ। ವಾಗ್ಭವಃ ಸ್ಯಾತ್ಕ್ರಿಯಾಶಕ್ತಿಃ ಕಲಾವೈಷೋಡಶಸ್ವರಾಃ॥

ವೇದವು ಚತ್ವಾರಿ ವಾಕ್ಪರಿಮಿತಾ ಪದಾನಿ। ತಾನಿವಿದುರ್ಬ್ರಾಹ್ಮಣಾಯೇ ಮನೀಷಿಣಃ। ಗುಹಾತ್ರೀಣಿ ನಿಹಿತಾನೇಂಗಯಂತಿತುರೀಯಂ ವಾಚೋಮನುಷ್ಯಾವದಂತಿ॥

ಎಂದು ಹೇಳುವಲ್ಲಿ ವೈಖರಿಯೆಂಬ ವರ್ಣಾತ್ಮಕ ಶಬ್ದವು ವ್ಯವಹಾರಗತವೆಂದೂ ಮಧ್ಯಮೆಯೆಂಬ ಹೃದಯಗತ ಶಬ್ದರೂಪವು ಅದಕ್ಕೆ ಹೇತುವೆಂದೂ ಪಶ್ಯಂತಿಯೆಂಬ ಸೂಕ್ಷ್ಮತದಾಂಶವು ಯೋಗಿಗಳಿಗೆ ಮಾತ್ರ

ಗೋಚರವೆಂದೂ ಪರೆಯು ವ್ಯವಹಾರಾತೀತಸ್ವರೂಪಜ್ಯೋತಿಯೆಂದೂ ಬೋಧಿಸುದು.

ವರ್ಣಾತ್ಮಕವಾದ ವೈಖರಿಯು ಉದಾತ್ತಾನುದಾತ್ತಾದಿಸ್ವರಗಳಿಂದೊಡಗೂಡಿ ವೇದದ ಪದಸಂಹಿತಾದಿ ರೂಪವಾಗಿಹುದು. ವರ್ಣಗಳು ಗುರುತಿಗೆ ಬರುವುದರಿಂದ ನಿತ್ಯವಾದರು ಪ್ರಯತ್ನಜನ್ಯವೂ ಆಗಿವೆ. "ಉಚ್ಚೈರುದಾತ್ತಃ" "ನೀಚೈರನುದಾತ್ತ" "ಸಮಹಾರಃ ಸ್ವರಿತಃ" ತುಲ್ಯಾಸ್ಯಪ್ರಯತ್ನಂ ಸವರ್ಣಮ್" ಇತ್ಯಾದಿ ಸೂತ್ರಗಳು ಇದಕ್ಕೆ ಸಾಕ್ಷಿಯಾಗಿವೆ. ಆದುದರಿಂದ ಲೌಕಿಕ ವಾಕ್ಯಗಳಂತೆ ಮನುಷ್ಯರ ಉರ ಆದಿಯಾದ ಎಂಟು ಎಡೆಗಳಲ್ಲಿ ವೈದಿಕ ವಾಕ್ಯಗಳಾದರು ಪ್ರಕಟವಾದವು.

## ಶಬ್ದಪ್ರಮಾಣ ವಿಚಾರವು.

ಸರ್ವ ಶಬ್ದಗಳ ನಿದಾನವು (ಮೂಲಕಾರಣವು) ಒಂದೆಯಾಗಿದೆ. ಶಬ್ದವು ವಕ್ತೃವಿನ ಜ್ಞಾನದೊಡನೆ ಅಗಲಿದುದಾಗಿದೆ. ಅಂತರಂಗದಲ್ಲಿ ಅಜ್ಞಾನದ ಉತ್ಸ್ಪಂದವಾಗಿದೆ. ವಾಗಿಂದ್ರಿಯದಲ್ಲಿ ಅಜ್ಞಾನದ ಉಚ್ಚರಣವಾಗಿದೆ. ಆದುದರಿಂದ ವಕ್ತೃವಿನಜ್ಞಾನ ಪ್ರಾಮಾಣ್ಯದಿಂದಲೆ ಶಬ್ದ ಪ್ರಾಮಾಣ್ಯವನ್ನು ಗುರುತಿಸತಕ್ಕುದು.

ವೇದವಚನಗಳು ಋಷಿಗಳ ವಚನಗಳು. ವೇದವು ಸ್ವಯಂಭುವೆಂಬುದು ವಕ್ತೃವಿಲ್ಲದೆ ವಚನಗಳು ಹುಟ್ಟಿದುವೆಂದಂತೆ. ಈ ವಿಷಯದಲ್ಲಿ ಜೈಮಿನಿ ಸೂತ್ರಗಳನ್ನು ಶಾಬರಭಾಷ್ಯಾನುಸೃತಿಯಿಂದ ನೋಡಿ ಬಗೆವಣ—- ವೇದಾಂಶ್ಚೇಕೇ ಸನ್ನಿಕರ್ಷಂ ಪುರುಷಾಖ್ಯಾಃ ಅನಿತ್ಯದರ್ಶನಾಚ್ಚ ಉಕ್ತಂತುಶಬ್ದಪೂರ್ವತ್ವಮ್ ಅಧ್ಯಾಯ ೧. ಪಾದ ೧. ಅಧಿಕರಣ ೮. ೨೭-೨೮-೨೯ ಸೂತ್ರಗಳು. ಕಾಠಕ ಕಾಲಾಪಕ ಪೈಪ್ಪಲಾದಕವೆಂಬ ಮೊದಲಾದ ಪುರುಷನಾಮಗಳಿಂದ ವೇದಗಳು ಪ್ರಸಿದ್ಧಿಯನ್ನೊಂದಿದುದರಿಂದ ವೇದಗಳು ಪುರುಷಕೃತವಾಗಿವೆ. ಮತ್ತು ಬಬರಃ ಪ್ರಾವಾಹಣಿರಕಾಮಯತ ಕುಸುರುವಿಂದ ಔದ್ದಾಲಕಿರಕಾಮಯತ ಪ್ರವಾಹಣನ ಮಗನು ಬಬರನು ಬಯಸಿದನು. ಉದ್ದಾಲಕನ ಮಗನು ಕುಸುರುವಿಂದನು ಬಯಸಿದನು ಎಂಬ_ಮುಂತಾದ ಜನನ ಮರಣವಂತರಹ ಪುರುಷರು ವೇದವಾಕ್ಯಾರ್ಥದಲ್ಲಿ ಕಂಡು ಬರುವರು. ಔದ್ದಾಲಕಿಯು ಹುಟ್ಟುವ ಮೊದಲು ಈ ಗ್ರಂಥವು ಇರಲಾರದು. ಆದುದ

ರಿಂದ ವೇದಗಳು ನಿತ್ಯವಲ್ಲ. ಎಂಬೀ ೨೭-೨೮ ಸೂತ್ರಗಳಿಗೆ ಪೂರ್ವ ಪಕ್ಷ ಸೂತ್ರಗಳಿಗೆ ೨೯ ನೆಯ ಸೂತ್ರವು ಸಿದ್ಧಾಂತದ ಉತ್ತರವಾಗಿದೆ. ಅದರರ್ಥವಿದು. ಗುರುವಿನಿಂದ ಅಧ್ಯಯನವಾದಂತೆ ಎಲ್ಲರೂ ವೇದಾ ಧ್ಯಯನವನು ಮಾಡುವರು ಸ್ವತಂತ್ರನಾಗಿ ಆರು ಅಧ್ಯಯನವನು ಮೊದ ಲುಮಾಡಿಲ್ಲ ಅಂತಹನಿದ್ದರೆ ಅವನು ವೇದಕರ್ತೃವಾಗಬಹುದಿದ್ದಿತು. ಅಧ್ಯೇತೃಗಳು ಅಧ್ಯಯನಗೆಯ್ವ ಮೊದಲು ವೇದಶಬ್ದಗಳು ಇರದೆ ಆಗ ದೆಂದು ಔತ್ಪತ್ತಿಕ ಸೂತ್ರದಲ್ಲಿ ನಾವು ಹೇಳಿಹೆವು.

ಹೀಗೆ ಸಿದ್ಧಾಂತವನುಸುರಿ ಪೂರ್ವಪಕ್ಷ ಪರಿಹರಣವಾಗಿ ಆಖ್ಯಾ ಪ್ರವಚನಾತ್ ೩೦ ಪರಂತು ಶ್ರುತಿ ಸಾಮಾನ್ಯ ಮಾತ್ರಮ್ ೩೧ ಕೃತೇವಾ ವಿನಿಯೋಗಃ ಸ್ಯಾತ್ ಕರ್ಮಣಃ ಸಂಬಂಧಾತ್ ೩೨. ಈ ಮೂರು ಸೂತ್ರಗಳಲ್ಲಿ ಜೈಮಿನಿಯು ರಚಿಸಿಹನು. ಇವುಗಳ ಅರ್ಥವು ಪೂರ್ವ ಪಕ್ಷಿಯು ಕಾಠಕಾದಿ ಸಮಾಖ್ಯೆಯು ಕರ್ತೃ ಸೂಚಕವೆಂಬುದು ಅಲ್ಲವು. ಈ ಹೆಸರುಗಳಿಹುದರಿಂದ ವೇದಕ್ಕೆ ಕರ್ತೃಗಳಿಹರೆಂದು ಅರ್ಥಾಪತ್ತಿಯಾ ಗದು ಅನನ್ಯ ಸಾಧಾರಣವಾಗಿ ಕಠಾದಿಗಳು ವೇದ ಪ್ರವಚನವನು ಮಾಡಿದರಾಗಿ ಕಾಠಕಾದಿ ನಾಮಗಳು ವೇದ ಶಾಖೆಗಳಿಗೆ ಸಂಬಂಧಿಸಿ ದುವು. ಪೂರ್ವಪಕ್ಷಿಯುದಾಹರಿಸಿದ ಪ್ರಾವಾಹಣಿರಕಾಮಯತ ಪ್ರಾವಾ ಹಣಿಯು ಬಯಸಿದನು ಎಂಬ ವಾಕ್ಯದಲ್ಲಿ ಮನುಷ್ಯನಲ್ಲಿ ಪ್ರಾವಾಹ ಣಿಯೆಂದರೆ ಪ್ರವಾಹಣನ ಮಗನೆನಬೇಕು. ಪ್ರವಾಹಣನೆಂಬ ಮನು ಷ್ಯನ ಪ್ರಸಿದ್ಧಿಯಿಲ್ಲ. ಪ್ರ ಶಬ್ದವು ಪ್ರಕರ್ಷಾರ್ಥದಲ್ಲಿ ವರ್ತಿಪುದು. ವಹತಿ ಧಾತುವು ಪ್ರಾಪ್ತಿಯಲ್ಲಿ ಚರಿಸುವುದು. ಪ್ರಹವಣವೆಂಬ ಸಮುದಾಯ ಶಬ್ದವು ಆವ ಮನುಷ್ಯ ವಾಚಕವಾಗಿ ಸಿದ್ಧವಾಗಿಲ್ಲ. ಪ್ರಾವಾಹಣಿ ಶಬ್ದ ದಲ್ಲಿ ತೋರುವ ಇಕಾರ ಪ್ರತ್ಯಯವು ಅಪತ್ಯಾರ್ಥದಲ್ಲಿ ಅಷ್ಟೇ ಅಲ್ಲ. ಆದರೆ ಕರ್ತ್ರರ್ಥದಲ್ಲಿಯು ಉಂಟು. ಆದುದರಿಂದ ಆವನು ಪ್ರವಹನ ಕ್ರಿಯೆಯನ್ನು ಮಾಡುವನೋ ಅವನು ಪ್ರಾವಾಹಣಿಯು. ಬರ್ಬರವೆಂ ಬುದು ಶಬ್ದದ ಅನುಕರಣವು. (ಅಂದರೆ ಬರ್ಬರವೆಂದು ಬೀಸುವ ಗಾಳಿ ಎಂಬರ್ಥದಲ್ಲಿ ಬರ್ಬರಃ ಪ್ರಾವಾಹಣಿಃ ಶಬ್ದಗಳ ಪ್ರಯೋಗವಾಗಿದೆ) ಆದುದರಿಂದ ಇಂತಹ ವಾಕ್ಯಗಳಲ್ಲಿ ಶಬ್ದ ಸಾಮ್ಯವಲ್ಲದೆ ಬೇರೆ ಇಲ್ಲ. ಪ್ರಾವಾಹಣಿಯೆಂದರೆ ಪ್ರವಾಹಣನ ಮಗನೆಂಬುದಲ್ಲ. ಆವಾಗಲು ಬೀಸುವ ಗಾಳಿ ಎಂದಿಂತಹ ಅರ್ಥವು.

ಇನ್ನು ವನಸ್ಪತಿಯಃ ಸತ್ರಮಾಸತ ಇತ್ಯಾದಿ ವೈದಿಕ ವಚನಗಳಲ್ಲಿ ಹೇಳಿದಂತೆ ವನಸ್ಪತಿಗಳು ಯಜ್ಞವನು ಅನುಷ್ಠಿಪುದಾಗಲಿ, ಮುದಿ ಎತ್ತು ಹಾಡುವುದಾಗಲಿ ಅಸಂಬದ್ಧವಾಗಿದೆಯಲ್ಲ ಎಂದರೆ, ಯಜ್ಞ ವಿಧಾಯ ವಾಕ್ಯಗಳು ಅಗ್ನಿ ಹೋತ್ರಂ ಜುಹುಯಾತ್ಸ್ವರ್ಗಕಾಮಃ" ಮುಂತಾದ ವಾಕ್ಯಗಳು ಸ್ವರ್ಗವ ಬಯಸುವನು ಅಗ್ನಿ ಹೋತ್ರ ಹೋಮವ ಮಾಡಬೇಕು ಎಂಬರ್ಥವನ್ನು ಸುಸಂಗತವಾಗಿ ಹೇಳುವುವು. ವನಸ್ಪತಿಗಳು ಯಜ್ಞವನನುಷ್ಠಿಸಿದುವು. ಸರ್ಪಾಃ ಸತ್ರಮಾಸತ ಸರ್ಪಗಳು ಸತ್ರವನನುಷ್ಠಿಸಿದುವು ಎಂಬಿಂತಹ ವಾಕ್ಯಗಳು ಕೇವಲ ಅರ್ಥವಾದವಾಗಿವೆ. ಅಂದರೆ ವಿಹಿತವಾದ ಯಾಗವನ್ನು ಹೊಗಳಿ ಯಾಗ ಕರ್ತವ್ಯತೆಯನ್ನು ಪ್ರೋತ್ಸಹಿಸುವುವು. ಅಂದರೆ ಅಚೇತನಗಳಾದ ವನಸ್ಪತಿಗಳೂ ಹುಳುಗಳೆನಿಸಿದ ಸರ್ಪಗಳೂ ಯಾಗ ಮಹಿಮೆಯನರಿತು ಅದನೆಸಗುವುವೆಂದರೆ ವಿದ್ವಾಂಸರಾದ ಬ್ರಾಹ್ಮಣರು ಯಾಗ ಮಾಡಬಾರದೆ? ಎಂಬರ್ಥವು.

ತೇನ ಪ್ರೋಕ್ತಮ್ ೪-೩-೧೦೧ ಕೃತೇಗ್ರಂಥೇ ೪೩-೧೧೬; ಇಲ್ಲಿ ಜೈಮಿನಿಯು ವೇದ ಪ್ರವಚನಾಚಾರ್ಯರ ಹೆಸರಿನಿಂದ ತೇನ ಪ್ರೋಕ್ತಂ ಸೂತ್ರದ ಆಧಾರವಾಗಿ ಉತ್ತರ ಪಕ್ಷವನ್ನು ಸಾಧಿಸಿಹನು. ಅಂದರೆ ವೇದ ಶಾಖೆಗಳನ್ನು ಅಧ್ಯಯನಗೆಯ್ಸಿಸಿದ ಆಚಾರ್ಯರಿಂದ ಆಯಾ ವೇದ ಶಾಖೆಗಳಿಗೆ ಹೆಸರುಗಳು ಬಂದುವೆಂದು ಆವನೊಬ್ಬ ಆಚಾರ್ಯನಿಂದ ವೇದದಧ್ಯಯನಪಾಯ್ತೊ ಆ ಆಚಾರ್ಯನ ಹೆಸರಿಗೆ ಥಣ್ ಣಿನಿ ಮೊದಲಾದ ಪ್ರತ್ಯಯಗಳನ್ನು ತಕ್ಕಂತೆ ಹಚ್ಚಲು ಆ ಶಾಖಾಧ್ಯಾಯಗಳ ವಾಚಕಗಳು ಸಾಧಿಸಲ್ಪಡುವುವೆಂದು- ತೇನ ಪ್ರೋಕ್ತಂ ಸೂತ್ರದಿಂದ ಹೇಳುವನು.

ಆದರೆ ಕೃತೇ ಗ್ರಂಥೇ ಎಂಬ ಸೂತ್ರದಿಂದ, ಪ್ರೋಕ್ತ ಸೂತ್ರಾಧಿಕಾರದಿಂದ ಹತ್ತುವ ಎಲ್ಲ ಪ್ರತ್ಯಯಗಳು ಆವನೊಬ್ಬನು ರಚಿಸಿದ ಗ್ರಂಥಕ್ಕೂ ಹತ್ತುವುವು. ಉಪಲಬ್ಧವಾದ ವೇದ ಭಾಗಗಳು ಋಷಿಗಳ ಉಚ್ಚಾರ ಲಬ್ಧವಾಗಿಹುದರಿಂದ ಪೌರುಷೇಯವೆನ್ನಲೆಬೇಕು. ಜೈಮಿನ್ಯಾಚಾರ್ಯನು ಒಂದನೆಯ ಪಾದದ ಆರನೆಯ ಅಧಿಕರಣದಲ್ಲಿ "ನಿತ್ಯಸ್ತು ಸ್ಯಾದ್ದರ್ಶನಸ್ಯ ಪರಾರ್ಥತ್ವಾತ್" ಎಂದು ಸೂತ್ರಿಸಿದುದು. ಶಬ್ದ ಸಾಮಾನ್ಯಕ್ಕು ಆದಿದೆಂಬ ಭಾಷಾಭೇದವಿಲ್ಲದೆ ಅವನಿವನೆಂಬ ಶಬ್ದೋ

ಚ್ಚಾರಕನ ಅಪೇಕ್ಷೆಯಿಲ್ಲದೆ ಶಬ್ದದ ನಿತ್ಯತ್ವವನು ಪ್ರತಿಷ್ಠಿಪುದು. ಅದನು ನಾವು ಅಲ್ಲೆನುವುದಿಲ್ಲ. ಆದರೆ ಶಬ್ದ ನಿತ್ಯತ್ವದಿಂದ ವೇದ ವಾಕ್ಯಗಳಷ್ಟೆ ಪ್ರಮಾಣವೆಂದು ಅಂಗೀಕರಿಸಲಾರೆವು. ಜೈಮಿನಿಯು ಸೂತ್ರದಲ್ಲಿ ತದ್ದರ್ಶನಸ್ಯ ಪರಾರ್ಥತ್ವಾತ್ ಎಂದು ಹೇಳಿದಂತೆ ಶಬ್ದೋಚ್ಚಾರಣ ಪ್ರಯತ್ನವು ಪರರಿಗೆ ತನ್ನ ಜ್ಞಾನವನ್ನು ಅರುಹುವುದಕ್ಕಿದೆ. ಉಚ್ಚರಿಸುವನ ಜ್ಞಾನವು ಯಥಾರ್ಥವಿದ್ದರೆ ಅವನುಚ್ಚರಿಸಿದ ವೈಖರೀಶಬ್ದಗಳು ಯಥಾರ್ಥವಾದ ಜ್ಞಾನವನ್ನುಂಟುಮಾಡಿದಪುವು. ಋಷಿಗಳಿಗೆ ಮಂತ್ರಕೃತ್ ಎಂಬ ಹೆಸರುಂಟು.

ತವ ಮಂತ್ರಕೃತೋ ಮಂತ್ರೈರ್ದೂರಾತ್ಪ್ರಶಮಿತಾರಿಭಿಃ
ಪ್ರತ್ಯಾದಿಶ್ಯಂತ ಇವಮೇ ದೃಷ್ಟಲಕ್ಷ್ಯ ಭಿದಃ ಶರಾಃ ॥

ರಘುವಂಶ ೧-೬೧.

ಅಪ್ಯಗ್ರಣೀರ್ಮಂತ್ರಕೃತಾಮೃಷಿಣಾಂ ಕುಶಾಗ್ರಬುದ್ಧೇಕುಶ್ಮ
ಗುರುಸ್ತೇ ।
ಯತಸ್ತ್ವಯಾ ಜ್ಞಾನಮಶೇಷಮಾಪ್ತಂ ಲೋಕೇನಚೈತ
ನ್ಯಮಿವೋಷ್ಣರಶ್ಮೇಃ ೫—೪

ಸಖಾದಶರಥಸ್ಯಾಪಿ ಜನಕಸ್ಯ ಚ ಮಂತ್ರಕೃತ್ ।
ಸಂಚಸ್ಕಾರೋಭಯಪ್ರೀತ್ಯಾಮೈಥಿಲೇಯೌಯಥಾವಿಧಿ ॥

೧೫ — ೩೧.

ಮೊದಲನೆಯದು ವಶಿಷ್ಠನನ್ನು ಕುರಿತು ದಿಲೀಪನ ನುಡಿಯು. ಎರಡನೆಯದು ಕೌತ್ಸನನ್ನು ಕುರಿತು ರಘುವಾಡಿದುದು. ಮೂರನೆಯದು ವಾಲ್ಮೀಕಿಯನ್ನು ಕುರಿತು ಕವಿಯ ವಚನವು. ಸುಕರ್ಮಪಾಪಮಂತ್ರಪುಣ್ಯೇಷು ಕೃಞಃ" ೩—೨—೮೯. ಎಂಬ ಸೂತ್ರದಿಂದ ಮಂತ್ರಕೃತ್ ಶಬ್ದವು ವೇದಮಂತ್ರಗಳ ರಚಕನನ್ನು ಬೋಧಿಸುದು. ಆದುದರಿಂದ ವೇದಮಂತ್ರಗಳು ಋಷಿ ಪ್ರಣೀತವಾಗಿವೆ. ಈ ವಾದಕ್ಕೆ ಜೈಮಿನ್ಯಾಚಾರ್ಯನ ಉತ್ತರಸೂತ್ರವಿಲ್ಲ.

ಮೇಲೆ ವಿವರಿಸಿದಂತೆ ಶಿವಯೋಗಿಗಳ ಕರಣೇಂದ್ರಿಯುಗಳನ್ನು ವ್ಯಾಪಿಸಿ ಶಿವನು ಆಗಮುಗಳನ್ನು ಹೇಳಿದನು. ಶಿವಯೋಗಿಗಳ ಭಾಷೆಯೇ ಶಿವನ ಭಾಷೆಯು. ಶಿವಶರಣರಾದ ಶ್ರೀಮದ್ಬಸವಾದಿ ಪ್ರಮಥರ ವಚನಗಳೂ ಶಿವವಚನಗಳು. ಈ ಭಾವದಿಂದಲೆ ಶ್ರೀ ಬಸವನು ಶರಣರ ನುಡಿ

ಗಡಣದಲ್ಲಿ ರಾಶಿಯಾಗಿಪ್ಪನು ಕೂಡಲಸಂಗಮದೇವ ಎಂಬ ಅರ್ಥದ ವಚನವನಾಡಿಹನು. ಇಂತಹ ಶಿವವಾಕ್ಯಗಳು ನಮಗೆ ಅತ್ಯಂತ ಪ್ರಮಾಣಭೂತವಾಗಿವೆ. ಅದಕ್ಕಿಂತ ಮಿಗಿಲಹ ಪ್ರಮಾಣವಿಲ್ಲ. ಈ ವಿಷಯದಲ್ಲಿ ಶ್ರೀಮನ್ಮತಂಗಪಾರಮೇಶ್ವರವು.

ಸುಪ್ರಸನ್ನೇಂದ್ರಿಯಗ್ರಾಮಃ ಸರ್ವಜ್ಞಃ ಸರ್ವಗೋಚರಃ
ಯೋಗಯೋಗೀಶ್ವರಃ ಸ್ವಾಮಿಸ್ವತಂತ್ರಃ ಪಶುಪಾಶಹಾ ॥
ತಸ್ಯೋಕ್ತಿಃ ಪೌರುಷೈಃ ಸ್ಥೂಲೈಃ ಪ್ರಮಾಣೈರ್ನಪ್ರಬಾಧ್ಯತೇ ।
ಪ್ರಮಾಣಮೇಕಂ ತದ್ವಾಕ್ಯಂ ತಥ್ಯಮೀಶ್ವರ ಭಾಷಿತಮ್ ॥

ತತ್ವದ್ವಯಾಖ್ಯತೃತೀಯ ಪಟಲ.

ಸರ್ವಜ್ಞನೂ ಸರ್ವಗೋಚರನೂ ಆಗಿಹ ಪರಶಿವ ವಚನಗಳಿಂದತ್ತಬೇರಾವ ಪೌರುಷ ವಚನಗಳು ಪ್ರಮಾಣವಲ್ಲೆಂಬರ್ಥವು.

ವಿಷಯಾಸಂಗನಿರ್ಮುಕ್ತೋ ವಿನಿರ್ಮುಕ್ತಮದಾಷ್ಟಕಃ ।
ಕಾಮಾ ಗತಿರ್ಮಮೇತ್ಯೇವಂ ಧ್ಯಾಯಮಾನೋ ದಿವಾನಿಶಮ್ ॥

ಸೂ. ೫ – ೩೪ ಎಂಬ ಮೊದಲಾದ ಪ್ರಮಾಣಗಳಿಂದ ಶಿವಭಕ್ತಿಯು ಸಂಸಾರ ಮೋಚಕವೆಂದರಿತು ಅದನ್ನೆ ಸರ್ವ ವಿಷಯಗಳಿಗಿಂತಲು ಅಧಿಕವಾಗಿ ಬಯಸುವ ಶಿಷ್ಯನನ್ನು ಗುರುವು ಯಥಾವಿಧಿ ಸಂಸ್ಕರಿಸಿ ಕೊನೆಯಲ್ಲಿ "ಲಿಂಗೇ ಪ್ರಾಣಾನ್ವಿನಿಕ್ಷಿಪ್ಯ ಪ್ರಾಣಂ ಲಿಂಗೇ ವಿನಿಕ್ಷಿಪೇತ್ । ತಲ್ಲಿಂಗಂ ಸ್ಥಾಪಯೇಚ್ಛಿಷ್ಯೇ ಸಮ್ಯಗ್ಧ್ಯಾತ್ವೈಕಭಾವತಃ ಸೂಕ್ಷ್ಮಾಗಮ ೫–೩೭. ಶಿಷ್ಯನ ಪ್ರಾಣದಲ್ಲಿ ಲಿಂಗವನ್ನೂ ಲಿಂಗದಲ್ಲಿ ಪ್ರಾಣವನ್ನೂ ನಿಕ್ಷೇಪಿಸಿ ಆ ಲಿಂಗವನ್ನು ಚೆನ್ನಾಗಿ ಏಕಭಾವದಿಂದ—ತಾನೂ ಲಿಂಗವೂ ಶಿಷ್ಯನೂ ಒಂದೆ ಎಂಬ ಭಾವದಿಂದ—ಧ್ಯಾನಿಸಿ ಶಿಷ್ಯನ ಅಂಗದಲ್ಲಿ ಸ್ಥಾಪಿಸತಕ್ಕದ್ದು.

## ಯಜೇತ ಸ್ಥಾಪಯೇದ್ವಿಧಿಭೇದವು.

ಇಂತು ಆದೊಡೆ ವೀರಶೈವಕ್ಕೂ ವಿಧಿಯೆ ಪ್ರಮಾಣವಾಯ್ತಲ್ಲ? ಧರ್ಮವು ವಿಧಿ ಮೂಲವಲ್ಲ, ಆತ್ಮನ ಸತ್ಕ್ರಿಯಾ ವಿಕಾಸರೂಪವು ಎಂಬ ಪ್ರತಿಜ್ಞೆಯು ಉಳಿದುದಲ್ಲ? ಕೇಳು- ಯಜೇತ ವಿಧಿಯು ವರ್ಣವನ್ನು ಹಿಡಿದು ಆಯಾ ತ್ರಿವರ್ಣಗತನು ಉಪನಯನ ಸಂಸ್ಕಾರವನ್ನು

ಹೊಂದಿ ತನಗೆ ತಕ್ಕುದಾದ ಬೃಹಸ್ಪತಿಸವವನು, ರಾಜಸೂಯುವನು, ಕಾರೀ ರಿಯನು ಹೊಡಬೇಕೆಂದು ಹೇಳಿದಪುದು. ವರ್ಣಗತನು ಬಯುಸಿದ ಡೆಯು ಬಯುಸದಿದ್ದೊಡೆಯು ಯಾಗವನು ಮಾಡಲೆಬೇಕು. ಆದೊಂದು ವೇದದ ಬಿಟ್ಟಿಯು. ಲಿಂಗಸ್ಥಾಪನವು ಹಾಗಲ್ಲ. ಆತ್ಮನು ಹಂಬಲ ದಿಂದ ತನ್ನ ಸ್ವರೂಪ ವಿಕಾಸವನು ಬಯುಸಿ ಹೊಂದಬೇಕಾದ ಒಪ್ಪು (ಸಂಸ್ಕಾರ). ಈ ಒಪ್ಪಿನಲ್ಲಿ ಆತ್ಮ ಕ್ರಿಯಾ ಜ್ಞಾನಶಕ್ತಿಯು ವಿಕಾಸವು ಅಡಗಿದೆ. ಈ ನಿಧಿಗೆ ಪ್ರಕಟವಾಗಹತ್ತಿದ ಆತ್ಮಶಕ್ತಿ ವಿಕಾಸವು ಮೂಲ ವಾಗಿದೆ. ಉಪನಯುನ ಯಾಗ ವಿಧಿಗಳಿಗೆ ಲೌಕಿಕ ವರ್ಣವು ಮೂಲವು. ಲಿಂಗಧಾರಣ ವಿಧಿಗೆ ಶಕ್ತಿಪಾತವು ಅಥವಾ ಪ್ರಕಟೀ ಭಾವವನ್ನು ಪಡೆ ಯುಹತ್ತಿದ ಆತ್ಮನ ಕ್ರಿಯಾಜ್ಞಾನ ನೈರ್ಮಲ್ಯವು ಮೊದಲು.

## ಆಚಾರ್ಯನ ಹೆಡ್ಡತನವು.

ಶಿವಾಗಮೋತ್ತರದಲ್ಲಿರುವ ಈ ಸ್ಪಷ್ಟ ವಿಧಿಗಳನ್ನು ಬಳಿವಿಡಿಯುದೆ ದೇವಧಾರಣದಂತಹ ಅಸಂಬದ್ಧ ವಾಕ್ಯಗಳನ್ನು ವಿಧಿತ್ವೇನ ತಿರುಗಿಸಿ ದೇವಾದಿ ಶಬ್ದಗಳನ್ನು ಲಿಂಗಪರವೆಂದು ಹೇಗೊ ದುಃಪ್ರತಿಪತ್ತಿಗೊ ಳಿಸಿ ಕಷ್ಟಪಡುವ ಆಚಾರ್ಯನು ವೀರಶೈವ ಸಿದ್ಧಾಂತವನು ಬಲ್ಲವ ನಾಗನು. ಅಲ್ಲಲ್ಲಿ ತಾನುದಾಹರಿಸುವ ಸಿದ್ಧಾಂತ ಶಿಖಾಮಣಿಯನ್ನಾ ದರು ಚೆನ್ನಾಗಿ ನೋಡಿದ್ದರೆ ಬ್ರಾಹ್ಮ್ಯದ ಬೆಂಬಳಿಯಲ್ಲಿ ತೊಳಲುತ್ತ ಕಷ್ಟಪಡುತ್ತಿರಲಿಲ್ಲ. ನೋಡಿರಿ.

ಮಾನುಷೀಂ ಯೋನಿಮಾಸಾದ್ಯ ಮಹಾದುಃಖ ವಿವರ್ಧಿನೀಮ್ ।
ಜಾತ್ಯಾಯುಭೋಗ ವೈಷಮ್ಯ ಹೇತುಃಕರ್ಮೋಪಪಾದಿನೀಂ
ಸಮಸ್ತ ವೇದ ಕೈಂಕರ್ಯ ಕಾರ್ಪಣ್ಯ ಪ್ರಸವಸ್ಥಲೀಮ್ ।
ಮಹಾತಾಪತ್ರಯೋ ಪ್ರೇತಾಂ ವರ್ಣಾಶ್ರಮ ನಿಯಂತ್ರಿತಾಮ್ ।
ವಿಹಾಯತ್ವತ್ಪದಾಂಭೋಜ ಸೇವಾಂ ಕಿಂವಾ ವಸಾಮ್ಯಹಮ್ ॥
ಯಥಾಮೇ ಮಾನುಷೋ ಭಾವೋ ನ ಭವೇತ್ಕ್ಷಿತಿ ಮಂಡಲೇ ।
ತಥಾ ಪ್ರಸಾದಂ ದೇವೇಶ ವಿಧೇಹಿ ಕರುಣಾನಿಧೇ ॥

ಮನುಜತ್ವವು ಜಾತಿಃ ಆಯುಸ್ಸು ಭೋಗ ಎಂಬಿವುಗಳಲ್ಲಿ ಕರ್ಮ ತಾರತಮ್ಯದಿಂದ ವಿಷಮವಹುದು. ವೇದ ಕಿಂಕರತ್ವ ಪೂರ್ಣವು. ಅದ ರಿಂದ ದೈನ್ಯ ಕಾರಣವು. ತಾಪತ್ರಯಕ್ಕೆ ಕಾರಣವು. ವರ್ಣಾಶ್ರಮ

ಧರ್ಮಬಂಧವುಯುಕ್ತಾದುದು. ನಿನ್ನ ಸೇವೆಯುನಗಲಿ ನಾನು ಈ ದುಃಖ ದಲ್ಲಿರಬೇಕು ? ದೇವೇಶನೆ ನನಗೆ ಮನುಜತ್ವನಾಗದಂತೆ ಕರುಣಾ ನಿಧಿಯೇ ಅನುಗ್ರಹಿಸು ಎಂದು ಮರುಗುವ ಶ್ರೀ ರೇಣುಕನಿಗೆ.

ಮಾಭೈಃಕ್ಷೀರ್ಮಮ ಭಕ್ತಾನಾಂ ಕುತೋಭೀತಿರಿಹೇಷ್ಯತಿ ॥

ಅಂಜಬೇಡ. ನನ್ನ ಭಕ್ತರಿಗೆ ಈ ಮನುಜತ್ವದಲ್ಲಿಯು ಭಯವೆತ್ತ ಣಿಂದ ಬರಬಲ್ಲುದು ? ಎಂಬು ಪರಮಾತ್ಮನು ಹೇಳಿದುದನ್ನು ನೆನೆಯು ಬೇಕಾಗಿದ್ದಿತು. ತಿಳಿಗೆ- ನಾವು ವೇದ ಕೈಂಕರ್ಯವೆಂದು ಓದಿದಲ್ಲಿ ಸೊಲ್ಲಾಪುರದ ವಾದವರ ಪ್ರತಿಯಲ್ಲಿ ದೇವ ಕೈಂಕರ್ಯವೆಂಬಿದೆ. ಅದ ರಿಂದಲೂ ನಮಗೆ ಹಾನಿಯಿಲ್ಲ. ಅನಂತ ದೇವ ಕೈಂಕರ್ಯವು ವೇದ ವಿಹಿತವಾಗಿದೆ. ಅದೂ ವೇದ ಕೈಂಕರ್ಯವೇ ಅದೂ ವರ್ಣ ಧರ್ಮವೇ ಅದೂ ವೇದಚೋದನಾಜನ್ಯವೇ.

ಪರಮಾತ್ಮನು ಮಮಭಕ್ತಾನಾಂ ಕುತೋಭೀತಿರಿಹೇಷ್ಯತಿ ಎಂದು ನುಡಿದುದರಲ್ಲಿ ವೀರಶೈವದ ಅತಿಶಯವುಂಟು. ಭೀತಿ ಶಬ್ದವನ್ನು ಭಯ ವೆಂದೂ ಭಯಹೇತುವೆಂದೂ ತಿಳಿಯುಬಹುದು. ಸ್ತ್ರಿಯಾಂ ಕ್ತಿನ್ ೩—೩— ೯೪ ಎಂಬ ಸೂತ್ರದಿಂದ ಭಾವದಲ್ಲಿಯೂ ಕರ್ತೃವಲ್ಲದ ಕಾರಕ ದಲ್ಲಿಯೂ ಧಾತುಗಳಿಗೆ ಕ್ತಿನ್ಪ್ರತ್ಯಯವು ಸೇರುವುದು.

ಶ್ರೀ ರೇಣುಕನು ಮನುಷ್ಯಭಾವದಿಂದ ಬೆದರಲು (೧) ಜಾತ್ಯಾಯು ಭೋಗವೈಷಮ್ಯವಾದಕರ್ಮ. (೨) ಸಮಸ್ತವೇದ (ದೇವ) ಕೈಂಕರ್ಯ. (೩) ವರ್ಣಾಶ್ರಮನಿಯಂತ್ರಣ ಎಂಬ ಮೂರು ಕಾರಣಗಳನ್ನು ಮುಂದಿ ಡುವನು. ಪರಮಾತ್ಮನು ತನ್ನ ಭಕ್ತರಿಗೆ ಮರ್ತ್ಯದಲ್ಲಿ ಭೀತಿಯಿಲ್ಲೆನ್ನು ವರು. ಕಾರಣವಿರುವನಕ ಕಾರ್ಯವು ತಪ್ಪದು. "ಕಾರಣಾತ್ಯಯೇ ಕಾರ್ಯಾತ್ಯಯಃ" ಕಾರಣವಳಿದಲ್ಲಿ ಕಾರ್ಯವಳಿದಪುದು ಎಂಬುದರಿಂದ ಭೀತಿ ಶಬ್ದಕ್ಕೆ ಭಯವೆಂದು ಹೇಳದೆ ಭಯಕಾರಣವೆಂದು ಇಲ್ಲಿ ಹೇಳ ಬೇಕು. ಆದುದರಿಂದ ವೀರಶೈವರು ಪ್ರಸಾದಭೋಗಿಗಳಾಗಿ ಅವರಿಗೆ ಕರ್ಮವೈಷಮ್ಯವಿಲ್ಲ. ಶಿವೇತರ ಪರಿತ್ಯಾಗಿಗಳಾದುದರಿಂದ ವೇದ ಕೈಂಕರ್ಯವಿಲ್ಲವು. ಇತರ ದೇವಕೈಂಕರ್ಯವಿಲ್ಲವು. ಲಿಂಗಧಾರಣವು ವೇದ ಚೋದನಾಮೂಲವಲ್ಲದುದರಿಂದ ವರ್ಣಾಶ್ರಮನಿಯಂತ್ರಣವಿಲ್ಲವು.

---

# ಬೇಡಲಾರೆ

ಕರುಣೆ ಬೇಕು! ಈಶ ಕರುಣೆಬೇಕು! ಎಂಬರೆಲ್ಲ.
ಯಾರಿಗಾಗಿ ಕರುಣೆಬೇಕು! ಏತಕೀಶನೊಲವು ಬೇಕು?
ಮಾಂಸಮೂಳೆ ಮಜ್ಜೆಗಳನು ಹೊರೆಯಲೆಂದು ಬೇಡಲೇ?
ಅಡರಿ ಬರುವ ಕೇಡು ಪೀಡೆಗಳಿಗೆ ಅಳುಕಿ ಬೇಡಲೇ?
ದೈವಶಕ್ತಿ ಹಿರಿಯುದಹುದು; ನನ್ನ ಹೆಮ್ಮೆಗಿಲ್ಲ ನೆಲೆಯು.
ಅವನ ಮುನಿಸುಗಣ್ಣ ಕಿರಣದೆಳೆಯು ಮಣ್ಣಿಗಿಕ್ಕಬಹುದು!
ಕರುಣೆ ಪಡೆದ ಭಕ್ತಿಗಿಲ್ಲವೇನು ಹೊನ್ನಶೂಲ?
ಬೇಡಿ ಬೇಡಿ ನೂರು ವರುಷ ಅಂಜಿ ಅಳುಕಿ ಕೊನೆಗು ಶೂಲ?
ಬೇಡಿ ಹಂಗಿನಲ್ಲಿ ಸಿಗದೆ ತಲೆಯನೆತ್ತಿ ಬಾಳಬೇಕು.
ಆಗು ಹೋಗುಗಳನು ಒಮ್ಮೆ ಅಳೆದು ಕಟ್ಟಿ ಒಗೆದನಂತೆ!
ಇನ್ನು ಬೇಡಿ ಪಡೆವುದೇನು? ಕಟ್ಟು ಮುರಿದು ಕೊಡುವುದೇನು?
ಆಟಕೆಂದು ಹೆಣೆದ ಬಲೆಯು ನೋಯಿಸುವುದೆ ನನ್ನನಿಂದು?
ಪೆಟ್ಟಿನಿಂದ ಹಣ್ಣುಮಾಡಿ ನೊಣೆದರೇನು — ಬೀಜ ಕಡೆಗೆ!
ಕಡಲ ನೀರು ತಾನು ಕೊಡದ ನೀರು ನಾನು ಬಲ್ಲೆನದನು
ಕಡಲ ನೀರ ಬಣ್ಣ-ರೂಪ-ಸವಿಯು ಕೊಡದ ನೀರಿಗುಂಟು!
ಅದರ ಶಕ್ತಿ ಅದರ ಬೆಡಗು ಅಣುವಿನಷ್ಟು ಇಲ್ಲವೇನು?
ಕೊಡದ ನೀರು ಕಡಲಿನಲ್ಲಿ ಸುರುವಿಕೊಳುವ ಶಕ್ತಿವಂತ!
ಇಂದೆ ನನಗೆ ಸುಟ್ಟರೊಂದು ಆವೆಯಾಗಿ ಹಾರಬಹುದು!
ನಾನೆ ಒಂದು ನನ್ನ ಒಡವೆ ಬೇಡಿದೊಡನೆ ಕೊಟ್ಟು ಬಿಡುವೆ.
ಆದರೇನು ಬೇಡಲಾರೆ! ಬೇಡಲಾರೆ ಕರುಣೆಸೆಂದು!

೨೧-೧೦-೩೭. — ಸಿಂಪೀ ಲಿಂಗಣ್ಣ

# ಮಹಾದೇವಿಯಕ್ಕನ ಮದುವೆಯ ವಿವಾದ.

## ಲೇಖಕರು:— ಶ್ರೀ ಚಂದ್ರಶೇಖರದೇವರು ಅಡ್ನೂರು.

(ಕೊನೆಯ ಲೇಖಾಂಕಕ್ಕೆ ಕೊನೆಯ ಮಾರುತ್ತರ)

---

ಓದುಗರೆ, ಓಸರಿಸಬೇಡಿ.! ಬಹು ದಿನದ ಮಾತಾಯಿತು. ತಲೆ ಚಿಟ್ಟು ಹಿಡಿಯಿತು. ಆದರೂ ಈ ಹಾಳು ವಾದ ತೀರಲಿಲ್ಲ ಎಂದು ಬೇಸರ ಪಡಬೇಡಿ!! ಇದೋ ನಾನೂ ನಿಮ್ಮಗಳ ವಿಶ್ವಾಸಕ್ಕೆ ಇನ್ನು ಈ ವಿಚಾರವನ್ನು ಬರಹ ಮೂಲಕ ಎತ್ತುವದಿಲ್ಲೆಂದು ಮಾತುಕೊಡುತ್ತೇನೆ. ಇದು ಕಡೆ ನುಡಿ, ಇದೊವ್ಮೆ ಓದಿ ಬಿಡಿ.

ನಾನಿಲ್ಲಿ ಹೆಚ್ಚಿನ ವಿವರಣೆಗೆ ಗಮನ ಕೊಡುವುದಿಲ್ಲ. ವಾದಿಗಳ ಪ್ರಶ್ನೆಗಳಿಗೆ— ಅಪಕ್ವ ವಿಚಾರಗಳಿಗೆ ಮಾತ್ರ ಉತ್ತರಿಸುವೆನು.

ವಾದಿಗಳು 'ಕವಿ-ಕಾಲ' ಎಂದು ಆರಂಭಿಸಿ ತಾವು ಮೊದಲಿಗೆ ೧೧೬೫ ಎಂದು ಗಟ್ಟಿಮುಟ್ಟಾಗಿ ಹಿಡಿದ ಹಸ್ತಮುಷ್ಟಿಯನ್ನು ಈಗ ಕೊಂಚ ಬಿಚ್ಚಿ "ಹರಿಹರದೇವ" ಎಂಬ ಗ್ರಂಥದಲ್ಲಿ ಪಂಡಿತರು ನಿರ್ಣಯಿಸಿದ ಅವಧಿಯ (೧೨೧೬) ವರೆಗೆ ಚಾಚಿದ್ದಾರೆ. ಸಂತೋಷ! ಆದರೂ ಕವಿಯ ಆಯುಷ್ಯರೇಖೆಯನ್ನು ೧೧೬೫ರಿಂದ ೧೨೧೬ರ ವರೆಗೂ ಎಳೆಯಲು ಹೆಣಗಿ "ಬಸವಣ್ಣನವರ ಪಟ್ಟಶಿಷ್ಯರಲ್ಲಿ ಕೆಲವರನ್ನಾದರೂ ಹರೀಶ್ವರನು ಕಂಡಿರಬಹುದು.(?)" ಎಂಬ ಶ್ರೀಮಾನ್ ಅ. ನ. ಕೃಷ್ಣರಾಯರ ಅನಿರ್ಣಯದ ಅಭಿಪ್ರಾಯದ ಮೇಲೆ 'ಮಿಥ್ಯವಾಗಲಾರದು' ಎಂದು ತಮ್ಮ ನಿರ್ಣಯದ ಕೈಯೂರಲು ಪ್ರಯತ್ನಪಟ್ಟಿದ್ದಾರೆ. ಪಾಪ! ಪರೋಪದೇಶೇ ಪಾಂಡಿತ್ಯಂ" ಎಂಬಂತೆ 'ಇಂತಹ ವಿಷಯಗಳಿಗೆ ಪ್ರಮಾಣ ಕೊಟ್ಟು ಬರೆಯಬೇಕು' ಎಂದು ನಮ್ಮನ್ನು ಎಚ್ಚರಿಸಲು ಹೊರಟ ಇವರಿಗೇನೇ ಮೊದಲು ಎಚ್ಚರವಿಲ್ಲ. ಇನ್ನು ಇವರು ಅನ್ಯರನ್ನು ಎಚ್ಚರಿಸುವ ಬಗೆಯೆಂತು? ಇವರ ನಿದ್ರೆಯು ಇಷ್ಟಕ್ಕೆ ತೀರಿತೆನ್ನುವಿರಾ? ಇಲ್ಲ. ಹರಿಹರನ ಕಾವ್ಯಗಳೆಲ್ಲವೂ ಅಂದಿನ ವೀರಶೈವರ ಇತಿಹಾಸ ಶೋಧನೆಗೆ ಬಹು ಸಹಾಯಕವಾಗಿವೆಯೆಂದು ಎಲ್ಲ ಪಂಡಿತರೂ ಒಪ್ಪುತ್ತಾರೆ. ಆದರೆ ನಮ್ಮ ಪ್ರತಿವಾದಿಗಳು ಮಾತ್ರ 'ಹರಿಹರನು ರಚಿಸಿದ

ರಗಳೆಗಳೆಲ್ಲಾ ಐತಿಹಾಸಿಕಕ್ಕೆ ತಳಹದಿಯಾಗಲಾರವೆಂಬ ನನ್ನ ಭಾವನೆ.' ಎಂದು ಬರಕೊಂಡಿದ್ದಾರೆ." ಎಂದು ಉತ್ತರೀಯವನ್ನು ಎತ್ತಿ ಹೊತ್ತು ಕೊಂಡು ಮತ್ತಿಷ್ಟು ಪ್ರಗಾಢ ನಿದ್ರೆಗೆ ಪ್ರಾರಂಭಿಸಿದ್ದಾರೆ. ಏಕೆಂದರೆ ನನ್ನ ಅಭಿಪ್ರಾಯಕ್ಕೆ ತಕ್ಕಂತೆ ನಾನು ಅದೇ ಲೇಖದಲ್ಲಿ ಕೆಲವು ಉದಾ ಹರಣೆಗಳನ್ನು ಉದಹರಿಸಿದ್ದೇನೆ. ಅವನ್ನು ಕಣ್ದೆರೆದು ನೋಡದೆ, ಅವನ್ನು ಸಮಂಜಸವಾಗಿ ಖಂಡಿಸದೆ ತಮ್ಮ ಮತವನ್ನು ಮಂಡಿಸದೆ ಹೀಗೆ ಬರೆದಿರುವುದು ಬಹು ಶೋಚನೀಯವಾಗಿದೆ.

ಎರಡನೆಯದಾಗಿಃ- "ಚಾಮರಸನ ಕಾವ್ಯವು ಕಾಲ್ಪನಿಕವೆಂಬು ದನ್ನೇ ನನ್ನ ಮೂರನೇ ಲೇಖಾಂಕದಲ್ಲಿ ಚಿತ್ರಿಸಿದ್ದೇನೆ. ಇದನ್ನು ನೋಡಿದ ಹಲವು ಜನ ಮಾನ್ಯ ವಿದ್ವಾಂಸರು ಒಪ್ಪೋಲೆಗಳನ್ನು ಬರೆದು ಮತ್ತಿಷ್ಟು ಉತ್ಸಾಹಗೊಳಿಸಿದರು ಎಂದು ತಮ್ಮ ಬೆನ್ನನ್ನು ತಾವೇ ಚಪ್ಪರಿಸಿಕೊಂಡಿದ್ದಾರೆ.

## ಇದಕ್ಕೆ ಮಾರುತ್ತರ.

ಮೂರನೇ ಲೇಖಾಂಕದ ಅಭಿಪ್ರಾಯವನ್ನು ಮೇ ತಿಂಗಳ ಸಂಚಿ ಕೆಯಲ್ಲಿ ಖಂಡಿಸಿದುದನ್ನು ನೋಡದೆ ಹೀಗೆ ಬರಕೊಂಡಿರುವುದನ್ನು ನೋಡಿದರೆ ಇವರ ಅಜ್ಞಾನಕ್ಕೆ ನಗು ಬರುತ್ತಿದೆ. ನನ್ನ ಖಂಡನೆ ಯನ್ನು ಕಾಣದ ಮುನ್ನ ಅವರು ನಿಮ್ಮನ್ನು ಉತ್ಸಾಹಿಸಿರ ಬಹುದು. ಒಂದು ವೇಳೆ ಕಂಡ ಮೇಲೆಯೇ ಉತ್ಸಾಹಿಸಿದ್ದರೆ ಮಾನ್ಯ ವಿದ್ವಾಂಸರು ಎಂಬುದಕ್ಕೆ 'ನನಗೆ' ಎಂದು ಒಂದು ವಿಶೇಷಣವನ್ನು ಕೊಡಿ! ಹೋಗಲಿ, ನೀವಾದರೂ ಖಂಡನೆಯನ್ನು ಕಂಡು ಕಂಡೂ ಹೆಮ್ಮೆಪಟ್ಟುಕೊಳ್ಳುವುದೇ? ಈ ರೋದನ ಬಲವೇಕೆ? ಇದರ ಉದ್ದೇ ಶವಾದರೂ ಏನು? ಇನ್ನೊಂದು ಕೆಚ್ಚೆದೆಯನ್ನು ತೋರಿಸಿರುವಿರಿ. ಆ ಆಧಾರವಿಲ್ಲದ ಕೆಚ್ಚು, ಅತೃಣೇ ಪತಿತೋ ವಹ್ನಿಃ.

## ವಾದಿಗಳ ವಿಲಕ್ಷಣ ವಿಚಾರಗಳು.

(೧) 'ಯಾವದು ಇರುವದಿಲ್ಲವೋ ಅದು ಪ್ರಸಾರವಾಗುವದೇ ಇಲ್ಲ.' ಇದರ ಸ್ಥೂಲಾರ್ಥವಾದರೂ ಇಂತು. ಪ್ರಸಾರವಾಗುವದೆಲ್ಲ ಪೂರ್ವದಲ್ಲಿ ಇರಬೇಕಾಗುತ್ತೆ. ಎಂದರೆ ಮೊದಲು ಹುಟ್ಟು ಕಾಣು

ತ್ತಿದ್ದು ಆ ಮೇಲೆ ಪ್ರಸಾರವುಳ್ಳದ್ದು. ಇನ್ನೂ ಸರಿಯಾಗಿ ತಿಳಿಸಬೇಕೆಂದರೆ, ಅಕ್ಕನು ಮದುವೆಯಾಗಿಲ್ಲವೆಂದು ಚಾಮರಸನು ಹೇಳುತ್ತಾನಲ್ಲವೇ? ಈ ಹೇಳಿಕೆಯು ಇವನಿಗಿಂತಲೂ ಬಹು ಪ್ರಾಚೀನ ಕಾಲದಲ್ಲಿ ವಿಷಮವಾಗಿ ತೋರುತ್ತದಲ್ಲದೆ ಸಮವಾಗಿ ತೋರುವದಿಲ್ಲ. ಕಾರಣ ಅದು ಅವನಿಂದ ಆರಂಭ. ಅಂತೆಯೇ ಕಲ್ಪಿತ.

(೨) ಹಗ್ಗದಲ್ಲಿ ಹಾವೆಂದು ಭ್ರಮಿಸಬೇಕಾದರೆ ಅಲ್ಲಿ ಕತ್ತಲೆಯಿರಲೇಬೇಕು. ಇದೇ ಇಲ್ಲಿ ದೋಷವು. ಹೀಗೆ ಅಲ್ಲಿರುವ ದೋಷ ವಾವುದು ತೋರಿಸಿ ನೋಡೋಣ?

(೩) ಎಲ್ಲದಕ್ಕಿಂತಲೂ ಯಾವುದು ಪ್ರಾಚೀನವಿದೆಯೋ ಅದಕ್ಕೆ ಅದೇ ಪ್ರಮಾಣ. ಇಲ್ಲಿ ನಿಮ್ಮ ಅಭಿಪ್ರಾಯದಂತೆ ಚಾಮರಸನದು ಭ್ರಮೆಯಿಂದ ಪ್ರಮೆಯಾಗಿದ್ದರೆ, ಆತನ ತರುವಾಯ ಅದು ಮತ್ತೇಕೆ ಭ್ರಮೆಯಾಯಿತು? ಪ್ರಮೆಯಿಂದ ಭ್ರಮೆಯಾಗುವುದೂ ಸೃಷ್ಟಿಯ ನೇಮವಿದೆಯೇ? ಎಂದು ಮರಳಿ ಪ್ರಶ್ನಿಸಿದರೆ ಯಾರಿಗೆ ಕೊಂಚ ಕಠಿಣ ವಾಗಬಹುದು ನೀವೇ ನೋಡಿ?

## ಪರಿವಿಡಿದು ಮಾರುತ್ತರ.

'ಮೊದಲು ಹುಟ್ಟು ಆ ಮೇಲೆ ಪ್ರಸಾರ' ಎಂಬ ನಿಮ್ಮ ಮಾತಿನ ಅರ್ಥವು ಅಂತಹ ಜಟಿಲವೇನೂ ಅಲ್ಲ. ಯಾರಿಗಾದರೂ ಹೊಳೆಯುವಂತಹದು; ಸಹಜವಾದುದು. ಅಂತಹದನ್ನು ನೀವು ವೃಥಾ ವಿಸ್ತರಿಸಲು ಹೊರಟು ಮುಂದೆ ಒಂದು ದೊಡ್ಡ ಮಡುವಿನಲ್ಲಿ ಬಿದ್ದು ಬಿಟ್ಟಿರುವಿರಿ. ಅದಾವುದೆನ್ನುವಿರಾ? ಕೇಳಿ. 'ಚಾಮರಸನ ಅಭಿಪ್ರಾಯವು ಅವನಿಗಿಂತಲೂ ಬಹು ಪ್ರಾಚೀನ ಕಾಲದಲ್ಲಿ ವಿಷಮವಾಗಿ ತೋರುತ್ತದಲ್ಲದೆ ಸಮವಾಗಿ ತೋರುವದಿಲ್ಲ.' ಎಂದು ನಿರಾಧಾರವಾಗಿ ಬರೆದಿರುವಿರಿ. ಬಹು ಪ್ರಾಚೀನ ಕಾಲವೆಂದರೆ ಎಷ್ಟು? ವಿಷಮವಾಗಿದ್ದುದು ಯಾರಲ್ಲಿ? ಯಾವ ಬಗೆಯಲ್ಲಿ? ಯಾವುದು? ಒಂದೇ ಮಾತಿನಲ್ಲಿ ಇಷ್ಟೊಂದು ಪ್ರಶ್ನೆಗೆ ಅವಕಾಶವಿದೆ. ಹೀಗಿದ್ದೂ ಇವಕ್ಕೆ ತಕ್ಕ ಪ್ರಮಾಣವಿಲ್ಲದೆ ಬರೆದು ಬಿಟ್ಟುದರಿಂದ ಇದು ನಿಜವಾಗಿಯೂ ಬೇಸರದಿಂದ ತೂಕಡಿಸುತ್ತ ಅಷ್ಟೇ ಅಲ್ಲ, ಜೊಲ್ಲಿಕ್ಕುತ್ತ ಕೇಳುವವರ ಕತೆಯು

ಗುಂಪಿಗೇನೆ ಸೇರಿ ಬಿಟ್ಟಿದೆ. ಇದಲ್ಲದೆ ಹರಿಹರನ ವಿಚಾರವಾದರೂ ಹರಿಹರನಿಂದಲೇ ಆರಂಭವಲ್ಲವೇ ? ಅಂದಮೇಲೆ ಅದೇಕೆ ಕಲ್ಪಿತವಲ್ಲ?

(೨) ಹಾವಿನ ಭ್ರಮೆಯಲ್ಲಿ ಕತ್ತಲೆಯು ದೋಷವೆಂದು ಕೇಳಿ ತಿಳಕೊಂಡ ನಿಮಗೆ ಈ ವಿಚಾರದಲ್ಲಿ ದೋಷ ಕಾಣದಿರುವುದು ಅಥವಾ ತಿಳಿಯದಿರುವುದು ಸಹಜ. "ತನ್ನಾತ್ಮವೇ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೇ?" "ಆತ್ಮೈವ ಹ್ಯಾತ್ಮನೋ ರಿಪುಃ" ಎಂಬೀ ಬಸವಣ್ಣ ಮತ್ತು ಭಗವಂತರ ಉಕ್ತಿಗಳಿಂದ ಚನ್ನಾಗಿ ತಿಳಿದುಕೊಳ್ಳಿ. ಇಲ್ಲವೆ ಇನ್ನೂ ಬಿಚ್ಚಿಯೇ ಬಿತ್ತರಿಸಬೇಕೆಂದರೆ ನಿಜಾಂಶವನ್ನು ತಳ್ಳುವ 'ಅಜ್ಞಾನಾಂಧಕಾರವೇ' ದೋಷ. ಹಗ್ಗವನ್ನು ಹಾವೆಂದು ಭ್ರಮಿಸಲು ರಜ್ಜು ವ್ಯತಿರಿಕ್ತವಾದ ಕತ್ತಲೆಯು ಹೇಗೋ ಹಾಗೆ ಇವಳ ನಿಜ ಚರಿತ್ರೆಯನ್ನು ಅನ್ಯಥಾ ತಿಳಿಯಲು ಅಜ್ಞಾನವೇ ಕಾರಣ. (ಇಲ್ಲಿ ಅಜ್ಞಾನವೆಂದರೆ ನಿಜ ಚರಿತೆಯನ್ನು ತಿಳಿಯದಿರುವಿಕೆ ಮಾತ್ರ.) ನಿಮ್ಮ ಪ್ರಶ್ನದ ಒಲವು ವಸ್ತುವಿನಲ್ಲಿ ದೋಷವನ್ನು ಹುಡುಕಲು ಹೊರಟಿದೆ. ಆದರಿದು ತಪ್ಪು. ಯಾವಾಗ್ಯೂ ವಸ್ತುವಿನಲ್ಲಿ ದೋಷವಿರುವದಿಲ್ಲ. ಇದಲ್ಲದೆ ಅಲ್ಲಿ ಹಗ್ಗವಿಲ್ಲ. ಇಲ್ಲಿ ಚರಿತೆಯಲ್ಲಿಲ್ಲ. ಕಾಣುವನಲ್ಲಿಯೇ ಮಾತ್ರ ಆ ದೋಷಾವಿರ್ಭಾವ. ಇದಿಂತು. ಇದರಲ್ಲಿ ಇನ್ನೇನಾದರೂ ಸಂದೇಹ ಬಂದಲ್ಲಿ ಮರಳಿ ಕೇಳಿ.

(೩) ಜನವರಿ ಸಂಚಿಕೆಯ ಮೊದಲು ಮಾತಿನಲ್ಲಿ "ಹರಿಹರ ಕವಿಯು ವೀರಶೈವ ಕವಿಗಳಿಗೆಲ್ಲ ಆದಿಯವನಾದರೂ ಶರಣರಿಗಲ್ಲ." ಎಂದು ಬರೆದುದನ್ನು ಭಾವನೆಗೆ ತಂದುಕೊಳ್ಳದೆ, 'ಎಲ್ಲದಕಿಂತಲೂ ಯಾವನು ಪ್ರಾಚೀನವೋ ಅದಕ್ಕೆ ಅದೇ ಪ್ರಮಾಣ.' ಎಂದು ಬರೆದಿರುವುದನ್ನು ನೋಡಿದರೆ- ಮನೆಯ ಸೊಡರು ಸುಡಲಾರದೆಂದು ಮುದ್ದಿಸಿದಂತೆ ಯಾಗಿದೆ. ಇದು ಮುಗ್ಧಪ್ರೇಮದ ಕಾಲಲ್ಲ. ವಿದಗ್ಧವಿಚಾರದ ಯುಗ ಚಾಮರಸನ ತರುವಾಯ ಚನ್ನಬಸವಾಂಕನಿಗೆ ಮತ್ತೇಕೆ ಭ್ರಮೆ ಯಾಯಿತು? ಎಂದು ಇವರ ಇನ್ನೊಂದು ತಿರುಳಿಲ್ಲದ ಪ್ರಶ್ನೆಯಿದೆ. ಒಬ್ಬನಿಗೆ ಭ್ರಮೆಯಾದ ಮೇಲೆ ಉಳಿದವರಿಗೆ ಭ್ರಮೆಯಾಗಬಾರದೆಂದು ನೇಮವಿದೆಯೇ? ಒಬ್ಬನು ಮುಕ್ತನಾದರೆ ಎಲ್ಲರೂ ಮುಕ್ತರಾಗುವರೇ? ಒಬ್ಬನು ಜ್ಞಾನಿಯಾದರೆ ಎಲ್ಲರೂ ಜ್ಞಾನಿಗಳಾಗಬಲ್ಲರೇ? ಕೈದೀವಿಗೆ ಯಿಲ್ಲದೆ ಕತ್ತಲೆಯಲ್ಲಿ ಹೋಗುವವರಿಗೆ ಬಹುತರವಾಗಿ ಭ್ರಮೆಯಾಗು

ವುದು ಕ್ರಮ ಪ್ರಾಪ್ತವಾದುದು. ಮೊದಲನೆಯವನಿಗೆ ಸಂಪೂರ್ಣವಾದರೆ ಎರಡನೆಯವನಿಗೆ (ಬೆಂಬಿಡಿದು ಹೋಗುವವಗೆ) ಸಂಶಯದಿಂದ ಆಗಬಹುದು. ಆದುದರಿಂದ ಹರಿಹರನ ಬೆಂಬಳಿವಿಡಿದು ಸಾಗಿದ ಚನ್ನಬಸವಾಂಕನಿಗೆ ಬ್ರಹ್ಮಚರ್ಯವನ್ನುಳಿಸಿಕೊಂಡು ಬರೀ ಬಾಸಿಗ ಕಟ್ಟುವ ಭ್ರಮೆ. ವಚನವೆಂಬ ಹಣತೆಯನ್ನು ಹಿಡಿದುಕೊಂಡು ಹೋಗುವ ಚಾಮರಸನ ಹೊಂಬೆಳಗು ಚನ್ನಬಸವಾಂಕನಿಗೆ ಸಿಕ್ಕಿಲ್ಲ. ಆತನೂ ಆ ನಸುಗತ್ತಲೆಯಲ್ಲಿಯೇ ನಡೆದಿದ್ದಾನೆ. ಬರೀ ಬಾಸಿಗ ಕಟ್ಟುವ ಅರ್ಥ ಭ್ರಮೆಗೆ ಸಿಲ್ಕಿದ್ದಾನೆ ಎಂದು ಉತ್ತರಿಸಿದಲ್ಲಿ ನಿಮ್ಮ ಆ ಕಠಿಣ ಪ್ರಶ್ನೆಗೆ ಇಲ್ಲಿ ಅವಕಾಶವೇ ಉಳಿಯಲಿಲ್ಲವಲ್ಲ! ಆದರೆ ಈ ವಿಚಾರವು ನಿಮಗೆ ಗೋಚರವಾಗದೆ ನೀವೂ ಅದೇ ನಸುಗತ್ತಲೆಗೆ ಧುಮುಕಿದಿರಾ? ಎಂದು ಕೇಳಿದರೆ ಏನಾಗುವದೆಂಬುದನ್ನು ಕೊಂಚ ಚನ್ನಾಗಿ ಯೋಚಿಸಿ ನೋಡಿ! 'ಈ ಚನ್ನಬಸವಾಂಕನ ಪಕ್ಷಕ್ಕೆ ಕೈಯಿಕ್ಕಬೇಡಿ' ಎಂದು ಹಿಂದೆಯೇ ಹೇಳಿರಲಿಲ್ಲವೇ? ಹೋಗಲಿ, ಇನ್ನೊಮ್ಮೆ ಇಂತಹ ಕುತರ್ಕಕ್ಕೆ ಮಾತ್ರ ಕೈಯಿಕ್ಕಬೇಡಿ !!

## ಮತ್ತೆ ಕೆಲವು ವಿಚಾರಗಳು.

(೪) ಅಕ್ಕನ ಕಾಲವು ಕ್ರಿ. ಶ. ೧೧೬೫ ಇರುವುದರಿಂದ ಇದೇ ಲೇಖದಲ್ಲಿ "ಕವಿಕಾಲ"ದ ವಿಚಾರವಾಗಿ ಬರೆದುದೂ ಉತ್ತರವಾಗುತ್ತದೆ.

(೫) ಮದುವೆಯಾಗಿತ್ತೇ? ಇಲ್ಲವೇ ಎಂಬುದನ್ನ ಬಿಟ್ಟು, ಅವನ ತತ್ವವೆಂಥದು? ಎಷ್ಟು ಶಾಸ್ತ್ರಗಳನ್ನು ಅಭ್ಯಸಿಸಿದ್ದ? ಅವನಿಗೆ ವೇದ ಬರುತ್ತಿತ್ತೆ ಇಲ್ಲವೇ? ಹೀಗೆಲ್ಲ ಇಲ್ಲದ್ದು ಅಲ್ಲದ್ದು ಸೇರಿಸಿ ಸತ್ಯವನ್ನು ಮುಳುಗಿಸಲು ಯತ್ನ ಮಾಡುವದು ಸತ್ಯಾಪೇಕ್ಷಿಯಾದ ವಿಮರ್ಶಕನಿಗೆ ತಕ್ಕುದಲ್ಲ.

## ಇವಕ್ಕೆ ಮರುತ್ತರ.

(೪) ಈ ಉತ್ತರದಲ್ಲಿ ಏನೊಂದೂ ಅರ್ಥವಿಲ್ಲ. ಇದರ ವಿಚಾರವಾಗಿ ಬರೆಯಲು ನನಗಿಷ್ಟವಿಲ್ಲ. ಏಕೆಂದರೆ ೧೧೬೫ ಎಂದು ಹರಿಹರನ ವಿಚಾರವಾಗಿದ್ದ ತಮ್ಮ ಬದ್ಧ ಮುಷ್ಟಿಯನ್ನು ಸಡಲಿಸಿದಂತೆ ಅಕ್ಕನ ಕಾಲ ವಿಚಾರದಲ್ಲಾದರೂ ಇಂದಿಲ್ಲ ನಾಳೆ ಇವರು ಬಿಚ್ಚುವವರೇ; ಬಿಚ್ಚಬೇಕು. ಒಮ್ಮೆಗೇ ಯಾವದೂ ಸಿದ್ಧಾಂತವಾಗಲಾರದು. ಸಂದೇಹದ ಹಿನ್ನೆಲೆ ನಿರ್ಣಯ.

(೫) ಇದೂ ಅಂಥದೇ. ಇದರಲ್ಲಿಯೂ ಹುರುಳಿಲ್ಲ. ತಾವು ಮಾಡಿದ ಪ್ರಶ್ನೆಯೇ ತಮಗೆ ನೆನಪಿಲ್ಲದೆ-ಎಚ್ಚರಿಲ್ಲದೆ ಬಲ್ಲಂತೆ ಕೊಚ್ಚಿಕೊಂಡಿದ್ದಾರೆ. ಚಾಮರಸನದು ಪೌರಾಣಿಕ ಭಕ್ತಿಯೆಂದು ತಮ್ಮ ಲೇಖದಲ್ಲಿ ಸಾಧಿಸಿದ್ದನ್ನು ನಾನು ಖಂಡಿಸಿ ಹರಿಹರನ ಒಲವನ್ನು ಕೊಂಚ ವಿಸ್ತರಿಸಿ ಮನಕ್ಕೆ ಮುಟ್ಟುವಂತೆ, ಹೃದಯಕ್ಕೆ ತಟ್ಟುವಂತೆ ಬರೆಯಬೇಕಾಯಿತು. ಹಾಗೆ ಬರೆವುದಕ್ಕೆ ಹಿಂದೆ ಮುಂದೆ ವಿಚಾರಿಸದೆ ಉತ್ತರಿಸಲು ಬಾರದೆ "ತಮ್ಮ ಪಕ್ಷ ಬೀಳುವ ಮಿಥ್ಯಾಭಿಮಾನ" 'ಏನೋ ಹೇಳುತ್ತಾರಲ್ಲವೇ?— 'ಕೈಲಾಗದಿರೋಣ ರೆಂದು" ಇದು ಹಾಗೆಯೇ ಸರಿ. ಎಂದು ಬರೆದುದೆಲ್ಲವೂ ಮೊತ್ತ ಮೊದಲು ಆ ವಿಚಾರಕ್ಕೆ ಎಡೆಗೊಟ್ಟು ನಿಮಗೇನೆ ಸಲ್ಲತಕ್ಕವು. ಆದಕಾರಣ ಅವನ್ನು ಮರಳಿ ನಿಮ್ಮಡಿಯಲ್ಲಿಯೇ ಇಕ್ಕಿದ್ದೇನೆ; ಸ್ವೀಕರಿಸಬೇಕು. ಇನ್ನೊಂದು ಇವರ ಬಿನ್ನಹವಿದೆ. ಏನಂದರೆ:- 'ಸತ್ಯಕ್ಕೆ ಒಪ್ಪಿ ಬಿಡಬೇಕು.' ಒಳ್ಳೇ ಮಾತು. ಒಪ್ಪತಕ್ಕ ಮಾತು. ಆದರೆ ಯಾವಾಗ? ಪಿತ್ತದೋಷ ಹೋದರಲ್ಲವೇ? ಅದಿಲ್ಲದೆ ಸುಮ್ಮನೆ ಒಪ್ಪಬೇಕು ಎಂದು ಮತ್ತೊಮ್ಮೆ ಬಲಾತ್ಕರಿಸಿ ಬಿನ್ನವಿಸಿವರ ಪರವಾಯಿಲ್ಲ; ಒಪ್ಪುತ್ತೇವೆ. ಅದಕ್ಕಾಗಿ ಕ್ಷಮಿಸಬೇಡಿ! ಬಳಲಬೇಡಿ!!

## ೬ನೇ ಉತ್ತರಕ್ಕೆ ಮಾರುತ್ತರ.

ಶ್ರೀಮಾನ್ ರಾ. ಸಾ. ಪಿ. ಜಿ. ಹಳಕಟ್ಟಿಯವರು ಪ್ರಕಟಿಸಿದ ಅಕ್ಕನ ವಚನವು ಅಪೂರ್ಣವೆಂಬುದು ಎಲ್ಲರಿಗೂ ಗೊತ್ತೇ ಇದೆ. ಒಪ್ಪಿಯೂ ಒಪ್ಪುತ್ತೇವೆ. ಇದಕ್ಕೆ ಹರಿಹರನ ರಗಳೆಯ ಗೀತೆಗಳ ದೃಷ್ಟಾಂತವೇಕೆ? ಕೈಕಂಕಣಕ್ಕೆ ಕನ್ನಡಿಯೇ?

ಹರಿಹರನ ರಗಳೆಯ ಆರನೆಯ ಸ್ಥಲದಲ್ಲಿ ಬರುವ ೨-೩ ಗೀತೆಗಳಿಂದ ಲಗ್ನವಾಗಿತ್ತೆಂದು ನಿರ್ಧರಿಸಲು ಮುಂದಾಗಿದ್ದಾರೆ.; ಸಿದ್ಧಾಂತವ ಶಿಖರವೇರಲು ಕುತೂಹಲ ಪಟ್ಟಿದ್ದಾರೆ. ಆದರೆ ಅವುಗಳಿಂದ ಅವರ ಆ ಅಭಿಪ್ರಾಯ-ಆಕಾಂಕ್ಷೆಗಳು ಈಡೇರಲಾರವು. ಅವು ವಚನಗಳೇ ಎಂದು ನಿರ್ಧರವಾದಲ್ಲಿ ಸಾಮಾನ್ಯವಾಗಿ ಸಂಸಾರ ಹ್ಯೇಯಸ್ಥಲದಲ್ಲಿ ಉಳಿದ ವಚನಗಳನ್ನು ಹೇಳಿದಂತೆ ಹೇಳಿದವುಗಳು. ಅವನ್ನು ಕವಿ ತನ್ನ ಕಾವ್ಯ ಸನ್ನಿವೇಶಕ್ಕೆ ತಕ್ಕಂತೆ ಎತ್ತಿ ಬಳಸಿದ್ದಾನೆ. ಉದಾಹ

ರಣೆಗಾಗಿ:- ೫೦ ನೇ ಪುಟದ ಗೀತೆಯನ್ನು ಅಕ್ಕಗಳು ಸೆಜ್ಜೆಯ ಮನೆಗೆ ಹೋಗುವಾಗ ಕವಿಯು ಉಪಯೋಗಿಸಿಕೊಂಡಿದ್ದಾನೆ. ಅದನ್ನು ಅಲ್ಲಿಯೇ ಅಂದುದನ್ನು ಕವಿಯು ಕೇಳಿದ್ದನೇ? ಆದುದರಿಂದ ಇದು ಹೀಗೆಯೇ ಎಂದು ಹೇಳಲಿಕ್ಕಾಗದು. ಇದೇ ಸಿದ್ಧಾಂತವೆಂದು ಬರೆದುದು ಶುದ್ಧ ತಪ್ಪು. ರಾಚಯ್ಯ ಕವಿಕೃತ ಮಹಾದೇವಿಯಕ್ಕನ ಸಾಂಗತ್ಯದಲ್ಲಿ:—

"ಕಂಗಳ ಕಳೆದು, ಕರಳುಗಳ ಕಿತ್ತು, ಕಾಮದ ಮೂಗ ಕೊಯ್ದು, ಭಂಗದ ಬಟ್ಟೆಯ ಭವಗೆಲಿದವಳಿಗಂಗವೆಲ್ಲಿಯದು ಹೇಳಾ. ಶೃಂಗಾರವೆಂಬ ಹಂಚಿಗೆ ಹಲ್ಲ ತೆರೆದರೇನುಂಟು? ಲಿಂಗವೇ ಅಂಗವಹ ಪರಿಯನೆನೆಗೆ ಹೇಳಾ ಶ್ರೀಗಿರಿಚನ್ನಮಲ್ಲಿಕಾರ್ಜುನಾ"

"ಕಾಮನ ತಲೆ ಕೊರೆದು, ಕಾಲನ ಕಣ್ಣ ಕಳೆದು, ಸೋಮ ಸೂರ್ಯ(ಜ)ರ ಹುರಿದು, ಹುಡಿಮಾಡಿ ತಿಂಬವಳಿಂಗೆ ನಾಮವ ನಿಡಬಲ್ಲವರಾರು ಹೇಳಿರೆ. ನೀ ಮದವಳಿಗನಾಗಿ ನಾ ಮದವಳಿಗಿತಿಯಾಗಿ ಯಮುನ ಕೂಡುವ ಮರುತನಂತೆ ನೋಡಾ ಶ್ರೀಗಿರಿ ಚನ್ನಮಲ್ಲಿಕಾರ್ಜುನಾ"

ಇವನ್ನು ಓದಿದರೆ ಅಕ್ಕನ ನಿಜವಾದ ವ್ಯಕ್ತಿತ್ವವು ವ್ಯಕ್ತವಾಗುತ್ತದೆ. ಇದರಿಂದ ನಿಮ್ಮ ಅಬದ್ಧ ಸಿದ್ಧಾಂತವು ಉರುಳಿ ಬೀಳುತ್ತದೆ; ಬಿದ್ದು ಹೋಗಿದೆ.

## ಕೊನೆ.

ನನ್ನ ಈ ವರೆಗಿನ ಲೇಖಗಳ ವಿಚಾರದಲ್ಲಿ ಏನಾದರೂ ಹುರುಳಿದೆಯೆ? ಎಂಬುದು ನಿರ್ಮತ್ಸರ-ನಿಷ್ಪಕ್ಷಪಾತ ದೃಷ್ಟಿಯುಳ್ಳ ವಿಮರ್ಶಕರಿಗೆ ಹೊಳೆಯದಿರದು. ನಾನಾದರೂ ವಿಜಯ ಲಕ್ಷ್ಮಿಯನ್ನೇ ಅಪ್ಪಲು ಉತ್ಕಂಠಿತನಾಗಿಲ್ಲ. ಸಂದೇಹವಿಲ್ಲದ ಸಿದ್ಧಾಂತವು ಹೊರ ಹೊರಟರೆ ಅದನ್ನು ಮನ್ನಿಸಿ ಸೋಲುವೆನ್ನನ್ನು ಸಂತೋಷದಿಂದ ಬರಮಾಡಿಕೊಳ್ಳುತ್ತೇನೆ.

ವಾದಿಗಳು ಕ್ಷಮೆಬೇಡುವ ಅನವಶ್ಯವನ್ನು ಮೊದಲು ತೋರಿಸಿ ಅನಂತರ "ಕ್ಷಮೆಯಿರಲಿ" ಎಂದು ವಿನಂತಿ ಬೇಡಿದ್ದಾರೆ. ಇವರ ಈ

ಬೇಡಿಕೆಯು: ಓರ್ವ ಭಿಕ್ಷುಕನು ನಾನು ಭಿಕ್ಷೆ ಬೇಡುವದು ಅನವಶ್ಯ. ಆದರೂ ಬೇಡುವೆನು ನೀಡಿ ಎಂದಂತಾಗಿದೆ. ಅವನು ಹೇಗೆ ಬೇಡಿದರೂ ನೀಡಿ ಕಳಿಸುವದು ಗೃಹಸ್ಥಧರ್ಮ. ಕಾರಣ ನಿಮ್ಮ ವಿನಂತಿಯನ್ನು ಸ್ವೀಕರಿಸಿದ್ದೇವೆ. ನಾನು ಮಾತ್ರ ನಿಮ್ಮ ಹೇಳಿಕೆಯಂತೆ ಅನವಶ್ಯವಾದುದಕ್ಕೆ ಇಲ್ಲಿ ಕೈ ಹಾಕುವದಿಲ್ಲ.

ಮತ್ತೊಂದು ಮಾತು. ವಾದಿಗಳು ಒಂದು ಹೊತ್ತಿಗೆಯನ್ನು ಬರೆಯಲು ತೊಡಗುತ್ತೇನೆ, ತೊಡಗಿದ್ದೇನೆ. ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಆನಂದ! ಪರಮಾನಂದ!! ಆದರೆ ಆ ಹೊತ್ತಿಗೆಯು ನಿರ್ವಿವಾದವಾಗಿ ಹೊರಟರೆ ಮಾತ್ರ ಹರುಷರಾಗಿ-ಆಪ್ತರಾಗಿ ಆಮಂತ್ರಣ ಕೊಡುತ್ತೇವೆ. ಇಲ್ಲವಾದರೆ..........."

ನಿಮ್ಮ ಹೊತ್ತಿಗೆಗೆ ನಾವು ಕೆಲವು ವಿಷಯಗಳನ್ನು ಸೂಚಿಸಬೇಕೆಂದಿದ್ದೆವು. ಆದರೆ ಸ್ಥಲಾಭಾವದಿಂದ ಸೂಚಿಸುವದಾಗಲಿಲ್ಲವೆಂದು ತಿಳಿಸಲು ಕೊಂಚ ವಿಷಾದಿಸುತ್ತೇವೆ.

---

# ಶರಣರ ಸೊಬಗೆಲ್ಲಿದೆ?

(ಲೇಖಕ:— ಶಿವಮೂರ್ತಿ)

---

ವಿಜಾಪುರದಲ್ಲಿಯ ಶಿಪರ್ಡ ಹಾಲಿನಲ್ಲಿ ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು 'ಶರಣರ ಸೊಬಗೆಲ್ಲಿದೆ?' ಎಂಬ ವಿಷಯವಾಗಿ ಒಳ್ಳೇ ಹೃದಯಂಗಮವಾಗಿ ವಿಶದಪಡಿಸಿದರು. ಅದರ ಸಾರವನ್ನೇ ಇದರಡಿಯಲ್ಲಿ ನಾನು ಕೊಡುತ್ತೇನೆ.

ಈ ಜಗತ್ತಿನಲ್ಲಿ ಮನುಷ್ಯನ ಹೋರಾಟವು ಎರಡು ಬಗೆಯದಾಗಿರುತ್ತದೆ. (೧) ಬಾಹ್ಯ ವಿಷಯದ ಹೋರಾಟ. (೨) ಜೀವನ ಹೋರಾಟ. ಬಾಹ್ಯಹೋರಾಟವು ಸಮಾಜ-ರಾಜಕಾರಣ-ವ್ಯವಹಾರೋದ್ಯೋಗಗಳಿಗೆ ಸಂಬಂಧಪಟ್ಟಿರುತ್ತದೆ. ಆದರೆ ಜೀವನಹೋರಾಟವು ಅಂತರಂಗವನ್ನವಲಂಬಿಸಿದೆ. ಶಿವಶರಣರ ವಚನ ಗ್ರಂಥಗಳು ನಮ್ಮ ಅಂತರಂಗದ ಗ್ರಂಥಿಯನ್ನು ಒಡೆದು ನಮಗೆ ನಿಜವಾದ ಜ್ಞಾನವನ್ನುಂಟು ಮಾಡಿಕೊಡುತ್ತಿರುವದರಿಂದ ಅವೇ ನಿಜವಾದ ಗ್ರಂಥಗಳು. ಈ ಅಂತರಂಗದ ಹೋರಾಟವು ಮನುಷ್ಯನ ಜ್ಞಾನದಿಂದ ಪ್ರಾದುರ್ಭವಿಸುತ್ತದೆ. ಆ ಜ್ಞಾನವು ಮನುಷ್ಯನಿಗೆ ಪಂಚೇಂದ್ರಿಯಗಳ ಮುಖಾಂತರವುಂಟಾಗುತ್ತದೆ. ಈ ಪಂಚೇಂದ್ರಿಯಗಳಿಗೆ ನಮ್ಮ ಶರಣರು ಲಿಂಗಗಳೆಂದು ಕಲ್ಪಿಸಿದ್ದಾರೆ. ನಾಸಿಕವು ಆಚಾರಲಿಂಗವೆಂದೂ, ಜಿಹ್ವೆಯು ಗುರುಲಿಂಗವೆಂದೂ, ನೇತ್ರವು ಶಿವಲಿಂಗವೆಂದೂ, ತ್ವಕ್ಕು ಜಂಗಮಲಿಂಗವೆಂದೂ, ಶ್ರೋತ್ರವು ಪ್ರಸಾದಲಿಂಗವೆಂದೂ, ಆತ್ಮವು ಮಹಾಲಿಂಗವೆಂದೂ ಅವರು ಹೇಳಿದ್ದಾರೆ.

ಬಾಹ್ಯ ವಸ್ತುಗಳು ನಮ್ಮ ಜ್ಞಾನೇಂದ್ರಿಯಗಳಿಗೆ ಸ್ಪರ್ಶಮಾಡಿದಾಗ ಅವುಗಳ ಜ್ಞಾನವು ನಮಗಾಗುವದು. ಉದಾಹರಣಾರ್ಥವಾಗಿ ಕಣ್ಣಿನ ಬಿಂದುವಿಗೆ ಹೂವಿನ ಸೌಂದರ್ಯವು ಸ್ಪರ್ಶಮಾಡಿದಾಗ ಅದರ ಸೊಬಗಿನ ಅರಿವು ನಮಗಾಗುವದು. ಅದರಂತೆ ಮನೋಹರವಾದ ಗಾಯನವು ನಮ್ಮ ಕರ್ಣಪಟಲಕ್ಕೆ ತಗಲಿದಾಗ ಆ ಗಾನದ ಸೊಬಗು ನಮಗೆ ತಿಳಿಯುತ್ತದೆ. ಸ್ಪರ್ಶಗುಣವು ಪ್ರಾಮುಖ್ಯವಾಗಿ ತ್ವಚದ್ದಾದರೂ

ಜ್ಞಾನಸಂಪಾದನೆಯ ದಶೆಯಿಂದ ಅದು ಎಲ್ಲ ಇಂದ್ರಿಯಗಳಿಗೂ ಸಮ ನ್ವಯಿಸುತ್ತದೆ. ಆದರೆ ಬಾಹ್ಯವಸ್ತುಗಳು ನಮ್ಮ ಇಂದ್ರಿಯಗಳಿಗೆ ತಗಲಿದಾಗ ಮಾತ್ರ ನಮಗೆ ಜ್ಞಾನವಾಗುತ್ತದೆಂಬದೊಂದೇ ಮಾರ್ಗ ವಲ್ಲ. ಆದರೆ ಇಂದ್ರಿಯ ವ್ಯಾಪಾರಗಳನ್ನು ತಡೆದ ಶಿವಯೋಗಿಯು ತನ್ನ ಅಂತರಂಗದ ಪ್ರಕಾಶಗಳನ್ನು ಬಾಹ್ಯವಸ್ತುಗಳ ಮೇಲೆ ಚಲ್ಲಿ ಅವುಗಳ ಜ್ಞಾನವನ್ನೂ ಪಡೆಯಬಹುದು.

ಇಷ್ಟಲಿಂಗವು ನಮ್ಮ ಕರಸ್ಥಲಕ್ಕೆ ಸ್ಪರ್ಶವಾಡುವದರಿಂದ ನಮಗೆ ಜ್ಞಾನಾನಂದವುಂಟಾಗುತ್ತದೆ. 'ಲಿಂಗ ಮುಟ್ಟಿದ ಕೈ ಮೀಸಲೆ'ಂದು ನಮ್ಮ ಶರಣರು ಹೇಳಿರುವದರಿಂದ ಆ ಕೈಯಿಂದ ಹೊಲ್ಲದ ಸಲ್ಲದ ಕಾರ್ಯ ಗಳಿಂದೂ ಜರಗಬಾರದು. ದುಷ್ಕೃತಿಗಳು ನಮ್ಮ ಕೈಯಿಂದ ಜರಗು ತ್ತಿದ್ದರೆ ನಮ್ಮ ಕೈಯಲ್ಲಿ ಲಿಂಗವಿದ್ದು ಫಲವೇನು? ಅಂತೆಯೇ 'ಸತ್ಕ್ರಿ ಯೆಯೇ ಲಿಂಗ ಸುಜ್ಞಾನವೇ ಜಂಗಮ'ವೆಂದು ನಮ್ಮವರು ಹೇಳಿದ್ದಾರೆ. ಸತ್ಕ್ರಿಯೆ ಮಾಡದೆ ಬರೀ ಲಿಂಗ ಧರಿಸಿದರೆ ಲಿಂಗದ ಕಳೆಯೇ ನಮಗೆ ಗೊತ್ತಿಲ್ಲವೆಂದಂತಾಗುವದು. ಆದ್ದರಿಂದ ಶಿವಶರಣರ ಸೊಬಗು ಜ್ಞಾನ ಪೂರ್ಣವಾದ ಇಷ್ಟಲಿಂಗದ ಪೂಜೆಯಲ್ಲಿದೆ, ಅರ್ಥಾತ್ ಸತ್ಕ್ರಿಯಾಚರಣೆ ಯಲ್ಲಿದೆಯೆಂಬದನ್ನು ಯಾರೂ ಮರೆಯಲಾಗದು. ಕೇವಲ ಅರಿವೇ ಲಿಂಗವೆಂದು ಪ್ರತಿಪಾದಿಸುವ ಗೊಡ್ಡ ವೇದಾಂತವು ನಮ್ಮದಲ್ಲ. ಕೇವಲ ಕುರುಹೇ ಲಿಂಗವೆಂದು ಹೇಳುವ ಮಡ್ಡ ಸಿದ್ಧಾಂತವೂ ನಮ್ಮದಲ್ಲ. ಆದ್ದರಿಂದ ಕುರುಹು ಮಾತ್ರ ಲಿಂಗವಲ್ಲ, ಅರುವಿನ ಸತ್ಕ್ರಿಯೆಯೇ ಲಿಂಗವೆಂಬುದನ್ನು ನಾವು ಮನದಟ್ಟಾಗಿಟ್ಟುಕೊಳ್ಳಬೇಕು. ಇದರಲ್ಲಿಯೇ ನಮ್ಮ ಶಿವಶರಣರ ಸೊಬಗಿದೆ.

ಆದರೆ ಆ ಪರವಸ್ತುವಿನ ಜ್ಞಾನವು ನಮಗೆ ಒಮ್ಮೆಲೇ ಆಗಲಾ ರದು. ನಮ್ಮ ಇಂದ್ರಿಯಗಳು ತಪಸ್ಸಿನಿಂದಲೂ ಮನಸ್ಸು ರಜಸ್ಸಿನಿಂ ದಲೂ ಆವರಿಸಿಬಿಟ್ಟಿವೆ. ಆ ತಮಸ್ಸು ನಾಶವಾಗಬೇಕಾದರೆ ನಮ್ಮಲ್ಲಿ ತೇಜಸ್ಸು ಬೇಕು. ಆ ರಜಸ್ಸು ಹೋಗಬೇಕಾದರೆ ನಮ್ಮಲ್ಲಿ ಓಜಸ್ಸು ಅಳವಡಬೇಕು. ಆ ತೇಜಸ್ಸಿಗೆ ಪ್ರಕಾಶವೆಂದೂ ಓಜಸ್ಸಿಗೆ ವಿಮರ್ಶ ವೆಂದೂ ಹೆಸರುಂಟು. ಈ ಪ್ರಕಾಶ ವಿಮರ್ಶಗಳಿಂದ ನಮಗೆ ಪ್ರಸಾ ದವು ದೊರೆಯುವದು. ಆ ಪ್ರಕಾಶವೇ ಶಿವ. ವಿಮರ್ಶೆಯೇ ಶಕ್ತಿ.

ಈ ಶಿವಶಕ್ತಿಗಳು ಅವಿನಾಭಾವಸಂಬಂಧದಿಂದ ಕೂಡಿಕೊಂಡಿರುತ್ತವೆ. ಇದೇ ಶಕ್ತಿ ವಿಶಿಷ್ಟಾದ್ವೈತವು. ಈ ಶಿವಶಕ್ತಿಗಳ ಸಂಬಂಧದಿಂದಲೇ ಶರಣನುದ್ಭವಿಸುವನು. ಆದ್ದರಿಂದ ಶರಣನೆಂಬ ವಸ್ತುವು ಸಾಮಾನ್ಯ ವಲ್ಲ. ಈ ಶರಣನ ಸೊಬಗು ತೆರಹಿಲ್ಲದ ಇಷ್ಟಲಿಂಗಾನುಸಂಧಾನ ದಲ್ಲಿದೆ. ಈ ಅನುಸಂಧಾನವೇ ಭಕ್ತಿಯು ಅಥವಾ ಸತ್ಕ್ರಿಯಾಚರಣೆಯು. ಶರಣನು ಮುಂದೆ ಭಕ್ತಿಯ ಸಹಾಯದಿಂದಲೇ ಶಿವನಾಗುತ್ತಾನೆ.

ಭಕ್ತಿಯುಕ್ತನಾದ ಶರಣನಿಗೂ ಶಿವನಿಗೂ ಭೇದವಿಲ್ಲ. ಅವರೀ ರ್ವರೂ ಒಂದೇ. ಆದರೆ ಶರಣನು ಸಾಧನ ಮಾಡುವಾಗ ಅವರಲ್ಲಿ ದ್ವೈತವು ವ್ಯಕ್ತವಾಗುತ್ತದೆ. ಯಾಕಂದರೆ "*All realisation is dual in nature*" ಎಂದು ಹೇಳಿದೆ. ಶಿವನೇ ಲಿಂಗ ಶರಣನೇ ಅಂಗ. ಅವರಿಬ್ಬರೂ ತೋರಿಕೆಯಲ್ಲಿ ಭಿನ್ನವಾಗಿದ್ದರೂ ನಿಜವಾಗಿ ಒಂದೇ ಆಗಿದ್ದಾರೆ (*ever distinct and ever united*). ಶಿವನು ಶಕ್ತಿ ಯಿಂದೊಡಗೂಡಿ ಕೆಳಗೆ ಇಳಿದಾಗ ಶರಣನಾಗುತ್ತಾನೆ. ಶರಣನು ಭಕ್ತಿಯಿಂದ ಕೂಡಿಕೊಂಡು ಮೇಲಕ್ಕೇರಿದಾಗ ಶಿವನಾಗುತ್ತಾನೆ. ಈ ಪ್ರಕಾರ ಶಕ್ತಿ ಭಕ್ತಿಗಳ ಬೆಸುಗೆಯಲ್ಲಿ ಆನಂದವಿರುತ್ತದೆ. ಈ ಶಕ್ತಿ ಭಕ್ತಿಗಳು ಯಾವಾಗಲೂ ಕೂಡಿಕೊಂಡಿರುವದಿಲ್ಲ. ಅದರಂತೆ ಯಾವಾ ಗಲೂ ಅಗಲಿಯೂ ಇರುವದಿಲ್ಲ. ಅವುಗಳು ಕೂಡಿ ಅಗಲುವ ಕ್ರಿಯೆಯು ನಿರಂತರವೂ ನಡೆದಿರುತ್ತದೆ. ಕೂಡಿ ಅಗಲುವದರಲ್ಲಿಯೂ ಅಗಲಿ ಕೂಡು ವದರಲ್ಲಿಯೂ ನಿಜವಾದ ಆನಂದವಿರ ತ್ತದೆ. ಎರಡು ಕೈಗಳು ಕೂಡಿದರೆ ಚಪ್ಪಾಳೆಯಾಗುವದು. ಆ ಕೈಗಳು ಯಾವಾಗಲೂ ಕೂಡಿಕೊಂಡಿದ್ದರೆ ಚಪ್ಪಾಳೆ ಹುಟ್ಟದು. ಅದರಂತೆ ಅವು ಯಾವಾಗಲೂ ಅಗಲಿದ್ದರೆ ಚಪ್ಪಾಳೆ ಹುಟ್ಟದು. ಆದರೆ ಅವು ಕೂಡಿ ಅಗಲುವ ಮತ್ತು ಅಗಲಿ ಕೂಡುವ ಕ್ರಿಯೆಯಲ್ಲಿದ್ದರೆ ಚಪ್ಪಾಳೆಗಳು ಹುಟ್ಟುವವು. ಅದರಂತೆ ಶಕ್ತಿ ಭಕ್ತಿಗಳ ತಾಕಲಾಟದಲ್ಲಿ ನಿಜವಾದ ಆನಂದವಿದೆ. ಶಿವಶರಣರ ಸೊಬಗಾದರೂ ಇದರಲ್ಲಿಯೇ ಇದೆ.

ಶಕ್ತಿಯೆಂದರೇನು ? ಅದು ಶಂಕರಾಚಾರ್ಯರ ಮಾಯೆಯಲ್ಲ. ಸಾಂಖ್ಯರ ಪ್ರಕೃತಿಯಲ್ಲ. ತಾಂತ್ರಿಕರ ಕುಂಡಲಿನಿಯಲ್ಲ. ಆದರೆ ಅದೊಂದು ಅಗಾಧವಾದ ಪ್ರೇಮವು. (*mystic love*). ಆ ಪ್ರೇಮವು ಮೊದಲು ಶರಣನ ಶಿರದಿಂದ ಪ್ರಾದುರ್ಭವಿಸಿ ಉರದಲ್ಲಿಳಿದು ಅಲ್ಲಿಂದ

ಕರದಲ್ಲಿ ಅಳವಡುತ್ತದೆ. ಈ ಕರದಿಷ್ಟ ಲಿಂಗದಲ್ಲಿ ಬೆರೆದು ತಲ್ಲೀನ ನಾಗಿ ಹರ್ಷದೊಳೋಲಾಡುವದರಲ್ಲಿಯೇ ಶಿವಶರಣರ ಸೊಬಗಿದೆ. ಈ ಶಿರಸ್ಥಲ, ಉರಸ್ಥಲ, ಕರಸ್ಥಲದ ಪ್ರೇಮವೇ ಲಿಂಗರೂಪಾಗಿ ಭಾವ ಪ್ರಾಣ-ಇಷ್ಟಲಿಂಗಗಳೆಂದು ಹೇಳಿಸಿಕೊಳ್ಳುತ್ತದೆ. ಈ ಪ್ರೇಮರಸವು ನಿವೃತ್ತಿಹೊಂದಿ ಕ್ರಮದಿಂದ ಕರಸ್ಥಲ-ಉರಸ್ಥಲ-ಶಿರಸ್ಥಲಗಳಲ್ಲಿ ಅಳವಟ್ಟಾಗ ಅದು ಚಿಚ್ಛಕ್ತಿಯಾಗಿ ಪರಶಿವನಲ್ಲಿ ಬೆರೆಯುತ್ತದೆ. ಈ ಇಷ್ಟ ಪ್ರಾಣ ಭಾವಲಿಂಗಗಳಲ್ಲಿ ಬಿಂದು ನಾದ ಕಳೆಗಳು ಕೂಡಿಕೊಂಡಿರುತ್ತವೆ. ನೋಟವೇ ಬಿಂದು, ಕೂಟವೇ ನಾದ, ಮಾಟವೇ ಕಳೆ. ಈ ನೋಟ ಕೂಟ-ಮಾಟ ಭಕ್ತಿಗಳಲ್ಲಿಯೇ ಶಿವಶರಣರ ಸೊಬಗಿದೆ. ನೋಟಕ್ಕೆ ರೂಪವೆಂದೂ, ಕೂಟಕ್ಕೆ ನಾಮವೆಂದೂ, ಮಾಟಕ್ಕೆ ಕ್ರಿಯೆಯೆಂದೂ ಬೇರೆ ಹೆಸರುಗಳಿರುವವು. ನಾದದಲ್ಲಿ ಬಿಂದುವಿರುವದೆಂದು ತಿಳಿದು ಕೆಲವರು ಬರೇ ರೂಪದಲ್ಲಿ (ಮೂರ್ತಿಯಲ್ಲಿ) ಭಕ್ತಿಯನ್ನಿರಿಸಿ ಆನಂದಬಡುವದುಂಟು. ಅದೇ ಮೇರೆಗೆ ಕೆಲವರು ಬಿಂದುವಿನಲ್ಲಿ ನಾದವಿರುವದೆಂದು ತಿಳಿದು ನಾಮ(ಮಂತ್ರ)ದಲ್ಲಿ ಶ್ರದ್ಧೆಯನ್ನಿಟ್ಟು ಆನಂದರತರಾಗುವರು ಇನ್ನುಳಿದವರು ಕ್ರಿಯೆಯೇ ಎಲ್ಲಕ್ಕೂ ಶ್ರೇಷ್ಠವೆಂದು ಭಾವಿಸಿ ಸತ್ಕ್ರಿಯಾಚರಣೆಯಲ್ಲಿ ರಮಿಸುವದುಂಟು. ಆದರೆ ಶಿವಶರಣರ ಆನಂದವು ನಾಮರೂಪ ಕ್ರಿಯೆಗಳನ್ನು ಕೂಡಿಕೊಂಡೇ ಇರುವದು. ಈ ಮೂರರಿಂದ ಆನಂದಬಡುವದರಲ್ಲಿಯೇ ಅವರ ಸೊಬಗಿದೆ.

ನೇತ್ರದಿಂದ ಪ್ರಕಾಶ ಕಿರಣಗಳು (*Light waves*) ಹೊರಹೊಮ್ಮುವದರಿಂದ ನಮ್ಮ ಪ್ರೇಮಮಯವಾದ ಈ ಕಿರಣಗಳು ನಮ್ಮ ಇಷ್ಟಲಿಂಗದೊಳಗೆ ಬೆರೆದು ನಮ್ಮ ಉಭಯ ದೃಷ್ಟಿಗಳು ಭ್ರೂಮಧ್ಯದಲ್ಲಿ ಏಕವಾಗಿ ನಮ್ಮ ಪ್ರೇಮವು ಮತ್ತಿಷ್ಟು ಪ್ರಸ್ಫುರಿತವಾಗುತ್ತದೆ. ಅದೇ ಮೇರೆಗೆ ಪ್ರೇಮಪೂರ್ಣವಾದ ಹೃದಯದಿಂದ ಪರಶಿವಸ್ವರೂಪವಾದ "ನಮಃಶಿವಾಯ" ಎಂಬ ಮಂತ್ರವನ್ನು ಪಠಿಸಹತ್ತಿದರೆ ಅದರ ಶ್ರವಣದಿಂದ ನಾದಕಿರಣಗಳು (*Sound waves*) ಹೊರಟು ಶರಣನ ಭಕ್ತಿಯು ಮತ್ತಿಷ್ಟು ಕಾಂತಿಗೊಳ್ಳುತ್ತದೆ. ಇದಕ್ಕೇನೇ ಅರುವಿನ ಬಚ್ಚಬರಿಯ ಬೆಳಕೆಂಬ ಸಂಜ್ಞೆಯುಂಟು.

ಈ ಜ್ಞಾನಜ್ಯೋತಿಯು ಅಥವಾ ನಂದಾದೀಪವು ಮಠಮಾನ್ಯಗಳಲ್ಲಿ ಬೆಳಗಿ ಅಚ್ಚಳಿಯದೆ ಉಳಿಯಲೆಂಬ ಸದುದ್ದೇಶದಿಂದ ನಮ್ಮ ಹಿಂದಿನ

ಶಿವಶರಣರು ತಮ್ಮ ಘಟದೊಳಗಿನ ಜ್ಯೋತಿಯನ್ನು ಶಿಷ್ಯಪರಂಪರಾಗತವಾಗಿ ಮಠದೊಳಗೆ ಕಾಯ್ದುಕೊಂಡು ಬಂಗರು. ಈ ಜ್ಯೋತಿಯಿಂದ ಶರಣನ ಕ್ರಿಯಾಶಕ್ತಿಯು ಪ್ರಕಟವಾಗಿ ಆತನು ಅಘಟಿತ-ಘಟನಾ ಕಾರ್ಯಗಳನ್ನು ಮಾಡಲು ಸಮರ್ಥನಾಗುತ್ತಿದ್ದನು. ಆತನ ಸಹಜ ನಿಷ್ಠಾಪ್ರಭಾವದಿಂದ ಅನೇಕ ಪವಾಡಗಳಾಗುತ್ತಿದ್ದವೇ ವಿನಾ ಆತನು ಗಾರುಡಿಗನಂತೆ ತಾನೇ ಪವಾಡಗಳನ್ನೆಂದಿಗೂ ಮಾಡುತ್ತಿರಲಿಲ್ಲ. ಆದರೆ ಈಗಿನ ಸ್ವಾಮಿಗಳೆಲ್ಲ ಬಹುಶಃ ಕಾಮಿಗಳಾಗಿರುವವರಿಂದ ಆ ನಂದಾದೀಪವು ಆರಿಹೋಗಿದೆ. ಅವರಿಂದ ಜ್ಞಾನಜ್ಯೋತಿಯನ್ನು ಪಡಕೊಳ್ಳಬೇಕೆನ್ನುವವರು ನಿಜವಾಗಿ ಅವರ ವಿಕಾರಗಳನ್ನು ಪಡಕೊಂಡಂತೆಯೇ ಸರಿ. ಯಾಕೆಂದರೆ ಮಸ್ತಕದಿಂದ ಹೊರಟ ಜ್ಞಾನಜ್ಯೋತಿಯು ಹೃದಯಾಂತಃಕರಣದಿಂದಿಳಿದು ಪಾದಾಗ್ರದ್ವಾರದಿಂದ ಹೊರಚಿಮ್ಮುತ್ತಿರುವದು ಶಾಸ್ತ್ರ ಸಿದ್ಧಾಂತದ ಮಾತಾಗಿದೆ. ಆದ್ದರಿಂದ ಅಂಥ ಸ್ವಾಮಿಗಳಿಂದ ದುರ್ಗುಣಗಳನ್ನು ಹಡೆದುಕೊಳ್ಳುವದಕ್ಕಿಂತ ಈಗಿನವರು ಲಿಂಗದಲ್ಲಿ ಸರ್ವವನ್ನು ಪಡಕೊಳ್ಳುವದು ಲೇಸಾಗಿದೆ.

ಈಗಿನ ಅನೇಕ ಸ್ವಾಮಿಗಳಲ್ಲಿ ಜ್ಞಾನಜ್ಯೋತಿಯು ಇಲ್ಲದಿರುವದರಿಂದ ಅಂಥವರನ್ನು ಕಿತ್ತುಹಾಕಿ ಮಠಗಳಲ್ಲಿ ಹೊಸ ಮಾರ್ಪಾಟುಗಳನ್ನು ಮಾಡಬೇಕೇ? ಅಥವಾ ಅಂಥವರನ್ನು ಉಪೇಕ್ಷೆಮಾಡಿ ಬಿಟ್ಟು ಬಿಡಬೇಕೇ? ಎಂಬೆರಡು ಪ್ರಶ್ನೆಗಳು ಈಗ ನಮ್ಮ ಸಮಾಜದ ಮುಂದಿರುವವು. ಇದ್ದದ್ದನ್ನು ತಿದ್ದಿಕೊಳ್ಳುವದೇ ಹೊಸ ಮಾರ್ಪಾಟೆನಿಸುತ್ತದೆ. ಹೊಸದೆಂಬುದೇನೂ ಬೇರೆ ಇರುವದಿಲ್ಲ. ಯಾಕೆಂದರೆ 'ಹಳೆಯದನ್ನು ಬಿಟ್ಟು ಹೊಸದಿಲ್ಲ. ಬಿಳಿಯದನ್ನು ಬಿಟ್ಟು ಬಣ್ಣವಿಲ್ಲ' ಎಂಬ ಗಾದೆಯುಂಟು. ಇನ್ನು ನಾವು ಮೊದಲನೆಯ ಪ್ರಶ್ನೆಯನ್ನು ವಿಚಾರಿಸುವಾಗ ಬಹು ದಿವಸಗಳಿಂದ ಮಠಗಳ ಹಾಗೂ ಸ್ವಾಮಿಗಳ ವಿಷಯವಾಗಿ ನಮ್ಮ ಸಮಾಜದಲ್ಲಿ ನೆಲೆಗೊಂಡ ಲೋಕರೂಢಿಯನ್ನು ನಾವು ಕಿತ್ತೊಗೆಯುವದು ಯುಕ್ತವೇ? ಎಂಬ ಇನ್ನೊಂದು ಪ್ರಶ್ನೆಯು ಹೊರಡುವದು. ಅದಕ್ಕೆ ಉತ್ತರವಿಷ್ಟೇ. ನಮ್ಮ ಸಮಾಜವು ಹಿಂದಿನ ಉಜ್ವಲಸ್ಥಿತಿಯನ್ನು ಪುನಃ ಹೊಂದಬೇಕಾದರೆ ನಾವು ಲೋಕರೂಢಿಯನ್ನು ಕಿತ್ತೊಗೆಯಲೇ ಬೇಕು. ಅದಕ್ಕೆ ಶ್ರೀ ಬಸವಣ್ಣನವರ ಉದಾಹರಣೆಯೊಂದೇ ಸಾಕು. ಅವರು "ತ್ರಿಕಾಲಜ್ಞಃ ತ್ರೈಲೋಕ್ಯಾಕರ್ಷಣ

ಕ್ಷವೋಪಿ ಲೋಕಾಚಾರಂ ಮನಸಾ ನೋಲ್ಲಂಘಯೇತ್" ಎಂಬ ಶಾಸ್ತ್ರ ವಿದ್ದರೂ "ನಾನು ಲೌಕಿಕಾಚಾರವ ಮೀರಿದೆನಯ್ಯಾ ಕೂಡಲಸಂಗಮ ದೇವಾ" ಎಂದು ಹೇಳಿ ತನ್ನ ಹೆತ್ತ ತಾಯಿ ತಂದೆಗಳನ್ನೂ ಹುಟ್ಟಿದ ಕುಲವನ್ನೂ ಕಿತ್ತೊಗೆದು ರಕ್ತಬಾಂಧವರನ್ನು ಅಲ್ಲಗಳೆದು ಭಕ್ತಬಾಂಧ ವ್ಯವನ್ನು ಬೆಳೆಯಿಸಿ ವೆಗ್ಗಳವಾದ ಕೀರ್ತಿಯನ್ನು ಪಡೆಯಲಿಲ್ಲವೇ ? ಅನಿಷ್ಟವಾದ ಲೋಕರೂಢಿಯ ವಿರುದ್ಧನಾಗಿ ಹೋರಾಡುವದರಲ್ಲಿಯೇ ಶರಣರ ಸೊಬಗಿದೆ.

ನಮ್ಮ ವೀರಶೈವ ಸಂಸ್ಕೃತಿಯು ಅಚ್ಚಳಿಯದೆ ಉಳಿಯಬೇಕು. ಮತ್ತು ಅದು ಸುತ್ತಲೆಲ್ಲ ಬೆಳಗಬೇಕು. ಇದೇ ನಮ್ಮ ಮುಖ್ಯ ಧ್ಯೇಯವು. ಆ ಧ್ಯೇಯವನ್ನು ಸಾಧಿಸಬೇಕಾದರೆ ನಾವು ಲೋಕರೂಢಿಗೆ ದಾಸ ರಾಗದೆ ಸ್ವತಂತ್ರಧೀರರಾಗಲೇಬೇಕು. ಈಗಿನ ದಿನಗಳಂತೂ ವಿಚಾರ ಸ್ವಾತಂತ್ರ್ಯ ದಿನಗಳು. ನಾವು ಮೂಕ ಕುರಿಗಳಂತೆ ಅಂಧ ಶ್ರದ್ಧೆ ಯಿಂದ ಬಾಳುವ ದಿನಗಳಲ್ಲ. ಹೀಗಿದ್ದು ನಾವು ಹೊಸ ಸಮಾಜ ರಚ ನೆಗೆ ಏಕೆ ಕೈಹಚ್ಚಬಾರದು ?

ಅಗಸನು ಸಿಟ್ಟಿನಿಂದ ಬಟ್ಟೆಯನ್ನು ಸೆಳೆಯುವಾಗ ಅವನ ಸಿಟ್ಟು ಹೊಲಸಿನ ಮೇಲಲ್ಲದೆ ಬಟ್ಟೆಯ ಮೇಲಿರುವದಿಲ್ಲ. ಆದರಂತೆ ತಂದೆಯು ಮಕ್ಕಳಿಗೆ ಬುದ್ಧಿ ಹೇಳುವಲ್ಲಿ ಅವಗುಣಕ್ಕೆ ಮುನಿಯುವನಲ್ಲದೆ ಪ್ರಾಣಕ್ಕೆ ಮುನಿಯ. ಲಿಂಗವಂತನು ಲಿಂಗವಂತನಿಗೆ ಬುದ್ಧಿಯ ಹೇಳುವಲ್ಲಿ ಅವರ ದುರ್ಗುಣ ದುರಾಚಾರಕ್ಕೆ ಮುನಿಯುವನಲ್ಲದೆ ಲಾಂಛನಕ್ಕೆ ಮುನಿಯ. ಅಂತೆಯೇ ಬಸವಣ್ಣನವರು "ಲಾಂಛನಕ್ಕೆ ಶರಣೆಂಬೆ. ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆನು," ಎಂದು ಅಪ್ಪಣೆ ಕೊಡಿಸಿರುವರು. ಆದರೆ ಈಗ ನಮ್ಮ ಸಮಾಜವು ಗುರು-ವಿರಕ್ತರ ಕಲಹದಲ್ಲಿ ಸಿಕ್ಕು ಬಳಲಿ ಬೆಂಡಾಗಿದೆ. ಅವರ ನಡುವೆ ಭಕ್ತರು ಸೇರಿ ಬಹು ದೊಡ್ಡ ಪೇಚಾಟ ದಲ್ಲಿ ಬಿದ್ದಿದ್ದಾರೆ. ಆದರೆ ಅವರು ಈ ಗೊಂದಲದಲ್ಲಿ ಸೇರಿ ಸರ್ವಸ್ವ ವನ್ನು ನಾಶಮಾಡಿಕೊಳ್ಳದೆ ಆ ಗುರು-ವಿರಕ್ತರ ಬಗ್ಗೆ ಅಸಹಕಾರವನ್ನು ತಾಳುವದು ಸಮಾಜ ಹಿತದ ದೃಷ್ಟಿಯಿಂದ ಯುಕ್ತವಾದುದಾಗಿದೆ. ಅವರ ಭಾವವನ್ನು ಪರಿವರ್ತನೆ ಮಾಡಲು ಅಸಹಕಾರವು ಒಳ್ಳೇ ಮಾಂತ್ರಿಕ ಶಸ್ತ್ರವಾಗಿದೆ. "ಅಸಹಕಾರವು ನೈತಿಕ ಸಾಮರ್ಥ್ಯವುಳ್ಳವ

ನಿಗೆ ಅನಿಷ್ಟದ ವಿರುದ್ಧ ಹೋರಾಡಲು ಬಹು ದೊಡ್ಡ ಆಯುಧವಾಗಿದೆ” ಎಂದು ಮ। ಗಾಂಧಿಯವರು ಹೇಳಿದ್ದಾರೆ. ಅಂಥ ನೈತಿಕ ಧೈರ್ಯವು ಭಕ್ತರಲ್ಲಿ ಅವಶ್ಯವಾಗಿ ಬೇಕು. ಶಿವಶರಣರ ಸೊಬಗು ಇಂಥ ನೈತಿಕ ಧೈರ್ಯದಲ್ಲಿಯೇ ವ್ಯಕ್ತವಾಗುತ್ತದೆ.

ನಮ್ಮ ಸಮಾಜದಲ್ಲಿ ಸಾಮಾನ್ಯ (ಭಕ್ತ) ವಿಶೇಷ (ಗುರು) ನಿರಾಭಾರಿ (ಜಂಗಮ) ಎಂಬ ಭೇದಗಳು ಯಾಂತ್ರಿಕ ತತ್ವದಿಂದ ಹುಟ್ಟಿ ಜಾತಿ ವಿಶಿಷ್ಟವಾಗಿ ರೂಢಿಯಲ್ಲಿ ಬಂದಿರುವವೇನೋ ನಿಜ. ಆದರೆ ಆ ಭೇದಗಳು ಜಾತಿ ಅಥವಾ ವೃತ್ತಿ ಭೇದಗಳಾಗಿರದೆ ಜೀವನ ವಿಕಾಸದ ಹೆಗ್ಗುರುತುಗಳಾಗಿವೆ. ಇದನ್ನರಿತು ನಾವು ಸಮಾಜದಲ್ಲುಂಟಾಗಿರುವ ನಾನಾ ಜಾತಿಗಳನ್ನು ಹೊಡೆದೋಡಿಸಿ ಏಕತ್ವವನ್ನು ಬೆಳೆಯಿಸುವದೇ ನಮ್ಮಗಳ ಮುಖ್ಯ ಕರ್ತವ್ಯವು. ಶರಣರ ಸೊಬಗು ನಿಜವಾಗಿ ವೀರಶೈವರ ಸಕಲ ಕುಲಗಳನ್ನು ಅಂದರೆ ಒಳಪಂಗಡಗಳನ್ನು ಒಂದುಗೂಡಿಸುವದರಲ್ಲಿಯೇ ಇದೆ.



# ಬಸವನ ಪುತ್ರನಾದ ಸಂಗಮೇಶ್ವರನ ಸ್ಥಾನ.

(ಲೇ:- ಗುರುಪಾದ ಸ್ವಾಮಿ ಹಿರೇಮಠ ಶ್ರೀಗುರು ಧರ್ಮಾಶ್ರಮ- ಮಲ್ಲೂರ ತಾ. ಹಾವೇರಿ)

ooOoo

## ಕಾಗಿನೆಲ್ಲಿ.

ಈಗ ಅಂಧ ಶ್ರದ್ಧೆಯ ದಿನಗಳು ಹೋಗಿ ವಿಚಾರವನ್ನವಲಂಬಿಸಿ ಕಾರ್ಯ ಮಾಡುವ ದಿನಗಳು ಪ್ರಾಪ್ತವಾಗಿರುತ್ತವೆ. ಆದ್ದರಿಂದ ಜನರಲ್ಲಿ ತಕ್ಕ ಆಚಾರ ವಿಚಾರ ನಡೆನುಡಿಗಳ ವಿಷಯದಲ್ಲಿ ಆಳವಾಗಿ ವಿಚಾರ ಮಾಡಿ ಸರಿಯಾದವುಗಳನ್ನು ಆಚರಿಸಲೂ ಅವುಗಳನ್ನು ಬೋಧಿಸಲೂ ತತ್ಪರರಾಗಿರುವದು ಅವಶ್ಯವಾಗಿದೆ. ಆದ್ದರಿಂದ ವೀರಶೈವ ಧರ್ಮದ ಉತ್ಪತ್ತಿ ಮತ್ತು ಆದರ ಸಮಾಜೇತಿಹಾಸ ಇವುಗಳನ್ನು ಈ ರೀತಿಯಾಗಿ ಸಂಶೋಧಿಸುವದು ಬಹಳ ಮಹತ್ವದ್ದಿರುತ್ತದೆ. ಇವುಗಳ ನಿಜಸ್ವರೂಪವು ಇನ್ನೂ ಅಪರಿಚಿತವಾಗಿರುತ್ತದೆ. ಈ ದಿಶೆಯಿಂದ ಪ್ರಯತ್ನಗಳನ್ನು ಮಾಡಿದ್ದಾದರೆ ಸಮಾಜದಲ್ಲಿ ಉಪಸ್ಥಿತವಾಗಿರುವ ಅನೇಕ ಬಗೆಯ ಕಲಹಗಳು ದೂರಾಗುವವೆಂದು ನಾವು ಭಾವಿಸಿದ್ದೇವೆ.

ಇಂಥ ಸಂಶೋಧನ ಕಾರ್ಯದಲ್ಲಿ ತೀರ್ಥ ಕ್ಷೇತ್ರಗಳ ಮತ್ತು ಹಿಂದಿನ ಮಹಿಮರ ಸ್ಥಾನಗಳನ್ನು ಸಂಶೋಧಿಸಿ ಅವುಗಳ ನಿಜಾಂಶಗಳನ್ನು ಬೆಳಕಿಗೆ ತಂದಲ್ಲಿ ವೀರಶೈವ ಸಮಾಜೇತಿಹಾಸವನ್ನು ಬರೆಯಲು ಬಹಳ ಅನುಕೂಲವಾಗದೆ ಇರಲಾರದು. ಶಿವಾನುಭವ ಪತ್ರಿಕೆಯಲ್ಲಿ ಇಂಥ ವೃತ್ತಾಂತಗಳು ಆಗಿಂದಾಗ್ಗೆ ಬರುತ್ತಾ ಇವೆ. ಈಗ ನಾನು ಧಾರವಾಡ ಜಿಲ್ಲಾ ಹಿರೇಕೆರೂರ ತಾಲೂಕಿನಲ್ಲಿರುವ ಕಾಗಿನೆಲೆ ಎಂಬ ಕ್ಷೇತ್ರದ ವಿವರಣೆಯನ್ನು ಇಲ್ಲಿ ಕೊಡುತ್ತಾ ಇದ್ದೇನೆ.

ಈ ಗ್ರಾಮವಿದ್ದ ಪ್ರದೇಶವು ಬೈಲುಸೀಮೆ, ಮತ್ತು ಮಲೆನಾಡು ಇವೆರಡಕ್ಕೆ ಸಂಬಂಧಿಸಿದ ಹವೆಬೆಳೆಗಳಿಂದ ಕೂಡಿದ್ದಾಗಿದೆ. ಇಲ್ಲಿ ಒಂದು ದೊಡ್ಡ ಕೆರೆಯು ಇದ್ದು ಆಡಿಕೆ, ತೆಂಗು, ಹಲಸು, ಬಾಳೆಗಳು ಬೆಳೆಯುವ ತೋಟಗಳು ವಿಪುಲವಾಗಿವೆ. ಜನರ ಸಂಖ್ಯೆಯು ಸುಮಾರು ೧೫೦೦ ಇದೆ. ಇದು ಹಾವೇರಿ ಸ್ಟೇಶನದಿಂದ ನೈಋತ್ಯಕ್ಕೆ ೮ ಮೈಲಿನ ಮೇಲೆ

ಇದ್ದು ಸೃಷ್ಟಿ ಸೌಂದರ್ಯದಿಂದ ಕೂಡಿಕೊಂಡು ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರಸಿದ್ಧಿ ಹೊಂದಿದ ಮಹತ್ವದ ಸ್ಥಾನವಾಗಿರುತ್ತದೆ.

## ಐತಿಹಾಸಿಕ ಮಹತ್ವ.

ಬಿಜ್ಜಳನು ಗತಿಸಿದ ನಂತರ ಬೊಮ್ಮಿದೇವನೆಂಬವನು ಈ ಪ್ರಾಂತಾಧಿಪತಿಯಾಗಿ ಇದೇ ಗ್ರಾಮದಲ್ಲಿ ರಾಜ್ಯವಾಳುತ್ತಿದ್ದನೆಂದು ತಿಳಿಯುತ್ತದೆ. ಇವನು ಶೈವಧರ್ಮ ಪಕ್ಷಪಾತಿಯಾಗಿದ್ದನು. ಮುಂದೆ ಕದಂಬ ವಂಶದ ಕಾಮದೇವನು ಹಾನಗಲ್ಲಿನಲ್ಲಿ ಆಳುತ್ತಿರುವಾಗ ಈ ಗ್ರಾಮವು ಬಹು ಮಹತ್ವದ ಸ್ಥಾನವಾಗಿತ್ತು. ಏಕಾಂತ ರಾಮಯ್ಯನಿದ್ದ ಅಬ್ಬಲೂರು ಇಲ್ಲಿಂದ ಸಮೀಪವಾಗಿಯೇ ಇದೆ. ಅವನು ಈ ಪ್ರಾಂತಾಧಿಪತಿಯಿಂದ ದಾನವಾಗಿ ದೊರಕಿಸಿದ ಗೋಗಾಂವಿ ಎಂದರೆ ಈಗಿನ ಭೋಗಾಂವಿಯು ಇಲ್ಲಿಂದ ೬--೭ ಮೈಲಿನ ಮೇಲೆ ಮಾತ್ರವಿದೆ. ಈ ಗ್ರಾಮದಲ್ಲಿಯ ಸೋಮೇಶ್ವರ ದೇವಾಲಯವು ಇದೇ ಕಾಲಕ್ಕೆ ಸ್ಥಾಪಿತವಾಗಿರಬಹುದೆಂದು ತೋರುತ್ತದೆ. ಕಾಗಿನೆಲೆಯ ಹತ್ತರವೇ ಹೋದ ಶತಮಾನದ ಆರಂಭದಲ್ಲಿ ಪ್ರಬಲ ದಾಳಿಗಾರನಾಗಿ ಪ್ರಸಿದ್ಧಿಗೆ ಬಂದ ಧೋಂಡಜಿ ವಾಘ ಮತ್ತು ಇಲ್ಲಿಯ ಪಾಳೇಗಾರನಿಗೂ ಯುದ್ಧವಾಗಿ ಧೋಂಡಜಿ ವಾಘನು ಈ ಪ್ರಾಂತವನ್ನು ಬಿಟ್ಟು ಓಡಿ ಹೋಗಬೇಕಾಯಿತು. ಮುಂದೆ ಈ ಭಾಗವು ಇಂಗ್ಲಿಷರ ಸ್ವಾಧೀನವಾದ ಬಳಿಕ ಕೆಲವು ಕಾಲ ತಾಲೂಕಿನ ಸ್ಥಳವಾಗಿಯೂ, ಕೆಲವು ಕಾಲ ಪೇಠಾ ಸ್ಥಳವಾಗಿಯೂ ಉಪಯೋಗಿಸಲ್ಪಡುತ್ತಿತ್ತು.

## ಪೌರಾಣಿಕ ಮಹತ್ವ.

ಮೇಲೆ ಕಾಣಿಸಿದಂತೆ ಈ ಸ್ಥಳವು ಐತಿಹಾಸಿಕ ಸ್ಥಾನವಾಗಿದ್ದಂತೆಯೇ ಪೌರಾಣಿಕ ಸ್ಥಾನವಾಗಿಯೂ ಇರುತ್ತದೆ. ಇದು ವೈಷ್ಣವರಿಗೂ ಶೈವರಿಗೂ ಪುಣ್ಯಸ್ಥಳವು. ಯಾವ ಧಾರ್ಮಿಕ ಪುರುಷನು ತನ್ನ ರುಚಿಯಾದ ಶಬ್ದಗಳನ್ನು ಮಾರ್ಮಿಕ ರೀತಿಯಿಂದ ಜೋಡಿಸಿ ಇನಿದಾದ ಪದ್ಯಗಳನ್ನು ಹಾಡಿ, ತೋರಿ, ಆಚರಿಸಿ, ಜನತೆಯುಲ್ಲಿ ಧರ್ಮ ಜಾಗ್ರತಿಯನ್ನು ಮಾಡಿದನೋ ಅಂಥ ಮಹಾನುಭಾವ ಕನಕದಾಸನ ಸ್ಥಾನವು ಇದಾಗಿರುತ್ತದೆ. ಹೀಗೆ ಕಾಗಿನೆಲೆಯು ಕರ್ನಾಟಕಸ್ಥರಿಗೆ ಬಲು ಹೆಮ್ಮೆಯ ಗ್ರಾಮವಾಗಿರುತ್ತದೆ.

## ದೇವಾಲಯುಗಳು.

ಇಲ್ಲಿ ಅನೇಕ ಶೈವ ವೈಷ್ಣವ ದೇವಾಲಯುಗಳಿವೆ. ಅವು ಯಾವವೆಂದರೆಃ—(೧) ಕಾಳಹಸ್ತೀಶ್ವರಃ—ಈ ದೇವಾಲಯುವು ಪುರಾತನವಿದ್ದು ಈಗಲೂ ಇದಕ್ಕೆ ಪೂಜಾ ನೈವೇದ್ಯ ಉಂಬಳಿಗಳುಂಟು. (೨) ಸೋಮೇಶ್ವರಃ— ಇದು ಕಾಳಹಸ್ತೀಶ್ವರನ ಎಡಭಾಗದಲ್ಲಿದ್ದು ಇದರ ಪೂಜಾ ವಿನಿಯೋಗದ ಬಗ್ಗೆ ಉಂಬಳಿಗಳುಂಟು. (೩) ಮಳೆಯ ಮಲ್ಲೇಶ್ವರಃ— ಇದು ಕೆರೆಯ ದಂಡೆಯ ಮೇಲೆ ಇದೆ. ಪುರಾತನ ಕಟ್ಟಡವುಳ್ಳದ್ದುಃ— (೪) ಕರ್ಪೂರೇಶ್ವರಃ— ಇದು ಊರಲ್ಲಿ ಹೊಂಡದ ದಂಡೆಯ ಮೇಲೆ ಇದ್ದು ಇದಕ್ಕೆ ಉಂಬಳಿಗಳುಂಟು. (೫) ಕಲ್ಮೇಶ್ವರಃ— ಇದು ಪುರಾತನ ಕಟ್ಟಡವು. ಸ್ವಾಸ್ತಿ ವೃತ್ತಿಗಳು ಇದಕ್ಕೆ ವಿಶೇಷವಾಗಿವೆ. (೬) ಬೈಲು ಮಲ್ಲಿಕಾರ್ಜುನಃ— ಇದು ಮಳೆಯ ಮಲ್ಲೇಶ್ವರ ದೇವರ ಗುಡಿಯ ಎದುರಿನ ಬೈಲಿನಲ್ಲಿದೆ. ವೀರಶೈವರು ಇದಕ್ಕೆ ಬಹು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. (೭) ವೀರಭದ್ರಃ— ಕಾಳಹಸ್ತೀಶ್ವರನ ದೇವಾಲಯುದ ಬಲಭಾಗಕ್ಕೆ ಇದ್ದು ಪುರಾತನ ಕಟ್ಟಡವುಳ್ಳದ್ದು ಇದೆ. (೮) ಸಿದ್ಧಬಸವೇಶ್ವರಃ— ಇದು ಊರಮಧ್ಯದಲ್ಲಿ ಹೊಸದಾಗಿ ನಿರ್ಮಿಸಲ್ಪಟ್ಟಿದೆ.

ಹೀಗೆ ಈ ಸ್ಥಳವು ಅನೇಕ ದೇವಸ್ಥಾನಗಳುಳ್ಳದ್ದಾಗಿ ದಕ್ಷಿಣಕಾಶಿ ಎಂದನಿಸಿಕೊಂಡಿದೆ.

## ಸಂಗಮೇಶ್ವರ.

ನಾನು ಈ ಲೇಖ ಬರೆಯುವದರ ಮುಖ್ಯ ಉದ್ದೇಶವು ಇಲ್ಲಿದ್ದ ಸಂಗಮೇಶ್ವರ ದೇವಸ್ಥಾನದ ಮಹತ್ವವನ್ನು ತಿಳಿಯಪಡಿಸುವದೇ ಇದೆ. ಇದಕ್ಕೆ ಬಸವೇಶ್ವರನ ವಂಶಜರಿಗೆ ಕೆಲವೊಂದು ಸಂಬಂಧವಿದೆಂದು ತೋರುತ್ತದೆ. ಈ ದೇವಸ್ಥಾನದ ಹೆಸರು ಸಂಗಮೇಶ್ವರ ಎಂದಿದ್ದರೂ ಇದು ಒಂದು ಮಸೀದೆಯ ಆಕಾರವನ್ನು ಹೋಲುತ್ತದ! ಗೋಪುರದ ಮೇಲೂ ಛತ್ರ-ಚಾಮರ-ಪಲ್ಲಕ್ಕಿಗಳ ಮೇಲೂ ಮುಸಲ್ಮಾನ ಧರ್ಮ ಚಿನ್ಹವಾದ ಅರ್ಧಚಂಧ್ರಾಕಾರವಿದೆ. ಇದರ ಜಾತ್ರೆಯು ಶಿವರಾತ್ರಿಗೆ ಆಗುತ್ತಿದ್ದರೂ ಮುಸಲ್ಮಾನರ ಉರಸಿನಲ್ಲಿ ಆಗುವಂತೆ ಗಲೀಪಿನ ಮೆರವಣಿಗೆಯೂ ಗಂಧ ಏರಿಸುವದೂ ನಡೆಯುತ್ತವೆ. ಮೆರವಣಿಗೆಯು ಪಲ್ಲಕ್ಕಿಯಲ್ಲಾದರೂ ಕೂಡ, ಆಗ ಮುಸಲ್ಮಾನರಂತೆ ದೀನಬಜಾವಣೆ

ನಡೆಯುತ್ತದೆ ವೀರಶೈವ ಗುರುಗಳ ಆಧಿಪತ್ಯದಲ್ಲಿ ಅಭಿಷೇಕ ನಡೆದರೂ ಮುಸಲ್ಮಾನರು ಸಹ ಸಕ್ಕರೆಯನ್ನು ದೇವಾಲಯಕ್ಕೆ ಸಮರ್ಪಿಸುತ್ತಾರೆ. ಈ ಪ್ರಕಾರ ಶೈವ ವೈಷ್ಣವ ಮುಸಲ್ಮಾನ ಈ ಎಲ್ಲ ಸಮಾಜದವರ ಆದರಕ್ಕೆ ಈ ದೇವಸ್ಥಾನವು ಪಾತ್ರವಾಗಿದೆ.

ಸಂಗಮೇಶ್ವರನಿಗೆ ಸಂಬಂಧಿಸಿ ಒಂದು ಪುರಾಣವು ಇದ್ದು, ಅದು ಬಂಕಾಪುರ ತಾಲೂಕ ಶಿಗ್ಗಲಿಯಲ್ಲಿರುವ ರಾ। ರಾ। ಸಂಗಪ್ಪಾ ಎಂಬುವವರ ಹತ್ತರ ಇದೆ. ಇವರು ಈ ದೇವರ ಬಗ್ಗೆ ಅತ್ಯಂತ ಭಕ್ತಿಭಾವವುಳ್ಳವರಾಗಿ ಶಿವರಾತ್ರಿಯಲ್ಲಿ ಅದನ್ನು ಓದುವದುಂಟು. ಅವರು ಈ ಪುರಾಣದ ಪ್ರತಿಯನ್ನು ಇತರರು ಮಾಡಿಕೊಳ್ಳಲು ಒಪ್ಪುವದಿಲ್ಲ. ಆದ್ದರಿಂದ ಅವರು ಓದಿದ್ದರ ಮೇಲೂ ಇಲ್ಲಿಯ ಜನರು ಹೇಳುವವರ ಮೇಲೂ ಮುಂದಿನ ವಿಷಯಗಳು ಬರೆಯಲ್ಪಟ್ಟಿದೆ.

## ಚರಿತ್ರೆ.

ಈ ಗ್ರಂಥದಲ್ಲಿ ಹೇಳಿರುವದೇನಂದರೆ:— ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳನ ವಧೆಯಾದನಂತರ ಶರಣರೆಲ್ಲರು ಕಲ್ಯಾಣವನ್ನು ಬಿಟ್ಟು ಹೋಗುವ ಪ್ರಸಂಗವು ಒದಗಿತು. ಆಗ ಬಸವಣ್ಣನವರು ಕಪ್ಪಡಿಗೆ ಹೋಗಿ ಐಕ್ಯವಾದರು. ಮತ್ತು ಆತನ ಮಗನಾದ ಸಂಗಮನಾಥನು ನಿಜಾಮರಾಜ್ಯದ ಗಡಿಯಲ್ಲಿರುವ ಕೊಡೇಕಲ್ಲಿಗೆ ಹೋಗಿ ಅಲ್ಲಿ ಬಹು ದಿವಸ ಧರ್ಮೋಪದೇಶ ಮಾಡುತ್ತಾ ಇದ್ದನು. ಹೀಗಿರುತ್ತಿರಲು ವೈರಿಗಳು ಅಲ್ಲಿಗೂ ಬಂದು ನುಗ್ಗಿದರು. ಆಗ ಆತನು ವ್ಯಸನಾಕ್ರಾಂತನಾಗಿರಲು ಬಸವೇಶ್ವರನು ಆತನ ಸ್ವಪ್ನದಲ್ಲಿ ಬಂದು, "ಪುತ್ರನೇ ಸಾಕು, ನೀನು ಇಲ್ಲಿರಬೇಡ, ನೀನು ದಕ್ಷಿಣಾಭಿಮುಖನಾಗಿ ಸಾಗಿ, ರೇಣುಕರು ತಪಸ್ಸನ್ನಾಚರಿಸಿದ ಸ್ಥಾನವಾದ ಹಾನಗಲ್ಲು ಮಹಾಮಂಡಲದಲ್ಲಿರುವ ರೇವಣಸಿದ್ಧಗಿರಿಗೆ ಹೋಗಿ ವಾಸಿಸು" ಎಂದು ಹೇಳಿದನು. ಅದೇ ಪ್ರಕಾರ ಈ ಮಹಿಮನು ಅಲ್ಲಿಂದ ಹೊರಟು ಈ ಗಿರಿಯಲ್ಲಿ ಬಂದು ನಿಂತನು. ಇಲ್ಲಿ ಉಲ್ಲೇಖಿಸಿದ ವೈರಿಗಳು ಮುಸಲ್ಮಾನರಿರಬಹುದೆಂದು ನನಗೆ ತೋರುತ್ತದೆ.

## ರೇವಣಸಿದ್ಧಗಿರಿ.

ಸಂಗಮನಾಥನು ವಾಸಿಸಿದ ಈ ಗಿರಿಯು ಹಾವೇರಿಯಿಂದ ೮ ಮೈಲಿನ ಮೇಲೆ ಕಬ್ಬೂರೆಂಬ ಗ್ರಾಮದ ಹತ್ತಿರ ಇದೆ. ಇದಕ್ಕೆ ರೇವಣಸಿದ್ಧೇ

ಶ್ವರನ ಗುಡ್ಡ, ಸಿದ್ಧೇಶ್ವರನ ಗುಡ್ಡ, ಸಿದ್ಧನ ಗುಡ್ಡ ಎಂಬ ಹೆಸರುಗಳಿವೆ. ಈ ಗುಡ್ಡದಲ್ಲಿ ಅನುಷ್ಠಾನಕ್ಕೆ ಯೋಗ್ಯವಾದ ಅನೇಕ ಗವಿಗಳು ಈಗಲೂ ಇವೆ. ಸಂಗಮೇಶ್ವರನು ಕೊಡೇಕಲ್ಲಿನಿಂದ ಇಲ್ಲಿಗೆ ಬಂದು ಇಲ್ಲಿ ವಾಸ ಮಾಡಿ ಧರ್ಮೋಪದೇಶ ಮೊದಲಾದ ಕಾರ್ಯಗಳನ್ನು ಮಾಡುತ್ತ ಇದ್ದನು. ಆಗ ಜನರು ಅವನ ವಿಷಯವಾಗಿ ಅತ್ಯಂತ ಭಕ್ತಿ-ಭಾವ ವನ್ನು ಹೊಂದಿದವರಾದ್ದರಿಂದ ಅವನ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು.

ಈ ಕಾಗಿನೆಲೆಯಲ್ಲಿ ಆಗ ಒಬ್ಬ ಮುಸಲ್ಮಾನ ಮಾಂಡಲಿಕನು ಆಳು ತ್ತಿದ್ದನಂತೆ. ಆತನ ಪತ್ನಿಯು ಪರಮ ಪತಿವ್ರತೆಯೂ ಸಾಧ್ವಿಯೂ ಆಗಿ ಸಂಗಮನಾಥನಲ್ಲಿ ಅತ್ಯಂತ ಭಕ್ತಿವಿಶ್ವಾಸವನ್ನು ತಾಳಿದವಳಾದ್ದಳು. ಅವಳು ರೇವಣಸಿದ್ಧಗಿರಿಗೆ ಆಗಿಂದಾಗ್ಗೆ ಹೋಗುತ್ತಾ ಇದ್ದಳು. ಆದರೆ ಇದು ಮುಸಲ್ಮಾನ ಮಾಂಡಲಿಕನಿಗೆ ತಿಳಿದ ಕೂಡಲೆ ಸಂಶಯ ಗ್ರಸ್ತ ನಾಗಿ ಆಕೆಯ ಚಂಡನ್ನು ಹಾರಿಸಿದನಂತೆ. ಆದರೆ ಸಂಗಮೇಶ್ವರನು ಪರ ಮಮಹಿಮಾಶಾಲಿಯು ಎಂಬುದರ ಬಗ್ಗೆ ಒಂದು ದೃಷ್ಟಾಂತವಾಗಿ ತನ್ನ ಅವಿವೇಕತನಕ್ಕೆ ಪಶ್ಚಾತ್ತಾಪ ಪಡಹತ್ತಿದನು. ಆಗ ಅವನು ಯೋಗಿಗೆ ಶರಣಾಗತನಾಗಲು ಅವನು ಕಾಗಿನೆಲ್ಲಿಗೆ ಬಂದು ಅವನ ಹೆಂಡತಿಯ ರುಂಡ ಮುಂಡಗಳನ್ನು ಕೂಡಿಸಿ ವರದ ಹಸ್ತವನ್ನು ಇಡಲು ಆಕೆಯು ಎದ್ದು ಕುಳಿತಳು. ಆಗ ಆ ಸತ್ಯಶೀಲೆಯು ಈ ಮಹಿಮನ ಸೇವಾ ಸತ್ಕಾರಕ್ಕಾಗಿ ತನ್ನ ಹೆಸರಿನಿಂದಲೇ ಆತನಿಗೆ ಒಂದು ಗ್ರಾಮವನ್ನು ಕೊಡಬೇಕೆಂತಲೂ ಸ್ವಾಮಿಗಳ ಸೇವೆಯನ್ನು ಮಾಡಲಿಕ್ಕೆ ಮುಕ್ತದ್ವಾರ ವಿರಬೇಕೆಂತಲೂ ಅರಮನೆಯ ಹೊಂದಿಯೇ ಆತನಿಗೋಸ್ಕರ ಮಠವನ್ನು ಕಟ್ಟಿಸಬೇಕೆಂತಲೂ ವಚನವನ್ನು ತೆಗೆದುಕೊಂಡಳು. ಅದರಂತೆ ಅರಸ ನಾದರೂ ನಡೆದನು. ಹೆಡಿಗೊಂಡ ಗ್ರಾಮದಲ್ಲಿ ಕಟ್ಟಿಸಿದ ಪಾದಗಟ್ಟಿಯ ದೇವಸ್ಥಾನವು ಅಚ್ಚಳಿಯದೆ ಈಗಲೂ ಇದೆ. ಅರಸನು ತನ್ನ ಸತಿಯ ಹೇಳಿಕೆಯ ಪ್ರಕಾರ 'ಕಾಸಂಬಿ' ಎಂಬ ಆಕೆಯ ಹೆಸರಿನಿಂದ ಈ ಗ್ರಾಮವು ಈಗಲೂ ಕರೆಯಲ್ಪಡುತ್ತದೆ. ಅರಮನೆಯ ಹೊಂದಿಗೆ ಕೋಟೆಯ ಮಗ್ಗಲು ದೇವಸ್ಥಾನವೂ ಇದೆ.

ಹೀಗೆ ಹೇಳಲ್ಪಟ್ಟ ಸಂಗಮನಾಥನು ಯಾರೆಂಬುವದನ್ನು ಗೊತ್ತು ಹಚ್ಚುವದು ಮಹತ್ವದ ಸಂಗತಿಯಾಗಿದೆ. ಪುರಾಣದಲ್ಲಿ ಹೇಳಿದ ಮೇರೆಗೆ

# ಸ್ಫುಟ ವಿಷಯಗಳು.

## ಶಿವಾನುಭವ ಗ್ರಂಥಮಾಲೆಯ ಹೊಸ ಯೋಜನೆ:—

ಈ ಸಂಚಿಕೆಯಿಂದ ಶಿವಾನುಭವ ಪತ್ರಿಕೆಗೆ ೧೨ ವರ್ಷಗಳು ತುಂಬಿ ಅದಕ್ಕೆ ೧೩ ನೇ ವರ್ಷವು ಪ್ರಾರಂಭವಾಗುತ್ತದೆ. ಈ ದೀರ್ಘ ಅವಧಿಯಲ್ಲಿ ವೀರಶೈವ ಸಂಸ್ಕೃತಿಗೆ ಸಂಬಂಧಪಟ್ಟ ಅನೇಕ ವಿಷಯಗಳು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಲ್ಪಡುತ್ತ ಬಂದಿರುತ್ತವೆ. ಸಂಸ್ಕೃತಿಯ ಪರಿಣಾಮಗಳು ಸಮಾಜದ ಇತಿಹಾಸ, ಧರ್ಮ, ಆದರ ರೀತಿನಡತೆಗಳು, ಮತ್ತು ವಾಙ್ಮಯ ಇವುಗಳ ಮೇಲೆ ಪ್ರತಿಬಿಂಬಿಸುತ್ತವೆ. ವೀರಶೈವ ಸಮಾಜಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆ ಮಾಡಿದ ವಿವೇಚನೆಗಳು ಕಾಲಕಾಲಕ್ಕೆ ಸವಿಸ್ತಾರವಾಗಿ ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತ ಬಂದಿವೆ. ಇದರಲ್ಲಿ ನಾವು ಆದಷ್ಟುಮಟ್ಟಿಗೆ ಕೇವಲ ಅದ್ಭುತಗಳಿಗೆ ಮಹತ್ವಕೊಡದೆ ವಿಚಾರ ಮತ್ತು ಇತಿಹಾಸ ಇವುಗಳಿಗೆ ಯಾವದು ಒಪ್ಪಿಗೆಯಾಗಬಹುದೋ ಅದಕ್ಕೆಯೇ ಮಹತ್ವಕೊಡುತ್ತ ಬಂದಿರುತ್ತೇವೆ. ಈ ಸಂಗತಿಯು ನಮ್ಮ ವಾಚಕರ ದೃಷ್ಟಿಗೆ ಬಂದಿರಬಹುದು. ಆದರೆ ಈ ತರದ ಸಂಶೋಧನ ಕಾರ್ಯವು ಬಹು ಘನತರವಾದದ್ದಿದ್ದು ಅದಕ್ಕೆ ಸಮಾಜದಲ್ಲಿಯ ವಿದ್ಯಾವಂತರ ಬೆಂಬಲವು ಬಹು ಅವಶ್ಯಕವಾಗಿದೆ. ಈ ಬೆಂಬಲವನ್ನು ನಮ್ಮ ವೀರಶೈವ ಸಮಾಜದಲ್ಲಿಯ ಸಂಶೋಧಕರು ನಮಗೆ ಯಾವಾಗಲೂ ಕೊಡುತ್ತ ಬಂದಿದ್ದಾರೆ. ಇದಕ್ಕೋಸ್ಕರ ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಇನ್ನುಮೇಲೆ ನಾವು ಮುಂದಿನ ವರ್ಷದಿಂದ ಹೊಸದೊಂದು ಉಪಕ್ರಮವನ್ನು ಪ್ರಾರಂಭಿಸಬೇಕೆಂದು ಯೋಚಿಸಿದ್ದೇವೆ. ಶಿವಾನುಭವದಲ್ಲಿ ಈ ವರೆಗೆ ಪುರಾತನ ವಾಙ್ಮಯ ಸಂಶೋಧನ, ಧಾರ್ಮಿಕ ತತ್ವಗಳ ವಿವೇಚನೆ, ಐತಿಹಾಸಿಕ ಚರ್ಚೆ, ಇಂಥ ವಿಷಯಗಳಿಗೆ ಮಹತ್ವಕೊಡುತ್ತ ಬಂದದ್ದರಿಂದ ಜನಸಾಮಾನ್ಯಕ್ಕೆ ಈ ಲೇಖಗಳು ಸ್ವಾಭಾವಿಕವಾಗಿ ರುಚಿಸುತ್ತ ಇರಲಿಲ್ಲ. ಇದರಿಂದ ನಮ್ಮ ಪತ್ರಿಕೆಗೆ ಸಾಕಷ್ಟು ಚಂದಾದಾರರು ಸಿಕ್ಕದೆ ಹೋದರು. ಆದರೂ ನಾವು ನಮ್ಮ ಧ್ಯೇಯಕ್ಕೆ ಅನುಸರಿಸಿ ಈ ನಮ್ಮ ಕಾರ್ಯವನ್ನು ಈ ವರೆಗೂ ನಡೆಯಿಸುತ್ತ

ಬಂದೆವು. ಆದರೆ ಇನ್ನು ಮುಂದೆ ಜನಸಾಮಾನ್ಯಕ್ಕೆ ತಿಳಿಯುವಂತೆ ಗ್ರಂಥಗಳನ್ನು ಬೇಗನೆ ಹೊರಡಿಸಬೇಕೆಂದು ನಿಶ್ಚಯಿಸಿದ್ದೇವೆ. ಶಿವಾನುಭವ ಪತ್ರಿಕೆಯ ಮೂಲಕ ಹೋದ ೧೨ ವರ್ಷಗಳ ವರೆಗೆ ನಡಿಸಿದ ಸಂಶೋಧನಗಳನ್ನು ನಮ್ಮ ಮುಖ್ಯ ಆಧಾರವಾಗಿಟ್ಟುಕೊಂಡು ವೀರಶೈವ ಧರ್ಮ, ಸಮಾಜ, ಇತಿಹಾಸ, ಇವುಗಳ ಸಾದ್ಯಂತ ವಿವರಣೆಗಳನ್ನು ಬಹು ಸುಲಭಭಾಷೆಯಲ್ಲಿ ಪ್ರಕಟಪಡಿಸುವ ಕಾರ್ಯವನ್ನು ಕೈಕೊಳ್ಳಲಿಚ್ಛಿಸಿದ್ದೇವೆ. ಇದರಿಂದ ವೀರಶೈವ ಸಮಾಜವು ಹಿಂದೂ ಸಮಾಜಗಳಲ್ಲಿ ಯಾವ ಕಾರ್ಯವನ್ನು ಮಾಡಿದೆ, ಅದರ ಸ್ಥಾನವು ಹಿಂದೂ ಧರ್ಮದಲ್ಲಿ ಯಾವದು ಇದೆ, ಎಂಬಿವೇ ಮೊದಲಾದ ವಿಷಯಗಳು ಎಲ್ಲರಿಗೂ ತಿಳಿಯಲಿಕ್ಕೆ ಶಕ್ಯವಾಗುತ್ತದೆ. ಇದಕ್ಕೋಸ್ಕರ ವೀರಶೈವ ಸಮಾಜದ ಸಹಾಯವನ್ನು ನಾವು ಅಪೇಕ್ಷಿಸುತ್ತೇವೆ. ಇದರ ಸಾದ್ಯಂತ ಯೋಜನೆಯನ್ನು ನಾವು ಹಿಂದಿಸಿಂದ ಪ್ರಕಟಿಸುತ್ತೇವೆ. ಆದರೆ ಈ ಶಿವಾನುಭವ ಪತ್ರಿಕೆಯು ಎಂದಿನಂತೆಯೇ ವೀರಶೈವ ಸಂಸ್ಕೃತಿಯ ಸಂಶೋಧನಕ್ಕಾಗಿಯೇ ಮೀಸಲಾಗಿ ಇಡಲ್ಪಡುವದು.

**ವಚನಶಾಸ್ತ್ರಸಾರ ಭಾಗ ೩**:— ವಚನಶಾಸ್ತ್ರಸಾರದ ೨ನೇ ಭಾಗವು ಈಗ ಪ್ರಸಿದ್ಧವಾಗಿದ್ದು ಶಿವಾನುಭವದ ವಾಚಕರಿಗೆ ಗೊತ್ತೇ ಇದೆ. ಇದರಲ್ಲಿ ಷಟ್‌ಸ್ಥಲಶಾಸ್ತ್ರದ ತತ್ವಗಳು ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿರುತ್ತವೆ. ಈ ಗ್ರಂಥವು ಮುಂಬಯಿ ವಿಶ್ವವಿದ್ಯಾಲಯದ ಉಚ್ಚ ಪರೀಕ್ಷೆಗಳಲ್ಲಿ ಪಠ್ಯಪುಸ್ತಕವಾಗಿ ನಿಯಮಿಸಲ್ಪಟ್ಟಿದೆಂದು ನಾವು ಕೇಳುತ್ತೇವೆ. ಇದಕ್ಕೋಸ್ಕರ ನಾವು ವಿದ್ಯಾಲಯದ ಋಣಿಯಾಗಿದ್ದೇವೆ. ಅನೇಕರು ವೀರಶೈವ ಧರ್ಮ ಗ್ರಂಥಗಳಲ್ಲಿ ಉಚ್ಚ ತಾತ್ವಿಕ ವಿವೇಚನೆಗಳಿಲ್ಲೆಂದು ತಿಳಿದಿರುತ್ತಾರೆ. ಆದರೆ ಈ ತಿಳುವಳಿಕೆಯು ಎಷ್ಟು ತಪ್ಪಾದದ್ದಿರುತ್ತದೆಂಬದು ಈ ಎರಡನೇ ಭಾಗದಿಂದ ತಿಳಿಯುವಂತೆ ಇದೆ.

ಇನ್ನು ಮುಂದೆ ವಚನಶಾಸ್ತ್ರ ಸಾರದ ೩ ನೇ ಭಾಗವನ್ನು ಪ್ರಕಟ ಮಾಡುವ ಉದ್ದೇಶದಿಂದ ಅದರ ಹಸ್ತಲಿಖಿತ ಪ್ರತಿಯನ್ನು ನಾವು ಈಗ ಸಿದ್ಧಮಾಡಿದ್ದೇವೆ. ಇದರಲ್ಲಿ ವೀರಶೈವರ ಆಚಾರಗಳು ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿರುತ್ತವೆ. ಈ ಆಚಾರಗಳನ್ನು ಕೂಲಂಕಷವಾಗಿ ತಿಳಿಯಪಡಿಸತಕ್ಕ ವಚನಗ್ರಂಥವು ಇನ್ನೂ ಪ್ರಕಟವಾಗಿರುವದಿಲ್ಲೆಂದು ಹೇಳ

ಬಹುದು. ಈ ೩ನೇ ಭಾಗದಲ್ಲಿ ಇವುಗಳ ಮೂಲ ತತ್ವಗಳು ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿರುವವಲ್ಲದೆ ಅವುಗಳಿಂದ ಲಿಂಗಾಂಗ ಸಾಮರಸ್ಯವು ಹೇಗೆ ಪ್ರಾಪ್ತವಾಗುತ್ತದೆಂಬದೂ ವಿವೇಚಿಸಲ್ಪಟ್ಟಿರುತ್ತದೆ. ಈ ಗ್ರಂಥವು ಪ್ರಕಟವಾದರೆ ನಾವು ಮೊದಲಿಗೆ ಸಂಕಲ್ಪ ಮಾಡಿದ ಪ್ರಕಾರ ಮೂರು ಮಹತ್ವದ ಗ್ರಂಥಗಳು ಪ್ರಕಾಶಕ್ಕೆ ಬಂದಂತಾಗುವದು.

ಈ ಗ್ರಂಥವು ೨ ನೇ ಭಾಗದಷ್ಟೇ ದೊಡ್ಡದಾಗುತ್ತದೆ. ಆದ್ದರಿಂದ ಅದರ ಅಚ್ಚಿನ ಖರ್ಚಾದರೂ ಬಹು ಭಾರವಾದದ್ದಾಗಿದೆ. ಶಿವಾನುಭವ ಪತ್ರಿಕೆಯ ಈಗಿನ ಪರಿಸ್ಥಿತಿಯಲ್ಲಿ ಇಂಥ ದೊಡ್ಡ ಭಾರವನ್ನು ನಾವು ವಹಿಸುವದು ಬಹು ಕಠಿಣವಾಗಿರುತ್ತದೆ. ಈ ಸ್ಥಿತಿಯಲ್ಲಿ ನಾವು ಕೆಳಗೆ ಕಾಣಿಸಿದ ಯೋಜನೆಯನ್ನು ಮಾಡಿದ್ದು ಆ ರೀತಿಯಾಗಿ ವೀರಶೈವ ಸಮಾಜದವರು ನಮಗೆ ಸಹಾಯ ಮಾಡಿದಲ್ಲಿ ಈ ೩ನೇ ಭಾಗವನ್ನು ಅಚ್ಚುಹಾಕುವ ಕಾರ್ಯವನ್ನು ಕೈಕೊಳ್ಳಲಿಕ್ಕೆ ಸಾಧ್ಯವಾಗುವದು. ಅದು ಯಾವದೆಂದರೆ ಯಾರು ೨ ನೇ ಭಾಗವನ್ನು ಅದರ ಬೆಲೆಯನ್ನು ಕೊಟ್ಟು ೧೫ ನೇ ದಿಸೆಂಬರ ೧೯೩೮ನೇ ತಾರೀಖಿನ ಒಳಗಾಗಿ ತೆಗೆದುಕೊಳ್ಳುತ್ತಾರೋ ಅವರಿಗೆ ಈ ವಚನಶಾಸ್ತ್ರಸಾರ ೩ ನೇ ಭಾಗವು ಉಚಿತವಾಗಿ ಕೊಡಲ್ಪಡುವದು. ಇದರ ಲಾಭವನ್ನು ವಾಚಕರು ಅವಶ್ಯವಾಗಿ ಹೊಂದಬೇಕೆಂದು ನಮ್ಮ ವಿನಂತಿ ಇದೆ.

---

## ವಿನಂತಿ.

ಬೆಳಗಾವ ಲಿಂಗರಾಜ ಕಾಲೇಜ ಲಾಯಬ್ರರಿಗೋಸ್ಕರ ಕೆಳಗೆ ಕಾಣಿಸಿದ ಶಿವಾನುಭವ ಪತ್ರಿಕೆಯ ಸಂಚಿಕೆಗಳು ಬೇಕಾಗಿದ್ದು ಅವು ಯಾರಲ್ಲಾದರೂ ಇದ್ದರೆ ಅವುಗಳನ್ನು ನಮ್ಮಕಡೆಗೆ ಕಳಿಸಿಕೊಡಬೇಕೆಂದು ನಮ್ಮ ವಿನಂತಿ ಇದೆ. ನಾವು ಅವುಗಳಿಗೆ ಯೋಗ್ಯ ಬೆಲೆಯನ್ನು ಕೊಟ್ಟು ತೆಗೆದುಕೊಳ್ಳುವೆವು.

### ಬೇಕಾದ ಸಂಚಿಕೆಗಳ ವಿವರ.

| | | |
|---|---|---|
| ಸಂಪುಟ | ೧ | ೩ನೇ ಸಂಚಿಕೆ ಬಿಟ್ಟು ಎಲ್ಲ ಸಂಚಿಕೆಗಳು. |
| ,, | ೨ | ೬ನೇ ಸಂಚಿಕೆ ಬಿಟ್ಟು ಎಲ್ಲ ಸಂಚಿಕೆಗಳು. |

,, ೩ ಎಲ್ಲ ಸಂಚಿಕೆಗಳು.

೪ ಸಂಚಿಕೆಗಳು ೧, ೪, ೮,

,, ೫ ಸಂಚಿಕೆ ೫, ೭, ಮತ್ತು ಅದರ ಮುಂದಿನ ಸಂಚಿಕೆಗಳು.

,, ೬ ಸಂಚಿಕೆ ೨, ೭, ಮತ್ತು ಮುಂದಿನ ಸಂಚಿಕೆಗಳು.

,, ೭ ಸಂಚಿಕೆ ೧, ೪, ಮತ್ತು ಮುಂದಿನ ಸಂಚಿಕೆಗಳು.

,, ೮ ಸಂಚಿಕೆ ೧, ೨, ೩, ೭ ಮತ್ತು ಮುಂದಿನ ಸಂಚಿಕೆಗಳು.

,, ೧೦ ಸಂಚಿಕೆ ೩, ೪, ೫, ೭ ಮತ್ತು ಮುಂದಿನ ಸಂಚಿಕೆಗಳು.

,, ೧೧ ಸಂಚಿಕೆ ೫, ೮, ೧೦ ಮತ್ತು ಮುಂದಿನ ಸಂಚಿಕೆಗಳು.

,, ೧೨ ಸಂಚಿಕೆ ೧, ೨, ೩, ೪, ೬, ೭, ೮, ೧೦, ಮತ್ತು ಮುಂದಿನ ಸಂಚಿಕೆಗಳು.

**S. C. Nandimath**

ಪ್ರಿನ್ಸಿಪಾಲ

ಲಿಂಗರಾಜಕಾಲೇಜ ಬೆಳಗಾವ.

# ಸಂಗೀತದಲ್ಲಿ ಶಿವಶರಣರ ವಚನಗಳು.

ಲೇ:—ಶ್ರೀ. ಶರಪ್ಪ ವೀರಪ್ಪ ಪಾಟೀಲ ಸಂಗೀತ ಶಿಕ್ಷಕರು
ಶ್ರೀಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ

೧

ರಾಗಃ— ಭೀಮಪಲಾಸ ತಾಲಃ— ಏಕತಾಲ

[ತಿಮಿರ ಪಟಲ... ಎಂಬಂತೆ]

ಗ್ಹಿರಿಯಲ್ಲದೆ ಹುಲ್ಲು ಮೊರಡಿ। ಯುಲ್ಲಾಡುವುದೇ ನವಿಲು।
ಕೊಳನಲ್ಲದೆ। ಕಿರಿವಳ್ಳಕ್ಕೆಳಸುವುದೆ ಹಂಸೆ ॥ಪ॥

ಮಾಮರ ತಳಿತಲ್ಲದೆ। ಸ್ವರಗೈವುದೆ ಕೋಗಿಲೆ।
ಪರಿಮಳವಿಲ್ಲದ ಪುಷ್ಪ। ಕ್ಕೆಳಸುವುದೆ ಭ್ರಮರ ॥೧॥

ಎನ್ನಯ ದೇವ ಚೆನ್ನ। ಮಲ್ಲಿಕಾರ್ಜುನನಲ್ಲದೆ।
ಅನ್ಯಕ್ಕೆಳಸುವುದೆ ಎನ್ನ। ಮನ ಕೇಳಿರೆ ಕೆಳದಿಯರಾ ॥೨॥

[ಅಕ್ಕಮಹಾದೇವಿ]

೨

ರಾಗಃ— ದುರ್ಗಾ ತಾಲಃ— ತ್ರಿತಾಲ

[ಪ್ರೀತೀ ಮೋ ಮನ ... ಎಂಬಂತೆ]

ಬೆಟ್ಟದ ಮೇಲೊಂದು ಮನೆಯ ಮಾಡಿ।
ಮೃಗಂಗಳಿಗಂಜಿ ದಡೆ ಎಂತಯ್ಯ ॥ಪಲ್ಲ॥

ಸಮುದ್ರದ ತಡೆಯಲ್ಲಿ। ಮನೆಯ ಮಾಡಿ।
ನೊರೆ ತೊರೆಗಳಿಗಂಜಿ। ದಡೆ ಎಂತಯ್ಯ ॥೧॥

ಸಂತೆಯೊಳಗೊಂದು। ಮನೆಯ ಮಾಡಿ।
ಶಬ್ದಕ್ಕೆ ನಾಚಿದಡೆ। ಎಂತಯ್ಯ ॥೨॥

ಚೆನ್ನಮಲ್ಲಿಕಾರ್ಜುನ। ದೇವ ಕೇಳಯ್ಯ।
ಲೋಕದೊಳಗೆ ಹು। ಟ್ಟಿದರ್ ಬಳಿಕ ॥೩॥

ಸ್ತುತಿ ನಿಂದೆಗಳು। ಬಂದಡೆ ಮನದಲ್ಲಿ।
ಕೋಪವ ತಾಳದೆ। ಸಮಾಧಾನಿಯಾಗಿರು ॥೪॥

[ಅಕ್ಕಮಹಾದೇವಿ]

೩

ರಾಗಃ— ಮುಲ್ತಾನಿ ತಾಲಃ— ಏಕ ತಾಲ

[ಗೋವಿಂದಸೋ... ಎಂಬಂತೆ]

ಬಂಜೆಯು। ಬೇನೆಯುನರಿಯುಳು।
ಬಲತಾಯಿ ಮುದ್ದ ಬಲ್ಲಳೇ ॥ಪಲ್ಲ॥

ನೊಂದ ನೋವ ನೋಯದವರು।
ಎತ್ತ ಬಲ್ಲರೌ ತಾಯೇ ॥೧॥

ಚೆನ್ನಮಲ್ಲಿಕಾರ್ಜುನ ನೀ।
ನಿರಿದಲಗೊಡಲಲ್ಲಿ ಮುರಿದು ॥೨॥

ಹೊರಳುವಳ ನೀವೆತ್ತ।
ಬಲ್ಲಿರೆ ಎಲೆ ತಾಯಿಗಳಿರಾ ॥೩॥

[ಅಕ್ಕಮಹಾದೇವಿ]

೪

ರಾಗಃ—ದೇಸಕರ ತಾಲಃ—ತ್ರಿತಾಲ

[ಸದಾಕಲಹಾವಿನಾ......ಎಂಬಂತೆ]

ಚಂದನವ ಕಡಿದು ಕೊರೆದು। ತೇದೊಡೆ।
ನೊಂದೆನೆಂದು ಕಂಪ ಬಿಟ್ಟಿತ್ತೆ ॥ಪಲ್ಲ॥

ತಂದು ಸುವರ್ಣವ ಕಡಿದೊರೆದೊಡೆ ಬೆಂದು।
ಕಳಂಕ ಹಿಡಿದಿತ್ತೆ ಸಂದು ಸಂದು ಕಡಿದ।
ಕಬ್ಬನು ಗಾಣದಲಿಕ್ಕಿ ಬೆಂದು ॥೧॥

ಪಾಕಾಗುಳ್ಳ ಸಕ್ಕರೆಯಾಗಿ ನೊಂದೆ।
ನೆಂದು ಸವಿಯ ಬಿಟ್ಟಿತ್ತೆ ನಾ ಹಿಂದೆ।
ಮಾಡಿದ ಹೀನಂಗಳೆಲ್ಲವ ತಂದು ॥೨॥

ಮುಂದೆ ಇಳುಹಲು ನಿಮಗೆ ಹಾನಿಯು ।
ಎನ್ನಯ ತಂದೆ ಚೆನ್ನಮಲ್ಲಿಕಾರ್ಜುನ ।
ದೇವಯ್ಯ ಕೊಂದೊಡೆ ಶರಣೆಂಬುದ ಮಾಣೆ ॥೩॥

[ಅಕ್ಕಮಹಾದೇವಿ]

೫

ರಾಗಃ— ಯಮುನ ತಾಲಃ— ತ್ರಿತಾಲ

[ಲಾಗೆ ಹೃದಯಿ......ಎಂಬಂತೆ]

ವನವೆಲ್ಲ ನೀವೆ ವನದೊಳಗಣ । ದೇವ ॥
ತರುವೆಲ್ಲ ನೀವೆ । ತರುವಿನೊಳಗಾಡುವ ॥ಪಲ್ಲ॥

ಖಗ ಮೃಗವೆಲ್ಲ ನೀವೆ । ಚೆನ್ನಮಲ್ಲಿಕಾರ್ಜುನ ।
ಸರ್ವಭರಿತನಾಗಿ । ಎನಗೆ ಮುಖದೋರ ॥೧॥

[ಅಕ್ಕಮಹಾದೇವಿ]

೬

ರಾಗಃ— ಭೂಪ ತಾಲಃ— ತ್ರಿತಾಲ

[ತುಮಹಮಸಂಗಜಿನ...ಎಂಬಂತೆ.]

ವೃಕ್ಷಾಶ್ರಿತನಾಗಿರ್ದೊಡೇನು ।
ಭಿಕ್ಷಾಹಾರಿಯಾಗಿರ್ದೊಡೇನು ॥ಪಲ್ಲ॥

ಉಟ್ಟುದ ತೊರೆದು ಬತ್ತಲೆಯಾಗಿರ್ದೊಡೇನು ।
ಕಾಲವಿರಹಿತನಾದೊಡೇನು ।
ಕರ್ಮವಿರಹಿತನಾದೊಡೇನು ॥೧॥

ನಮ್ಮ ಕೂಡಲಚೆನ್ನಸಂಗಯ್ಯನನು ।
ಭಾವಪನರಿಯದವರು ಏಸು ಕಾಲ ।
ಇರ್ದೊಡೆಯು ವೃಥಾ ವೃಥಾ ಕಾಣಿರೊ ॥೧॥

[ಚನ್ನಬಸವಣ್ಣ]

೭

ರಾಗಃ— ಪಟದೀಪ ತಾಲಃ— ತ್ರಿತಾಲ

[ಕುಸುಮಾಂಜಲಿ ವಾಹಿಲೀ..... ಎಂಬಂತೆ]

ದಯವಿಲ್ಲದ ಧರ್ಮವು । ಆವುದಯ್ಯ ।
ದಯವೇ ಬೇಕು ಸಕಲ । ಪ್ರಾಣಿಗಳೆಲ್ಲರಲ್ಲಿ ॥ಪಲ್ಲ॥

ದಯವೇ ಧರ್ಮದ। ಮೂಲವಯ್ಯ।
ಕೂಡಲಸಂಗಯ್ಯ। ನಂತಲ್ಲದೊಲ್ಲನಯ್ಯ ॥೧॥

[ಬಸವಣ್ಣ]

೮

ರಾಗಃ— ತಿಲಕಕಾಮೋದ ತಾಲಃ— ಝಂಪತಾಲ

[ತೀರಥಕೋಸಬಕರೀ......ಎಂಬಂತೆ]

ಹಗೆಯಲ್ಲಿ ಬಿದ್ದವರ। ಮೇಲೆ ಒರಳ ನೂಂಕುವರೆ।
ಕೊಳದ ಮೇಲೆ ಸಂಕೊಲೆಯ। ನಿಕ್ಕುವರೆ ಬೆಂದ ಹುಣ್ಣ ॥ಪಲ್ಲ॥
ಕಂಬಿಯಲ್ಲಿ ಕೀಸುವರೆ। ಕೂಡಲಸಂಗಯ್ಯ ಕಾಡುವ।
ಕಾಟ ಸಿರಿಯಾಳಂಗಲ್ಲದೆ। ಸೈರಿಸಬಹುದೆ ॥೧॥

[ಬಸವಣ್ಣ]

೯

ರಾಗಃ—ಬಿಹಾಗ ತಾಲಃ—ತ್ರಿತಾಲ

[ಸತ್ಯ ಸತ್ಯ ನಚ......ಎಂಬಂತೆ]

ಕಾಯಕದಲ್ಲಿ ನಿರುತ। ನಾದಡೆ।
ಗುರುದರ್ಶನವಾ। ದಡೂ ಮರೆಯಬೇಕು ॥ಪಲ್ಲ॥
ಲಿಂಗಪೂಜೆಯಾದಡೂ। ಮರೆಯಬೇಕು।
ಜಂಗಮ ಮುಂದಿದ್ದಡೂ। ಹಂಗು ಹರಿಯಬೇಕು ॥೧॥
ಕಾಯಕವೇ ಕೈಲಾ। ಸವಾದ ಕಾರಣ।
ಅಮಳೇಶ್ವರ ಲಿಂಗ। ವಾಯ್ತಾದಡು ಕಾಯಕದೊಳು ॥೧॥

[ಆಯ್ದಕ್ಕಿ ಮಾರಯ್ಯ]

೧೦

ರಾಗಃ—ಬಾಗೇಶ್ರೀ ತಾಲಃ—ಝಂಪತಾಲ

[ಆತಾರಾಗದೇ... ... ಎಂಬಂತೆ]

ಆತ್ಮಸ್ತುತಿ ಪರನಿಂದೆಯ। ಕೇಳಿಸದಿರಯ್ಯ।
ನಿಮ್ಮ ಧರ್ಮಾನುಭಕ್ತನೆನ್ನಲ್ಲಿ। ಲೇಸುಂಟೆಂದು ಪರಿಣ
ಮಿಸಿದರೆ ॥ಪಲ್ಲ॥

ನಿಮಗಾನು ದ್ರೋಹಿಯಯ್ಯ। ಕೂಡಲಸಂಗಮದೇವಾ।
ನಿಮ್ಮ ಶರಣರ ಲೇಸೇ। ಎನ್ನಯ ಲೇಸಯ್ಯ ॥೧॥

[ಬಸವಣ್ಣ]

೧೧

ರಾಗಃ— ಕಾಫಿ ತಾಲಃ— ತ್ರಿತಾಲ

[ಅಸಿಘಾಲಗಳಾ...... ಎಂಬಂತೆ]

ಆಡಿ ಅಳುಪದಿರಾ ಲೇಸ ಮಾಡಿ।
ಮರುಗದಿರಾ। ಕಂಡ್ಯಾ। ಎಲೆ ಮನವೇ ಕೂಡಿ ತಪ್ಪದಿರಾ ॥ಪಲ್ಲ॥
ಬೇಡಿದವರಿಗೆ। ಇಲ್ಲೆನ್ನದಿರಾ।
ನಾಡ ಮಾತು ಬೇಡ। ಸೆರಗೊಡ್ಡಿ ಬೇಡು। ಕೂಡಲಸಂಗನ ಶರಣರ ॥೧॥

[ಬಸವಣ್ಣ]

೧೨

ರಾಗಃ— ಭೈರವಿ ತಾಲಃ— ದಾದರಾ

[ವೀರಶೈವಾಚಾರಪರಾ...... ಎಂಬಂತೆ]

ಎನಗಿಂದ। ಕಿರಿಯರಿಲ್ಲ।
ಶಿವಭಕ್ತರಿಗಿಂದ। ಹಿರಿಯರಿಲ್ಲ ॥ಪಲ್ಲ॥
ನಿಮ್ಮ ಪಾದವೇ ಸಾಕ್ಷಿ। ಎನ್ನ ಮನವೇ ಸಾಕ್ಷಿ।
ಕೂಡಲಸಂಗಮದೇವ। ಎನಗಿದೇ ದಿಬ್ಯ ॥೧॥

[ಬಸವಣ್ಣ]

೧೩

ರಾಗಃ— ಪಹಾಡಿ ತಾಲಃ— ಕವಾಲಿ

(ಧಾವತಯೋಯಿಸಖ್ಯಾ ...... ಎಂಬಂತೆ)

ಆಶೆಯಿಂದ ಬಿಟ್ಟು। ಕಿರಿಯರಿಲ್ಲ।
ನಿರಾಶೆಯಿಂದ ಬಿಟ್ಟು। ಹಿರಿಯರಿಲ್ಲ ॥ಪ॥
ದಯದಿಂದ ಬಿಟ್ಟು। ಧರ್ಮವಿಲ್ಲ।
ವಿಚಾರದಿಂದ ಬಿಟ್ಟು। ಸಹಾಯಗಳಿಲ್ಲ ॥೧॥

ಸಭ್ಯರಾಚಾರಕ್ಕೆ। ಸಕಳೇಶ್ವರ।
ದೇವರಿಂದ ಬಿಟ್ಟು। ದೈವವಿಲ್ಲ ॥೨॥

[ಸಕಳೇಶ ಮಾದರಸ]

೧೪

ರಾಗಃ— ಆನಂದಭೈರವಿ (ಕರ್ನಾಟಕಿ) ತಾಲಃ— ಆದಿತಾಲ
(ನಯನೀತಿಹೀ ಎಂಬಂತೆ)

ಸಾವು ತಡವಿಲ್ಲ। ನರಕ ದೂರವಿಲ್ಲ।
ದೇಹದಿಚ್ಛೆಗೆ ಹರಿದು। ಕೆಮ್ಮನೆ ಕೆಡಬೇಡ ॥ಪ॥
ದುರ್ವಿಷಯವ ಬಿಡು ಬೇಗ। ಗುರುಪದವ ನಂಬು।
ಸಿಮ್ಮಲಿಗೆಯ ಚನ್ನರಾಮ। ನಲ್ಲಿ ಸುಖಿಯಪ್ಪೆ ॥೧॥

[ಚಂದಿಮರಸು]

೧೫

ರಾಗಃ— ಅಡಾಣಾ ತಾಲಃ— ತ್ರಿತಾಲ
(ಕೋನ ಖಬರಿಯಾ ಎಂಬಂತೆ)

ನಾಳೆ ಬಪ್ಪುದೆಮಗೆ। ಇಂದೇ ಬರಲಿ।
ಇದಕಾರಂಜುವರು। ಇದಕಾರಳುಕುವರು।
ಜಾತಸ್ಯ ಮರಣಂ ಧ್ರುವಂ। ಎಂದುದಾಗಿ ॥ಪ॥
ನಮ್ಮ ಕೂಡಲ। ಸಂಗಮದೇವ। ಬರೆದ ಬರಹವ।
ತಪ್ಪಿಸುವರೆ ಹರಿ। ಬ್ರಹ್ಮಾದಿಗಳವಲ್ಲ ॥೧॥

[ಬಸವಣ್ಣ]

೧೬

ರಾಗಃ— ಜೀವನಪುರಿ ತಾಲಃ— ತ್ರಿತಾಲ
(ಕೋನ ಖಬರಿಯಾ ಎಂಬಂತೆ)

ಕತ್ತೆ ಬಲ್ಲುದೆ ಕತ್ತುರಿಯ ವಾಸನೆ।
ತೊತ್ತು ಬಲ್ಲಳೆ ಗುರುಹಿರಿಯರುತ್ತಮರೆಂಬುದ ॥ಪ॥
ಭಕ್ತಿಯನರಿಯದ ವ್ಯರ್ಥ ಜೀವಿಗಳು।
ನಿಮ್ಮನೆತ್ತ ಬಲ್ಲರೈ ರಾಮನಾಥಾ ॥೧॥

[ದೇವರದಾಸಿಮಯ್ಯ]

೧೭

ರಾಗಃ—ಯಮುನ ತಾಲಃ—ಏಕತಾಲ

[ಜನಮಾನಸ......ಎಂಬಂತೆ]

ಎಡದ ಪಾದದಲೊದ್ದರೆ। ಬಲದ ಪಾದವ ಹಿಡಿವೆ।
ಬಲದ ಪಾದದಲೊದ್ದರೆ। ಎಡದ ಪಾದವ ಹಿಡಿವೆ ॥ಪಲ್ಲ॥

ತ್ರಾಹಿ ತ್ರಾಹಿ ತಪ್ಪೆನ್ನದು। ಕ್ಷಮೆ ನಿಮ್ಮದು ಕೂಡಲ।
ಸಂಗಮದೇವ ನಿಮ್ಮ। ಕರುಣದ ಕಂದ ನಾನು ॥೧॥

[ಬಸವಣ್ಣ]

೧೮

ರಾಗಃ—ಭೀಮಪಲಾಸ ತಾಲಃ—ತ್ರಿತಾಲ

[ಭೂಷಣಸಂಸಾರಾ...... ಎಂಬಂತೆ]

ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ।
ಧರೆ ಹತ್ತಿ ಉರಿದರೆ ನಿಲ್ಲಬಾರದು ॥ಪ॥

ಏರಿ ನೀರುಂಬರೆ। ಬೇಲಿ ಕೆಯ್ಯ ಮೇವರೆ।
ನಾರಿ ತನ್ನಯ। ಮನೆಯಲ್ಲಿ ಕಳವರೆ ॥೧॥

ತಾಯಿ ಮೊಲೆವಾಲು। ನಂಜಾಗಿ ಕೊಲುವರೆ।
ಇನ್ನಾರಿಗೆ ದೂರುವೆನಯ್ಯ। ಕೂಡಲಸಂಗಮದೇವ ॥೨॥

[ಬಸವಣ್ಣ]

೧೯

ರಾಗಃ— ತಾಲಃ—ತ್ರಿತಾಲ

[ಮಾರಹರಾ...... ಎಂಬಂತೆ]

ತನಗೆ ಮುನಿವರಗೆ। ತಾ ಮುನಿಯಲೇಕಯ್ಯ।
ಅವರಿಗಾದಡೇನು। ತನಗಾದಡೇನು ॥ಪಲ್ಲ॥

ತನುವಿನ ಕೋಪ। ತನ್ನ ಹಿರಿಯತನದ ಕೇಡು।
ಮನದ ಕೋಪ। ತನ್ನ ಅರುವಿನ ಕೇಡು ॥೧॥

ಮನೆಯೊಳಗಣ ಕಿಚ್ಚು। ಮನೆಯ ಸುಟ್ಟಲ್ಲದೆ।
ನೆರೆಮನೆ ಬೇವುದೆ। ಕೂಡಲಸಂಗಮದೇವ ॥೨॥

[ಬಸವಣ್ಣ]

೨೦

ರಾಗಃ— ಕೇದಾರ ತಾಲಃ— ಝಂಪತಾಲ

[ಸ್ಮರಹರನು ಶಂಕರನ...... ಎಂಬಂತೆ]

ಕಳಗಂಜಿ ಕಾಡ ಹೊಕ್ಕರೆ। ಹುಲಿ ತಿಂಬುದ ಮಾಬುದೆ।
ಹುಲಿಗಂಜಿ ಹುತ್ತವ ಹೊಕ್ಕರೆ। ಸರ್ಪ ತಿಂಬುದ ಮಾಬುದೆ ॥ಪಲ್ಲ॥
ಕಾಲಗಂಜಿ ಭಕ್ತನಾದರೆ। ಕರ್ಮ ತಿಂಬುದ ಮಾಬುದೆ।
ಮೃತ್ಯುವಿನ ಬಾಯ ತುತ್ತಾದ । ವೇಷಡಂಭಕರನೇನೆಂಬೆ
ಗುಹೇಶ್ವರಾ ॥೧॥

[ಅಲ್ಲಮಪ್ರಭು]

೨೧

ರಾಗಃ— ಸೋಹನಿ ತಾಲಃ— ತ್ರಿತಾಲ

[ಸಾವರೋಚರಾವತ..... ಎಂಬಂತೆ]

ಮಡಿಕೆಯ ಮಾಡುವರೆ। ಮಣ್ಣೇ ಮೊದಲು।
ತೊಡಿಗೆಯ ಮಾಡುವರೆ। ಹೊನ್ನೇ ಮೊದಲು।
ಶಿವ ಪಥವನರಿವಡೆ। ಗುರುಪಥವೆ ಮೊದಲು ॥ಪಲ್ಲ॥
ಕೂಡಲಸಂಗಮ। ದೇವರನರಿವಡೆ।
ಶರಣರ ಸಂಗವೇ ಮೊದಲು ॥೧॥

[ಬಸವಣ್ಣ]

೨೨

ರಾಗ:— ಖಂಬಾವತಿ ತಾಲಃ— ತ್ರಿತಾಲ

[ಸುಖಸ್ವಾಮಿನೀ...... ಎಂಬಂತೆ]

ಆರು ಮುನಿದು ನಮ್ಮ। ನೇನ ಮಾಡುವರು।
ಊರು ಮುನಿದು ನಮ್ಮ। ನೆಂತ ಮಾಡುವರು ॥ಪಲ್ಲ॥
ನಮ್ಮ ಕುನ್ನಿಗೆ। ಕೂಸ ಕೊಡಬೇಡ।
ನಮ್ಮ ಸೊಣಗಂಗೆ। ತಳಿಗೆಯಲಿಕ್ಕಬೇಡ ॥೧॥
ಆನೆಯ ಮೇಲೆ ಹೋಹವನ। ಶ್ವಾನ ಕಚ್ಚಬಲ್ಲುದೆ।
ಕೂಡಲಸಂಗಮದೇವರುಳ್ಳ। ನ್ನಕ್ಕರ ನಮಗೇನಯ್ಯ ॥೨॥

[ಬಸವಣ್ಣ]

(ಮುಂದೆ ಸಾಗುವದು.)

# ಮಡಿವಾಳ ಮಾಚಿದೇವನ ವಚನಗಳು.

## ಜಗತ್ತಿನ ಆವಿರ್ಭಾವ.

**ವಿವರಣೆಃ—** ಜಗತ್ತು ಉದ್ಭವಿಸುವ ಮೊದಲು ಅದರ ಸ್ವರೂಪು ಹೇಗಿತ್ತು, ಅದು ಹೇಗೆ ಹುಟ್ಟಿತು, ಅದರಲ್ಲಿ ಈಗ ಕಾಣುವ ವಿವಿಧತೆಗೆ ಕಾರಣಗಳಾವವು, ಎಂಬಿವೇ ಮೊದಲಾದ ವಿಷಯಗಳು ಎಲ್ಲ ದೇಶಗಳಲ್ಲಿಯ ತತ್ವಜ್ಞಾನಿಗಳ ಮತ್ತು ಧಾರ್ಮಿಕ ಪುರುಷರ ಲಕ್ಷವನ್ನು ಎಳೆದಿರುತ್ತವೆ. ಅವರಂತೆಯೇ ವೀರಶೈವ ವಚನಕಾರರಾದರೂ ಈ ವಿಷಯವನ್ನು ತಮ್ಮ ಉಕ್ತಿಗಳಲ್ಲಿ ನಿರೂಪಿಸುವದುಂಟು. ಜಗತ್ತಿನ ನಿರ್ಮಾಣಕ್ಕೆ ಒಂದು ಅದ್ಭುತ ಶಕ್ತಿ ಮೂಲ ಕಾರಣವೆಂದು ಅವರು ತಿಳಿದಿರುತ್ತಾರೆ. ಈ ಶಕ್ತಿಯನ್ನು ಅವರು ಚಿತ್‌ಶಕ್ತಿ ಎಂತಲೂ ಮೂಲ ಚಿತ್ತು ಎಂತಲೂ ಕರೆದಿರುತ್ತಾರೆ. ಈ ಶಕ್ತಿಯು ಅಲೆದಾಟದಿಂದ ಜಗತ್ತಿನ ಆವಿರ್ಭಾವವೆಂದು ಅವರು ಹೇಳುವದುಂಟು. ಈ ಶಕ್ತಿಯು ತೋರಿಕೆ ಇಲ್ಲದಾಗ ಜಗತ್ತು ನಿಸ್ತರಂಗವಾಗಿ, ಉಲುಹು ಏನೂ ಇಲ್ಲದೆ, ವರ್ಣಿಸಲಿಕ್ಕೆ ಅಸಾಧ್ಯವಾದ ರೀತಿಯಿಂದ ಇರುತ್ತದೆಂದು ಹೇಳುತ್ತಾರೆ. ಈ ಸ್ಥಿತಿಯನ್ನು ಮಡಿವಾಳ ಮಾಚಿದೇವರು ಹೇಳಿದುದು ಹೇಗೆಂದರೆಃ—

೧. ಆದಿ ಅನಾದಿ ಇಲ್ಲದಂದು, ಶೂನ್ಯ ಮಹಾಶೂನ್ಯವಿಲ್ಲದಂದು, ಸಾಧ್ಯಾಸಾಧ್ಯವಿಲ್ಲದಂದು, ರೂಪು ನಿರೂಪು ಇಲ್ಲದಂದು, ಸ್ಥೂಲಸೂಕ್ಷ್ಮವಿಲ್ಲದಂದು, ಸಾಕಾರ ನಿರಾಕಾರವಿಲ್ಲದಂದು, ವಾಕ್ಕು ಹುಟ್ಟದಂದು, ದ್ವೈತಾದ್ವೈತವಿಲ್ಲದಂದು, ಶಂಕರ ಶಶಿಧರ ಈಶ್ವರರೆಂಬ ಗಣಾಧೀಶ್ವರರಿಲ್ಲದಂದು, ವರ್ತನೆ ನಿರ್ವರ್ತನೆ ಇಲ್ಲದಂದು, ಉಮೆಯ ಕಲ್ಯಾಣವಿಲ್ಲದಂದು ಇವರಾರೊಬ್ಬರ ನಾಮ ಸೀಮೆ ಇಲ್ಲದಂದು ನೀನುಲುಹಡಗಿದ್ದೆಯಲ್ಲಾ ಕಲಿದೇವಯ್ಯಾ.

**ವಿವರಣೆ:**— ಪರಮಾತ್ಮನು ಈ ಸ್ಥಿತಿಯಲ್ಲಿರುತ್ತಿರಲು ಅವನಲ್ಲಿ ಒಂದು ಚಲನೆಯು ತಲೆದೋರುವದು. ಇದು ಒಂದು ಬಗೆಯ ಪ್ರಕಾಶವೆಂದು ಕೆಳಗಿನ ವಚನದಲ್ಲಿ ಹೇಳಿದೆ ಮೊದಲಿನ ಏನೂ ಇಲ್ಲದ ಸ್ಥಿತಿಯು ಒಂದು ಬಗೆಯ ಕಾರ್ಗತ್ತಲೆ ಎಂದು ಹೇಳಬಹುದು. ಅದರಲ್ಲಿ ಈ ಶಕ್ತಿಯು ಉದ್ಭವಿಸಿದಲ್ಲಿ, ಅದು ಒಂದು ಪ್ರಕಾಶವೆಂದು ಇಲ್ಲಿ ಹೇಳಲ್ಪಟ್ಟಿದೆ. ಪರಮಾತ್ಮನಲ್ಲಿ ಈ ಹೊಸಪರಿಸ್ಥಿತಿಯು ಹೇಗುಂಟಾಯಿತೆಂಬದನ್ನು ಹೇಳುವದು ಯಾರಿಗೂ ಶಕ್ಯವಲ್ಲ. ಅದು ಪರಮಾತ್ಮನ ಇಚ್ಛೆ ಅಥವಾ ಲೀಲೆ. ಈ ಚಿತ್‌ಶಕ್ತಿಯಿಂದ ಮೊದಲು ನಾದ ಎಂದರೆ ಅಲುಗುವಿಕೆ, ಈ ಅಲುಗುವಿಕೆಯಾದೊಡನೆಯೇ ಬಿಂದು ಎಂದರೆ ರೂಪು ಉತ್ಪನ್ನವಾಗುತ್ತವೆ. ಈ ನಾದ ಬಿಂದುಗಳು ಪರಸ್ಪರಾವಲಂಬಿಗಳಾಗಿ ವ್ಯವಹರಿಸಲು ಅವುಗಳಲ್ಲಿ ಯಾವುದು ಪದಾರ್ಥಗಳ ಅನೇಕ ಬಗೆಯ ಗುಣಗಳಿಗೆ ಕಾರಣವಾಗಿರುತ್ತದೆಯೋ ಅಂಥ ಕಲೆಯು ಉದ್ಭವಿಸುತ್ತದೆ. ಈ ನಾದ ಬಿಂದು ಕಲೆಗಳು ಮೂಲ ಚಿತ್ತುವಿನೊಡನೆ ಕೂಡಿಕೊಂಡು, ಜಗತ್ತಿನಲ್ಲಿ ತಲೆದೋರಲು ಜಗತ್ತಿನ ಆವಿರ್ಭಾವವು ಉಂಟಾಗುತ್ತದೆ. ಈ ಆವಿರ್ಭಾವದಲ್ಲಿ ಪೃಥ್ವಿ, ಆಪ್, ತೇಜ, ವಾಯು, ಆಕಾಶ ಈ ಪಂಚ ಮಹಾಭೂತಗಳು ಉತ್ಪನ್ನವಾಗುವವು. ಈ ಮಹಾ ಭೂತಗಳ ಮೂಲ ತತ್ವಗಳು ಜಗತ್ತಿನಲ್ಲಿಯ ಪ್ರತಿಯೊಂದು ಪದಾರ್ಥದ ಗುಣಧರ್ಮ ಕರ್ಮಗಳಿಗೆ ಕಾರಣವಾಗಿರುತ್ತವೆ. ಈ ವಿಷಯಗಳು ಬಹು ಸುಂದರವಾದ ರೀತಿಯಿಂದ ಕೆಳಗಿನ ವಚನದಲ್ಲಿ ಹೇಳಲ್ಪಟ್ಟಿವೆ.

೨. ಎಲೆ ನಿರಾಳ, ನಿರ್ಮಾಯ ಘನವಸ್ತುವೇ, ನಿನ್ನ ಬೆಳಗನುಗುಳಿದಡೆ ಎಂಜಲಾಯಿತ್ತಲ್ಲಾ! ನುಂಗಿದವನುಗುಳಿದುದುಂಟೇ? ಇದು ಕರ ಚೋದ್ಯ, ಚೋದ್ಯ. ನಿನ್ನುಗುಳಿನ ಬಿಂದುವಿನಲ್ಲಿ ಅಕ್ಷರಂಗಳು ಮೂರು ಹುಟ್ಟಿದವು. ನಿನ್ನುಗುಳಿನ ಸಿಲುಕಿನಿಂದ ನಾದ ಬಿಂದು ಕಳೆಗಳಾದವು. ನಿನ್ನುಗುಳಿನ ಬಸುರಿಂದೆ ಇಬ್ಬರು ಗಂಡು ಹೆಣ್ಣಾದರು. ಆ ಗಂಡು ಹೆಣ್ಣಿಂದ ಐವರು ಮಕ್ಕಳಾದರು. ನಿನ್ನುಗುಳು ಎಂಜಲೆಂದವರ ಕಣ್ಣು ಕಪ್ಪಾದವು. ನಿನ್ನುಗುಳಿನಗೆ ಪ್ರಸಾದವೆಂದರಿದೆನಯ್ಯ ಕಾಣಾ ಕಲಿದೇವರದೇವಾ.

---

**ವಿವರಣೆ:—** ವಚನಕಾರರು ಪರಮಾತ್ಮನಿಗೆ ಒಂದು ವಿಶಿಷ್ಟ ಸ್ವರೂಪು ಅಥವಾ ಆಕೃತಿ ಇರುವದಿಲ್ಲೆಂದು ಯಾವಾಗಲೂ ಹೇಳುವದುಂಟು. ಅವನು ಸ್ವರ್ಗ, ಕೈಲಾಸ ಇಂತಹ ಯಾವದೇ ಒಂದು ಸ್ಥಳದಲ್ಲಿ ವಾಸಿಸುತ್ತಾನೆಂತಲೂ ನಂಬುವುದಿಲ್ಲ. ಅವನು ಜಗತ್ತಿನಲ್ಲೆಲ್ಲ ಹರಡಿಕೊಂಡಿರುತ್ತಾನೆಂತಲೇ ಅವರು ವರ್ಣಿಸುತ್ತಾರೆ.

ವಚನಕಾರರು ತಮ್ಮ ತಾತ್ವಿಕ ಉಚ್ಚ ವಿಚಾರಗಳನ್ನು ಅತ್ಯಂತ ಭಾವನಾಪೂರಿತವಾಗಿ ಕಾವ್ಯಮಯವಾಗಿ ವರ್ಣಿಸುವದುಂಟು. ಮಡಿವಾಳ ಮಾಚಿದೇವನು ಬಸವನ ವಿಷಯವಾಗಿ ಅತ್ಯಂತ ಭಕ್ತಿಭಾವವುಳ್ಳವನಾಗಿದ್ದರಿಂದ ಬಸವನು ಎಂದರೆ ಪರಬ್ರಹ್ಮ ಸ್ವರೂಪು ಎಂದು ಭಾವಿಸಿ ಕೆಳಗಿನ ವಚನವನ್ನು ನುಡಿದಿದ್ದಾನೆ.

೩. ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ. ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು. ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯ. ಆಯತವು, ಸ್ವಾಯತವು, ಸನ್ನಿಹಿತವು ಬಸವಣ್ಣನಿಂದ. ಇದ ಬಲ್ಲರೆ ನೀವು ಹೇಳಿರೇ, ಇತ್ತ ಬಲ್ಲರೇ ನೀವು ಕೇಳಿರೇ. ಬಸವಾ ಬಸವಾ ಎಂದವನ ಭಕ್ತಿ ಶೂನ್ಯ ಕಾಣಾ ಕಲಿದೇವರದೇವಾ.

ಇದರಲ್ಲಿ ವಚನಕಾರನು ಪರಬ್ರಹ್ಮದ ಮೂಲ ಸ್ವರೂಪು ಅದರ ಆವಿರ್ಭಾವವು, ಅದರಲ್ಲಿ ಉಂಟಾಗುವ ಕಾರಣ, ಸೂಕ್ಷ್ಮ, ಸ್ಥೂಲ ಶರೀರಗಳು ಮತ್ತು ಕಡೆಗೆ ಪುನಃ ಶೂನ್ಯ ಸ್ಥಿತಿಯನ್ನು ಹೊಂದುವಿಕೆ ಇವುಗಳನ್ನು ಬಹು ಸಂಕ್ಷಿಪ್ತವಾಗಿ ಉಲ್ಲೇಖಿಸಿದ್ದಾನೆ.

**ವಿವರಣೆ:—** ಮಡಿವಾಳ ಮಾಚಿದೇವನು ಜಗತ್ತಿನಲ್ಲಿ ಪರಮಾತ್ಮನು ಹೇಗೆ ವಾಸಿಸುತ್ತಾನೆಂಬುದನ್ನು ಮುಂದಿನ ವಚನದಲ್ಲಿ ಹೇಳಿದ್ದಾನೆ. ಇದನ್ನು ಅವನು ಕೆಲವು ಸುಂದರವಾದ ಉದಾಹರಣೆಗಳನ್ನು ಕೊಟ್ಟು ಬಹು ಸ್ಪಷ್ಟವಾಗಿ ವರ್ಣಿಸಿದ್ದಾನೆ. ಜಗತ್ತಿನಲ್ಲೆಲ್ಲ ಶಿವನ ಚೈತನ್ಯವು ಇರುತ್ತದೆ. ಆದರೆ ಅದು ಸಾಮಾನ್ಯ ಮನುಷ್ಯನಿಗೆ ಕಾಣದು. ಆದರೆ ಬಲ್ಲವರು ಹೇಳಿದ ಮಾರ್ಗದಿಂದ ಆಚರಿಸಿದ್ದಾದರೆ ಅದನ್ನು ಎಲ್ಲರೂ ಕಾಣಬಹುದು. ಆ ವರೆಗೆ ಮಾತ್ರ ಪರಮಾತ್ಮನು ತನ್ನಲ್ಲಿ ಇದ್ದೂ ಇಲ್ಲದ ರೀತಿಯಿಂದ ಎಂದರೆ ಹೇಗೆ ಒಂದು ಕೊಡದೊಳಗಿನ ನೀರಿನಲ್ಲಿ ಸೂರ್ಯನ ಬಿಂಬುವು ಕಾಣುತ್ತದೋ ಹಾಗೆ ಮುಟ್ಟಿಯೂ ಮುಟ್ಟದ ರೀತಿಯಿಂದ ಇರುತ್ತಾನೆಂದು ವಚನಕಾರನು ಹೇಳುತ್ತಾನೆ.

೪. ಘಟದೊಳಗೆ ತೋರುವ ಸೂರ್ಯನಂತೆ, ಸರ್ವರಲ್ಲಿ ಶಿವನ ಚೈತನ್ಯವಿಪ್ಪುದು. ಇದ್ದರೇನು ? ಸರ್ವರಿಗೆ ಸಾಧ್ಯವಲ್ಲ. ಮುಟ್ಟಿಯೂ ಮುಟ್ಟದು. ಅದು ಕೂಡುವರೆ ಗುರುವಿಂದಲ್ಲದಾಗದು ಕಾಣಾ ಕಲಿದೇವರದೇವಾ.

---

# ನೈತಿಕ ವರ್ತನೆ.

**ವಿವರಣೆ:—** ಮನುಷ್ಯನಲ್ಲಿ ಲಿಂಗವು ಇದ್ದುದಕ್ಕೆ ಅವನ ನೈತಿಕ ವರ್ತನೆಯೇ ಮುಖ್ಯ ಚಿನ್ಹವಾಗಿರುತ್ತದೆಂದು ವಚನಕಾರರ ಮುಖ್ಯ ತತ್ವವಾಗಿರುತ್ತದೆ. ಇಂಥ ನೈತಿಕವೃತ್ತಿಯಿಂದ ಅವನಲ್ಲಿ ಲಿಂಗದ ಕಳೆಯು ಹೆಚ್ಚುತ್ತ ಹೋಗುತ್ತದೆ. ಆದುದರಿಂದ ವಚನಕಾರರು ನೈತಿಕವರ್ತನೆಯನ್ನು ಕುರಿತು ಪ್ರತಿಯೊಂದು ಸ್ಥಲದಲ್ಲಿ ಪದೇಪದೇ ಹೇಳುವದರಲ್ಲಿ ಎಂದೂ ಬೇಸರಿಯುವದಿಲ್ಲ. ಪಾಶ್ಚಿಮಾತ್ಯ ತತ್ವಜ್ಞಾನಿಗಳು ಯಾವದು ಬಹು ಜನರ ಹಿತಕ್ಕೆ ಸಾಧನವೋ ಅದೇ ನೈತಿಕಾಚಾರ ವೆಂದು ಹೇಳುವದುಂಟು. ಆದರೆ ಹಿಂದೂ ಧರ್ಮದಲ್ಲಿ ಈ ತರದ ವ್ಯಾಖ್ಯೆಗೆ ಇಂಬು ಇರುವದಿಲ್ಲ. ಅವರು ಕೇವಲ ಧಾರ್ಮಿಕ ವೃತ್ತಿ ಯುಳ್ಳವರಾಗಿ ಅದರ ವ್ಯಾಖ್ಯೆಯನ್ನು ಬೇರೆ ವಿಧವಾಗಿ ಮಾಡುವ ದುಂಟು. ಮಡಿವಾಳ ಮಾಚಿದೇವನು ಕೆಳಗಿನ ತನ್ನ ವಚನದಲ್ಲಿ ನೈತಿಕಾ ಚರಣೆಯ ತತ್ವವನ್ನು ಹೇಳಲು ಯತ್ನಿಸಿದ್ದಾನೆ. ಮನುಷ್ಯನು ತನ್ನ ಇರವು ಯಾವದು, ಮತ್ತು ತನ್ನ ಮುಂದಿನ ಗತಿಯೇನು ಎಂಬುದರ ಕಡೆಗೆ ಲಕ್ಷವಿಡತಕ್ಕದ್ದು; ತಿಳಿದವರಿಂದ ಅಂದರೆ ಗುರುವಿನಿಂದ ತಿಳಿದು ಜಗತ್ತಿನಲ್ಲಿ ನಡೆಯಬೇಕು; ಮತ್ತು ಅಜ್ಞಾನಿಗಳಾದ ಜನರ ವರ್ತನೆ ಯಂತೆ ನಡೆಯಬಾರದು; ಹೀಗೆ ನಡೆಯುವದೇ ನೈತಿಕಾಚರಣೆ ಎಂದು ಅವನ ಅಭಿಪ್ರಾಯವಿದ್ದಹಾಗೆ ತೋರುತ್ತದೆ.

೫. ನಾವು ಲಿಂಗೈಕ್ಯ ಲಿಂಗಾನುಭಾವಿಗಳೆಂದು ಹೇಳುವ ಅಣ್ಣಗ ಳಿರಾ, ನೀವು ಎಂತಾದಿರಿ ಹೇಳಿರಣ್ಣಾ. ಅರಿಯದಿರ್ದರೆ ಕೇಳಿರಿ. ಗುರು ಕೃಪೆ ಯಿಂದ ಹೇಳಿರೆ. ಸರ್ವಸಂಗ ಪರಿತ್ಯಾಗವ ಮಾಡಬೇಕು. ಲೋಕಾ ಚಾರವ ಮುಟ್ಟದಿರಬೇಕು. ನುಡಿಯಂತೆ ನಡೆ ದಿಟವಾಗಬೇಕು. ಸರ್ವಾಚಾರ ಸಂಪತ್ತಿನಾಚರಣೆಯ ಸದ್ಗುರು ಮುಖದಿಂದಾಚರಿಸಬೇಕು. ನಾನು ಆರು, ನನ್ನ ಜೀವವೇನು, ನಾ ಬಂದ ಮುಕ್ತಿದ್ವಾರವಾವುದು, ನಾ ಹೋಗುವ ನಿಜಕೈವಲ್ಯ ಪದವಾವುದು, ನನ್ನ ಇರವೇನು, ಎಂದು ಅರಿದಾಚರಿಸಬಲ್ಲಾತನೇ ನಿಜಲಿಂಗಾನುಭಾವಿ ಲಿಂಗೈಕ್ಯ ನೋಡಾ ಕಲಿದೇವರ ದೇವಾ.

---

**ವಿವರಣೆ:—** ಕೆಳಗಿನ ವಚನದಲ್ಲಿ ಮಾಚಿದೇವನು ಭಕ್ತಿಯಿಂದ ನಡೆಯಬೇಕೆಂದು ಹೇಳುತ್ತಾನೆ. ಇದಾದರೂ ನೈತಿಕಾಚರಣೆಯಲ್ಲಿ ಬರುತ್ತದೆ. ಆದರೆ ಭಕ್ತಿಯಿಂದ ನಡೆಯುವದೆಂದರೆ ಮೂಢ ಶ್ರದ್ಧೆಯುಳ್ಳವರಾಗಿರುವದಲ್ಲ. ನಿಷ್ಠೆ ಎಂದರೆ ದೃಢವಾದ ಭಕ್ತಿಯ ನಿಜತ್ವವನ್ನು ಅರಿದು ಆಚರಿಸಬೇಕೆಂದು ಅವನು ಇಲ್ಲಿ ಹೇಳುತ್ತಾನೆ. ಆದುದರಿಂದ ಭಕ್ತಿಯುಳ್ಳವನು ಇಂತಹ ಅರಿವುಳ್ಳವನಾಗಿರಬೇಕು. ಪ್ರಪಂಚದಲ್ಲಿ ಸತಿ ಸುತಾದಿಗಳು ಮೋಹವನ್ನುಂಟು ಮಾಡುವರೆಂದು ಬಗೆದು ಅನೇಕರು ಅವರನ್ನು ತ್ಯಜಿಸಿಬಿಟ್ಟವರುಂಟು, ಅಥವಾ ಅವರನ್ನು ದುರ್ಲಕ್ಷಿಸುತ್ತಾರೆ. ಈ ತೆರದ ವೃತ್ತಿಯುಳ್ಳವರು ಹಿಂದೂ ಸಮಾಜದಲ್ಲಿ ಬಹು ಜನರು ದೊರೆಯುತ್ತಾರೆ. ಆದರೆ ವಚನಕಾರರ ಮಾರ್ಗವು ಇದಲ್ಲ. ಮಡಿವಾಳ ಮಾಚಿದೇವನು ಕೆಳಗಿನ ವಚನದಲ್ಲಿ ಭಕ್ತನು ಸತಿ ಸುತರಿಗೆ ಸದಾಚಾರವನ್ನು ತೋರಿಸಬೇಕು ಎಂದು ಅವನ ಕರ್ತವ್ಯವನ್ನು ಹೇಳಿದ್ದಾನೆ. ಇದು ಲಕ್ಷಿಸತಕ್ಕ ವಿಷಯುವಾಗಿದೆ.

೬. ನಾವು ಶರಣರೆಂದು ಒಪ್ಪವಿಟ್ಟು ನುಡಿವ ಅಣ್ಣಗಳಿರಾ, ನೀವು ಶರಣರಾದ ಭೇದವ ಹೇಳಿರಿ. ಅರಿಯದಿರ್ದಡೆ ಕೇಳಿರಿ ತನುವಿನ ಕಾಂಕ್ಷೆಯ ಸುಟ್ಟುರುಹಿ, ಮನದ ಲಜ್ಜೆಯ ಮರೆದು, ಭಾವದ ಕ್ರಿಯೆಯ ಹೊಟ್ಟುಮಾಡಿ ತೂರಿ, ಸದ್ಭಕ್ತಿಯ ನಿಜ ನೈಷ್ಠೆಯ ತಿಳಿದು, ಸತಿ ಸುತರಿಗೆ ಸದಾಚಾರ ಸನ್ಮಾರ್ಗವ ತೋರಿ, ನಿರ್ವಂಚಕದಿಂದ ಅರಿದಾಚರಿಸಬಲ್ಲಾತನೇ ಅಚ್ಚ ಶರಣ ನೋಡಾ ಕಲಿದೇವರದೇವಾ.

---

**ವಿವರಣೆ:—** ಸದಾಚಾರವು ಧಾರ್ಮಿಕ ಎಂಥ ಉಚ್ಚ ಪದವಿಯನ್ನು ಹೊಂದಿದವರಾದರೂ ಕೂಡ ಅವರಿಗೆ ಅವಶ್ಯವಾಗಿರುತ್ತದೆ. ಜಂಗಮಕ್ಕೂ ಕೂಡ ಅದು ಬೇಕು. ಅನೇಕ ವೀರಶೈವ ಪುರಾಣಗಳಲ್ಲಿ ಅನೀತಿಯಿಂದ ವರ್ತಿಸುವ ಜಂಗಮರ ಉಲ್ಲೇಖಗಳು ಹೇರಳವಾಗಿ ದೊರೆಯುತ್ತವೆ. ಆದರೆ ಯಾವ ಕಾಲದಲ್ಲಿ ಸಮಾಜವು ಮೂಢ ಶ್ರದ್ಧೆಯುಳ್ಳುದಾಗಿ ಧಾರ್ಮಿಕ ವರ್ಗಕ್ಕೋಸ್ಕರ ಅಂಧ ಭಕ್ತಿಯಿಂದ ಕೂಡಿಕೊಂಡು ವರ್ತಿಸುತ್ತಿತ್ತೋ, ಅಂಥ ಕಾಲದಲ್ಲಿ ರಚಿಸಲ್ಪಟ್ಟ ಕಟ್ಟು ಕಥೆಗಳು ಇವಾಗಿರುತ್ತವೆ. ಆದರೆ ಮಡಿವಾಳ ಮಾಚಿದೇವನು ಹೀಗೆ

ವರ್ತಿಸುವದು 'ಸೂಕರನಿಂದ ಕಷ್ಟ ನೋಡಾ' ಎಂದು ಇಲ್ಲಿ ಹೇಳುತ್ತಾನೆ. ಇದಕ್ಕೋಸ್ಕರ ಅವನು ಒಂದು ಸಂಸ್ಕೃತದ ಆಧಾರವನ್ನೂ ಸಹ ಕೊಟ್ಟಿರುತ್ತಾನೆ.

೭ ಅಯ್ಯಾ ಇಹಪರಂಗಳ ಗೆಲಿದ ಭಕ್ತ ಜಂಗಮಕ್ಕೆ ಸದಾಚರಣೆಯೇ ವಸ್ತು ನೋಡಾ. ಸದಾಚಾರವನರಿಯದ ಪಾಪಿ ಸೂಕರನಿಂದ ಕಷ್ಟ ನೋಡಾ. ಅದೆಂತೆಂದೊಡೆ "ಸದಾಚಾರಂ ತು ಭಕ್ತಾನಾಂ। ಸದಾಚಾರಂ ತು ಜಂಗಮಃ॥ ದುರಾಚಾರ ನ ಜಾನಾತಿ। ಅನಾಚಾರಂತು ಸೂಕರಃ" ಇಂತೆಂದುದಾಗಿ, ಭಕ್ತ ಜಂಗಮಕ್ಕೆ ಸದಾಚಾರವೇ ಬೇಕು. ಸದಾಚಾರವಿಲ್ಲದವಂಗೆ ಭವವುಂಟು. ಭವವುಂಟಾದವಂಗೆ ಆಚಾರವಿಲ್ಲ. ಆಚಾರವಿಲ್ಲದವ ಭಕ್ತನಲ್ಲ, ಜಂಗಮವಲ್ಲ ಕಾಣಾ ಕಲಿದೇವರದೇವಾ.

---

**ವಿವರಣೆಃ—** ಹಿಂದೂ ಧರ್ಮದ ನಿಜ ಸ್ವರೂಪವನ್ನು ಅಂಧ ಕರ್ಮಠ ವೃತ್ತಿಯು ಪೂರ್ಣವಾಗಿ ಮುಸುಳಿಸಿ ಬಿಟ್ಟಿದೆ. ಹಿಂದೂ ಸಮಾಜದಲ್ಲಿಯ ಕರ್ಮಕಾಂಡಿಗಳು ಕೇವಲ ಬಾಹ್ಯಾಚಾರದಲ್ಲಿ ಮಗ್ನರಾಗಿ ಅದರ ನಿಜಾಂಶಗಳನ್ನು ಮುಚ್ಚಿಟ್ಟಿದ್ದಾರೆ. ಆದರೆ ವಚನಕಾರರು ಕೇವಲ ಬಾಹ್ಯ ಕರ್ಮಗಳನ್ನು ಬಹು ಕಟುವಾದ ರೀತಿಯಿಂದ ನಿಷೇಧಿಸುತ್ತಾರೆ. ಅವರು ನಿಜವಾದ ಸಮಾಜ ಸುಧಾರಕರು. ಆದ್ದರಿಂದ ಅವರು ಸಮಾಜದಲ್ಲಿಯ ದೋಷಗಳನ್ನು ಎತ್ತಿ, ಅವುಗಳನ್ನು ಬಲವಾಗಿ ಖಂಡಿಸುವದನ್ನು ಬಿಡುವದಿಲ್ಲ. ವೀರಶೈವ ಸಮಾಜದಲ್ಲಿ ಬಾಹ್ಯ ಆಚಾರಗಳನ್ನು ಮಾತ್ರ ಆಚರಿಸುತ್ತ, ಅವು ಶೀಲಗಳೆಂದು ಹೇಳಿ, ನೀತಿಯನ್ನು ಬಿಟ್ಟು ವರ್ತಿಸುವವರು ಬಹು ಜನರುಂಟು. ಇಂಥವರನ್ನು ಮಡಿವಾಳ ಮಾಚದೇವನು ಬಹು ಸ್ಪಷ್ಟ ಶಬ್ದಗಳಿಂದ ಮುಂದಿನ ೮ನೇ ಮತ್ತು ೯ನೇ ವಚನಗಳಲ್ಲಿ ನಿಷೇಧಿಸಿದ್ದಾನೆ.

೮. ವಿಭೂತಿಯ ನಿಟ್ಟು, ರುದ್ರಾಕ್ಷಿಯ ಧರಿಸಿ, ಪಂಚಾಕ್ಷರಿಯ ಜಪಿಸಿ, ಕೃತಾರ್ಥರಾದೆವೆಂಬ ಪಂಚ ಮಹಾಪಾತಕರು ನೀವು ಕೇಳಿರೋ! ಅದೇತೆಂದೊಡೆ, ವಿಭೂತಿಯನಿಟ್ಟು ವಿಶ್ವಾಸವಿಲ್ಲವಾಗಿ, ರುದ್ರಾ

ಕ್ಷೆಯ ಧರಿಸಿ ರುದ್ರಗಣಂಗಳನರಿಯರಾಗಿ, ಪಂಚಾಕ್ಷರಿಯ ಜಪಿಸಿ ಪಂಚ ಮಹಾಪಾತಕವ ಬಿಡರಾಗಿ, ಅವಾವೆಂದಡೆ, ಹುಸಿ, ಕೊಲೆ, ಕಳವು, ಪರದಾರ, ತಾಮಸ ಭಕ್ತಸಂಗ, ಇಂತಿವ ಬಿಡದನ್ನಕ್ಕ ಶಿವಭಕ್ತನೆನಿಸಿ ಕೊಳಬಾರದು ನೋಡಾ. ಅದೆಂತೆಂದೊಡೆ ಆಗಮ ಸಾಕ್ಷಿ "ಸರ್ವಾಚಾರ ಪರಿಭ್ರಷ್ಟೋ ಶಿವಾಚಾರಸ್ಯಮೇಳನಂ ಶಿವಾಚಾರ। ಪರಿಭ್ರಷ್ಟೋ ನರಕೆ ಕಾಲಮಕ್ಷಯಂ" ಎಂದುದಾಗಿ ಕಸ ಕೊಂಡ ಭೂಮಿಯಲ್ಲಿ ಸಸಿ ಪಲ್ಲ ಯಿಸುವುದೇ? ಹುಸಿ ಇದ್ದಲ್ಲಿ ಶಿವಭಕ್ತಿ ನೆಲೆಗೊಂಬುದೇ? ಬಸವಾ ಗತಿ ಎನುತ ಹಿರಿದಾಗಿ ಭಸಿತವ ಪೂಸಿಕೊಂಡಿರ್ದ ಕುನ್ನಿಗಳೆಲ್ಲರೂ ಸದ್ಭಕ್ತರಾಗಬಲ್ಲರೇ? ಅಶನ ಭವಿಪಾಕ, ತಿಂಬುದೆಲ್ಲವೂ ಅನ್ಯದೈವದೆಂಜಲು, ಮತ್ತೆ ಮರಳಿ ವ್ಯಸನಕ್ಕೆ, ದಾಸಿ, ವೇಶಿ, ಹೊಲತಿ, ಶೂದ ಗಿತಿ, ಡೊಂಬಿತಿ ಮೊದಲಾದವರಿಗೆ ಹೇಸದೆ ಆಶೆ ಮಾಡುವವರ ಭಕ್ತಿಯ ತೆರನೆಂತೆಂದೊಡೆ, ಸೂಕರನ ದೇಹವ ತೊಳೆದರೆ, ಅದು ಕೂಡೆ ಅಶುದ್ಧದೊಳಗೆ ಹೊರಳಿದ ತೆರನಾಯಿತ್ತೆಂದನು ಕಲಿದೇವರದೇವ.

೯. ಸೂಳೆ, ಸುರೆ, ಬೆಕ್ಕು, ನಾಯಿ, ಅನ್ಯದೈವ, ಭವಿ, ತಾಳ ಹಣ್ಣು ಈಸೊಂದುಳ್ಳನ್ನಕ್ಕ ಭಕ್ತನಲ್ಲ. ಶಿವದ್ರೋಹಿ, ವ್ರತಗೇಡಿ. ಈ ಸೊಂದುಳ್ಳನ್ನಕ್ಕ ಯುಕ್ತನಲ್ಲ. ಅದೆಂತೆಂದೊಡೆ, ವೀರತಂತ್ರೆ "ಮೃಗಯು ರ್ಮದ್ಯವೇಶ್ಯಾಅನ್ಯದೈವಸ್ಯಪೂಜಕಃ । ತತ್ಸಂಗೀ ಚ ಮಹಾದ್ರೋಹೀ ನ ಲಿಂಗೀ ಭವಿನೋ ಸಮಃ" ಎಂದುದಾಗಿ, ಸೂಕರನು ಅಶುದ್ಧವ ತಿಂದು, ಒಂದರ ಮುಸುಡ ಒಂದು ಮೂಸಿ ನೋಡುವಂತೆ, ಇಂತಪ್ಪ ಅನಾಚಾರಂಗಳ ಬಿಡದವನು ಆ ಸೂರಕನೋಪಾದಿ ಕಾಣಾ ಕಲಿದೇವರ ದೇವಾ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

ರಾ॥ ಸಾ॥ **ಫ ಗು ಹಳಕಟ್ಟಿ**ಯವರು ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ.

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

---

ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು ಹಳಕಟ್ಟಿ ಇವರು ತಮ್ಮ "**ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ**" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

R. N. B 2554

ಶ್ರೀ




ಸಂಪುಟ ೧೩ ]    ನವ್ಹೆಂಬರ ೧೯೩೮.    [ ಸಂಚಿಕೆ ೨

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೩] ನವ್ಹಂಬರ ೧೯೩೮ [ಸಂಚಿಕೆ ೨

## ನಿಡುಮಾಮಿಡಿ ಮಠದ ಇತಿಹಾಸ.

ಲೇಖಾಂಕ ೮.

(ಲೇಖಕ:— ಎಂ. ಜಿ. ನಂಜುಂಡಾರಾಧ್ಯ 'ವಿಶಾರದ' ಸಿದ್ಧಗಂಗಾ ಗುರುಕುಲ.)

### ಚತುರ್ಥಾಶ್ವಾಸ.

ಶ್ರೀಕರಿಬಸವದೇಶಿಕೇಂದ್ರ ಶಿವಾಚಾರ್ಯರ ಅನಂತರ ಈ ಪೀಠವನ್ನಲಂಕರಿಸಿದವರು ಶ್ರೀ ಶಾಂತವೀರದೇಶಿಕೇಂದ್ರ ಶಿವಾಚಾರ್ಯರು. ಇವರು ಈ ಪೀಠದ ಆಚಾರ ವಂಶಕ್ಕೆ ಸೇರಿದ 'ಶ್ರೀಪಂಡಿತಾರಾಧ್ಯ ವಂಶೋದ್ಭೂತನಪ್ಪ ಶಿವಲಿಂಗಾಚಾರ್ಯರ' ವಂಶಜರು. ಶ್ರೀ ಶಿವಲಿಂಗಾರ್ಯರ ಚರಿತ್ರೆಯನ್ನು ಇವರೇ ಬರೆದಿದ್ದಾರೆ. ಇವರು ಬಾಲ್ಯದಲ್ಲಿ ಸಾಂಗವಾಗಿ ವೇದಾದಿ ಶಾಸ್ತ್ರಗಳನ್ನಭ್ಯಸಿಸಿ ಸಂಪೂರ್ಣ ಪಾಂಡಿತ್ಯವನ್ನು ಗಳಿಸಿದ್ದರು. ೧೬೧೭ ರಿಂದ ೧೬೩೭ ರ ವರೆಗೂ ಆಳಿದ ಶ್ರೀ. ಚಾಮರಾಜೇಂದ್ರ ಒಡೆಯರ ಆಸ್ಥಾನದಲ್ಲಿ ರಾಮದೀಕ್ಷಿತರನ್ನು ವಾದದಲ್ಲಿ ಸೋಲಿಸಿದರಂತೆ.

> "ಚಾಮರಾಜೇಂದ್ರನ ಸಭೆಯೊಳು ತರ್ಕಿಸುವ।
> ರಾಮದೀಕ್ಷಿತನ ಭಂಜಿಸಿದ।
> ಶ್ರೀಮದ್ವೀರಣಾರಾಧ್ಯ ತನುಜ ಗುಣಧಾಮ।

ಇತ್ಯಾದಿಯಾಗಿ ಹೇಳಿಕೊಂಡಿದ್ದಾರೆ. ಆದುದರಿಂದ ಇವರು ೧೬೩೭ ರ ಅನಂತರವೇ ಶ್ರೀ ಗೋಕರ್ಣ ಸೂರ್ಯಸಿಂಹಾಸನವನ್ನಾರೋಹಣ ಮಾಡಿದಂತೆ ತೋರುತ್ತೆ.

" ಆನಂದಾಗಮವೇದ ಶಂಕರ ಪುರಾಣಾರ್ಥಜ್ಞಸತ್ಕೋವಿದಂ " ನಾನಾ ಕಾವ್ಯ ವಿಚಾರಪೂರ ಕವಿತಾ ಕರ್ಣಾಟಚಕ್ರೇಶ್ವರಂ " ಎಂದು ತಮ್ಮನ್ನು ವಿಶೇಷಿಸಿಕೊಂಡಿರುವುದರಿಂದ ಅನುಪಮ ವಿದ್ಯಾವಿಶಾರದರೂ ನಿಷ್ಠಾಗರಿಷ್ಠರೂ ಆಗಿದ್ದರೆಂಬುದು ಸ್ಪಷ್ಟವಾಗಿದೆ. ಇವರ ಪ್ರಪಿತಾ ಮಹನು ಪೆನುಗೊಂಡೆ ದೇಶದ ಅಪ್ಪೆಯ ಕೆರೆಯಲ್ಲಿದ್ದರೆಂದೂ ಆ ಪ್ರಾಂತ ದಲ್ಲೆಲ್ಲ ತದ್ವಂಶೀಯರು ಶ್ರೀ ಪೀಠದ ಶಿಷ್ಯರಾಗಿ ಇಂದಿಗೂ ಹೇರಳ ವಾಗಿರುವರೆಂದೂ ನಾವು ವಿವರಿಸಿದ್ದೇವೆ. = ಇವರು ಸನ್ಯಾಸವನ್ನು ಸ್ವೀಕರಿಸಿದ ನಂತರ ನಡೆಯಿಸಿದ ಮಹತ್ವಗಳನ್ನು ಪುಲ್ಲ ಕವಿಯು ಉಲ್ಲೇ ಖಿಸಿದ್ದಾನೆ.

## ಶ್ರೀ. ಶಾಂತವೀರದೇಶಿಕೇಂದ್ರ ಶಿವಾಚಾರ್ಯರು.*

ಸು. ೧೬೪೦ ರಲ್ಲಿ ಇವರು ಈ ಪೀಠದ ಅಧಿಪತಿಗಳಾಗಿದ್ದಂತೆ ತಿಳಿದು ಬರುತ್ತದೆ.

ಸೀ|| ಸ್ವಾಂತಂಬುರಂಜಿಲ್ಲ ಶಾಂತವೀರಸ್ವಾಮಿ ದೇಶಮುಲ್ ಚೂ ಡನುದ್ದೇಶ ಪಡುಚು । ಉಕ್ತರಾಶನು ಭಕ್ತುಲುಂ ಲರಂಚು ತೆಲಿಸಿ ಶ್ರೀ. ಗುರುಮೂರ್ತಿ ದಿವ್ಯವೈನ ।

ಹೀಗೆ ಇವರು ದೇಶಸಂಚಾರ ಮಾಡಿ ಶಿಷ್ಯರನ್ನುದ್ಧರಿಸಲುದ್ದೇಶಿ ಸಿದವರಾಗಿ ಉತ್ತರ ದೇಶವನ್ನು ಕುರಿತು ಪರಿವಾರದೊಂದಿಗೆ ಬಿಜಯಂ ಗೈಸುತ್ತಾರೆ. ದಾರಿಯಲ್ಲಿ ಒಂದು ಗೊಂಡಾರಣ್ಯ ಮಧ್ಯವನ್ನೈದುವಲ್ಲಿ ಸೂರ್ಯಾಸ್ತಮಯವಾಗುತ್ತದೆ. ಶುಕಪಿಕಾದಿ ಶಕುನಿ ಸ್ವನ ಮನೋ ಹರವಾದ ವನವು ನೀರವವಾಗಿ ಶ್ರೀ. ಸ್ವಾಮಿಯ ಮನವನ್ನಾಕರ್ಷಿಸು ತ್ತದೆ. ಅಲ್ಲಿ ಒಂದು ನದಿಯು ಕಲಕಲ ನಿನದಗೈಯುತ್ತ ಪ್ರವಹಿಸು ತ್ತಿದ್ದು ದಡದಲ್ಲಿ ಒಂದು ವಿಶಾಲವಾದ ವಟವೃಕ್ಷವು ದಿಗಂತ ವ್ಯಾಪಿ ಯಾದ ಶಾಖಾನಿಚಯದಿಂದ ತದ್ವನಕ್ಕೆ ಏಕಾಶ್ರಯದಂತೆಯೂ ಪ್ರಕೃತಿ ದೇವಿಯ ವಿಶ್ರಾಂತಿ ನಿಕೇತನದಂತೆಯೂ ನಾಟ್ಯಾಚಾರ್ಯನಾದ ಪರ ಶಿವನನ್ನನುಕರಿಸುತ್ತಿರುವಂತೆಯೂ ಮನವೋಹಕವಾಗಿ ಬೆಳಗುತ್ತಿತ್ತು. ಶಿವಯೋಗ ಧುರಂಧರನಾದ ಶ್ರೀ ಗುರುಮೂರ್ತಿಯು ಆ ಸ್ಥಳವನ್ನು ಬಿಡುವುದೆಂತು! ಅಲ್ಲಿಯೇ ತಮ್ಮ ಪರಿವಾರವನ್ನು ನಿಲ್ಲಿಸಿ ಅವರಿಗೆಲ್ಲ

---

= ಸಂ. ೧೨. ಸಂ. ೪ "ಶಿವಾನುಭವ"

ಊರೋಪಚಾರಗಳಿಗೆ ವ್ಯವಸ್ಥೆಯುವ್ಮಾಡಿಸಿ ತಾವು ವಟವೃಕ್ಷದ ಅಧಃ ಪ್ರದೇಶದಲ್ಲಿ ಪರಿಮಾರ್ಜನೆಯಿಂದ ಪವಿತ್ರಗೊಳಿಸಿದ ಪೀಠದಲ್ಲಿ ಶಿವಾರ್ಚನೆಗೆ ಮುಹೂರ್ತ ಮಾಡುತ್ತಾರೆ. ಈ ಸ್ಥಳದಲ್ಲಿ ಕವಿಯ ವರ್ಣನಾ ವೈಖರಿಯು ಪ್ರಶಂಸನೀಯವಾಗಿಯೇ ಇದೆ.

ಕಂ॥ ನಿಟಿಲಾಕ್ಷಾರ್ಚನಸೇಯು ಚು।
ತಟನೀಜಲಮಂದು ಗ್ರುಂಕಿತದ್ದಯು ಪ್ರೀತಿನ್॥
ದಿಟಮುಗ ಮುಣುಗುಲುಗಟ್ಟು ಚು।
ವಟಮೂಲಮುನಂದು ಗುರುಡುವಶಿಯಿಂಚಿತಗನ್॥

೧

ನಮಕಮು ರುದ್ರಮುತೋ ಗುರು।
ಡುಮಪತಿಕಿಂ ಷೋಡಶೋಪಚಾರೋತ್ತಮುಗಾ॥
ಕ್ರಮಮೊಪ್ಪಪೂಜಜೇಸೆನು।
ಯಮಿತೋನ್ನತ ವಟಮುಕ್ರಿಂದನಾನಂದಮುಗಾನ್॥

ಹೀಗೆ ಗುರುದೇವನು ವಟದಡಿಯಲ್ಲಿ ಆನಂದವಾಗಿ ಶಿವಪೂಜೆಯನ್ನು ಮಾಡುತ್ತಿರಲು ರಾತ್ರಿಯು ಬಹಳ ಕಳೆದಿದ್ದುದರಿಂದ ಪರಿವಾರವೆಲ್ಲವೂ ನಿದ್ರಿಸಿತು. ಆ ವೃಕ್ಷದಲ್ಲಿ ನಿದ್ರಾಪರಶನಾಗಿದ್ದ ಓರ್ವ ಬ್ರಹ್ಮರಾಕ್ಷಸನು ಪ್ರಬುದ್ಧನಾಗಿ ತನ್ನ ಸ್ಥಾನದಲ್ಲಿ ನಿರ್ಭಯವಾಗಿ ಪ್ರವೇಶಿದ ಇವರಂ ಕಬಳಿಸುವೆನೆಂದು ಕೃದ್ಧಭಾವದಿಂದ ಒಂದು ಪಾರ್ಶ್ವದಿಂದ ಮರವನ್ನಿಳಿದು ನಿದ್ರಾಲೋಲರಾದ ಪರಿವಾರವನ್ನೂ ಪೂಜಾಪರವಶನಾಗಿದ್ದ ಮಂಗಲಮೂರ್ತಿಯಾದ ಶಿವಯೋಗಿಯನ್ನೂ ನೋಡಿ ಜಾತಸ್ಮರನಾಗಿ ಸಂಸ್ಕಾರ ವಶದಿಂದ ಗುರುದೇವನ ಚರಣಾರವಿಂದಂಗಳಿಗೆರಗಿ ಪಾಪವಿಮುಕ್ತನಾಗಬೇಕೆಂದು ಬಯಸಿದವನಾಗಿ ಪೂಜಾಸಮಾಪ್ತಿಯನ್ನು ನಿರೀಕ್ಷಿಸುತ್ತಿದ್ದನು.

ಕಂ॥ ವೃಕ್ಷಮುಡಿಗಿ ವಾಡಪ್ಪುಡು।
ಸಾಕ್ಷಾನ್ನಿಟಿಲಾಕ್ಷುಬೋಲು ಸದ್ಗುರು ಮೂರ್ತಿ।
ನ್ವೀಕ್ಷಿಂಚಿ ಚಕ್ಷುಲಲರಗ।
ನಕ್ಷೀಣೋಲ್ಲಾಸುಡಗುಚುನವನೀಸ್ಥಲಿಪೈ॥

ಸಾಗಿಲಿಪ್ರೊಕ್ಕಿನವಾನಿಂ ।
ಯೋಗೀಂದ್ರುಡು ಚೂಚಿ ನೀವುಯುಗ್ರಾಕೃತಿತೋ ॥
ಲೋಗಕವಾಸ ಮುಖಮುನಕು ।
ಯೀಗತಿ ಜನುದೆಂಚುಟೇಪೊಯೆರುಗಿಂ ವುಮರ್ನೆ ॥

ಗುರುದೇವನ ಅಡಿದಾವರೆಯಲ್ಲಿ ಶಿರವಂ ನೀಡಿ ಶಾಪವಿಮುಕ್ತನಂ ಮಾಡಬೇಕೆಂದು ಬಗೆ ಬಗೆಯಿಂದ ಸ್ತುತಿಸುತ್ತಿರುವ ಅವನಂ ದಯಾರ್ದ್ರದೃಷ್ಟಿಯಿಂದೀಕ್ಷಿಸಿ ಇದೇನೆಂದು ಪ್ರಶ್ನಿಸಲು ಅವನು ತನ್ನ ಪೂರ್ವ ಚರಿತ್ರೆಯನ್ನು ಹೇಳಲುಪಕ್ರಮಿಸುವನು.

## ಬ್ರಹ್ಮರಾಕ್ಷಸನ ಪೂರ್ವಕಥಾ.

ನಾನು ಪೂರ್ವದಲ್ಲಿ ನಿಯಮನಿಷ್ಠನಾದ ಓರ್ವ ಋಷಿಯಾಗಿ ಒಂದು ಕಾನನದಲ್ಲಿ ಕಂದಮೂಲಾದಿಗಳನ್ನು ಭಕ್ಷಿಸುತ್ತ ಅನೇಕ ದಿವಸ ತಪವಂ ಗೈಯುತ್ತಿದ್ದೆನು. ಒಂದು ದಿನ ಒಂದು ಕೊಳದ ಸಮೀಪದಲ್ಲಿ ಸಂಚರಿಸುತ್ತಿರುವಾಗ್ಗೆ ಷೋಡಶಾಬ್ದ ಪ್ರಾಯಳಾದ ಓರ್ವ ಮುದ್ದು ಮೋಹಿನಿಯನ್ನು ನೋಡಿದೆನು. ಅವಳ ಅಂಗಸೌಷ್ಠವ, ಅನಿರ್ವಚನೀಯವಾದ ಲಾವಣ್ಯಾದಿಗಳನ್ನು ನೆಟ್ಟ ದೃಷ್ಟಿಯಿಂದೀಕ್ಷಿಸಿ ಮೋಹಪರವಶನಾದೆನು. ಒಂದು ಕ್ಷಣಮಾತ್ರದಲ್ಲಿಯೇ ನನ್ನ ಉಚ್ಚ ಆದರ್ಶವು ಧ್ಯೇಯವು ಮಾಯವಾಯಿತು. ಸದ್ವರ್ತನೆ, ಸದಾಶಿವಪೂಜಾಸಕ್ತಿಯಲ್ಲಿ ವಿರಸವೂ, ವಿಷಯಗಳಲ್ಲಭಿರುಚಿಯೂ, ಮೂಡತೊಡಗಿತು. ಮಾನರಕ್ಷಣೆಯ ಕಡೆಗೆ ಲಕ್ಷ್ಯವೇ ಇಲ್ಲವಾಯಿತು.

ಸೀ॥ ಸ್ನಾನ ಸಂಧ್ಯಾದ್ಯನುಷ್ಠಾನ ಮುಲ್ಪಾಡಾಯೆ । ನಾಪೇಕ್ಷದಾನಿಷ್ಠೆ ಅಧಿಕ ಮಾಯ । ತಪಮುಡವಿಪಾಲಾಯ ತಾಪಂಬುನೆಂಡಾಯ ಮಕ್ಕುವದಾನಿಷ್ಠೆಯೆಕ್ಕುವಾಯ । ನಿಷ್ಟಲಯೋಗಂಬು ಸೇಲಪಾಲೈಪೋಯ ಷಣತಿಷ್ಠೆ ಮೋಹಂಬುಬಲಿಯ ಮಾಯ । ಜಪನೂಲಯೆನ್ನಡೋಚಿಟ್ಲಪಾಲೈಪೋಯ ಚಿತ್ತಮಾಚಲಿಯಂದು ಚಿಕ್ಕಿಪೋಯ ।

ಸೀ॥ ಸುದತಿಯೊಕಮಾಟ ಕನ್ನೆತ್ತಿ ಚೂಡದಾಯ ।
ಪಲುಕರಿಂಚಿನನಾತೋಡ ಪಲುಕದಾಯ ॥
ಷಜ್ಜಕೇಗಿನದವ್ವುಲಬಾರಿ ಪೋಯ ।
ಮುದಿತಕೈತಮು ಜೆಡಿಪೋಯ ಮೋಸಮಾಯ ॥

ಕಂ॥ ಅನಿಮಿಷನಮುನಯೋ ಚಿಂತು ।
ಘನಮಗು ಮೋಹಂಬು ಚೇತ ಕಳವಳಪಡುಚುರ್ ॥
ವನಜಾನನನಾಕೋರಿಕೆ ।
ಕನುಕೂಲ ಮುಗಾಮಾಟಲಾಡುಮು ತರುಣೀ ॥

ಹೀಗೆ ತಪೋಭ್ರಷ್ಟನಾಗಿ ಅವಳಲ್ಲಿ ಜಾತಾನುರಾಗನಾಗಿರುತ್ತಿರಲು ಅವಳು ನನ್ನ ನಿಷ್ಕಲ್ಮಷ ಪ್ರೇಮವನ್ನು ತೃಣವಾಗಿ ಭಾವಿಸಿ ತನ್ನ ಕ್ರಿಯೆಗಳಂ ಮುಗಿಸಿಕೊಂಡು ಮುಂದೆ ನಡೆದಳು. ನಾನು ಮೋಹಾಂಧನಾದುದರಿಂದ ಪರಿಣಾಮವೇನಾಗುವುದೆಂದು ಅರಿಯದವನಾಗಿ ಅವಳನ್ನು ಹಿಂಬಾಲಿಸಿ ಮಾತನಾಡಲುಜ್ಜುಗಿಸಿದೆನು. ಆ ತರುಣಿಯು ಹಿಂತಿರುಗಿ ನನ್ನ ವಕ್ರತೆಯಿಂದ ಸರ್ವವಂ ತಿಳಿದವಳಾಗಿ ಕೋಪಗೊಂಡು ಎಲೈ ಕಪಟಿಯೆ, ನೀನು ಆಸುರೀಭಾವವಂ ತಾಳಿ ದೇವಕನ್ಯೆಯೂ ಪರವನಿತೆಯೂ ಆದ ನನ್ನನ್ನು ಪ್ರೀತಿಸಿದುದರಿಂದ ಬ್ರಹ್ಮರಾಕ್ಷಸನಾಗೆಂದು ಶಪಿಸಿದಳು. ಅಷ್ಟರಲ್ಲಿಯೇ ನನಗೆ ಜ್ಞಾನೋದಯವಾಗಿ ಮತ್ತೆ ಆಕೆಯ ಪಾದಗಳಿಗೆರಗಿ ಶಾಪವಿಮೋಚನವಂ ಮಾಡಬೇಕೆಂದು ಬೆಸಗೊಂಡೆನು. ಅವಳು ದಯಾಳುವಾದ್ದರಿಂದ ಕರುಣಿಸಿ "ಒಮ್ಮೆ ನೀನು ವಾಸವಾಗಿರುವ ಸ್ಥಳಕ್ಕೆ ಓರ್ವ ಮಹಾಮಹಿಮ ಪುರುಷನು ಬಂದು ನಿನ್ನ ಶಾಪವಂ ನೀಗುವನೆಂದುಸುರಿ ಅದೃಶ್ಯಳಾದಳು " ಆದುದರಿಂದ ನೀವಿಂದು ನನ್ನನ್ನುದ್ಧರಿಸಬೇಕೆಂದು ಬಹುವಾಗಿ ಪ್ರಾರ್ಥಿಸಿದನು.

ಆಗ ಗುರುದೇವನು ಅವನಲ್ಲಿ ಕರುಣವಂ ತೋರಿ ಇನ್ನು ಮೂರು ತಿಂಗಳೊಳಗಾಗಿ ನೀನು ಇದರಿಂದ ವಿಮುಕ್ತನಾಗುವೆಯೆಂದು ವರವಿತ್ತನು. ಅನಂತರ ಅವನು ಶ್ರೀಗುರುವಿನ ಸಮಸ್ತಪರಿವಾರವನ್ನು ಅವರು ಬಯಸಿದಲ್ಲಿಗೆ ತಾನೆ ಸಾಗಿಸುವುದಾಗಿಯೂ ಎಂದೆಂದಿಗೂ ಶ್ರೀಗುರುವಿನ ಭಕ್ತನಾಗಿರುವೆನೆಂದೂ ವಿಜ್ಞಾಪಿಸಿಕೊಂಡು ಹೊರಟುಹೋದನು.

ಅಲ್ಲಿಂದ ಶ್ರೀಯವರು ಬುಕ್ಕರಾಯ ಸಮುದ್ರವೆಂಬ ಗ್ರಾಮಕ್ಕೆ ಬಿಜಯಂಗೈದರು. ಅಲ್ಲಿನ ರೆಡ್ಡಿಗರೆಲ್ಲರೂ ಶ್ರೀಯವರನ್ನು ಎದುರ್ಗೊಂಡು ನಗರದಲ್ಲಿ ಮಹಾವೈಭವದಿಂದ ಉತ್ಸವವಂ ಮಾಡಿಸಿದರು. ಆಗ ಶ್ರೀಯವರ ಪ್ರಭಾವದಿಂದ ಅವರೆಲ್ಲರೂ ಲಿಂಗಧಾರಣೆಯನ್ನು ಮಾಡಿಕೊ

ಳ್ಳಬೇಕೆಂದು ಬಯಸಿದವರಾಗಿ ಶ್ರೀಯವರನ್ನು ಪ್ರಾರ್ಥಿಸಿಕೊಂಡರು. ಆದರಂತೆ ಶ್ರೀಗುರುವರ್ಯನು ಒಂದು ಕೂಷ್ಮಾಂಡವಂ ತರಿಸಿ ತಮ್ಮ ಹಸ್ತಸ್ಪರ್ಶದಿಂದ ಅದರಲ್ಲಿ ಉಂಟಾದ ಅನೇಕ ಲಿಂಗಗಳನ್ನೇ ಆ ಪಂಗಡದವರಿಗೆಲ್ಲ ದರಿಸಿ, ಉಪದೇಶವನ್ನಿತ್ತು ಅನುಗ್ರಹಿಸಿದರು.

ಗೀ॥ ವಾರುಕೋರಿನವೀರಕುವರುಸಗೂಡ ।
ವೀರಶೈವಾಗಮಾಚಾರ ವಿಧುಲ ರೀತಿ ॥
ಸುಲಲಿತಂಬುಗ ಕೂಶ್ಮಾಂಡ ಫಲಮ್ಮುನಂದು ।
ಗಲುಗುಲಿಂಗಂಬುಲನ್ನಿಯು ಗಟ್ಟಿಗುರುಡು ॥

ಶ್ರೀಗುರುವಿನಿಂದ ವೀರಶೈವಾಚಾರ ವಿಧಿಗಳನ್ನರಿತು ಅವರು ಒಂದು ಮಠವನ್ನು ಕಟ್ಟಿಸಿಕೊಡಲು ಶ್ರೀಯವರು ಓರ್ವ ವಟುವನ್ನು ಅಲ್ಲಿರಿಸಿ ಅವನಿಗೆ 'ಶಂಭು' ವೆಂದು ಹೆಸರಿಟ್ಟು ಆ ಜನಾಂಗದವರ ಹವ್ಯ ಕವ್ಯಾದಿಗಳನ್ನು ನೆರವೇರಿಸುತ್ತಿರುವಂತೆ ಆಜ್ಞಾಪಿಸಿದರು. ಅಲ್ಲಿಂದ ಮುಂದೆ ಹೋಗುತ್ತಿರಲು ಮಾರ್ಗದಲ್ಲಿ ಪೆನುಗೊಂಡೆಯಲ್ಲಿದ್ದ ಕೃಷ್ಣ ರಾಯನು* ಶ್ರೀಯರನ್ನು ಎದುರ್ಗೊಂಡು ಅರಮನೆಗೆ ಕರೆದುಕೊಂಡು ಹೋಗಿ ವಿಶೇಷವಾಗಿ ಸನ್ಮಾನಿಸುತ್ತಾನೆ. ಆಗ ಕೆಲವು ಜನರು ಕುಚೇಷ್ಟಾಪರರಾದ ಬ್ರಾಹ್ಮಣರು ಓರ್ವ ಬಧಿರನನ್ನು ಕರೆದು ತಂದು ಶ್ರೀಯವರಲ್ಲಿ ಶಾಸ್ತ್ರಾರ್ಥ ಮಾಡಲು ಬಿಡುತ್ತಾರೆ. ಅದನ್ನು ದಿವ್ಯದೃಷ್ಟಿಯಿಂದರಿತ ಶ್ರೀಗುರುವು ಅವನನ್ನನುಗ್ರಹಿಸಿ ಅವನ ಬಧಿರತ್ವವನ್ನು ಹೋಗಲಾಡಿಸುತ್ತಾರೆ. ಆಗ ಬ್ರಾಹ್ಮಣರು ಅವರ ಪ್ರಭಾವಕ್ಕೆ ಬೆರಗಾಗಿ ಅಪರಾಧಕ್ಕಾಗಿ ಕ್ಷಮೆಯಂ ಬೇಡುವರು. ರಾಜನು ಅಲ್ಲಿಯೇ ಒಂದು ಮಠವನ್ನು ಕಟ್ಟಿಕೊಡಲು ಅಲ್ಲಿ ಓರ್ವ ಮೂರ್ತಿಯನ್ನಿರಿಸುತ್ತಾರೆ. ರಾಜನು ಕ್ಷೀರಾಭಿಷೇಕಕ್ಕಾಗಿ ಅನೇಕ ಗೋವುಗಳನ್ನು ಹುಲ್ಲುಗಾವಲುಗಳನ್ನು ದಾನ ಮಾಡುತ್ತಾನೆ. ಅವೆಲ್ಲ ಅನಂತವಾಗಿ ಹೆಚ್ಚಿ ದೊಡ್ಡ ಮಂದೆಯಾಗುತ್ತವೆ. ಆ ಗುರುದೇವನು ಅವುಗಳನ್ನು ಕಾಪಾಡಲು ಓರ್ವ ವಟುವನ್ನು ನಿಯಮಿಸುತ್ತಾರೆ. ಅವನನ್ನು "ಕರುವಿನ ಮರುಳಯ್ಯ" ನೆಂದು ಜನರು ಕರೆಯುತ್ತಾರೆ. ಇದೇ ಸಮಯದಲ್ಲಿ ಶ್ರೀಸ್ವಾಮಿಯವರಿಗೂ 'ಶ್ರೀ ಮರುಲರಾಜೇಂದ್ರಗುರು' ವೆಂಬ ಅಭಿಧಾನವುಂಟಾಗುತ್ತದೆ.

---

* ಈ ಕೃಷ್ಣರಾಯನಾರೆಂಬುದು ತಿಳಿದುಬಂದಿಲ್ಲ.

ಅಲ್ಲಿಂದ ಸ್ವಾಮಿಯವರು ಹೊಸಕೆರೆ ಗ್ರಾಮಕ್ಕೆ ಬಂದು ಅಲ್ಲಿ ಕೆಲಕಾಲ ಲಿಂಗಾರ್ಚನಾಲೋಲರಾಗಿದ್ದು

ಗೀ॥ ಯುತ್ತಮಂ ಬೈನ ದಿನ ಮಂದು ಯೋಗ್ಯಡೈನ ।
ಪಂಡಿತಾರಾಧ್ಯವಂಶಡಿಂಭಕುನಿ ಬಿಲಿಚಿ ॥
ಹಸ್ತಮಸ್ತಕ ಸಂಯೋಗಮಾಚರಿಂಚಿ ।
ಪಟ್ಟಮುನುಗಟ್ಟಿ ಗುರುಮೂರ್ತಿ ದಿಟ್ಟಮುಗನು ॥

ಅನಂತರ ಸದ್ವಂಶೀಯನಾದ ಓರ್ವ ವಟುವಿಗೆ ಪಟ್ಟಾಭಿಷೇಕವಂ ಮಾಡಿ ಆತನಿಗೆ 'ಕರಿಬಸವಸ್ವಾಮಿಯವರೆ'' ಂದು ಅಭಿಧಾನವಿಟ್ಟು ಸದುಪದೇಶವಂ ಮಾಡಿ ಅಲ್ಲಿಯೇ ಶಿವಯೋಗ ಸಮಾಧಿಸ್ಥರಾದರು.

## ಶ್ರೀಕರಿಬಸವಸ್ವಾಮಿಗಳು.

ಸುಮಾರು ೧೬೫೫ ರಲ್ಲಿ ಇವರು ಈ ಪೀಠವನ್ನಲಂಕರಿಸಿದಂತೆ ತಿಳಿದುಬರುತ್ತದೆ. ಆಶ್ರಮವನ್ನು ಸ್ವೀಕರಿಸಿದ ನಂತರ ಆರ್ಯಗುರುಗಳ ಉಪದೇಶದಂತೆ ವೀರಶೈವ ಮತೋದ್ಧಾರಮಾಡಲುದ್ಯುಕ್ತರಾಗಿ ದೇಶ ಸಂಚಾರಕ್ಕೆ ಹೊರಡುತ್ತಾರೆ. ಮಧ್ಯಮಾರ್ಗದಲ್ಲಿ ಅನೇಕರಿಗೆ ಲಿಂಗ ಧಾರಣವನ್ನು ಮಾಡಿ ನೈಜಾಂ ಪ್ರಾಂತದಲ್ಲಿ ಪ್ರಸಿದ್ಧನಾಗಿದ್ದ 'ಹಂಡೆ ಹನುಮದ್ರಾವ್' ಎಂಬ ಶಿಷ್ಯನ ಪ್ರಾರ್ಥನೆಯಂತೆ ಹೈದರಾಬಾದಿನಲ್ಲಿ ಉತ್ಸವದೊಡನೆ ಹೊರಡುತ್ತಾರೆ. ಅನೇಕ ಮಹಮ್ಮದೀಯರು ಹಿಂದೂ ಫಕೀರನೆಂದು ಹೀಯಾಳಿಸುತ್ತಾ ಉತ್ಸವದಲ್ಲಿ ಬಹಳವಾದ ತೊಂದರೆಗ ಳನ್ನೊಡ್ಡುತ್ತಾರೆ. ಕರ್ಣಪರಂಪರೆಯಿಂದ ಈ ವಾರ್ತೆಯು 'ಪಾದುಷಹ' ರಿಗೆ ತಿಳಿದು ತಾವೇ ತನ್ನ ಆಪ್ತನಾದ 'ಹಂಡೆಹನುಮದ್ರಾಯ'ನ ಮನೆಗೆ ಬರುವುದಾಗಿಯೂ ಉತ್ಸವದಲ್ಲಿ ಯಾರೂ ತೊಂದರೆ ಪಡಿಸ ಬಾರದಾಗಿಯೂ ಹೇಳಿಕಳುಹಿಸುತ್ತಾನೆ.

ಬಾದುಶಹರು ಮಿತ್ರನಾದ ಹನುಮದ್ರಾಯನ ಗೃಹಕ್ಕೆ ಬಂದು ಶ್ರೀಯವರ ದರ್ಶನವನ್ನು ತೆಗೆದುಕೊಂಡು ಉಚಿತಾಸನದಲ್ಲಿ ಕುಳಿತು ಕೊಳ್ಳುತ್ತಾನೆ. ಮುಸಲ್ಮಾನ ಫಕೀರರೂ ಜನಸಂದಣಿಯೂ ಬಲವಾಗಿ ಸೇರಿರುವಲ್ಲಿ ರಾಜನು ಮಹಮ್ಮದೀಯ ಫಕೀರರಿಗೂ ಮತ್ತು ಹಿಂದೂ ಸನ್ಯಾಸಿಗಳಿಗೂ ಇರುವ ವ್ಯತ್ಯಾಸವನ್ನು ತಿಳುಹಿಸಲು ವಿಜ್ಞಾಪಿಸುತ್ತಾನೆ. ಆಗ ಸ್ವಾಮಿಯವರು "ಜಗತ್ತಿನ ಸಂರಕ್ಷಕ ದೇವನೊಬ್ಬನೇ ಎಂದೂ"

ಆವನನ್ನೇ ಮುಹಮ್ಮದೀಯರು 'ಅಲ್ಲಾಹೋ' ಎಂದೂ ಹಿಂದುಗಳು 'ಈಶ್ವರ' ಎಂದೂ ಅವನನ್ನು ಆರಾಧಿಸುವ ವಿಧಾನಗಳನ್ನುಪದೇಶಿಸುವವರನ್ನು ಮುಹಮ್ಮದೀಯರು 'ಫಕೀರ'ರೆಂದೂ ಹಿಂದುಗಳು 'ಸನ್ಯಾಸಿ'ಗಳೆಂದೂ ಕರೆಯುವರೆಂದೂ, ಅವರಿರುವ ಮಂದಿರಗಳನ್ನು ಮುಹಮ್ಮದೀಯರು 'ಮಸೀದೆ' ಎಂದೂ ಹಿಂದುಗಳು 'ಮಠ' ಅಥವಾ ದೇವಾಲಯ' ಮುಂತಾಗಿ ಕರೆಯುವರೆಂದೂ, ಇಬ್ಬರ ಉದ್ದೇಶವೂ ಒಂದೇ ಇದ್ದರೂ ಭಾಷಾ ಬೇರೆ ಎಂದೂ, ಇದಕ್ಕಾಗಿ ಕಲಹ ಮಾಡಬಾರದೆಂಬ ಅರ್ಥಕವಾದ ಒಂದು ಅತ್ಯಂತ ಮಹತ್ವಪೂರ್ಣವಾದ ಭಾಷಣವನ್ನೇ ಮಾಡುತ್ತಾರೆ. ಇದು ಇಂದಿನ ಹಿಂದೂ ಮುಸಲ್ಮಾನ ಐಕ್ಯದ ಬೀಗದ ಕೈಯಂತಿದೆ.

ಸೀ॥.........ಪಾದುಷಾಡಾಜಂಗಮಯ್ಯಕೋ ಹಿಂದೂ ಫಕೀರು ಪೇರೆಟುಲುಗಲಿಗೆ। ವಿನುಪಿಂಪುದನಿನಯಾ ಮನುಜೇಶ್ವರು ನಿಜೂಚಿವಿನುಡಿ ಸಂಪ್ರೀತಿಕೋವಿಶದಮುಗನು। ಮಾಯಂದು ಸನ್ಯಾಸಿ ಮಠಮು ನಿಯಂದುರುಮಿಾಯಂದು ಫಕ್ಕಿರ್ಲು ಮೆಲಗುಚುನ್ನ। ದಾನಿ ಮಸೀದಂ ಚುದಲತುರು ಕುರುಕುಲುಂ ಫಕ್ಕೀರು ಸನ್ಯಾಸಿ ಭಾವಮೊಗಟೆ

ಗೀ॥ ಅರ್ಥಮುಗುನಂಚು ಜೆಪ್ಪಿನ ಯುವನಿವಿಭುಡು।
ನ್ಯಾಯಪಾದುಲನಡಿಗಿ ನಯನಿರಿವಾರು ॥
ನೀರಿಲೋಯವರಿಯಂ ದೈನ ವಿಂತಯ್ಯೆನ।
ಮಹಿಮಜೂಪಿನ ವಾರತಿ ಪೂಜ್ಯುಲನಿರಿ ॥

ಹೀಗೆ ಗುರುಗಳ ವಾಕ್ಯವಂ ತಿಳಿದು ಸಂತುಷ್ಟನಾಗಿ ನ್ಯಾಯವಾದಿಗಳಂ ಕೇಳಲು ಅವರು ಶ್ರೀಯವರ ವಾಕ್ಯವು ದಿಟವೆಂದೂ ಹಾಗೆ ಯಾರಿಗಾದರೂ ಸಂಶಯವಿದ್ದರೆ ಯಾರು ತಮ್ಮ ಮಹಿಮೆಯನ್ನು ಪ್ರಕಟಿಸುವರೋ ಅವರೆ ಎಲ್ಲರಿಗೂ ಶ್ರೇಷ್ಠರೆಂದೂ ಹೇಳಿದರು. ಆಗ ಒಂದು ಅಗ್ನಿಕುಂಡದಲ್ಲಿ ಸರಪಳಿಯನ್ನು ಕಾಯಿಸಿ ಅದನ್ನು ಈಚೆಗೆ ತರಬೇಕೆಂದು ನಿರ್ಣಯ ಮಾಡಿದರು- ಫಕೀರರು ಇದಕ್ಕೆ ಸಮ್ಮತಿಸಲಿಲ್ಲ. ಅನಂತರ ಶ್ರೀಯವರ ಆಶೀರ್ವಾದವನ್ನು ಪಡೆದ ಓರ್ವ ಬಾಲಕನು ಕುಂಡದಲ್ಲಿಳಿದು "ಅಬ್ಜನಾಳಂಬು ಗೊನಿಕೆಚ್ಚು ಹಂಸರೀತಿ। ಪಟ್ಟುಕೊನಿಕೆಚ್ಚಿ ಗುರುಮೂರ್ತಿಪಾದಮುಲಕು। ಚಿಟ್ಟಿಸಾಗಿಲಿಪ್ರೊಕ್ಕೆನಾಪಿನ್ನವಾಡು"

ಇದನ್ನು ಕಣ್ಣಾರೆ ಕಂಡ ಸಮಸ್ತ ಜನರೂ ಆಶ್ಚರ್ಯಚಕಿತರಾಗಿ ಶ್ರೀಯವರ ಮಹಿಮೆಯನ್ನು ಕೊಂಡಾಡುತ್ತಾರೆ. ರಾಜನು ಅವರಿಗೆ ಕಾಟಿಪಾಗು, ಹಸುರು ಬಾವುಟ, ಸರಪಣಿ, ಮುಂತಾದ ತಮ್ಮ ಬಿರುದುಗಳನ್ನೂ ಅನೇಕ ಬಹುಮಾನಗಳನ್ನೂ ಕೊಡುತ್ತಾನೆ. ಅನಂತರ ಹಂಡೆ ಹನುಮದ್ರಾಯನಿಂದ ಪೂಜಿತರಾಗಿ ಮುಂದೆ ಅವನೊಡನೆ ಅನೇಕ ದೇಶಗಳನ್ನು ಸಂಚರಿಸುತ್ತಾ ದೆಹಲಿಯ ವರೆಗೂ ಸಂಚಾರಮಾಡಿ ಮತ್ತೆ ಹಿಂತಿರುಗಿ ವಿಜಾಪುರಕ್ಕೆ ಬಂದು ಅಲ್ಲಿಯೂ ಮುಸಲ್ಮಾನ ಅರಸನು ಪರೀಕ್ಷಾರ್ಥವಾಗಿ ಕಳುಹಿಸಿದ್ದ ಮಾಂಸ ಸುರೆ ಮುಂತಾದ ವಸ್ತುಗಳನ್ನು ನೋಡಿ ಅವೆಲ್ಲಾ ಮಾವಿನ ಹಣ್ಣು ಮತ್ತು ಜೇನು ಎಂದು ಹೇಳಿ ಕಳುಹಿಸುತ್ತಾರೆ. ಅದರಂತೆಯೆ ಆಗಿದ್ದುದನ್ನು ತಿಳಿದು ಅಲ್ಲಿಯ 'ಬಾದುಷಹ'ನು ಶ್ರೀಯವರಿಗೆ ಸನ್ಮಾನವನ್ನು ಮಾಡಿ,

ಕಂ॥ ಪಚ್ಚನಿಗೊಡುಗುಂಪಾಗಾ ।
ಪಚ್ಚಡಮುಂ ನೆಮಿಲಿಪಿಂಛ ಬಹುಮಾನಮುಗಾ ॥
ನಿಚ್ಚಿಮರಿಕೊಸ್ನಿಬಿರುದುಲು ।
ಹೆಚ್ಚುಗನರ್ಪಿಂ ಚಿಖಂಪೆಹಿಂದುವುಲಲರನ್ ॥

ಹಸುರು ಛತ್ರಿ, ಪಾಗು, ನವಿಲುಕುಂಚ ಮುಂತಾದ ಬಿರುದುಗಳನ್ನಿತ್ತು ಬೀಳ್ಕೊಟ್ಟನು.

ಅಲ್ಲಿಂದ 'ಯಾದಗಿರಿ'ಗೆ ಬಂದು ಅನೇಕ ಭಕ್ತರ ಇಷ್ಟಾರ್ಥದಂತೆ ಪೂಜೆಯಲ್ಲಿರಲು 'ವೀರಮಾಂಬ' ಎಂಬೋರ್ವ ಭಕ್ತಳು ಶ್ರೀಯವರಿಗೆ ವಿಶೇಷ ಭಕ್ತಿಯಿಂದ ಸೇವಾದಿಗಳನ್ನು ಮಾಡುತ್ತಾಳೆ. ಅವರು ಅಲ್ಲಿಂದ ಮುಂದೆ ಪ್ರಯಾಣ ಮಾಡುವಾಗ ಆಕೆಯು ಪ್ರತಿನಿತ್ಯವೂ ಧ್ಯಾನಿಸಿದಾಗ ಸ್ವಾಮಿಯ ದರ್ಶನವಾಗಬೇಕೆಂದು ಬೇಡುತ್ತಾಳೆ. ಶ್ರೀಯವರು 'ಭಸ್ಮ'ವನ್ನು ಅಭಿಮಂತ್ರಿಸಿಕೊಟ್ಟು ಇದನ್ನೊಂದು ಕಲಶದಲ್ಲಿಟ್ಟು ನಿಯಮದಿಂ ದರ್ಚಿಸುತ್ತಿದ್ದರೆ ಇಷ್ಟಾರ್ಥ ನೆರವೇರುವುದೆಂದುಸುರಿ ಮುಂದೆ ಹೊರಡುತ್ತಾರೆ. ಒಂದು ದಿನ ಆಕೆಯು ಪುಷ್ಪಾಹರಣಕ್ಕಾಗಿ ಹೊರಗೆ ಹೋಗಿದ್ದಾಗ "ಕಮಲಾಕ್ಷಿ" ಎಂಬ ಆಕೆಯ ಮಗಳು ಅದೇನೆಂಬುದನ್ನು ನೋಡಬೇಕೆಂಬ ಕುತೂಹಲದಿಂದ ಕಲಶವನ್ನು ತೆಗೆದು ನೋಡುತ್ತಾಳೆ. ಆದರೆ ತಕ್ಷಣ ಮೂರ್ಛಿತಳಾಗುತ್ತಾಳೆ. ಮಾತೆಯು ಬಂದು ನೋಡಿ

ನಿಜ ಗುರುವಂ ಧ್ಯಾನಿಸಿ ಮುಗಳಂ ಸಂತೈಸಿ ಕಲಶವು ಶೂನ್ಯವಾಗಿದ್ದು ದನ್ನು ನೋಡಿ ನಿರಾಶಳಾಗುತ್ತಾಳೆ.

ಶ್ರೀಯುವರು ಹಂಡೆಹನುಮದ್ರಾಯನನ್ನು ತಮ್ಮೊಡನೆ ಕರೆದು ಕೊಂಡು ಬಂದು 'ಅನಂತಪಟ್ಟಣ' ಈಗಿನ ಅನಂತಪುರದಲ್ಲಿ ರಾಜ ನನ್ನಾಗಿ ಮಾಡಿ ಜನರಿಗೆ ಆತನ ಶೀಲಸ್ವಭಾವ ವೀರ್ಯಾದಿಗಳನ್ನು ಪರಿ ಚಯ ಮಾಡಿಕೊಡುತ್ತಾರೆ. ಅವನೇ ಪ್ರಸಿದ್ಧನಾದ 'ಹಂಡೇರಾಜನು'. ಈಗಲೂ ಆ ಗ್ರಾಮಕ್ಕೆ 'ಹಂಡೆಅನಂತಪುರ'ವೆಂಬ ಹೆಸರಿದೆ; ಮತ್ತು ಆ ರಾಜನಗರದ ಅವಶೇಷಗಳೂ ಇಂದು ದೊರೆಯುತ್ತವೆ.

ಅನಂತರ ಶ್ರೀಯುವರು ಹೊಸಕೆರೆಗ್ರಾಮಕ್ಕೆ ಬಂದು ಕೆಲಕಾಲ ವಿದ್ದು ಓರ್ವ ಸದ್ವಂಶೀಯನಾದ ವಟುವಿಗೆ ಉತ್ತರಾಧಿಕಾರವನ್ನಿತ್ತು 'ಮರಿಕರಿಬಸವೇಶ್ವರಸ್ವಾಮಿ'ಯೆಂದು ಕರೆದು ಶಿಷ್ಯೋದ್ಧಾರ ಕಾರ್ಯ ವನ್ನು ಮುಂದುವರಿಸುವಂತೆ ಉಪದೇಶಿಸಿ ಅಲ್ಲಿಯೇ ಲಿಂಗೈಕ್ಯರಾಗುತ್ತಾರೆ.

---

# ಸುಗುಣ.

ಸುಗುಣ ಹಿರಿಯ ಮರವ ತೆರದಿ,
ಬೆಳೆದು ಬೆಳೆದು ಬಾಳ್ವುದಲ್ಲ,
ನರನ ನಡತೆಯಲ್ಲಿ ಅಡಗಿ,
ಸುರನ ಮಾಳ್ಪ ಚೆಲ್ವ ಗುಣವು.

ಮೂರು ನೂರು ವರುಷ ಬೆಳೆದು,
ತಿರೆಗೆ ಉರುಳಿ ಮುರಿದು ಕೊನೆಗೆ,
ಒಣಗಿ ಮಡಿದ ಜಾಲಿ ಮರದ
ಗುಣವು ಬಣಗು[೧] ಜಗಕೆ

ಜಾಜಿಯೊಂದು ದಿನದ ಕುಸುಮ,
ಇನಿದು ಕಂಪ ಸೊಂಪ ಬೀರಿ,
ಅಂದಿನಿರುಳೆ ಬಾಡಿ ಬೀಳ್ವುದು
ಬೆಳಕನೀವ ಮೊಳಕೆಯದುವೆ

ಅಲ್ಪ ಭಾಗದಲ್ಲೆ ನಾವು,
ಶಿಲ್ಪ[೨]--ಕಲೆಯ ಕಾಣಬಹುದು.
ಕಡಮೆಯುಳತೆಯಲ್ಲೆ ಗುಣವ,
ಕಡೆದು[೩] ಸಿದ್ಧರಾಗಬಹುದು.

*The noble nature B. Johnson*
ಭಾವಾನುವಾದ "ಅಮರನಾಣಿ"

೧ ಬಣಗು = ಕೀಳು, ಅಲ್ಪ, ನೀಚ (ಹ. ಣಿ.)
೨ ಶಿಲ್ಪ = ಕಲಾ, ನಾಣ್ಯದ ಕೆಲಸ (ಸಂ. ನಾ.)
೩ ಕಡೆದು – ಕೊರೆದು, ಚಿತ್ರಿಸಿ (ಹ. ಧಾ.)

# ಸಮಾಜವೂ ಮಠಗಳೂ.

ಲೇಖಕಃ—"ಅಮರವಾಣಿ" ಸಿದ್ಧಗಂಗಾ ಗುರುಕುಲ

ಭರತಖಂಡದ ಸಂಸ್ಕೃತಿಯು ಉಚ್ಚ ಶಿಖರದ ಕೋಟಿಯನ್ನು ಮುಟ್ಟಿದ್ದ ಕಾಲದಲ್ಲಿ ಸಮಾಜದ ಅಭಿವೃದ್ಧಿಯು ನಿರರ್ಗಳವಾಗಿ ನಡೆಯಲೆಂಬ ಉದ್ದೇಶದಿಂದ ಪ್ರಾಚೀನ ಮಹರ್ಷಿಯರು ಉತ್ತಮ ಶಿಕ್ಷಣವನ್ನು ಕೊಡಲಿಕ್ಕಾಗಿ 'ಗುರುಕುಲ' ಅಥವಾ 'ಮಠ'ಗಳನ್ನೇರ್ಪಡಿಸಿದರು. ಆದುದರಿಂದಲೇ ಸುಪ್ರಸಿದ್ಧ ನಿಘಂಟುಕಾರನಾದ ಅಮರಸಿಂಹನು "ಮಠಶ್ಛಾತ್ರಾದಿನಿಲಯಃ" ಎಂದು ಮಠ ಶಬ್ದಕ್ಕೆ ಟೀಕೆಯನ್ನು ಕೊಟ್ಟಿರುತ್ತಾನೆ. ಮಠಗಳೆಂದರೆ ವಿದ್ಯಾಮಂದಿರಗಳು. ಎಂತಹ ಮಹತ್ವವಾದ ವ್ಯಾಖ್ಯೆ! ವಿದ್ಯಾಪ್ರಚಾರವು ಭರತಖಂಡದಲ್ಲಿ ಮೊದಲಿನಿಂದಲೂ ಅತ್ಯುತ್ತಮ ಸ್ಥಿತಿಯಲ್ಲಿದ್ದಿತು. ತಕ್ಷಶಿಲಾ ನಲಂದ ಮುಂತಾದ ಸ್ಥಳಗಳಲ್ಲಿದ್ದ ವಿಶ್ವವಿದ್ಯಾಲಯಗಳಲ್ಲಿ ಚೀಣಾ ಜಪಾನ ಮುಂತಾದ ಪರರಾಷ್ಟ್ರಗಳಿಂದ ವಿದ್ಯಾರ್ಥಿಗಳು ಬಂದು ಇಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರೆಂದು ಸು. ೬೭೫ ರಲ್ಲಿ ಭರತಖಂಡವನ್ನು ಸಂಚರಿಸಿದ 'ಇತ್‌ಸಿಂಗ್' ಎಂಬುವನು ಉಲ್ಲೇಖಿಸಿರುತ್ತಾನೆ.

ಭಾರತೀಯರ ವಿದ್ಯಾಭಿಮಾನವು ಅನುಪಮವಾದುದು, ಅಮೂಲ್ಯವಾದುದು. ಖಗೋಳಶಾಸ್ತ್ರ, ಜ್ಯೋತಿಷ್ಯ, ಆಯುರ್ವೇದ, ಧನುರ್ವೇದ ಮುಂತಾದ ವೈಜ್ಞಾನಿಕ ವಿದ್ಯಾಭ್ಯಾಸವೂ ವೇದಾದಿ ಧರ್ಮಶಾಸ್ತ್ರಾಭ್ಯಾಸವೂ ಇಲ್ಲಿ ನೆಲೆಗೊಂಡಿದ್ದಿತೆಂಬುದಕ್ಕೆ ಭರತಖಂಡದ ಇತಿಹಾಸವೇ ಸಾಕ್ಷಿಯಾಗಿದೆ. ಇವುಗಳನ್ನು ನಡೆಯಿಸುತ್ತಿದ್ದವರು ಪರಿಣತ ತಪೋಧನರೂ ಪಂಡಿತರೂ ಆಗಿರುತ್ತಿದ್ದರೆಂಬುದಕ್ಕೆ ಅನೇಕ ನಿದರ್ಶನಗಳಿವೆ. ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಅನ್ನವಸ್ತ್ರಾದಿಗಳನ್ನಿತ್ತು ವಿದ್ಯಾಭ್ಯಾಸ ಮಾಡಿಸುತ್ತಿದ್ದವರಿಗೆ 'ಕುಲಪತಿ' (*Vice Chancellor*) ಎಂಬ ಉಪಾಧಿಯು ಇರುತ್ತಿದ್ದಿತೆಂದು ಪ್ರಾಮಾಣಿಕ ಉಕ್ತಿಯಿದೆ.

ಕರ್ನಾಟಕದಲ್ಲಿಯೂ ಇಂತಹ ಅನೇಕ ಸಂಸ್ಥೆಗಳಿದ್ದುವು. ಅವುಗಳು ವಿಶೇಷವಾಗಿ ಮಠಗಳಲ್ಲಿಯೇ ಸ್ಥಾಪಿತವಾಗಿದ್ದುವೆಂಬುದಾಗಿ

ತಿಳಿದುಬರುತ್ತದೆ. ಪ್ರಾಕ್ತನ ವಿಮರ್ಶವಿಚಕ್ಷಣೇತ್ಯಾದಿ ಬಿರುದಾಂಕಿತರಾದ ದಿ. ಆರ್. ನರಸಿಂಹಾಚಾರ್ಯರವರು ತಾ. ೧೮-೯-೩೨ ರಲ್ಲಿ ಶ್ರೀಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಮಾಡಿದ ಭಾಷಣದಲ್ಲಿ ಹೀಗೆ ಹೇಳಿದ್ದಾರೆ. ಶಿವಮೊಗ್ಗ ಜಿಲ್ಲೆಯ ಬೆಳ್ಗಾವಿ ಎಂಬ ಗ್ರಾಮದಲ್ಲಿರುವ ಶ್ರೀಕೇದಾರೇಶ್ವರ ದೇವಸ್ಥಾನಕ್ಕೆ ಸಂಬಂಧಿಸಿದ ಕೋಡಿಯ ಮಠದಲ್ಲಿ ಒಂದು ಪಾಠಶಾಲೆಯಿದ್ದಂತೆ ಒಂದು ಶಾಸನದಿಂದ ತಿಳಿದು ಬರುತ್ತದೆ. ಅದರಲ್ಲಿ ಮಠದ ವರ್ಣನೆ ಹೀಗಿದೆ. "ಕುಮಾರ ಪಾಣಿನೀಯ ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣ ವ್ಯಾಖ್ಯಾನ ಸ್ಥಾನಮುಂ ನ್ಯಾಯವೈಶೇಷಿಕ ಮೀಮಾಂಸಾ ಸಾಂಖ್ಯಬೌದ್ಧಾದಿ ಷಡ್ದರ್ಶನ ವ್ಯಾಖ್ಯಾನ ಸ್ಥಾನಮುಂ, ಲಾಕುಳ ಸಿದ್ಧಾಂತ ಪಾತಂಜಳಾದಿ ಯೋಗ ಶಾಸ್ತ್ರ ವ್ಯಾಖ್ಯಾನ ಸ್ಥಾನಮುಂ, ಅಷ್ಟಾದಶ ಪುರಾಣ ಧರ್ಮ ಶಾಸ್ತ್ರ ಸಕಲ ಕಾವ್ಯ ನಾಟಕ ಸಾಹಿತ್ಯಾದಿ ವಿವಿಧ ವಿದ್ಯಾಸ್ಥಾನಮುಂ, ದೀನಾನಾಥ ಪಂಗ್ವಂಧ ಬಧಿರ ಕಥಕ ಗಾಯಕ ವಾದಕ ವಾಂಶಿಕ ನರ್ತಕ ವೈತಾಳಿಕ ನಗ್ನಭಗ್ನ ಕ್ಷಪಣಕೈಕ ದಂಡಿ ತ್ರಿದಂಡಿ ಹಂಸ ಪರಮ ಹಂಸಾದಿ ನಾನಾ ದೇಶಭಿಕ್ಷುಕ ಜನಾನಿವಾರ್ಯ್ಯಾಗ್ನದಾನಸ್ಥಾನಮುಂ, ನಾನಾನಾಥ ರೋಗಿ ಜನರೋಗ ಭೈಷಜ್ಯಸ್ಥಾನಮುಂ, ಸಕಲ ಭೂತಾಭಯಪ್ರದಾನ ಸ್ಥಾನಮುಮಾಗಿ ಕೋಡಿಯ ಮಠಮಿರ್ಪುದು."

ಕರ್ನಾಟಕದಲ್ಲಿಯ ಮಠಗಳ ಸ್ಥಾಪನೆಯ ಧ್ಯೇಯದ ವಿಷಯದಲ್ಲಿ ಇದೊಂದು ನಿದರ್ಶನವಾಗಿದೆ. ಇದಲ್ಲದೆ ವೀರಶೈವ ಮಠಾಚಾರ್ಯರಾದವರು ತಮ್ಮ ಮಠಗಳಲ್ಲಿ ಮತ್ತೊಂದು ಉಚ್ಚತರಗತಿಯ ಶಿಕ್ಷಣವನ್ನೂ ಏರ್ಪಡಿಸಿದ್ದರು. ಧಾರ್ಮಿಕ ಮತ್ತು ಲೌಕಿಕ ವಿದ್ಯಾಭ್ಯಾಸವನ್ನು ಮಾಡಿಸಿ ಸಮಾಜವನ್ನು ಧಾರ್ಮಿಕ ಶ್ರದ್ಧೆಯಕಡೆಗೆ ಪ್ರಬೋಧಗೊಳಿಸಲು ಮಠಗಳ ಪದ್ಧತಿಯನ್ನು ರೂಢಿಗೆ ತಂದಂತೆ ಕಂಡುಬರುತ್ತದೆ. ಇವುಗಳ ಸಂಚಾಲಕರು ಸಂಯಮಿಗಳೂ ಸುಜ್ಞಾನಿಗಳೂ ಆಗಿರಬೇಕೆಂದೂ, ಅವರು ನಿರಂತರವೂ ಸಮಾಜದ ಧಾರ್ಮಿಕ ನೈತಿಕ ಮತ್ತು ಸಾಮಾಜಿಕ ಸುಧಾರಣೆಯಲ್ಲಿಯೇ ನಿರತರಾಗಿರಬೇಕೆಂದೂ ಏರ್ಪಡಿಸಿದ್ದರು.

ಆತ್ಮಜ್ಞಾನಸಾಗರದ ಸಾರವನ್ನರಿತ ಈ ಮಹನೀಯರು ತಮ್ಮ ಅನುಷ್ಠಾನ, ಅನುಭವಗಳಿಂದ ಸಮಾಜಕ್ಕೆ ಆದರ್ಶಪ್ರಾಯರಾಗಿದ್ದು

ನೈತಿಕ ತಳಹದಿಯ ಮೇಲೆ ದೈವಭಕ್ತಿಯನ್ನು ಪ್ರತಿಷ್ಠಿಸಿ ಆತ್ಮಜ್ಞಾನವನ್ನು ಬೆಳೆಯಿಸ ತೊಡಗಿದರು. ಅದು ಕ್ರಮಕ್ರಮವಾಗಿ ಅಭಿವೃದ್ಧಿಯನ್ನು ಪಡೆದು ತನ್ನ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲವೆಂದರೆ ೧೨-೧೫ನೆಯ ಶತಮಾನಗಳ ಮಧ್ಯದೆಶೆಯೆಂದು ಕಾಣುತ್ತದೆ. ಅಲ್ಲಿನ ವರೆಗೆ ಕರ್ನಾಟಕದಲ್ಲಿ ವೀರಶೈವರ ನಾನಾ ಮುಖವಾದ ಸಾಹಿತ್ಯವು ಬೆಳೆದು ಕನ್ನಡದ ಕಾಂತಿಯನ್ನು ಬೆಳಗಿಸಿತು. ಉಪನಿಷತ್ಕಾಲದ ತತ್ವಸಾರವು ವಚನಗಳಲ್ಲಿ ಪ್ರವಹಿಸಿತು. ವಚನ ಮಣಿಮಾಲೆಯಿಂದ ಭೂಷಿತಳಾದ ಕರ್ನಾಟಕಾಂಬೆಯು ತೇಜೋವಿರಾಜಮಾನಳಾಗಿ ಪ್ರಕಾಶಿಸಿದಳು. ಇವರು ರಚಿಸಿಕೊಂಡಿದ್ದ ಶಿವಾನುಭವ ಮಂಟಪವು ಆಬಾಲ ಭೂಪಾಲ ಪರ್ಯಂತವೂ ವ್ಯಾಪಿಸಿ ದಿವ್ಯಜ್ಞಾನವನ್ನು ದಾನ ಮಾಡುವುದರ ಮೂಲಕ ಸಂಸಾರ ಸಂತಪ್ತಜೀವಿಗಳನ್ನುದ್ಧರಿಸಿತು. ಮತ್ತೊಂದು ಕಡೆ ಪುರಂದರದಾಸ, ಕನಕದಾಸ ಮುಂತಾದವರ ಮಹಾತ್ಮರ ಸೂಕ್ತಿ ಸುಧೆಯು ಪ್ರವಹಿಸ ತೊಡಗಿತು. ಮಹಾತ್ಮ ಗೌತಮ ಬುದ್ಧ ಮೊದಲಾದವರಿಂದ ಪ್ರಾರಂಭಿಸಲ್ಪಟ್ಟ ಧ್ಯೇಯವು ಕಾರ್ಯಮುಖವಾಗಿ ಪರಿಣಮಿಸಿತು.

ಹೀಗೆ ಸಮಾಜಕ್ಕೂ ಮಠಗಳಿಗೂ ಅತಿ ನಿಕಟಸಂಬಂಧವದೆ. ಸಮಾಜದ ಸಂಸ್ಕರಣಕ್ಕಾಗಿ ಮಠಗಳು ನಿರ್ಮಿತವಾಗಿರುವುವಲ್ಲದೆ ಕೆಲವು ವ್ಯಕ್ತಿಗಳ ಧೋರಣಕ್ಕಾಗಿ ಅಲ್ಲವೆಂಬುದು ಯಥಾರ್ಥವಾದುದು. ಭರತಖಂಡದ ಮಠಗಳೂ, ಮಠಾಧಿಪತಿಗಳೂ ಜಗತ್ತಿಗೆ ಮಾದರಿಯಾಗಿಯೂ, ಮಾನ್ಯರಾಗಿಯೂ ಇದ್ದರೆಂದು ಹೇಳಲು ಹೆಮ್ಮೆಪಡುವಂತಿತ್ತು.

ಆದರೆ " ನೀಚೈರ್ಗಚ್ಛತ್ಯುಪರಿ ಚ ದಶಾಚಕ್ರನೇಮಿಕ್ರಮೇಣ " 'ಚಕ್ರದ ಅಂಚು ಕೆಳಕ್ಕೂ ಮೇಲಕ್ಕೂ ಹೋಗುತ್ತಿರುವು' ದೆಂಬ ಕವಿಶಿರೋಮಣಿಯಾದ ಕಾಳಿದಾಸನ ಉಕ್ತಿಯಂತೆ ಭರತಖಂಡದ ಮಠಗಳ ಸ್ಥಿತಿಯು ಶೋಚನೀಯಾವಸ್ಥೆಯನ್ನು ಪಡೆದು ಹಿಂದೂಧರ್ಮದ ಅಧಃಪತನವು ಆವಿರ್ಭವಿಸಿತು. ಅನೇಕರು ಮತಾಂಧರೂ ಕರ್ತವ್ಯವಿಮುಖರೂ ವಿಲಾಸ ತತ್ಪರರೂ ಆದ ವ್ಯಕ್ತಿಗಳು ಹೆಚ್ಚಿ ಇಂದಿನ ಹಿಂದೂ ಸಮಾಜವು ಅನೈಕ ಮತ್ಯದ ಗ್ರಂಥಿಯಾಗಿ ಬಿಡಿಸಲಸದಳವಾಗಿದೆಯೆನ್ನಲು ವಿಷಾದವೆನಿಸುತ್ತದೆ. ಈ ವ್ಯಾಧಿಯು ಕೇವಲ ವೈದಿಕರಲ್ಲಿ ಅಥವಾ ಮಠಾಧಿಪತಿಗಳಲ್ಲಿಯೇ ಇದೆ ಯೆಂದು ಹೇಳಲು

ಬರುವಂತಿಲ್ಲ. ಏಕೆಂದರೆ ಅನೇಕ ಲೌಕಿಕ ವಿಚಕ್ಷಣರಲ್ಲಿಯೂ ಶ್ರೀಮಂತರಲ್ಲಿಯೂ ಇದು ವ್ಯಾಪಿಸಿದೆ. ಅನೇಕ ಮಹಾತ್ಮರು ಇಡೀ ಭಾರತದಲ್ಲಿ ಐಕ ಮತ್ಯವನ್ನು ಸ್ಥಾಪಿಸಲು ಸರ್ವಸ್ವವನ್ನೂ ತ್ಯಾಗ ಮಾಡಿ ಹೆಣಗುತ್ತಿರುವಾಗ ವೀರಶೈವ ಪ್ರಮುಖರು ಅಂಥರಂತೆ ಪಕ್ಷಗಳನ್ನು ಸ್ಥಾಪಿಸಿ ವೀರಶೈವ ಕಲ್ಪತರುವಿನ ಮೂಲವನ್ನುಚ್ಛೇದಿಸಹತ್ತಿರುವುದು ವಿಷಾದಕರವೂ ಹೇಯವೂ ಆಗಿದೆಯೆನ್ನಲು ಸಂದೇಹವಿಲ್ಲ. ಎಲ್ಲಿಯವರೆಗೆ ವೀರಶೈವ ಮಠಾಧಿಪತಿಗಳೂ ವಿದ್ವಾಂಸರೂ ನೇತೃಗಳೂ ಇದಕ್ಕೆ ಮೂಲಭೂತವಾದ ತಾಯಿಬೇರನ್ನು ಛೇದಿಸಲು ಯೋಗ್ಯವಾದ ಶಿಕ್ಷಣ ಪದ್ಧತಿಯನ್ನು ಸಮಾಜದಲ್ಲಿ ಸ್ಥಾಪಿಸುವುದಿಲ್ಲವೋ ಅಲ್ಲಿಯ ವರೆಗೆ ವೀರಶೈವ ಸಮಾಜವು ತನ್ನ ಗತವೈಭವ ಶಿಖರವನ್ನು ದೃಷ್ಟಿಸಲು ಸಹ ಅಸಮರ್ಥವಾದುದು.

ಇಂದಿನ ಅಣುಗರೇ ಮುಂದಿನ ತರುಣರು. ಅವರೇ ನಾಡಿನ ಪ್ರಜೆಗಳೂ ಹಾಗೂ ಪ್ರಮುಖರೂ ಆಗುವರು. ಈಗಿನ ಕಲುಷಿತ ವ್ಯಕ್ತಿಗಳ ಕುಸಂಸ್ಕೃತಿಯು ನಷ್ಟವಾಗಿ ಪುನಃ ಸೃಷ್ಟಿಯ ವ್ಯಕ್ತತೆಯಾಗಬೇಕು ಸುಸಂಸ್ಕೃತಿಯು ಮಕ್ಕಳಿಂದಲೆ ಅಭ್ಯಾಸಕ್ಕೆ ಬರಬೇಕು. ಆದುದರಿಂದ ಮಕ್ಕಳಿಗಾದರೂ ಸರಿಯಾದ ಧಾರ್ಮಿಕ ಹಾಗೂ ಲೌಕಿಕ ಶಿಕ್ಷಣವನ್ನು ಕೊಡಿಸಿದಲ್ಲಿ ಮುಂದಿನ ಜನಾಂಗವು ತನ್ನ ಹಿಂದಿನ ವೈಭವವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

ಸಮಾಜವು ತೀವ್ರಗಾಮಿಯಾಗಿ ಧಾವಿಸುತ್ತಿರುವಲ್ಲಿ ವೀರಶೈವ ಸಮಾಜವು ಸುಪ್ತಾವಸ್ಥೆಯಲ್ಲಿರುವುದು ಲಜ್ಜಾಸ್ಪದವೇ ಸರಿ. ಅದನ್ನು ಸುಧಾರಿಸುವುದು ಆ ಮತದಲ್ಲಿನ ವಿದ್ಯಾವಂತರ ಮತ್ತು ಮಠಾಧಿಪತಿಗಳನ್ನು ಸೇರಿದುದು. ಹಿಂದೂ ದೇಶದಲ್ಲಿರುವ ಎಲ್ಲ ಅವಾಂತರ ಪಂಗಡಗಳೂ ಸುಸಂಸ್ಕೃತವಾಗಿ ಒಂದು ಧ್ಯೇಯಸಾಧನೆಯಲ್ಲಿ ಕೂಡಿ ಮಾಡಬೇಕಾದ ಕರ್ತವ್ಯ ಮಾಲೆಯು ನಮ್ಮೆದುರಿಗೆ ನಿಂತಿದೆ. ಆದುದರಿಂದ ಎಲ್ಲ ಸಮಾಜಗಳೂ ಆಂತರಿಕ ಭಿನ್ನಭೇದಗಳನ್ನು ಮರೆತು ಪ್ರಗತಿಯ ಮಾರ್ಗದಲ್ಲಿ ನಡೆಯಲು ಉತ್ತಮ ಶಿಕ್ಷಣವನ್ನು ಪಡೆಯಬೇಕಾಗಿದೆ.

ಇಂದು ಈ ವಿಧವಾದ ಆದರ್ಶ ಶಿಕ್ಷಣವನ್ನು ಕೊಡಲು ವೈದಿಕ ಯುಗದ 'ಗುರುಕುಲ ಶಿಕ್ಷಣ ಪದ್ಧತಿ' ಯೇ ಸಮರ್ಥವಾದುದೆಂದು ಅನೇಕ ಸುಧಾರಣಾ ವಿಚಕ್ಷಣರು ಹೇಳುತ್ತಿದ್ದಾರೆ. ಗುರುಕುಲ ಶಿಕ್ಷಣ ಪದ್ಧತಿಯು ನೀತಿನಿಯಮಗಳು ಆದರ್ಶವಿದ್ವಾಂಸರನ್ನು ತಯಾರಿಸಲು ಸಾಧಕಗಳಾಗಿವೆಯೆಂಬುದು ಅನುಭವಕ್ಕೆ ಬರುತ್ತಿದೆ. ಅಂತಹ ಶಿಕ್ಷಣವು ಲುಪ್ತವಾದುದರಿಂದಲೇ ನಮಗಿಂದು ಇಂತಹ ಸ್ಥಿತಿಯು ಪ್ರಾಪ್ತವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು.

---

# ಸ್ವಾದಿ ಅರಸುಮನೆತನದ ಇತಿಹಾಸ.

[ಟೀಪು:--ಕೆಳಗೆ ಕಾಣಿಸಿದ ಸ್ವಾದಿ ಅರಸರ ಇತಿಹಾಸವನ್ನು ಅದರ ಅಧಿಪತಿಗಳಾದ ಕೈ. ವಾ. ಸವಾಯಿ ವೀರ ಸದಾಶಿವರಾಜೇಂದ್ರ ಒಡೆಯರ್ ಬಹಾದ್ದೂರವರು ಸ್ವತಃ ಸಿದ್ಧಪಡಿಸಿದ್ದು ಇದೆ. ಇದನ್ನು ಅವರು ತಮ್ಮ ಮನೆತನದಲ್ಲಿ ದೊರೆದ ಆಧಾರಗಳಿಂದ ಇಂಗ್ಲಿಷದಲ್ಲಿ ಮೊದಲು ಬರೆಯಿಸಿದ್ದರು. ಇದರ ಪ್ರತಿಯನ್ನು ಅವರು ನನ್ನಕಡೆಗೆ ಸುಮಾರು ೧೫-೨೦ ವರ್ಷಗಳ ಹಿಂದೆ ಕಳುಹಿಸಿಕೊಟ್ಟಿದ್ದರು. ಸ್ವಾದಿಯ ಅರಸರ ವಿವರಣೆಗಳು ಅನೇಕಸಲ ಶಿವಾನುಭವದಲ್ಲಿ ಬಂದಿರುತ್ತವೆ. ಆದರೆ ಅವು ಮುಖ್ಯವಾಗಿ ಯುರೋಪಿಯನ್ನ ಪ್ರವಾಸಿಗರ ಲೇಖಗಳನ್ನವಲಂಬಿಸಿ ಬರೆದವುಗಳಾಗಿವೆ. ಈ ರಾಜಮನೆತನದ ಪುರಾತನ ಸಾದ್ಯಂತ ವೃತ್ತಾಂತಗಳು ಇನ್ನೂ ನಮಗೆ ಉಪಲಬ್ಧವಾಗಿಲ್ಲ. ಆದರೆ ಕೆಳದಿಯ ಅರಸರ ಪುರಾತನ ಚರಿತ್ರೆಗಳು ಅನೇಕ ಉಪಲಬ್ಧವಿವೆ. ಇದೇ ಬಗೆಯ ಚರಿತ್ರೆಗಳು ಸ್ವಾದಿಯ ಅರಸರವೂ ಇದ್ದುದಾಗಿ ಅನೇಕರು ನಮಗೆ ತಿಳಿಸುತ್ತ ಬಂದಿದ್ದಾರೆ. ಆದರೆ ಅವುಗಳು ನಮಗೆ ಇನ್ನೂ ದೊರೆತಿರುವದಿಲ್ಲ. ನಾವು ಮೇಲೆ ಉಲ್ಲೇಖಿಸಿದ ಸದಾಶಿವರಾಜೇಂದ್ರ ಒಡೆಯರವರು ತಮ್ಮಲ್ಲಿದ್ದ ಅನೇಕ ಸನದುಗಳನ್ನು ನನಗೆ ಸುಮಾರು ೨೫ ವರ್ಷಗಳ ಹಿಂದೆ ತೋರಿಸಿದ್ದರು. ಇವುಗಳು ವಿಜಾಪುರ ಮತ್ತು ಮೊಗಲ್ ಬಾದಶಹರು ಕೊಟ್ಟವುಗಳಾಗಿದ್ದವು. ಅವುಗಳಲ್ಲಿ ಅನೇಕ ಮಹತ್ವದ ಐತಿಹಾಸಿಕ ವಿಷಯಗಳು ಇದ್ದದ್ದು ನನ್ನ ನೆನಪಿಗೆ ಬರುತ್ತಿದೆ. ಆಗ ಅವುಗಳನ್ನು ರಾಜರು ನನಗೆ ಓದಿ ತೋರಿಸಿದರೂ ಅವುಗಳ ಟಿಪ್ಪಣೆಗಳನ್ನು ನಾನು ಮಾಡಿಕೊಳ್ಳದೆ ಇದ್ದದ್ದಕ್ಕೋಸ್ಕರ ನಾನು ವಿಷಾದಿಸುತ್ತೇನೆ. ಅವು ಇನ್ನೂ ಈಗಿನ ರಾಜರ ಮನೆತನದಲ್ಲಿ ಇರಬಹುದು. ಆದರೆ ಈಚೆಗೆ ಈ ರಾಜಮನೆತನದಲ್ಲಿ ದುರ್ದೈವದಿಂದ ಅನೇಕ ವಿಪರೀತಗಳು ಸಂಭವಿಸಿರುತ್ತವೆ. ಆದ್ದರಿಂದ ಅವುಗಳನ್ನು ಶೋಧಿಸುವದು ದುಸ್ತರವಾಗಿದೆ. ಆದರೂ ಅವುಗಳನ್ನೂ ರಾಜರಲ್ಲಿರುವ ಬೇರೆ ಐತಿಹಾಸಿಕ ಕಾಗದಪತ್ರಗಳನ್ನೂ ಸಂಶೋಧಿಸುವದು ಬಹು ಮಹತ್ವದ್ದಾಗಿರುತ್ತದೆ. ಸ್ವಾದಿರಾಜರ ಪುರಾತನ ಐತಿಹಾಸಿಕ ಕಾವ್ಯಗಳೂ ಕೂಡ ಕಾರವಾರ ಜಿಲ್ಲೆಯಲ್ಲಿ ಹುಡುಕಿದರೆ ಸಿಕ್ಕಬಹುದು. ಕರ್ನಾಟಕ ಇತಿಹಾಸದ

ಸಂಶೋಧಕರು ಈ ಎಲ್ಲ ವಿಷಯುಗಳನ್ನು ಲಕ್ಷಿಸಬೇಕೆಂದು ನನ್ನ ಸವಿನಯು ವಿನಂತಿ ಇದೆ. —ಸಂಪಾದಕ]

## ಸ್ವಾದಿಯು ಅರಸರ ಇತಿಹಾಸ.

ವಿಜಯುನಗರದ ರಾಜ್ಯವು ೧೩ ನೇ ಶತಮಾನದ ಮಧ್ಯದಲ್ಲಿ ಹುಕ್ಕಬುಕ್ಕರೆಂಬ ಇಬ್ಬರು ಸಹೋದರರಿಂದ ಸ್ಥಾಪಿತನಾಗಿ ದಕ್ಷಿಣ ಹಿಂದುಸ್ತಾನದಲ್ಲೆಲ್ಲ ಅದರ ಆಡಳತೆಯು ಪಸರಿಸಿತು. ಇಷ್ಟೇ ಅಲ್ಲ, ಅದು ಬಹುಕಾಲದವರೆಗೆ ಮುಂಬಯಿ ಇಲಾಖೆಯ ದಕ್ಷಿಣ ಭಾಗವನ್ನು ಸಹ ವ್ಯಾಪಿಸಿತು. ಈ ಉಭಯು ಸಹೋದರರು ಬಹು ಸಾಹಸಿಗರೂ ಧೈರ್ಯಶಾಲಿಗಳೂ ಆಗಿದ್ದರು. ಅವರ ವಂಶವು ಅವರ ತಂದೆಯ ಹೆಸರಿನಿಂದ 'ಸಂಗಮವಂಶ' ಎಂದು ಕರೆಯಲ್ಪಡುತ್ತಿದ್ದಿತು. ಈ ರಾಜರು ೯ ಜನರು ಇದ್ದು ಅವರು ೧೩೩೬ರಿಂದ ೧೪೭೮ ರ ವರೆಗೆ ಬಹು ವೈಭವದಿಂದ ಆಳಿದರು.

ಸಂಗಮವಂಶವು ನಷ್ಟವಾದ ಬಳಿಕ ಸಾಳುವ ವಂಶದವರು ವಿಜಯುನಗರದಲ್ಲಿ ರಾಜ್ಯವಾಳತೊಡಗಿದರು. ಇವರ ಕಾಲವು ೧೪೭೬ರಿಂದ ೧೪೯೦ರವರೆಗೆ ಇದೆ.

ಸಾಳುವ ವಂಶದ ತರುವಾಯ ತುಳುವ ದೇಶದವರಾದ ನರಸಿಂಗ ವಂಶದವರು ೧೪೯೬ ರಿಂದ ೧೫೬೭ ರವರೆಗೆ ಆಳಿದರು. ಇದರಲ್ಲಿ ೬ ಜನ ಅರಸರಿದ್ದು ಇವರಲ್ಲಿ ನಾಲ್ಕನೆಯುವನಾದ ರಾಮರಾಜನು ವಿಜಯುನಗರದಲ್ಲಿ ಆಳಿದ ಅರಸರಲ್ಲಿ ಕಡೆಯುವನು. ಇವನ ತರುವಾಯ ಅವನ ಮನೆತನದವರು ೧೬೪೪ ರವರೆಗೆ ಪೆನುಕೊಂಡೆಯಲ್ಲಿ ಆಳುತ್ತಿದ್ದರು.

ವಿಜಯುನಗರದ ಅರಸರಲ್ಲಿ ಅತ್ಯಂತ ಪ್ರತಾಪಶಾಲಿಯಾದ ಕೃಷ್ಣರಾಜನ ತಂದೆಗೆ ಮಕ್ಕಳಿದ್ದಿಲ್ಲ. ಅವನು ತನಗೆ ಮುಂದೆ ಮಕ್ಕಳಾಗಲಿಕ್ಕಿಲ್ಲೆಂದು ತಿಳಿದು ತನ್ನ ತಂಗಿಯ ಮಗನಾದ ಅರಸಪ್ಪ ರಾಜನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಆದರೆ ಅವನಿಗೆ ಮುಂದೆ ಕೃಷ್ಣರಾಜನೆಂಬ ಮಗನು ಹುಟ್ಟಿದ್ದರಿಂದ ಈ ಅರಸಪ್ಪರಾಜನು ಪಟ್ಟವೇರುವದು ನಿಂತಿತು. ಆದರೆ ಕೃಷ್ಣರಾಜನು ತನ್ನ ತಂದೆಗೆ ವಚನಕೊಟ್ಟ ಪ್ರಕಾರ ಅರಸಪ್ಪ ರಾಜನನ್ನು ಸ್ವಾದೀಸೀಮೆಗೆ ಅಧಿಪತಿಯನ್ನಾಗಿ ಮಾಡಿದನು.

ಈ ಸೀಮೆಯು ಬಹು ಫಲದ್ರುಪವೂ ಸುಂದರವೂ ಆಗಿತ್ತು. ವಿಜಯನಗರದ ರಾಜರು ಸ್ವಾದಿ ಅರಸರಿಗೆ ಮಹಾರಾಜರೆಂಬ ಬಿರುದನ್ನು ಕೊಟ್ಟಿದ್ದರು. ಮುಂದೆ ವಿಜಯನಗರದ ಪ್ರಾಬಲ್ಯವು ತಗ್ಗುತ್ತ ಹೋದ ಹಾಗೆ ಈ ರಾಜರು ಸ್ವತಂತ್ರರಾಗಹತ್ತಿದರು. ಮತ್ತು ಅದು ನಷ್ಟವಾದ ಬಳಿಕ ಅವರು ಪೂರ್ಣ ಸ್ವತಂತ್ರರಾಗಿ ರಾಜ್ಯವಾಳಹತ್ತಿದರು.

ಸ್ವಾದಿಯ ವಂಶದ ಮೂಲಪುರುಷನಾದ ಅರಸಪ್ಪರಾಜನು ಬಹು ಶೂರನಾಗಿದ್ದನು. ಅವನು ೧೫೫೫ರಿಂದ ೧೫೯೮ ರವರೆಗೆ ರಾಜ್ಯವಾಳಿದನು. ಅವನು ಸುಧಾಪುರ ಎಂದು ಕರೆಯಲ್ಪಡುವ ಸ್ವಾದಿಯನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿ ಅದನ್ನು ಬಲಪಡಿಸಿದನು. ಈ ಕಾಲದಲ್ಲಿ ಜೈನ ಧರ್ಮೀಯರು ಇಲ್ಲಿ ಬಹು ಪ್ರಾಬಲ್ಯವನ್ನು ಹೊಂದಿ ತಮ್ಮ ಧರ್ಮ ಪ್ರಸಾರ ಮಾಡುತ್ತಿದ್ದರು. ಅರಸಪ್ಪರಾಜನು ಅವರ ಪ್ರಯತ್ನಗಳನ್ನು ನಿಲ್ಲಿಸಿ ಬ್ರಾಹ್ಮಣ ಧರ್ಮವನ್ನು ಬಲಪಡಿಸಲು ಬಹಳ ಪ್ರಯತ್ನಿಸಿದನು. ಅವನು ಹವಿಕ ಬ್ರಾಹ್ಮಣರಿಗೆ ಬಹಳ ಉತ್ತೇಜನ ಕೊಟ್ಟು ಒಕ್ಕಲುತನದಲ್ಲಿ ಬಹಳ ಸುಧಾರಣೆಯನ್ನು ಮಾಡಿದನು. ಇದರಿಂದ ಅವನ ರಾಜ್ಯದ ಆದಾಯವು ಬಹಳ ಹೆಚ್ಚಿತು.

ಅರಸಪ್ಪರಾಜನ ತರುವಾಯ ಅವನ ಮಗನಾದ ರಾಮಚಂದ್ರ ರಾಜನು ಪಟ್ಟವೇರಿ ೧೫೯೮ ರಿಂದ ೧೬೧೮ರ ವರೆಗೆ ಆಳಿದನು. ಅವನು ತನ್ನ ತಂದೆಯು ಹಾಕಿಕೊಟ್ಟ ಧಾರ್ಮಿಕ ಮತ್ತು ರಾಜಕೀಯ ಪದ್ಧತಿಗಳನ್ನೇ ಸ್ಥಿರಪಡಿಸಿದನು. ದೇಶದಲ್ಲಿ ಶಾಂತತೆಯನ್ನು ನೆಲೆಗೊಳಿಸಿದನು. ಅವನ ಆಡಳಿತೆಯಲ್ಲಿ ಪ್ರಜೆಗಳು ಬಹು ಸುಖವಾಗಿದ್ದರು.

ಅವನ ತರುವಾಯ ರಘುನಾಥರಾಜನು ಸ್ವಾದಿಯಲ್ಲಿ ಪಟ್ಟವೇರಿ ೧೬೧೮ ರಿಂದ ೧೬೩೪ ರ ವರೆಗೆ ಆಳಿದನು. ಅವನ ಕಾಲದಲ್ಲಿ ದಾಳಿಗಾರರು ಅವನ ರಾಜ್ಯವನ್ನು ನುಗ್ಗಿದರು. ಮತ್ತು ಅವನ ಸೈನ್ಯದಲ್ಲಿಯೂ ಕಲಹಗಳಿದ್ದವು. ಆದರೆ ಅರಸನು ಅವುಗಳನ್ನೆಲ್ಲ ಮುರಿದು ದೇಶದಲ್ಲಿ ಶಾಂತತೆಯನ್ನು ಪ್ರಸ್ಥಾಪಿಸಿದನು.

ರಘುನಾಥ ರಾಜನ ತರುವಾಯ ಅವನ ಮಗನಾದ ಮಧುಲಿಂಗ ರಾಜನು ೧೬೩೮ ರಲ್ಲಿ ಪಟ್ಟವೇರಿದನು. ಮತ್ತು ಅವನು ೧೬೭೪ ರವರೆಗೆ

ರಾಜ್ಯವಾಳಿದನು. ಇವನು ಪೂರ್ಣ ವೀರಶೈವ ಮತಾನುವರ್ತಿಯಾಗಿದ್ದನು.

ರಘುನಾಥರಾಜನ ತರುವಾಯ ಮೂವರು ರಾಜರು ಸ್ವಾದಿಯಲ್ಲಿ ಆಳಿದರು. ಇವರು ವಿಜಾಪುರ ಬಾದಶಹರಿಗೆ ಅಂಕಿತರಾಗಿದ್ದರು. ಇವರಲ್ಲಿ ಮೊದಲನೆಯವನಾದ ಸದಾಶಿವರಾಜನು ಬಹು ಶೂರನೂ ರಾಜ್ಯಧುರಂಧರನೂ ಆಗಿದ್ದನು. ಅವನು ತನ್ನ ಸೈನ್ಯದಲ್ಲಿ ವ್ಯವಸ್ಥೆಯನ್ನುಂಟುಮಾಡಿದನು. ಇವನು ೧೬೭೪ರಿಂದ ೧೬೯೭ರವರೆಗೆ ಆಳಿದನು. ಇವನ ಕಾಲದಲ್ಲಿ ರಾಜ್ಯದ ವಿಸ್ತಾರವು ಬಹಳ ಬೆಳೆಯಿತು. ಇವನ ಆಳಿಕೆಯಲ್ಲಿ ಮುಸಲ್ಮಾನರು ಈ ಭಾಗವನ್ನು ಆಕ್ರಮಿಸುತ್ತ ನಡೆದಿದ್ದರೂ ಸದಾಶಿವ ರಾಜನು ಅವರ ಆಟವನ್ನು ಏನೂ ನಡೆಯಗೊಡಲಿಲ್ಲ. ಅವನು ಸಮುದ್ರತೀರದ ವರೆಗೂ ತನ್ನ ರಾಜ್ಯವನ್ನು ಬೆಳಿಸಿದನು. ಕಾರವಾರ ಬಂದರವು ಅವನ ಅಂಕಿತದಲ್ಲಿದ್ದು ಅಲ್ಲಿದ್ದ ಇಂಗ್ಲಿಷ, ಪೋರ್ತುಗೀಜ ಮೊದಲಾದ ಪರದೇಶೀಯರಿಂದ ಕಪ್ಪವನ್ನು ಎತ್ತುತ್ತಿದ್ದನು. ೧೬೮೮ ಮತ್ತು ೧೬೯೦ ಈ ಇಸ್ವಿಗಳಲ್ಲಿ ಸಂಭಾಜಿಯು ಅವನ ಮೇಲೆ ದಾಳಿಯನ್ನಿಡಲು ಸದಾಶಿವರಾಯನು ಅವನೊಡನೆ ಶೂರತನದಿಂದ ಕಾದಿ ಅವನನ್ನು ಹಿಮ್ಮೆಟ್ಟಿಸಿದನು. ಆಗ ಸಂಭಾಜಿಯು ಪೋರ್ತುಗೀಜ ಸರಕಾರದವರೊಡನೆ ಸಂಧಿಯನ್ನು ಬೆಳಿಸಿ ಸದಾಶಿವರಾಯನಮೇಲೆ ಪುನಃ ನುಗ್ಗುವವನಾಗಿದ್ದನು. ಆದರೆ ಪೋರ್ತುಗೀಜರ ಈ ಸಹಕಾರವು ಮುಂದೆ ತನಗೆ ಅನಿಷ್ಟಕಾರಕವಾಗಬಹುದೆಂದು ಎಣಿಸಿ ಸಂಭಾಜಿಯು ಅವರನ್ನು ಬಿಟ್ಟುಕೊಟ್ಟು, ತಾನೇ ಸ್ವಾದಿಯ ಅರಸನ ಮೇಲೆ ಯುದ್ಧವನ್ನು ಹೂಡಿದನು. ಆದರೆ ಇದರಲ್ಲಿ ಅವನಿಗೆ ವಿಶೇಷ ಯಶಸ್ಸು ಸಿಕ್ಕಲಿಲ್ಲ.

೧೬೮೫ರಲ್ಲಿ ಪೋರ್ತುಗೀಜರು ಮರಾಟರ ಪ್ರಾಬಲ್ಯವನ್ನು ಕುಂದಿಸಬೇಕೆಂದು ಇಚ್ಛಿಸಿ, ಸ್ವಾದಿಯ ಅರಸನೊಂದಿಗೆ ಒಡಂಬಡಿಕೆ ಮಾಡಿಕೊಂಡು ಮರಾಟರ ರಾಜ್ಯದಲ್ಲಿ ದಂಗೆಯನ್ನೆಬ್ಬಿಸಲು ಮುಂದಾದರು. ಆಗ್ಗೆ ಸಂಭಾಜಿಯು ಮೊಗಲರ ಕೂಡ ಯುದ್ಧದಲ್ಲಿ ತೊಡಗಿದ್ದದರಿಂದ ಅವನು ಸ್ವಾದಿಯ ಅರಸನ ಗೊಡವೆಗೆ ಹೋಗಲಿಲ್ಲ. ಮುಂದೆ ಅವನು ಔರಂಗಜೇಬನಿಂದ ಘಾತಿಸಲ್ಪಟ್ಟನು. ಇದರ ತರುವಾಯ ಸದಾಶಿವರಾಯನು ವೈರಿಗಳ ಭೀತಿಯಿಲ್ಲದೆ ತನ್ನ ಮಲೆನಾಡ ರಾಜ್ಯದಲ್ಲಿ ನಿರಾಂತಕವಾಗಿ ರಾಜ್ಯನಾಳಹತ್ತಿದನು. ಅವನ ರಾಜ್ಯವು ಈ ಕಾಲಕ್ಕೆ ದಕ್ಷಿಣಕ್ಕೆ

ಮಿರ್ಜಾನ ನದಿಯ ವರೆಗೂ ಆದರಾಚೆ ಬಿದನೂರಿನ ರಾಜ್ಯವಿ ಹಬ್ಬಿದ್ದವು.

ಸದಾಶಿವರಾಯನ ತರುವಾಯ ಅವನ ಮಗನಾದ ಬಸವರಾಜನು ರಾಜ್ಯವನ್ನು ಆಳತೊಡಗಿದನು. ಅವನು ತನ್ನ ತಂದೆಯಂತೆಯೇ ಪ್ರತಾಪ ಶಾಲಿಯಾಗಿ ರಾಜ್ಯವನ್ನು ಬಲಪಡಿಸಿದನು. ಅವನ ಕಾಲದಲ್ಲಿ ಸ್ವಾದಿಯ ರಾಜ್ಯವು ಅತ್ಯಂತ ಘನತೆಯನ್ನು ಹೊಂದಿತು. ಈ ಸಮಯದಲ್ಲಿ ಮರಾಟರ ಪ್ರಾಬಲ್ಯವು ಬಹು ಕಡಿಮೆಯಾಗಿತ್ತು ಮತ್ತು ಪೋರ್ತುಗೀಜರು ಇವನ ಸಹಾಯವನ್ನು ಅಪೇಕ್ಷಿಸಿ ಮಿತ್ರತ್ವದಿಂದ ಇರುತ್ತಿದ್ದರು. ಅವನು ಕಾರವಾರ ಮತ್ತು ಕಾದ್ರಾ ಇಲ್ಲಿಯ ಹಳೇ ಕೋಟೆಗಳನ್ನು ಕೆಡವಿಸಿ ತನ್ನ ತಂದೆಯ ಹೆಸರಿನಿಂದ ಸದಾಶಿವಗಡವೆಂಬ ಬಹು ಭದ್ರವಾದ ಕೋಟೆಯನ್ನು ಅವುಗಳ ಸಮೀಪದಲ್ಲಿ ಕಟ್ಟಿಸಿದನು. ಈ ಕಾಲದಲ್ಲಿ ಕಾರವಾರದಲ್ಲಿದ್ದ ಇಂಗ್ಲೀಷರ ಕೂಡ ಕೆಲವು ಕಾರಣಗಳ ಸಲುವಾಗಿ ವಿರೋಧವು ಉಂಟಾಗಲಾಗಿ ಬಸವರಾಜನು ಇಂಗ್ಲಿಷರ ಫ್ಯಾಕ್ಟರಿಯನ್ನು ಮುತ್ತಿದನು. ಈ ಮುತ್ತಿಗೆಯನ್ನೆಬ್ಬಿಸಲಿಕ್ಕೆ ಇಂಗ್ಲೀಷರು ಬಹಳ ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಲಿಲ್ಲ ಮತ್ತು ಕಡೆಗೆ ಅವರು ಕಾರವಾರ ಬಂದರವನ್ನು ಬಿಟ್ಟು ಹೋಗಬೇಕಾಯಿತು.

ಸ್ವಾದಿಯ ರಾಜ್ಯದಲ್ಲಿ ಅಂಕೋಲಾ, ಕಡೆಮುಡಿ ಮತ್ತು ಮಿರಜಾನ ಎಂಬ ಮೂರು ಸುಂದರವಾದ ಬಂದರಗಳಿದ್ದವು. ಇವುಗಳ ಮಾರ್ಗದಿಂದ ಕರ್ನಾಟಕದ ಬಹು ದೊಡ್ಡ ವ್ಯಾಪಾರವು ಪರದೇಶಗಳ ಕೂಡ ನಡೆಯುತ್ತಿತ್ತು. ಬಸವರಾಜನು ವ್ಯಾಪಾರಸ್ಥರಿಗೋಸ್ಕರ ತನ್ನ ರಾಜ್ಯದಲ್ಲಿ ಎಲ್ಲ ತರದ ಅನುಕೂಲತೆಗಳನ್ನು ಕಲ್ಪಿಸಿ ಕೊಟ್ಟಿದ್ದನು.

೧೭೨೬ ರಲ್ಲಿ ಬಾಳಾಜಿ ಬಾಜೀರಾವ ಪೇಶವೆಯು ಶ್ರೀರಂಗಪಟ್ಟಣದ ವರೆಗೆ ಕರ್ನಾಟಕ ಪ್ರಾಂತದಲ್ಲಿ ದಾಳಿ ಇಟ್ಟನು. ಮರಾಟರು ಹೋದಲ್ಲೆಲ್ಲ ಸುಲಿಗೆಗಳನ್ನು ನಡಿಸಿ ಚೌಥವೆಂಬ ತಮ್ಮ ಬಾಬನ್ನು ಎತ್ತುತ್ತಿದ್ದರು. ಇದನ್ನು ಸ್ವಾದಿಯ ಅರಸನೂ ಆಗ ಪೇಶ್ವೆಗೆ ಕೊಡಬೇಕಾಯಿತು.

ಪೋರ್ತುಗೀಜರು ತಮ್ಮ ವ್ಯಾಪಾರವು ಸುರಕ್ಷಿತವಾಗಿ ನಡೆಯಬೇಕೆಂದು ಅರಸನೊಡನೆ ೧೭೩೪ ರಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂ

ಡರು. ೧೭೪೫ ರಲ್ಲಿ ಅರಸನು ಅವರಿಗೆ ಕೆಲವು ಗ್ರಾಮಗಳನ್ನು ದಾನವಾಗಿ ಕೊಟ್ಟದ್ದಲ್ಲದೆ ತನ್ನ ರಾಜ್ಯದಲ್ಲಿ ವ್ಯಾಪಾರ ಮಾಡಲಿಕ್ಕೂ ತಮ್ಮ ಪ್ರಾರ್ಥನಾಲಯಗಳನ್ನು ಕಟ್ಟಿಸಲಿಕ್ಕೂ ಅಪ್ಪಣೆಯನ್ನು ಕೊಟ್ಟನು. ಬಸವಲಿಂಗರಾಯನ ತರುವಾಯ ಅವನ ಮಗನಾದ ಇಮ್ಮಡಿ ಸದಾಶಿವರಾಯನು ೧೭೪೫ ರಲ್ಲಿ ಪಟ್ಟವೇರಿದನು.

ಇಮ್ಮಡಿ ಸದಾಶಿವರಾಜನು ೧೭೪೫ ರಿಂದ ೧೭೬೩ ರ ವರೆಗೆ ಆಳಿದನು. ಅವನು ಬಹು ದುರ್ಬಲನೂ ರಾಜ್ಯವಾಳಲು ಅಸಮರ್ಥನೂ ಆಗಿದ್ದನು. ಅವನು ಅನವಟ್ಟಿ ವೀರಯ್ಯ ಎಂಬವನಿಗೆ ಅಂಕಿತನಾಗಿ ನಡೆದು ದುಂದುಗಾರಿಕೆಯಿಂದ ಕಾಲಕಳೆಯಹತ್ತಿದನು. ಆಗ ಪೋರ್ತುಗೀಜರು ತಮ್ಮ ಬಲವನ್ನು ಬಹಳ ಹೆಚ್ಚಿಸಿಕೊಂಡರು. ೧೭೫೦ ರಲ್ಲಿ ಮರಾಟರು ಸ್ವಾದಿಯ ಮೇಲೆ ಪುನಃ ದಾಳಿಯನ್ನು ಮಾಡಿ ಅರಸನಿಂದ ಬಹು ಭಾರವಾದ ಕಪ್ಪವನ್ನೆತ್ತಿದರು.

ಅರಸನು ಪ್ರತಿವರ್ಷ ಈ ಕಪ್ಪವನ್ನು ಕೊಡಲಿಕ್ಕೆ ಅಸಮರ್ಥನಾಗಲು ಇಂಗ್ಲಿಷರ ಸಹಾಯವನ್ನು ಅಪೇಕ್ಷಿಸಿದನು. ಮೊದಲು ಅವರು ಹಣ ಕೊಡಲು ಒಪ್ಪದ್ದರಿಂದ ಅವನು ಫ್ರೆಂಚರೊಡನೆ ಸಂಧಾನ ಹಚ್ಚತೊಡಗಿದನು. ಆಗ ಇಂಗ್ಲೀಷರು ತಮ್ಮ ಪರವಾಗಿ ಚಾರ್ಲ್ಸ ಕ್ರಾಮವೆಲಿನ ಎಂಬವನನ್ನು ಸ್ವಾದಿಗೆ ಕಳಿಸಲು ಅವನು ಕಾರವಾರದಲ್ಲಿ ಇಂಗ್ಲೀಷರು ಒಂದು ಫ್ಯಾಕ್ಟರಿಯನ್ನು ಸ್ಥಾಪಿಸಲು ಒಪ್ಪಿಗೆಯನ್ನು ಅವನಿಂದ ಹೊಂದಿದನು. ಆದರೆ ಪೋರ್ತುಗೀಜರು ಇದಕ್ಕೆ ಅಡ್ಡಬಂದು ಸ್ವಾದಿಯ ಅರಸನ ಗೂಡ ಒಂದು ನೆವ ತೆಗೆದು ಅವನ ರಾಜ್ಯವನ್ನು ಪ್ರವೇಶಿಸಿ ೧೭೫೨, ೩ನೇ ನವ್ಹೆಂಬರ ದಿವಸ ಪೀರಹಿಲ್ ಎಂಬ ಸ್ಥಳವನ್ನು ಆಕ್ರಮಿಸಿ ಅಲ್ಲಿ ಒಂದು ಕೋಟೆಯನ್ನು ಕಟ್ಟಿದರು. ಆಗ ಇಂಗ್ಲಿಷರು ಸ್ವಾದಿಯ ರಾಜ್ಯದಲ್ಲಿ ತಮ್ಮ ವ್ಯಾಪಾರವನ್ನು ಬೆಳಿಸುವದು ಅಶಕ್ಯವೆಂದು ಭಾವಿಸಿ ತಮ್ಮ ಮುಂಬಯಿ ಬಂದರಕ್ಕೆ ತೆರಳಿದರು.

ಇಮ್ಮಡಿ ಸದಾಶಿವರಾಯನ ತರುವಾಯ ಅವನ ಮಗನಾದ ಸವಾಯಿ ಬಸವಲಿಂಗನು ರಾಜ್ಯವಾಳತೊಡಗಿದನು. ಅವನ ಕಾಲದಲ್ಲಿ ೧೭೬೩ ರಲ್ಲಿ ಹೈದರ ಅಲ್ಲಿಯು ಅವನ ರಾಜ್ಯವನ್ನು ಅಭಿಯೋಗಿಸಿದನು. ಮುಂದೆ ಟೀಪುಸುಲ್ತಾನನು ಸ್ವಾದೀ ರಾಜ್ಯವನ್ನು ಪೂರ್ಣವಾಗಿ ಕೈವಶ

ಮಾಡಿಕೊಂಡನು. ಆಗ ಬಸವಲಿಂಗರಾಜನು ಪೋರ್ತುಗೀಜರ ಆಶ್ರಯವನ್ನು ಹೊಂದಿ ಅಲ್ಲಿಯೇ ಇರಹತ್ತಿದನು. ಅವನು ೧೮೩೪ ರಲ್ಲಿ ಅಲ್ಲಿ ತೀರಿದನು.

ಸವಾಯಿ ಬಸವಲಿಂಗರಾಜನ ತರುವಾಯ ಅವನ ಮಗನಾದ ಸದಾಶಿವರಾಜನು ಅವನ ಆಸ್ತಿಗೆ ಒಡೆಯನಾದನು. ಅವನು ಕೆಲವು ತಿಂಗಳ ಮಾತ್ರ ಜೀವಿಸಿದ್ದನು.

ಈ ಸದಾಶಿವರಾಯನ ತರುವಾಯ ಅವನ ತಮ್ಮನಾದ ವೀರ ರಾಜೇಂದ್ರ ಒಡೆಯರ್ ಇವರು ಸ್ವಾದಿಯ ಅರಸೊತ್ತಿಗೆಯ ಬಹುಮಾನಗಳನ್ನು ಹೊಂದಿದರು. ಆವರ ತರುವಾಯ ಅವರ ಮಗನಾದ ಸವಾಯಿ ಬಸವಲಿಂಗರಾಜೇಂದ್ರ ಒಡೆಯರವರೂ ಅವನ ತರುವಾಯ ಸವಾಯಿ ವೀರಸದಾಶಿವರಾಜೇಂದ್ರ ಒಡೆಯರ್ ಬಹದ್ದೂರರವರೂ ಆಧಿಪತ್ಯಕ್ಕೆ ಬಂದರು. ಇವರಿಗೆ ರಾಜಮನೆತನಕ್ಕೆ ಇರುವ ಎಲ್ಲ ಬಹುಮಾನಗಳೂ ೧೯ ತೋಫುಗಳ ಸಲಾಮೂ ಪೋರ್ತುಗೀಜ ಸರಕಾರದಿಂದ ಈಗಲೂ ದೊರೆಯುತ್ತಿವೆ.

ಇವರ ವಂಶಜರು ಈಗಲೂ ಗೋವಾ ಪ್ರಾಂತದಲ್ಲಿ ಇದ್ದಾರೆ.

---

# ಶ್ರೀಸಿದ್ಧರಾಮೇಶ್ವರನ ಸಂಗೂರು ಶಿಲಾಶಾಸನ.

ರಾ. ಸಾ. ಫ. ಗು. ಹಳಕಟ್ಟಿ ವಿಜಾಪುರ.

ಬಸವೇಶ್ವರನು ಅನಾಚಾರಿಗಳಾದ ದುಷ್ಟ ಜನರನ್ನು ತನ್ನ ಸುತ್ತಲೂ ನೆರಹಿಕೊಂಡು ಅವರ ಮೂಲಕ ರಾಜ್ಯದಲ್ಲಿ ದುಷ್ಟಕೃತ್ಯಗಳನ್ನು ಹೆಚ್ಚಿಸಿ ವೀರಶೈವ ಧರ್ಮವನ್ನು ಪ್ರಸಾರಪಡಿಸಿದನೆಂಬ ತಿಳುವಳಿಕೆಯು ಕೆಲವು ವರ್ಷಗಳ ಹಿಂದೆ ಬಹು ಜನರಲ್ಲಿ ರೂಢವಾಗಿತ್ತು. ಈ ಅಭಿಪ್ರಾಯವು ಸ್ಟೀಲ, ಫ್ಲೀಟ, ಭಾಂಡಾರಕರ ಇಂಥ ವಿದ್ವಾಂಸರು ಬರೆದ ಗ್ರಂಥಗಳಲ್ಲಿ ಸಹ ಇದ್ದುದು ಕಂಡುಬರುತ್ತದೆ. ಮುಂದೆ ಕನ್ನಡ ಪಠ್ಯಪುಸ್ತಕಗಳಲ್ಲಿಯೂ ಸಹ ಬಸವೇಶ್ವರನು ಇಂಥ ಕೀಳ ಜನರ ಮೂಲಕವೇ ಧರ್ಮವೃದ್ಧಿಯನ್ನು ಮಾಡಿದನೆಂಬ ಉಲ್ಲೇಖಗಳಿರುವದು ತೋರಿಬರುತ್ತದೆ. ಬರಬರುತ್ತ ವೃತ್ತಪತ್ರಿಕೆಗಳಲ್ಲಿಯೂ ಸಹ ಈ ತರದ ವಿಧಾನಗಳು ಅನೇಕ ಸಾರೆ ಮಾಡಲ್ಪಟ್ಟಿರುತ್ತವೆ. ಮತ್ತು ಇವುಗಳ ಸಂಬಂಧವಾಗಿ ವೀರಶೈವ ಸಮಾಜದವರು ಕೋರ್ಟುಗಳಿಗೆ ಹೋಗುವ ಪ್ರಸಂಗಗಳು ಬಂದಿವೆ. ಈ ಸ್ಥಿತಿಯು ೧೦—೧೫ ವರ್ಷಗಳ ಹಿಂದೆ ಇದ್ದಿತು.

ಆದರೆ ಈ ಪರಿಸ್ಥಿತಿಯು ಈಗ ತೀರ ಬದಲಾಗಿರುತ್ತದೆ. ಜನರಲ್ಲಿ ಬಸವೇಶ್ವರನ ವಿಷಯವಾಗಿ ಪೂಜ್ಯಭಾವವು ಹೆಚ್ಚುತ್ತಲಿವೆ. ಅವನಲ್ಲಿ ಯಾವ ಬಗೆಯ ಅನೈತಿಕ ವರ್ತನೆ ಇರುವದಿಲ್ಲೆಂಬುದು ಹೆಚ್ಚು ಹೆಚ್ಚಿಗೆ ದೃಢಪಡುತ್ತ ನಡೆದಿದೆ. ಅದರಂತೆಯೇ ಅವನ ಸಂಗಡಿಗರೆಲ್ಲರೂ ಶ್ರೇಷ್ಠತರಗತಿಯ ಜನರಾಗಿದ್ದರೆಂಬ ಅಭಿಪ್ರಾಯಗಳೂ ಉಂಟಾಗಹತ್ತಿರುತ್ತವೆ. ವಚನವಾಙ್ಮಯವು ಪ್ರಕಟವಾದದ್ದರಿಂದಲೇ ಈ ಪರಿಸ್ಥಿತಿಯುಂಟಾದದ್ದು ನಿರ್ವಿವಾದವು.

ನಾವು ಈ ವರೆಗೆ ಶಿವಾನುಭವ ಪತ್ರಿಕೆಯ ದ್ವಾರಾ ಪ್ರಕಟಪಡಿಸಿದ ಗ್ರಂಥಗಳಲ್ಲಿ ಒಬ್ಬ ಅಂಬಿಗ, ನಾಪಿತ, ಮಡಿವಳ, ವೀಣೆಗಾರ, ಮಾದಿಗ, ಒಡ್ಡ, ನೆಯ್ಗೆಗಾರ ಇಂಥವರು ರಚಿಸಿದ ವಚನಗಳು ಇರುತ್ತವೆ. ಕೀಳ ಜನರೆಂದು ಭಾವಿಸಲ್ಪಟ್ಟ ಇಂಥವರ ವಚನಗಳನ್ನು ನಾವು ಬುದ್ಧಿ ಪುರಸ್ಸರವಾಗಿಯೇ ಆಯ್ದು ಪ್ರಕಟಪಡಿಸಿದ್ದೇವೆ. ಆದರೆ ಅವು

ಗಳಲ್ಲಿ ಕೀಳು ವಿಚಾರಗಳ ಲವಲೇಶವು ಸಹ ಕಂಡು ಬರಲಾರದು. ಅವುಗಳಿಂದ ಅವರು ತೇಜಃಪುಂಜರಾಥ ಧಾರ್ಮಿಕ ವರ್ತನೆಯುಳ್ಳವರಾಗಿದ್ದರೆಂಬದು ಸ್ಪಷ್ಟವಾಗುತ್ತ ಇದೆ.

ಕೀಳರೆಂದು ಭಾವಿಸಲ್ಪಟ್ಟ ಈ ಮಹಾನುಭಾವರಲ್ಲಿ ಅನೇಕರು ರಾಜರುಗಳಿಂದ ಸಹ ಮನ್ನಣೆಯನ್ನು ಹೊಂದಿದ್ದರೆಂಬದು ಗೊತ್ತಾಗುತ್ತದೆ. ಈ ಸಂಗತಿಗೆ ಕಟ್ಟುಕಥೆಗಳುಳ್ಳ ಪುರಾಣಗಳೇ ಆಧಾರವೆಂದು ಯಾರೂ ತಿಳಿಯಬಾರದು. ಈಚೆಗೆ ದೊರೆತ ಶಿಲಾಲೇಖಗಳಿಂದ ಇದು ಸಿದ್ಧವಾಗಿರುತ್ತದೆ. ಈ ಶಿಲಾಲೇಖಗಳು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧವಾಗಿವೆ. ಏಕಾಂತದ ರಾಮಯ್ಯ, ಅಮುಗಿದೇವ, ಸಿದ್ಧರಾಮ, ದೇವರದಾಸಿಮಯ್ಯ, ಬಸವೇಶ್ವರ ಇವರ ಉಲ್ಲೇಖಗಳಿದ್ದ ಶಿಲಾಶಾಸನಗಳು ಈಗ ಉಪಲಬ್ಧವಾಗಿದ್ದು ಅವುಗಳಿಂದ ಇವರು ಇತಿಹಾಸ ಪ್ರಸಿದ್ಧ ಮಹಾಪುರುಷರೆಂಬದು ಸಿದ್ಧವಾಗಿರುತ್ತದೆ. ಪ್ರಸ್ತುತ ಲೇಖದಲ್ಲಿ ನಾವು ಸೊನ್ನಲಿಗೆಯ ಸಿದ್ಧರಾಮೇಶ್ವರನ ಉಲ್ಲೇಖವಿದ್ದ ಒಂದು ಶಿಲಾಶಾಸನದ ವಿವರಗಳನ್ನು ನಾವು ಇಲ್ಲಿ ಕೊಡುತ್ತೇವೆ.

ಸಿದ್ಧರಾಮೇಶ್ವರನು ಬಸವೇಶ್ವರನ ಸಮಕಾಲೀನನು. ಅವನು ಶಿವಾನುಭವ ಮಂಟಪದಲ್ಲಿದ್ದುಕೊಂಡು ಎಲ್ಲರಿಂದಲೂ ಅತ್ಯಂತ ಮನ್ನಣೆಯನ್ನು ಹೊಂದಿದವನಾಗಿದ್ದನು. ಯೋಗಾಭ್ಯಾಸದಲ್ಲಿ ಮಿಗಿಲಾದವನು. ಆದರೆ ಅವನು ಕಲ್ಲುಕುಟಿಕರಾದ ಒಡ್ಡರ ಅಧಿಪತಿಯಾಗಿದ್ದನೆಂದು ಶೂನ್ಯಸಂಪಾದನೆ ಮೊದಲಾದ ಗ್ರಂಥಗಳಿಂದ ತಿಳಿದುಬರುತ್ತದೆ. ಅವನು ಈ ಜಾತಿಯವನೇ ಆಗಿರಬಹುದು. ಈ ಪ್ರಕಾರ ಅವನು ಬಸವೇಶ್ವರನಿರುವ ವರೆಗೆ ಕಲ್ಯಾಣಪಟ್ಟಣದಲ್ಲಿದ್ದು ಮುಂದೆ ಅಲ್ಲಿ ಅವ್ಯವಸ್ಥೆಯುಂಟಾಗಲು ಆ ಸ್ಥಳವನ್ನು ಬಿಟ್ಟು ಪುನಃ ಸೊನ್ನಲಿಗೆಗೆ ಬಂದು ಅಲ್ಲಿ ವಾಸಮಾಡಹತ್ತಿದನು. ಶ್ರೀ ಪ್ರಭುದೇವರ ತರುವಾಯ ಚನ್ನಬಸವನೂ ಅವನ ತರುವಾಯ ಸಿದ್ಧರಾಮನೂ ಶೂನ್ಯ ಸಿಂಹಾಸನದ ಪಟ್ಟಾಧಿಕಾರಿಗಳಾಗಿದ್ದರೆಂದು ನಿರಂಜನವಂಶ ರತ್ನಾಕರವೆಂಬ ಗ್ರಂಥದಿಂದ ತಿಳಿದುಬರುತ್ತದೆ. ಸೊನ್ನಲಿಗೆಯಲ್ಲಿಯ ಕಪಿಲಸಿದ್ಧ ಮಲ್ಲಿಕಾರ್ಜುನನೇ ಇವನ ಇಷ್ಟದೇವತೆಯು. ಬಸವೇಶ್ವರನ ತರುವಾಯ ಸಿದ್ಧರಾಮೇಶ್ವರನು ಕರ್ನಾಟಕದಲ್ಲಿ ಬಹು ಉಚ್ಚ ಸ್ಥಾನವನ್ನು ಪಡೆದು ಬಸವೇಶ್ವರನ

ಕಾಲದಲ್ಲಿಯಕಿಂತಲೂ ಹೆಚ್ಚಾಗಿ ಪ್ರಸಿದ್ಧಿಗೆ ಬಂದನೆಂದು ನಮಗೆ ತೋರು ತ್ತದೆ. ಇದಕ್ಕೆ ಅವನ ಬಗ್ಗೆ ದೊರೆದ ಶಿಲಾಲೇಖಗಳೇ ಆಧಾರಗಳಾಗಿವೆ.

ಸಿದ್ಧರಾಮೇಶ್ವರನ ಉಲ್ಲೇಖವಿದ್ದ ಶಿಲಾಶಾಸನ ಒಂದನ್ನು ನಾವು ಶಿವಾನುಭವ ಪತ್ರಿಕೆಯ ಸಂಪುಟ ೧ ಸಂಚಿಕೆ ೨ ಪುಟ ೨೫ ಇದರಲ್ಲಿ ಪ್ರಸಿದ್ಧಿಸಿದ್ದೇವೆ. ಇದು ಕ್ರಿಸ್ತ ಶಕ ೧೨೫೬, ಅಂದರೆ ಬಸವೇಶ್ವರನ ತರುವಾಯ ಒಂದು ನೂರು ವರ್ಷದ್ದು ಇರುತ್ತದೆ. ಈ ಶಿಲಾಲೇಖವು ಶಿವಮೊಗ್ಗೆ ಜಿಲ್ಲೆಯ ಸೊರಬ ತಾಲೂಕಿನ ಕೋಳೀಸಾಲೆ ಎಂಬ ಗ್ರಾಮದಲ್ಲಿದ್ದು ಅದರಲ್ಲಿ ಸಿದ್ಧರಾಮೇಶ್ವರನ ಮತ್ತು ಆತನ ಇಷ್ಟ ದೇವತೆಯಾದ ಕಪಿಲಸಿದ್ಧ ಮಲ್ಲಿಕಾರ್ಜುನನ ಉಲ್ಲೇಖಗಳು ಇವೆ. ಮಹಾಮಂಡಲೇಶ್ವರನಾದ ಬೀರರಸನು ಈ ಭಾಗದಲ್ಲಿ ರಾಜ್ಯವನ್ನಾಳುತ್ತಿರಲಾಗಿ "ದಕ್ಷಿಣ ವಾರಣಾಸಿ ಅಭಿನವ ಶ್ರೀಶೈಲವೆನಿಪ್ಪ ಶ್ರೀ ಸೊನ್ನಲಿಗೆಯಪುರದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ" ದೇವಸ್ಥಾನಕ್ಕೆ ಈ ಕೋಳೀ ಸಾಲೆ ಗ್ರಾಮದಲ್ಲಿಯ ಕೆಲ ಭೂಮಿಯನ್ನು ದಾನಕೊಟ್ಟಂತೆ ಇದರಲ್ಲಿ ಉಲ್ಲೇಖವಿದೆ ಈ ಶಿಲಾಲೇಖದಿಂದ ಸಿದ್ಧರಾಮೇಶ್ವರನ ಪ್ರಖ್ಯಾತಿಯು ಎಷ್ಟು ದೂರದ ವರೆಗೆ ಪಸರಿಸಿತ್ತೆಂಬದು ವ್ಯಕ್ತವಾಗುತ್ತದೆ.

ಈಚೆಗೆ ಹಾವೇರಿಯ ನೈಋತ್ಯ ದಿಕ್ಕಿಗೆ ೮ ಮೈಲುಗಳ ಮೇಲೆ ಸಂಗೂರು ಎಂಬ ಗ್ರಾಮವಿದ್ದು ಅಲ್ಲಿಯ ವೀರಭದ್ರ ದೇವಾಲಯದ ನಂದೀ ಧ್ವಜದ ಮೇಲೆ ಒಂದು ಶಿಲಾಶಾಸನವು ಕೆತ್ತಲ್ಪಟ್ಟಿದ್ದು ಕಂಡುಬಂದಿದೆ. ಅದರಲ್ಲಿ ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರನ ಮತ್ತು ಕಪಿಲಸಿದ್ಧ ಮಲ್ಲಿಕಾರ್ಜುನದೇವನ ಉಲ್ಲೇಖಗಳು ದೊರೆಯುತ್ತವೆ. ಈ ಶಿಲಾಶಾಸನವು ಎಪಿಗ್ರಾಫಿಯಾ ಇಂಡಿಕಾ-ಸಂಪುಟ ೨೩ ಪುಟ ೧೮೯ ಇದರಲ್ಲಿ ಇದ್ದು ಅದನ್ನು ಮಿ॥ ಆರ್. ಎಸ್. ಪಂಚಮುಖಿ ಎಮ್. ಎ. ಇವರು ಪ್ರಸಿದ್ಧ ಪಡಿಸಿದ್ದಾರೆ.

ಈ ಶಿಲಾಶಾಸನವು ಕ್ರಿಸ್ತ ಶಕ ೧೮ನೇ ಜನೆವರಿ ೧೨೬೫ ಆದಿತ್ಯ ವಾರ ಈ ತಾರೀಖಿನದು ಇರುತ್ತದೆ. ಈ ಸಮಯದಲ್ಲಿ ದೇವಗಿರಿ ಯಾದವ ವಂಶದ ಮಹಾದೇವರಾಯನು ರಾಜ್ಯವಾಳುತ್ತಿದ್ದು ಅವನ ಮಂತ್ರಿಯಾದ ದೇವರಾಜನು ಈ ಶಾಸನವನ್ನು ಮಾಡಿಕೊಟ್ಟಿರುತ್ತಾನೆ. ಈ "ದೇವ ಮಂತ್ರೀಶ"ನು ವಸಿಷ್ಠ ವಂಶದವನೂ "ಶಿವಪಾದಾಬ್ಜ ಮಧು

ಶೃಂಗ"ನೂ ಎಂದು ಇವರಲ್ಲಿ ವರ್ಣಿಸಲ್ಪಟ್ಟಿದೆ. ಇವನು "ಸೋಮನಾಥದೇವ ಲಬ್ಧ ವರಪ್ರಸಾದ" ಎಂದು ಹೇಳಲ್ಪಟ್ಟಿದ್ದಾನೆ. ಈ ಕಾಲದಲ್ಲಿ ಯಾದವ ರಾಜರ ಕರ್ನಾಟಕ ಭಾಗದ ಮಾಂಡಲಿಕನು ಲಕ್ಷ್ಮೇಶ್ವರವನ್ನು ತನ್ನ ಮುಖ್ಯ ಸ್ಥಾನವನ್ನು ಮಾಡಿಕೊಂಡಿದ್ದರಿಂದ ದೇವರಾಜನು ಇಲ್ಲಿಯೇ ಇದ್ದು ಅಲ್ಲಿಯ ಪ್ರಸಿದ್ಧ ಸೋಮನಾಥ ದೇವರಿಗೆ ಭಕ್ತಿ ಪುರಸ್ಸರವಾಗಿ ನಡೆದುಕೊಳ್ಳುತ್ತ ಇರಬಹುದು. ಮುಂದೆ ಈ ಶಿಲಾಶಾಸನದಲ್ಲಿ ಹೇಳಿರುವದೇನಂದರೆ ದೇವರಾಜನು "ಶ್ರೀ ಸಿದ್ಧರಾಮಾಧಿಷ್ಠಿತವಾದ ಸೊನ್ನಲಿಗೆಯ ನಗರ"ವನ್ನು ಅವಲೋಕಿಸಿ "ಶ್ರೀ ಕಪಿಲಸಿದ್ಧ ಮಲ್ಲಿಕಾರ್ಜುನನ ಆಲೋಕನ"ದಿಂದ ಧರ್ಮವನ್ನು ಮಾಡಲು ಮನಸ್ಸುಳ್ಳವನಾಗಿ "ದೇವರ ಅಂಗ ರಂಗ ಭೋಗ ಅರ್ಥ ಜೀರ್ಣೋದ್ಧಾರ"ಕ್ಕಾಗಿ ಬಾಸುರ ವಿಷಯದಲ್ಲಿ ಮಧ್ಯವರ್ತಿಯಾಗಿರುವ ಚಂಗೂರು ಎಂಬ ಹೆಸರಿನ ಗ್ರಾಮವು ದಾನವಾಗಿ ಈ ಮೂಲಕ ಕೊಡಲ್ಪಟ್ಟಿರುತ್ತದೆ. ಚಂಗೂರು ಎಂದರೆ ಈ ಶಿಲಾಶಾಸನವಿದ್ದ ಸಂಗೂರು ಇರುತ್ತದೆ.

ಮುಂದೆ ಈ ದಾನವನ್ನು ಕೆಡಿಸುವವನಿಗೆ ಯಾವ ದುರ್ಗತಿಯು ಉಂಟಾಗುತ್ತದೆಂಬದಕ್ಕೆ "ಗುರು ಸಿದ್ಧರಾಮನ ವಚನ"ವು ಎಂದು ಒಂದು ಗದ್ಯ ಭಾಗವು ಈ ಶಿಲಾಲೇಖದಲ್ಲಿ ಹೇಳಲ್ಪಟ್ಟಿದೆ. ಇದು ಬಹು ಮಹತ್ವದ್ದಿದ್ದು ಇದು ಕೆಳಗೆ ಕಾಣಿಸಿದಂತೆ ಇದೆ.

"ಜಯ ಪರಮೇಶ್ವರ ಪರಮಾತ್ಮ ಈಶ್ವರನುರ್ವೀ ಪರ್ವಿ (ಯ) ಡಂಗಿ ಕೊಂಡಿಪ್ಪನು ಬಿಜ್ಜಣ್ಣಿಗೆಯಾಗಿ ಯೋಗಿಗಳ ಮನದ ಕೊನೆಯ ಜ್ಯೋತಿರೀಶ್ವರನುಂ ವೃಷಭನ ರೂಪಾಗಿ (ಯ) ಜಮಾನನುಂ ಆಚಾರ್ಯನುಂ ತಾನೆಯಾಗಿ ಯೋಗಾದಿ ಸಂಪಂನ ಬಳಿಯುಂಗಳೆಲ್ಲವಂ ಸಂಪಾದಿಸೀ (ಸಿ) ಯೋಗ (ತರು) ಣಿಯ ಕ್ಷೇತ್ರವನೆ ಸ್ಥಳಮಿಟ್ಟು ಸಲಾಖಮಿಡಿದು ಅಭಿನವ ಶ್ರೀಶೈಳವನೆ ಮಾಡಿ ಕಪಿಲಸಿದ್ಧ ಮಲ್ಲಿಕಾರ್ಜುನದೇವನೆ ನೆಲಸಿ ನಿಂದು ಮುಂಣ್ಯ (ಪುಣ್ಯ) ಪಾಪಂಗಳಂ ಬರಂ ಪೇಳ್ದು (ದೆ) ಸಂಪೇಳುತ್ತಮಿರಲು ಪಂಚೆಸದೇವಾ ಎನಲು ಈ ಸ್ಥಾನದಲು ಮಾನ್ಯವಾಗಿ ಊರುಗಳಂ ಭೂಮಿಗಳಂ ಧಾಸಂಗಳಂ ಈ ಲಿಂಗಕ್ಕೆ ಹಸ್ತೋದಕಯುಂ ಮಾಡಿ ಕೊಟ್ಟುದುವಂ ಮನಂ ಪೇಸವೆ ಕಳಮುಕೊಂಡಪೆನೆಂಬಾತನ ಆತನ ಮಾತಾ ಮಾತಾ ಪಿತೃಗಳೆಲ್ಲಂ ಎಪ್ಪತ್ತೇಳು ಕೋಟಿ ವರುಷಂ ಬರಂ ಪುಳುಗೊಂಡಡ ನರಕದೊಳಗಿಕ್ಕಿ ಸೀನಾಹುತಿ ಗೊಳು

# ಮರಣದ ಭಯ.

ಮರಣ ಭಯವು ಎಲ್ಲರನ್ನೂ ಆವರಿಸಿರುತ್ತದೆ. ಅದು ಮನುಷ್ಯನ ಜೀವಿತವಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಹೊಂದಿದೆ. ಅದನ್ನು ಆವ ರೀತಿಯಿಂದ ಎದುರಿಸಬೇಕೆಂದು ಮನುಷ್ಯನು ಬಯಸುತ್ತಾನೋ ಅವರ ಮೇಲೆಯೇ ಅವನ ಆಯುಷ್ಯದ ಕ್ರಮವೂ ಅವಲಂಬಿಸಿರುತ್ತದೆ.

ಆದರೆ ಕೇವಲ ಲೌಕಿಕರು ಮನುಷ್ಯನು ಸತ್ತ ತರುವಾಯ ಅವನಿಗೆ ಬೇರೊಂದು ಲೋಕವು ಪ್ರಾಪ್ತವಾಗುವದರ ಬಗ್ಗೆ ಶಂಕಿಸುವದುಂಟು ಸತ್ತ ಕೂಡಲೆ ಅವನ ಅವಶೇಷಗಳೇನೂ ಉಳಿಯುವದಿಲ್ಲವೆಂದು ಇವರ ತಿಳುವಳಿಕೆ. ಬಹು ಜನರು ಹೀಗೆಯೇ ಭಾವಿಸುವದುಂಟು. ಆದರೆ ಈ ಬಗೆಯ ವಿಚಾರಗಳು ಮನುಷ್ಯನಲ್ಲಿ ಪ್ರಬಲವಾದಲ್ಲಿ, ಜಗತ್ತಿನಲ್ಲಿ ತಾನು ಹೇಗೆ ವರ್ತಿಸಬೇಕೆಂಬುದನ್ನು ಲಕ್ಷಿಸುವ ಅವಶ್ಯವೇ ಅವನಿಗೆ ಉಳಿಯಲಾರದು. ಅವನಿಗೆ ಜಗತ್ತು ವೈಭವ ವಶಿಗೆ ಹೋದರೂ ಅಷ್ಟೇ, ನಾಶವಾದರೂ ಅಷ್ಟೇ. ಜಗತ್ತಿನ ಸುಧಾರಣೆ ಎಂಬುದರ ಅರಿವೇ ಅವನಲ್ಲಿ ಉಂಟಾಗಲಾರದು.

ಈ ಕಾಲದಲ್ಲಿ ಐಹಿಕ ಸುಖಾಭಿಲಾಷಿಗಳ ಸಂಖ್ಯೆಯು ಬಹು ಹೆಚ್ಚುತ್ತಲಿದೆ. ಇವರ ದೃಷ್ಟಿಯಿಂದ ಸುಖವೆಂದರೆ ಇಂದ್ರಿಯ ಸುಖವೇ ಹೊರ್ತು ಬೇರೊಂದಿಲ್ಲ. ಅವರು ಕೇವಲ ಜ್ಞಾನ ಮತ್ತು ತಿಳುವಳಿಕೆ ಇವುಗಳ ಮೇಲೆ ಭರವಸೆಯುಳ್ಳವರು. ವಿಜ್ಞಾನ ವಿಷಯದಲ್ಲಿ ಅವರು ವಿಶ್ವಾಸವುಳ್ಳವರು. ಆದರೆ ಇವುಗಳು ಅವರ ಇಂದ್ರಿಯ ಸುಖಲೋಲುಪತೆಗೆ ಸಹಾಯಕವಾಗಬೇಕು. ಆದರೆ ಬಹು ದಿನ ಇವುಗಳಿಂದ ಅವರಿಗೆ ಸಮಾಧಾನವಾಗಲಾರದು. ಯಾಕಂದರೆ ಕೆಲಕಾಲ ಗತಿಸಿದ ಮೇಲೆ ಆ ಇಂದ್ರಿಯಗಳಮೂಲಕ ಸುಖವನ್ನು ಅರಿಯುವ ಶಕ್ತಿಯು ಕುಂದಹತ್ತುತ್ತದೆ. ಇಲ್ಲವೇ ಇಂಥ ಸುಖವೇ ಅವರಿಗೆ ಬೇಡಾಗಹತ್ತುವದು. ಆಗ ಈ ಜೀವಿತವೇನೆಂಬುದರ ಅರ್ಥವನ್ನು ಅವರು ತಿಳಿಯಲು ತಳಮಳಿಸಹತ್ತುತ್ತಾರೆ. ಆದರೆ ಸಾವಿನ ನಿಜಸ್ಥಿತಿಯನ್ನು ಅರಿಯದ ಹೊರ್ತು ಅವರಿಗೆ ಇದರ ತಿಳುವಳಿಕೆಯಾಗಲಾರದು.

ಈಗಿನ ವಿಜ್ಞಾನ ಯುಗದಲ್ಲಿ ಈ ಮಹತ್ವದ ವಿಷಯವನ್ನು ದುರ್ಲಕ್ಷಿಸಿ ಮನುಷ್ಯನು ತನ್ನ ಜೀವಿತವನ್ನು ನಿರ್ವಹಿಸುವ ಕಾರ್ಯದಲ್ಲಿ ತೊಡಗಿರುತ್ತಾನೆ. ಮುಂದಿನದರ ಅಂದರೆ ಪರಲೋಕದಕಡೆಗೆ ಅವನು ತನ್ನ ವಿಚಾರಗಳನ್ನು ಹೊರಳಿಸನು. ಅವನು ತಿಳಿಯಲು ಶಕ್ಯವಿರುವಂಥ ಅಥವಾ ಇಂದ್ರಿಯಗಳಿಗೆ ಗೋಚರವಾಗುವಂಥ ವಿಷಯಗಳ ಕಡೆಗೆಮಾತ್ರ ಒಲಿದು ತನ್ನ ಆಯುಷ್ಯವನ್ನು ಕಳೆಯಲು ಬಯಸುತ್ತಾನೆ. ಆದರೆ ಮನುಷ್ಯನ ಒಲವು ಕೇವಲ ತಾನು ಜೀವದಿಂದಿರಬೇಕೆಂಬುದರ ಕಡೆಗೆ ಮಾತ್ರ ಇರುತ್ತದೆ. ಆದ್ದರಿಂದ ಈ ಜಗತ್ತಿನ ಮೇಲಾಟದಲ್ಲಿ ಜ್ಞಾನ, ಪ್ರೀತಿ, ಒಳ್ಳೆಯತನ ಇವುಗಳು ಅವನ ಆಯುಷ್ಯ ಕ್ರಮದಲ್ಲಿ ಉಪಯೋಗವುಳ್ಳವಾದ್ದರಿಂದ ಇವುಗಳ ಸಮರ್ಥನೆಯಲ್ಲಿ ಅವನು ತೊಡಗುವದುಂಟು. ಆದರೆ ಇವುಗಳಲ್ಲಿ ಸ್ಥಿರತೆಯು ಇರುವದಿಲ್ಲ ಮತ್ತು ಒಳ್ಳೆಯದಾವುದೆಂಬದನ್ನು ಕಂಡುಹಿಡಿಯುವದು ಶಕ್ಯವಾಗುವದಿಲ್ಲ. ಹೀಗೆ ಜೀವಿತದ ಗುರಿಯೇ ಅವನಿಗೆ ತಪ್ಪುತ್ತದೆ. ಆದ್ದರಿಂದ ಅವನು ಯಾವಾಗಲೂ ತಳಮಳಿಕೆಯಲ್ಲಿಯೇ ಕಾಲಕಳೆಯುತ್ತಾನೆ

ಆದರೆ ಸಾವು ಮನುಷ್ಯನ ಜೀವಿತದ ಅಂತ್ಯವನ್ನು ಸೂಚಿಸದೆ, ಹೊಸ ಜೀವಿತದ ದ್ವಾರವೆಂದು ತಿಳಿದರೆ ಅವನ ಇಹಲೋಕದ ಕಾರ್ಯಗಳಲ್ಲಿ ಹೊಸ ಸ್ವರೂಪ ಒದಗುತ್ತದೆ. ಈಗಿನಕಿಂತಲೂ ಉದಾತ್ತವಾದ ಜೀವಿತದ ಕಡೆಗೆ ತಾನು ಹೋಗುವೆನೆಂಬ ಭಾವನೆಯುಳ್ಳವನಾಗಿ ಸಾವಿನ ಅಂಜಿಕೆಯು ಅವನಿಗೆ ಇರಲಾರದು. ಕೇವಲ ಬಾಹ್ಯೇಂದ್ರಿಯಗಳ ವಶದಲ್ಲಿದ್ದು ವ್ಯವಹರಿಸುವವನಿಗೆ ಸಾವಿನ ಭಯವು ಉಂಟಾಗುತ್ತದೆ. ಆದರೆ ಮನುಷ್ಯನಲ್ಲಿ ಅತ್ಯಂತ ಸೂಕ್ಷ್ಮವಾಗಿರುವ ಮತ್ತು ನಾಶ ರಹಿತವಾದ ಭಾವ ಶರೀರವೆಂಬುದಿದೆ, ಅದನ್ನು ತಾನು ಅವಲಂಬಿಸಿ ಜಗತ್ತಿನ ಕ್ರಿಯೆಗಳನ್ನು ಮಾಡಬೇಕು, ಎಂದು ವಿಶ್ವಾಸವನ್ನಿಟ್ಟು ಕಾರ್ಯಮಾಡಿದಲ್ಲಿ ಸಾವಿನ ಭಯವು ಉಳಿಯಲಾರದು.

ಸಾವಿಗೆ ಅಂಜುವದು ವೀರಶೈವನ ಧರ್ಮವಲ್ಲ. ಅವನಿಗೆ ಸಾವೆಂಬುದೇ ಇಲ್ಲ. ಅವನು ಸತ್ತ ಬಳಿಕ ಹೆಚ್ಚಿನ ತರಗತಿಗೆ ಹೋಗುತ್ತಾನೆ. ಆಗ ಅವನು ಪರಮಾತ್ಮನಲ್ಲಿ ಬೆರೆದು ಹೋಗುತ್ತಾನೆ. ಪರಮಾತ್ಮನೆಂದರೆ ಜಗತ್ತಿನ ಒಳಗೂ ಹೊರಗೂ ಆವರಿಸಿದ ಒಂದು ಮಹಾಶಕ್ತಿ ಎಂದು ಹೇಳಬಹುದು. ಈ ಶಕ್ತಿಯನ್ನು ಲಿಂಗವಂತರು ಲಿಂಗವೆಂದು

ಸಂಬೋಧಿಸುತ್ತಾರೆ. ವೀರಶೈವನು ಸತ್ತ ಬಳಿಕ ಅವನು ಅದರಲ್ಲಿ ಬೆರೆದು ಹೋಗುತ್ತಾನೆ. ಇದೇ ಅವನ ಅಂತಿಮ ಧ್ಯೇಯವು. ಆಗ ಅವನು ಲಿಂಗೈಕ್ಯ ಹೊಂದಿದನೆಂದು ಹೇಳುವ ಸಾಂಪ್ರದಾಯವು ಅವರಲ್ಲಿದೆ.

ವೀರಶೈವನು ಈ ಧ್ಯೇಯವುಳ್ಳವನಾದ್ದರಿಂದ ಅವನು ಅದಕ್ಕನುಸಾರವಾಗಿಯೇ ತನ್ನ ಜೀವಿತವನ್ನು ನಡೆಯಿಸಬೇಕು. ತನ್ನಲ್ಲಿ ಲಿಂಗದ ಚೈತನ್ಯವು ಕಳೆ ವಿರುವಂತೆ ಹುಟ್ಟಿದಾರಭ್ಯವೂ ಅವನು ಯತ್ನಿಸಬೇಕು. ಈ ಚೈತನ್ಯವು ಅವನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳನ್ನು ಆವರಿಸುವದು. ಅವನ ಇಂದ್ರಿಯಗಳೆಲ್ಲವೂ ಶಿವಚೈತನ್ಯಕ್ಕೆ ಹೊಂದಿಕೆಯಾಗಿ ವ್ಯವಹರಿಸಬೇಕು. ಆಗ ಅವು ಅವನ ಲಿಂಗೇಂದ್ರಿಯಗಳೆಂದೆನಿಸಿಕೊಳ್ಳುತ್ತವೆ. ಈ ಬಗೆಯ ವ್ಯವಹರಣೆಯ ಮೂಲಕ ಅವನ ಭಾವ ಶರೀರವು ಕ್ರಮೇಣ ಬಲಗೊಂಡು ಅವನಲ್ಲಿ ಲಿಂಗದ ಜ್ಯೋತಿಯು ಒಡಮೂಡಹತ್ತುತ್ತದೆ. ಅವನಿಗೆ ಚೇತನಾಚೇತನಗಳೆಲ್ಲವೂ ಲಿಂಗಮಯವಾಗಿ ತೋರುವವು. ದ್ವೇಷಾಸೂಯೆಗಳು ದೂರಾಗುವವು. ವಿಶ್ವಬಂಧುತ್ವದ ಭಾವವು ಸ್ಥಿರಪಡುವದು. ಮಹಾದೇವಿಯಕ್ಕನು ನುಡಿದ ನುಡಿಗಳಲ್ಲಿ ಈ ಬಗೆಯ ಭಾವವಿರುವದು. ಈ ಪ್ರಕಾರ ಜಗತ್ತಿನಲ್ಲಿ ಲಿಂಗಾಂಗಿಯು ವ್ಯವಹರಿಸಿ ಕಡೆಗೆ ಸಾವು ಬಂದ ಬಳಿಕ ಅವನು ಶಿವಚೈತನ್ಯದಲ್ಲಿಯೇ ಅಡಗಿ ಹೋಗುತ್ತಾನೆ. ಆದ್ದರಿಂದ ಅವನು ಸಾವಿಗೆ ಭಯಪಡುವ ಕಾರಣವಿಲ್ಲ.

ವೀರಶೈವರಲ್ಲಿ ಈ ವಿಚಾರಗಳಿರುವದರಿಂದ ಅವರ ಅಂತ್ಯ ವಿಧಿಗಳು ಲಿಂಗಾಂಗಿಯು ಸಾಯದೆ ಒಂದು ಉಚ್ಚಸ್ಥಿತಿಗೆ ಹೋಗುತ್ತಾನೆಂಬ ಅಭಿಪ್ರಾಯಗಳ ಮೇಲೆ ಅವಲಂಬಿಸಿ ಮಾಡಿದವುಗಳಿರುತ್ತವೆ.

---

# ವೀರಶೈವ ಧರ್ಮದಲ್ಲಿ ವಿಶ್ವಧರ್ಮದ ಲಕ್ಷಣಗಳು.

## ನಾನಾತ್ವದಲ್ಲಿ ಏಕತ್ವವು.

ಪ್ರತಿಯೊಬ್ಬನಲ್ಲಿಯೂ ಒಂದೊಂದು ವೈಶಿಷ್ಟ್ಯವಿರುತ್ತದೆ. ಅವನಲ್ಲಿರುವ ವಿಶೇಷತರದ ಗುಣಗಳು, ಅವನು ವಿಕಾಸಹೊಂದುವ ವಿಧಗಳು, ಅವನ ನಂಬಿಗೆಗಳು ಬೇರೆ ಬೇರೆಯಾಗಿರುತ್ತವೆ. ಶಾರೀರಿಕ ಗುಣಗಳಲ್ಲಿಯೂ ವಿವಿಧತೆಯು ಇರುತ್ತವೆ. ಈ ಸ್ಥಿತಿ ಇರುವದರ ಕಾರಣಗಳನ್ನರಿಯುವದು ಯಾರಿಗೂ ಶಕ್ಯವಿಲ್ಲ. ಆದ್ದರಿಂದ ಮನುಷ್ಯನ ವಿವಧತೆಯೊಳಗೆ ಏನಾದರೂ ಒಂದು ಸಾಮಾನ್ಯವಾದುದು ಇದೆಯೋ ಹೇಗೆ, ಮತ್ತು ಅದು ಆವುದನ್ನು ಅವಲಂಬಿಸಿದೆ ಎಂಬುದನ್ನು ಕಂಡುಹಿಡಿಯಲು ಯತ್ನಿಸುವದು ನಿಷ್ಫಲವೆಂದು ಅನೇಕರಿಗೆ ತೋರಬಹುದು. ಆದರೆ ಇಂಥ ಒಂದು ವಸ್ತುವು ಇದೆ, ಎಂಬುದನ್ನು ನಮ್ಮ ಹಿಂದೂ ತತ್ವಜ್ಞಾನಿಗಳು ಕಂಡುಹಿಡಿದು ಅದನ್ನು ಸಿದ್ಧಪಡಿಸಿರುತ್ತಾರೆ. ಈ ವಸ್ತುವು ದೊಡ್ಡಿತಾದ ಪದಾರ್ಥದಿಂದ ಒಂದು ಸೂಕ್ಷ್ಮಾಣುವಿನ ವರೆಗೂ ಎಲ್ಲೆಡೆಯಲ್ಲಿಯೂ ತುಂಬಿದೆ, ಮತ್ತು ಅದು ಸತ್ಯವಾದುದು, ಎಂದು ಅವರು ತಿಳಿದಿರುತ್ತಾರೆ. ಇದರ ಮೂಲಕವಾಗಿಯೇ ಅಗ್ನಿಯು ಸುಡುತ್ತದೆ, ಸೂರ್ಯನು ಬೆಳಗುತ್ತಾನೆ, ವಾಯುವು ಬೀಸುತ್ತಿದೆ, ಮೃತ್ಯುವು ಬೆನ್ನು ಹತ್ತುತ್ತದೆ. ಇದೇ ಪರಬ್ರಹ್ಮವು. ಇದನ್ನು ವೀರಶೈವರು ಪರಶಿವ ಅಥವಾ ಮಹಾಲಿಂಗ ಎಂದು ಕರೆಯುತ್ತಾರೆ. ಒಬ್ಬ ವಚನಕಾರನು ಇದರ ಸ್ವರೂಪವನ್ನು ಕುರಿತು ಹೇಳುವದೇನೆಂದರೆ:—

(೧) ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯಾ. ಎಣಿಸುವಡೆ ತನು ಭಿನ್ನ. ಆತ್ಮನೊಬ್ಬನೇ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯಾ ರಾಮನಾಥಾ.

ಅವನು ದೃಶ್ಯಜಗತ್ತಿನಲ್ಲಿಯ ಈ ನಿಜತತ್ವದ ಬಗ್ಗೆ ಹೇಳುವದೇನಂದರೆ,

(೨) ಇಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇ ನೆಂಬೆ ರಾಮನಾಥಾ?

(೩) ಕಾಯ ನಿಮ್ಮ ದಾನ. ಜೀವ ನಿಮ್ಮ ದಾನ. ಕಾಯ, ಜೀವ ವುಳ್ಳಲ್ಲಿಯೇ ನಿಮ್ಮ ಪೂಜಿಸದನ್ಯಾಯಿಗಳನೇನೆಂಬೆ ಹೇಳಾ ರಾಮ ನಾಥಾ?

(೪) ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ. ನಿಮ್ಮ ದಾನವನುಂಡು ಅನ್ಯರ ಹೊಗ ಳುವ ಕುನ್ನಿಗಳನೇನೆಂಬೆ ರಾಮನಾಥಾ?

(೫) ಇಂತೆಂದ ಭೂಮಿಯ ಇಂತೆಂದ ಗಗನವನಿಂತೆಂದ ಸಪ್ತ ಸಾಗರವ ಇಂತೀ ಲೋಕದೊಳಗೆ ತಿಂಥಿಣಿಯಾಗಿಪ್ಪ ಅಚಿಂತ್ಯನನಾರು ಬಲ್ಲರೈ ರಾಮನಾಥಾ?

**(ದೇವರದಾಸ)**

ಈ ಪ್ರಕಾರ ಒಂದು ಮಹತ್ತರವಾದ ವಸ್ತುವು ವಿವಿಧತೆಯುಳ್ಳ ಜಗತ್ತಿನಲ್ಲಿ ಹೆಣೆದು ಹೋಗಿರುತ್ತದೆಂದು ವಚನಕಾರರ ಅಭಿಪ್ರಾಯ ವಿರುತ್ತದೆ.

ಈ ತರದ ವಿಚಾರವನ್ನು ಬಹು ದೃಢತರವಾಗಿ ಸಾರಿದವರು ಹಿಂದೂ ಮತಸ್ತರೇ ಇರುತ್ತಾರೆ. ಈಗಿನ ಶಾಸ್ತ್ರೀಯ ಯುಗದಲ್ಲಿ ಆದ ಅನೇಕ ಶೋಧಗಳ ಮೂಲಕ ಇತರ ಧರ್ಮಗಳೂ ಮತಗಳೂ ಸುಳ್ಳೆಂದು ಹೇಳುವ ಪ್ರಸಂಗವು ಒದಗಿರುತ್ತದೆ. ಆದರೆ ಹಿಂದೂ ಧರ್ಮದಲ್ಲಿಯ ಮೇಲಿನ ವಿಚಾರವು ಈಗ ಹೆಚ್ಚೆಚ್ಚಿಗೆ ಸಿದ್ಧವಾಗುತ್ತ ನಡೆದಿದೆ. ಇದರ ಸಮರ್ಥನೆಯಿಂದ ಉಚ್ಚ ನೈತಿಕ ಮತ್ತು ಸಾಮಾ ಜಿಕ ತತ್ವಗಳನ್ನು ಸಹ ಸಮರ್ಥಿಸಲು ಶಕ್ಯವಾಗುತ್ತದೆ.

ವೀರಶೈವ ಧರ್ಮವು ಈ ತತ್ವದ ನಿಜತ್ವವನ್ನು ಬಹು ಪ್ರಾಮುಖ್ಯ ವಾಗಿ ಬೋಧಿಸುತ್ತಾ ಇದೆ. ವಚನಕಾರರು ಈ ವಿಷಯವನ್ನು ಕುರಿತು ಅಸಂಖ್ಯ ವಚನಗಳನ್ನು ನುಡಿದಿದ್ದಾರೆ. ಈ ವಿಚಾರಗಳು ವೀರಶೈವವು ವಿಶ್ವಧರ್ಮವೆಂದೆನ್ನಲು ನಿಜವಾಗಿ ಪೋಷಕವಾಗಿರುತ್ತವೆ.

ಹಿಂದೂ ಸಮಾಜದಲ್ಲಿ ಅನೇಕ ಪಂಗಡಗಳಿದ್ದು ಅವುಗಳಲ್ಲಿ ಯಾವಾಗಲೂ ಅಂತಃಕಲಹಗಳು ಪಸರಿಸಿರುತ್ತವೆ. ಈ ಸ್ಥಿತಿಯು ಮೊದಲಿನ ಕಾಲದಲ್ಲಿಯೂ ಇದ್ದುದು ತೋರಿಬರುತ್ತದೆ. ಬಸವೇಶ್ವರನು ಉದ್ಭವಿಸಿದ ಕಾಲದಲ್ಲಿ ಕರ್ನಾಟಕಕ್ಕೆ ಈ ಪರಿಸ್ಥಿತಿಯುಂಟಾಗಿತ್ತು. ಆಗ ಬೌದ್ಧರು ಮೆಲ್ಲಮೆಲ್ಲಗೆ ಮೊದಲು ಬೇರೂರ ಹತ್ತಿದ್ದರು. ಅಷ್ಟರಲ್ಲಿಯೇ ಜೈನರ ಪ್ರಾಬಲ್ಯವು ಹೆಚ್ಚಿ ಅವರು ದೇಶದಲ್ಲೆಲ್ಲ ಪಸರಿಸಿದರು. ಮುಂದೆ ಪಾಶುಪತ, ಕಾಳಾಮುಖ ಮೊದಲಾದ ಅನೇಕ ಶೈವಪಂಥಗಳು ಪ್ರಸಾರ ಹೊಂದಿದವು. ಇವುಗಳಲ್ಲೆಲ್ಲ ಪರಸ್ಪರ ಹೋರಾಟಗಳು ಕಾಲ ಕಾಲಕ್ಕೆ ಜರಗುತ್ತಾ ಇದ್ದವು. ಹಾಗೆಯೇ ಶೈವ ವೈಷ್ಣವ ಪಂಥಗಳ ಲ್ಲಿಯೂ ವೈಮನಸ್ಸ ಉತ್ಪನ್ನವಾಗಿದ್ದವು. ಇಂಥ ಕಾಲದಲ್ಲಿ ವಚನ ಕಾರರು ಉದ್ಭವಿಸಿ, ಪರಮಾತ್ಮನೊಬ್ಬನೇ ಇದ್ದಾನೆ, ಅವನು ಎಲ್ಲದರ ಲ್ಲಿಯೂ ಪಸರಿಸಿದ್ದಾನೆ ಎಂಬ ತತ್ವವನ್ನು ಸಾರಿ, ಅದನ್ನು ಪ್ರಸಾರ ಪಡಿಸಿದರು. ಈ ತತ್ವದ ಮೇಲೆಯೇ ತಮ್ಮ ಸಾಮಾಜಿಕ ವಿಚಾರ ಗಳನ್ನೂ ಧಾರ್ಮಿಕ ಆಚರಣೆಗಳನ್ನೂ ನೆಲೆಗೊಳಿಸಿದರು. ಆದುದರಿಂದ ಅನೇಕ ಪಂಥಗಳು ವೀರಶೈವ ಧರ್ಮವನ್ನು ಸ್ವೀಕರಿಸಿದವು. ಇದರಿಂದ ಎಲ್ಲ ಸಮಾಜಗಳಲ್ಲಿ ಪರಸ್ಪರ ಪ್ರೀತಿ, ಸೌಹಾರ್ದತೆಗಳು ಬೆಳೆದು ಕರ್ನಾಟಕವು ಬಹು ಬಲಾಢ್ಯವಾದ ದೇಶವಾಯಿತು. ಇದು ನಾನಾತ್ವದಲ್ಲಿ ಏಕತ್ವವನ್ನು ಕಂಡು ಹಿಡಿದಿದ್ದರ ಪರಿಣಾಮವಾಗಿದೆ. ಈ ಪರಿಸ್ಥಿತಿಯು ಯಾವ ಧರ್ಮದಲ್ಲಿ ಇದೆಯೋ ಅದು ವಿಶ್ವಧರ್ಮವಾಗಲು ಯೋಗ್ಯತೆಯುಳ್ಳ ದಾಗಿರುತ್ತದೆ.

## ಉತ್ಕ್ರಾಂತಿಯ ತತ್ವಗಳನ್ನವಲಂಬಿಸಬೇಕು.

ಈ ಪ್ರಕಾರ ಜಗತ್ತಿನಲ್ಲಿ ಒಂದೇ ಒಂದು ವಸ್ತುವು ಇದ್ದು ಅದನ್ನು ಸಾಧಿಸಬೇಕೆಂಬ ವಿಚಾರಗಳು ಪ್ರಕಟವಾದೊಡನೆಯೇ ಅದರಲ್ಲಿ ಉತ್ಕ್ರಾಂತಿಯ ತತ್ವಗಳು ಅಡಕವಾಗುವವು. ಮನುಷ್ಯನು ತನ್ನ ಕ್ರಿಯೆ ಗಳ ಮೂಲಕ ಕೆಳಗಿನ ಸ್ಥಿತಿಯಿಂದ ಮೇಲಿನ ಸ್ಥಿತಿಗೆ ಮೆಲ್ಲಮೆಲ್ಲನೆ ಹೋಗಬೇಕೆಂಬ ವಿಚಾರಗಳು ಅವನಲ್ಲಿ ಮುಂಬರಿಯುತ್ತುತ್ತವೆ. ಶುದ್ಧಾದ್ವೈತಿಗಳು ಜಗತ್ತು ಮಾಯೆ ಎಂದು ಭಾವಿಸಿ ಜ್ಞಾನದಿಂದಲೇ ಮೋಕ್ಷವೆಂದು ಭಾವಿಸಿದರು. ಆದರೆ ವೀರಶೈವ ವಚನಕಾರರು ಕ್ರಿಯೆ

ಮತ್ತು ಜ್ಞಾನ ಇವುಗಳಲ್ಲಿ ಷಟ್‌ಸ್ಥಲಕ್ಕೆ ಅನುಸಾರವಾಗಿ ಸಂಬಂಧವನ್ನು ಇಟ್ಟು ಈ ಕ್ರಿಯೆಯ ಮೂಲಕವೇ ಕೆಳಗಿನಿಂದ ಉಚ್ಚ ಸ್ಥಿತಿಗೆ ಹೋಗಿ ಕಡೆಗೆ ನಿಜದಲ್ಲಿ ಬೆರೆಯಬೇಕೆಂದು ಬೋಧಿಸಿದರು. ಈ ವಿಷಯವಾಗಿ ಬಸವೇಶ್ವರನು ಕೆಳಗೆ ಬರೆದಂತೆ ತನ್ನ ಒಂದು ವಚನದಲ್ಲಿ ನುಡಿದಿದ್ದಾನೆ. ಅದು ಏನಂದರೆ:—

ಭಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ. ಯುಕ್ತನೆನಿಸುವೆನಯ್ಯಾ ಮೆಲ್ಲ ಮೆಲ್ಲನೆ. ಪಾರಿ ಶರಣನೆನಿಸುವೆನಯ್ಯಾ ಮೆಲ್ಲಮೆಲ್ಲನೆ. ಎಡಹುವ ಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ. ಕೂಡಲಸಂಗಮದೇವಾ ನಿಮ್ಮಿಂದಧಿಕನೆನಿಸುವೆನಯ್ಯಾ.

ಇದರಲ್ಲಿ ಬಸವೇಶ್ವರನು ಮನುಷ್ಯನ ಉತ್ಕ್ರಾಂತಿಯಮಾರ್ಗವನ್ನು ಬಹು ಚನ್ನಾಗಿ ಬೋಧಿಸಿದ್ದಾನೆ. ಇದರಲ್ಲಿಯೇ ವಿಶ್ವಧರ್ಮದ ತತ್ವಗಳು ಅಡಕವಾಗಿರುತ್ತವೆ. ಇವು ಇರುವಂಥ ಧರ್ಮಗಳು ವಿಶ್ವಧರ್ಮಗಳಾಗಲು ಅರ್ಹತೆಯುಳ್ಳವಾಗಿರುತ್ತವೆ.

## ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದುವದು.

ಪಾಶ್ಚಿಮಾತ್ಯ ತತ್ವಜ್ಞಾನಿಗಳು ದೃಶ್ಯ ವಸ್ತುವಿನಲ್ಲಿ ಪರವಸ್ತುವೆಂಬುದಿದೆ ಎಂದು ಹೇಳಲು ಧೈರ್ಯ ಮಾಡುವದಿಲ್ಲ ಮತ್ತು ಮನುಷ್ಯನು ಅಂತ್ಯದಲ್ಲಿ ಈ ಪರತತ್ವದಲ್ಲಿ ಪೂರ್ಣವಾಗಿ ಬೆರೆಯುತ್ತಾನೆಂತಲೂ ಅವರು ಹೇಳಲಾರರು. ಕ್ಯಾಂಟನು ಧರ್ಮವೆಂದರೆ ಪರಮಾತ್ಮನ ಅಪ್ಪಣೆಯ ಪ್ರಕಾರ ಮಾಡತಕ್ಕ ಕರ್ತವ್ಯವೆಂತಲೂ ಮಿಲ್ಲ ಎಂಬ ಇಂಗ್ಲಿಷ ತತ್ವಜ್ಞಾನಿಯು ಯಾವ ವಸ್ತುವು ಅತ್ಯುತ್ಕೃಷ್ಟವೋ ಅತ್ತಕಡೆ ಮನುಷ್ಯನ ಮನಸ್ಸನ್ನೂ ಅಭಿಲಾಷೆಗಳನ್ನೂ ಒಯ್ಯುವಂಥಾದ್ದೆಂತಲೂ ಮಾರ್ಟಿನೋ ಎಂಬವನು ಚಿರವಾಗಿ ಇರುವ ಪರಮಾತ್ಮನಲ್ಲಿ ಈ ಜಗತ್ತನ್ನು ಪರಿಪಾಲಿಸುವಂಥ ಒಂದು ದೈವೀ ಶಕ್ತಿ ಇದೆ ಎಂತಲೂ ಹೀಗೆ ಅನೇಕ ಬಗೆಯಾಗಿ ಹೇಳುತ್ತಾರೆ ಆದರೆ ಅಂತ್ಯವಸ್ತುವಿನಲ್ಲಿ ಬೆರೆತು ಹೋಗುವದು ಮನುಷ್ಯನಿಗೆ ಶಕ್ಯವೆಂದು ಅವರಲ್ಲಿ ಯಾರೂ ಹೇಳಲು ಎದೆ ಮಾಡಿಲ್ಲ. ಆದರೆ ಹಿಂದೂ ಸಮಾಜಗಳಲ್ಲೆಲ್ಲ ಮೋಕ್ಷದ ವಿಚಾರಗಳು ಪರಮಾತ್ಮನಲ್ಲಿ ಕೂಡಿ ಹೋಗುವದೇ ಇರುತ್ತದೆ. ಈ ತತ್ವವು

ಎಲ್ಲ ಧರ್ಮಗಳನ್ನು ಒಂದುಗೂಡಿಸಲು ಬಹು ಸಹಾಯಕವಾಗಿರುತ್ತದೆ. ಹಿಂದೂಧರ್ಮವು ಅದರಲ್ಲಿ ವಿಶೇಷವಾಗಿ ವೀರಶೈವ ಧರ್ಮವು ಈ ತತ್ವವನ್ನೇ ಸಾರಿರುತ್ತದೆ.

## ವ್ಯಕ್ತಿನಿರ್ಮಿತ ಧರ್ಮವಿರಕೂಡದು.

ವೀರಶೈವ ಧರ್ಮಸ್ಥಾಪನೆಗೆ ಯಾರೋ ಒಬ್ಬರು ಕಾರಣರೆಂದು ಅದರ ಇತಿಹಾಸವು ಹೇಳುವದಿಲ್ಲ. ಶೈವ ಧರ್ಮ ಮೊದಲ್ಗೊಂಡು ಅನೇಕರ ಪ್ರಯತ್ನಗಳಿಂದ ಅದು ಉತ್ಕ್ರಾಂತಿಯನ್ನು ಹೊಂದುತ್ತಲೇ ಬಂದಿದೆ. ಒಂದುವೇಳೆ ಬೌದ್ಧ, ಕ್ರಿಸ್ತಿ, ಇಸ್ಲಾಮು ಧರ್ಮಗಳಲ್ಲಿಯಂತೆ ಒಬ್ಬಾನೊಬ್ಬ ವ್ಯಕ್ತಿಯಮೂಲಕ ಧರ್ಮ ಸ್ಥಾಪನೆಯಾಯಿತೆಂದು ಹೇಳಿದಲ್ಲಿ ಅಂಥ ವ್ಯಕ್ತಿಯು ಕೆಲ ವಿಚಾರಗಳಲ್ಲಿ ತಪ್ಪುಗಳು ಸಿದ್ಧವಾದರೆ ಆ ಧರ್ಮದ ಮಹತ್ವವೇ ಹೊರಟುಹೋಗುತ್ತದೆ. ಆದ್ದರಿಂದ ಧರ್ಮದ ಮಹತ್ವವು ಮತ್ತು ಪ್ರಸಾರವು ಅದರಲ್ಲಿರುವ ತತ್ವಗಳ ಪ್ರಚಾರದ ಮೂಲಕ ಮುಂದುವರಿಯಬೇಕೇ ಹೊರತು ಅದು ಒಬ್ಬಾನೊಬ್ಬ ವ್ಯಕ್ತಿಯ ಪ್ರಯತ್ನದ ಮೇಲೆ ಅವಲಂಬನೆ ಹೊಂದಬಾರದು. ಹಾಗಾದಲ್ಲಿ ಅದಕ್ಕೆ ವ್ಯಾಪಕಸ್ವರೂಪ ಬರಲಾರದು. ವೀರಶೈವ ಧರ್ಮವನ್ನು ಪಂಚಾಚಾರ್ಯರಾಗಲಿ ಬಸವೇಶ್ವರನಾಗಲಿ ಹೀಗೆ ವ್ಯಕ್ತಿಗಳು ಹೊಸದಾಗಿ ಹುಟ್ಟಿಸಿದ್ದಿರುವದಿಲ್ಲ. ಅದು ಕಾಲಕಾಲಕ್ಕೆ ಉದ್ಭವಿಸಿದ ಅಸಂಖ್ಯ ಮಹಾನುಭಾವರ ಪ್ರಯತ್ನಗಳ ಮೂಲಕ ಪ್ರವಾಹರೂಪವಾಗಿ ಪುರಾತನ ಕಾಲದಿಂದ ಈವರೆಗೂ ಹರಿಯುತ್ತಬಂದಿರುತ್ತದೆ. ಅದರಲ್ಲಿ ಒಂದು ಪರಂಪರೆಯು ಇರುತ್ತದೆ. ಇಂಥ ಧರ್ಮವು ವಿಶ್ವಧರ್ಮವಾಗಲು ಶಕ್ಯವಿರುತ್ತದೆ.

## ಧರ್ಮದಲ್ಲಿ ವ್ಯಾಪಕತೆ ಇರಬೇಕು.

ವಿಶ್ವಧರ್ಮವಾಗಲು ಎಲ್ಲ ತರಗತಿಯ ಜನರಲ್ಲಿ ದೇವರ ಕಲ್ಪನೆಯು ಬಂದು ಅವರು ತಮ್ಮ ಯೋಗ್ಯತೆಯಪ್ರಕಾರ ಉತ್ಕ್ರಾಂತಿಯನ್ನು ಪಡೆಯುವಂತೆ ಅದರ ವ್ಯವಸ್ಥೆ ಇರಬೇಕು. ಅಜ್ಞ ಜನರ ತಿಳುವಳಿಕೆಯಪ್ರಕಾರ ದೇವರು ದೃಶ್ಯರೂಪನಾಗಿದ್ದಾನೆಂದುಭಾವಿಸುವದು ಅವರಿಗೆ ಹೆಚ್ಚಿಗೆ ಅನುಕೂಲವಾದ್ದರಿಂದ ಇಂಥವರಿಗೆ ಮೂರ್ತಿಪೂಜೆಯು ಅವಶ್ಯವಾಗಿರುತ್ತದೆ. ಆದರೆ ಸೂಜ್ಞ ಜನರು ಇಂಥ ವಿಚಾರಗಳಿಗೆ ಮಹತ್ವ ಕೊಡಲಾರರು.

ಮತ್ತು ಜ್ಞಾನ ಇವುಗಳಲ್ಲಿ ಷಟ್‌ಸ್ಥಲಕ್ಕೆ ಅನುಸಾರವಾಗಿ ಸಂಬಂಧವನ್ನು ಇಟ್ಟು ಈ ಕ್ರಿಯೆಯು ಮೂಲಕವೇ ಕೆಳಗಿನಿಂದ ಉಚ್ಚ ಸ್ಥಿತಿಗೆ ಹೋಗಿ ಕಡೆಗೆ ನಿಜದಲ್ಲಿ ಬೆರೆಯುಬೇಕೆಂದು ಬೋಧಿಸಿದರು. ಈ ವಿಷಯವಾಗಿ ಬಸವೇಶ್ವರನು ಕೆಳಗೆ ಬರೆದಂತೆ ತನ್ನ ಒಂದು ವಚನದಲ್ಲಿ ನುಡಿದಿದ್ದಾನೆ. ಅದು ಏನಂದರೆ:--

ಭಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ. ಯುಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಪಾರಿ ಶರಣನೆನಿಸುವೆನಯ್ಯ ಮೆಲ್ಲಮೆಲ್ಲನೆ. ಎಡಹುವ ಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ. ಕೂಡಲಸಂಗಮದೇವಾ ನಿಮ್ಮಿಂದಧಿಕನೆನಿಸುವೆನಯ್ಯ.

ಇದರಲ್ಲಿ ಬಸವೇಶ್ವರನು ಮನುಷ್ಯನ ಉತ್ಕ್ರಾಂತಿಯುಮಾರ್ಗವನ್ನು ಬಹು ಚನ್ನಾಗಿ ಬೋಧಿಸಿದ್ದಾನೆ. ಇದರಲ್ಲಿಯೇ ವಿಶ್ವಧರ್ಮದ ತತ್ವಗಳು ಅಡಕವಾಗಿರುತ್ತವೆ. ಇವು ಇರುವಂಥ ಧರ್ಮಗಳು ವಿಶ್ವಧರ್ಮಗಳಾಗಲು ಅರ್ಹತೆಯುಳ್ಳವಾಗಿರುತ್ತವೆ.

## ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದುವದು.

ಪಾಶ್ಚಿಮಾತ್ಯ ತತ್ವಜ್ಞಾನಿಗಳು ದೃಶ್ಯ ವಸ್ತುವಿನಲ್ಲಿ ಪರವಸ್ತುವೆಂಬುದಿದೆ ಎಂದು ಹೇಳಲು ಧೈರ್ಯ ಮಾಡುವದಿಲ್ಲ ಮತ್ತು ಮನುಷ್ಯನು ಅಂತ್ಯದಲ್ಲಿ ಈ ಪರತತ್ವದಲ್ಲಿ ಪೂರ್ಣವಾಗಿ ಬೆರೆಯುತ್ತಾನೆಂತಲೂ ಅವರು ಹೇಳಲಾರರು. ಕ್ಯಾಂಟನು ಧರ್ಮವೆಂದರೆ ಪರಮಾತ್ಮನ ಅಪ್ಪಣೆಯ ಪ್ರಕಾರ ಮಾಡತಕ್ಕ ಕರ್ತವ್ಯವೆಂತಲೂ ಮಿಲ್ಲ ಎಂಬ ಇಂಗ್ಲಿಷ ತತ್ವಜ್ಞಾನಿಯು ಯಾವ ವಸ್ತುವು ಅತ್ಯುತ್ಕೃಷ್ಟವೋ ಅತ್ತಕಡೆ ಮನುಷ್ಯನ ಮನಸ್ಸನ್ನೂ ಅಭಿಲಾಷೆಗಳನ್ನೂ ಒಯ್ಯುವಂಥಾದ್ದೆಂತಲೂ ಮಾರ್ಟಿನೋ ಎಂಬವನು ಚಿರವಾಗಿ ಇರುವ ಪರಮಾತ್ಮನಲ್ಲಿ ಈ ಜಗತ್ತನ್ನು ಪರಿಪಾಲಿಸುವಂಥ ಒಂದು ದೈವೀ ಶಕ್ತಿ ಇದೆ ಎಂತಲೂ ಹೀಗೆ ಅನೇಕ ಬಗೆಯಾಗಿ ಹೇಳುತ್ತಾರೆ ಆದರೆ ಅಂತ್ಯವಸ್ತುವಿನಲ್ಲಿ ಬೆರೆತು ಹೋಗುವದು ಮನುಷ್ಯನಿಗೆ ಶಕ್ಯವೆಂದು ಅವರಲ್ಲಿ ಯಾರೂ ಹೇಳಲು ಎದೆಮಾಡಿಲ್ಲ. ಆದರೆ ಹಿಂದೂ ಸಮಾಜಗಳಲ್ಲೆಲ್ಲ ಮೋಕ್ಷದ ವಿಚಾರಗಳು ಪರಮಾತ್ಮನಲ್ಲಿ ಕೂಡಿ ಹೋಗುವದೇ ಇರುತ್ತದೆ. ಈ ತತ್ವವು

ಎಲ್ಲ ಧರ್ಮಗಳನ್ನು ಒಂದುಗೂಡಿಸಲು ಬಹು ಸಹಾಯಕವಾಗಿರುತ್ತದೆ. ಹಿಂದೂಧರ್ಮವು ಅದರಲ್ಲಿ ವಿಶೇಷವಾಗಿ ವೀರಶೈವ ಧರ್ಮವು ಈ ತತ್ವವನ್ನೇ ಸಾರಿರುತ್ತದೆ.

## ವ್ಯಕ್ತಿನಿರ್ಮಿತ ಧರ್ಮವಿರಕೂಡದು.

ವೀರಶೈವ ಧರ್ಮಸ್ಥಾಪನೆಗೆ ಯಾರೋ ಒಬ್ಬರು ಕಾರಣರೆಂದು ಅದರ ಇತಿಹಾಸವು ಹೇಳುವದಿಲ್ಲ. ಶೈವ ಧರ್ಮ ಮೊದಲ್ಗೊಂಡು ಅನೇಕರ ಪ್ರಯತ್ನಗಳಿಂದ ಅದು ಉತ್ಕ್ರಾಂತಿಯನ್ನು ಹೊಂದುತ್ತಲೇ ಬಂದಿದೆ. ಒಂದುವೇಳೆ ಬೌದ್ಧ, ಕ್ರಿಸ್ತಿ, ಇಸ್ಲಾಮು ಧರ್ಮಗಳಲ್ಲಿಯಂತೆ ಒಬ್ಬಾನೊಬ್ಬ ವ್ಯಕ್ತಿಯಮೂಲಕ ಧರ್ಮ ಸ್ಥಾಪನೆಯಾಯಿತೆಂದು ಹೇಳಿದಲ್ಲಿ ಅಂಥ ವ್ಯಕ್ತಿಯು ಕೆಲ ವಿಚಾರಗಳಲ್ಲಿ ತಪ್ಪುಗಳು ಸಿದ್ಧವಾದರೆ ಆ ಧರ್ಮದ ಮಹತ್ವವೇ ಹೊರಟುಹೋಗುತ್ತದೆ. ಆದ್ದರಿಂದ ಧರ್ಮದ ಮಹತ್ವವು ಮತ್ತು ಪ್ರಸಾರವು ಅದರಲ್ಲಿರುವ ತತ್ವಗಳ ಪ್ರಚಾರದ ಮೂಲಕ ಮುಂದುವರಿಯಬೇಕೇ ಹೊರತು ಅದು ಒಬ್ಬಾನೊಬ್ಬ ವ್ಯಕ್ತಿಯ ಪ್ರಯತ್ನದ ಮೇಲೆ ಅವಲಂಬನೆ ಹೊಂದಬಾರದು. ಹಾಗಾದಲ್ಲಿ ಅದಕ್ಕೆ ವ್ಯಾಪಕಸ್ವರೂಪು ಬರಲಾರದು. ವೀರಶೈವ ಧರ್ಮವನ್ನು ಪಂಚಾಚಾರ್ಯರಾಗಲಿ ಬಸವೇಶ್ವರನಾಗಲಿ ಹೀಗೆ ವ್ಯಕ್ತಿಗಳು ಹೊಸದಾಗಿ ಹುಟ್ಟಿಸಿದ್ದಿರುವದಿಲ್ಲ. ಅದು ಕಾಲಕಾಲಕ್ಕೆ ಉದ್ಭವಿಸಿದ ಅಸಂಖ್ಯ ಮಹಾನುಭಾವರ ಪ್ರಯತ್ನಗಳ ಮೂಲಕ ಪ್ರವಾಹರೂಪವಾಗಿ ಪುರಾತನ ಕಾಲದಿಂದ ಈವರೆಗೂ ಹರಿಯುತ್ತಬಂದಿರುತ್ತದೆ. ಅದರಲ್ಲಿ ಒಂದು ಪರಂಪರೆಯು ಇರುತ್ತದೆ. ಇಂಥ ಧರ್ಮವು ವಿಶ್ವಧರ್ಮವಾಗಲು ಶಕ್ಯವಿರುತ್ತದೆ.

## ಧರ್ಮದಲ್ಲಿ ವ್ಯಾಪಕತೆ ಇರಬೇಕು.

ವಿಶ್ವಧರ್ಮವಾಗಲು ಎಲ್ಲ ತರಗತಿಯ ಜನರಲ್ಲಿ ದೇವರ ಕಲ್ಪನೆಯು ಬಂದು ಅವರು ತಮ್ಮ ಯೋಗ್ಯತೆಯಪ್ರಕಾರ ಉತ್ಕ್ರಾಂತಿಯನ್ನು ಪಡೆಯುವಂತೆ ಅದರ ವ್ಯವಸ್ಥೆ ಇರಬೇಕು. ಅಜ್ಞ ಜನರ ತಿಳುವಳಿಕೆಯಪ್ರಕಾರ ದೇವರು ದೃಶ್ಯರೂಪನಾಗಿದ್ದಾನೆಂದುಭಾವಿಸುವದು ಅವರಿಗೆ ಹೆಚ್ಚಿಗೆ ಅನುಕೂಲವಾದ್ದರಿಂದ ಇಂಥವರಿಗೆ ಮೂರ್ತಿಪೂಜೆಯು ಅವಶ್ಯವಾಗಿರುತ್ತದೆ. ಆದರೆ ಸೂಜ್ಞ ಜನರು ಇಂಥ ವಿಚಾರಗಳಿಗೆ ಮಹತ್ವ ಕೊಡಲಾರರು.

ಆದ್ದರಿಂದ ವಿಶ್ವಧರ್ಮದಲ್ಲಿ ಇಂಥ ನಾನಾತ್ವಕ್ಕೆ ಆಸ್ಪದವಿರಬೇಕು. ವೀರಶೈವರ ಷಟ್‌ಸ್ಥಲ ಸಿದ್ಧಾಂತದಲ್ಲಿ ಈ ಬಗೆಯ ವಿವಿಧತ್ವಕ್ಕೆ ಇಂಬು ಇರುತ್ತದೆ.

## ಷಟ್‌ಸ್ಥಲದ ಮಹತ್ವ.

ಸಮಾಜದಲ್ಲಿ ಕೆಲವರು ಭಕ್ತಿಮಾರ್ಗಕ್ಕೆ ಒಲಿದವರುಂಟು. ಬೇರೆ ಕೆಲವರು ಜ್ಞಾನಮಾರ್ಗಕ್ಕೆ ಮತ್ತು ಇನ್ನುಳಿದವರು ಕರ್ಮಮಾರ್ಗಕ್ಕೆ ಹೀಗೆ ಅನೇಕ ಮಾರ್ಗಗಳಿಗೆ ಒಲಿದವರಿರುತ್ತಾರೆ. ಆದರೆ ಈ ಎಲ್ಲ ಮಾರ್ಗಗಳು ವೀರಶೈವ ಧರ್ಮದಲ್ಲಿ ಸಮಾವೇಶ ಮಾಡಲ್ಪಟ್ಟಿರುತ್ತವೆ. ಅವರ ಷಟ್‌ಸ್ಥಲ ಶಾಸ್ತ್ರವು ಇವೆಲ್ಲವುಗಳನ್ನು ಒಳಕೊಂಡಿರುತ್ತದೆ. ಅದರಲ್ಲಿ ಕ್ರಿಯೆ, ಜ್ಞಾನ, ಭಕ್ತಿ, ಯೋಗ ಇವುಗಳ ತತ್ವಗಳು ಅಡಕವಾಗಿರುತ್ತವೆ. ಈಬಗೆಯ ರಚನೆಯು ಯಾವ ಧರ್ಮದಲ್ಲಿ ಇದೆಯೋ ಅದು ವಿಶ್ವಧರ್ಮವಾಗಲು ಅರ್ಹವಾಗುತ್ತದೆ.

ಬಸವೇಶ್ವರನ ಕಾಲದಲ್ಲಿ ಈ ಎಲ್ಲ ತತ್ವಗಳುಳ್ಳ ವೀರಶೈವ ಧರ್ಮವು ಇಡೀ ದೇಶದಲ್ಲಿ ಹರವಲ್ಪಟ್ಟಿತು. ಆಗ ಮಹತ್ವವಾದ ಅನೇಕ ಮತಗಳ ಅನುಯಾಯಿಗಳು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಹೀಗೆ ಆ ಕಾಲದಲ್ಲಿ ಒಂದು ಮಹತ್ತರವಾದ ಕ್ರಾಂತಿಯು ದೇಶದಲ್ಲಿ ಉದ್ಭವಿಸಿತು. ವೀರಶೈವ ಧರ್ಮದಲ್ಲಿ ವಿಶ್ವಧರ್ಮದ ವಿಚಾರಗಳಿರುವದರಿಂದಲೇ ಇದು ಶಕ್ಯವಾಯಿತು.

---

# ನುಡಿದೇವಿ.

(ಶ್ರೀ. ಆನಂದಕವಿ-ಕುರುಗುಂದ)

---

(೧)

ನುಡಿದೇವಿ! ನುಡಿದೇವಿ!
ನುಡಿವುದಂ ನೀನೆ ನುಡಿ.
ನಿನ್ನಿಂದೆ ಜಗವೆಲ್ಲ
ತುಂಬಿ ತುಳಕಾಡಿ
ನಲಿಯುತಿದೆ, ಒಲಿಯುತಿದೆ.
ನೀನೊಬ್ಬಳಿಲ್ಲದಿರೆ
ಮೂಕಾಗಿ ಮಂಕಾಗಿ
ವಿಶ್ವವೇ ಶೂನ್ಯವಾಗ
ಬಹುದಲ್ಲವೆ ?

(೨)

ಓ! ಎನ್ನ ಮಾತೆ!
ಸಾಹಿತ್ಯದೇವಿ.
ನೀನಗೆ ಭಾವ
ನೀನೆನ್ನ ಜೀವ.
ಭಕ್ತಿಯಿಂದಪ್ಪಿರುವ
ಬಾಲನಂ ನೋಡು.
ಮುದ್ದೊಂದು ನೀಡು.
ಇದೆ, ಎನ್ನ ಆಶೆ!

---

# ಸ್ಫುಟ ವಿಷಯಗಳು.

---

ಶಿಲಾಶಾಸನಗಳ ಸಂಶೋಧನ:– ನಾವು ಈ ಸಂಚಿಕೆಯಲ್ಲಿ ಸಂಗೂರ ಶಿಲಾಶಾಸನದ ಅಂಶಗಳನ್ನು ಎತ್ತಿ ಬರೆದಿದ್ದೇವೆ. ಈ ಶಾಸನದಿಂದ ವೀರಶೈವರು ಶಾಸನ ಸಂಶೋಧನೆ ಮಾಡುವದು ಎಷ್ಟು ಅಗತ್ಯವಾದುದೆಂಬದು ವಾಚಕರಿಗೆ ತಿಳಿಯದೆ ಇರಲಾರದು. ಇಂಥ ಶಿಲಾಶಾಸನಗಳು ಉತ್ತರಕರ್ನಾಟಕದಲ್ಲಿ ಅದರಲ್ಲಿ ಮುಖ್ಯವಾಗಿ ನಿಜಾಮ ಪ್ರಾಂತದಲ್ಲಿ ವಿಶೇಷವಾಗಿದ್ದು ಅವುಗಳನ್ನು ವೀರಶೈವರು ತೀವ್ರವಾಗಿ ಬಹಿರಂಗಗೊಳಿಸುವದು ಬಹು ಅಗತ್ಯವದೆ. ಮೈಸೂರ ಪ್ರಾಂತದಲ್ಲಿ ಇರುವ ಶಿಲಾಶಾಸನಗಳು ಈ ಮೊದಲಿಗೆ ಹೊರಗೆಡವಲ್ಪಟ್ಟಿವೆ. ಆದರೆ ಅವುಗಳಿಂದ ವೀರಶೈವ ಸಂಸ್ಕೃತಿ ಮತ್ತು ಪ್ರಸಾರ ಇವುಗಳ ಮೇಲೆ ಪ್ರಕಾಶವು ಬಹು ಸ್ವಲ್ಪ ಮಟ್ಟಿಗೆ ಬಿದ್ದಿರುತ್ತದೆ. ಉತ್ತರ ಕರ್ನಾಟಕದ ಬ್ರಿಟಿಶ್ ಭಾಗ ಸೊಲ್ಲಾಪುರ ಜಿಲ್ಲೆ ಬೀದರ ಉಸ್ಮಾನಾಬಾದ ಕಲಬುರ್ಗಿ ಈ ಜಿಲ್ಲೆಗಳಲ್ಲಿ ಬಹುಕಡೆಗೆ ಶಿಲಾಶಾಸನಗಳಿದ್ದು ಅವುಗಳನ್ನು ವೀರಶೈವರು ಸಂಶೋಧಿಸುವ ಕಾರ್ಯವನ್ನು ಕೈಕೊಳ್ಳಬೇಕೆಂದು ನಮ್ಮ ಸೂಚನೆ ಇದೆ.

ಮುಂಬಯಿ ಸರಕಾರದವರು ಕೈಕೊಂಡ ಕರ್ನಾಟಕ ಸಂಸ್ಕೃತಿ ಸಂಶೋಧನ:— ಈ ಕಾರ್ಯಕ್ಕೋಸ್ಕರ ಮುಂಬಯಿ ಸರಕಾರದವರು ಈ ವರ್ಷ ೨೦ ಸಾವಿರ ರೂಪಾಯಿಗಳನ್ನು ತೆಗೆದಿಟ್ಟಿದ್ದು ಈ ಹಣವನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಕುರಿತು ಸೂಚನೆ ಮಾಡಲು ಒಂದು ಕಮೀಟಿಯನ್ನು ಏರ್ಪಡಿಸಿದ್ದಾರೆಂದು ನಮಗೆ ತಿಳಿಯುತ್ತಿದೆ ಈ ಕಾರ್ಯವನ್ನು ಕೈಕೊಂಡಿದ್ದಕ್ಕಾಗಿ ನಾವು ಸರಕಾರದವರನ್ನು ಬಹಳ ಅಭಿನಂದಿಸುತ್ತೇವೆ. ಈ ತರದ ಕಾರ್ಯಗಳನ್ನು ಕೆಲಮಟ್ಟಿಗೆ ಮದ್ರಾಸ ಮತ್ತು ಮೈಸೂರ ಸರಕಾರದವರು ಬಹಳ ದಿವಸಗಳಿಂದಲೂ ಮಾಡುತ್ತ ಬಂದಿರುತ್ತಾರೆ. ಆದರೆ ಮುಂಬಯಿ ವಿಶ್ವವಿದ್ಯಾಲಯದವರಾಗಲಿ ಇಲ್ಲವೆ ಮೈಸೂರ ಸರಕಾರದವರಾಗಲಿ ಇಂಥ ಯಾವ ಕಾರ್ಯವನ್ನೂ ಕೈಕೊಂಡಿಲ್ಲ. ಆದ್ದರಿಂದ ಈ ಕಾರ್ಯವು ಶೀಘ್ರವಾಗಿ ಜರಗಲೆಂದು ನಾವು ಆಶಿಸುತ್ತೇವೆ. ಸರಕಾರದವರು ಕೈಕೊಂಡ ಇಂಥ ಕಾರ್ಯಗಳು ಪ್ರತಿವರ್ಷ ನಡೆಯುವವೆಂದು ನಾವು

ಭರವಸೆ ತಾಳಲಿಕ್ಕೆ ಬರಲಾರದು. ಇವುಗಳಿಗೋಸ್ಕರ ಸ್ವತಂತ್ರ ಸಂಸ್ಥೆಗಳೇ ಬೇಕು. ಆದರೆ ಕರ್ನಾಟಕದಲ್ಲಿ ಇಂಥ ಕೆಲವು ಸಂಸ್ಥೆಗಳು ಅಲ್ಲಲ್ಲಿದ್ದರೂ ಜನರ ಉಪೇಕ್ಷಾಬುದ್ಧಿಯಮೂಲಕ ಅವು ಹೆಸರಿಗೆಮಾತ್ರ ಉಳಿದಿರುತ್ತವೆ. ವೀರಶೈವ ಸಮಾಜವಂತೂ ಇಂಥ ಕಾರ್ಯದಲ್ಲಿ ಏನೂ ಸಹಾಯ ಮಾಡುವದಿಲ್ಲೆಂಬದನ್ನು ನಾವು ಸ್ವಾನುಭವದಿಂದ ಹೇಳಬಲ್ಲೆವು. ಇಂಥ ಸ್ಥಿತಿಯು ಇದ್ದದರಿಂದಲೇ ವೀರಶೈವ ಸಂಸ್ಕೃತಿಯ ಪ್ರಕಾಶವು ಹಿಂದುಸ್ತಾನದಲ್ಲಿ ಎಲ್ಲಿಯೋ ಅಡಗಿ ಹೋಗಿರುತ್ತದೆ.

ಸಂಗೀತ ವಚನಗಳು:— ನಾವು ಹಿಂದಿನ ಮತ್ತು ಈಗಿನ ಸಂಚಿಕೆಗಳಲ್ಲಿ ಸಂಗೀತ ವಚನಗಳೆಂದು ಕೆಲವು ವಚನಗಳನ್ನು ಪ್ರಸಿದ್ಧಿಸಿದ್ದೇವೆ. ಅದೇ ಮಾದರಿಯ ಮೇಲೆ ವಚನಗಳನ್ನು ಸಂಗೀತಕ್ಕೆ ಹೊಂದಿಸಿ ನಮ್ಮ ಕಡೆಗೆ ಯಾರಾದರೂ ಕಳಿಸಿಕೊಟ್ಟಲ್ಲಿ ನಾವು ಅವರಿಗೆ ಬಹಳ ಆಭಾರಿಯಾಗುವೆವು. ಇಂಥವುಗಳನ್ನು ನಾವು ವಿಜಾಪುರ ಶ್ರೀ ಸಿದ್ಧೇಶ್ವರ ಹಾಯಸ್ಕೂಲಿನಲ್ಲಿ ಪ್ರಯೋಗ ಮಾಡಿ ನೋಡಲು ಅವು ಬಹು ಪರಿಣಾಮಕರವಾಗಿರುವದು ಕಂಡುಬಂದಿರುತ್ತವೆ. ಆದರೆ ವಚನಗಳನ್ನು ಸಂಗೀತಕ್ಕೆ ಹೊಂದಿಸುವಾಗ ಮೂಲ ವಚನಗಳಲ್ಲಿ ಬಹಳ ಬದಲಾವಣೆಯಾಗಬಾರದು. ಮತ್ತು ಅವು ಮಾನವ ಕುಲಕ್ಕೆಲ್ಲ ಅನ್ವಯಿಸುವಂಥ ಸಾಮಾನ್ಯ ವಚನಗಳೇ ಇರಬೇಕೆಂದು ನಾವು ಅವರಿಗೆ ಸೂಚಿಸುತ್ತೇವೆ.

---

# ಸಂಗೀತದಲ್ಲಿ ಶಿವಶರಣರ ವಚನಗಳು.

(ಲೇ— ಶ್ರೀ ಹರಪ್ಪ ವೀರಪ್ಪ ಪಾಟೀಲ ಸಂಗೀತ ಶಿಕ್ಷಕರು ಶ್ರೀ ಸಿದ್ಧೇಶ್ವರ
ಹೈಸ್ಕೂಲು ವಿಜಾಪುರ.)

[ಹಿಂದಿನಿಂದ ಮುಂದೆ ಸಾಗಿದ್ದು.]

೨೩

ರಾಗಃ— ಕಾಲಂಗಡ (ಕರ್ನಾಟಕಿ)  ತಾಲಃ— ದೀಪಚಂದಿ

ಅಮೃತಕ್ಕೆ ಹಸಿವುಂಟೆ । ಜಲಕೆ ತೃಷೆಯುಂಟೆ ।
ಘನಪುರುಷಂಗೆ । ವಿಷಯವುಂಟೆ ॥ಪಲ್ಲ॥

ಸದ್ಗುರು ಕಾರುಣ್ಯ । ವಿಡಿದು ಲಿಂಗಾರ್ಚನೆಯ ।
ಮಾಡುವ ಮಹಾಶರಣಂಗೆ । ಮುಕ್ತಿಯ ಬಯಕೆಯುಂಟೆ ॥೧॥

ಅವರುಗಳಿಗೆ ಅದು ಸ್ವಯಂಭು । ಸಹಜಸ್ವಭಾವ ಇನ್ನು ತೃಪ್ತಿ ।
ಆಪ್ಯಾಯನ ಅರಸಲುಂಟೆ ಉರಿಲಿಂಗ । ಪೆದ್ದಿಪ್ರಿಯ ವಿಶ್ವೇಶ್ವರಾ ॥೨॥

[ಉರಿಲಿಂಗಪೆದ್ದಿ]

೨೪

ರಾಗಃ— ಜೀವನಪುರಿ  ತಾಲಃ— ತ್ರಿತಾಲ

[ಅಜಿಪುರವಾಹೀ ಎಂಬಂತೆ]

ಮನವೆಂಬ ಮರ್ಕಟನು । ತನುವೆಂಬ ವೃಕ್ಷವನೇರಿ ।
ಇಂದ್ರಿಯಂಗಳೆಂಬ ಶಾಖೆ । ಶಾಖೆಗೆ ಹಾರಿ ॥ಪಲ್ಲ॥

ವಿಷಯಂಗಳೆಂಬ ಹಣ್ಣು । ಫಲಂಗಳ ಗ್ರಹಿಸಿ ।
ಭವದತ್ತ ಮುಖವಾಗಿ ಹೋಗುತ್ತಿದೆ ನೋಡಾ ॥೧॥

ಮನವೆಂಬ ಮರ್ಕಟ ನಿಮ್ಮ । ನೆನವೆಂಬ ಪಾಶದಿ ಕಟ್ಟಿ ।
ಎನ್ನನುಳಿಹಿಸಿ ಕೊಳ್ಳಯ್ಯಾ । ಅಖಂಡೇಶ್ವರಾ ॥೨॥

[ಷಣ್ಮುಖಸ್ವಾಮಿ]

೨೫

ರಾಗಃ— ಭೈರವಿ ತಾಲಃ— ತ್ರಿತಾಲ

[ನಿಸಿದಿನಿಮನಿ ಎಂಬಂತೆ]

ಭಕ್ತಿರೂಪನು ಬಸವ । ನಿತ್ಯರೂಪನು ಬಸವ ।
ಮುಕ್ತ್ಯಾನಂದ ಸ್ವರೂಪನು ಬಸವಣ್ಣನು ।
ಸದ್ರೂಪನು ಬಸವ । ಚಿದ್ರೂಪನು ಬಸವ ॥ಪಲ್ಲ॥

ಎತ್ತ ನೋಡಿದರತ್ತ ಪರಿಪೂರ್ಣನಾಗಿಪ್ಪನು ।
ಬಸವಣ್ಣನಿಂದ ನಿತ್ಯ । ಸುಖಿಯಾದೆನಯ್ಯಾ ।
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ॥೧॥

[ಸಿದ್ಧರಾಮ]

೨೬

ರಾಗಃ — ಶಂಕರಾ ತಾಲಃ— ಝಂಪತಾಲ

[ಸೀತಾಪತೇ ರಾಮರಾಧಾಪತೇ ಕೃಷ್ಣ ಎಂಬಂತೆ]

ಆಶೆಯುಳ್ಳನ್ನಕ್ಕ । ಒಬ್ಬರ ಆಶ್ರಯಿಸುವದು ।
ಆಶ್ರಯುದಾಸೆ । ಕಷ್ಟ ಕಾಣಿರಯ್ಯಾ ॥ಪಲ್ಲ॥

ಆಶೆಯೇ ದಾಸತ್ವ । ನಿರಾಶೆಯೇ ಈಶತ್ವ ।
ದಾಸತ್ವ ಈಶತ್ವ । ಈ ಅನುವ ವಿಚಾರಿಸಿ ॥೧॥

ನಿರಾಶೆಯಾಗಿಪ್ಪುದೇ । ಈಶಪದವಯ್ಯಾ ।
ಉರಿಲಿಂಗಪೆದ್ದಿಪ್ರಿಯ । ವಿಶ್ವೇಶ್ವರಾ ॥೨॥

[ಉರಿಲಿಂಗಪೆದ್ದಿ]

೨೭

ರಾಗಃ— ನಂದ ತಾಲಃ— ತ್ರಿತಾಲ

[ಹಾಸೋನಿ ನಾಚೋನಿ......ಎಂಬಂತೆ]

ಶಿವನೇ ದೈವ । ಕೊಲ್ಲದಿಪ್ಪುದೇ ಧರ್ಮ ।
ಅಧರ್ಮದಿಂದ ಬಂದುದ । ನೊಲ್ಲದಿಪ್ಪುದೆ ನೇಮ ॥ಪಲ್ಲ॥

ಆಶೆಯಿಲ್ಲದೆ ಇಪ್ಪುದೆ ತಪ । ರೋಷವಿಲ್ಲದೆ ಇಪ್ಪುದೆ ಜಪ ।
ವಂಚನೆಯಿಲ್ಲದೆ । ಇಪ್ಪುದೆ ಭಕ್ತಿ ॥೧॥
ಹೆಚ್ಚುಕುಂದಿಲ್ಲದೆ ಇಪ್ಪುದೆ ಸಮಯಾಚಾರ । ಇದುವೆ ಸತ್ಯ ಶಿವ
ಬಲ್ಲ ಶಿವನಾಣೆ ।
ಉರಿಲಿಂಗಪೆದ್ದಿ । ಪ್ರಿಯವಿಶ್ವೇಶ್ವರಾ ॥೨॥

[ಉರಿಲಿಂಗಪೆದ್ದಿ]

೨೮

ರಾಗಃ— ಬಾಗೇಶ್ರೀ (ಕರ್ನಾಟಕೀ) ತಾಲಃ— ಝಂಪತಾಲ

ಕಾಗೆ ಒಂದಗುಳು ಕಂಡರೆ । ಕರೆಯದೆ ತನ್ನ ಬಳಗವನೆಲ್ಲವನು ।
ಕೋಳಿ ಒಂದು ಗುಟುಕ ಕಂಡರೆ । ಕರೆಯದೆ ತನ್ನ ಕುಲವನೆಲ್ಲ
ವನು ॥ಪಲ್ಲ॥
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ। ಕಾಗೆ ಕೋಳಿಗಿಂತ ಕರಕಷ್ಟ
ಕೂಡಲಸಂಗಮದೇವಾ ॥೧॥

[ಬಸವಣ್ಣ]

೨೯

ರಾಗಃ— ದೇಸಕರ ತಾಲಃ— ತ್ರಿತಾಲ

[ಪುರುಷಾಸ ಸ್ತ್ರೀ ಎಂಬಂತೆ]

ಸೆಟ್ಟಿಯೆಂಬೆನೆ ಸಿರಿಯಾಳನ । ಮಡಿವಳನೆಂಬೆನೆ ಮಾಚಯ್ಯನ ।
ಡೋಹರನೆಂಬೆನೆ ಕಕ್ಕಯ್ಯನ ॥ಪಲ್ಲ॥
ಮಾದರನೆಂಬೆನೆ ಚನ್ನಯ್ಯನ ।
ಆನು ಹಾರುವನೆಂದಡೆ ಕೂಡಲ । ಸಂಗಯ್ಯ ನಗುವನಯ್ಯ ॥೧॥

[ಬಸವಣ್ಣ]

೩೦

ರಾಗಃ— ತಿಲಕಕಾಮೋದ ತಾಲಃ— ಏಕತಾಲ

[ಸುರಲೇ ಮಾನಸ..... ಎಂಬಂತೆ]

ನುಡಿಯಲ್ಲಿ । ಕರ್ಕಶವಿಲ್ಲದೆ ॥
ನಡೆಯಲ್ಲಿ ಬೇಸರವೋಗದೆ । ಹಿಡಿದ ಭಕ್ತಿಯ ಕಡೆತನಕ
ಬಿಡದೆ ॥ಪಲ್ಲ॥

ಬಡತನ ಎಡರು ಕಂಟಕಗಳು ಬಂದಲ್ಲಿ। ಚಿಂತೆಯಿಂದ ಕಾಂತಿ ಗುಂದದೆ।
ಅಡಿಗಡಿಗೆ ಶಿವಶಿವಾ ॥೨॥

ಎಂಬ ನುಡಿಯ ಮರೆಯದಿಪ್ಪ। ಸದ್ಭಕ್ತರಿಗೆ ಬೇಡಿದ ಪದವಿಯ ನೀವ।
ನಮ್ಮ ಅಖಂಡೇಶ್ವರಾ ॥೩॥

[ಷಣ್ಮುಖಸ್ವಾಮಿ]

೩೧

ರಾಗಃ — ಕಾಫಿ ತಾಲಃ — ತ್ರಿತಾಲ

[ಬಾಳಾಕಾರ್ಯೋಪಯೋಯಿನಾ ...ಎಂಬಂತೆ]

ಎಲ್ಲಿ ನೋಡಿದಡಲ್ಲಿ ನೀನೆ ದೇವಾ॥ ಎಲ್ಲಿ ಮುಟ್ಟಿದಲ್ಲಿ ನೀನೆ ದೇವಾ ॥ಪಲ್ಲ॥

ಎಲ್ಲಿ ಭಾವಿಸಿದಲ್ಲಿ ನೀನೆ ದೇವಾ। ಎಲ್ಲೆಡೆಯಲ್ಲಿ ನಿಮ್ಮ।
ಮಹಾಪ್ರಭೆಯ ಮುಸುಕಿತಾಗಿ। ಅಖಂಡೇಶ ನಾ ನೀನೆಂಬುದಕ್ಕೆ ತೆರಹಿಲ್ಲ ॥೧॥

[ಷಣ್ಮುಖಸ್ವಾಮಿ]

೩೨

ರಾಗಃ — ಮಿಶ್ರ ಪಹಾಡಿ ತಾಲಃ — ಕವ್ವಾಲಿ

[ವಂದಿತ ರಾಧಾಬಾಲಾ ಎಂಬಂತೆ]

ಎನ್ನ ಕಾಯದ ಕಠಿಣವ ಕಳೆಯಯ್ಯ। ಎನ್ನ ಜೀವದುಪಾಧಿಯ ಕಳೆಯಯ್ಯ॥

ಎನ್ನ ಪ್ರಾಣದ ಪ್ರಪಂಚವ ತೊಲಗಿಸಯ್ಯ।
ಎನ್ನ ಭಾವದ ಭ್ರಮೆಯ ಕೆಡಿಸಯ್ಯ।

ಎನ್ನ ಮನದ ವ್ಯಾಕುಳವ ಮಾಣಿಸಯ್ಯ ।
ಎನ್ನ ಕರಣೇಂದ್ರಿಯಗಳ । ಕಷ್ಟ ಗುಣವ ನಷ್ಟ ಮಾಡಯ್ಯ ॥ ಎನ್ನ
ಜೀವದುಪಾಧಿಯು ಕಳೆಯುಯ್ಯ ॥

ಎನ್ನೊಳಗೆ ನಿಮ್ಮ ಕರುಣಾ । ಅಮೃತವ ತುಂಬಯ್ಯಾ ।
ಗುರುವೆ ಅಖಂಡೇಶ್ವರಾ ॥೧॥

[ಷಣ್ಮುಖಸ್ವಾಮಿ]

**ವಿವರಣೆ:**-- ವೀರಶೈವರಲ್ಲಿ ಆರು ಸ್ಥಲಗಳಿದ್ದು ಅವುಗಳಿಗೆ ಅನುಸರಿಸಿ ನಡೆದರೆ ಭಕ್ತರು ಮುಕ್ತರಾಗುವರೆಂದು ಭಾವಿಸಲ್ಪಟ್ಟಿದೆ. ಆದರೆ ಈ ಆರು ಸ್ಥಲಗಳಿಗೆಲ್ಲ ನೈತಿಕ ಆಚಾರವೇ ತಳಹದಿಯಾಗಿರುತ್ತದೆ. ಇದಕ್ಕೋಸ್ಕರ ಮಾಚಿದೇವನು ಕೆಲವು ಸಂಸ್ಕೃತ ಆಧಾರಗಳನ್ನು ಕೊಟ್ಟಿರುತ್ತಾನೆ. ಅವನು ತನ್ನ ನಿರೂಪಣೆಗಳಲ್ಲಿ ಆಗಿಂದಾಗ್ಗೆ ಕೊಡುತ್ತಿರುವ ಆಧಾರಗಳ ಮೇಲಿಂದ ಅವನು ವಿದ್ವಾಂಸನಾಗಿದ್ದನೆಂದು ಊಹಿಸಬಹುದಾಗಿದೆ.

## ವಚನ.

೧೦. ಭವ ಬಂಧನಂಗಳ ಮೀರಿ ನಿಂದ ಭಕ್ತ ಮಹೇಶ್ವರರು ಕಾಮ ಕ್ರೋಧ ಲೋಭ ಮೋಹ ಮದಮತ್ಸರಂಗಳ ಹೊದ್ದದೆ, ಕ್ಷಮೆ ದಮೆ ಶಾಂತಿ ಸೈರಣೆ ಸತ್ಯ ನಿತ್ಯವೆಂಬ ಷಡ್ಗುಣ ಸಂಪದಂಗಳ ನಿಮಿಷಾರ್ಧವಗಲದಿರಬೇಕು. ಅದೆಂತೆಂದೊಡೆ "ಅಕ್ರೋಧವಾಚಾರ ಜಿತೇಂದ್ರಿಯತ್ವಂ ಕ್ಷಮಾ ದಯಾ ಸರ್ವಜನ ಪ್ರಿಯತ್ವಂ ನಿರ್ಲೋಭದಾನಂ ಸಗುಣಂ ಚ ಶೀಲಂ ಜ್ಞಾನಸ್ಯ ಚಿನ್ಹಂ ದಶಲಕ್ಷಣಾನಿ"-"ಯತೀಚ ವ್ರತೀಚ ಪತಿವ್ರತಾಚ ದಾತಾಚ ಭಕ್ತಶ್ಚ ಬಹುಶೃತಾಚ ತ್ಯಾಗೀಚ ಭೋಗೀಚ ತತ್ಸಂಗತಾಚ ಸಂದರ್ಶನ ಮಾತ್ರೇಣ ದಹಂತಿ ಪಾಪಾನಿ" ಇಂತೆಂದುದಾಗಿ ಸದ್ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ನಿರವಯದಾಚಾರವಿಡಿದು ಆಚರಿಸುವರೇ ನಿಜಮುಕ್ತರು ನೋಡಾ ಅಪ್ರಮಾಣ ಅಗೋಚರ ನಿಃಕಳಂಕ ಕಲಿದೇವರದೇವಾ.

---

**ವಿವರಣೆ:**--- ಮಡಿವಾಳ ಮಾಚಿದೇವನು ಈ ಕೆಳಗಿನ ವಚನದಲ್ಲಿ ಭಕ್ತನಲ್ಲಿ ಸತ್ಯ ಸದಾಚಾರ ಸದ್ಭಕ್ತಿ ಸತ್ಕ್ರಿಯೆ ಸಮ್ಯಜ್ಞಾನ ಸತ್ಕಾಯಕಗಳಿರಬೇಕೆಂದು ಹೇಳುತ್ತಾನೆ. ಆದ್ದರಿಂದ ಯಾವನು ಜಗತ್ತನ್ನು ಬಿಟ್ಟು ವರ್ತಿಸುತ್ತಾನೋ, ಯಾವನು ಉತ್ತಮ ರೀತಿಯಿಂದ ತನ್ನ ಕಾಯಕವನ್ನು ಅನುಸರಿಸುತ್ತ ಜೀವಿಸುವದಿಲ್ಲವೋ ಅವನು ಸದಾಚಾರಿಯಲ್ಲವೆಂದು ಅವನ ಅಭಿಪ್ರಾಯವು. ಇವನಿಗೆ ಕಾಲಕರ್ಮದ ಭಯವು ತಪ್ಪಲಾರದು. ಅವನು ಜಗತ್ತಿನಲ್ಲಿಯು ಅನೇಕ ತರದ ಬಾಹ್ಯಾ

ಡಂಬರಗಳಿಗೆ ಮನ ಒಲಿದು ಹಲವು ಕ್ಷೇತ್ರಗಳಿಗೆ ಓಡಾಡಿ ದ್ರವ್ಯವನ್ನು ಕಾಂಕ್ಷಿಸುತ್ತ ಕಾಯ ಕರಣ ಇಂದ್ರಿಯಗಳಲ್ಲಿ ಕಳವಳಪಡುತ್ತ ಕಡೆಗೆ ನಷ್ಟಹೊಂದುತ್ತಾನೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

## ವಚನ.

೧೧. ಕಾಯದ ಕಳವಳದಿಂದ, ಕರಣದ ಕಳವಳದಿಂದ, ಇಂದ್ರಿಯ ಕಳವಳದಿಂದ, ವಿಷಯದ ಕಳವಳದಿಂದ, ಮೋಹದ ಕಳವಳದಿಂದ, ಮಾಯಾಪಾಶ ಪಾಕುಳದಲ್ಲಿ, ಜನ್ಮ, ಜರೆ, ಮರಣಕ್ಕೊಳಗಾದ ಭವಿಗೆ ಅನಂತ ದೈವವಲ್ಲದೆ, ಭವರಹಿತ ಸದ್ಭಕ್ತಂಗೆ ಅನಂತ ದೈವ ಉಂಟೇ ಹೇಳಾ? ಸೂಳೆಗೆ ಅನಂತ ಪುರುಷರ ಸಂಗವಲ್ಲದೆ ಗರತಿಗೆ ಅನಂತ ಪುರುಷರ ಸಂಗ ಉಂಟೇ? ಚೋರಂಗೆ ಪರದ್ರವ್ಯವಲ್ಲದೆ ಸತ್ವ ಸಾತ್ವಿಕಂಗೆ ಪರದ್ರವ್ಯ ಉಂಟೇ? ಪರಮ ಪಾತಕಂಗೆ ಹಲವು ತೀರ್ಥ, ಹಲವು ಕ್ಷೇತ್ರವಲ್ಲದೆ ಪರಮ ಸದ್ಭಕ್ತಂಗೆ ಉಂಟೇ? ಗುರುದ್ರೋಹಿ, ಲಿಂಗ ದ್ರೋಹಿ, ಮಾತೃ ಪಿತೃ ದ್ರೋಹಿಗಳಿಗೆ ಕಾಲ ಕಾಮ ಕರ್ಮದ ಭಯವಲ್ಲದೆ, ಸತ್ಯ ಸದಾಚಾರ ಸದ್ಭಕ್ತಿ ಸತ್ಕ್ರಿಯೆ ಸಮ್ಯಜ್ಞಾನ ಸತ್ಕಾಯಕ ಸದ್ಧರ್ಮಿಗಳಿಗೆ ಉಂಟೇ ಹೇಳಾ ಕಲಿದೇವರದೇವಾ?

---

**ವಿವರಣೆ**:— ವೀರಶೈವರು ಅಷ್ಟಾವರಣ, ಪಂಚಾಚಾರ, ಅರ್ಪಿತಾವಧಾನಗಳು, ಲಿಂಗಾಂಗ ಸಂಬಂಧಗಳು, ಷಟ್‌ಸ್ಥಲ ವಿಭೇದ ಇವುಗಳನ್ನು ಅರಿದು ಆಚರಿಸಬೇಕು. ಹೀಗೆ ಆಚರಿಸದೇ ಇದ್ದವನು ಲಿಂಗವಂತನೇ ಅಲ್ಲ. ಆದರೆ ಈ ಆಚಾರಗಳಿಗೆಲ್ಲ ಮೂಲವಾದದ್ದು ಸದಾಚಾರವೇ ಇರುತ್ತದೆ. ಮನುಷ್ಯನು ದುರಾಚಾರಗಳನ್ನು ದೂರಮಾಡಿದ್ದಾದರೆ ಮೇಲೆ ಹೇಳಿದ ಧರ್ಮಾಚಾರಗಳು ಮನುಷ್ಯನಲ್ಲಿ ನೆಲೆಗೊಳ್ಳುವವು. ಅಷ್ಟಾವರಣಗಳಲ್ಲಿ ಬಹಿರಂಗ ಅಷ್ಟಾವರಣ, ಮತ್ತು ಅಂತರಂಗ ಅಷ್ಟಾವರಣಗಳೆಂದು ಇದ್ದು ಅವುಗಳಂತೆ ಆಚರಿಸಿದಲ್ಲಿ ಶಿವಯೋಗವು ಪ್ರಾಪ್ತವಾಗುತ್ತದೆ. ಸಮಾಜದಲ್ಲಿ ಹೇಗೆ ನಡಿಯಬೇಕೆಂಬುದನ್ನು ಪಂಚಾಚಾರವು ತಿಳಿಸಿಕೊಡುತ್ತದೆ. ಅಂಗದಲ್ಲಿ ಲಿಂಗವು ಯಾವ ಯಾವ ಸ್ವರೂಪದಲ್ಲಿ ನೆಲೆಗೊಳ್ಳುತ್ತ ಹೋಗುತ್ತದೆಂಬುದನ್ನು ಷಡ್ಲಿಂಗಗಳ ಜ್ಞಾನವು

ಆರುಹಿಕೊಡುತ್ತದೆ. ಅರ್ಪಿತಾವಧಾನಗಳಿಂದ ಅಂಗಲಿಂಗಸಂಬಂಧಗಳು ನೆಲೆಗೊಳ್ಳುವವು. ಷಟ್‌ಸ್ಥಲ ಜ್ಞಾನವು ಇವೆಲ್ಲ ವಿಷಯಗಳನ್ನೊಳಕೊಂಡು ಲಿಂಗಾಂಗ ಸಾಮರಸ್ಯದ ರೀತಿಯನ್ನು ತಿಳಿಸುತ್ತದೆ. ಆದರೆ ಈ ಎಲ್ಲ ಕಾರ್ಯಗಳನ್ನು ಮಾಡುವಲ್ಲಿ ನೈತಿಕಾಚರಣೆಯೇ ಬೇಕು.

## ವಚನ.

೧೨. ನಾವು ಶಿವಭಕ್ತರೆಂದು ಹೇಳುವ ಅಣ್ಣಗಳಿರಾ, ನೀವು ಶಿವಭಕ್ತರೆಂತಾದಿರಿ ಹೇಳಿರಣ್ಣಾ. ಅರಿಯದಿರ್ದಡೆ ಕೇಳಿರಣ್ಣಾ. ಆರು ವೈರಿಗಳ ಮುರಿಯಕಟ್ಟಿ ಅಷ್ಟಮದವ ತೂರಿ ಸಪ್ತವ್ಯಸನಂಗಳ ಮುರಿದು ಸದ್ಭಕ್ತಿಯ ನೆಲೆಕಲೆಗಳ ತಿಳಿದು ಅಷ್ಟಾವರಣದ ಗೊತ್ತ ಮುಟ್ಟಿ ನೋಡಿ ಪಂಚಾಚಾರದ ಭೇದವ ತಿಳಿದು ಷಡ್ವಿಧ ಲಿಂಗಾಂಗದ ಮೂಲವನರಿದು ಷಡ್ವಿಧ ಅರ್ಪಿತಾವಧಾನವನಾಚರಿಸಿ ಷಟ್‌ಸ್ಥಲ ಮಾರ್ಗವಿಡಿದಾಚರಿಸುವ ಸದ್ಭಕ್ತರಿಗೆ ಅತಿಭೃತ್ಯನಾಗಿ ಹಮ್ಮು ಬಿಮ್ಮುಗಳಿಲ್ಲದೆ ನಡೆ ನುಡಿ ಸಂಪನ್ನರಾದವರೇ ಶಿವಭಕ್ತರು ಕಾಣಾ ಕಲಿದೇವರ ದೇವಾ.

**ವಿವರಣೆ**:— ಲಿಂಗವಂತನಿಗೆ ಭೃತ್ಯಾಚಾರವು ಮಹತ್ವವಾದುದು. ಸತ್ಯಶುದ್ಧರೀತಿಯಿಂದ ತನ್ನ ಉಪಜೀವನದ ಹೋರೆಯನ್ನು ಅವನು ಮಾಡಿ ತನಗೆ ದೊರೆತದ್ದನ್ನು ಪರಮಾತ್ಮನಿಗೆ ಸಮರ್ಪಿಸಿ ಪ್ರಸಾದ ಭೋಗಿಯಾಗಿ ಇರಬೇಕು. ಅವನು ಪರದೈವ, ಪರಸ್ತ್ರೀ, ಪರನಿಂದೆ, ಪರಹಿಂಸೆ, ಪರವಾದ ಇವುಗಳಲ್ಲಿ ತೊಡಗಬಾರದು.

## ವಚನ.

೧೩. ಲಿಂಗಾಂಗಿಗಳೆಂದು ನುಡಿವ ಅಪ್ಪಗಳಿರಾ, ಲಿಂಗಾಂಗಿಗಳೆಂತಾದಿರಿ ಹೇಳಿರಣ್ಣಾ. ಅರಿಯದಿರ್ದಡೆ ಕೇಳಿರಣ್ಣಾ ಲಿಂಗಾಂಗದ ಭೇದವ. ಪರದೈವವ ನೆನೆಯದೆ ಪರಸ್ತ್ರೀಯರ ಮುಟ್ಟದೆ ಪರದ್ರವ್ಯವನಪಹರಿಸದೆ ಪರನಿಂದೆಯನಾಡದೆ ಪರಹಿಂಸೆಗೊಡಂಬಡದೆ ಪರವಾದವ ಕಲ್ಪಿಸದೆ ಸತ್ಯಶುದ್ಧ ಕಾಯಕವ ಮಾಡಿ ನಿರ್ವಂಚಕತ್ವದಿಂದ ಸಮರ್ಪಿಸಿ ಅತಿ ಭೃತ್ಯನಾಗಿ ಆಚರಿಸುವರೇ ಲಿಂಗಾಂಗಿಗಳು ನೋಡಾ ಕಲಿದೇವರದೇವಾ.

---

**ವಿವರಣೆ**:-- ಮಡಿವಾಳ ಮಾಚಿದೇವನು ಕೆಳಗಿನ ವಚನದಲ್ಲಿ ದಾಸೋಹದ ರೀತಿಯನ್ನು ಹೇಳಿದ್ದಾನೆ. ಈ ಕಾಲಕ್ಕೆ ದಾಸೋಹವೆಂದರೆ ಸಿಕ್ಕಸಿಕ್ಕವರಿಂದ ಬೇಡಿ ತಂದು, ಮಠಕ್ಕೆ ಬಂದಬಂದವರಿಗೆ ಊಟಹಾಕುವದೇ ದಾಸೋಹವೆಂಬ ತಿಳವಳಿಕೆ ಇದೆ. ಆದರೆ ಬಸವಾದಿ ಪ್ರಮಥರ ಕಾಲದಲ್ಲಿ ದಾಸೋಹಕ್ಕೆ ಈ ಅರ್ಥವಿರಲಿಲ್ಲ ಅರ್ಪಣಭಾವದಿಂದ ತಾನು ಗಳಿಸಿದ್ದನ್ನು ಸಮಾಜಕ್ಕೆ ಒಪ್ಪಿಸಬೇಕು. ಹೀಗೆ ಒಪ್ಪಿಸುವಲ್ಲಿ ಅಹಂಭಾವವೆಂಬುದನ್ನು ಸಂಪೂರ್ಣವಾಗಿ ತೊಲಗಿಸಿ ತಾನು ಸಮಾಜದ ದಾಸನಿದ್ದೇನೆಂಬ ಭಾವವನ್ನು ಹಿಡಿದು ವರ್ತಿಸಿದ್ದಾದರೆ ಅದೇ ದಾಸೋಹವು. ಆದುದರಿಂದ ಭಕ್ತನು ಒಂದು ಕಾಯಕವನ್ನು ಮಾಡಿ ದುಡಿದು ತಂದು ಈಶ್ವರನಿಗೆ ಅರ್ಪಿಸಬೇಕು. ಈ ಅರ್ಪಣೆಯಲ್ಲಿ ನಾನು ಈಗ ಮಾಡುವೆನು ಅಥವಾ ಮುಂದೆ ಮಾಡುವೆನು ಎಂಬ ಭಾವವು ಇರತಕ್ಕದಲ್ಲ. ಈ ಬಗೆಯ ವಿಚಾರರಹಿತನಾದಲ್ಲಿ ಅದು ಶುದ್ಧಭಾವವು. ಇಂಥ ಭಾವದಿಂದ ಆಚರಿಸಿದ್ದೇ ದಾಸೋಹವೆಂದೆನಿಸಿಕೊಳ್ಳುತ್ತದೆ.

## ವಚನ.

೧೪. ದಾಸೋಹವೆಂಬನ್ನಬರ ಈಶ್ವರ ಪೂಜೆಯುಲಾಚಾರದಲ್ಲಿರಬೇಕು. ಮಾಡೆನೆಂಬ ನೇಮ ಬೇಡ. ಮಾಡಿಹೆನೆಂಬ ಕೃತ್ಯಬೇಡ. ಭಾವವಳವಟ್ಟಲ್ಲಿ ಭಾವಶುದ್ಧವಾಯಿತ್ತು.

**ವಿವರಣೆ**:— ಭಕ್ತಿಯು ಶುದ್ಧವೂ ಸಾತ್ವಿಕವೂ ಆಗಿರತಕ್ಕದ್ದು, ಅದರಲ್ಲಿ ಬಾಹ್ಯಾಡಂಬರವಿರಬಾರದು. ಆದರೆ ಅರಸರೂ ಬ್ರಾಹ್ಮಣರೂ ಶೀಲವಂತರೂ ವ್ಯಾಪಾರಸ್ಥರೂ ಭಕ್ತಿಯುಳ್ಳವರೆಂದು ತೋರಿಸುತ್ತಿದ್ದರೂ, ಅವರು ಯಾವ ಸಂದರ್ಭದಲ್ಲಿ ಭಕ್ತಿ ಹೀನರಾಗಿ ಆಚರಿಸುತ್ತಾರೆಂಬದನ್ನು ಇಲ್ಲಿ ವಚನಕಾರನು ಹೇಳಿದ್ದಾನೆ. ಇವರು ಭಕ್ತಿಯುಳ್ಳವರೆಂದು ಹೇಳುವದಕ್ಕೆ ಸಾಕ್ಷಿ ಯಾರೆಂದರೆ ಅನೇಕ ಕೃತ್ರಿಮ ಆಟಗಳನ್ನಾಡಿ ಜನರ ರಂಜನೆ ಮಾಡುವ ಡೊಂಬನೇ ಎಂದು ಇವರನ್ನು ಕುರಿತು ಚೇಷ್ಟೆಯಾಡಿದ್ದಾನೆ.

## ವಚನ.

೧೫. ಅರಿಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು. ಬ್ರಾಹ್ಮಣನ ಭಕ್ತಿ ಮುಟ್ಟು ತಟ್ಟಿನಲ್ಲಿ ಹೋಯಿತ್ತು. ಶೀಲವಂತನ ಭಕ್ತಿ ಪ್ರಪಂಚಿನಲ್ಲಿ ಹೋಯಿತ್ತು. ಸೆಟ್ಟಿಯ ಭಕ್ತಿ ಕುಟಿಲ ವ್ಯಾಪಾರದಲ್ಲಿ ಹೋಯಿತ್ತು. ನೀವು ಕೇಳಿರೋ. ಇಂಥವರ ಭಕ್ತಿಗೆ ಊರಿಂದ ಹೊರಗಣ ಡೊಂಬನೇ ಸಾಕ್ಷಿ ಕಾಣಾ ಕಲಿದೇವರದೇವಾ.

---

**ವಿವರಣೆ**:— ಭಕ್ತನು ಪರಮಾತ್ಮನಲ್ಲಿ ದೃಢವಾದ ಭಕ್ತಿಯುಳ್ಳವನಾಗಿ ಆಚರಿಸಬೇಕು. ಭಕ್ತಿಯು ಇರದಿದ್ದರೆ ಪರಮಾತ್ಮನು ಸಮೀಪದಲ್ಲಿದ್ದರೂ ಕೂಡ ಅವನು ತೋರನು. ವಚನಕಾರನು ತನ್ನ ಈ ಅಭಿಪ್ರಾಯವನ್ನು ಕೆಲವು ಉದಾಹರಣೆಗಳನ್ನು ಕೊಟ್ಟು ಇಲ್ಲಿ ಸ್ಪಷ್ಟಪಡಿಸಿದ್ದಾನೆ. ಆದರೆ ಈ ಭಕ್ತಿಯಲ್ಲಿ ವಂಚನೆ ಇರಕೂಡದು. ಇಲ್ಲದಹೋದರೆ ಅವನ ಶ್ರಮವು ವ್ಯರ್ಥವು.

## ವಚನ.

೧೬. ಹುಟ್ಟಿದ ಬೀಜವಿದಡೇನು ಧರೆಯೊಳಗೆ? ಅಟ್ಟಣಬಾರದ ಮಡಿಕೆ ಇದ್ದಡೇನಯ್ಯಾ ಮನೆಯೊಳಗೆ? ಶಿವ ನಿಮ್ಮ ಮುಟ್ಟದ ಮನವಿದ್ದಡೇನಯ್ಯಾ ತನುವಿನೊಳಗೆ? ಕೆಚ್ಚಲ ಕಚ್ಚಿದ ಉಣ್ಣೆ ಬಲ್ಲುದೇ ಕ್ಷೀರದ ರುಚಿಯನು? ಬಚ್ಚಲೊಳಗಣ ಬಾಲಹುಳು ಬಲ್ಲುದೇ ನಿಚ್ಚಳದ ನೀರಿನನುಭವವ? ನಿಚ್ಚ ನಿಚ್ಚಲೋದುವ ಗಿಳಿ ಬಲ್ಲುದೇ ತನಗೆ ಬಹ ಬೆಕ್ಕಿನ ಬಾಧೆಯ? ಪುಚ್ಚಗೊಂಡ ನಾಯಿ ಬಲ್ಲುದೇ ಸಾಕಿದೊಡೆಯನ? ಇದು ಕಾರಣ ಒಡಲ ಪಡೆದರೇನು? ಮಡದಿಯರ ನೆರಹಿದರೇನು? ಒಡವೆಯ ಗಳಿಸಿದರೇನು? ಶಿವನೇ ನಿಮ್ಮನರಿಯದ ಮನುಜನ ಒಡಲೆಂಬುದು ಹೊಲೆ ಜೋಗಿಯ ಕೈಯ್ಯ ಒಡೆದ ಸೋರೆಯಂತೆ ಕಾಣಾ ಕಲಿದೇವರದೇವಾ.

---

**ವಿವರಣೆ**:— ಮಾಚಿದೇವನು ಬಸವಣ್ಣನನ್ನು ಕುರಿತು ಇಲ್ಲಿ ಉಲ್ಲೇಖಿಸಿದ್ದಾನೆ. ಬಸವಣ್ಣನು ತನ್ನ ಜೀವಿತದಲ್ಲಿ ಭಕ್ತಿಯಿಂದ ಹೇಗೆ ನಡೆಯಬೇಕು, ಮುಕ್ತಿಯ ಹದನಾವುದು ಎಂಬುದನ್ನುಪದೇಶಿಸಿದ್ದಾನೆ. ಮುಕ್ತಿಯನ್ನು ಷಟ್‌ಸ್ಥಲಾಚರಣೆಯಿಂದ ಹೇಗೆ ಹೊಂದಬೇಕೆಂಬುದನ್ನು ಅವನು ಅರುಹಿದನು. ಕಡೆಗೆ ಬಸವಣ್ಣನೇ ತನ್ನನ್ನು ನಿಚ್ಚಲಿಂಗಾರ್ಚನೆಯಲ್ಲಿರಿಸಿ ರಕ್ಷಿಸಿದನೆಂದು ವಚನಕಾರನು ಹೇಳುತ್ತಾನೆ. ಇದರಲ್ಲಿ ಮಾಚಿದೇವನು ತನ್ನ ಕಾಯಕದಿಂದ ಶರಣರನ್ನು ಸೇವಿಸುತ್ತ ಕಲ್ಯಾಣ ಪಟ್ಟಣದಲ್ಲಿ ಇರುತ್ತಿದ್ದನೆಂಬದನ್ನು ಊಹಿಸಬಹುದಾಗಿದೆ.

## ವಚನ.

೧೭. ಮಾರಾರಿಯ ಬೆಸನದಿಂದ ಬಸವಣ್ಣ ಧಾರುಣಿಗೆ ಅವತರಿಸಿ ಸಾರ ಸದ್ಭಕ್ತಿಯ ತೋರಿದನು. ಶಿವಶರಣರೆಲ್ಲರಿಗೆ ಭಕ್ತಿಯ ಸಂಚಸ ಮುಕ್ತಿಯ ಭೇದವನುಪದೇಶಿಸಿದನು ಬಸವಣ್ಣ. ಶಿವಶರಣರೆಲ್ಲರಿಗೆ ನಿತ್ಯಲಿಂಗಾರ್ಚನೆಯೊಳಗೆ ಎನ್ನನಿರಿಸಿ ರಕ್ಷಿಸಿದಾತ ಬಸವಣ್ಣ ಕಾಣಾ ಕಲಿದೇವಯ್ಯಾ.

**ವಿವರಣೆ**:— ಇದರಲ್ಲಿ ಮಡಿವಾಳ ಮಾಚಿದೇವನು ಮಹಾದೇವಿಯಕ್ಕನ ಚರಿತ್ರೆಯನ್ನು ವಿವರಿಸುವಂತೆ ಕಂಡುಬರುತ್ತದೆ. ಅವನು ಆಕೆಯ ವಿಷಯವಾಗಿ ಇಲ್ಲಿ ಹೇಳುವದೇನಂದರೆ, ಅವಳು ಸಂಸಾರಿಯಾಗಿದ್ದರೂ ಮುಂದೆ ಅದರಿಂದ ವಿರಹಿತಳಾದಳು. ಭವಿಯ ಸಂಗವನ್ನು ಬಿಟ್ಟು ಭವಬಾಧೆಯನ್ನು ಹರಿದಳು. ಈ ನುಡಿಗಳು ಅರ್ಥಬೋಧಕವಾಗಿವೆ. ಮಡಿವಾಳ ಮಾಚಿದೇವನು ಮಹಾದೇವಿಯಕ್ಕನ ಸಮಕಾಲೀನನು. ಆದ್ದರಿಂದ ಅವನಿಗೆ ಮಹಾದೇವಿಯಕ್ಕನ ಚರಿತ್ರೆಯ ನಿಜಾಂಶಗಳು ಗೊತ್ತಿರಬೇಕು. ಅವುಗಳನ್ನು ಅವನು ಇಲ್ಲಿ ಉಲ್ಲೇಖಿಸಿದ್ದಾನೆಂದು ತಿಳಿದರೆ ಈ ವಚನವು ಹರಿಹರನ ವಿವರಣೆಗಳನ್ನು ಸಮರ್ಥಿಸುವದಾಗಿ ತೋರುತ್ತದೆ. ಮಹಾದೇವಿಯಕ್ಕನು ಮೊದಲು ಕೌಶಿಕನೊಡನೆ ಲಗ್ನವಾಗಿರಬೇಕೆಂಬ ಅಭಿಪ್ರಾಯವು ಇಲ್ಲಿ ಬಲಪಡುತ್ತದೆ. ಮಹಾದೇವಿಯಕ್ಕನಿಗೋಸ್ಕರ ಕಲ್ಯಾಣ ಪಟ್ಟಣದಲ್ಲಿ ಶಿವಶರ

ಣರು ಎಷ್ಟು ಪೂಜ್ಯ ಭಾವವನ್ನು ವಹಿಸಿದ್ದರೆಂಬದನ್ನು ನಾವು ಇಲ್ಲಿ ಊಹಿಸಬಹುದಾಗಿದೆ. ಮಾಚಿದೇವನು ಉದ್ಯೋಗದಿಂದ ಮಡಿವಳನಾಗಿದ್ದು ಈ ವಚನದಲ್ಲಿ ಅವನು ತನ್ನ ಉದ್ಯೋಗವನ್ನು ಉಲ್ಲೇಖಿಸಿ ಅದರ ಮೂಲಕ ಮಹಾದೇವಿಯಕ್ಕನನ್ನು ಸೇವಿಸುತ್ತ ಇದ್ದದ್ದನ್ನೂ ಮಹಾದೇವಿಯಕ್ಕನು ಸಹ ತನ್ನಗೋಸ್ಕರ ಎಷ್ಟು ಆದರ ಭಾವವನ್ನು ವಹಿಸಿದ್ದಳೆಂಬುದನ್ನೂ ಬಹು ಮಾರ್ಮಿಕ ರೀತಿಯಿಂದ ಇಲ್ಲಿ ವಿವರಿಸಿದ್ದಾನೆ. ಅದರಂತೆಯೇ ಮಹಾದೇವಿಯಕ್ಕನೂ ಬಸವಣ್ಣನವರೂ ಪರಸ್ಪರವಾಗಿ ಎಷ್ಟು ಆದರ ಮತ್ತು ಪ್ರೀತಿಯುಳ್ಳವರಾಗಿದ್ದರೆಂಬದೂ ಇಲ್ಲಿ ಹೇಳಲ್ಪಟ್ಟಿದೆ.

(೧೮) ಕಾಮಿಯಾಗಿ ನಿಃಕಾಮಿಯಾದಳು. ಸೀಮೆಯಲ್ಲಿದ್ದು ನಿಃಸ್ಸೀಮೆಯಾದಳು. ಭವಿಯ ಸಂಗವ ತೊರೆದು ಭವಬಾಧೆಯ ಹರಿದಳು. ಬಸವಣ್ಣಗತಿ ಎಂದು ಬರಲು ನಾನು ಮಡಿಯ ಹಾಸಿ ನಡಿಸಿದೆನು. ನಾ ನಡೆವುದಕ್ಕೆ ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು. ಆ ಮಡಿಯ ಬೆಳಗಿನ ಬೆಳಗಿನೊಳಗೆ ನಿರ್ವಯಲಾದಳು. ಕಲಿದೇವಾ ಮಹಾದೇವಿಯಕ್ಕಗಳ ನಿಲವ ಬಸವಣ್ಣನ ಕೃಪೆಯಿಂದಲರಿದೆನಯ್ಯಾ.

---

**ವಿವರಣೆಃ—** ಈ ಕೆಳಗಿನ ವಚನದಲ್ಲಿ ಮಡಿವಾಳ ಮಾಚಿದೇವನು ಪ್ರಭುದೇವರನ್ನು ಕುರಿತು ಉಲ್ಲೇಖಿಸಿದ್ದಾನೆ. ಪ್ರಭುವು ಒಬ್ಬ ಶ್ರೇಷ್ಠ ಜಂಗಮನೆಂಬ ಭಾವವನ್ನು ತಾಳಿ ಅವನು ಈ ವಚನವನ್ನು ನುಡಿದಿದ್ದಾನೆ. ಪ್ರಭುದೇವನು ತೇಜಸ್ಸುಳ್ಳ ವರ್ತನೆಯುಳ್ಳವನಾಗಿ ಜಗತ್ತನ್ನು ಉದ್ಧಾರ ಮಾಡಲು ಜನರಿಗೆ ಬೋಧಿಸುತ್ತ ಹೇಗೆ ಸಂಚರಿಸುತ್ತಿದ್ದನೆಂಬುದನ್ನು ವಚನಕಾರನು ಇಲ್ಲಿ ಹೇಳಿದ್ದಾನೆ.

## ವಚನ

೧೯. ಸ್ಥೂಲ ಕಂಥೆ, ಸೂಕ್ಷ್ಮ ಟೊಪ್ಪರ, ಸತ್ಯ ದಂಡ, ಶಾಂತಿ ಭಸಿತ, ಸುಚಿತ್ತ ಮಣಿ, ತತ್ವ ಕರ್ಪುರ, ವೈರಾಗ್ಯ ಹಾವುಗೆ, ಮನ ದೃಢವೇ ಕೌಪೀನ, ಆಚಾರವೇ ಕಂಕಣ, ಕ್ಷಮೆ ದಮೆಯೇ ಕರ್ಣ

ಕುಂಡಲ, ಇಂತಿವೆರಿಸಿ ಸುೀವನು, ಜಗತ್ಪಾವನ ಮಾಡಲೆಂದು, ತನ್ನ ಒಲುಮೆಯ ಶರಣರಿಗೆ ನಿಜಸುಖವನೀಯಲೆಂದು. ಕಲಿದೇವಾ.'ನಿಮ್ಮ ಶರಣ ಪ್ರಭುದೇವರ ಶ್ರೀಪಾದವ ಕಂಡು ಅರ್ಚಿಸಿ ಪೂಜಿಸಿ ನಿಶ್ಚಿಂತ ನಾದೆನು.

---

**ವಿವರಣೆ**:— ಮಡಿವಾಳ ಮಾಚಿದೇವನು ತಾನು ಶರಣರ ಸಹ ವಾಸದಲ್ಲಿದ್ದು ಅವರಿಂದ ತನ್ನ ಉತ್ಕೃಷ್ಟತೆಯನ್ನು ಹೇಗೆ ಹೊಂದಿ ದೆನೆಂಬುದನ್ನು ಇಲ್ಲಿ ವಿವರಿಸಿದ್ದಾನೆ. ಬಸವಣ್ಣನು ಶ್ರೇಷ್ಠತರವಾದ ನಡೆಯುಳ್ಳವನು. ಅವನಿಂದ ಸದ್ವರ್ತನೆ ನೀತಿ ನಡತೆಗಳನ್ನು ಸಂಪಾ ದಿಸಿದೆನೆಂದು ಹೇಳುತ್ತಾನೆ. ಚನ್ನಬಸವಣ್ಣನು ಅರಿವುಳ್ಳವನು. ಅತ್ಯಂತ ವಿಚಾರ ಶೀಲನು. ಅವನಿಂದ ತನ್ನ ಚಂಚಲ ಮನಸ್ಸನ್ನು ಹೇಗೆ ಬಿಗಿಹಿಡಿದೆನೆಂಬುದನ್ನು ಹೇಳುತ್ತಾನೆ. ಪ್ರಭುದೇವನು, ಮಹಾಜ್ಞಾನಿಯು. ಅವನಿಂದ ತನ್ನ ಭಾವವನ್ನು ಶುದ್ಧಗೊಳಿಸಿದೆನೆಂದು ಹೇಳುತ್ತಾನೆ. ಈ ಪ್ರಕಾರ ಶರಣರ ಸಂಗವು ತನ್ನನ್ನು ಉಚ್ಚ ಸ್ಥಾನದಲ್ಲಿರಿಸಿತು ಎಂದು ವಚನಕಾರನು ನುಡಿದಿದ್ದಾನೆ.

## ವಚನ

೨೦. ಎನ್ನಂಗದ ಆಚಾರದಲ್ಲಿ ಸಂಗನಬಸವಣ್ಣನ ಕಂಡೆನು. ಎನ್ನ ಮನದರಿವಿನಲ್ಲಿ ಚನ್ನಬಸವಣ್ಣನ ಕಂಡೆನು. ಎನ್ನ ಭಾವದ ಕೊನೆಯ ಮೊನೆಯ ಮೇಲೆ ಅಲ್ಲಮಪ್ರಭುದೇವರ ಕಂಡೆನು. ಎಲೆ ಕಲಿದೇವಯ್ಯ ನಿಮ್ಮ ಶರಣರ ಘನವನೆನ್ನ ಸರ್ವಾಂಗದಲ್ಲಿ ಕಂಡು ನಮೋ ನಮೋ ಎನುತಿರ್ದೆನು.

# ಮಹೇಶ್ವರ ಸ್ಥಲ.

ಕೆಳಗಿನ ವಚನಗಳು ಮಹೇಶ್ವರ ಸ್ಥಲದೊಳಗಿನವು ಇರುತ್ತವೆ. ಅತ್ಯಂತ ನಿಷ್ಠೆಯುಳ್ಳವನಾಗಿರುವದೇ ಈ ಸ್ಥಲದ ಮುಖ್ಯ ಲಕ್ಷಣವು. ಮನುಷ್ಯನಿಗೆ ಸ್ಥೈರ್ಯ ಧೈರ್ಯಗಳು ಬೇಕು. ನಿಶ್ಚಲ ಮನಸ್ಸು ಬೇಕು. ದೃಢನಿಶ್ಚಯವು ಬೇಕು. ಅವನು ಹಿಡಿದ ಕೆಲಸವನ್ನು ಎಂದೂ ಬಿಡಕೂಡದು. ಇದರಲ್ಲಿ ಮರಣವಾದರೂ ಕೂಡ ಹಿಂದೆಗೆಯಬಾರದು. ಇದು ಮನುಷ್ಯನ ಉತ್ಕ್ರಾಂತಿಗೆ ಅವಶ್ಯವಾದ ಗುಣವು. ಈ ಗುಣವುಳ್ಳಾತನೇ ಮಹೇಶ್ವರನೆನಿಸಿಕೊಳ್ಳುತ್ತಾನೆ.

---

**ವಿವರಣೆ:—** ಕೆಳಗಿನ ವಚನದಲ್ಲಿ ಯಾರು ತಮ್ಮ ಶಿವಕಾರ್ಯದಲ್ಲಿ ಸಹಾಯಕರಾಗುತ್ತಾರೋ ಅವರೇ ನಿಜವಾದ ಮಾತಾಪಿತರು, ನಿಜವಾದ ಬಾಂಧವರು, ಅವರೇ ನಮ್ಮವರು. ಎಂದು ಹೇಳಲ್ಪಟ್ಟಿದೆ. ಹಾಗೆ ಅವರು ವರ್ತಿಸದಿದ್ದರೆ ಆವರು ನಮ್ಮವರಲ್ಲ. ಅವರನ್ನು ನಿರಾಕರಿಸಬೇಕೆಂದು ಮಾಡಿವಾಳ ಮಾಚಿದೇವನು ಇಲ್ಲಿ ನುಡಿದಿದ್ದಾನೆ.

## ವಚನ.

೨೧. ಅಯ್ಯ ಮಾತಾ ಪಿತರಾಗಲಿ, ಸಹೋದರ ಬಂಧುಗಳಾಗಲಿ, ಅತ್ಯಂತ ಸ್ನೇಹದಲ್ಲಿ ಕೂಡಿದವರಾಗಲಿ, ಗುರುಕಾರುಣ್ಯವ ಪಡೆದ ಶಿವಸಹೋದರರಾಗಲಿ, ಶಿವಾಚಾರ ಶಿವಕಾರ್ಯಕ್ಕೆ ಸಹಕಾರಿಗಳಾಗಿ ಅನುಕೂಲವಾದರೆ ಎಮ್ಮವರು. ಅನುಕೂಲವಲ್ಲದವರು ಎಮ್ಮವರಲ್ಲ. ಅದೆಂತೆಂದಡೆ "ಮಾತರಃ ಪಿತರಶ್ಚೈವ। ಭ್ರಾತರೋ ಬಾಂಧವಸ್ತಥಾ। ಶಿವಕಾರ್ಯೇಸು ವಕ್ರವ್ಯಂ। ಹಂತವ್ಯಂ ಶೀಘ್ರ ಮೇವಚ।" ಎಂದುದಾಗಿ ಇಂತೀ ಶಿವಾಚಾರ ಶಿವಕಾರ್ಯಕ್ಕೆ ವಕ್ರವಾದವರ ಮಾತಿನಲ್ಲಿ ನಿಃಕರಿಸಿ ನುಡಿಯದೆ ಮನದಲ್ಲಿ ಪತಿಕರಿಸಿ ಕೂಡಿಕೊಂಡು ನಡೆದೆನಾದರೆ ಅಘೋರ ನರಕದಲ್ಲಿಕ್ಕು ಕಲಿದೇವಯ್ಯ

---

**ವಿವರಣೆ:—** ವೀರಶೈವರು ಭವಿಸಂಗ ಮಾಡಬಾರದೆಂದು ಮೇಲಿಂದ ಮೇಲೆ ಹೇಳಲ್ಪಡುತ್ತಿದೆ. ವಾಡಿಕೆಯಾಗಿ ಶಿವಚಿನ್ಹಾಂಕಿತರಾದ ಮಾತ್ರದಿಂದ ಭಕ್ತರು ಎಂದು ಹೇಳಲ್ಪಡುವದುಂಟು. ಆದರೆ ಮಡಿವಾಳ ಮಾಚಿದೇವನು ಇದಕ್ಕೆ ಒಪ್ಪುವದಿಲ್ಲ. ಯಾರು ಅಸತ್ಯ ಮಾತಾಡುತ್ತಾರೋ, ಯಾರು ವ್ರತಹೀನರಾಗಿ ನಡೆಯುತ್ತಾರೋ, ಅವರೇ ನಿಜವಾದ ಭವಿಗಳು ಎಂದು ಹೇಳುತ್ತಾನೆ. ವೀರಶೈವರು ಬಾಹ್ಯ ಚಿನ್ಹಗಳಿಗೆ ಮಹತ್ವವನ್ನು ಎಂದೂ ಕೊಡುವದಿಲ್ಲ. ಅವರು ನೈತಿಕಾಚರಣೆಗೂ ಉದಾತ್ತ ವೃತ್ತಿಗೂ ಮಹತ್ವ ಕೊಡುತ್ತಾರೆ. ಮಡಿವಾಳ ಮಾಚಿದೇವನು ಇದಕ್ಕನುಸಾರವಾಗಿಯೇ ಇಲ್ಲಿ ನುಡಿದಿದ್ದಾನೆ.

## ವಚನ.

೨೨. ತನಗನ್ಯವಾದುದ ನೋಡಿದಡೆ ಭವಿಸಂಗ. ಸತ್ಯರು ಒಪ್ಪಿಮದನೊಪ್ಪದಿರ್ದಡೆ ಭವಿಸಂಗ. ಮಾಡಿಕೊಂಡ ವ್ರತವ ಮೀರಿದಡೆ ಭವಿಸಂಗ. ತಾ ಮಾಡಿದ ಭಕ್ತಿಯನಾಡಿಕೊಂಡಲ್ಲಿ ಭವಿಸಂಗ. ಇಂತಿವ ಸರಿವಡೆ ಸದ್ಭಕ್ತಿ ಕಲಿದೇವರದೇವಾ.

---

**ವಿವರಣೆ:—** ವೀರಶೈವರು ೬೬ ವ್ರತಗಳಂತೆ ನಡೆಯತಕ್ಕದ್ದು, ಹೀಗೆ ನಡೆಯುವವರೇ ನಿಜವಾದ ವೀರಶೈವರೆಂದು ಅನೇಕರು ನಂಬುವದುಂಟು. ಆದರೆ ಇವು ಕೇವಲ ಬಾಹ್ಯಾಚಾರಗಳು. ೬೪ ಶೀಲಗಳಾದರೂ ಹೀಗೆಯೇ ಇರುತ್ತವೆ. ಆದರೆ ಇವರಲ್ಲಿ ನೀತಿ ನಡತೆಗಳಿರದಿದ್ದರೆ ಈ ಶೀಲವ್ರತಗಳನ್ನು ಆಚರಿಸಿಯೂ ವ್ಯರ್ಥವೆಂದು ಮಾಡಿವಾಳ ಮಾಚಿದೇವನು ಇಲ್ಲಿ ನುಡಿದಿದ್ದಾನೆ.

## ವಚನ

೨೩. ಬಹು ಜಲವಂ ಬಿಟ್ಟು ಚಿಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ. ಉಪ್ಪ ಬಿಟ್ಟು ಸಪ್ಪೆಯನುಂಡಡೆ ಅದು ಮನದ ಹೇಸಿಕೆಯಲ್ಲದೆ ದೃಢವ್ರತವಲ್ಲ. ವ್ರತನಿಶ್ಚಯ

ವಾದರೆ ಪರಸ್ತ್ರೀ ಪರಧನ ಪರದೂಷಣೆಯು ನರಿತು ಬಿಟ್ಟರೆ ಆರುವತ್ತಾರು ವ್ರತಗಳಿಗೆ ಕಡೆ ಎಂಬೆ ಕಲಿದೇವರದೇವ.

---

**ವಿವರಣೆ:**— ವೀರಶೈವರು ಅಹಿಂಸಾ ಧರ್ಮವುಳ್ಳವರು. ಆದ್ದರಿಂದ ಅವರು ಯಾವಾಗಲೂ ಹಿಂಸಾ ಕಾರ್ಯದಲ್ಲಿರುವ ಬೆಕ್ಕು ನಾಯಿಗಳನ್ನು ಸಾಕಬಾರದು. ಅವರು ಏಕಪತ್ನಿ ವ್ರತಸ್ಥರಾಗಿ ಇರತಕ್ಕದ್ದು. ಆದ್ದರಿಂದ ಅವರು ಸೂಳೆಯರ ಸಹವಾಸದಲ್ಲಿರಕೂಡದು. ಅವರು ಮದ್ಯಪಾನ ಮಾಡಕೂಡದು. ಆದ್ದರಿಂದ ತಾಳಹಣ್ಣನ್ನು ಸೇವಿಸಬಾರದು. ಪರಮಾತ್ಮನೊಬ್ಬನನ್ನು ಬಿಟ್ಟು ಅವರು ಇತರ ದೈವಗಳನ್ನು ನಂಬಬಾರದು. ಅದರಂತೆಯೇ ನೀತಿಗೆ ಬಾಹಿರರಾದವರ ಸಹವಾಸದಲ್ಲಿರಕೂಡದು. ಹೀಗೆ ವಚನಕಾರನು ಇಲ್ಲಿ ಹೇಳಿದ್ದಾನೆ. ಯಾಕೆಂದರೆ ಜಾರತನ, ಸುರಾಪಾನ, ಅನ್ಯದೈವ ಭಜನೆ ಮತ್ತು ಭವಿಸಂಗ ಇವು ವೀರಶೈವರಲ್ಲಿ ಪಂಚಮಹಾಪಾತಕಗಳೆಂದೆಣಿಸಿಕೊಳ್ಳಲ್ಪಡುತ್ತವೆ.

## ವಚನ

೨೪. ಬೆಕ್ಕು, ನಾಯಿ, ಸೂಳೆ, ತಾಳ ಹಣ್ಣು, ಅನ್ಯದೈವ, ಭವಿ ಮಿಶ್ರವುಳ್ಳವರ ಮಠಮನೆಗಳಲ್ಲಿ ನೆಂಟರ ದಾಕ್ಷಿಣ್ಯಕ್ಕೆ ಒಡಲಕಕ್ಕುಲಿತೆಗೆ ಹೊಕ್ಕು, ಅನ್ನವ ಕೊಂಡರೆ, ಹೊಲೆಗೇರಿಯ ಹಿರಿಯ ಹಂದಿಯ ಮುಸುಡಿಯ ಮೂಸಿನೋಡಿದಂತೆ ಕಾಣಾ ಕಲಿದೇವರದೇವ.

---

**ವಿವರಣೆ:**— ವೀರಶೈವರು ಒಬ್ಬನೇ ದೇವರೆಂದು ಭಾವಿಸಿ ಆತನ ಚಿನ್ಹವಾದ ಲಿಂಗವನ್ನುಮಾತ್ರ ನಂಬಿರತಕ್ಕದ್ದು. ಇತರ ದೇವತೆಗಳನ್ನು ಎಂದು ಭಜಿಸಕೂಡದು. ಭಜಿಸಿದ್ದಾದರೆ ಅದು ಘೋರ ಪಾತಕವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಹೀಗೆ ನಡೆಯುವದು ಭಕ್ತಿಮಾರ್ಗವಲ್ಲ. ಇದು ಭವಿಸಂಗ, ಸುರಾಪಾನ, ಮಾಂಸಾಹಾರ ಮಾಡಿದಕಿಂತಲೂ ಹೆಚ್ಚು ದೋಷಯುಕ್ತವಾದದ್ದು.

## ವಚನ

೨೫. ಅಷ್ಟಾವರಣ ಪಂಚಾಚಾರವುಳ್ಳ ಸದ್ಭಕ್ತರ ಉದರದಿ ಜನಿಸಿ ಶಿವಭಕ್ತನಾಗಿದ್ದು ಭವಿಸಂಗವ ಮಾಡಿದ ದೇಹ ಪಾಪಿ. ಆ ಭವಿಯ ಸಂಗಕಿಂತಲು ಸುರಾಪಾನಿಯ ಸಂಗ ಪಾಪ. ಅದಕಿಂತಲು ಮಾಂಸಾಹಾರಿಯ ಸಂಗ ಪಾಪ. ಅದಕಿಂತಲು ಭಂಗೀಭಕ್ಷಕರ ಸಂಗ ಪಾಪ. ಅದಕಿಂತಲು ಶಿವಭಕ್ತನಾಗಿದ್ದು ಅನ್ಯದೈವ ಭಜಿಸುವನ ಸಂಗ ಪಾಪ ಎಂದಾತ ನಮ್ಮ ವೀರಾದಿವೀರ ಕಲಿದೇವರದೇವ.

**ವಿವರಣೆ:—** ಉಚ್ಚ ಕಾರ್ಯಗಳಲ್ಲಿ ನಿರ್ಧಾರಹೊಂದಿದ ಮನುಷ್ಯನು ಎಂಥ ಎಡರುಗಳು ಬಂದರೂ ಅವುಗಳನ್ನು ಅವನು ಬಿಡುವದಿಲ್ಲ. ಜನರು ಅನೇಕ ವಿಧವಾಗಿ ಮಾತನಾಡಿದರೂ ಅವನು ಅದನ್ನು ಲೆಕ್ಕಿಸನು. ಯಾಕಂದರೆ ಅವರು ಪ್ರಸಂಗ ಬಂದ ಹಾಗೆ ಬೇಕಾದ ರೀತಿಯಿಂದ ನುಡಿಯುವದುಂಟು. ಈ ವಿಷಯವಾಗಿ ವಚನಕಾರನು ಕೆಲವು ಉದಾಹರಣೆಗಳನ್ನು ಕೊಟ್ಟು ಈ ತರದ ಜನಾಪವಾದವು ಯಾರನ್ನೂ ಬಿಟ್ಟಿಲ್ಲ. ಆದ್ದರಿಂದ ಅದನ್ನು ಗಣಿಸದೆ ಸ್ವಕರ್ತವ್ಯದಲ್ಲಿ ಮನುಷ್ಯನು ತೊಡಗಬೇಕೆಂದು ಮಾಚಿದೇವನು ಹೇಳುತ್ತಾನೆ.

## ವಚನ

೨೬. ಉಂಡರೆ ಭೂತನೆಂಬರು, ಉಣದಿರ್ದಡೆ ಚಕೋರಿ ಎಂಬರು, ಊರೊಳಗಿರ್ದಡೆ ಸಂಸಾರಿ ಎಂಬರು, ಅಡವಿಯೊಳಗಿರ್ದಡೆ ಮರ್ಕಟನೆಂಬರು, ಮಾತನಾಡಿದರೆ ಪಾಪಕರ್ಮಿ ಎಂಬರು, ಮಾತನಾಡದಿರ್ದಡೆ ಮುಸುಕಕರ್ಮಿ ಎಂಬರು, ಮಲಗದಿರ್ದಡೆ ಚೋರನೆಂಬರು, ಮಲಗಿರ್ದಡೆ ಜಡದೇಹಿ ಎಂಬರು. ಇಂತೀ ವಸುಧೆಯೊಳಗೆ ಎಂಟು ವಿಧವ ಕಳೆಯಲಳವಲ್ಲ ಕಾಣಾ ಕಲಿದೇವರದೇವ.

---

**ವಿವರಣೆ:** – ವೀರಶೈವರು ವಿಚಾರವಾದಿಗಳು. ಅವರು ಸ್ವತಂತ್ರ ಶೀಲರು. ಬರೇ ಹಿಂದಿನದಕ್ಕೆ ಅಂಟಿಕೊಂಡು ಕುಳ್ಳಿರುವಂಥವರಲ್ಲ. ಯಾವದು ಸತ್ಯವೋ ಅದನ್ನೇ ಆಚರಿಸುವವರು. ಹಿಂದಿನ ಪುಸ್ತಕಗಳಲ್ಲಿ ಹೇಳಲ್ಪಟ್ಟಿದೆಂದು ನಂಬಿ ಅವರು ಸುಮ್ಮನೆ ಕುಳ್ಳಿರುವದಿಲ್ಲ. ಯಾವುದು ಅನುಭವಕ್ಕೆ ಬರುತ್ತದೋ ಅದನ್ನೇ ನಂಬುವಂಥವರು. ಈ ದೃಷ್ಟಿಯ ನ್ನಿಟ್ಟುಕೊಂಡು ಮಡಿವಾಳಮಾಚಿದೇವನು ವೇದಗಳು, ಶಾಸ್ತ್ರ, ಪುರಾಣ, ಆಗಮ, ತರ್ಕ, ವ್ಯಾಕರಣ, ಕವಿತ್ವ, ಇವುಗಳನ್ನು ಇಲ್ಲಿ ಟೀಕಿಸಿದ್ದಾನೆ. ಯಾವದು ತನ್ನೊಳಗನರಿದು ಅನುಭವಕ್ಕೆ ಬರುತ್ತದೆಯೋ ಅದೇ ಘನ ತರವಾದ ವಸ್ತುವು ಎಂದು ಅವನು ಇಲ್ಲಿ ಹೇಳಿದ್ದಾನೆ.

## ವಚನ.

೨೭. ವೇದ ವಿಪ್ರರ ಬೋಧೆ, ಶಾಸ್ತ್ರ ಸಂತೆಯ ಮಾತು, ಪುರಾಣ ಪುಂಡರ ಗೋಷ್ಠಿ, ಆಗಮ ಅನೃತದ ನುಡಿ, ತರ್ಕ ವ್ಯಾಕರಣ ಕವಿತ್ವ ಪ್ರೌಢಿಮೆ. ಇದು ಕಾರಣ ತನ್ನೊಳಗನರಿದ ಅನುಭವದಿಂದ ಘನವಿಲ್ಲೆಂದ ಕಲಿದೇವರದೇವಾ.

---

**ವಿವರಣೆ:**— ವೀರಶೈವರು ಸ್ಥಾವರಲಿಂಗಗಳನ್ನು ಪೂಜಿಸಕೂಡದು. ಅವರು ತಮ್ಮ ಇಷ್ಟಲಿಂಗವನ್ನು ಮಾತ್ರ ಪೂಜಿಸತಕ್ಕದ್ದು. ಶಿವಾಲಯಗಳು ಅವರಿಗೆ ಮೋಕ್ಷವನ್ನು ಕೊಡುವಂಥವಲ್ಲ ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

## ವಚನ.

೨೮ ತನ್ನ ಲಿಂಗವ ಬಿಟ್ಟು ಅನ್ಯಲಿಂಗಕ್ಕೆ ಶರಣೆಂಬ ಕುನ್ನಿಗಳನೇನೆಂಬೆನಯ್ಯಾ ಕಲಿದೇವರದೇವಾ ?

---

**ವಿವರಣೆ:**— ಕಟ್ಟಲ್ಪಟ್ಟ ದೇವಾಲಯ, ಸ್ಥಾಪಿಸಲ್ಪಟ್ಟ ಲಿಂಗ ಇವುಗಳಿಗೆ ಪೊಡಮಡಲಾಗದೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

### ವಚನ.

೩೯. ಒಟ್ಟಿದ್ದ ಮಣ್ಣಿಗೂ, ನಟ್ಟಿದ್ದ ಕಲ್ಲಿಗೂ, ಕಟ್ಟಿದ್ದ ಲಿಂಗ ವಡಿಯಾಗಿ ಬೀಳುವ ಲೊಟ್ಟೆ ಗುಡಿಹಿಗಳ ನೇನೆಂಬೆನಯ್ಯಾ ಕಲಿದೇವರ ದೇವಾ?

---

**ವಿವರಣೆ:**— ಹಿಂದಿನ ವಚನದ ಭಾವವೇ ಮುಂದಿನ ವಚನದಲ್ಲಿ ಹೇಳಲ್ಪಟ್ಟಿದೆ.

### ವಚನ.

೪೦. ಉಡಿಯ ಲಿಂಗವ ಬಿಟ್ಟು, ಗುಡಿಯ ಲಿಂಗಕ್ಕೆ ಶರಣೆಂಬ ಗುಡಿಹಿಗಳನೇನೆಂಬೆನಯ್ಯಾ ಕಲಿದೇವರದೇವಾ?

---

**ವಿವರಣೆ:**— ಇಷ್ಟಲಿಂಗ ಧಾರಣ ಮಾಡಿದ ಬಳಿಕ ಇತರ ದೈವತಗಳಿಗೆ ಅರ್ಪಿಸಿ ತಂದ ಪಾಕವನ್ನು ಭುಂಜಿಸಬಾರದೆಂದು ವಚನಕಾರನು ಮುಂದೆ ಹೇಳಿದ್ದಾನೆ. ಇಂಥ ಪಾಕವು ಇಷ್ಟಲಿಂಗಕ್ಕೆ ಸಲ್ಲದು.

### ವಚನ.

೪೧. ಜನ್ಮ ಜರೆ ಮರಣ ಭವಭವಾಂತರದಲ್ಲಿ ತೊಳಲುವ ನೂರೊಂದು ಕುಲ ಹದಿನೆಂಟು ಜಾತಿಗಿಕ್ಕಿದ ಅನಂತ ದೈವದುಚ್ಛಿಷ್ಟೋದಕ, ಆದರೆಂಜಲನ್ನ ಪಾನವ ತಂದು, ಶ್ರೀಗುರು ಕರುಣಿಸಿಕೊಟ್ಟ ಇಷ್ಟಲಿಂಗಕ್ಕೆ ನೈವೇದ್ಯವ ಮಾಡಿ ಭುಂಜಿಸುವ ಮೂಳ ಹೊಲೆಯರ ಮನೆಯಲ್ಲಿ ಮಾಡಿದ ಪಾಕವನ್ನು ತ್ರಿವಿಧ ದೀಕ್ಷಾನ್ವಿತವಾದ ಇಷ್ಟ ಮಹಾಲಿಂಗಕ್ಕೆ ಅರ್ಪಿಸಿ ಭುಂಜಿಸುವ ಅಧಮ ಹೊಲೆಯರು ಶತಸಹಸ್ರ ವೇಳೆ ಶುನಿ ಸೂಕರಾದಿಗಳಲ್ಲಿ ಜನಿಸಿ ಅಂತ್ಯದಲ್ಲಿ ಕಾಲಕಾಮರ ಪ್ರಳಯಕೊಳಗಾಗದೆ ಮಾಣ್ಬರೇ ಕಲಿದೇವರದೇವಾ?

**ವಿವರಣೆ**:— ಮುಂದೆ ವಚನಕಾರನು ವೀರಶೈವರು ನಂದೀ ವೀರಭದ್ರ, ದುರ್ಗಾ ಇವುಗಳನ್ನು ಪೂಜಿಸಬಾರದೆಂದು ಹೇಳುತ್ತಾನೆ. ಇವು ಶಿವನಿಗೆ ಸಂಬಂಧವಾಗಿದ್ದರೂ ಕೂಡ ಪೂಜಿಸಬಾರದು. ಹಿಂದಿನವರು ತೀರಿಕೊಂಡ ಬಳಿಕ ಅವರ ಸಮಾಧಿಯನ್ನು ಕಟ್ಟಿಸಿ ಅವರ ಹಾವುಗೆ, ಕಂಥೆ, ಕಮಂಡಲುಗಳನ್ನು ಇಟ್ಟು ಪೂಜಿಸುವದುಂಟು. ಇದಾದರೂ ಲಿಂಗಾಂಗಿಗಳಿಗೆ ಸಲ್ಲದು. ಆದರೆ ಅವರು ಕೇವಲ ಚಿದ್ಘನ ವಸ್ತುವಾದ ಮಹಾಲಿಂಗದ ಧ್ಯಾನವನ್ನು ಮಾಡಬೇಕು. ಪರದ್ರವ್ಯಾಪಹರಣ ಮಾಡಬಾರದು. ಈ ವಿಧವಾದ ಸದಾಚಾರದಲ್ಲಿರಬೇಕೆಂದು ಮಡಿವಾಳಮಾಚಿದೇವನು ಇಲ್ಲಿ ಬೋಧಿಸಿದ್ದಾನೆ.

### ವಚನ

೩೨. ಅಯ್ಯಾ ಸದಾಚಾರವೆಂದಡೆ, ಚಿದ್ಘನ ಮಹಾಲಿಂಗಧ್ಯಾನ, ಪರದ್ರವ್ಯ ನಿರಸನ. ಇಂತಿದು ಸತ್ಯವೆಂದು ತಿಳಿದು ಭಿನ್ನವಿಲ್ಲದೆ ಆಚರಿಸುವದೇ ಆಚಾರವಲ್ಲದೆ ಶುದ್ಧ ಶೈವರ ಹಾಗೆ ನಂದಿ ವೀರಭದ್ರ ದುರ್ಗೆ ಪಾವುಗೆ ಕಂಥೆ ಕಮಂಡಲು ಮತ್ತೆ ಲಿಂಗಂಗಳೆಂದು ಇದಿರಿಟ್ಟು ಪೂಜಿಸುವನ ಮನೆಯು ಪಾಕ ಅಮೇಧ್ಯ ಮಾಂಸ ಕಾಣಾ ಕಲಿದೇವರದೇವಾ.

—

**ವಿವರಣೆ**:— ಅನೇಕರು ಪಂಚಭೂತಗಳು, ಸೂರ್ಯ, ಚಂದ್ರ, ಆತ್ಮರುಗಳು ದೇವರೆಂದು ಭಾವಿಸಿ ಅವುಗಳನ್ನು ಪೂಜಿಸುವದುಂಟು. ಇದು ತಪ್ಪು ಹಾದಿಯು. ಇವುಗಳನ್ನು ಪೂಜಿಸಿ ಮೋಕ್ಷವನ್ನು ಪಡೆದವರು ಇಲ್ಲ. ಇವೆಲ್ಲವೂ ಹುಸಿ. ಆದರೆ ಗುರುಲಿಂಗಜಂಗಮದ ನಿತ್ಯಪ್ರಸಾದವು ಹುಸಿಯಲ್ಲ. ಅದರ ನಿಜಸ್ಥಿತಿಯನ್ನು ಅರಿದು ಆಚರಿಸಿದವರು ಕಡಿಮೆ. ಅದನ್ನು ಕಂಡಾತ ಸಂಗನಬಸವಣ್ಣನೆಂದು ಮಾಚಿದೇವನು ಇಲ್ಲಿ ಹೇಳಿದ್ದಾನೆ.

### ವಚನ.

೩೩. ಪೃಥ್ವೀ ಲಿಂಗವೆಂದು ಹತರಾದರು ಕೆಲಬರು. ಅಪ್ಪು ಲಿಂಗವೆಂದು ತಪ್ಪಿದರು ಶಿವನನರಿಯದೆ ಹಲಬರು. ತೇಜ ಲಿಂಗ

ವೆಂದು ವಾದಿಸಿ ಕೆಟ್ಟರು ಕೆಲಬರು. ವಾಯು ಲಿಂಗವೆಂದು ಘಾಸಿಯಾದರು ಹಲಬರು. ಆಕಾಶ ಲಿಂಗವೆಂದು ಶೂನ್ಯವಾದಿಗಳಾದರು ಹಲಬರು. ಚಂದ್ರಸೂರ್ಯರು ಲಿಂಗವೆಂದು ಭ್ರಮಣೆಯಲ್ಲಿ ತಿರುಗುತಿಪ್ಪರು ಹಲಬರು. ಆತ್ಮ ಲಿಂಗವೆಂದು ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳ ಯೋನಿಗಳೊಳಗೆ ಜನಿಸುತ್ತಿಪ್ಪರು ಹಲಬರು. ಇಂತೀ ಶಿವನ ಲೀಲಾಸಂಚವನರಿಯದೆ ಶಿವನು ಜಗತ್ತಿಗೆ ಮರವೆಯನಿಕ್ಕಿ ಆಡಿಸುವನು. ಜಗತ್ತಿನ ಹುಸಿ ವಚನವ ತೊಡೆದು, ನಿಜ ಗುರು ಲಿಂಗ ಜಂಗಮದ ನಿತ್ಯ ಪ್ರಸಾದವ ತೋರಿದಾತ ಸಂಗನಬಸವಣ್ಣ ಕಾಣಾ ಕಲಿದೇವರ ದೇವಯ್ಯಾ.

---

**ವಿವರಣೆ:**—ಜನರು ಬೇನೆ ಬಿದ್ದಕೂಡಲೆ, ಅನೇಕ ತರದ ದೇವರು ದಿಂಡರುಗಳಿಗೆ ಹೋಗಿ ಬೇಡಿಕೊಳ್ಳುತ್ತಾರೆ. ಮತ್ತು ಅವುಗಳಿಗೆ ಅನೇಕ ತರದ ಬಲಿಗಳನ್ನು ಕೊಡುತ್ತಾರೆ. ಇದು ಹುಸಿ. ನೋಟಕಾತಿಯರಿಗೂ, ಭೂತ ಚೇಷ್ಟೆ ಬಿಡಿಸುವವರಿಗೂ ಬೇಡಿಕೊಂಡು ಅವರಿಗೆ ಅನೇಕ ತರದ ಆಹಾರಗಳನ್ನು ಕೊಟ್ಟು ನೈವೇದ್ಯವೆಂದು ಭುಂಜಿಸುತ್ತಾರೆ. ಇವರು ಲಿಂಗದ್ರೋಹಿಗಳು ಎಂದು ಇಲ್ಲಿ ಹೇಳುತ್ತಾನೆ.

**ವಚನ.**

ತದ್ದು, ತುರಿ, ತಲೆಬೇನೆ, ಮೈಕೆಟ್ಟು, ಸೀತ, ವಾತ, ಬಹುಜ್ವರ, ಹೊಟ್ಟೆಬೇನೆ, ಕೆಟ್ಟ ಹುಣ್ಣು, ಮೊದಲಾದ ಇಂತೀ ಮುನ್ನೂರರುವತ್ತು ವ್ಯಾಧಿಯನು ಶಿವನು ಹರಿಯಬಿಟ್ಟು ನೋಡುವ. ಇವೆಲ್ಲವು ಶಿವನ ಕರುಣವಾದಲ್ಲದೆ ಹೋಗವು. ಲೋಕದ ಬುದ್ಧಿಗೇಡಿ ಮನುಜರೆಲ್ಲರು ಶುದ್ಧಚಿತ್ತ ಜಂಗಮಲಿಂಗದ ಮಾತ ಕೇಳದೆ, ಅದ್ದನ ಜೋಳ ಅರೆಮಾನ ಎಣ್ಣೆಯ ಕೊಂಡು, ನೋಟಕಾತಿಯರ ಮನೆಗೆ ಹೋಗಿ, ಅವರು ಹೇಳಿದ ತಾತು ಭೂತದ ಕೋಟಲೆಗೊಳಗಾಗಿ ಕೈಕೊಂಡು ಬಂದು, ಅವಕ್ಕೆ ಊಟವನಿಕ್ಕಿ ಮಿಕ್ಕ ಕೂಳ ತಮ್ಮ ಲಿಂಗಕ್ಕೆ ತೋರುವ ಲಿಂಗದ್ರೋಹಿಯ ಮಾತ ಕೇಳಲಾಗದು ಕಲಿದೇವರ ದೇವಯ್ಯಾ.

---

ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

# "ಶರಣಸಾಹಿತ್ಯ"

[ಮಾಸಪತ್ರಿಕೆ]

**ಸಂಪಾದಕರು:— ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿ,**
ಹುಲಕುಂಟಿಮಠ ತುಮಕೂರು

**ಮಹಾಜನರಲ್ಲಿ ವಿಜ್ಞಾಪನೆಗಳು—**

ಹಿಂದೂಧರ್ಮ, ಕನ್ನಡ ಸಾಹಿತ್ಯ, ಲಿಂಗವಂತ ಸಂಸ್ಕೃತಿಗಳ ಉನ್ನತಿಗಾಗಿ ಪ್ರಯತ್ನಿಸುವದೇ ಈ ಪತ್ರಿಕೆಯ ಮುಖ್ಯೋದ್ದೇಶ. ಪ್ರಾಚೀನ ಕನ್ನಡ, ಹಾಗೂ ಸಂಸ್ಕೃತ ಗ್ರಂಥಗಳ ಪ್ರಕಟನೆಯನ್ನು, "ಶರಣಸಾಹಿತ್ಯ ಗ್ರಂಥಮಾಲಾ" ಎಂಬ ಹೆಸರಿನಿಂದ ನಡೆಸಲಾಗುತ್ತದೆ. ಇಂತಹ ಉದಾತ್ತ ಧ್ಯೇಯದಿಂದ ಹೊರಟ ಪತ್ರಿಕೆಯನ್ನು ಸಂರಕ್ಷಿಸುವ ಭಾರ ನಮ್ಮ ನಾಡಿನ ಹಾಗೂ ಸಮಾಜದ ಅಭಿಮಾನಶಾಲಿಗಳನ್ನವಲಂಬಿಸಿದೆ.

**ಪೋಷಕರು**—ಒಟ್ಟಾಗಿ ೧೦೦ ರೂ. ಕೊಟ್ಟವರು. ಇವರಿಗೆ ಶರಣ ಸಾಹಿತ್ಯ ಮಾಸಿಕವನ್ನೂ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಕೃತಜ್ಞತೆಯಿಂದ ಅರ್ಪಿಸಲಾಗುತ್ತದೆ.

**ಸಹಾಯಕರು**— ಒಟ್ಟಾಗಿ ೫೦ ರೂ. ಕೊಟ್ಟವರು. ಇವರಿಗೆ ಮಾಸಿಕವು ಸದಾ ಉಚಿತವಾಗಿ ಸಮರ್ಪಿಸಲ್ಪಡುತ್ತದೆ.

**ಉಪಕಾರಿಗಳು**— ವರ್ಷಕ್ಕೆ ೧೦ ರೂ. ಕೊಡತಕ್ಕವರು.

**ಹಿತಚಿಂತಕರು**— ವರ್ಷಕ್ಕೆ ೫ ರೂ. ಕೊಡತಕ್ಕವರು.

**ಚಂದಾದಾರರು**— ವರ್ಷಕ್ಕೆ ೩-೮-೦ ಕೊಡತಕ್ಕವರು, ಶರಣ ಸಾಹಿತ್ಯ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಸಹಾಯಕ ಮತ್ತು ಉಪಕಾರಿಗಳಿಗೆ ಅರ್ಧ ಬೆಲೆಗೂ ಹಿತಚಿಂತಕರ ಹಾಗೂ ಚಂದಾದಾರರಿಗೆ ಮುಕ್ಕಾಲು ಬೆಲೆಗೂ ಕೊಡಲಾಗುತ್ತದೆ.

ದೇಶ, ಧರ್ಮ, ಭಾಷೆ, ಸಮಾಜ, ಇವುಗಳ ಉನ್ನತಿಯನ್ನು ಬಯಸುವವರೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹಕೊಡಬೇಕೆಂದು ವಿನಂತಿ.

**ಶಿವಂಭೂಯಾತ್**

ಇಂತು
ಕನ್ನಡಿಗರ ಕಿಂಕರ.
**ಬಿ. ಶಿವಮೂರ್ತಿ ಶಾಸ್ತ್ರಿ**

ಶರಣಸಾಹಿತ್ಯ ಕಾರ್ಯಾಲಯ
ಬೆಂಗಳೂರು ಸಿಟಿ

ಶ್ರೀ




ಸಂಪುಟ ೧೩ ] ಡಿಸೆಂಬರ ೧೯೩೮. [ ಸಂಚಿಕೆ ೩

## ವಿಷಯಾನುಕ್ರಮಣಿಕೆ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

---

ರಾ॥ ಸಾ॥ **ಫ. ಗು. ಹಳಕಟ್ಟಿ**ಯವರು ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‍ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ.

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

# ಶಿವಾನುಭವ.

ವರ್ಷ ೧೩] ~~ಸಪ್ಟಂಬರ~~ ೧೯೩೮ [ಸಂಚಿಕೆ ೩

## 'ಬಸವರಾಜದೇವರಗಳೆ'ಯೂ ಬಸವನ ಚರಿತ್ರೆಯೂ

( ಲೇಖಾಂಕ ೩ )

ಲೇ:— ಎಸ್. ಎಸ್. ಮಾಳವಾಡ ಎ.

ನನ್ನ ಹಿಂದಿನ ಲೇಖನಗಳಲ್ಲಿ 'ಬಸವರಾಜದೇವರಗಳೆ'ಯು ಬಸವನ ವಿಚಾರವಾಗಿರುವ ಗ್ರಂಥಗಳಲ್ಲಿ ತೀರ ಪ್ರಾಚೀನವಾದುದೆಂದೂ ಆದುದರಿಂದ, ಅದರಲ್ಲಿಯ ಚರಿತ್ರೆಯ ವಿಷಯವು ಹೆಚ್ಚು ನಂಬಲರ್ಹವೆಂದೂ ಹೇಳಿ[೧] 'ಬಸವಪುರಾಣ' 'ಸಿಂಗರಾಜಪುರಾಣ' ಇವುಗಳಲ್ಲಿಯ ಚರಿತ್ರೆಯ ವಿಷಯ ಹಾಗೂ ರಗಳೆಯಲ್ಲಿಯ ಚರಿತ್ರೆಯ ವಿಷಯ ಇವುಗಳನ್ನು ತುಲನಾತ್ಮಕವಾಗಿ ವಿವರಿಸುವಾಗ ಬಿಜ್ಜಳನ ಕೊಲೆಯ ವಿಚಾರವನ್ನು ಸೂಚಿಸಿದ್ದೆನು.[೨] ಪ್ರೊ. ಟಿ. ಎಸ್ ವೆಂಕಣ್ಣಯ್ಯನವರು ೧೯೩೦ರಲ್ಲಿ ಪ್ರಕಟಿಸಿದ ಗ್ರಂಥದಲ್ಲಿ ೧೩ ನೆಯ ಸ್ಥಲವು ಅಪೂರ್ಣವಾಗಿ ಮುದ್ರಿತವಾಗಿದೆ. ಆದರೆ ರಾ. ಸಾ. ಹಳಕಟ್ಟಿಯವರ ಹತ್ತಿರ ಇರುವ ಪ್ರತಿಯಲ್ಲಿ ೧೩ ನೆಯ ಸ್ಥಲವು ಸಂಪೂರ್ಣವಾಗಿರುತ್ತದೆಂದು ಅವರು ಹೇಳುತ್ತಾರೆ. ಪ್ರೊ. ವೆಂಕಣ್ಣಯ್ಯನವರ ಗ್ರಂಥದಲ್ಲಿ ಇಲ್ಲದ ಭಾಗವನ್ನು ರಾ. ಸಾ. ಹಳಕಟ್ಟಿಯವರು ಶಿವಾನುಭವದಲ್ಲಿ ಪ್ರಕಟಿಸಿದ್ದಾರೆ.[೩] ಅದರಲ್ಲಿ,

---

೧ ಶಿವಾನುಭವ ೯ ನೆಯ ವರುಷದ ೫ ನೆಯ ಸಂಚಿಕೆ.

೨ ೧೦ ನೆಯ ೧ ನೆಯ ಸಂಚಿಕೆ.

೩ ೫ ನೆಯ ೫ ನೆಯ ಸಂಚಿಕೆಯ ೧೫೧-೨ ಪುಟ

ಇಂತು ಬಸವಂ ಮರ್ತ್ಯದೊಳಗೆ ಮಹಿಮೆಯಿಂ ಬೀರಿ
ಸಂತತಂ ಕೆಲಕಾಲ ಶಿವಸುಖದೊಳೋಲಾಡಿ
ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ

ಎಂದು ಬರುತ್ತದೆ. ಇದರಿಂದ ಬಸವನು ಶಿವದ್ರೋಹವನ್ನು ಗೈದ ಬಿಜ್ಜಳನನ್ನು ಕೊಲಿಸಿದನೆಂದು ತಿಳಿಯುತ್ತದೆ. ಅಂದರೆ ಭೀಮಕವಿಯಂತೆ ಹರಿಹರನೂ ಕೂಡ ಬಸವನು ಬಿಜ್ಜಳನ ಕೊಲೆಗೆ ಉತ್ತರವಾದಿ ಎಂದು ನಂಬುತ್ತಾನೆಂದು ಕಂಡುಬರುತ್ತದೆ. ಆದರೆ ಈ ಮಾತನ್ನು ನಂಬದಿರಲಿಕ್ಕೆ ಕಾರಣಗಳಿವೆ. ಮೊದಲನೆಯದಾಗಿ ಹಾಗೂ ಮುಖ್ಯವಾಗಿಯೆಂದರೆ ಬಸವಣ್ಣನವರ ಉದಾತ್ತ ಜೀವನ ಹಾಗೂ ಬೋಧೆ. ಕಾಯಾ, ವಾಚಾ, ಮನಸಾ ಅಹಿಂಸೆಯನ್ನು ಬೋಧಿಸಿದ ಬಸವಣ್ಣನವರು ಓರ್ವ ವ್ಯಕ್ತಿಯ ಕೊಲೆಗೆ ಕಾರಣರಾದರೆಂಬುದನ್ನು ನಂಬುವದು ಕಠಿಣ. ಈ ಮಾತನ್ನು ಪುಷ್ಟೀಕರಿಸಲು ಬಸವಣ್ಣನವರ ವಚನದಿಂದ ಎಷ್ಟೋ ಉಕ್ತಿಗಳನ್ನು ಉದಾಹರಿಸಬಹುದು. ಹಾಗೆ ಉದಾಹರಣೆ ಕೊಡುವ ಅವಶ್ಯಕತೆ ಇಲ್ಲವೆಂದು ನಾನು ನಂಬುತ್ತೇನೆ. ಎರಡನೆಯದಾಗಿ, ಶಾಸನಗಳಿಂದ ಬಿಜ್ಜಳನ ಕೊಲೆಯಾಯಿತು, ಹಾಗೂ ಆ ಮೂಲಕ ರಾಜಕೀಯ ಕ್ರಾಂತಿಯುಂಟಾಯಿತು, ಎಂಬದಾಗಿ ತರ್ಕಿಸಲು ಬರುವಂತಿಲ್ಲವೆಂದು ತಿಳಿಯುತ್ತದೆ. ಮೂರನೆಯದಾಗಿ ಸಿಂಗಿರಾಜ ಪುರಾಣ ಕರ್ತೃವು ಈ ಮಾತನ್ನು ಒಪ್ಪುವದಿಲ್ಲ. ಬಸವಣ್ಣನವರ ಅದ್ಭುತ ಸಾಮರ್ಥ್ಯವನ್ನು ಕಂಡ ಬಿಜ್ಜಳನು ಅವರನ್ನು ಭಕ್ತಿಪೂರ್ವಕವಾಗಿ ಮನ್ನಿಸಿ ಅವರಿಗೆ ವಿಶ್ರಾಂತಿ ಕೊಡುವದಕ್ಕಾಗಿ ಚಿಕ್ಕದಣ್ಣಾಯಕ ಚನ್ನಬಸವಣ್ಣನಿಗೆ ಮಂತ್ರಿಪದವನ್ನು ಕೊಟ್ಟನೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ. ಹಾಗೂ ಬಿಜ್ಜಳ ಬಸವರ ಸೌಹಾರ್ದದಿಂದಲೇ ಗ್ರಂಥವು ಕೊನೆಗಾಣುತ್ತದೆ.[೧]

---

೧ ಪಾದೋದಕ ಪರುಷ ಕಬ್ಬುನವ ಮುಟ್ಟಲಿಕೆ ।
ಹೋದದವ= ಲೋಹವದು ಪೊನ್ನಾಯ್ತು ದರುಶನದಿ ।
ಹೋದುದರಸನ ನಿಂದಕರ ಶಾಪವಾದಿಯಲಿ ಶಿವನಮುಂದಿಹಪರಗಳು॥
ಸಾಧಿಸಿದ ವಾದ ಮಡಿಯಿತ್ತು ಶ್ರೀಭಾವದಂ ।
ಪಾದಕೆರಗಿದೊಲೆರಗಲಿಹವ ಪರವಿತ್ತುವಂ ।
ತಾದಯಾಂಬುಧಿ ಬಸವರಾಜ ಬಿಜ್ಜಳನರೇಂದ್ರನ ಮುಕುಟ
ಪಿಡಿದೆತ್ತಿದಾ॥ (೪೩)

(ಮುಂದಿನ ಪುಟದಲ್ಲಿ ನೋಡಿರಿ)

ಆದರೆ ಸಿಂಗಿರಾಜ ಪುರಾಣ ರಚನೆಯ ಕಾಲ ಅದರಲ್ಲಿಯ ಹೇಳಿದ ಸಂಗತಿಗಳ ಐತಿಹಾಸಿಕ ಸತ್ಯ ಇವುಗಳ ವಿಚಾರವಾಗಿ ಭಿನ್ನಾಭಿಪ್ರಾಯ ಗಳೂ ಇವೆ. ಅಲ್ಲದೆ ಹರಿಹರ, ಭೀಮಕವಿ, ವಿರೂಪಾಕ್ಷಪಂಡಿತ, ಷಡ ಕ್ಷರದೇವ ಇವರೆಲ್ಲ ಬಸವನ ಆದೇಶದಂತೆ ಬಿಜ್ಜಳನ ಕೊಲೆ ನಡೆಯಿ ತೆಂದೇ ಹೇಳುತ್ತಾರೆ. ಆದ್ದರಿಂದ ಈ ವಿಷಯವು ತೊಡಕಿನದಾಗಿದೆ. ಆದರೆ ಶಿವದ್ರೋಹವನ್ನು ಮಾಡಿದವರನ್ನು ಕೊಲ್ಲಬೇಕೆಂಬ ಸಾಂಪ್ರದಾ ಯವು ಬಲವತ್ತರವಾಗಿರುವ ಕಾಲದಲ್ಲಿ ಇಂತಹ ಕೊಲೆಯು ನಡೆಯಿ ತೆಂದು ಮೇಲಿನ ಕವಿಗಳು ನಂಬಿರಬಹುದು. ಈ ವಿಷಯವನ್ನು ಶ್ರೀ. ಎಂ. ಆರ್ ಶ್ರೀನಿವಾಸಮೂರ್ತಿಗಳು ಒಳ್ಳೆಯ ಸ್ವಾರಸ್ಯಕರವಾದ ರೀತಿ ಯಲ್ಲಿ ಚರ್ಚಿಸಿ[೧] 'ಜಗದೇವನು ಬಿಜ್ಜಳನನ್ನು ಕೊಂದಿರಬಹುದು, ಆದರೆ ಬಸವಣ್ಣನವರು ಪ್ರೇರಣಕರ್ತೃವಲ್ಲ' ಎಂಬ ಸಿದ್ಧಾಂತಕ್ಕೆ ಬಂದಿ ದ್ದಾರೆ. ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿಗಳ ಈ ಚರ್ಚೆಯು ಸಮಂಜಸವೆಂದು ತೋರುತ್ತದೆ. 'ಕಾಲಜ್ಞಾನದ ವಚನಗಳು' ಎಂಬ ಪುಸ್ತಕದಲ್ಲಿ —

ಪ್ರಮಥರು ಸಹಿತ ಚನ್ನಬಸವರಾಜ ದೇವರು ಅನುಭವ ಮಂಟ ಪದಲ್ಲಿ ಮೂರ್ತಂಗೈದಿರ್ಪ ಸಮಯದಲ್ಲಿ ಜಗದೇವ, ಮಲ್ಲಿಬೊಮ್ಮಣ್ಣಂ ಗಳೀರ್ವರು ಬಂದು .....ನಾಳೆ ಮಂಗಳವಾರ ಬಿಜ್ಜಳರಾಯನ ಇರಿದು ಕೊಂದಿಹೆವು. ನೀವೆಲ್ಲ ಗಣಂಗಳು ಸಹಿತವು ಉಳಿವೆಗೆ ಕಳು

---

ದಂಡನಾಯಕ ಪವಸ್ಥಿತನೆಸರದಾಚಿಕ್ಕ ।
ದಂಡನಾಯಕನಾಲರಸು ಗಣಮುಖದಲ್ಲಿ ।
ಕೊಂಡಾಡಿದನು ಬಸವರಾಜ ದೇವರಿಗೆ ದೇವನಾಮ ಸಾಮ್ಯವೆಂದೂ॥
ಮಂಡೆಯ ಮೇಲೆರಡು ಕೈಗಳಸವಿಡಲುಳಿದ ।
ಮಂಡಲೇಶ್ವರ ಮಂತ್ರಿತಂತ್ರ ಮೂವತ್ತಾರು ।
ಕೊಂಡೆಯರ ನಿವಹವೆಲ್ಲೆದ್ದು ಜಯ ಜಯ ವೆನುತ್ತಿರ್ದುದೆವ್ಮ

ಬಸವಗೇ॥ (೪೮)

(ನನಗೆ ದೊರೆತ ಸಿಂಗರಾಜ ಪುರಾಣದ ಕೈಬರೆಹದಪ್ರತಿಯಲ್ಲಿಯ ೪೮ನೆಯ ಸಂಧಿಯಲ್ಲಿಯ ೯೩ ಹಾಗೂ ೪೮ನೆಯ ಪದ್ಯಗಳಿವು.)

೧ 'ಭಕ್ತಿ ಭಾಂಡಾರಿ ಬಸವಣ್ಣನವರು' ಎಂಬ ಪುಸ್ತಕದಲ್ಲಿ ೮೩—೧೦೫ ಪುಟಗಳು

ಹಿಸಿಕೊಂಡು ಚಿತ್ತೈಸುವುದು'-ಎಂದು ಹೇಳಿದಂತೆ-ಬರೆದಿದೆ.[೧] ಅಲ್ಲದೆ ಅವರ ಈ ಕಾರ್ಯಕ್ಕೆ ಮಡಿವಾಳಯ್ಯಗಳು ಹೆಚ್ಚು ಉತ್ತೇಜನವನ್ನು ಕೊಟ್ಟಂತೆ ಈ ಗ್ರಂಥದಿಂದ ತಿಳಿದು ಬರುತ್ತದೆ. ಹಾಗೂ ಈ ಗ್ರಂಥ ದಲ್ಲಿಯು 'ಬಸವರಾಜದೇವರು ನಿರೂಪಿಸಿದ ಕಾಲಜ್ಞಾನದ ವಚನವು' ಎಂಬ ಭಾಗವಲ್ಲಿ ಬಸವಣ್ಣನವರು ಹೀಗೆ ಹೇಳಿದಂತೆ ಇದೆಃ—

—"ನಾನು ಬಂದ ಕಾರ್ಯಕ್ಕೆ ನೀವು ಬಂದಿರಿ. ನೀವು ಬಂದ ಕಾರ್ಯಕ್ಕೆ ನಾನು ಬಂದೆನು. ನಾನು ನೀವು ಬಂದ ಕಾರ್ಯಕ್ಕೆ ಬಂದಾಗ ತಾನಲ್ಲವು ಪ್ರಭುದೇವರು ಮುಂದೆ ಕೆಲವು ದಿವಸಕ್ಕೆ ಕಲ್ಯಾಣವೆಂಬ ಪ್ರಣತಿಯಾ ದಿತ್ತು ನಾನೇ ತೈಲವಾದೆನು. ಚಿಕ್ಕದಂಡನಾಯಕರೆ ಬತ್ತಿಯಾದಾರು. ಪ್ರಭುದೇವರೇ ಜ್ಯೋತಿಯಾದಾರು. ಪ್ರಣತಿ ಒಡೆಯಿತ್ತು. ತೈಲವರ ತಿತ್ತು. ಬತ್ತಿ ಸವೆಯಿತ್ತು. ಜ್ಯೋತಿ ಬಯಲಾಯಿತ್ತು. ಸೊಡ್ಡಳ ಬಾಚ ರಸಯ್ಯ ಸುಂಕದ ಬಂಕಯ್ಯ ..ಮಡಿವಾಳ ಮಾಚಿದೇವಯ್ಯ ಮೊದ ಲಾದ ಅಮರಗಣಂಗಳು ನಿಮ್ಮ ಕೈಯ್ಯೆಡೆಗೆ ಚಿಕ್ಕದಂಡನಾಯಕರ ಕೊಟ್ಟು ನಾವು ಕಪ್ಪಡಿಯಸಂಗಮೇಶ್ವರಕ್ಕೆ ಹೋದಿಹೆವು. ನಾವು ಹೋದ ಮೂರುವರೆ ತಿಂಗಳಿಂದೆ ಮೇಲೆ ಹರಳಯ್ಯ ಮಧುವಯ್ಯಗಳಿಂದ ಕದನ ಹುಟ್ಟಿತ್ತು. ಜಗದೇವ ಮಲ್ಲಿಬೊಮ್ಮಣ್ಣಗಳೀರ್ವರು ಪಂಜುಗಾರರಾಗಿ ಹೋಗಿ ಬಿಜ್ಜಳರಾಯನ ಕ್ಷಯವ ಮಾಡಿಯಾರು"[೨] ಈ ಕಾಲಜ್ಞಾನ ವನ್ನು ಯಾರು ಯಾವಾಗ ಬರೆದರೆಂಬ ಮಾತು ನಿಶ್ಚಿತವಲ್ಲದಿದ್ದರೂ ಕೂಡ ಮೇಲೆ ಹೇಳಿದ ಮಾತು ಬಸವಣ್ಣನವರ ಜೀವನಕ್ಕೆ ಅನ್ವಯಿ ಸುವ ಸಮಂಜಸವಾದ ಹೇಳಿಕೆಯಾಗಿದೆ. ಈ ಹೇಳಿಕೆಯಂತೆ ಬಸವಣ್ಣ ನವರು ಬಿಜ್ಜಳನ ಕೊಲೆಗೆ ಉತ್ತರವಾದಿಗಳಾಗಲಾರರು. ಆದ್ದರಿಂದ ಬಿಜ್ಜಳನ ಕೊಲೆ ಜಗದೇವಾದಿಗಳಿಂದ ನಡೆದಿರಬಹುದಾದರೂ ಬಸ ವಣ್ಣನವರು ಅದಕ್ಕೆ ಉತ್ತರವಾದಿಗಳಲ್ಲವೆಂದು ನಾವು ಸ್ಪಷ್ಟವಾಗಿ ಹೇಳ ಲಿಕ್ಕೆ ಅಡ್ಡಿ ಇಲ್ಲ. ಶಿವದ್ರೋಹವನ್ನು ಮಾಡಿದವರನ್ನು ಕೊಲ್ಲಿಸು ವದೂ ಒಂದು ಧರ್ಮಕಾರ್ಯವೆಂದು ನಂಬುವ ಕಾಲದಲ್ಲಿದ್ದ ಹರಿಹ

---

೧ ರಾ. ಸಾ. ಹಳಕಟ್ಟಿಯವರು ಪ್ರಕಟಿಸಿದ 'ಕಾಲಜ್ಞಾನದ ವಚನಗಳು' ಎಂಬ ಪುಸ್ತಕದಲ್ಲಿಯ ೧ನೆಯ ಪುಟ

೨ ಕಾಲಜ್ಞಾನದ ವಚನಗಳು ಪುಟ ೪೩—೪೪

ರನ ಹೇಳಿಕೆಯನ್ನು ನಾವು ನಿಜಸಂಗತಿಯೆಂದು ನಂಬಬೇಕಾದ ಕಾರಣವಿಲ್ಲ. ಅಹಿಂಸಾವಾದಿಗಳಾದ ಮಹಾತ್ಮರು ಪರಪಕ್ಷದವರ ಕೊಲೆಗೆ ಪ್ರೇರಣಕರ್ತೃವಾಗಲಾರರು. ಬಸವಣ್ಣನವರು ಅಹಿಂಸಾವಾದಿಗಳಾದ ಮಹಾತ್ಮರಾಗಿದ್ದರು.

ತುಲನಾತ್ಮಕ ಚರಿತ್ರೆಯಲ್ಲಿಯ ಮುಖ್ಯ ವ್ಯತ್ಯಾಸಗಳನ್ನು ಚರ್ಚಿಸಿದ ನಂತರ ಈಗ ಬಸವರಾಜದೇವ ರಗಳೆಯಲ್ಲಿ ಬಸವಣ್ಣನವರ ಮೂರ್ತಿ ಸ್ವರೂಪವು ಹೇಗೆ ಚಿತ್ರಿತವಾಗಿದೆಯೆಂಬುದನ್ನು ನೋಡಬೇಕಾಗಿದೆ. ಬಸವಣ್ಣನವರ ವಿಷಯವಾಗಿರುವ ಇತರ ಪುರಾಣಗಳಲ್ಲಿ ಶಿವಶರಣರ ಕಥಾವಲಿಗಳನ್ನೊಳಗೊಂಡ ಬಸವೇಶನ ಲೀಲೆ, ವೀರಶೈವ ಮತೋದ್ಧಾರಣ ಚಳವಳಿಯ ನಾಯಕನ ಚಟುವಟಿಕೆ, ನಂದೀಶನ ಅವತಾರದ ಪವಾಡಗಳ ವರ್ಣನೆ ಇವುಗಳು ಕಂಡುಬರುತ್ತವೆ. ಶೂನ್ಯಸಂಪಾದನೆಯಲ್ಲಿ ಅನುಭವಮಂಟಪದ ಶಿವಶರಣರೆಂಬ ತಾರೆಗಳ ಮಧ್ಯದಲ್ಲಿ ಚಂದ್ರನಂತೆ ಶೋಭಿಸುವ ಬಸವಣ್ಣನವರ ಅನುಭಾವದ ನಿರೂಪಣೆಯಿದೆ. ಆದರೆ ಬಸವರಾಜದೇವ ರಗಳೆಯಲ್ಲಿ ಮಾತ್ರ ಬಸವಣ್ಣನವರ ಮಾನವ ಜೀವನವು ವಿಕಾಸವಾದ ಸುಂದರ ಚಿತ್ರವು ಕಂಡುಬರುತ್ತದೆ. ಇಲ್ಲಿ ಭಕ್ತನೊಬ್ಬನು ಹಿರಿಯ ಭಕ್ತನೊಬ್ಬನನ್ನು ಭಕ್ತಿಪರವಶತೆಯಿಂದ ಕೊಂಡಾಡಿದ ಗಾನಲಹರಿಯಿದೆ. ಹಾಗೂ ಉಳಿದ ಪ್ರಮಾಣಗಳಿಗಿಂತ ಹೆಚ್ಚು ತರ್ಕಶುದ್ಧವೆಂದು ತೋರುವ ಜೀವನದ ಬೆಳವಣಿಗೆಯ ಕಾವ್ಯಮಯ ಚಿತ್ರವಿದೆ. ಪ್ರೊ. ಟಿ. ಎಸ್ ವೆಂಕಣ್ಣಯ್ಯನವರು ತಮ್ಮ ಪೀಠಿಕೆಯಲ್ಲಿ ಈ ವಿಚಾರವನ್ನು ಚನ್ನಾಗಿ ನಿರೂಪಿಸುತ್ತ ಹೀಗೆ ಹೇಳಿದ್ದಾರೆ. "ಹರಿಹರನು ಅವರ ಜೀವನದ ಈ ಮೂಲರೇಖೆಗಳು ಸುಸ್ಪಷ್ಟವಾಗುವಂತೆ ಕಾವ್ಯ ರಚನೆ ಮಾಡಿದ್ದಾನೆ ತನ್ನ ನೈಪುಣ್ಯದಿಂದ ಬಸವಣ್ಣನವರ ಅಲೌಕಿಕ ಕಾವ್ಯಗಳನ್ನೂ ಅದ್ಭುತವಾದ ಮಹಿಮೆಗಳನ್ನೂ ಹರಿಹರನು ಮೇಲಿಂದಮೇಲೆ ಉದ್ಘೋಷಿಸುತ್ತಿದ್ದರೂ ಅವರ ಸರಳವಾದ ಮಾನವ ಹೃದಯವನ್ನು ಮಾತ್ರ ಎಲ್ಲಿಯೂ ಮರೆಮಾಡಿಲ್ಲ."[೧] ಬಸವಣ್ಣನವರ ಮಾನವ ಹೃದಯವನ್ನು ಅವರು ಸಂಗಮೇಶ್ವರನನ್ನು ಅಗಲಬೇಕಾದ ಸಂದರ್ಭದಲ್ಲಿ ಹೇಳುವ ಮಾತುಗಳಿಂದ ಸರಿಯಾಗಿ ಗ್ರಹಿಸಬಹುದಾಗಿದೆಃ—"ನೀನೇಕೆ

---

೧ ೧೯೩೦ರಲ್ಲಿ ಪ್ರಕಟವಾದ ಬಸವರಾಜದೇವರಗಳೆಯ ಪೀಠಿಕೆಯ ಪುಟ ೮

ಈ ನುಡಿಯೇಕೆ? ಹೊದ್ದಿದರಂ ಹೋಗೆಂಬರೆ? ಸಾರ್ದರಂ ಸೈರಿಸೆಂಬರೆ? ನಂಬಿದರ ಗೋಣಂ ಕೊಯ್ವರೆ? ಶಿಶುವನಿರಿವರೆ? ಪಶುವಂ ಕೊಲುವರೇ? ಎನ್ನ ಬಿಡುವರೇ? ಕರುಣಿ ಕರುಣಿ, ಕರುಣಂ ಲೇಸಾಯ್ತು. ಅರ್ಚಿಸಿತಕ್ಕೆ ಫಲವಾಯ್ತು. ಇನ್ನೇನು ಇನ್ನೇನು? ಎಂದೊಟ್ಟೆ ಒರಲಿ ಪರಿತಂದು ಸಂಗನಂ ತಕ್ಕೈಸಿ ಪಳವಿಸಿ, ಪಲುಂಬಿ, ಗೋಳಿಟ್ಟು, ಅಲಿಟ್ಟು ಸಿವದಿಟ್ಟು ಮೊರೆಯಿಟ್ಟು ಮೂರ್ಛಿಸುತ್ತಿಂತಕ್ಕೆಚ್ಚತ್ತು ಮೆಲ್ಲಮೆಲ್ಲನಾ ಲಿಂಗನವುಂ ಸಡಿಲ್ಚಿ ನಡೆತಂದು ..."

ಇಲ್ಲಿ ನಿರೂಪಿತವಾದ ಜೀವನವು ಹೆಚ್ಚು ಸಹಜವಾದುದು ಎಂಬ ಮಾತಿಗೆ ಬಿಜ್ಜಳನಲ್ಲಿಯ ಅಧಿಕಾರ ಪ್ರಾಪ್ತಿಯ ಘಟನೆಯು ಉತ್ತಮ ನಿದರ್ಶನವಾಗಿದೆ. ಅಲೌಕಿಕ ಓಲೆಯ ಪ್ರಸ್ತಾಪಕ್ಕೆ ಬದಲಾಗಿ ಇಲ್ಲಿ "ಗಣಕರ್ ತಪ್ಪಿ ಪೇಳೆ ಭರದಿಂದ, ಅಂದು ತಪ್ಪಿದುದಂ ಅರಿದು ಆ ಬಸವರಾಜಂ ನೋಡಿ, "ಬುದ್ಧಿ ನಿಮಗಿಲ್ಲ ಲೆಕ್ಕಂ ತಪ್ಪಿದುದು ನೋಡಿ" ಎಂದು ಹೇಳಿದನೆಂದೂ ಲೆಕ್ಕದಲ್ಲಿಯ ಈತನ ಕೌಶಲ್ಯದಿಂದ ಈತನಿಗೆ ಕರಣಿಕನ ಸ್ಥಾನವು ದೊರೆಯಿತೆಂದೂ ಹೇಳಿದೆ. ಹಾಗೂ ಆತನು ತನ್ನ ಪ್ರಾವೀಣ್ಯದಿಂದ ಉತ್ತರೋತ್ತರ ಹೆಚ್ಚು ಘನತೆಗೇರಿದುದು ಸ್ವಾಭಾವಿಕವಾಗಿದೆ. ಹರಿಹರನು ಇಂತಹ ಕೆಲವು ಘಟನೆಗಳಿಂದ ಬಸವನ ಜೀವನ ಚರಿತ್ರೆಯನ್ನು ಹೆಚ್ಚು ಸ್ವಾಭಾವಿಕವೆಂದು ತೋರುವಂತೆ ಚಿತ್ರಿಸಿದ್ದಾನೆ. ಪುರಾಣ ಪ್ರಿಯರಿಗೆ ಈ ಮಾತು ರುಚಿಸುವದಿಲ್ಲವೆಂಬ ವಿಷಯ ಬೇರೆ.

ಬಸವನ ಮೂರ್ತಿ ಸ್ವರೂಪದ ನಿರ್ದುಷ್ಟ ಕಲ್ಪನೆಯನ್ನು ಹರಿಹರನು ಇಟ್ಟುಕೊಂಡಿದ್ದನೆಂದು ಸೂಚಿಸುವ ಅನೇಕ ಉಕ್ತಿಗಳು ರಗಳೆಯಲ್ಲಿ ದೊರೆಯುತ್ತವೆ. ಅವುಗಳಲ್ಲಿ ಒನೆಯ ಸ್ಥಲದಲ್ಲಿ ಶರಣರು ಬಸವನನ್ನು ಹೊಗಳಿದ ರೀತಿ ಹೆಚ್ಚು ಪರಿಣಾಮಕಾರಿಯಾಗಿದೆ. ಶರಣರು ಬಸವನನ್ನು ಕುರಿತು ಹೀಗೆ ಹೇಳಿದ್ದಾರೆ.

'ಎಲೆ ಬಸವ, ಗುರುಲಿಂಗಮೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿಪುವ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ, ಸ್ವಪ್ನ, ಸುಷುಪ್ತಿ ಅವಸ್ಥಾತ್ರಯಂಗ

ಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯುನಚ್ಚರಿಯಿಂ ಮಾಳ್ಪೆ ಜಂಗಮು ಪ್ರಾಣಿಯಾಗಿರ್ಪೆ ಶಿವಲಿಂಗಾರ್ಪಿತದಲ್ಲದುದನಾ ಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ.......ಲಿಂಗದಲ್ಲಿ ಅಪ ವಿತ್ರತೆಯುನರಿಯೆ. ಪರಾಂಗನೆಯುರಂ ಹೆತ್ತತಾಯ್ಗಳೆಂಬೆ. ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ. ನಡೆದು ತಪ್ಪೆ. ನುಡಿದು ಹುಸಿಯೆ. ಹಿಡಿದು ಬಿಡೆ, ಬಿಟ್ಟು ಹಿಂಗದೀಯೆ. ಕೊಟ್ಟು ನೆನೆಯೆ. ನಟ್ಟು ಕೀಳೆ. .. ನೆನೆದು ಮರೆಯೆ. ಮನದೊಳೋವರಿಯಿಲ್ಲ. ಬುದ್ಧಿಯೊಳು ವಿಸಂಚ ವಿಲ್ಲ. ಅಹಂಕಾರದೊಳು ಗರ್ವವಿಲ್ಲ. ಚಿತ್ತದೊಳು ಹೊರೆಯಿಲ್ಲ. ಕಾಮುವಿಲ್ಲ. ಕೋಪದ ಮಾತೇಕೆ? ಲೋಭದ ಗಾಳಿ ತೀಡದು, ಮೋಹಕ್ಕೆ ತೆರಪಿಲ್ಲ, ಮದದ ಸೊಗಡು ಹೊದ್ದದು, ಮತ್ಸರಕ್ಕಿಂಬಿಲ್ಲ. ಬಸವರಾಜ, ನಿನ್ನ ಗುಣಂಗಳಂ ಬಣ್ಣಿಸಲೆಮ್ಮಳವಲ್ಲ.. ."

ಬಸವಣ್ಣನವರ ಮೂರ್ತಿಸ್ವರೂಪದ ಈ ಶಬ್ದ ಚಿತ್ರವು ಅಪೂ ರ್ವವಾಗಿದೆ. ಹರಿಹರನು ಬಸವಣ್ಣನವರನ್ನು ಬಗೆಬಗೆಯಿಂದ ಹೊಗ ಳಿದ್ದಾನೆ. ೧೯೩೩ರಲ್ಲಿ ಪ್ರಕಟವಾದ ಗ್ರಂಥದ ೨೨, ೪೮, ೫೦, ೫೯-೬೦, ೭೦ ಹಾಗೂ ೮ ಇತ್ಯಾದಿ ಪುಟಗಳಲ್ಲಿ ಈ ಹೊಗಳಿಕೆಯನ್ನು ನೋಡ ಬಹುದು. ಹಾಗೂ ಹರಿಹರನ ಭಕ್ತಿಯ ಆವೇಶದ— ಕಾವ್ಯದ ಆವೇ ಶದ-- ಪರಿಚಯುವನ್ನು ಮಾಡಿಕೊಳ್ಳಬಹುದು.

ರಗಳೆಯಲ್ಲಿ ಬಸವಣ್ಣನವರ ಶಿವಪೂಜೆಯ ಸಂಭ್ರಮ, ನಿಷ್ಠೆ, ಸಮರ್ಪಣ ಭಾವ, ತಾದಾತ್ಮ್ಯಭಾವ, ಸೇವಕಭಾವ, ಲಿಂಗಜಂಗ ಮಸಾಮರಸ್ಯ— ಇವೆಲ್ಲವುಗಳನ್ನು ನಾವು ಕಾಣುತ್ತೇವೆ. ಇವೆಲ್ಲವು ಗಳಿಂದ ಬಸವಣ್ಣನವರ ಮೂರ್ತಿಸ್ವರೂಪ ಉಜ್ವಲವಾಗಿ ತೋರುತ್ತದೆ. ಸತಿಪತಿಭಾವ, ಸೇವ್ಯ-ಸೇವಕಭಾವ ಇವುಗಳಿಂದ ಬಸವನ ಅನನ್ಯ ವಾದ ಶಾರಣ್ಯವು ಕಂಡುಬರುತ್ತದೆ. ಕಪ್ಪಡಿ ಸಂಗಮೇಶ್ವರನ ದೇವಾ ಲಯಕ್ಕೆ ಬಂದಕೂಡಲೆ ದೊಪ್ಪನೆ ಬಿದ್ದು 'ದೇವದೇವ, ಅನಾಥನಾಥ, ಅನಿಮಿತ್ತಬಂಧುವೆ, ತಾಯ್ತಂದೆ, ಬಂಧುಬಳಗವೆ, ಕುಲವೆ, ಬಲವೆ, ಛಲವೆ, ತವರೆ, ಕಣ್ಣೆ, ಮತಿಯೆ, ಪುಣ್ಯವೆ, ಪ್ರಾಣವೆ, ಕಾವುದು ಕಾವುದು' ಎಂದು ಮೂರ್ಛೆಹೋಗುವ ಸ್ಥಿತಿಯನ್ನು ಗಮನಿಸಬೇಕು. ಮೂರನೆಯ ಸ್ಥಲದಲ್ಲಿಯ ಶಿವಪೂಜಾಸಂಭ್ರಮವನ್ನು ಓದಿ ತಲ್ಲೀನ ತೆಯ ಪಡೆಯಬೇಕು. ಏಳನೆಯ ಸ್ಥಲದಲ್ಲಿಯ ಗಣಾರಾಧನೆಯ ವರ್ಣ

ನೆಯಲ್ಲಿಯು ಬಸವನ ಅನನ್ಯವಾದ ನಿಷ್ಠೆ-ಭಕ್ತಿಗಳನ್ನು ನೋಡಿ ನಲಿಯ ಬೇಕು. ಒಂಬತ್ತನೆಯ ಸ್ಥಲದಲ್ಲಿ ಕಳ್ಳರು ಗೋವುಗಳನ್ನು ಕಳವು ಮಾಡಿಕೊಂಡು ಹೋದರೆಂದು ಗೋವಳರು ಬಂದು ಬಸವನಿಗೆ ಬಿನ್ನ ವಿಸಿದಾಗ ಆತನು,

....ಮರುಳುಗೋವಳಾ ಭಕ್ತರೇಂ ಕಳ್ಳರೇ
ನಿನಗೇನು ತವೊತ್ರಡವೆಯಂ ತಾವೆ ಕೊಳ್ಳರೇ

ಸಂಗನೇ ಕೊಂಬವಂ ಸಂಗನೇ ಕೊಡುವವಂ
ಸಂಗನೇ ಉಂಬುವವಂ ಸಂಗನೇ ಉಡುವವಂ

ಎಂದು ಹೇಳುತ್ತಾನೆ. ಇಲ್ಲಿ ಆತನ ಸರ್ವಾರ್ಪಣಭಾವವು ಸರಿಯಾಗಿ ಚಿತ್ರಿತವಾಗಿದೆ. ಅದೇ ಒಂಬತ್ತನೆಯ ಸ್ಥಲದಲ್ಲಿ ಬಸವನ ಪ್ರಾಣವು ಶರಣರೊಡನೆ ಹೊರಟುಹೋದುದರ ವರ್ಣನೆ ಇದೆ. ಇದರಿಂದ, ಆತನ ನಿಜವಾದ ನಿಷ್ಠೆ, ಶರಣರ ಪ್ರೇಮಗಳು ವ್ಯಕ್ತವಾಗುತ್ತವೆ. ಬಸವನೇ ಹೀಗೆ ಹೇಳುತ್ತಾನೆ:—

ಶರಣತತಿ ಹೋಹುದೇ ಎನ್ನ ಹರಣದ ಹೋಗು
ಶರಣ ಬರವೇ ಎನ್ನ ಹರಣದ ಬರವನಾಗು

ಹತ್ತನೆಯ ಸ್ಥಲದಲ್ಲಿ ಕಂಬಳಿನಾಗಿದೇವನೆಂಬ ಅಸ್ಪೃಶ್ಯನ ಮನೆ ಯನ್ನು ಹೊಕ್ಕು ಪ್ರಸಾದ ಸ್ವೀಕರಿಸಿದುದರ ಪ್ರಸ್ತಾಪವಿದೆ. ಇದರಿಂದ ಬಸವಣ್ಣನವರ ಅಸ್ಪೃಶ್ಯೋದ್ಧಾರ, ಅವರು ಜಾತಿಗಿಂತ ನೀತಿಗೆ ಹೆಚ್ಚಿನ ಯೋಗ್ಯತೆ ಕೊಟ್ಟ ಸಂಗತಿ ಇವುಗಳು ತಿಳಿದು ಬರುತ್ತವೆ. ಈ ಘಟ ನೆಯನ್ನು ಹಿಂದಿನ ಹಾಗೂ ಇಂದಿನ ಮಹಾತ್ಮರ ಜೀವನದೊಡನೆ ಹೋಲಿಸಿ ನೋಡಬಹುದು. ೧೩ನೆಯ ಸ್ಥಲದಲ್ಲಿ ಲೆಂಕಣ್ಣನು ಬಸ ವನ ಪತ್ನಿಯ ಓಲೆಯನ್ನು ಅಪಹರಿಸಲು ಬಂದ ಸಂಗತಿಯು ನಿರೂ ಪಿಸಲ್ಪಟ್ಟಿದೆ. ಆಗ ಬಸವನು ತನ್ನ ಪತ್ನಿಗೆ

....ಎಲೆಲೆ ಸಂಗನ ಕರಂ ನೋಂದುದೇ

ಬೆಸಸುವಲ್ಲಿಂ ಮುನ್ನವೇ ಕೊಡವೆ ನಿಲ್ವುದೇ

ಎಂದು ಹೇಳುತ್ತಾನೆ. ಪತ್ನಿಯು ಮೈಮೇಲಿನ ಆಭರಣಗಳನ್ನು ಅಪಹರಿಸಲು ಬಂದವನ ಕರಗಳು ನೊಯ್ಯಬಹುದು, ಆಭರಣಗಳನ್ನು ಬೇಗ ಬಿಚ್ಚಿ ಕೊಡಬೇಕು ಎಂದು ಪತ್ನಿಗೆ ಹೇಳುವಲ್ಲಿ ಸರ್ವಾರ್ಪಣಭಾವದ ಜೊತೆಗೆ ಅಪೂರ್ವವಾದ 'ಅಹಿಂಸಾ ತತ್ತ್ವ'ದ ಕಲ್ಪನೆಯಿದೆ. ಇಂತಹ 'ಅಹಿಂಸೆ' ಮಹಾತ್ಮರಿಗೇ ಮಾತ್ರ ಸಾಧ್ಯ.

ಕೊನೆಯದಾಗಿ ಈ ರಗಳೆಯಲ್ಲಿ ನನ್ನ ದೃಷ್ಟಿಯಿಂದ ಒಂದು ಒಳ್ಳೆಯ •ಸ್ವಾರಸ್ಯಕರವಾದ ಹಾಗೂ ಅಪೂರ್ವವಾದ ಸಂಗತಿಯೊಂದಿದೆ. ಹದಿಮೂರನೆಯ ಸ್ಥಲದಲ್ಲಿ ಬಸವನ ಸರ್ವಾರ್ಪಣಭಾವಕ್ಕೆ ಮೆಚ್ಚಿ ಆತನನ್ನು ಕೈಲಾಸಕ್ಕೆ ಕರೆದೊಯ್ಯಲು ದೇವನು ಬರುತ್ತಾನೆ.[೧]

ಸಂಗಂ ಜಂಗಮಾಕಾರದೊಳ್ ನಿಂದು

ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ

ಸೊಡವಿಯೊಳಗಿರಲು ಸಾಲ್ವುದು ಬಾ ಮಗನೆ ನಿನಗೆ

ಎಂದು ದೇವನು ಕರೆಯುತ್ತಿದ್ದರೆ ಬಸವನು,

ಶರಣ ರೊಕ್ಕುದರ ಸವಿ ಕೈಲಾಸದೊಳಗುಂಟೆ

ಶರಣಸಂಗದ ಸುಖಂ ಕೈಲಾಸದೊಳಗುಂಟೆ

**ಇಲ್ಲಿಯ ಸುಖಂ ಕೈಲಾಸದೊಳಗುಂಟೆ.**

ಎಂದು ಕೇಳುತ್ತಾನೆ. ಇದು ಯಾವದೇ ಸಾಹಿತ್ಯದಲ್ಲಿಯಾಗಲಿ, ಮಹಾತ್ಮನ ಜೀವನದಲ್ಲಿಯಾಗಲಿ ಅತ್ಯಪೂರ್ವವೆಂದು ಹೇಳಬೇಕಾಗುತ್ತದೆ. 'ಸ್ವರ್ಗಲೋಕದಲ್ಲಿ ಭೂಲೋಕದ ಸುಖವು ಉಂಟೆ' ಎಂದು ದೇವನಿಗೆ 'ಸವಾಲು' ಹಾಕುವ ಈ ರೀತಿಯನ್ನು ಲಕ್ಷಿಸಬೇಕು. ವೈಯಕ್ತಿಕ ಆತ್ಮೋನ್ನತಿಯನ್ನು ಮಾಡಿಕೊಂಡ ಮಹಾತ್ಮರಿರುವರು. ಸಿರಿಯಾಳನಂತಹರು ಕಂಚಿಪಟ್ಟಣದ ಎಲ್ಲರನ್ನೂ ಕೈಲಾಸಕ್ಕೆ ಕರೆದು

---

೧ **ಬಸವರಾಜ ದೇವರ ರಗಳೆ ಪು. ೬೦.**

ಕೊಂಡು ಹೋದನೆಂಬ ಸಂಗತಿಯನ್ನು ಓದಿದ್ದೇವೆ. ದೇವನ ರಾಜ್ಯವನ್ನು ಭೂಲೋಕದಲ್ಲಿ ತರಲು ಯತ್ನಿಸಿದ ಮಹಾತ್ಮ ಯೇಸೂಕ್ರಿಸ್ತನ ಕಥೆಯನ್ನು ಕೇಳಿದ್ದೆವು. ಆದರೆ 'ಭೂಲೋಕದ ಸುಖವು ಸ್ವರ್ಗಲೋಕಕ್ಕಿಂತಲೂ ಮಿಗಿಲು, ಆದ್ದರಿಂದ ಇಲ್ಲಿಯ ಸುಖವು ಅಲ್ಲಿ ದೊರೆಯುವಂತಿದ್ದರೆ ಮಾತ್ರ ಅಲ್ಲಿಗೆ ನಾನು ಬರುವೆ' ಎಂದು ದೇವನಿಗೇ ಹೇಳಿದ ಮಹಾತ್ಮ ಬಸವೇಶನೂ ಧನ್ಯನು. ಅವನಿಂದ ಈ ಮಾತನ್ನು ಹೇಳಿಸಿದ ಕವಿಯೂ ಧನ್ಯನು.

---

ಆರೆಂಬುದನ್ನು ನಾವು ಕಂಡು ಹಿಡಿಯುವದು ಬಹು ಮಹತ್ವದ್ದಾಗಿದೆ. ಕೊಂಡುಗುಳಿಯ ಕೇಶಿರಾಜನ ಚರಿತೆಯನ್ನು ನೋಡಿದಲ್ಲಿ ಅವನು ಈ ಪೆರ್ಮಾಡಿ ರಾಯನ ಆಸ್ಥಾನದಲ್ಲಿ ಕೆಲಕಾಲ ಮಂತ್ರಿಯಾಗಿದ್ದನೆಂದು ತಿಳಿದು ಬರುತ್ತಿದೆ. (ಹರಿಹರನ ರಗಳೆಯನ್ನು ನೋಡಿರಿ.) ಹಾಗೆಯೇ ತೆಲಗು ಜೊಮ್ಮಯ್ಯನು ಪೆರ್ಮಾಡಿ ರಾಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದನೆಂದು ಶಿವಶರಣರ ಚರಿತ್ರೆಗಳಲ್ಲಿ ಉಲ್ಲೇಖಿಸಿದೆ. 'ಹರಿಹರನ ರಗಳೆಯನ್ನು ನೋಡಿರಿ. ಈ ರಗಳೆ ಇನ್ನೂ ಪ್ರಸಿದ್ಧವಾಗಿಲ್ಲ.) ಇಳಿಹಾಳ ಜೊಮ್ಮಯ್ಯನೆಂಬುವನು ಈ ಪೆರ್ಮಾಡಿ ರಾಯನ ಕಾಲದಲ್ಲಿಯೇ ಖ್ಯಾತಿ ಪಡೆದನು. ಆದ್ದರಿಂದ ಈ ಪೆರ್ಮಾಡಿಯು ಯಾರೆಂಬುದನ್ನು ನಾವು ಶೋಧಿಸುವದು ಬಹು ಮಹತ್ವದ್ದದೆ. ಇದರಿಂದ ಬಸವೇಶ್ವರನ ಪೂರ್ವೇತಿಹಾಸದ ಮೇಲೆ ಪ್ರಕಾಶವು ಬೀಳುವಂತಿದೆ. ಇವನು ಬಿಜ್ಜಳನ ತಂದೆಯಾಗಿದ್ದನೆಂದು ನನ್ನ ಈಗಿನ ತಿಳುವಳಿಕೆಯಾಗಿದೆ. ಈತನ ಕಾಲದಲ್ಲಿ ಅನೇಕ ಶಿವಶರಣರು ಕರ್ನಾಟಕದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದರು.

ಈ ಪೆರ್ಮಾಡಿ ಯಾರೆಂಬುದನ್ನು ಶೋಧಿಸಬೇಕಾದರೆ 'ಪೆರ್ಮಾಡಿ' ಎಂಬ ಹೆಸರಿನ ರಾಜರು ಅಥವಾ ಮಾಂಡಲಿಕರು ಈ ಕಾಲದಲ್ಲಿ ಯಾರು ಯಾರು ಆಗಿಹೋದರು. ಮತ್ತು ಅವರು ಎಲ್ಲಿ ಎಲ್ಲಿ ಆಳಿದರು ಎಂಬುವನ್ನು ನೋಡುವದು ಬಹು ಮಹತ್ವದ್ದಾಗಿದೆ.

ಚಾಲುಕ್ಯರ ರಾಜರಲ್ಲಿ ಜಯಸಿಂಹನ ತರುವಾಯ ಆಳಿದವರು ತ್ರೈಲೋಕ್ಯಮಲ್ಲ ೧ನೇ ಸೋಮೇಶ್ವರನು (೧೦೪೦ರಿಂದ ೧೦೬೯) ಅವನ ತರುವಾಯ ಭುವನೈಕಮಲ್ಲ ೨ನೇ ಸೋಮೇಶ್ವರನು (೧೦೬೯ರಿಂದ ೧೦೭೬) ಅವನ ತರುವಾಯ ತ್ರಿಭುವನಮಲ್ಲ ವಿಕ್ರಮಾದಿತ್ಯನು (೧೦೭೬–೧೧೨೬) ಆಮೇಲೆ ಭೂಲೋಕಮಲ್ಲ ಮೂರನೇ ಸೋಮೇಶ್ವರನು (೧೧೨೬-೧೧೩೮) ಆಮೇಲೆ ಜಗದೇಕಮಲ್ಲ (೧೧೩೮-೧೧೫೦). ಈ ಪ್ರಕಾರ ಅರಸರು ಬಸವೇಶ್ವರನ ಕಾಲದ ವರೆಗೆ ಆಳಿದರು. ಇದರಲ್ಲಿ ವಿಕ್ರಮಾದಿತ್ಯನ ಹೊರ್ತಾಗಿ ಪೆರ್ಮಾಡಿ ಎಂಬ ಹೆಸರುಳ್ಳ ಯಾವ ರಾಜರೂ ಇರುವದಿಲ್ಲ. 'ಪೆರ್ಮಾಡಿ' ಎಂಬ ಹೆಸರು ಈ ವಿಕ್ರಮಾದಿತ್ಯನಿಗೆ ಮಾತ್ರ ಇದ್ದದ್ದು ಶಿಲಾಶಾಸನದಿಂದ ತಿಳಿದು ಬರುತ್ತಿದೆ. ಆದರೆ ಈತನಿಗೆ ವಾಡಿಕೆಯಾಗಿ ಪೆರ್ಮಾಡಿ ಎಂಬ ಹೆಸರು ಇರದೆ, ವಿಕ್ರಮಾದಿತ್ಯನೆಂಬ ಇತಿಹಾಸದಲ್ಲಿಯೂ ಗ್ರಂಥಗಳಲ್ಲಿಯೂ ಇರುವದು ತೋರಿಬರುತ್ತದೆ.

ಶಿವಶರಣರ ಚರಿತ್ರೆಗಳಲ್ಲಿ ವಿಕ್ರಮಾದಿತ್ಯನ ಹೆಸರು ನಮ್ಮ ದೃಷ್ಟಿಗೆ ಬೀಳುವದಿಲ್ಲ. ಅವನ ಕಾಲದಲ್ಲಿ ಬಿಲ್ಹಣ, ವಿಜ್ಞಾನೇಶ್ವರ ಮೊದಲಾದ ಸಂಸ್ಕೃತ ಪಂಡಿತರೂ ಧರ್ಮಶಾಸ್ತ್ರಕಾರರೂ ಆಗಿ ಹೋದರು. ಅವನು ಶೈವ ಧರ್ಮಕ್ಕೆ ಸಹಾಯ ಮಾಡಿದಂತೆ ಸ್ಪಷ್ಟ ಉಲ್ಲೇಖಗಳು ದೊರೆಯುವದಿಲ್ಲ. ಅವನು ಶೈವ ಧರ್ಮದ ಪಕ್ಷಪಾತಿಗಳಾದ ಚೋಳ ರಾಜರೊಡನೆ ಆಗಿಂದಾಗ್ಗೆ ಯುದ್ಧ ಮಾಡುವ ಪ್ರಸಂಗಗಳು ಒದಗಿದವು. ೧೧೭೭ರಲ್ಲಿ ಪುಲಿಗೆರಿಯವರೆಗೆ ದಾಳಿ ಎತ್ತಿ ಬಂದಿದ್ದ ಚೋಳರಾಜನನ್ನು ಯುದ್ಧದಲ್ಲಿ ಗೆದ್ದು ಹಿಂದಿರುಗಿಸಿದನು. ಇವನು ಶೈವ ಧರ್ಮಕ್ಕೆ ಸಹಾಯಕನಾಗಿರುವ ಸಂಭವವು ತೋರುವದಿಲ್ಲ. ಆದ್ದರಿಂದಲೇ ವೀರ ಶೈವ ವಾಙ್ಮಯದಲ್ಲಿ ಇವನ ಉಲ್ಲೇಖಗಳು ಕಂಡು ಬರುವದಿಲ್ಲ.

ಇನ್ನೊಬ್ಬ ಪೆರ್ಮಾಡಿರಾಯನು ಗೋವೆಯ ಕದಂಬರಲ್ಲಿದ್ದನು. ಅಲ್ಲಿ ೧೧೪೦ರಲ್ಲಿ ೨ನೇ ಜಯಕೇಶಿ ಎಂಬ ರಾಜನಾಳುತ್ತಿದ್ದು ಅವನಿಗೆ ಪೆರ್ಮಾಡಿ-ಶಿವಚಿತ್ತ ಮತ್ತು ವಿಜಯಾದಿತ್ಯ-ವಿಷ್ಣುಚಿತ್ತ ಎಂಬ ಇಬ್ಬರು ಮಕ್ಕಳಿದ್ದರು. ಈ ರಾಜ್ಯವು ಗಟ್ಟದ ಪ್ರದೇಶದಲ್ಲಿದ್ದು ಖಾನಾಪುರ ತಾಲೂಕಿನಲ್ಲಿಯ ಹಲಸಿಗೆಯವರೆಗೂ ಹಬ್ಬಿತ್ತು. ಆದರೆ ವೀರಶೈವರ ಸಂಖ್ಯೆಯು ಈ ಪ್ರಾಂತದಲ್ಲಿ ಯಾವಾಗಲೂ ಅತ್ಯಲ್ಪವಾಗಿರುತ್ತದೆ. ಆದ್ದರಿಂದ ಬಸವೇಶ್ವರರ ಕಾಲದಲ್ಲಿ ಅಥವಾ ಅದಕ್ಕೂ ಪೂರ್ವದಲ್ಲಿ ವೀರಶೈವರ ಧಾರ್ಮಿಕ ಚಟುವಟಿಕೆಗಳು ಈ ಪ್ರಾಂತದಲ್ಲಿ ಬಹುಶಃ ಉಂಟಾಗಿರಲಿಕ್ಕಿಲ್ಲ. ಮತ್ತು ಅಲ್ಲಿ ಶಿವಶರಣರು ಉದ್ಭವಿಸಿಯೂ ಇರಲಿಕ್ಕಿಲ್ಲ.

ಗಂಗರಾಜರಲ್ಲಿ ಗಂಗ ಪೆರ್ಮಾಡಿ ಎಂಬ ಹೆಸರಿನ ರಾಜರಿದ್ದದ್ದು ಕಂಡುಬರುತ್ತಿದೆ. ಆದರೆ ವೀರಶೈವ ಧಾರ್ಮಿಕ ಜಾಗ್ರತಿಯು ಮೊದಲು ಉಂಟಾದದ್ದು ಉತ್ತರ ದೇಶದಲ್ಲಿ ಅದು ಮುಂದೆ ಅಲ್ಲಿಂದ ಪ್ರವಹಿಸುತ್ತ ಬೆಳಗಾವ, ಧಾರವಾಡ, ಶಿವಮೊಗ್ಗೆ, ಚಿತ್ರಕಲ್ಲದುರ್ಗ ಈ ಭಾಗಗಳನ್ನು ವ್ಯಾಪಿಸುತ್ತ ನಡೆಯಿತು. ವೀರಶೈವರ ಜನಸಂಖ್ಯೆಯು ದಟ್ಟವಾಗಿದ್ದ ಪ್ರದೇಶಗಳನ್ನು ನೋಡಿದಲ್ಲಿ ಈ ಅನುಮಾನವೇ ಹೆಚ್ಚಿಗೆ ದೃಢಪಡುತ್ತಿದೆ. ಆದ್ದರಿಂದ ವೀರಶೈವ ಶರಣರು ಈ ಪೂರ್ವ ಕಾಲದಲ್ಲಿ ಉದಯವಾದದ್ದು ಈ ಗಂಗರಾಜರ ಆಳಿಕೆಯಲ್ಲಿರಲಿಕ್ಕಿಲ್ಲ.

ಪೆರ್ಮಾಡಿರಾಯನೆಂಬವನು ಬಿಜ್ಜಳನೃಪನ ತಂದೆಯಾಗಿದ್ದನೆಂದು

ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಇವನು ತರ್ದವಾಡಿಯಲ್ಲಿ ಚಾಲುಕ್ಯರಾಜನಾದ ೬ನೇ ಸೋಮೇಶ್ವರನಿಗೆ ಮಾಂಡಲಿಕನಾಗಿ ೧೧೫೬ರಲ್ಲಿ ಆಳುತ್ತಿದ್ದನು. (ಇಂಗಳೇಶ್ವರ ಶಿಲಾಶಾಸನ). ಶಿವಶರಣರ ಚರಿತ್ರೆಗಳು ಇವನಿಗೆ ಸಂಬಂಧಪಡುತ್ತವೆಂದು ನನಗೆ ತೋರುತ್ತದೆ.

ಸಿಂದವಂಶದ ರಾಜರು ಎರಂಬರಗೆ (ಇದು ಈಗಿನ ಯಲಬುರ್ಗಿ—ಜಿಲ್ಲಾ ರಾಯಚೂರು) ಎಂಬಲ್ಲಿ ಆಳುತ್ತಿದ್ದು ಅವರ ವಂಶದಲ್ಲಿಯಾದರೂ ಒಬ್ಬನು ಪೆರ್ಮಾಡಿ ಎಂಬ ಹೆಸರಿನವನಿದ್ದಾನೆ. ಈ ರಾಜ್ಯವು ಬಹು ಚಿಕ್ಕದಾಗಿದ್ದು ಒಂದು ಕಾಲಕ್ಕೆ ಬದಾಮಿಯ ವರೆಗೂ ವಿಸ್ತರಿಸಿತ್ತು. ಬಿಜ್ಜಳನಿಗೆ ಸಿರಿಯಾದೇವಿ ಎಂಬ ಮಗಳಿದ್ದು ಅವಳನ್ನು ಸಿಂದವಂಶದ ೨ನೇ ಚಾವುಂಡನಿಗೆ ಕೊಟ್ಟಿತ್ತು. ಅವಳ ಮಗನೇ ಈ ಪೆರ್ಮಾಡಿಯಾಗಿದ್ದನು. ಈತನು ಬಿಜ್ಜಳನ ಸಮಕಾಲೀನನು. ಮತ್ತು ಬಿಜ್ಜಳನ ತರುವಾಯ ಕೆಲಕಾಲ ರಾಜ್ಯವಾಳಿದನು. ಇವನ ಕಾಲಕ್ಕೆ ಅನೇಕ ಶಿವಶರಣರು ದೇಶದಲ್ಲೆಲ್ಲ ಉದಯವಾದರು. ಆದರೆ ಈತನು ಇವರಿಗೆ ಸಹಾಯಕನಾಗಿದ್ದನೆಂದು ಹೇಳಲಿಕ್ಕೆ ಬರಲಾರದು. ಬಿಜ್ಜಳನ ಕಾಲದಲ್ಲಿ ಶಿವಶರಣರೊಡನೆ ಯಾವಾಗಲೂ ಮನಸ್ತಾಪಗಳೇಳುತ್ತಿದ್ದವು. ಇಂಥ ಕಾಲದಲ್ಲಿ ಅವನು ಬಿಜ್ಜಳನಂತೆಯೇ ಹೋಗಿರಬಹುದು. ಆದ್ದರಿಂದ ಶಿವಶರಣರು ಇಂಥವನ ಕಡೆಗೆ ಹೋಗದೆ ಆಗ ಪ್ರಖ್ಯಾತಿಯನ್ನು ಹೊಂದಿದ್ದ ಬಸವೇಶ್ವರನ ಕಡೆಗೆಯೇ ಹೋಗುವ ಸಂಭವವು ಹೆಚ್ಚು. ಆದುದರಿಂದ ಶಿವಶರಣರು ಆಶ್ರಯಹೊಂದಿದ ಪೇರ್ಮಾಡಿಯು ಸಿಂದವಂಶದ ಈ ಪೇರ್ಮಾಡಿಯಾಗಿರಲಿಕ್ಕಿಲ್ಲೆಂದು ನನಗೆ ತೋರುತ್ತದೆ.

ಆದ್ದರಿಂದ ಯಾವ ಶಿವಶರಣರು ಪೆರ್ಮಾಡಿ ರಾಜನಿಗೆ ಸಂಬಂಧಪಟ್ಟು ಹೇಳಲ್ಪಟ್ಟಿದ್ದಾರೋ ಅವರು ತರ್ದವಾಡಿಯಲ್ಲಿ ಆಳುತ್ತಿದ್ದ ಪೆರ್ಮಾಡಿಗೆ ಸಂಬಂಧಿಸಿದವರೆಂದು ನನ್ನ ಊಹೆ ಇರುತ್ತದೆ. ಹೀಗಾದಲ್ಲಿ ಅವರೆಲ್ಲರೂ ಬಸವೇಶ್ವರನಕಿಂತಲೂ ಮೊದಲಿನವರೆಂದು ತಿಳಿಯಬೇಕಾಗುತ್ತದೆ. ಪೆರ್ಮಾಡಿಯು ಆಳುತ್ತಿದ್ದ ತರ್ದವಾಡಿಯು ಈಗ ವಿಜಾಪುರ ಜಿಲ್ಲೆಯಲ್ಲಿ ಇಂಡಿ ತಾಲೂಕಿನಲ್ಲಿ ಭೀಮಾತೀರದಲ್ಲಿರುವ ತದ್ದೇವಾಡಿ ಎಂಬ ಈಗಿನ ಗ್ರಾಮವಿದೆ. ಇದರ ಪುರಾತನ ಅವಶೇಷಗಳು ಈಗಲೂ ಅಲ್ಲಿ ನದಿಯ ದಂಡೆಯ ಮೇಲೆ ಇವೆ. ಆದರೆ ನದಿಯ ಪೂರವು ಇದನ್ನು ಈಗ ಸುತ್ತುಹಾಕುವದರಿಂದ ಜನರು ಈ ಸ್ಥಳವನ್ನು ಬಿಟ್ಟು ಒಂದು

ಮೈಲು ಅಂತರದ ಮೇಲೆ ಬೇರೊಂದು ಗ್ರಾಮವನ್ನು ಕಟ್ಟಿಕೊಂಡಿದ್ದಾರೆ. ಈ ಪುರಾತನ ತರ್ದವಾಡಿ ಪ್ರಾಂತವು ದಕ್ಷಿಣಕ್ಕೆ ಬಾಗಲಕೋಟೆ ತಾಲೂಕಿನಲ್ಲಿಯ ಘಟಪ್ರಭಾನದಿ ಮತ್ತು ಮುಂದೆ ಪೂರ್ವಕ್ಕೆ ಕೃಷ್ಣಾನದಿ ಇವುಗಳ ವರೆಗೆ ಹಬ್ಬಿದ್ದು ಮೊದಲು ಇದು ಬಹು ಪ್ರಖ್ಯಾತವಾದ ಸೀಮೆಯಾಗಿತ್ತು.

ಈ ಸೀಮೆಯಲ್ಲಿಯೇ ಕೇಶಿರಾಜನ ಗ್ರಾಮವಾದ ಕೊಂಡಗೂಳಿಯು ಈಗಲೂ ಇರುತ್ತದೆ. ಇದು ಈಗ ಸಿಂದಿಗಿ ತಾಲೂಕಿನಲ್ಲಿಯ ಒಂದು ಗ್ರಾಮವು. ಇದಕ್ಕೆ ಸಮೀಪವಾಗಿ ಪುರಾತನ ಅವಶೇಷಗಳಿದ್ದು, ಅದಕ್ಕೆ ಕೇಶಿರಾಜಪಟ್ಟಣವೆಂಬ ಹೆಸರಿದೆ. ಜೊಮ್ಮಯ್ಯನಿದ್ದ ಇಳಿಹಾಳವು ಬಾಗಲಕೋಟೆ ತಾಲೂಕಿನಲ್ಲಿದೆ. ತೆಲುಗು ಜೊಮ್ಮಯ್ಯನು ಕಲ್ಯಾಣಪಟ್ಟಣದಲ್ಲಿ ಭೀಮನಾಥನ ಭಕ್ತಿಯುಳ್ಳಿದ್ದನೆಂದು ಹರಿಹರನು ತನ್ನ ರಗಳೆಯಲ್ಲಿ ಹೇಳುತ್ತಾನೆ. ಭೀಮನಾಥನು ಭೀಮಾನದಿಯ ದಂಡೆಯ ಮೇಲೆ ಇರಬಹುದು. ಆದರೆ ಈತನ ಹೆಸರಿನ ಮೇಲಿಂದ ಇವನು ಮೊದಲು ತೆಲುಗು ದೇಶದವನಿರಬಹುದೆಂದು ತೋರುತ್ತದೆ ಆದರೆ ಹಿಂದುಗಡೆ ಕರ್ನಾಟಕಕ್ಕೆ ಬಂದು ಭೀಮಾತೀರದಲ್ಲಿದ್ದ ಭೀಮನಾಥನ ಭಕ್ತನಾಗಿರಬಹುದು. ಹೀಗೆ ಇವರೆಲ್ಲರೂ ತರ್ದವಾಡಿ ದೇಶದವರಾಗಿ ಅಲ್ಲಿಯೇ ಪ್ರಸಿದ್ಧರಾಗಿ ಅಲ್ಲಿ ಆಳುತ್ತಿದ್ದವರಿಂದ ಮನ್ನಣೆ ಹೊಂದಿದವರಾಗಿರಬಹುದು.

ಈ ಶಿವಶರಣರ ಚರಿತ್ರೆಗಳನ್ನು ನೋಡಿದಲ್ಲಿ ಅವರು ಬಸವೇಶ್ವರ ಅಥವಾ ಬಿಜ್ಜಳ ಇವರಿಗೆ ಸಂಬಂಧಪಡುವದಿಲ್ಲ. ಪೆರ್ಮಾಡಿರಾಯನಿಗೆ ಸಂಬಂಧಪಡುತ್ತಾರೆ. ಆದರ ಈ ಪೆರ್ಮಾಡಿಯು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದನೆಂದು ಈ ಚರಿತ್ರೆಗಳಲ್ಲಿ ಹೇಳಿದೆ. ಆದರೆ ಪೆರ್ಮಾಡಿರಾಯನು ಕಲ್ಯಾಣದಲ್ಲಿ ಆಳುತ್ತಿದ್ದನೆಂದು ಇತಿಹಾಸವು ಹೇಳುವದಿಲ್ಲ. ಈ ಹೆಸರಿನವರು ಚಾಳುಕ್ಯರಾಜರಲ್ಲಿ ಇರುವದಿಲ್ಲ. ಅದು ಕೆಲವು ಟ್ಟಿಗೆ ವಿಕ್ರಮಾದಿತ್ಯನಿಗೆ ಅನ್ವಯಿಸಬಹುದು. ಆದರೆ ಶಿವಶರಣರ ಯಾವ ಚರಿತ್ರೆಯಲ್ಲಿಯೂ ವಿಕ್ರಮಾದಿತ್ಯನ ಹೆಸರು ಬರುವದಿಲ್ಲ. ಈತನು ಪ್ರಸಿದ್ಧ ಚಕ್ರವರ್ತಿಯಾಗಿದ್ದು ಇವನಲ್ಲಿ ಶಿವಶರಣರು ಮುಂದು ಬಂದಿದ್ದರೆ ಅವನ ಉಲ್ಲೇಖವು ವೀರಶೈವ ವಾಙ್ಮಯದಲ್ಲಿ ಮೇಲಿಂದ ಮೇಲೆ ಬರುತ್ತಿತ್ತು. ಹೇಗೆ ಚೋಳರು ಪಾಂಡ್ಯರು ಶಿವಭಕ್ತರೆಂದು ಉಲ್ಲೇಖಗಳು ಮೇಲಿಂದಮೇಲೆ ಬರುತ್ತವೆಯೋ ಹಾಗೆಯೇ ಇವನ

ಬಗ್ಗೆ ಉಲ್ಲೇಖಗಳು ಬರುತ್ತಿದ್ದವು. ಆದ್ದರಿಂದ ಪೆರ್ಮಾಡಿಯು ಈ ವಿಕ್ರಮಾರ್ಕನಾಗಿರಲಾರನು. ತಳಕಾಡು ಅಥವಾ ಗೋವೆ ಇಲ್ಲಿ ಇದ್ದ ರಾಜ್ಯಗಳಲ್ಲಿಯವರೆಂದರೆ, ಈ ಪ್ರಾಂತಗಳು ಕಲ್ಯಾಣ ಪಟ್ಟಣದಿಂದ ಬಹು ದೂರಿನವು. ಆದ್ದರಿಂದ ಈ ರಾಜವಂಶಗಳಲ್ಲಿ ಬರುವ ಪೇರ್ಮಾಡಿಗಳಾಗಲಾರರು. ಶಿವಶರಣರ ಪೇರ್ಮಾಡಿಯು ಕಲ್ಯಾಣ ಸೀಮೆಗೆ ಸಮೀಪಸ್ಥನಾಗಿರುವ ಪ್ರದೇಶದವನೇ ಆಗಿರಬೇಕು. ಬಸವೇಶ್ವರನ ಕಾಲದಲ್ಲಿ ಈ ಪ್ರದೇಶವನ್ನು ಆಳಿದವನೆಂದರೆ, ಬಿಜ್ಜಳನ ತಂದೆಯಾದ ಪೆರ್ಮಾಡಿಯು ಮಾತ್ರ. ಇವನು ೧೧೨೮ರಲ್ಲಿ ತರ್ದವಾಡಿಯಲ್ಲಿ ಆಳುತ್ತಿದ್ದನು. ಆದ್ದರಿಂದ ಪೆರ್ಮಾಡಿಗೆ ಸಂಬಂಧಿಸಿರುವ ಶಿವಶರಣರ ಕಾಲವು ೧೧೨೮ ಇರಬಹುದು. ಅಂದರೆ ಅವರು ಬಸವೇಶ್ವರನಕಿಂತಲೂ ಮೊದಲಿಗರು. ಇವರು ಈಕಾಲದಲ್ಲಿ ಈ ಪ್ರಾಂತದಲ್ಲಿ ಉದ್ಭವಿಸಿ ವೀರಶೈವಧರ್ಮವನ್ನು ಹೆಚ್ಚಿಸಿದರೆಂದು ನನಗೆ ತೋರುತ್ತದೆ.

ಈ ಕಾಲದಲ್ಲಿ ಮೇಲ್ಕಂಡ ಶಿವಶರಣರಲ್ಲದೆ, ಇನ್ನೂ ಅನೇಕರು ಉದ್ಭವಿಸಿದ್ದಾರೆ ಕೆಂಭಾವಿ ಭೋಗಣ್ಣ, ಹಾವಿನಹಾಳ ಕಲ್ಲಯ್ಯ, ಗುಡ್ಡಾಪುರದ ದಾನಮ್ಮ, ಇಂಡಿಯ ಶಾಂತಯ್ಯ, ಹಿಪ್ಪರಿಗೆಯ ಮಡಿವಾಳ ಮಾಚಿದೇವ ಇವರೆಲ್ಲರೂ ಈ ತರ್ದೇವಾಡ ಪ್ರಾಂತದವರು. ಮುಂದೆ ರೇವಣಸಿದ್ಧೇಶ್ವರನು ಸಹ ತರ್ದೇವಾಡಿಗೆ ಸಮೀಪದಲ್ಲಿರುವ ಮಂಗಳವಾಡಕ್ಕೆ ಬಂದು ವಾಸಿಸಹತ್ತಿದನು. ಸೊಲ್ಲಾಪುರದ ಸಿದ್ಧರಾಮನೂ ಕೂಡ ಈ ಪ್ರಾಂತದವನೇ ಇದ್ದಾನೆ. ಅಮುಗಿದೇವನು ತರ್ದೇವಾಡಿಗೆ ೮-೧೦ ಮೈಲುಗಳ ಮೇಲಿರುವ ಪುಣುಂಜು ಎಂಬ ಗ್ರಾಮದವನು. ಈ ಯಾವತ್ತರೂ ಬಸವೇಶ್ವರನ ಪೂರ್ವದಲ್ಲಿ ತರ್ದೇವಾಡಿ ಸೀಮೆಯಲ್ಲಿ ಉದ್ಭವಿಸಿ ವೀರಶೈವ ಮತೋದ್ಧಾರ ಕಾರ್ಯ ಮಾಡಿದರು.

ಮುಂದೆ ಕೆಲವು ವರ್ಷಗಳಲ್ಲಿಯೇ ಇದೇ ತರ್ದೇವಾಡಿ ಪ್ರಾಂತದಲ್ಲಿ ಬಸವೇಶ್ವರನು ಉದಯಕ್ಕೆ ಬಂದು ಬಹು ಪ್ರಸಿದ್ಧನಾದನು.

ಬಸವೇಶ್ವರನ ಕಾಲದಲ್ಲುಂಟಾದ ಧಾರ್ಮಿಕ ಕ್ರಾಂತಿಯ ಮೂಲಾರಂಭವು ಇತಿಹಾಸದಿಂದ ದೇವರ ದಾಸಿಮಯ್ಯನ ಕಾಲದ ವರೆಗೆ ಸದ್ಯಕ್ಕೆ ಹೋಗುತ್ತದೆ. ಅವನ ಕಾಲದಲ್ಲಿ ಒಂದು ಕ್ರಾಂತಿಯಾಯಿತು. ಮುಂದೆ ೭೦-೮೦ ವರ್ಷಗಳ ತರುವಾಯ ಅದು ತರ್ದೇವಾಡಿಯ ನಾಡಿನಲ್ಲಿ ಉದ್ಭವಿಸಿತು. ಇದು ೨ನೆಯ ಕ್ರಾಂತಿಯು. ಇದು ರೇವಣ ಸಿದ್ಧೇಶ್ವರನ

ಪ್ರಭಾವದಿಂದ ಸ್ವಬಲಗೊಂಡಂತೆ ನನಗೆ ತೋರುತ್ತದೆ. ಮುಂದೆ ಈ ವೀರಶೈವ ಧರ್ಮದ ಆಂದೋಲನ ಕಾರ್ಯವು ತೀವ್ರವಾಗಿ ಬಲಿಯುತ್ತ ಬಸವೇಶ್ವರನ ಕಾಲದಲ್ಲಿ ಅದು ಒಂದು ಮಹತ್ವದ ಸ್ವರೂಪವನ್ನು ಹೊಂದಿತು. ಇದು ತೃತೀಯ ಕ್ರಾಂತಿಯ ಕಾಲವು. ಹೀಗೆ ವೀರಶೈವ ಸಮಾಜದ ಪೂರ್ವೇತಿಹಾಸವಿರುವದಾಗಿ ನನಗೆ ತೋರುತ್ತದೆ.

ಮೇಲ್ಕಂಡ ಸಂಗತಿಗಳನ್ನು ನಾನು ವಾಚಕರ ಸಂಶೋಧನಕ್ಕೋಸ್ಕರ ಅವರೆದುರಿಗೆ ಇಟ್ಟಿದ್ದೇನೆ. ಈ ಮಹತ್ವದ ವಿಷಯದ ಬಗ್ಗೆ ವಾಚಕರಿಗೆ ತೋಚಿದ ಸಂಗತಿಗಳನ್ನು ಬರೆದು ನಮ್ಮ ಕಡೆಗೆ ಕಳುಹಿಸಿದಲ್ಲಿ ಅವುಗಳಿಗೆ ಶಿವಾನುಭವದಲ್ಲಿ ಸ್ಥಾನವು ಅವಶ್ಯವಾಗಿ ದೊರೆಯುವದು.

---

# ಒಂದು ಹಕ್ಕಿಯ ಹಾಡು.

೧

ವಿಸ್ತಾರ ಪಂಜರವು ನಮ್ಮದದು ದುರ್ಗ।
ಅದೆಯಾಯ್ತು ನಮಗೊಂದು ರಂಜಿಸುವ ಸ್ವರ್ಗ।
ಅಲ್ಲೆನಿತೊ ಹಕ್ಕಿಗಳು
ಹರಡುತಲಿ ಪಕ್ಕಗಳ
ಸುತ್ತಲೂ ಹಿಂಡಾಗಿ ಹಾರುತಿರುತಿಹವು।
ಚಿತ್ರದ ಹಾಡುಗಳ ಹಾಡುತಿರುತಿಹವು।

೨

ದುರ್ಗದಾ ತೆಂಕಣದಿ ನಮ್ಮಗಳ ಗೂಡು।
ಅಲ್ಲಿಹೆವು। ಅದೆ ನಮ್ಮಯುಮ್ಮಹದ ನಾಡು।
ಅಲ್ಲಿ ನಾವಿರುತಲಿರೆ
ಮೇಲ್ಪಕ್ಕಿಯಿಂಪು ಸರ
ಕೇಳ್ಕೆಯುದರಂತೆ ಹಾಡತೊಡಗಿದೆವು।
ಆ ಹಾಡ ಕಟ್ಟನೊಳೆ ಹಾರತೊಡಗಿದೆವು।

೩

ಹಾಡಿದೆವು। ಆ ಹಾಡ ಬಗೆಯೊಳೋಡಿದೆವು।
ಓಡಿದೆವು। ಕಡೆಗೆ ಬೇಸರಕೆ ಬಾಡಿದೆವು।
ಬಾಡಿದರು, ಹಿಡಿದ ಪಥ-
ವನು ಬಿಡದೆ, ಮನದ ವ್ಯಥೆ-
ಗೊಳಗಾಗಿ ಹಾಗೆಯೇ ಮುಂದೆ ಸಾಗಿದೆವು।
ಹೊತ್ತು ಪಟ್ಟಿಪಾಸೆಗೊಮ್ಮೆ ತಾಗಿದೆವು।

೪

ಮೂನಾಲ್ಕು ಶತಮಾನಗಳು ಕಳೆದು ಹೋಗೆ,
ನಮ್ಮಯ ಸಿರೀಕ್ಷಣೆಯು ಫಲಿಸುವಂತಾಗೆ,

ಶರಣಪಕ್ಕಿಗಳೆಲ್ಲ
ವಚನಕಾವ್ಯದ ಸೊಲ್ಲ-
ನೆಲ್ಲೆಡೆಗೆ ಹಬ್ಬಿಸುತ ಹೊಸಹಾದಿದೋರೆ.
ನಮಗಾಯ್ತು ಸಂತಸದ ಸುಗ್ಗಿಯಾ ಸೂರೆ ।

೫

ಈ ಸೊಗಸ ಕುಡಿಯುತಲಿ ನಾವ್ ಮುಂದೆ ಜಾರೆ,
ಕಾಲ ಗರ್ಭವು ನೂತನಾರ್ಭಕನ ಮೋರೆ-
ಯನು ಮತ್ತೆ ತಾ ತೋರೆ,
ಹೊಸ ಉಬ್ಬು ಪೈದೋರೆ,
ನಮ್ಮೊಳಗೆ ನೆರೆ ದಿಟ್ಟವಾಗಿರ್ದ ಹಕ್ಕಿ
ಹಾಡಿದವು ಷಟ್ಪದಿಯ ರಾಗಗಳಲುಕ್ಕಿ ।

೬

ಈ ರಾಗ ಈ ತಾಳಗಳಲಿ ನಾವ್ ಕುಣಿದು,
ಸರವೆತ್ತಿ ಏಸೊ ದಿನ ಹಾಡಾಡಿ ತಣಿದು,
ಕಡೆಗೊಮ್ಮೆ ಬಲು ದಣಿದು,
ಹೊಸ ತಕ್ಕೆಮನ ಮಣಿದು,
ಪಲ್ಲಟನೆ ಸತ್ಪ್ರಗತಿಯೆಂದಂದರಿದೆವು ।
ಒಳ್ಳೆ ಹೊಸ ಹಾದಿ ಹಿಡಿದು ಹಾತೊರೆದೆವು ।

೭

ಪಲ್ಲಟಕೆ ಮನಸೋತ ಹಕ್ಕಿಗಳು ಕೆಲವು
ದುರ್ಗದಾಚೆಗೆ ಕೂಗುವಕ್ಕಿಗಳ ಉಲುಹ
ಕೇಳಿದವು । ಬಹು ದೂರ
ಹಾರಿದವು ಮುನ್ನೀರ
ಗಾಂಭೀರ್ಯದಲಿ ಬೆರೆತ ಸರಕೆ ಕಿವಿಗೊಟ್ಟು,
ಕಡಲಾಳ ಭಾವಗಳ ಬಗೆಗೆ ಬಗೆಗೊಟ್ಟು ।

೮

ಕಡಲಿನಾಚೆಯೊಳಿರ್ಪ ಹಕ್ಕಿಗಳ ತೆರದಿ
ಹಾಡತೊಡಗಿಪವಿಂತು। ಈ ಹಾಡ ಭರದಿ
ಸುತ್ತಲೂ ಪಸರಿಸಿತು।
ಹೊಸ ಸವಿಯನೊಸರಿಸಿತು।
ಹಳತಕ್ಕೆ ಬೇಸತ್ತ ಹಕ್ಕಿಗಳು ಸೇರಿ
ಈ ಸವಿಯ ಕುಡಿಕುಡಿದು ಹಾಡಿದವು ಹಾರಿ।

೯

ನಾನೊಂದು ಗೂಡಿನಲಿ ಕಣ್ಣಿಡುತ ಕುಳಿತು
ನನ್ನ ಭಾಗ್ಯೋದಯವು ಬರ್ಪುದೆಂತೆನುತ।
ಎಣಿಸುತಿರೆ, ಹೊಸ ವೇಷ-
ಹೊಸ ಭಾವದಲಿ ತೋಷ-
ಪಡೆಯುತಲಿ ನನ್ನ ಭಾಗ್ಯೋದಯವು ಬಂತು।
ಹಾಡತೊಡಗಿಪೆನಿಂದು ಒಡವಕ್ಕಿಯಿಂತು।

**ಈಶ್ವರ ಸಣಕಲ್ಲ**

# ತತ್ವಜ್ಞಾನಿ ಎಮರ್ಸನ್ನ (ಅಮೇರಿಕಾ)

(ಸಂಗ್ರಾಹಕಃ— ಸದಾಶಿವಪ್ಪ ತೆನಿಹಳ್ಳಿ ವಿಜಾಪುರ)

---

ಎಮರ್ಸನ್ನನು ಅಮೇರಿಕ ದೇಶದವನು. ನವೀನಯುಗದ ಪ್ರಾಣ ಪ್ರತಿಷ್ಠಾಪನಾಚಾರ್ಯರಲ್ಲಿ ಒಬ್ಬನು. ತತ್ವ ಜಿಜ್ಞಾಸೆಯಲ್ಲಿಯೇ ಆತನ ಕಾಲವೆಲ್ಲವೂ ಕಳೆಯಿತು. ಆಶಾಪೀಡಿತವೂ ದುಃಖ ಭೂಯಿಷ್ಠವೂ, ವ್ಯಾಕುಲಸಹಿತವೂ ಆದ ಜನಬಾಹುಳ್ಯದಿಂದ ಕೂಡಿದ. ನಗರವಾಸಕ್ಕಿಂತ ಸುಂದರ ಪ್ರಕೃತಿಯ ಮಡಲಿನಲ್ಲಿ ಏಕಾಂತ ವಾಸಮಾಡಲು ಆಶಿಸಿದ. ಭಾರತ ಸನಾತನ ಧರ್ಮದ ರೀತಿ ನೀತಿಗಳಿಗೆ ಮಾರು-ಹೋಗಿ ಅದರ ಸಾರವನ್ನೆಲ್ಲ ಪಾಶ್ಚಾತ್ಯರಿಗೆ ಸವಿಯುಣಿಸಾಗಿ ಮಾಡಿ ಕೊಡುವದರಲ್ಲಿಯೇ ತನ್ನ ಜೀವನಯಾತ್ರೆಯನ್ನು ಮುಗಿಸಿದನು.

ಎಮರ್ಸನ್ನನು ತನ್ನದೆಂದು ಹೇಳುವ ಯಾವ ಗ್ರಂಥನ್ನೂ ರಚಿಸಲಿಲ್ಲ. ಆತನ ಗ್ರಂಥಗಳೆಲ್ಲ, ಉಪನ್ಯಾಸಗಳೇ, ಗ್ರಂಥರೂಪದಲ್ಲಿರುವದು. ಎರಡೇ, ಪ್ರಕೃತಿ ಮತ್ತು ಪ್ರಕೃತಿ ಪ್ರತಿನಿಧಿಯಾದ ಪುರುಷ ಎಂಬುವೇ ಮುಖ್ಯ. ತಾನು ತಿಳಿದುಕೊಂಡ ಆತ್ಮದ ಯಥಾರ್ಥತ್ವನ್ನು ನಿತ್ಯತ್ವವನ್ನು ಆತನು ತನ್ನ ಗ್ರಂಥಗಳಲ್ಲಿ ಪ್ರತಿಪಾದಿಸಿರುವನು. ಆಧ್ಯಾತ್ಮಿಕ ಜೀವನದ ಸವಿಯನ್ನು ಬಯಸುವವರಗೆ ಆತನ ಒಂದೊಂದು ನುಡಿಯು ಒಂದೊಂದು ರಸಕವಳ.

ಈ ಈ ವಿಶ್ವವು ಆತ್ಮದ ಪ್ರಕಾಶವೆಂದು ಎಮರ್ಸನ್ನನು ಭಾವಿಸಿದನು. ಬ್ರಹ್ಮಾಂಡವು ಆತ್ಮದ ಬಾಹ್ಯಸ್ವರೂಪವೆಂದು ಪ್ರಕಾಶಗೊಳಿಸಿದನು. ಪ್ರಕೃತಿಯೊಂದು ಚಿನ್ಹೆಯೆಂದು ಉಹಿಸಿರುವನು. ಪ್ರತಿಯೊಂದು ವಸ್ತುವು ಒಂದು ಭಾವವನ್ನು ಪ್ರಕಟಿಸುತ್ತದೆ. ನಾವು ಒಂದು ಚಿನ್ಹೆ, ನಾವು ವಾಸಮಾಡುವ, ಈ ಪ್ರಪಂಚ ಒಂದು ಚಿನ್ಹೆ, ನಾವು ಹುಟ್ಟುವದೊಂದು ಚಿನ್ಹೆ, ಸಾಯುವದೊಂದು ಚಿನ್ಹೆ, ನಾವು ಮಾಡುವ ಪ್ರತಿಯೊಂದು ಕಾರ್ಯವೂ ಒಂದೊಂದು ಚಿನ್ಹೆ, ಉಪಯೋಗಿಸುವ ವಸ್ತುಗಳೊಂದು ಚಿನ್ಹೆ. ವಿಷಯ ಮೋಹಗ್ರಸ್ತರಾಗಿರುವದರಿಂದ ಎಲ್ಲವೂ ಭಾವವೇ ಎಂಬ ಯಥಾರ್ಥ ತತ್ವವನ್ನು ಗ್ರಹಿಸಲು ಅಶಕ್ತರಾಗಿರುವೆವು. ನೀರು ಯಾವ ವಿಧದಲ್ಲಿ ಮಂಜುಗಡ್ಡೆಯಾಗಿ ಪುನಃ ನೀರಾ

ಗುವದೋ, ಹಾಗೆಯೇ ಭಾವವು ಪ್ರಪಂಚವಾಗಿ ಪುನಃ ಭಾವವಾಗಿ ಪರಿಣಮಿಸಿರುತ್ತದೆ. ಎಲ್ಲಿಯೂ ನಾಶವೆಂಬುದೇ ಇಲ್ಲ. ಅಪವಿತ್ರತೆಯ ಸೊಲ್ಲು ಕೂಡ ಕಂಡು ಬರದು. ಕಾರ್ಯಗಳು ಭಿನ್ನವಾದರೂ ಕಾರಣ ಒಂದೇ ರೂಪಗಳು ವಿಧ ವಿಧವಾಗಿದ್ದರೂ ಪದಾರ್ಥ ಒಂದೇ. ವ್ಯಕ್ತಿಗಳು ಅನೇಕವಾಗಿದ್ದರೂ ಜೀವ ಒಂದೇ. ಕಾರಣದ ಏಕತ್ವವನ್ನು ಕಂಡುಕೊಂಡಮೇಲೆ ಕಾರ್ಯಗಳ ಭಿನ್ನತ್ವಕ್ಕೆ ಮೋಹಿಸುವವರು ಯಾರು ಇದ್ದಾರೆ? ಕವೀಶ್ವರನಿಗೂ, ತತ್ವಜ್ಞಾನಿಗೂ, ಭಕ್ತನಿಗೂ, ಜ್ಞಾನಿಗೂ ಎಲ್ಲ ವಸ್ತುಗಳು ಪರಿಶುದ್ಧಗಳೇ? ಎಲ್ಲ ಜನಗಳು ಪವಿತ್ರವೇ? ಸಮಸ್ತ ಮಾನವಕೋಟಿ ಜೀವವು ಈಶ್ವರಾಂಶವೇ? ಪ್ರತಿಕ್ಷಣದಲ್ಲಿಯೂ ಪ್ರತಿಯೊಂದು ವಸ್ತುವು ನಮಗೆ ಜ್ಞಾನ ಕೊಡುತ್ತದೆ. ಉತ್ತಮ ಮಾರ್ಗವನ್ನು ತೋರಿಸುತ್ತದೆ. ಯಾವುದನ್ನು ಅನವಸರವೆಂದು ನುಡಿಯುವಂತಿಲ್ಲ. ಯಾವದಕ್ಕೂ ನಾಶವಿಲ್ಲ. ಮೃತ್ಯುವಿಲ್ಲ. ನಮ್ಮ ಸಂಬಂಧವಾಗಿ, ನಮ್ಮ ಸಂಬಂಧದಿಂದ ದೂರವಾಗಿರಬೇಕಾಗಿರುವಂಥದೂ ಮತ್ತು ಈಗ ಕ್ಷೇಮಕ್ಕೆ ಅತ್ಯವಶ್ಯಕವಲ್ಲದುದೂ ಆದ ವಸ್ತುಗಳನ್ನು ಮನುಷ್ಯರನ್ನು ಈಶ್ವರನು ದೂರುಮಾಡುವನು. ಆಗ ನಾವು ಆ ವಸ್ತುವು ನಾಶವಾಯಿತು. ಈ ಮನುಷ್ಯನು ಸತ್ತನೆಂದು ಭ್ರಾಂತಿಯಿಂದ ನುಡಿಯುತ್ತೇವೆ. ಅಷ್ಟೇ ಹೊರ್ತು ಯಥಾರ್ಥವಾಗಿ ಯಾವುದಕ್ಕೂ ನಾಶವಿಲ್ಲ. ಮನುಷ್ಯನು ಮೃತನಾದಂತೆ ತೋರಿದರೂ ಆತನಿಗೆ ಚಿರಜೀವಿತವುಂಟು, ಹೀಗೆಂದು ಎಮರ್ಸನ್ನನು ಸಾರಿದ್ದಾನೆ.

ಪ್ರತಿಕಾರ್ಯದ ಉತ್ಪತ್ತಿಯು ಭಾವದಲ್ಲಿ ಆಗುವದೆಂದು ಆತನು ತಿಳಿದನು. ಆದ್ದರಿಂದಲೇ ಆತನು ಭಾವವನ್ನು ಕಾರ್ಯದ ಪಿತಾಮಹನೆಂದು ತಿಳಿದಿರುವನು. ನಮ್ಮ ಪ್ರತಿಯೊಂದು ಕಾರ್ಯವು ನಮ್ಮ ಭಾವಗಳ ಮೇಲೆ ನಿಂತಿವೆ. ಕೆಲಸ ನಡೆಸುವದಕ್ಕಿಂತ ಯೋಚಿಸುವದು ಅತಿ ಕಷ್ಟಕರ. ಒಂದು ಕಾರ್ಯವನ್ನು ಯೋಚಿಸುವದೆಂದರೆ ಸಾಮಾನ್ಯವಲ್ಲ. ನಿಃಶಬ್ದ ನಿಮಿಷದಲ್ಲಿಯೂ ಕೂಡ ಕೆಲಸವೊಂದು ನಡೆಯುತ್ತಲೇ ಇರುತ್ತದೆಂದು ಎಮರ್ಸನ್ನನು ನುಡಿದಿದ್ದಾನೆ. ಯಾವ ಕಾರ್ಯದಲ್ಲಿ ಘನತೆಯಾಗಲಿ ಆ ಕಾರ್ಯದಲ್ಲಿಯೇ ಅಲ್ಲದೆ, ಆಧಾರ ಸ್ತಂಭದಂತಿರುವ ಭಾವವನ್ನು ಅನುಸರಿಸಿಯೇ ಇರುತ್ತದೆ. ಪ್ರಧಾನ್ಯತೆ ಇರುವದು ಯಾವಾಗಲೂ ಭಾವಕ್ಕೆ. ಭಾವವು ಎಲ್ಲಿಯವರೆಗೆ

ಪ್ರತಿಬಿಂಬಿಸುತ್ತಿರುವವೋ ಅದುವರೆಗೆ ಕಾರ್ಯವು ಮುಖ್ಯವೆಂದು ತೋರುತ್ತದೆ. ಎಂದು ಉದ್ಘೋಷಿಸಿರುವನು. ಆದರೂ ಕರ್ಮದ ಅವಶ್ಯಕತೆಯನ್ನು ಆತನು ಗುರುತಿಸದೆ ಹೋಗಿಲ್ಲ. ಭಾವಕ್ಕೆ ಕೆಲಸವು ಅಡಿಯಾಳು. ಆದರೂ ಭಾವವೆಷ್ಟು ಮುಖ್ಯವೋ ಅಷ್ಟೇ ಕಲಸವೂ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಎಂದು ಕರ್ಮಕ್ಕೂ ಪ್ರಾಮು ಖ್ಯತೆಯನ್ನು ಕೊಟ್ಟಿರುವನು. ನಾವು ಭಾವಿಸಿದದು ಕರ್ಮರೂಪದಲ್ಲಿ ಪರಿವರ್ತನ ಹೊಂದಿದಾಗಲೆ ನಮ್ಮ ಭಾವಕ್ಕೆ ಪರಿಪೂರ್ಣತೆಯು ಬರುವದು. ಕಾರ್ಯಸಾಧನೆಗಾಗಿ ಭಾವದ ಮರೆಹೋಗುವದು ಹೇಡಿತನ. ನಾವು ಕೆಲಸ ಮಾಡಬೇಕಾದುದು ಫಲಾಪೇಕ್ಷೆಯಿಂದಲ್ಲ. ನಾವು ಮಾಡುವ ಕೆಲಸದಿಂದ ನಮ್ಮ ಭಾವವನ್ನು ಜಗತ್ತಿಗೆ ವಿಶದ ಪಡಿಸಬೇಕು. ಅದೇ ನಮ್ಮ ಕರ್ತವ್ಯವೆಂದು ಸಾರಿದ್ದಾರೆ. ಅದೇ ರೀತಿಯಲ್ಲಿಯೇ ತನ್ನ ಜೀವನ ಯಾತ್ರೆಯನ್ನು ತಳ್ಳಿದ್ದಾನೆ.

ಎಮರ್ಸನ್ನನು ವ್ಯಕ್ತಿ ಸ್ವಾಂತಂತ್ರ್ಯವಾದಿಯು. ಸಮಾಜ ಮತ್ತು ಪೂರ್ವಾಚಾರಗಳು ವಕ್ತಿಸ್ವಾತಂತ್ಯವನ್ನು ಅಪಹರಿಸಲು, ಸರ್ವದಾ ಯತ್ನಿಸುತ್ತವೆ. ಸಮಾಜವು ವ್ಯಕ್ತಿ ಸ್ವಾತಂತ್ರ್ಯವನ್ನು ಗೌರವಿಸದು. ತನ್ನ ಬದ್ಧವೈರಿಯಂತೆ, ನೋಡುತ್ತದೆ. ಪೂರ್ವಾಚಾರದಂತೆ ನಡೆ ಯುವದೇ ಧರ್ಮವೆಂದು ಅದು ಪರಿಗಣಿಸುತ್ತದೆ. ಆ ಕಾರಣ ಮಾನವ ನೆನಿಸಿಕೊಳ್ಳಲು ಯಾರು ತವಕ ಪಡುತ್ತಾರೋ ಅವರು, ಸಮಾಜದ ಕಟ್ಟಳೆ, ಆಚಾರಗಳಿಗೆ ಅಡಿಯಾಳಾಗಕೂಡದು. ಪ್ರತಿಯೊಬ್ಬರೂ ಈಶ್ವರ ಪುತ್ರರೆ. ಪರಮಾತ್ಮನ ಸತ್ಯ ಸಾಮ್ರಾಜ್ಯದಲ್ಲಿ ಪ್ರತಿ ವ್ಯಕ್ತಿಗೂ ಸಮಾನ ಸ್ವಾತಂತ್ರ್ಯ ಹಕ್ಕುಗಳುಂಟು. ಮನುಷ್ಯನು ಸರ್ವತಂತ್ರ ಸ್ವತಂತ್ರನಾಗಿ ಭೂಮಿಗೆ ಬಂದಿದ್ದಾನೆ. ಹಾಗೆಯೇ ಹಿಂತಿರುಗುವದು ಆತನ ಕರ್ತವ್ಯವೆಂದು ನಿರೂಪಿಸಿರುವನು. ಪ್ರಪಂಚ ದಲ್ಲಿ ಮಾನವ ಶರೀರಕ್ಕಿಂತ ಪವಿತ್ರವಾದ ದೇವಾಲಯವಿಲ್ಲ. ಆಶಾ ಬದ್ಧನೂ. ಶಕ್ತಿಹೀನನೂ, ಆದ ಮಾನವನ ಹೃದಯದಲ್ಲಿ ಜ್ಞಾನ ಮೂರ್ತಿಯು ಅಧಿಷ್ಠಿತನಿರುವದರಿಂದಲೇ ಮಾನವನು ಶಕ್ತಿಯುತನೂ, ಪುಣ್ಯಮಯಿಯೂ, ಪ್ರತಿಷ್ಠಾಪೂರ್ಣನೂ ಆಗಿರುವನು, ಎಂದು ಬರೆದಿರುವನು. ಮಾನವನ ಹೃದಯದಲ್ಲಿ ಈಶ್ವರನು ನೆಲಿಸಿರುವ ನೆಂದು ಗ್ರಹಿಸುವವರು, ಮಾನವಾಭಿಜ್ಞತೆಯಲ್ಲಿ ಭಗವಂತನ ಪ್ರಕಾಶ

ಪನ್ನು ಕಂಡುಕೊಂಡವರು, ಮಾನವನ ದೈನಂದಿನ ವ್ಯಾಪಾರಗಳಲ್ಲಿ ಪರಮಾತ್ಮನ ಸತ್ಯ ಸಂಲ್ಪಗಳನ್ನು ಕಂಡು ಕೊಂಡವರು, ಮಾನವ ಜೀವನದಲ್ಲಿ ಈಶ್ವರನ ಲೀಲೆಯನ್ನು ಕಂಡು ಆನಂದಿಸಿದವರು, ಇವರು ಮಾತ್ರ ವ್ಯಕ್ತಿಯ ಉತ್ಕೃಷ್ಟತೆಯನ್ನು ಗ್ರಹಿಸಲು ಯೋಗ್ಯರಾಗುವರು. ಅವರು ಸಮಾಜಕ್ಕಾಗಲಿ ಆಚಾರಗಳಿಗಾಗಲಿ ದಾಸರಲ್ಲ. ಹೃದಯ ನಾಥನಾದ ಪರಮಾತ್ಮನನ್ನುಳಿದು, ಮತ್ತೆ ಯಾರಿಗೂ ಅವರು ತಲೆ ತಗ್ಗಿಸರು. ತಮ್ಮ ಮನಸ್ಸಿಗೆ ಉತ್ತಮವೆಂದು ತೋರಿಬಂದ ಧರ್ಮ ವನ್ನುಳಿದು ಮತ್ತೆ ಯಾವದಕ್ಕೂ ತಮ್ಮ ಮೆಚ್ಚುಗೆಯನ್ನು ಸಲ್ಲಿಸ ಲಾರರು. ಧರ್ಮವು ಹೊರಿಸುವ ಹೊರೆಯಲ್ಲ. ಹೃದಯವೇ ಧರ್ಮದ ಜನ್ಮಸ್ಥಾನ. ಭೂಗರ್ಭದಿಂದ ವೃಕ್ಷ, ವೃಕ್ಷದಿಂದ ಪುಷ್ಪ, ಪುಷ್ಪದಿಂದ ಫಲ ಇವು ಹೇಗಾಗುತ್ತವೆಯೋ ಹಾಗೆಯೇ ನಮ್ಮ ಹೃದಯದ ಸೀಮೆ ಯಿಂದ ಧರ್ಮವು, ಧರ್ಮದಿಂದ ವಿಧಿಯು, ವಿಧಿಯಿಂದ ಕರ್ಮವು, ಜನ್ಮವೆತ್ತಬೇಕು. ನಮ್ಮ ಹೃದಯಾಂತರಾಳದಿಂದ ಜನ್ಮವೆತ್ತಿದ ಧರ್ಮ ಧರ್ಮವೇ ಅಲ್ಲ. ನಮ್ಮನ್ನು ಬಂಧಿಸುವ ಹಕ್ಕು ಅದಕ್ಕೆ ಇಲ್ಲವೇ ಇಲ್ಲ. ಅದನ್ನು ಅನುಸರಿಸಿ ನಡೆಯುವ ಕಾರ್ಯವು ಪವಿತ್ರವೆನಿಸಿ ಕೊಳ್ಳಲಾರದು. ಅಲ್ಲದೆ ಅದರಿಂದ ಆತ್ಮೋಪಲಬ್ಧಿಗೆ ಅವಕಾಶವೇ ಇಲ್ಲ. ನಾವು ಮಾಡುವ ಕಾರ್ಯವು ನಮ್ಮ ಹೃದಯದಿಂದ ಜನ್ಮ ವೆತ್ತಿದ ಧರ್ಮದ ಪ್ರತಿಬಿಂಬವಾಗಿರಬೇಕು. ಆಗ ಅದಕ್ಕೆ ಗೌರವ ಪುರಸ್ಕಾರಗಳು ದೊರತೇ ತೀರುವವು ಎಂದು ಎಮರ್ಸನ್ನನು ಬೋಧಿ ಸಿರುವನು.

ನಾಗರಿಕರೆನಿಸಕೊಳ್ಳುವ ನಾವು ಹಾಳಾಗುತ್ತಿರುವದೇಕೆ ? ಎಂದು ಪ್ರಶ್ನಿಸಿ, ಬಹುಕಾಲದಿಂದ ನಡೆದುಬಂದ ಆಚಾರಕ್ಕೆ ದಾಸರಾಗಿ, ಸಮಾ ಜಕ್ಕೆ ಶರಣು ಹೊಡೆದು, ಕಾಯಶಕ್ತಿ, ಆತ್ಮವಿಶ್ವಾಸ, ಧೈರ್ಯ, ಸ್ಥೈರ್ಯಗಳನ್ನು ಕಳೆದುಕೊಂಡಿರುವೆವು. ಆಚಾರ ಸೂತ್ರಗಳಿಗೆ ಹೆದರಿ ಧರ್ಮಭೀರುಗಳಾದೆವು. ಸತ್ಯವೆಂದರೆ ಭಯ, ಮೃತ್ಯುವೆಂದರೆ ಭಯ. ಆದ್ದರಿಂದಲೆ ನಮ್ಮಲ್ಲಿ ಸತ್ಯಪೂರ್ಣ ಮಹಾತ್ಮರು ಹುಟ್ಟದಿರುವರು. ಕಲೆ ವೃತ್ತಿ, ವಿವಾಹ ಇವುಗಳಲ್ಲಿಯೂ ಸಹಿತ ಆಚಾರವನ್ನೆತ್ತಿಹಿ ಡಿದು ನಮಗಾಗಿ ನಮ್ಮ ಸಮಾಜವು ಒಂದು ದಾರಿಯನ್ನು ಸಿದ್ಧಮಾ ಡಿಕೊಡಲು ಅನುವಾಗಿದೆ ಎಂದು ನಂಬಿ ಹಾಳಾಗುತ್ತಿರುವೆವು ಅಸ್ವಾ

ತಂತ್ರ್ಯ ಸಾಗರದಲ್ಲಿ ಬಿದ್ದಿರುವೆವು ಎಂದು ಎಮರ್ಸನ್ನನು ನೊಂದು ನುಡಿದಿರುವನು. ಮಾನವ ಜೀವನದ ಸಾರ್ಥಕತೆ • ಹೇಗಿರುತ್ತದೆಂಬ ದನ್ನು ವಿಚಾರ ಮಾಡಿ,

ಹೃದಯಸ್ಥ ಪರಮೇಶ್ವರನ ದರ್ಶನಮಾಡಿ, ವಿವೇಕದ್ವಾರ ದಿಂದ ಈಶ್ವರವಾಣಿಯನ್ನು ಗ್ರಹಿಸಿ, ಈಶ್ವರಯೋಧರಾಗಿ, ಸತ್ಯ ಪತಾಕೆಯ ಅಡಿಯಲ್ಲಿ ನಡೆಯುತ್ತ ಅಧರ್ಮ, ಅಸತ್ಯ ಇವು ಯಾವಮಾರ್ಗದಿಂದ ಸಮಾಜ ಹೊಕ್ಕರೂ, ಖಂಡಿಸಿ ಜೀವನಯಾತ್ರೆ ನಡೆಸುವದೇ ಸಾರ್ಥಕ ಜೀವನ ಎಂದು ಡಂಗುರ ಸಾರಿದ್ದಾನೆ.

---

# ಸುಖಿಯಾರು.

(ಸಂಗ್ರಾಹಕ :— ಸದಾಶಿವಪ್ಪ ತೆನಿಹಳ್ಳಿ ವಿಜಾಪುರ)



ಆವನೆ ಸುಖಿ ಜಗದೊಳಗೆ—
ಯಾರ ಮನದಾಸೆ। ಬಡಬಡಿಕೆಗಳು।
ಬಯಿಕೆಗಳು। ಹಿಡಿಯೊಳಡಗಿರುವವೋ॥
ಸಾಕಿಗೇನೆಂತೆಂಬ —
ಚಿಂತೆ ಇಲ್ಲದೆ ಇದ್ದು ಇಷ್ಟದ್ದು
ಸ್ಸಾಕೆಂಬ ತೃಪ್ತಿಯಿಂದಿಹನಾರೋ॥
ತಾಯ್ನಾಡ ಹಳ್ಳಿಯಲಿ। ತನ್ನೂರ ಹೊಲಗದ್ದೆ।
ಗಳನುತ್ತು ಬಿತ್ತಿ। ಗೇಯುತ ದವಸಧಾನ್ಯಗಳ।
ಬೆಳೆಯುತ್ತ ಸಾಕಿ ದನ। ಕರುಗಳನು ಕೆನೆಹಾಲು।
ಮೊಸರುಂಡು ಅನ್ಯರಿಗೆ। ಅನ್ನವನು ಒದಗಿಸುತ।
ಗೌರವದಿ ತಲೆಯೆತ್ತಿ। ಸ್ವಾಭಿಮಾನದಿ ಮೆರೆಯುತಿಹನಾರೋ॥
ನೆಟ್ಟ ಮರಗಿಡಗಳನು। ತೋಟದಲಿ ತಣ್ಣೆಳಲ।
ಸೊಂಪಿನನುಭವ ಪಡೆದು। ಕೋಗಿಲೆಯ ಕಿವಿಗಿಂಪು।
ಮಗಮಗಿಪ ಕುಸುಮಗಳ। ಕಂಪಿನಾ ಹೊಳೆಯಲ್ಲಿ।
ಮಿಂದು ರಸತುಂಬಿ ಬೀ। ಗುವ ಹಣ್ಣುಗಳ ತಿಂದು;
ಸಂತಸದ ಸುಗ್ಗಿಯಲಿ। ಕುಣಿದು ದಣಿಯುತ್ತಿರುವನಾರೋ॥
ಬೆವರಿಳಿಸಿಗೇದು ಸಂತೃಪ್ತಿಯಲಿ ಆರೋಗ್ಯ।
ಸಂಪದ ಮನಃಶಾಂತಿ। ಸೌಭಾಗ್ಯಗಳಗಳಿಸಿ।
ಸುಖನಿದ್ದೆಯಿಂದೆದ್ದು। ಹೊಲಗೆಲಸಗಳಗೈದು।
ಬಿಡುಬಯಲಿನಲಿಸುಳಿವ। ಮೆಲ್ಲಡೆಯ ತಂಗಾಳಿ।
ಎಲೆಗಳಿಗೆ ಮೈಯೊಡ್ಡಿ। ವ್ಯಾಯಾಮ ಸಂಕಥಾ।
ಕಾವ್ಯ ಪ್ರಪಂಚದಲಿ। ವಿಹರಿಸಿ ನಿಸರ್ಗದವಿ।
ತಾ ದದಿಂದುಬ್ಬಿ। ಸ್ವರ್ಗೀಯ ಸೌಂದರ್ಯ।
ಶುಭಶಾಂತಿಗಳ ಸುಧಾ। ರಸಕುಡಿದು ತಣಿದು ಮೊಲೆ।
ಯ ರಿಂಗಣ ಕುಣಿವ। ಎಳೆಕರುವಿನಂತಿರುವನಾರೋ।
ಆ ಸುಖಿ ಜಗದೊಳಗೆ॥

ತೃಪ್ತಿ ಸರ್ವಸ್ವವಾಗಿದೆ ಎನಗೆ"

ಎನ್ನಮನವೇ ಎನ್ನ ಸಾಮ್ರಾಜ್ಯ। ಭುವಿಯ ಸುಖ।
ಸಂತೋಷಗಳನ್ನೆಲ್ಲ । ಮಿಗಿಸಿಮೆರೆವಾನಂದ।
ಇಹುದಲ್ಲ ಮನದಲ್ಲಿ॥
ಬೇಕಿನ್ನು ಬೇಕಾದುದೆಲ್ಲ ಬೇಕೆನಿಸಿದರು।
ಅತಿಯಾಸೆಯಿಂದ ಮನಹಾತೊರೆದು ಯಾಚಿಸದು।
ರಾಜ ವೈಭವವಿಲ್ಲ। ಧನಕನಕಗಳ ರಾಸಿಯಿಲ್ಲ।
ಆನೆ ಸೇನೆಗಳಿಲ್ಲ। ಬಲವಿಲ್ಲ। ಮೋಹಿಸುವ ಕಣ್ಗಳಿಗೆ।
ಸುಖವೀವ ಸೌಂದರ್ಯವಿಲ್ಲ.।
ಏನಿಲ್ಲದಿದ್ದರೂ ದೊರೆನಾನು। ಇಲ್ಲವೆಂಬುವ ಚಿಂತೆ। ಎನಗಿಲ್ಲ।
ಮನಸಿನೊಳಗಿದೆಯಿಲ್ಲ। ಬೇಕೆಂಬುದನು ಮನಸೇ।
ಒದಗಿಸುತ್ತಿದೆ ಎನಗೆ।
ತೃಪ್ತಿ ಸರ್ವಸ್ವವಾಗಿದೆ ಎನಗೆ। ಅತಿಯಾಸೆ ಸೊಂಕಿಲ್ಲ।
ಅಧಿಕಾರದಲಿ ಬಯಿಕೆಯು ಇಲ್ಲ। ಬೇಕಾದುದೆಲ್ಲ ಮನದಲ್ಲಹುದು
ಮನದಸಂತೃಪ್ತಿಯೊಳೆ ಸುಖಪಟ್ಟು। ಅರಸನಂದದಿ
ಮೆರೆವ ಸುಖಿನಾನು।
ಕೆಲವರಲಿ ಬೇಕಾದುದಿದೆ ಎಲ್ಲ। ಬೆಕೆಂದು ಹಂಬಲಸು
ತಿಹರಿನ್ನು। ಎನ್ನೊಳಿಹುದತ್ಯಲ್ಪ। ತೃಪ್ತಿಯಿದೆ ಎನಗಿನ್ನು।

ಬೇಕೆಂಬ ಆಶೆ ಹರಿಯುವದಿಲ್ಲ —

ಬಹಳವಿದ್ದವರಿಲ್ಲ। ಕಡು ಬಡವರಾಗಿಹರು।
ಸ್ವಲ್ಪವಿದ್ದರು ನಾನೆ ಸಿರಿವಂತ ಅವರು ಬಡವರು।
ನಾನು ಸಿರಿವಂತ। ಇದ್ದು ಬೇಡುವ ದೀನ ಜನರ
ವರು ಇದ್ದುದನು ಕೊಡುವ ದಾದಿಯು ನಾನು।
ಅವರು ಕಡುಲೋಭಿಗಳು। ನಿತ್ಯ ಸಂತಾಪಿಗಳು।
ಉದಾರಿಯಾಗಿಹೆ ನಾನು। ವಿಶಾಲ ಹೃದಯನು।

ನಿತ್ಯ ಸಂತೋಷ॥

ಇದ್ದುದವರಿಗೆ ಕಡಿಮೆಯನಿಸುತಿರೆ।
ಸಾಕೆನಿಸುತಿದೆ ಎನಗೆ। ಹೊರಳಾಡುತಿಹ
ರವರು ದುಃಖದಲಿ। ಜೀವನದ ಹರುಷದಿಂ।
ಬಾಳಿ ಮೆರೆಯುವ ನಿತ್ಯ ಸುಖಿನಾನು॥

# ಪ್ರಸಾದಿಸ್ಥಲ.

ಇದು ಸೂಕ್ಷ್ಮಶರೀರಕ್ಕೆ ಸಂಬಂಧಿಸಿರುತ್ತದೆ. ಇದರ ಮೂಲಕ ಏಕಾಗ್ರತೆಯನ್ನುಂಟುಮಾಡುವದೇ ಇರುತ್ತದೆ. ಈ ಶರೀರವಲ್ಲಿ ಪ್ರಸಾದಿಸ್ಥಲ ಮತ್ತು ಪ್ರಾಣಲಿಂಗಿಸ್ಥಲ ಎಂದು ಎರಡು ಸ್ಥಲಗಳಿರುತ್ತವೆ. ಪ್ರಸಾದಿಯು ತಾನು ಭೋಗಿಸುವದನ್ನೆಲ್ಲ ಪರಮಾತ್ಮನಿಗೆ ಅರ್ಪಿಸಿ ಪ್ರಸಾದರೂಪವಾಗಿ ಅದನ್ನು ಗ್ರಹಣ ಮಾಡತಕ್ಕದ್ದು. ಇದರಿಂದ ಚಿತ್ತದ ನೈರ್ಮಲ್ಯವು ಉಂಟಾಗುತ್ತದೆ.

**ವಿವರಣೆ**:— ಪ್ರಸಾದವು ಬಹು ಸುಲಭವಾದುದೆಂದು ವಚನಕಾರನ ಅಭಿಪ್ರಾಯವದೆ. ಆದರೆ ಅದರ ಫಲವು ಮಹತ್ತರವಾದುದು. ಅದು ಮುಕ್ತಿಯ ಮಾರ್ಗವನ್ನು ದೋರಿಸುತ್ತದೆ. ಆದರೆ ಇತರ ಮಾರ್ಗಗಳು ಪುಣ್ಯವನ್ನೇ ತೋರಿಸುತ್ತವೆ. ಪ್ರಸಾದಿಯು ಉಂಡರೂ ಕೂಡ ಉಪವಾಸಿಯು. ಬಳಸಿದರೂ ಕೂಡ ಬ್ರಹ್ಮಚಾರಿಯಾಗಿರುವನು. ಅವನು ಈ ಬಗೆಯ ಮಹಿಮೆಯುಳ್ಳವನು. ಇತರರಿಗೆ ಪುಣ್ಯಪಾಪಗಳಿವೆ. ಆದರೆ ಅವನಿಗೆ ಇವೆರಡೂ ಇಲ್ಲ ಎಂದು ವಚನಕಾರನ ಅಭಿಪ್ರಾಯವಿದೆ.

## ವಚನ.

೩೫. ಅಯ್ಯಾ ನಿಮ್ಮ ಪ್ರಸಾದದ ಮಹಿಮೆಯನೇನೆಂಬೆನಯ್ಯ? ವೇದಂಗಳರಿಯವು. ಶಾಸ್ತ್ರಂಗಳರಿಯವು. ಫಲವ ಸಾಧಿಸಿ ತನು ದಂಡಣೆಯ ಮಾಡಿ, ಸಕಲ ಭೋಗಂಗಳ ಬಿಟ್ಟು, ದುಃಖವನನುಭವಿಸಿ, ತಪ್ಪಿಲ್ಲದೆ ನಡೆದರೆ ಹಡೆವರಯ್ಯ ಸ್ವರ್ಗದ ಭೋಗವ. ಒಂದುವನು ಬಿಡಲಿಲ್ಲ. ಸಂದೇಹ ಮಾತ್ರವಿಲ್ಲ. ಆಗ ಬಿತ್ತಿ ಆಗ ಬೆಳೆವಂತೆ ರೋಗಿ ಬಯಸಿತ್ತ ವೈದ್ಯ ಕೊಡುವಂತೆ ಪಾಪದಂತಾದುದನು ಪುಣ್ಯವನೆ ಮಾಡುವುದು, ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ ಎನಿಸುವುದು. ಹಿಡಿವಡೆ ಇಲ್ಲ. ನಡೆದುದೇ ಬಟ್ಟೆಯಾದ ಕಾರಣ ಪ್ರಸಾದದಿಂದತಃ ಪರವಿಲ್ಲ. ಪ್ರಸಾದಿಯಿಂದ ಮುಕ್ತರಿಲ್ಲ. ಇಂತಪ್ಪ ಪ್ರಸಾದವನು ನಿಮ್ಮ ಶರಣ ಬಸವಣ್ಣ ತೋರಿದನಾಗಿ ಎನ್ನ ಭವಂ ನಾಸ್ತಿಯಾಯಿತ್ತು ಕಾಣಾ ಕಲಿದೇವರದೇವಾ.

---

**ವಿವರಣೆಃ** — ಪ್ರಸಾದವನ್ನು ವಿಶ್ವಾಸವುಳ್ಳವನಾಗಿ ಸ್ವೀಕರಿಸಬೇಕು. ಅದರಲ್ಲಿ ಎಷ್ಟು ಮಾತ್ರವೂ ಸಂಶಯವನ್ನಿಡಕೂಡದು. ಹೀಗೆ ವರ್ತಿಸಿದಲ್ಲಿ ಮನುಷ್ಯನಲ್ಲಿ ಸಿದ್ಧಿಗಳು ಸಿದ್ಧಿಸುವವು.

## ವಚನ

೩೬. ಶ್ರೀಗುರುವೇ ಕರ್ತನೆಂದು ಪ್ರಸಾದವಂ ಕೊಂಬ ಪ್ರಸಾದದೇಹಿಗಳು ನೀವು ಕೇಳಿ ಭೋ. ಪ್ರಸಾದ ಆಯತ ಅನಾಯತವೆಂಬ ಅನಾಚಾರಿಗೆ ಸದಾಚಾರದ ಶುದ್ಧತೆ ಎಲ್ಲಿಯದೋ? ಈ ತ್ರಿವಿಧ ಅಜ್ಞತನಂಗೆ ಮುಕ್ತಿಯುಂಟೆಂಬ ಪುರಕೊರೆಯರ ನೋಡಾ. ಈ ಮಹಾದಿವ್ಯಪ್ರಸಾದದ ಸುಖವನರಿದು ಬಿಲ್ಲಮರಾಯನು ನವಲಕ್ಷದೇಶಿವ ಕೊಂಡೊಯ್ದ ಕೈಲಾಸಕ್ಕೆ. ಈ ಮಹಾ ದಿವ್ಯಪ್ರಸಾದದ ಸುಖವನರಿದು ಬಿಬ್ಬಿಬಾಚಯ್ಯ ಪರವಾದಿಗಳ ಪುರವ ಸುಟ್ಟ. ಈ ಪ್ರಸಾದಕ್ಕೆ ಆಯತ ಅನಾಯತವೆಂಬ ಅನಾಚಾರಿಯ ಮುಖವನೆನಗೆ ತೋರದಿರಯ್ಯಾ. ಇಂತಪ್ಪ ಮಹಾಪ್ರಸಾದವ ಕೊಂಡು ನಾನು ಬದುಕಿದೆನಯ್ಯಾ ಕಲಿದೇವರದೇವಾ.

---

**ವಿವರಣೆಃ** — ಪ್ರಸಾದ ಸ್ವೀಕಾರದಿಂದ ಮೋಕ್ಷನೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

## ವಚನ

೩೭. ನಿರ್ವಾಹವಾಯಿತ್ತು ಬಸವಣ್ಣಂಗೆ ಕಪ್ಪಡಿಯ ಸಂಗಯ್ಯನಲ್ಲಿ. ಅಕ್ಕನಾಗಾಯಿ, ಮಿಂಡಮಲ್ಲಿನಾಥ, ಹಡಪದಪ್ಪಣ್ಣ, ಮೊಗವಾಡದ ಕೇಶಿರಾಜ, ಕೋಲಶಾಂತಯ್ಯ ಮೊದಲಾದ ಶಿವಗಣಂಗಳು ಬಸವಣ್ಣನ ಬಯಲ ಪ್ರಸಾದವ ಬೆರೆದರು. ಆ ಬಯಲಪ್ರಸಾದದಿಂದ ಮೋಳಿಗೆಯ ಮಾರಯ್ಯ ಡೋಹರಕಕ್ಕಯ್ಯ ಪಡಿಹಾರಿ ಉತ್ತಣ್ಣ ಕಲಕೇತಬ್ರಹ್ಮಯ್ಯ ನುಲಿಯ ಚಂದಯ್ಯ ಕನ್ನದ ಮಾರಯ್ಯ ಸುರಿಗಿಯ ಚೌಡಯ್ಯ ಹೆಂಡದಮಾರಯ್ಯ ಶಂಕರದಾಸಿಮಯ್ಯ ಏಕಾಂತದರಾಮಯ್ಯ ಮೇದಾರಕೇತಯ್ಯ ಮೊದಲಾದ ಶಿವಗಣಂಗಳ ದಂಡು ನಡೆಯಿತ್ತು ಕೈಲಾಸಕ್ಕೆ. ಬಂದ ಮಣಿಹ ಸಂದಿತ್ತು. ಸಂದ ಪುರಾತರೆಲ್ಲರೂ ಎನ್ನ

ಮನದ ಮೈಲಿಗೆಯು ಕಳೆದ ಕಾರಣ ಇವರಿಲ್ಲರ ಒಕ್ಕುಮಿಕ್ಕ ಬಯಲ ಪ್ರಸಾದವ ಎನಗಾಯಿತ್ತು ಕಲಿದೇವರದೇವಾ.

**ವಿವರಣೆ:**— ಇಲ್ಲಿ ಪ್ರಸಾದದಿಂದ ಮನುಷ್ಯನ ಅಂತರಂಗದ ಚೈತನ್ಯವು ಹೇಗೆ ಬೆಳಗುತ್ತಿದೆಂಬದನ್ನು ಹೇಳುತ್ತಾನೆ. ಮೊದಲು ತ್ರಿಕೂಟವು ಪ್ರಜ್ವಲಿಸುತ್ತದೆ. ಆಮೇಲೆ ನಿರ್ಭಾವ ಸ್ಥಿತಿಯು ಒದಗುತ್ತಿದೆ. ಹೀಗೆ ಆಚರಿಸುವದರಿಂದ ಮನುಷ್ಯನಿಗೆ ಶುದ್ಧತ್ವವು ಪ್ರಾಪ್ತವಾಗುತ್ತದೆ.

## ವಚನ

೩೮. ತ್ರಿವಿಧ ಮಧ್ಯದ ಶೇಷ ತ್ರಿಕೂಟದ ಬೆಳಸು. ದಿವ್ಯ ಮಧ್ಯದ ಪರಿಯಾಣ. ನಿರ್ಭಾವ ಮಧ್ಯದ ಧಾನ್ಯವನೆ ತಂದು ಸತ್ಪಾತ್ರರಂಭದ ಭಾಜನದಲ್ಲಿಯೇ ಸಂವರಿಸುವೆ. ಹಿಂದೆ ನೋಡಿಯೂ ಆರನು ಕಾಣೆ. ಮುಂದೆ ನೋಡಿಯೂ ಆರನು ಕಾಣೆ. ಮಧ್ಯದಲ್ಲಿ ನೋವ ವೇಷಿಕರ ನಾ ಮಾಡಿದ ಭಕ್ತಿಯು ಬೇಡಲೆಂದೊಬ್ಬ ಜಂಗಮ ಬಂದರೆ ಕೊಟ್ಟು ಆ ಭಕ್ತಿಶೇಷ ಪ್ರಸಾದದಿಂದ ಶುದ್ಧನಾದೆನು ಕಾಣಾ ಕಲಿದೇವರದೇವಾ.

---

**ವಿವರಣೆ:**— ಪ್ರಸಾದಿಯು ಉಪವಾಸ ಮೊದಲಾದ ವ್ರತಗಳನ್ನು ಮಾಡುವದು ವಿಹಿತವಲ್ಲ. ಗ್ರಾಮದ ಅನ್ಯ ದೈವಗಳನ್ನು ಪೂಜಿಸಲೂಬಾರದು. ಅವುಗಳ ಪ್ರಸಾದವನ್ನು ಸ್ವೀಕರಿಸಬಾರದು.

## ವಚನ

೩೯. ಸೋಮವಾರ ಉಪವಾಸವಿದ್ದು ಶಿವಂಗೆ ಅರ್ಪಿತವೆಂಬರು. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವಳಿದು ಗ್ರಾಮದ ಅನ್ಯ ಹೊಲ್ಲ ದೈವವನಾರಾಧಿಸಿ ಅವಕಿಕ್ಕಿ, ಮಿಕ್ಕಕೂಳ ಸೋಮಧರಂಗೆ ಅರ್ಪಿತವೆಂಬರು. ಅದೆಂತೆಂದರೆ ಗ್ರಾಮದ ಶುನಕ ಗಂಗೆಯು

ಸೀಸಾಡ ಹೋಗಿ ಶುದ್ಧವಾಗಬಲ್ಲುದೇ? ಆ ಶುನಕದ ಮುಖವ ನೋಡಲಾಗದೆಂದಾತ ನಮ್ಮ ಕಲಿದೇವರದೇವಯ್ಯನು.

---

**ವಿವರಣೆ:**— ಪ್ರಸಾದ ಮಾಡುವಲ್ಲಿ ಸೂತಕವೆಂಬುದಿಲ್ಲ. ಸೂತಕದ ಶುದ್ಧತ್ವವು ಪ್ರಸಾದದಲ್ಲಿರಲಾಗದು. ಪ್ರಸಾದಿಯು ಕಾಳುದೈವಕ್ಕೆರಗಬಾರದು.

### ವಚನ

ಗಂಡನೆಂಜಲಿಗೆ ಹೇಸುವಳು ಮಿಂಡನೆಂಜಲ ತಿಂಬ ತೆರನೆಂತೆಂದರೆ ಗುರುವಿನಲ್ಲಿ ಉಪದೇಶವ ಪಡೆದು ಪ್ರಸಾದಕ್ಕೆ ಸೂತಕವ ಮಾಡುವ ಪಂಚ ಮಹಾಪಾತಕರು ನೀವು ಕೇಳಿ ಭೋ. ಅಂಡದೊಳಗೆ ಹುಟ್ಟಿದ ಉತ್ಪತ್ತಿ ಎಲ್ಲವು ಗುರುವಿಂದಲಾಯಿತ್ತು. ಮತ್ತೆ ಮರಳಿ ಮಿಂಡ ಮೈಲಾರ, ಬೀರ, ಭೈರವ, ಎಕ್ಕನಾದಿ, ಕುಕ್ಕನೂರ ಬಸದಿ, ಕೇತ, ಧೂಳನೆಂಬ ಕಾಳುದೈವಕ್ಕೆರಗಿ ನಾನು ಶಿವಭಕ್ತನೆನಿಸಿಕೊಂಬ ಚಂಡಿನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಾ ಕಲಿದೇವರದೇವಾ.

---

ವಿವರಣೆ:—ದೇಹದಲ್ಲಿ ಹುಲಿ, ಕರಡಿ, ಹಾವುಗಳಿವೆ. ದುರ್ಗುಣಗಳೇ ಈ ವನ್ಯಪಶುಗಳು. ಇವುಗಳನ್ನು ತೊಲಗಿಸಿ ಪ್ರಸಾದ ಮುಖವಾಗಿ ಅನುಭವಿಸಬೇಕು.

### ವಚನ.

೪೧. ಹುಲಿಯು ಕೊಂದು ಲಿಂಗಕ್ಕೆ ಬೋನವ ಮಾಡಿದಾತ ಬಸವಣ್ಣ. ಕರಡಿಯು ಕೊಂದು ಲಿಂಗಕ್ಕೆ ಮೇಲೋಗರವ ಮಾಡಿದಾತ ಬಸವಣ್ಣ. ಹಾವಿನ ಪರಿಯಾಣವ ಮಾಡಿ ಕೊಡಬಲ್ಲಾತ ಬಸವಣ್ಣ ಕಾಣಾ ಕಲಿದೇವರದೇವಾ

**ವಿವರಣೆ:**— ಇಲ್ಲಿ ಮಡಿವಾಳ ಮಾಚಿದೇವನು ಬಟ್ಟೆಗಳನ್ನು ಒಗೆಯುವ ತನ್ನ ಕಾಯಕವನ್ನು ಹೇಗೆ ಮಾಡುತ್ತೇನೆಂಬುದನ್ನು ಇಲ್ಲಿ ಹೇಳಿದ್ದಾನೆ. ಕಾಯಕದಿಂದಲೇ ಮನುಷ್ಯನು ಶುದ್ಧನಾಗುತ್ತಾನೆ. ಆದರೆ ಇದು ಪವಿತ್ರ ಕಾರ್ಯಗಳಿಗೋಸ್ಕರ ನಡೆಯಬೇಕು.

## ವಚನ

೪೨. ಒಂದು ಕೈಯ್ಯ ಬಯಲು ಎನಗೆ ಕೊಟ್ಟನು. ಒಂದು ಕೈಯ್ಯ ಬಯಲು ಚನ್ನಬಸವಣ್ಣಂಗೆ ಕೊಟ್ಟನು. ನೀವು ಬಂದಿಹರೆಂದು ಎಂಟು ಸಾಸಿರ ವರುಷ ಒಗೆದೊಗೆದು ಬಿಳಿದು ಮಾಡುತಿರ್ದೆನು. ಒಂದು ಬಿಳಿದ ಬಸವಣ್ಣಾ ನಿನ್ನ ಲಿಂಗಕ್ಕೆ ಕೊಡು ಎಂದು ಕೊಟ್ಟರೆ ಲಿಂಗಕ್ಕೆ ಕೊಡಲೊಲ್ಲದೆ ತಲೆಗೆ ಸುತ್ತಿಕೊಂಡನು. ಮಡಿಯ ಕೂಲಿಯ ಬೇಡಹೋದರೆ ಬೆಳಿದು ಹರಿದು ಎನ್ನಮೇಲೆ ಬಿಸಾಟನು. ನೀನುಟ್ಟ ಬಿಳಿದನು ಚನ್ನಬಸವಣ್ಣನ ಕೈಯ್ಯಲ್ಲಿ ನಿರಾಳವೆನಗೆ ಕೊಡಿಸಾ ಕಲಿದೇವರದೇವ.

---

**ವಿವರಣೆ:** – ಪ್ರಸಾದವು ಕರಸ್ಥಲದಲ್ಲಿ ಲಿಂಗ, ನಯನದಲ್ಲಿ ಜಂಗಮವನ್ನು ಸ್ಥಾಪ್ಯಮಾಡಿದರೆ ಲಭಿಸುತ್ತದೆ. ಲಿಂಗವನ್ನು ಕರಸ್ಥಲದಲ್ಲಿರಿಸಿದರೆ ಅವನು ಮಾಡುವ ಕೃತ್ಯಗಳು ಶುದ್ಧವಾಗಿರಬೇಕು. ಜಂಗಮವು ಜ್ಞಾನದ ದ್ಯೋತಕವು. ಆದುದರಿಂದ ಕಣ್ಣಿನಿಂದ ನೋಡಿ ತಿಳಿವುದೆಲ್ಲ ಜಂಗಮವಾಗಿರಬೇಕು. ಅದು ಲಿಂಗದ ಚೈತನ್ಯವಾಗಿ ಪರಿಣಮಿಸುತ್ತದೆ. ಇದರಿಂದ ಸಂಸಾರವಿಷಯಗಳು ಪ್ರಸಾದರೂಪಾಗುವವು. ಹೀಗೆ ಈ ಮೂರನ್ನು ಸಾಧಿಸಬೇಕು.

## ವಚನ

೪೩. ಕಾಯದ ಕರಸ್ಥಲದಲ್ಲಿ ಲಿಂಗ ಸ್ವಾಯತವ ಮಾಡುವೆ. ಕ್ರೋಧವ ನಯನದಲ್ಲಿ ಜಂಗಮ ಸ್ವಾಯತವ ಮಾಡುವೆ. ಜಿಹ್ವೆಯ ಕೊನೆಯಲ್ಲಿ ಪ್ರಸಾದ ಸ್ವಾಯತವ ಮಾಡುವೆ. ಇಂತೀ ತ್ರಿವಿಧ ಸನ್ನಿಹಿತನಾದೆನು ಕಾಣಾ ಕಲಿದೇವಯ್ಯ

**ವಿವರಣೆ:**– ಬರೀ ಲಿಂಗಧ್ಯಾನದಿಂದ ಪರಮಾತ್ಮನು ಒಲಿಯು ಲಾರನು. ಆ ಧ್ಯಾನದಲ್ಲಿ ಸತ್ಕ್ರಿಯೆ ಇರಬೇಕು. ಅದು ಬಾಣಕ್ಕೆ ಗರಿಯನ್ನು ಕಟ್ಟಿದಂತಾಗುವದು. ಈ ಕ್ರಿಯೆ ಎಂದರೆ ಪರಮಾತ್ಮನಿಗೆ ತನ್ನನರ್ಪಿಸಿ ಪಾದೋದಕ ಪ್ರಸಾದವನ್ನು ಸ್ವೀಕರಿಸುವದೇ ಇರುತ್ತದೆ.

## ವಚನ

೪೪. ಗರಿಯು ಕಟ್ಟಿದ ಕೋಲು ಗುರಿಯು ತಾಕಬಲ್ಲುದೇ? ಗುರು ಲಿಂಗಜಂಗಮುದ ಪಾದತೀರ್ಥ ಪ್ರಸಾದವನರಿಯದೆ ಪರಮನ ಕಂಡೆನೆಂಬ ದುರಾಚಾರಿಗಳ ಮುಖವ ನೋಡಲಾಗದೆಂದಾತ ನಮ್ಮ ಕಲಿದೇವರ ದೇವಯ್ಯ.

---

**ವಿವರಣೆ:**—ಪಾದೋದಕ ಪ್ರಸಾದದಲ್ಲಿ ಮನುಷ್ಯನು ಮಾಡಬೇಕಾದ ಭಕ್ತಿ, ಅರ್ಚನೆ ಮೊದಲಾದವುಗಳು ಹೇಗಿರಬೇಕೆಂಬುದು ಇಲ್ಲಿ ಹೇಳಲ್ಪಟ್ಟಿದೆ. ಪ್ರಸಾದದ ತರಗತಿಗಳು ಮತ್ತು ಅದರಲ್ಲಿಯ ವಿಭೇದಗಳು ಇಲ್ಲಿ ವಿವರಿಸಲ್ಪಟ್ಟಿವೆ.

## ವಚನ

೪೫. ಗುರುಸ್ವಾಯತವಾಯಿತ್ತು. ಎಂಟು ಭಾವ ಸ್ವಾಯತವಾಯಿತ್ತು. ಹದಿನಾರು ತೆರದ ಭಕ್ತಿ ಸ್ವಾಯತವಾಯಿತ್ತು. ಅಷ್ಟವಿಧಾರ್ಚನೆ ಸ್ವಾಯತವಾಯಿತ್ತು. ತ್ರಿವಿಧದರಿವು ಸ್ವಾಯತವಾಯುತ್ತು. ಮಹಾಲಿಂಗದ ನಿಲವು ಮಹಾ ಜಂಗಮುದ ನಿಜವು ಸ್ವಾಯತವಾಯಿತ್ತು. ಶುದ್ಧ ಪ್ರಸಾದ ತನುಸ್ವಾಯತವಾಯಿತ್ತು. ಸಿದ್ಧಪ್ರಸಾದ ಚೈತನ್ಯಸ್ವಾಯತವಾಯಿತ್ತು. ಪ್ರಸಿದ್ಧ ಪ್ರಸಾದ ಮನಸ್ವಾಯತವಾಯಿತ್ತು. ವಾಮ ಭಾಗದಲ್ಲಿ ಮಹವು ಉದಯುವಾಯಿತ್ತು. ಶಿವಾಚಾರದಲ್ಲಿ ನಿರವಯ ಉದಯುವಾಯಿತ್ತು. ನಿಜಸ್ಥಾನದಲ್ಲಿ ನಿಂದಿತ್ತು. ಕ್ಷೀರಕ ಸ್ಥಾನವಲ್ಲಿ ಸಾರಾಯುವಾಯಿತ್ತು. ಅನುಭಾವಸ್ಥಾನದಲ್ಲಿ ಘನಾಗಮುವೆನಿಸಿತ್ತು. ಸ್ವಾನುಭಾವದಲ್ಲಿ ನಿಮ್ಮ ಬಸವಣ್ಣಂಗೆ ಶರಣೆಂದಿತ್ತು. ನೆಮ್ಮುಗೆಯುಲ್ಲಿ ಬಸವಣ್ಣನ ಪ್ರಸಾದವ ಕೊಂಡಿತ್ತು. ನಿಮ್ಮ ಬಸವಣ್ಣನ ಪ್ರಸಾದದಿಂದ ಇಂತಹ

ಘನವು ಸ್ವಾಯುತವಾಯಿತ್ತು. ಬಸವಣ್ಣನಿಂದ ನೀವಾದಿರಾಗಿ ಕಲಿದೇವರದೇವಾ. ನಿಮ್ಮ ಬಸವಣ್ಣನ ಶ್ರೀಪಾದಕ್ಕೆ ನಮೋನಮೋ ಎನುತಿರ್ದೆನು.

---

**ವಿವರಣೆ:**— ಪಾದೋದಕ ಪ್ರಸಾದಗಳ ವಿಭೇದಗಳು ಇಲ್ಲಿ ಹೇಳಲ್ಪಟ್ಟಿವೆ.

## ವಚನ

೪೬. ಸ್ವಯ ಚರ ಪರವೆಂಬ ತ್ರಿವಿಧ ಗುರುಗಳಲ್ಲಿ ಪಾದೋದಕ ಪ್ರಸಾದವ ಕೊಳಲಾಗದು ಪರಿಣಾಮಿ ನಿರುಪಾಧಿ ಪರಿಪೂರ್ಣವೆಂಬ ತ್ರಿವಿಧ ಜಂಗಮದಲ್ಲಿ ಪಾದೋದಕ ಪ್ರಸಾದವ ಕೊಳಬೇಕೆಂದಾತ ನಮ್ಮ ಕಲಿದೇವರದೇವ.

ಟೀಕು:— ಸ್ವಯವೆಂದಡೆ ಗುರುಸ್ಥಲದ ಪಟ್ಟದ ಘನಲಿಂಗದೇವರು ಹನ್ನೆರಡು ಸಾವಿರದೊಡೆಯರು. ಚರವೆಂದಡೆ ಅತೀತ ಚರಮೂರ್ತಿ ಆರು ಸಾವಿರದವರು ಪರವೆಂದಡೆ ವಿರಕ್ತಸ್ಥಲದ ಮೂರು ಸಾವಿರದೊಡೆಯರು. ಇಂತೀ ತ್ರಿವಿಧ ಗುರುಗಳಲ್ಲಿ ಪಾದೋದಕ ಪ್ರಸಾದವ ಕೊಳಲಾಗದು. ಅದೇನು ಕಾರಣವೆಂದಡೆ, ಶಂಖ ಗಿಳಿಲು ಹಿಡಿದರಿಂದ ಗುರುಸ್ಥಲ ಕಿರಿದಾಯಿತ್ತು. ದಂಡಾಗ್ರದಿಂದ ಚರಸ್ಥಲ ಕಿರಿದಾಯಿತ್ತು. ಪುಸ್ತಕ ಕೊಟ್ಟಲ್ಲಿ ಪರಸ್ಥಲ ಕಿರಿದಾಯಿತ್ತು. ಅದಲ್ಲದೆ ತ್ರಿವಿಧ ದೀಕ್ಷೆಗೆ ಕರ್ತರಾದ ಕಾರಣ ಮಲತ್ರಯ ಮೋಹಿತರಾಗಿ ಬ್ರಹ್ಮ ವಿಷ್ಣು ರುದ್ರರ ಪಾಶಕ್ಕೆ ಒಳಗಾದ ಕಾರಣ ಇಂತಿವರಲ್ಲಿ ಪಾದೋದಕ ಪ್ರಸಾದವ ಸೇವಿಸಲಾಗದೆಂಬುದೀಗ ಸ್ವಯ ಚರ ಪರವೆಂಬ ತ್ರಿವಿಧ ಗುರುಗಳಲ್ಲಿ ಪಾದೋದಕ ಪ್ರಸಾದವ ಸೇವಿಸಲಾಗದು ಎಂಬ ಶಬ್ದಕ್ಕರ್ಥ. ಪರಿಣಾಮಿ ಎಂದಡೆ ತಾವರೆ, ಕಮಲ, ನಿರುಪಾಧಿ ಎಂದಡೆ ಘೃತ ಉಂಡ ಜಿಹ್ವೆ ಪರಿಪೂರ್ಣ ಎಂದಡೆ ಪಂಕದೊಳಗಿನ ಹುಳು. ಅದೆಂತೆಂದೊಡೆ ತಾವರೆಯ ಪರ್ಣವು ಉದಕದೊಳಗಿರ್ದು ಆ ಉದಕಕ್ಕೆ ಹೊಂದದೆ ಉದಕದಿಂದ ಕೊಳೆತು ಹೋಗದೆ ಹೇಗೆ ಪರಿಣಾಮದಲ್ಲಿಹುದು ಹಾಗೆ ಮಲ

ದೇಹದಲ್ಲಿ ಹುಟ್ಟಿ ಆ ಮಲದೇಹದ ಪ್ರಕೃತಿಯ ಹೊಂದದೆ ತನುತ್ರಯಂಗಳನಳಿದು ಆ ತನುತ್ರಯಂಗಳಲ್ಲಿ ಇಷ್ಟಲಿಂಗ ಸಂಬಂಧಿಯಾಗಿ ಹೊಂದಿ ಹೊಂದದೆ ಇದ್ದಾತನೇ ಪರಿಣಾಮಿ ಎಂಬ ಶಬ್ದಕ್ಕರ್ಥ ತುಪ್ಪ ಉಂತ ನಾಲಿಗೆಯು ಉಂಡುಂಡು ಆತ್ಮತೃಪ್ತಿ ಬಡಿಸುವುದಲ್ಲದೆ ಆ ನಾಲಿಗೆಯು ತುಪ್ಪದಿಂದ ಜಿಬುಟಾಗದೆ ಆತ್ಮನ ತೃಪ್ತಿಬಡಿಸದಿರದೆ ಹೇಗೆ ಇರುದು ಹಾಗೆ ಮನೋಪ್ರಕೃತಿಯಲ್ಲಿ ಬೆರಿಸದೆ ಮನೋಪ್ರಕೃತಿಯಲ್ಲಿ ಚರಿಸಿ ಚರಿಸಿ ಭವಬಂಧನಕ್ಕೆ ಬೀಳದೆ ಮನತ್ರಯಗಳನಳಿದು ಆ ಮನತ್ರಯದಲ್ಲಿ ಪ್ರಾಣಲಿಂಗಿ ಸಂಬಂಧಿಯಾಗಿ ಚರಿಸಿ ಸರ್ವದರಲ್ಲಿ ನಿರಾಶಕನಾಗಿರುವಾತನೇ ನಿರುಪಾಧಿಕ ಎಂಬ ಶಬ್ದಕ್ಕರ್ಥ ಕುಂಬಾರನ ಹುಳುವು ಬಚ್ಚಲ ರೊಜ್ಜಿನೊಳಗೆ ಹುಟ್ಟಿ ರೊಜ್ಜು ಮೈಗೆ ಹತ್ತದೆ ಆ ರೊಜ್ಜು ಬಿಟ್ಟು ಕಡೆಯಲ್ಲಿ ಹೇಗೆ ಇರುವದೋ ಹಾಗೆ ಸಂಸಾರವೆಂಬ ಪಂಕದಲ್ಲಿ ಹುಟ್ಟಿದಾತ್ಮನು ಆ ಸಂಸಾರ ಸುಖಕ್ಕೆ ಹೊಂದಿ ಭವದಲ್ಲ ಬೀಳದೆ ಆತ್ಮತ್ರಯವನಳಿದು ಆತ್ಮತ್ರಯದಲ್ಲಿ ಭಾವಲಿಂಗ ಸಂಬಂಧಿಯಾಗಿ ಹೊಂದಿ ಹೊಂದದ ಜಲದೊಳಗಣ ಸೂರ್ಯನಂತೆ ಇರುವಾತನೇ ಪರಿಪೂರ್ಣ ಎಂಬ ಶಬ್ದಕ್ಕರ್ಥ. ಇಂತೀ ತ್ರಿವಿಧಜ್ಞಾನ ಜಂಗಮದಲ್ಲಿ ಪಾದೋದಕ ಪ್ರಸಾದವ ಸೇವಿಸಬೇಕು ಎಂಬುದೀಗ ಪರಿಣಾಮಿ ನಿರುಪಾಧಿ ಪರಿಪೂರ್ಣ ಎಂಬ ತ್ರಿವಿಧ ಜಂಗಮದಲ್ಲಿ ಪಾದೋದಕ ಪ್ರಸಾದವ ಕೊಳಬೇಕೆಂದಾತ ನಮ್ಮ ಕಲಿದೇವರದೇವ ಎಂಬ ಶಬ್ದಕ್ಕರ್ಥ.

**ವಿವರಣೆ:—** ಅರ್ಪಣದ ರೀತಿಯು ಇಲ್ಲಿ ಹೇಳಲ್ಪಟ್ಟಿದೆ. ಅದರಲ್ಲಿ ದ್ವಂದ್ವಭಾವವಿಲ್ಲ. ಸಮರಸಭಾವವಿದೆ. ನಾನು ಅರ್ಪಿಸುತ್ತೇನೆ ಎಂದು ಹೇಳುವಲ್ಲಿ ಸಹ ದ್ವೈತವು ಇದೆ. ಇದು ಸಹ ಇರಕೂಡದು.

## ವಚನ

೪೭. ದೂರದಲರ್ಪಿತವೆಂಬ ದುರಾಚಾರಿಯನೇನೆಂಬೆನಯ್ಯಾ? ಅಂತರದಲರ್ಪಿತವೆಂಬ ಅನಾಚಾರಿಯನೇನೆಂಬೆನಯ್ಯಾ? ಭಾವದಲರ್ಪಿತವೆಂಬ ಭ್ರಮಿತರನೇನೆಂಬೆನಯ್ಯಾ? ಮನದಲರ್ಪಿತವೆಂಬ ವ್ರತ

ಗೇಡಿಗಳನೇನೆಂಬೆನಯ್ಯಾ? ಇಂತೀ ತನ್ನ ಇಷ್ಟಲಿಂಗಕ್ಕೆ ಕೊಟ್ಟು ಕೊಳದಿದ್ದರೆ ಸತ್ತನಾಯ ಮಾಂಸವ ತಂದು ಅಟ್ಟದ ಮೇಲಿರಿಸಿ ನಿತ್ಯ ತಿಂದಂತೆ ಕಾಣಾ ಕಲಿದೇವರದೇವಾ.

---

**ವಿವರಣೆ:—** ಅರ್ಪಣವು ಮನುಷ್ಯನ ಇಂದ್ರಿಯಗಳ ಮುಖಾಂತರವೇ ನಡೆಯಬೇಕಾದುದು. ಇದು ಹೇಗೆಂಬುದು ಇಲ್ಲಿ ಹೇಳಲ್ಪಟ್ಟಿದೆ. ಸದಾಚಾರ ಶುದ್ಧನಡೆನುಡಿಗಳುಳ್ಳವನೇ ಪ್ರಸಾದಕ್ಕೆ ಅರ್ಹನು.

**ವಚನ**

೪೮. ಶಬ್ದ, ಸ್ಪರ್ಶ, ರೂಪು, ರಸ, ಗಂಧ, ವಿಷಯ ಸಂಗತಿಗಳಾವಾವೆಂದಡೆ ಶಬ್ದ ಗುರು, ಸ್ಪರ್ಶ ಲಿಂಗ, ರೂಪು ಶಿವ ಲಾಂಛನ, ರಸ ಶಿವಪ್ರಸಾದ, ಗಂಧ ಶಿವಾನುಭವ ಇಂತಿವನರಿದು ಮಾಡಬಲ್ಲ ನಮ್ಮ ಬಸವಣ್ಣನು. ಮನ ಬುದ್ಧಿ ಚಿತ್ತ ಅಹಂಕಾರಂಗಳಾವಾವೆಂದಡೆ, ಮನ ಧ್ಯಾನ ಬುದ್ಧಿ ವಂಚನೆ ಇಲ್ಲದಿಹುದು. ಚಿತ್ತ ದಾಸೋಹ ಅಹಂಕಾರ ಶಿವಜ್ಞಾನ ಇಂತಿವರಲ್ಲಿ ಸನ್ನಿಹಿತನು ಬಸವಣ್ಣನು. ಸತ್ವ ರಜ ತಮಂಗಳಾವಾವೆಂದಡೆ, ಸತ್ವ ಶುದ್ಧ, ರಜ ಸಿದ್ಧ, ತಮ ಪ್ರಸಿದ್ಧ. ಇಂತೀ ತ್ರಿವಿಧದಲ್ಲಿ ಸಂಪನ್ನನು ಬಸವಣ್ಣನು. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳಾವಾವೆಂದಡೆ ಕಾಮ ಪೂಜೆ, ಕ್ರೋಧ ಅನುಮಿಷ, ಲೋಭ ಭಕ್ತಿ, ಮೋಹ ಅಷ್ಟವಿಧಾರ್ಚನೆ, ಮದ ನಿರಹಂಕಾರಭಾವ, ಮತ್ಸರ ಭವಂನಾಸ್ತಿ ಇಂತಿವರಲ್ಲಿ ನಿಪುಣನು ನಮ್ಮ ಬಸವಣ್ಣನು. ಮಹಾದೇವನು ನಮ್ಮ ಬಸವಣ್ಣನು. ಮಹಾಲಿಂಗವು ನಮ್ಮ ಬಸವಣ್ಣನು. ನಮ್ಮ ಬಸವಣ್ಣಂಗೆ ಮತ್ತೆ ನಾನು ಪ್ರತಿಗಾಣೆನು ಕಾಣಾ ಕಲಿದೇವರದೇವಾ.

---

# ಪ್ರಾಣಲಿಂಗಿಸ್ಥಲ

ಇಲ್ಲಿ ಸೂಕ್ಷ್ಮ ಶರೀರವು ಪೂರ್ಣವಾಗಿ ಬಲಪಡುತ್ತಿದೆ. ಅಂತ ರಿಂದ್ರಿಯಗಳು ಪೂರ್ಣತೆಯನ್ನು ಹೊಂದುತ್ತವೆ. ಇದರಿಂದ ಮನುಷ್ಯ ನಲ್ಲಿ ಒಂದು ವಿಲಕ್ಷಣ ಚೈತನ್ಯವು ತಲೆದೋರುತ್ತಿದೆ. ಇಲ್ಲಿ ಸಿದ್ಧಿಗಳು ಸಂಭವಿಸುವವು. ಯೋಗಾಭ್ಯಾಸದ ಪರಿಣಾಮಗಳು ಉಂಟಾಗುವವು. ಆದರೆ ಅವನು ಇಂಥವುಗಳ ಪ್ರಯೋಗದಲ್ಲಿ ಮನಸ್ಸನ್ನಿಕ್ಕಬಾರದು. ಶುದ್ಧಾಚರಣೆಯುಳ್ಳವನಾಗಿಯೇ ವರ್ತಿಸತಕ್ಕದ್ದು. ಇದರಿಂದ ಅವನ ಶಕ್ತಿಯು ಹೆಚ್ಚುತ್ತದೆ. ಅಂಗದ ಕಳೆಯು ಅವನ ಎಲ್ಲ ಅಂಗಗಳಲ್ಲಿ ಮೂಡುತ್ತದೆ. ಇದೇ ಪ್ರಾಣಲಿಂಗಿಸ್ಥಲವೆನಿಸಿಕೊಳ್ಳುತ್ತಿದೆ.

**ವಿವರಣೆ:** — ವಚನಕಾರನು ಇಲ್ಲಿ ಹಠಯೋಗಿಗಳನ್ನು ತಿರಸ್ಕರಿಸಿ ನುಡಿಯುತ್ತಾನೆ. ಅವರು ಶಿವಾಚಾರದ ಕುಳವನರಿಯರು. ನಿಜವಾದ ಭಕ್ತಿಯೇ ಯೋಗಾಭ್ಯಾಸವೆನಿಸಿಕೊಳ್ಳುತ್ತಿದೆ.

## ವಚನ

೪೯. ಪದ್ಮದೊಳಗಣ, ಪತ್ರದೊಳಗಣ, ದ್ವಿದಳದೊಳಗಣ, ಸಂಸಾರದ ಮೂಲದ ಬಲಿಕೆಯೊಳಗಣ, ಕರ್ಣಿಕೆಯ ಕುಹರದೊಳಗಣ, ಅಜಸ್ಥಾನದೊಳಗಣ, ಅಹಿಮಧ್ಯದೊಳಗಣ, ಹಲವು ಕೋಟಿ ಪತ್ರದ ಕುಮುದ ಕುಹರದ ಪದ್ಮ ಮಧ್ಯದೊಳಗೆ ಪ್ರಾಣವಿಪ್ಪುದೆಂದು ಆತ್ಮನ ನಿಶ್ಚಯಿಸುವೆನೆಂದು ಅನಂತ ಯೋಗಿಗಳು ಸಂಸಾರ ಧರ್ಮವ ಕೆಡಿಸಿಹೆವೆಂದು ಅನಂತ ನಾಳದಲ್ಲಿ ನಿರ್ಬಂಧಮಂ ಮಾಡಿ, ಅಮೃತವ ದಣಿಯ ಉಂಡೆವೆಂದು ನಾನಾ ಕುಟಿಲಭಾವದಲ್ಲಿ ಸಂಸಾರದ ಕರ್ಮವ ಕೆಡಿಸಿಹೆವೆಂದು, ಯೋಗಿಗಳೆಂಬವರು ಭವದ ಬಾಗಿಲಲ್ಲೈದಾರೆ ಕಾಣಾ, ಅಯ್ಯಾ. ಶಿವಾಚಾರದ ಕುಳವನರಿಯದೆ ನಾನಾ ಯೋನಿಗಳಲ್ಲಿ ಜನಿಸಿವರು ಕಾಣಾ ಅಯ್ಯಾ. ಶಿವಾಚಾರದ ಕುಳವನರಿಯದೆ ಅನೇಕ ಬಂಧನಂಗಳಲ್ಲಿ ಸಿಲುಕಿವರು ಕಾಣಾ ಅಯ್ಯಾ. ನೀವು ಚತುರ್ವಿಧ ಸ್ಥಲವ ಮಂಟಪವ ಮಾಡಿ, ಚತುರಾಶ್ರಯ ಸಿಂಹಾಸನದ ಮೇಲೆ ಕುಳ್ಳಿರ್ದು, ನಿತ್ಯರಿಗೆ ಭಕ್ತಿಯನೀವುದ ಕಂಡು ಭಕ್ತರು ನಿತ್ಯರು ನಿಮ್ಮ ಶರಣು ಗತಿವೊಕ್ಕು ಮಹಾಪ್ರಸಾದವೇವ ಆತ್ಮನು ಪರಿಭವಕ್ಕೆ ಬಪ್ಪನೆ

ಎಂದು ಕೇಳಲು, ಅದು ಹುಸಿ ಕಾಣಿರೇ. ಆತ್ಮನಿಷ್ಪ ನೆಲೆಯ ಹೇಳಿಹೆ ಕೇಳಿರೇ. ಗುರುಭಕ್ತಿಯಲ್ಲಿಪ್ಪ, ಲಿಂಗ ಭಕ್ತಿಯಲ್ಲಿಪ್ಪ, ಜಂಗಮಭಕ್ತಿಯಲ್ಲಿಪ್ಪ, ಅರ್ಪಿತ ಪ್ರಸಾದದಲ್ಲಿಪ್ಪ, ಜಂಗಮಕ್ಕೆ ಮಾಡುವಲ್ಲಿಪ್ಪ, ಮಾಡಿಸಿಕೊಂಬಲ್ಲಿಪ್ಪ, ತನುಮನಧನ ಒಂದಾಗಿ ನಿವೇದಿಸುವಲ್ಲಿಪ್ಪ. ಪರಿಪೂರ್ಣಾತ್ಮನೆಂದು ನಿತ್ಯರಿಗೆ ನೀವು ಕಾರುಣ್ಯವ ಮಾಡಿದಿರಿ. ನಿಮ್ಮ ಕಾರುಣ್ಯಕಟಾಕ್ಷದಲ್ಲಿ ಬಸವಣ್ಣನಲ್ಲದೆ ಮಾಡುವರಿಲ್ಲ. ಆ ಬಸವಣ್ಣ ಹೇಳುತ್ತ ಮೀರೆ ಕಾಣಾ ಕಲಿದೇವರದೇವಾ.

---

**ವಿವರಣೆ** — ಇಲ್ಲಿ ಮಡಿವಾಳಮಾಚಿದೇವನು ನಿಜಶಿವಯೋಗಿಯ ರೀತಿಯನ್ನು ವರ್ಣಿಸುತ್ತಾನೆ.

## ವಚನ

೫೦. ಸನ್ಮಾರ್ಗಾಚಾರವ ಸದ್ಗುರುಮುಖದಿಂ ತಿಳಿದು ತನ್ನಂತರಂಗ ಬಹಿರಂಗದ ಸಂದು ಸಂಶಯವ ಪರಿಹರಿಸಿ ನಿಶ್ಚಿಂತನಾಗಿ ನಿಜದಲ್ಲಿ ನಿಂದು ಲಿಂಗಕ್ಕಾಚಾರವ ಸಂಬಂಧಿಸಿ ಮನಕ್ಕೆ ಅರುಹಿನಾಚರಣೆಯ ನೆಲೆಗೊಳಿಸಿ, ಆತ್ಮಂಗೆ ಸತ್ಕ್ರಿಯಾಜ್ಞಾನವ ಬೋಧಿಸಿ, ಪ್ರಾಣಕ್ಕೆ ಲಿಂಗಮಂತ್ರವ ಧಾರಣವ ಮಾಡಿ, ಜೀವ ಪರಮಂಗೆ ಚಿದ್ಘನ ಪಾದೋದಕ ಪ್ರಸಾದಭೋಗವನಿತ್ತು, ಅವಕ್ಕೆ ತಾನಾಶ್ರಯನಾಗಿ, ತನ್ನ ನಿಜದಲ್ಲಿ ನಿಂದು ನೋಡಬಲ್ಲಾತನೇ ಶಿವಯೋಗಿ ನೋಡಾ ಕಲಿದೇವರದೇವಾ.

---

**ವಿವರಣೆ** — ಇಲ್ಲಿಯೂ ಪ್ರಾಣಲಿಂಗಿಯ ಆಚಾರಗಳನ್ನು ಹೇಳುತ್ತಾನೆ.

## ವಚನ

೫೧. ನಾವು ಪ್ರಾಣಲಿಂಗಿಗಳೆಂದು ಹೇಳುವ ಅಣ್ಣಗಳಿರಾ ನೀವು ಪ್ರಾಣಲಿಂಗಿಗಳೆಂತಾದಿರಿ ಹೇಳಿರಿ? ಅರಿಯದಿದ್ದರೆ ಕೇಳಿರಣ್ಣಾ ಕಾಯದ ಕಳವಳದಲ್ಲಿ ಕೂಡದೆ ಮನದ ಭ್ರಾಂತಿಗೊಳಗಾಗದೆ ಕರಣಂಗಳ

ಮೋಹಕ್ಕೆ ಈಡಾಗದೆ ಘ್ರಾಣನ ಪ್ರಪಂಚಿನಲ್ಲಿ ಬೆರಸದೆ ಜೀವನ ಬುದ್ಧಿಯಲ್ಲಿ ಮೋಹಿಸದೆ ಹಂಸನ ಆಶೆಗೊಳಗಾಗದೆ ನಿಃಪ್ರಪಂಚುಗಳಾಗಿ ಶ್ರೀಗುರುಲಿಂಗಜಂಗಮದ ಪಾದೋದಕ ಪ್ರಸಾದದಲ್ಲಿ ಅತಿ ಕಾಂಕ್ಷೆಯುಳ್ಳಾತನೇ ಲಿಂಗಪ್ರಾಣಿ ನೋಡಾ ಕಲಿದೇವರ ದೇವಾ.

---

**ವಿವರಣೆ:** -- ಪ್ರಾಣಲಿಂಗಿಯಲ್ಲಿ ಅಂಗಲಿಂಗ ಸಂಬಂಧವಾಗಬೇಕು. ಈ ರೀತಿಯನ್ನು ಇಲ್ಲಿ ವಚನಕಾರನು ನಿರ್ದೇಶಿಸಿದ್ದಾನೆ.

### ವಚನ

೫೨ ಅಂಗಲಿಂಗ ಸಂಬಂಧವಾಗಬೇಕೆಂಬ ಭಂಗಿತರ ಮಾತ ಕೇಳಲಾಗದು. ಅಂಗಲಿಂಗ ಸಂಬಂಧದ ಕಾರಣವೇನು, ಮನಲಿಂಗ ಸಂಬಂಧವಾಗದನ್ನಕ್ಕ? ಮನವು ಮಹದಲ್ಲಿ ನಿಂದ ಬಳಿಕ ಅಂಗ ಸಂಬಂಧವೆಂದೇನೋ ಹೇಳಾ ಕಲಿದೇವರ ದೇವಾ?

---

**ವಿವರಣೆ:** — ಅಂಗಲಿಂಗ ಸಂಬಂಧವನ್ನು ಹೆಚ್ಚು ವಿಸ್ತೃತ ರೀತಿಯಿಂದ ಇಲ್ಲಿ ಹೇಳುತ್ತಾನೆ. ಲಿಂಗದಲ್ಲಿರುವ ಆರು ವಿಧಗಳು ಹೇಗೆ ಮನುಷ್ಯನಲ್ಲಿ ಸಂಬಂಧಪಡುತ್ತವೆಂಬುದನ್ನು ವಚನಕಾರು ಇಲ್ಲಿ ವಿವರಿಸುತ್ತಾನೆ.

### ವಚನ

೫೩. ಎನ್ನ ಸ್ಥೂಲ ತನುವಿಂಗೆ ಇಷ್ಟಲಿಂಗವಾದಾತ ಬಸವಣ್ಣ. ಎನ್ನ ಸೂಕ್ಷ್ಮ ತನುವಿಂಗೆ ಪ್ರಾಣಲಿಂಗವಾದಾತ ಬಸವಣ್ಣ. ಎನ್ನ ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ. ಎನ್ನ ದೃಕ್ಕಿಂಗೆ ಇಷ್ಟಲಿಂಗವಾದಾತ ಬಸವಣ್ಣ. ಎನ್ನ ಮನಕ್ಕೆ ಪ್ರಾಣಲಿಂಗವಾದಾತ ಬಸವಣ್ಣ. ಎನ್ನ ಭಾವಕ್ಕೆ ತೃಪ್ತಿಲಿಂಗವಾದಾತ ಬಸವಣ್ಣ. ಎನ್ನ ನಾಸಿಕಕ್ಕೆ ಆಚಾರಲಿಂಗವಾದಾತ ಬಸವಣ್ಣ. ಎನ್ನ ಜಿಹ್ವೆಗೆ ಗುರುಲಿಂಗವಾದಾತ ಬಸವಣ್ಣ. ಎನ್ನ ನೇತ್ರಕ್ಕೆ ಶಿವಲಿಂಗವಾದಾತ

ಬಸವಣ್ಣ. ಎನ್ನ ತ್ವಕ್ಕಿಂಗೆ ಜಂಗಮಲಿಂಗವಾದಾತ ಬಸವಣ್ಣ. ಎನ್ನ ಶ್ರೋತ್ರಕ್ಕೆ ಪ್ರಸಾದಲಿಂಗವಾದಾತ ಬಸವಣ್ಣ. ಎನ್ನ ಹೃದಯಕ್ಕೆ ಮಹಾ ಲಿಂಗವಾದಾತ ಬಸವಣ್ಣ. ಎನ್ನ ಸುಚಿತ್ತೆಂಬ ಹಸ್ತಕ್ಕೆ ಆಚಾರಲಿಂಗ ವಾದಾತ ಬಸವಣ್ಣ. ಎನ್ನ ಸುಬುದ್ಧಿಯೆಂಬ ಹಸ್ತಕ್ಕೆ ಗುರುಲಿಂಗ ವಾದಾತ ಬಸವಣ್ಣ. ಎನ್ನ ನಿರಹಂಕಾರವೆಂಬ ಹಸ್ತಕ್ಕೆ ಶಿವಲಿಂಗ ವಾದಾತ ಬಸವಣ್ಣ. ಎನ್ನ ಸುಮನವೆಂಬ ಹಸ್ತಕ್ಕೆ ಜಂಗಮಲಿಂಗ ವಾದಾತ ಬಸವಣ್ಣ. ಎನ್ನ ಸುಜ್ಞಾನವೆಂಬ ಹಸ್ತಕ್ಕೆ ಪ್ರಸಾದಲಿಂಗ ವಾದಾತ ಬಸವಣ್ಣ. ಎನ್ನ ಸದ್ಭಾವವೆಂಬ ಹಸ್ತಕ್ಕೆ ಮಹಾಲಿಂಗ ವಾದಾತ ಬಸವಣ್ಣ. ಎನ್ನ ಆಧಾರ ಚಕ್ರದಲ್ಲಿ ಆಧಾರಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ಸ್ವಾಧಿಷ್ಠಾನ ಚಕ್ರದಲ್ಲಿ ಗುರು ಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ಮಣಿಪೂರಕ ಚಕ್ರ ದಲ್ಲಿ ಶಿವಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ಅನಾಹತ ಚಕ್ರದಲ್ಲಿ ಜಂಗಮಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ವಿಶುದ್ಧಿಚಕ್ರದಲ್ಲಿ ಪ್ರಸಾದಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ಆಜ್ಞಾ ಚಕ್ರದಲ್ಲಿ ಮಹಾಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ಬ್ರಹ್ಮರಂಧ್ರದಲ್ಲಿ ನಿಷ್ಕಲ ಲಿಂಗವಾಗಿ ಮೂರ್ತಿ ಗೊಂಡಾತ ಬಸವಣ್ಣ. ಎನ್ನ ಶಿಖಾಚಕ್ರದಲ್ಲಿ ಶೂನ್ಯಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ಪಶ್ಚಿಮ ಚಕ್ರದಲ್ಲಿ ನಿರಂಜನ ಲಿಂಗವಾಗಿ ಮೂರ್ತಿಗೊಂಡಾತ ಬಸವಣ್ಣ. ಎನ್ನ ವದನಕ್ಕೆ ಓಂಕಾರ ವಾದಾತ ಬಸವಣ್ಣ. ಎನ್ನ ಬಲದ ಬುಜಕ್ಕೆ ನಕಾರವಾದಾತ ಬಸ ವಣ್ಣ ಎನ್ನ ಎಡದ ಬುಜಕ್ಕೆ ಮಕಾರವಾದಾತ ಬಸವಣ್ಣ. ಎನ್ನ ಒಡಲಿಂಗೆ ಶಿಕಾರವಾದಾತ ಬಸವಣ್ಣ. ಎನ್ನ ಬಲದ ಪಾದಕ್ಕೆ ವಕಾ ರವಾದಾತ ಬಸವಣ್ಣ. ಎನ್ನ ಎಡದ ಪಾದಕ್ಕೆ ಯಕಾರವಾದಾತ ಬಸವಣ್ಣ. ಎನ್ನ ಆಪಾದಮಸ್ತಕ ಪರಿಯಂತರ ಮಂತ್ರರೂಪ ಸಂಬಂಧವಾದಾತ ಬಸವಣ್ಣ. ಎನ್ನ ನಾದಕ್ಕೆ ಅಕಾರವಾದಾತ ಬಸ ವಣ್ಣ. ಎನ್ನ ಬಿಂದುವಿಂಗೆ ಉಕಾರವಾದಾತ ಬಸವಣ್ಣ. ಎನ್ನ ಕಳೆಗೆ ಮಕಾರವಾದಾತ ಬಸವಣ್ಣ. ಎನ್ನ ರುಧಿರಕ್ಕೆ ನಕಾರವಾದಾತ ಬಸವಣ್ಣ. ಎನ್ನ ಮಾಂಸಕ್ಕೆ ಮಕಾರ ವಾದಾತ ಬಸವಣ್ಣ. ಎನ್ನ ಮೇಧಸ್ಸಿಂಗೆ ಶಿಕಾರವಾದಾತ ಬಸವಣ್ಣ. ಎನ್ನ ಅಸ್ಥಿಗೆ ವಕಾರವಾದಾತ ಬಸವಣ್ಣ. ಎನ್ನ ಮಜ್ಜೆಗೆ ಯಕಾರವಾದಾತ ಬಸವಣ್ಣ. ಎನ್ನ ಸರ್ವಾಂಗಕ್ಕೆ

ಓಂಕಾರವಾದಾತ ಬಸವಣ್ಣ ಇಂತು ಬಸವಣ್ಣನೇ ಪರಿಪೂರ್ಣನಾಗಿ ಬಸವಣ್ಣನೇ ಪ್ರಾಣವಾಗಿ ಬಸವಣ್ಣನೇ ಅಂಗವಾಗಿ ಬಸವಣ್ಣನೇ ಲಿಂಗವಾಗಿದ್ದ ಕಾರಣ ನಾನು ಬಸವಣ್ಣ ಬಸವಣ್ಣ ಬಸವಣ್ಣ ಎಂದು ಬಯಲಾದೆನು ಕಾಣಾ ಕಲಿದೇವರದೇವಾ.

---

**ವಿವರಣೆ:—** ಇಲ್ಲಿ ಪ್ರಾಣಲಿಂಗಿಯ ಆಚರಣೆಗಳು ಹೇಳಲ್ಪಟ್ಟಿವೆ. ಅವು ಕೇವಲ ಬಾಹ್ಯಕ್ರಿಯೆಗಳಲ್ಲ. ಅವುಗಳಿಂದ ಅಂಗದಲ್ಲಿ ಲಿಂಗವು ಅಳವಡಲಾರದು. ಪ್ರಾಣಲಿಂಗಿಯು ಸಮರಸಾಚರಣೆಯುಳ್ಳವನು ಎಂದು ವಚನಕಾರನು ಹೇಳುತ್ತಾನೆ.

## ವಚನ

೫೪. ಅಯ್ಯ ತನ್ನ ತಾನರಿಯದೆ ನಾವು ಏಕಾರತಿ, ದ್ವಿಯಾರತಿ, ಚತುರಾರತಿ, ಪಂಚಾರತಿ, ಷಡಾರತಿ, ಸಪ್ತಾರತಿ, ಅಷ್ಟಾರತಿ, ನವಾರತಿ, ದಶಾರತಿ, ಧೂಪಾರತಿ, ಕಡ್ಡಿಬತ್ತಿ, ಕರ್ಪುರಾರತಿ ಮೊದಲಾದ ಅಷ್ಟವಿಧಾರ್ಚನೆ ಶೋಡಶೋಪಚಾರದಿಂದರ್ಚಿಸುವ ಇಷ್ಟಲಿಂಗಪೂಜಕರೆಂದು ನುಡಿದು ಕೊಂಬ ಬದ್ಧಭವಿ ಶುದ್ಧ ಶೈವ ಮರುಳು ಮಾನವರ ಎನಗೊಮ್ಮೆ ತೋರದಿರಯ್ಯ. ಅದೇನು ಕಾರಣವೆಂದಡೆ ತನ್ನಂಗ ಮನ ಪ್ರಾಣೇಂದ್ರಿಯಂಗಳಲ್ಲಿ ಮುಸುಕಿದ ಅಜ್ಞಾನಾಂಧಕಾರದ ಅರುವತ್ತಾರು ಕೋಟಿ ಕರಣಂಗಳೆಂಬ ಕಂಚಿನಾರತಿಗಳ ಹಂಚು ಹರಿಗಡಿದು ಅಷ್ಟ ತನುಗಳ ಸುಟ್ಟುರುಹಿದ ಬೂದಿಯಿಂದ ಬೆಳಗಿ ಚಿಜ್ಜಲದಿಂದ ತೊಳೆದು ಕಳೆದುಳಿಯಲರಿಯದೆ ತನ್ನ ಹೃದಯ ಮಂದಿರದಲ್ಲಿ ನೆಲಸಿರುವ ಚಿದ್ಘನ ಚಿತ್ಪ್ರಕಾಶ ಚಿನ್ಮಯ ಶ್ರೀ ಗುರುಲಿಂಗ ಜಂಗಮಕ್ಕೆ ಮನೋಪ್ರಕೃತಿಯಳಿದು ಉನ್ಮನವೆಂಬ ಏಕಾರತಿ, ಲಿಂಗಾಂಗವೆಂಬುಭಯವಳಿದ ದ್ವಿಯಾರತಿ, ಮಲತ್ರಯಂಗಳಳಿದ ತ್ರಿಯಾರತಿ, ಚತುಃಕರಣಂಗಳಳಿದ ಚತುರಾರತಿ, ಪಂಚಭೂತ ಪಂಚವಾಯು ಪಂಚೇಂದ್ರಿಯ ಪಂಚಕ್ಲೇಶ ಪಂಚಮೂರ್ತಿಗಳ ಫಲಪದಂಗಳ ಕಳೆದುಳಿದ ಪಂಚಾರತಿ, ಷಡ್ವರ್ಗ, ಷಡೂರ್ಮೆ, ಷಡ್ಭ್ರಮೆ, ಷಡ್ಭಾವವಿಕಾರಂಗಳಳಿದ ಷಡಾರತಿ, ಸಪ್ತಧಾತು, ಸಪ್ತವ್ಯಸನಂಗಳಳಿದ ಸಪ್ತಾರತಿ, ಅಂತರಂಗದಷ್ಟಮದ ಬಹಿರಂಗದಷ್ಟಮದಂಗಳಳಿದ ಅಷ್ಟಾರತಿ, ನವ ಗ್ರಹಂಗಳಳಿದ ನವಾರತಿ, ದಶೇಂದ್ರಿಯ ದಶವಾಯುಗಳಳಿದ ದಶಾರತಿ,

ಅಹಂಕಾರಗಳಳಿದ ಕಡ್ಡಿಬತ್ತಿ, ತನುತ್ರಯ, ಜೀವತ್ರಯ, ಗುಣತ್ರಯ,
ಅವಸ್ಥಾತ್ರಯ, ಮನತ್ರಯ, ಆತ್ಮತ್ರಯ, ಭಾವತ್ರಯಂಗಳ ಕಳೆದುಳಿದ
ಕರ್ಪುರಾರತಿಯ ಬೆಳಗಿ ನಿರ್ವಯಲ ಪದವನೈದಲರಿಯದೆ ಬಹಿರಂಗದ
ಭಿನ್ನಕ್ರಿ ಭಿನ್ನಜ್ಞಾನ ಭಿನ್ನಭಕ್ತಿ ಮುಂದುಗೊಂಡು ಗಡ್ಡ, ಜಡೆ, ಮುಡಿ
ಗಳ ಬಿಟ್ಟುಕೊಂಡು ಲಾಂಛನವ ಹೊದ್ದುಕೊಂಡು, ಕಾಂಚನಕ್ಕೆ
ಕೈಯ್ಯೊಡ್ಡುತ ಕಂಚಗಾರನಂತೆ ನಾನಾ ಜೀನಸಿನ ಕಂಚ ನೆರಹಿ ಹರವಿ
ಕೊಂಡು ಪರಮ ಶಿವಲಿಂಗಪೂಜಕರೆಂದು ಬೊಗುಳುವ ಪಂಚಮಹಾ
ಪಾತಕರಿಗೆ ಕಿರಾತರು ಮೆಚ್ಚುವರಲ್ಲದೆ, ಪುರಾತರು ಮೆಚ್ಚುವರೇ?
ಬದ್ಧಭವಿ ಅವಶೈವರು ಮೆಚ್ಚುವರಲ್ಲದೆ ಶುದ್ಧ ಸುಶೀಲ ನಿರಾಭಾರಿ
ವೀರಶೈವರು ಮೆಚ್ಚುವರೇ? ಅಜ್ಞಾನಿಗಳು ಮೆಚ್ಚುವರಲ್ಲದೆ ಸುಜ್ಞಾನಿ
ಗಳು ಮೆಚ್ಚರು. ವ್ಯಾಪಾರಿಗಳು ಮೆಚ್ಚುವರಲ್ಲದೆ ನಿರ್ವ್ಯಾಪಾರಿಗಳು
ಮೆಚ್ಚರು. ಭಿನ್ನ ಕ್ರಿಯಸ್ಥರು ಮೆಚ್ಚುವರಲ್ಲದೆ ಅಭಿನ್ನ ಕ್ರಿಯಸ್ಥರು
ಮೆಚ್ಚರು. ಇಂತಪ್ಪ ಲಿಂಗಾಂಗ ಸಮರಸದ ನಿರ್ಗುಣ ಪೂಜೆಯನೆಸಗ
ಲರಿಯದ ಭಿನ್ನಜ್ಞಾನ ಭಿನ್ನಪೂಜೆಯನೆಸಗುವ ಮರುಳುಗಳಿಗೆ ಅರು
ಮೆಚ್ಚುವರು ಹುಚ್ಚ ಮರುಳುಗಳಿರಾ ಸುಮ್ಮನಿರಿ ಎಂದಾತ ನಿಮ್ಮ
ಶರಣ ಕಲಿದೇವರ ದೇವಾ.

# ಶರಣಸ್ಥಲ

ಶರಣನು ಜ್ಞಾನಿಯಾಗಿರುವನು. ಜ್ಞಾನಿಯಾಗಿದ್ದು ಲೋಕದ ಗುಣಗಳನ್ನು ಹೊದ್ದಬಾರದು. ಜ್ಞಾನಿಯಾದವನಲ್ಲಿ ಅನೇಕ ದುರ್ಗುಣಗಳು ಬರುವದುಂಟು. ಅಹಂಕಾರ ಮಮಕಾರ ಕಾಮಕ್ರೋಧಾದಿಗಳು ಹೆಚ್ಚುವದುಂಟು. ಅವುಗಳಿಂದ ಅವನು ದೂರಿರಬೇಕು. ಹೀಗೆ ಆಚರಿಸುತ್ತ ಶರಣನು ಉಚ್ಚ ಸ್ಥಿತಿಯನ್ನೈದುವನು.

**ವಿವರಣೆ:—** ಸರ್ಪ, ಇರುಹೆ, ಕೋಳಿ, ಕಾಗೆಗಳಿಗೆ ಒಂದೊಂದು ವಿಶೇಷ ತರದ ಜ್ಞಾನವಿದೆ. ಮನುಷ್ಯನಾದವನು ಜ್ಞಾನಿಯಾಗಿರತಕ್ಕದ್ದು. ಇಲ್ಲದಿದ್ದರೆ ಇಂಥ ಕೀಳು ಜೀವಿಗಳಿಗಿಂತಲೂ ಕೀಳನೆನಿಸಿಕೊಳ್ಳುವನು.

## ವಚನ

೫೫. ವಾಯುಗುಣವ ಸರ್ಪ ಬಲ್ಲುದು. ಮಧುರ ಗುಣವ ನಿರುಹೆ ಬಲ್ಲದು. ಗೋತ್ರದ ಗುಣವ ಕಾಗೆ ಬಲ್ಲುದು. ವೇಳೆಯ ಗುಣವ ಕೋಳಿ ಬಲ್ಲುದು ಇದು ಕಾರಣ ಮನುಷ್ಯ ಜನ್ಮದಲ್ಲಿ ಬಂದು ಶಿವ ಜ್ಞಾನವನರಿಯದಿದ್ದರೆ ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರದೇವಾ.

---

**ವಿವರಣೆ:—** ವಚನಕಾರನು ಶರಣನ ನಡತೆಗಳನ್ನು ಇಲ್ಲಿ ವರ್ಣಿಸುತ್ತಾನೆ. ಶರಣನು ಸುಖದುಃಖಗಳಿಗೆ ಮೀರಿದವನಾಗಿರತಕ್ಕದ್ದು.

## ವಚನ

೫೬. ಲೋಕಾಚಾರಿಯಲ್ಲ ಶರಣ. ಸ್ತುತಿನಿಂದೆ ಇಲ್ಲದ ಶರಣ. ಶತ್ರುಮಿತ್ರರಿಲ್ಲದ ಶರಣ. ಸಂಪತ್ತು ಆಪತ್ತುಗಳಿಲ್ಲದ ಶರಣ. ಸುಳಿದು ಸೂತಕಿಯಲ್ಲ. ಎಂದೂ ಬದ್ಧನಲ್ಲ, ಕಲಿದೇವಯ್ಯಾ ನಿಮ್ಮ ಶರಣ.

---

**ವಿವರಣೆ:—** ಇಲ್ಲಿ ಹಿಂದಿನ ವಚನದ ಸಾರವನ್ನು ಅನೇಕ ಉದಾಹರಣೆಗಳ ಮೂಲಕ ಹೆಚ್ಚಿಗೆ ಸ್ಪಷ್ಟೀಕರಣ ಮಾಡಿದ್ದಾನೆ.

# ಹರಿಹರನ ರಗಳೆಗಳು.

## ಭಾಗ ೭.

---

## ಅತಿಭಕ್ತನ ರಗಳೆ.

---

ಕಂದ॥ ನುತಹರಿವಿರಿಂಚಿವಂದ್ಯಂ
ವಿತತ ಯಶೋರಾಶಿಯೆನಿಪ ಪಂಪಾನಾಥಂ।
ಅತಿಭಕ್ತರ ಭಕ್ತಿಗೆ ತಾ
ನತಿಶಯ ವರವಿತ್ತು ಮೆರೆವನೀ ಧರೆಯರಿಯಲು॥

### ರಗಳೆ.

ಶ್ರೀಕಾವೇರೀ ನದಿಯಿಂದೊಪ್ಪುವ
ಜೇಕಾದುದನೀವುತಲಿಂತೊಪ್ಪುವ
ನಾನಾ ಬೆಳೆಗಳ ಸಂಭ್ರಮದಿಂದಂ
ಏನೆಂಬೇಂ ಕದಳಿಯ ಬಹು ತೋಂಟವ
ರಸದಾಳಿಯ ಕಬ್ಬಿನ ಬಹು ಬೆಳೆಯಿಂ
ಕುಸುಮದ ತೋಂಟದ ಹಬ್ಬಿನ ಬೆಳೆಯಿಂ
ಎಲ್ಲಾ ಎಡೆಯೊಳು ಶಿವಭವನಂಗಳು
ಬಲ್ಲಿದ ಧೊರೆಗಳ ಘನಮಾಡಂಗಳು

ಇಂತೊಪ್ಪುವ ಪಟ್ಟಣಕಧಿನಾಥನು
ಕಂತುಹರನ ಸೇವೆಯುಲತ್ಯಧಿಕನು
ಭಾನುಕುಲದ ಚೋಳಂ ಎಸೆದಿರ್ಪಂ
ಮಾನಿತ ಜನದಿಂ ತಾನೊಲಿದಿರ್ಪಂ

ಅದರೊಳಗೊಂದು ಪುರಂ ರಂಜಿಸುವುದು
ಸದಮಳಸುಜ್ಞಾನಿಗಳಿಂದೆಸೆದುದು
ಮಣಿಗಳ ಮಧ್ಯದ ಚಿಂತಾಮಣಿಯೆನೆ
ಕಣಿಗಳ ನಡುವಣ ಪರುಷದ ಕಣಿಯೆನೆ
ತರುಗಳ ಮಧ್ಯದ ಸುರತರುವಂದದಿ
ಗಿರಿಗಳ ಮಧ್ಯದ ಮೇರುವಿನಂದದಿ
ಏನೆಂಬೆನದಂ ಪೊಗಳಲ್ಬಾರದು
ಮಾನವ ರತ್ನಂಗಳಿಗದು ತೀರದು
ಬೇಡಿದವರ್ಗಂ ಬೇಡಿದನೀವುದು
ನಾಡೆ ತುರಗಕರಿರತ್ನವನೀವುದು
ಸೊಂಪಿನ ಗುಣ್ಪನದಾವಂ ಬಲ್ಲಂ
ಇಂಪಿನ ಕಡೆಯನದಾವಂ ಬಲ್ಲಂ
ವರಲಕ್ಷ್ಮಿಗೆ ತವರ್ಮನೆ ಎನಿಸಿರ್ಪುದು
ಚರತದಿನಾಪುರ ಸಾಗರವೆನಿಪುದು
ಪದಿನೆಂಟುಂ ದೇಶದ ವಿಭವಂಗಳ
ನೊಡವಿಸಿ ತನ್ನೊಳ್ತೋರಿ ಜಗಂಗಳ
ಬಗೆಯುದು ಧರೆಗದ್ಭುತದರ್ಪಣವೆನೆ
ಮಿಗೆ ಶೋಭಿಸುವುದುಚಿತಮಿದೆಂದೆನೆ

ಅದರ ಸಮೀಪದೊಳೊಂದುಂ ಹೊಳೆಯೊಳು
ಸದಮಳ ಮತ್ಸ್ಯಗಣ ವೈಭವದೊಳು
ಮೆರೆದಿರ್ಪುದು ಕೈವರ್ತರ ಪುರವದು
ಉರೆ ಸೊಂಪಿಂದಂ ಘನತೇಜಕ್ಕದು
ಬಲೆಗಾರರು ತಾವೆಲ್ಲಂ ಕೂಡುತ
ಜಲಚರವೆಲ್ಲಂ ತಂದುಂ ಮಾರುತ
ದೊಡ್ಡಹ ತೋರಹ ಮೀನ್ಗಳು ಸಿಕ್ಕಲು
ಅಡ್ಡ ಹೊರೆಗಳಂ ಹೊತ್ತು ಬರುತ್ತಲು
ಮೀನ್ಗಳ ಮಾರುವ ಪಸರಕೆ ಹೋಗಲು
ಪೊಂಗಳನೀಸಿಕೊಳುತ್ತಂ ಕುಡಲು
ಇಂತು ಮೀನನುರೆ ಮಾರುತ್ತವರುಂ

ಸಂತೋಷದಿ ಧನ ಹೆಚ್ಚುತ್ತಿರಲು
ಧೀವರರೆಲ್ಲಂ ಬೀಸಿದ ಬಲೆಯೊಳು
ಪವಣ್ಣಿಪೆ ಬಲು ಮತ್ಸ್ಯಂ ಬಲೆಯೊಳು
ಸಿಕ್ಕಿ ಬರಲು ಕೊಬ್ಬಿರಿದಾಡುತ್ತಿರೆ
ತಕ್ಕ ತಕ್ಕ ಬೆಲೆ ಹೆಚ್ಚಿ ಬರುತ್ತಿರೆ

ಆವರೊಳಗೋರ್ವಂ ಸತ್ಯಂ ನಿತ್ಯಂ
ಹವಣಿಸಬಾರದ ಮುಕ್ತಂ ಯುಕ್ತಂ
ಭೂಮಿ ಮುಸುಂಕಿದ ನಿಧನದ ತೆರದಿಂ
ತಾಮಸ ಮುಸುಕಿದ ಸತ್ಯದ ತೆರದಿಂ
ಮೆರವುದೆನಲ್ಕಾ ಪುರದೊಳಗೋರ್ವಂ
ಕರಿಕಂಠನ ಪದಭಕ್ತನದೋರ್ವಂ
ಶಿವಪೂಜಾಪರನತಿಗುಣಯುಕ್ತಂ
ಭವಭಯ ರಹಿತಂ ಕಾಲವಿಮುಕ್ತಂ
ಅತಿಭಕ್ತಂ ಪೆಸರಿಂದಾತಂ ಶಿವಶಿವ
ನುತ ದಾಸಕುಲಕ್ಕಧಿಕಂ ಶಿವಶಿವ
ಜಾತಿಗಾರರಂ ಕೂಡಿಕೊಳುತ್ತಂ
ಲೀಲೆಯಿಂದ ಮೀನ್ಗಳ ತೆಗೆವುತ್ತಂ
ಆ ಮೀನಂ ಮಾರಿದ ಬಹು ಧನದಿಂ
ಸೋಮಧರನ ಭಕ್ತರನತಿ ಮುದದಿಂ
ತೃಪ್ತಿಬಡಿಸುತಂ ಸುಖದಿಂದಿರುತಂ
ಅಷ್ಟಮೂರ್ತಿ ಶಿವನಂ ಪೂಜಿಸುತಂ
ಮೊದಲೊಳು ಸಿಕ್ಕಿದ ಮೀನಂ ಬಿಡುವಂ
ಮದನಹರಗೆ ಪ್ರಿಯಾರ್ಥದಿ ಬಿಡುವಂ
ಭೇದಮಿಲ್ಲದರ್ಥಿಯೊಳು ಬಿಡುತ್ತಂ
ಉಳಿದಧಿಕಾ ಮೀನಂ ಮಾರುತ್ತಂ
ಮಣಿಮಯಮಪ್ಪಾ ಮೀನಾದೊಡೆಯುದ
ಎಣಿಸದೆ ಬಿಡುವಂ ಭರ್ಗಂಗೆಂದದ
ಇಂತು ದೃಢವ್ರತನಾಗುತಲಿರುತಿರೆ

ಮುಂತೆ ಮೀನ್ಗಳುಂ ಸಿಕ್ಕದೆ ಇರುತಿರೆ
ಪಲವು ದಿನಂ ಪೋಗಲ್ಕೊಂದು ದಿನಂ
ಫಲದತಿಭಕ್ತನ ಮುಂದೊಂದು ದಿನಂ
ತೋರವಪ್ಪ ಮೀನಾಗಲು ಸಿಕ್ಕಲು
ಚಾರರೆಲ್ಲರು ಮಿಗೆ ನೋಡಿಯು ಪೊಗಳಲು
ಭರ್ಗಂಗರ್ಪಿತವೆಂದದ ಬಿಡುತಿರೆ
ದುರ್ಗತಿ ದೂರಂ ಮೀನಂ ಬಿಡುತಿರೆ
ಮೀಸಿನ ಮಾರಾಟಂ ಪೆರಪಿಂಗಲು
ಮೀನಿನ ಮಾರಿದ ವಿಭವಂ ಪಿಂಗಲು
ತನ್ನ ಕುಟುಂಬವದೆಲ್ಲಂ ಬೇಗನೆ
ಮುನ್ನವೆ ಬಡವಾಗುತ್ತಿರಲಾಗಂ
ಇಂತು ಪಸುವಿನಿಂ ಸತಿಸಿತ ಮಕ್ಕಳು
ಚಿಂತಿಸುತೆಲ್ಲರು ಏಳುಂ ದಿನದೊಳು
ಪಸಿವಂ ತಾಳದೆ ಮಕ್ಕಳು ಅಳುತಿರೆ
ಸಸು ನಗೆ ಪೊಳೆಯಲು ಧೈರ್ಯದೊಳಿರುತಿರೆ
ಮತ್ತೆ ಬೀಸಲುಂ ಸಿಕ್ಕದೆ ಇರುತಿರೆ
ಚಿತ್ತದೊಳಗೆ ಧೈರ್ಯಂ ತುಂಬುತ್ತಿರೆ
ಇಂತು ಮೀನ್ಗಳುಂ ನಿಚ್ಚಂ ಸಿಕ್ಕದೆ
ಸಂತತ ಶಿವಭಕ್ತಂ ತಾಂ ಕೊಂಕದೆ
ಈ ತೆರದಿಂ ಪಲಕೆಲವು ದಿನವಿರಲು

ಭೂತೇಶನು ಭಕ್ತನ ಮನ ನೋಡಲು
ಮತ್ತೊಂದು ದಿನಂ ಬಲೆಯುಂ ತರುತಂ
ಚಿತ್ತದಿ ಶಂಕರ ಶಶಿಧರ ಎನುತಂ
ಹೊಳೆಯ ತೀರದಲಿ ಬಲೆಯುಂ ಬೀಸಲು
ನಲಿನಲಿವುತ್ತಂ ನೇಣಂ ಸೆಳೆಯಲು
ನವರತ್ನದಿ ನಿರ್ಮಿತವಾಗೊಪ್ಪುವ
ನವನವಕಾಂತಿಗಳಿಂ ಮಡಿಯಾಗಿಹ
ಈರೇಳ್ಭುವನದ ಬೆಲೆ ಎಂದೆನಿಸುವ
ಚಾರು ಮೇರು ತಟ ಸನ್ನಿಭವೆನಿಸುವ

ಮೀನನೊಂದನೀಶಂ ಕೆಡವುತ್ತಿರೆ
ತಾನೆ ತೆಗೆಯಲ್ಕಾರದಿರುತ್ತಿರೆ
ಪಲಕೆಲ ಕೈವರ್ತಕರನುರೆ ನೋಡುತೆ
ಬಲುಪಿಂದದನುಂ ತಾನುರೆ ತೆಗೆವುತೆ
ಇರಲೊಯ್ಯನೆ ತಡಿಯೆಡೆಯೊಳ್ಪರಿದಿರೆ
ಪರ ಕಾಯದ ಬೆಳಗುಗಳಿಂದಿರುತಿರೆ
ಅರ್ಣದ ತಟಘನ! ಮತ್ಸ್ಯವದಾಗಳು
ವರ್ಣವಿಚಿತ್ರದಿ ಒಪ್ಪಲ್ಕಾಗಳು
ದಿನಮಣಿ ಉದಯಿಸಿದಂದದೊಳಿರುತಿರೆ

ಜನವೆಲ್ಲಂ ಬೆರಗಾಗುತ್ತಿರುತಿರೆ
ಭೀಮನಿಗರ್ಪಿತವೆಂದದನಾಗಳು
ನೇಮವಿದೆನುತಂ ಬಿಟ್ಟನು ಆಗಳು
ನೋಡೆಲ್ಲರು ಬಿಡಬಹುದೇ ಶಿವಶಿವ
ಆಡಂಬರದಿಂದೊಪ್ಪುವ ಮತ್ಸ್ಯವ
ಎನೆ ಮನದೊಳಗಂ ಬಯಕೆಯದಿಲ್ಲದೆ
ಘನಮಹಿಮಗೆ ಪ್ರೀಯಾರ್ಥಮಿದೆಂದೆ
ಕೋಡದೆ ಕೊಂಕದೆಯುಳಲದೆ ಬಳಲದೆ
ಬಾಡದೆ ಮನದೊಳಗಾಸೆಯೊಳಾಳದೆ
ಮತ್ತಂ ಬಲೆಯಂ ಬೀಸಿಯೆ ತೆಗೆಯಲು
ಚಿತ್ರದ ಹೊಳಪಿನ ಮೀನುಂ ಬರಲುಂ
ಮೊದಲು ಶಿವಪ್ರಿಯವೆಂದೇ ಬಿಟ್ಟೆನು
ಅದು ಬಂದುದು ಇಂತೇಕಿದನೊಲ್ಲೆನು
ಆ ಕಡೆಯಿನ ಹೊಳೆಯಂ ತಾನೊಲ್ಲದೆ
ಜೋಕೆಯ ಕುಂದದೆ ಮನದೊಳು ನೋಯದೆ
ಇನ್ನುಂ ಬೀಸುವೆನಿಂತೀ ದೆಸೆಯೊಳು
ಹೊನ್ನಿನ ಬಣ್ಣದ ಮೀನುಂ ಬರಲುಂ
ಕಂಡು ಮನದೊಳುಂ ನೋವುತ ಸುಯ್ಯುತ
ಖಂಡ ಪರಶುವಿನ ಮೀನುಂ ಬಂದುದು
ಎಂದದನೊಲ್ಲದೆ ತಿರುಗಿಯೆ ಬಿಟ್ಟಂ

ಮುಂದುವರಿವ ಮನವನು ಇಂಬಿಟ್ಟಂ
ಮತ್ತೆ ಮತ್ತೆ ಬಲೆಯಂ ಬೀಸುತ್ತಿರೆ
ಸುತ್ತೆ ಹೊಳೆದುಯಾ ಮೀನೇ ಬರುತಿರೆ
ಬಂದರೆ ಬಿಡುವಂ ಹಾಕಲು ಬರುವುದು
ಸಂಜೆ ಪರಿಯಂತಂ ಬಿಟ್ಟರೆ ಬರುವುದು

ಮರುದಿನದುದಯದಿ ಹೊಳೆಗೈತಂದಂ
ಕರಿಕಂಠನ ನೆನಹಿಲಿ ಮನ ಸಂದಂ
ಬಲೆಯಂ ಬೀಸುತ ಗಮ್ಮನೆ ತೆಗೆಯಲು
ಹೊಳೆ ಹೊಳೆವಾ ಪಾಠೀನವೆ ಬರಲುಂ
ನೋಡುತ ಮನದೊಳು ಕೌತುಕವಾಗುತೆ
ಕೂಡೆ ಸುವರ್ಣದ ಮತ್ಸ್ಯಂ ಬರುತೆ

ಇನ್ನೊಮ್ಮೆಯು ತಾ ಬೀಸಿ ನೋಡಿದರೆ
ಮುನ್ನಿನ ಮತ್ಸ್ಯವೆ ಬಂದಿತ್ತಾದರೆ
ಎನ್ನ ಕೈಯ್ಯುಮಂ ಛೇದಿಸಿಕೊಂಬೆನು
ಇನ್ನು ಬಲೆಯನು ಬೀಸದ ಭಾಷೆಯು
ಎನುತ ಬಲೆಯನುಂ ಬೀಸಿಯೆ ತೆಗೆಯಲು

ಮನಸಿಜಹರನಾ ಬಲೆಯೊಳ್ಸಿಲುಕಲು
ದಶಭುಜ ಪಂಚಮುಖಂ ಫಣಿಕುಂಡಲ
ಎಸೆವ ಗಿರಿಜೆ ವೃಷಭೇಶ್ವರ ಸಹಿತಂ
ಭಕ್ತನ ಭಕ್ತಿಯ ಪಾಶದಿ ಸಿಲ್ಕುತ
ಅತ್ಯನುಪಮನಾ ಭಕ್ತಿಗೆ ಸಿಲ್ಕುತ
ನಿಜಂ ರೂಪಂದೋರಿದನಾ ಕ್ಷಣದೊಳು
ಅಜಹರಿ ಕಾಣದಭೇದ್ಯಂ ಧರೆಯೊಳು
ಸುರರು ಪುಷ್ಪವೃಷ್ಟಿಯ ನೆರೆ ಕರೆದರು
ವರ ಮುನಿರುದ್ರಾದಿಗಳುಂ ಬಂದರು
ದೇವದುಂದುಭಿ ಧ್ವನಿಗಳ್ಮೊಳಗಲು
ಭವ್ಯಗಣಂಗಳು ಮನದೊಳ್ಪೊಗಳಲು

ಅತಿಭಕ್ತಂ ಶಿವನಂ ಕಾಣುತ್ತಂ
ನುತಿಸುತೆ ಧರೆಯೊಳು ಸೈಗೆಡೆವುತ್ತಂ
ಪೊಡಮಟ್ಟೀಶನ ಕೆಲದೊಳ್ನಿಂದಿರೆ
ಮೃಡನೊಲವಿಂ ಸಂತಸದೋಳೊಂದಿರೆ
ದಿವ್ಯ ವಿಮಾನವು ಥಳಥಳಿಸುತ ಬರೆ
ಸೇವ್ಯಭಕ್ತನಂತದರೊಳಗಿರಿಸುತ
ರಜತಗಿರಿಗೆ ತಳೆದಾರ್ ಸ್ಥಾನಿಕೆಯೊಳ್
ಗಜಚರ್ಮಾಂಬರ ಘನತರ ಕೃಪೆಯೊಳ್
ನಂದೀಶ್ವರನೊಡನುಂ ಪೇಳುತ್ತಂ
ನಂದ ಗಣಂಗಳ ಕೂಡುಸುರುತ್ತಂ
ಎನ್ನರ್ಥಿಯನುಂ ಸಲಿಸಿದರುಂಟೇ
ಸ್ವರ್ಗದ ಮುತ್ಸ್ಯವ ಬಿಟ್ಟವರುಂಟೇ
ಎಂದು ಪೊಗಳುತಂ ಗಣಪದವೀವುತ
ಚಂದದಿ ಮುಂಡಾಡುತ ಕೊಂಡಾಡುತ
ಮೆರೆದಿರ್ದಂ ಪಂಪಾಪುರದರಸಂ

ಕಂದ॥ ಖತಿಯಿಲ್ಲದ ಅತಿಭಕ್ತನು ।
ವಿತತೋನ್ನತಸ್ವರ್ಗಮುಯುದ ಮೀನಂ ಬಿಡುತಿರೆ ॥
ಪ್ರತಿರಹಿತಂ ಮೆಚ್ಚುತ್ತಂ ।
ಅತಿಶಯುದ ಗಣಪದವನಿತ್ತ ಹಂಪೆಯ ದೇವಂ ॥

# ಮಲುಹಣನ ರಗಳೆ.

ಕಂದ॥ ಧಾರುಣಿಯೊಳ್ಮಲುಹಣನಂ
ಕಾರುಣ್ಯಾಕರನುದಾರವಾರುಧಿ ಮೆರೆದಂ ।
ಗೌರೀಕುಚಕುಂಕುಮಲಸಿ
ತೋರಸ್ಥಲನೆಮ್ಮ ಹಂಪೆಯ ವಿರೂಪಾಕ್ಷಂ ॥

## ರಗಳೆ.

ಶ್ರೀವಸುಮತೀವದನಮುಕುರಮೆಂದೆನಿಸಿರ್ಪ
ಪಾವನಂ ಸಕಲ ದೇಶಕ್ಕೆ ತಾನೆನಿಸಿರ್ಪ
ಶಾರದಾದೇವಿ ಪ್ರಸನ್ನೆಯಾಗಿರುತಿರ್ಪ
ಚಾರುತರ ನೂತನಕಳಾವಿದರೊಳಿರುತಿರ್ಪ
ಊರೂರ್ಗೆ ತೀವಿದ ತಟಾಕನಿಕರಂಗಳಿಂ
ಊರೂರ್ಗೆ ಕಿಕ್ಕಿರಿದು ಕೊರ್ವಿದ ಬನಂಗಳಿಂ
ಬನದೊಳಗೆ ಸುಳಿತರ್ಪ ಕಸ್ತುರಿಮೃಗಂಗಳಿಂ
ಬಿನದದಿಂ ಪರಿತರ್ಪ ಚಮರೀಮೃಗಂಗಳಿಂ
ದೇವಮಾತೃಕ ನದೀಮಾತೃಕದ ಬೆಳೆಗಳಿಂ
ದೇವನದಿಯಂದದಿಂ ಪರಿವರಿವ ನದಿಗಳಿಂ
ನಗರಿನಗರಿಯೊಳೆಸವ ದೇವಾಲಯಂಗಳಿಂ
ಮುಗಿಲನಳ್ಕಿರಿವ ಘನಮಾಡ ಕೂಟಂಗಳಿಂ

ಎಸೆವ ಕಾಶ್ಮೀರದೇಶಂ ರಂಜಿಸುವುದಿಳೆಗೆ
ಹೊಸ ಹೊಸ ಬನಂ ಪಟ್ಟಣಂಗಳಿಂದುರ್ವರೆಗೆ
ಬಂಧನಂ ಪೂಮಾಲೆಯೊಳಗಲ್ಲದಿಲ್ಲಲ್ಲಿ
ಅಂಧತ್ವ ಕಳ್ತಲೆಯೊಳಲ್ಲದಿಲ್ಲಲ್ಲಿ
ಕೊಯ್ವ ನುಡಿ ಕೆಯ್ಗಳೊಳ್ಮಾನಿನಿಯರಳಕದೊಳ್
ಬಯ್ವ ನುಡಿ ಗಿಳಿಗಳೊಳ್ನಲ್ಲರೊಳ್ ಸರಸದೊಳ್

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು
ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿ-
ಸಿದರು. ಮತ್ತು ಅವರು ವಿಜಾಪುರವಲ್ಲಿ ತಮ್ಮ
೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿವರು.

# "ಶರಣ ಸಾಹಿತ್ಯ"

[ಮಾಸಪತ್ರಿಕೆ]

---

**ಸಂಪಾದಕ:—** ಕೀರ್ತನಕೇಸರಿ **ಬಿ. ಶಿವಮೂರ್ತಿ ಶಾಸ್ತ್ರಿ,**

ಹುಲಕುಂಟಿಮಠ ತುಮಕೂರು

**ಮಹಾಜನರಲ್ಲಿ ವಿಜ್ಞಾಪನೆಗಳು—**

ಹಿಂದೂಧರ್ಮ, ಕನ್ನಡ ಸಾಹಿತ್ಯ, ಲಿಂಗವಂತ ಸಂಸ್ಕೃತಿಗಳ ಉನ್ನತಿಗಾಗಿ ಪ್ರಯತ್ನಿಸುವದೇ ಈ ಪತ್ರಿಕೆಯ ಮುಖ್ಯೋದ್ದೇಶ. ಪ್ರಾಚೀನ ಕನ್ನಡ, ಹಾಗೂ ಸಂಸ್ಕೃತ ಗ್ರಂಥಗಳ ಪ್ರಕಟನೆಯನ್ನೂ, "ಶರಣಸಾಹಿತ್ಯ ಗ್ರಂಥಮಾಲಾ" ಎಂಬ ಹೆಸರಿನಿಂದ ನಡೆಸಲಾಗುತ್ತದೆ. ಇಂತಹ ಉದಾತ್ತ ಧ್ಯೇಯದಿಂದ ಹೊರಟ ಪತ್ರಿಕೆಯನ್ನು ಸಂರಕ್ಷಿಸುವ ಭಾರ ನಮ್ಮ ನಾಡಿನ ಹಾಗೂ ಸಮಾಜದ ಅಭಿಮಾನಶಾಲಿಗಳನ್ನವಲಂಬಿಸಿದೆ.

**ಪೋಷಕರು**—ಒಟ್ಟಾಗಿ ೧೦೦ ರೂ. ಕೊಟ್ಟವರು. ಇವರಿಗೆ ಶರಣ ಸಾಹಿತ್ಯ ಮಾಸಿಕವನ್ನೂ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಕೃತಜ್ಞತೆಯಿಂದ ಅರ್ಪಿಸಲಾಗುತ್ತದೆ.

**ಸಹಾಯಕರು**— ಒಟ್ಟಾಗಿ ೫೦ ರೂ. ಕೊಟ್ಟವರು. ಇವರಿಗೆ ಮಾಸಿಕವು ಸದಾ ಉಚಿತವಾಗಿ ಸಮರ್ಪಿಸಲ್ಪಡುತ್ತದೆ.

**ಉಪಕಾರಿಗಳು**— ವರ್ಷಕ್ಕೆ ೧೦ ರೂ. ಕೊಡತಕ್ಕವರು.

**ಹಿತಚಿಂತಕರು**— ವರ್ಷಕ್ಕೆ ೫ ರೂ. ಕೊಡತಕ್ಕವರು.

**ಚಂದಾದಾರರು**— ವರ್ಷಕ್ಕೆ ೩-೮-೦ ಕೊಡತಕ್ಕವರು, ಶರಣ ಸಾಹಿತ್ಯ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಸಹಾಯಕ ಮತ್ತು ಉಪಕಾರಿಗಳಿಗೆ ಅರ್ಧ ಬೆಲೆಗೂ ಹಿತಚಿಂತಕರ ಹಾಗೂ ಚಂದಾದಾರರಿಗೆ ಮುಕ್ಕಾಲು ಬೆಲೆಗೂ ಕೊಡಲಾಗುತ್ತದೆ.

ದೇಶ, ಧರ್ಮ, ಭಾಷೆ, ಸಮಾಜ, ಇವುಗಳ ಉನ್ನತಿಯನ್ನು ಬಯಸುವವರೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹಕೊಡಬೇಕೆಂದು ವಿನಂತಿ.

**ಶಿವಂಭೂಯಾತ್**

ಇಂತು

ಕನ್ನಡಿಗರ ಕಿಂಕರ.

**ಬಿ. ಶಿವಮೂರ್ತಿ ಶಾಸ್ತ್ರಿ,**

ಶರಣಸಾಹಿತ್ಯ ಕಾರ್ಯಾಲಯ

ಬೆಂಗಳೂರು ಸಿಟಿ

ಶ್ರೀ




ಸಂಪುಟ ೧೩ ]　　ಜಾನೇವರಿ ೧೯೩೯.　　[ಸಂಚಿಕೆ ೪

## ವಿಷಯಾನುಕ್ರಮಣಿಕೆ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

---

ರಾ॥ ಸಾ॥ **ಫ. ಗು. ಹಳಕಟ್ಟಿಯವರು** ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ.

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

# ಶಿವಾನುಭವ.

ವರ್ಷ ೧೩] ಜನವರಿ ೧೯೩೯ [ಸಂಚಿಕೆ ೪

## ಹರಿಹರ ಕವಿಯು ಚಿತ್ರಿಸಿದ

## ಬಸವರಾಜದೇವ. §

(ಲೇಖಕ:— ಎಸ್. ಎಸ್. ಮಾಳವಾಡ ಎಮ್. ಎ.
ಕರ್ನಾಟಕ ಕಾಲೇಜ ಧಾರವಾಡ.)

ಶ್ರೀಮೇರುಗಿರಿಯ ಮಧ್ಯದೊಳಗೆ ಅಪ್ರತಿಮ ಆನಂದ ಮೂರ್ತಿಯೂ ಸರ್ಪಭೂಷಣನೂ ಆದ ಶಿವನು ಕುಳಿತಿದ್ದನು. ಚಂದ್ರಕಳೆಯ ಅರಸನಾದ ಆತನು ಕೆಂಜೆಡೆ ಪುಲಿಚರ್ಮಗಳಿಂದ ರಂಜಿಸುತ್ತಿದ್ದನು. ಆತನ ವಾಮ ಭಾಗದಲ್ಲಿ ಗಿರಿಜೆಯು ನೂತನ ವಿಲಾಸದಿಂದ ಒಪ್ಪುತ್ತಿದ್ದಳು. ಹೀಗೆ ಸರ್ವೇಶನು ಹರುಷದಿಂದ ಒಪ್ಪುತ್ತಿರಲು ಸೌಮ್ಯತೆಯನ್ನು ಪಡೆದ ಕೋಟಿಸೂರ್ಯ ಪ್ರಭೆಯು ಅಲ್ಲಿ ಹಬ್ಬಿತ್ತು. ಸಿರಿ ಸರಸತಿಯರು ಒಲಿದು ಚಾಮರವಿಕ್ಕುತ್ತಿದ್ದರು. ಇಂದ್ರಾಣಿಯರು ಚೌರಿಯನ್ನು ಬೀಸುತ್ತಿದ್ದರು. ರುದ್ರ ಕನ್ನೆಯರು ಸಿಂಗರದಿಂದ ಕುಳಿತಿದ್ದರು. ಉದ್ದಂಡ ವೀರಭದ್ರನು ಗಣಪತಿಯು ಷಣ್ಮುಖನು ಕೆಲಬಲದಲ್ಲಿದ್ದರು. ಸುತ್ತಲೂ ಮನುಗಳು ಮುನಿಗಳು ಸಿದ್ಧವಿದ್ಯಾದಿಗಳು ಗಣಸಮೂಹ ಬ್ರಹ್ಮಾದಿ ದೇವತೆಗಳು ಶೋಭಿಸುತ್ತಿದ್ದರು. ಆ ಸಮೂಹದಲ್ಲಿ ವೃಷಭಮುಖನೂ ಇದ್ದನು. ಆಗ ಕಿನ್ನರರು ನವರಸದಿ ಪಾಡಿದರು. ಭೃಂಗೀಶನು ಹೊಸ ರೀತಿಯ ನೃತ್ಯಗಳನ್ನು ನಟಿಸಿದನು. ಇದೆಲ್ಲವನು ಕರುಣದಿಂದ ನೋಡಿ ಅಸಮಾಕ್ಷನಾದ ಶಿವನು ನಸುನಗುತಲಿದ್ದನು.

---

§ ಹರಿಹರದೇವನ 'ಬಸವರಾಜದೇವರ ರಗಳೆ' ಎಂಬ ಕಾವ್ಯದಲ್ಲಿ ನಿರೂಪಿತವಾಗಿರುವ ಬಸವಣ್ಣನವರ ಚಿತ್ರವನ್ನು ಇಲ್ಲಿ ಹರಿಹರನ ಶಬ್ದಗಳಲ್ಲಿಯೇ ಹೊಸಗನ್ನಡ ಗದ್ಯಕ್ಕೆ ಇಳಿಸಿದ್ದೇನೆ. —ಲೇಖಕ.

ಆಗ ಓರ್ವ ಮಾಲಿಗಾರನು ಕಂಪುಳ್ಳ ಸಂಪಗೆಯ ಹೂಗಳನ್ನು ಪ್ರೇಮದಿಂದ ಶಶಿಧರನ ಸಿರಿಮುಡಿಗೆಂದು ತಂದನು. ಆಗ ಶಿವನು ತನ್ನ ಮುಂದಿದ್ದ ವೃಷಭಮುಖನನ್ನು ಕರೆದು ಆ ಹೂಗಳನ್ನು ಶರಣ ಸಮೂಹಕ್ಕೆ ಈಯಬೇಕೆಂದು ಆಣತಿ ಮಾಡಿದನು. ತನಗೆ ಹರನ ಕೃಪೆಯಾಯಿತೆಂದು ವೃಷಭಮುಖನು ಆನಂದದಿಂದ ಉಬ್ಬಿದನು. ಆತನು ಪರಮೋತ್ಸಾಹದಿಂದ ಪುಲಕಿತನಾದನು. ಆತನು ಕುಣಿಯುತ್ತ ಉಬ್ಬಿಕೊಬ್ಬಿ ಪರವಶನಾದನು. ಹರುಷದ ಅತಿರೇಕವು ಮರೆವನ್ನು ಉಂಟುಮಾಡಿತು. ವೃಷಭಮುಖನು ಪ್ರಸಾದವನ್ನು ದೇವಿಯರಿಗೆ ಗಣಪತಿಗೆ ಗಣನಿವಹಕ್ಕೆ ಹರಿಬ್ರಹ್ಮಾದಿ ದೇವತೆಗಳಿಗೆ ಮನು ಮುನಿಗಳಿಗೆ ಕೊಟ್ಟನಾದರೂ ಶಿವಪುತ್ರನಾದ ಸ್ಕಂದದೇವನಿಗೆ ಕೊಡುವದನ್ನು ಮರೆತನು. ಆದರೆ ಪ್ರಸಾದವನ್ನು ಎಲ್ಲರಿಗೂ ಕೊಟ್ಟೆನೆಂದು ಶಿವನಿಗೆ ಬಿನ್ನವಿಸಲು ಷಣ್ಮುಖನು ತನಗೆ ಕೊಡಲಿಲ್ಲವೆಂದು ಹೇಳಿದನು. ವೃಷಭಮುಖನಾದರೋ ಕೊಟ್ಟೆನೆಂದು ವಾದಿಸಲು ಅದು ಪುಸಿನುಡಿಯೆಂದು ಸ್ವಾಮಿಯು ಹೇಳಿದನು. ವೃಷಭಮುಖನು ಒಪ್ಪಲಿಲ್ಲ. ಸ್ವಾಮಿಯು ಏನು ಮಾಡಬೇಕೆಂದು ತಿಳಿಯದೆ ತಂದೆಯಾದ ಚಂದ್ರಚೂಡನ ಮೊಗವನ್ನು ನೋಡಹತ್ತಿದನು. ಆಗ ಶಿವನು ತನ್ನ ಓಲಗದೊಳಗೆ ತನ್ನ ಸಮಕ್ಷಮೇ ಪುಸಿ ನುಡಿದುದನ್ನು ಕಂಡು ವೃಷಭಮುಖನ ಮೇಲೆ ಕೋಪಗೊಂಡನು. ಹಾಗೂ ಆತನಿಗೆ ಶಾಪಕೊಟ್ಟನು. ಭೂಲೋಕದಲ್ಲಿ ಜನ್ಮತಾಳಬೇಕೆಂಬಾಜ್ಞೆಯನ್ನು ವೃಷಭಮುಖನಿಗೆ ವಿಧಿಸಿದನು. ವೃಷಭಮುಖನು ಕೊರಗಿ ಕಳೆಗುಂದಿ ಕೈಮುಗಿದು “ಇಂದುಧರ ಚಿತ್ತೈಸು ತಂದೆ ಶರಣಾಗು. ಧರೆಯಲ್ಲಿ ಪುಟ್ಟುವದು ಕಷ್ಟ. ಅಲ್ಲಿ ಕಾಮಾರಿ ಷಡುವರ್ಗದ ಉಬ್ಬರವುಂಟು. ಸೋಮಧರನೇ, ಅಲ್ಲಿಯ ತಾಪತ್ರಯದ ಬೇಗೆ ಪಿರಿದು. ಅಲ್ಲಿ ಹುಸಿ, ಅಸೂಯೆ, ಹಿಂಸೆ, ಮೂರ್ಖತೆಗಳುಂಟು; ಅನ್ಯಾಯ ಅಂಜಿಕೆಗಳುಂಟು. ಅಲ್ಲಿ ಜನಿಯಿಸಿದರೆ ನಿನಗೆ ದೂರವಾಗುವೆನು, ಕರುಣಿಪುದು” ಎಂದು ಬಿನ್ನವಿಸಿದನು. ಶಿವನು ನಸುನಗುತ್ತ ‘ಅಂಜಬೇಡೆಲೆ ಮಗನೆ, ನಿನಗೆ ಹಿತನಾಗಿ ಸಖನಾಗಿ ಬಪ್ಪೆಂ, ಮಗನೆ. ಇಲ್ಲಿ ಪ್ರಸಾದವನ್ನು ಕೊಡದಿದ್ದ ಕಾರಣದಿಂದ ಅಲ್ಲಿ ಪ್ರಸಾದವನ್ನು ಪಡೆದು, ಇಲ್ಲಿಯ ಗಣ ಸಮ್ಮುಖದ ಪುಸಿಗಾಗಿ ಅಲ್ಲಿ ಶರಣ ಸೇವೆಗೈಯ್ದು ನನ್ನ ಭಕ್ತಿಯನ್ನು ಭೂಮಿಯಲ್ಲಿ ಹಬ್ಬಿಸುತ್ತ, ನನ್ನ ಪ್ರಸಾದ ಸಾವು

ರ್ಥ್ಯವನ್ನು ತೋರಿಸುತ್ತ ಕೊನೆಗೆ ಇಲ್ಲಿಗೆ ಮನ್ನಣೆಯೊಂದಿಗೆ ಬರಬೇಕು. ವೃಷಭಮುಖನೇ, ಧರಣಿಯಲ್ಲಿ ನಿನಗೆ ವೃಷಭನೆಂಬ ಹೆಸರಾಗುವದು. ವೃಷಭೇಂದ್ರನು ಅಲ್ಲಿ ನಿನಗೆ ಇಹ-ಪರಕ್ಕೆ ಗುರುವಾಗಿ ಶೋಭಿಸುವನು, ಹೋಗಯ್ಯ ಹೋಗು' ಎಂದು ಬೆಸಸಿ ಆತನನ್ನು ಕರುಣದಿಂದ ಕಳು ಹಿಸಿಕೊಟ್ಟನು. ವೃಷಭಮುಖನು ಹರನ ಆಜ್ಞೆಯಂ ಕೈಕೊಂಡು ವೃಷಭ ರಾಜನ ಕರುಣೆಯನ್ನು ಆದರದಿಂದ ಸ್ವೀಕರಿಸಿ, ಶರಣರ ಅನುಜ್ಞೆಯನ್ನು ಕೈಕೊಂಡು ಕುಮಾರನನ್ನು ಬೀಳ್ಕೊಂಡು ಕೈಲಾಸದಿಂದ ಭೂಲೋ ಕಕ್ಕೆ ಹೊರಟನು.

(೨)

ಭೂಲೋಕದಲ್ಲಿ ಬಾಗೆವಾಡಿಯು ಅಗ್ರಹಾರವು ಕೀರ್ತಿಯನ್ನು ಪಡೆ ದಿತ್ತು. ಅದು ವಿಪ್ರಸಂತಾನದಿಂದ ತುಂಬಿತ್ತು. ಶಿವಪುರಾಣಾಗಮ ಕುಳ ಗಳಿಂದ ಎಸೆದಿತ್ತು. ಶಿವಶಾಸ್ತ್ರ ಘೋಷದಿಂದ ತೀವಿತ್ತು. ಅಲ್ಲಿ ಮಾದಿ ರಾಜನೆಂಬ ವಿಪ್ರನಿದ್ದನು. ಆತನಿಗೆ ಅತಿಜ್ಞಾನಿ, ಅತಿಮಾನಿ, ಗುಣವತಿ ಯಾದ ಮಾದಾಂಬೆಯೆಂಬ ಸತಿಯು ಇದ್ದಳು. ವೃಷಭಮುಖನು ಆ ಪತಿಭಕ್ತೆಯ ಉದರದಲ್ಲಿ ಪೊಕ್ಕನು.

ಮೃಡನ ಭಕ್ತನ ಪುಣ್ಯಸತಿಯಾದ ಮಾದಲಾಂಬಿಕೆಯಲ್ಲಿ ಎಲ್ಲ ಗರ್ಭ ಚಿಹ್ನಗಳು ತೋರಿ ಗರ್ಭವು ಬೆಳೆಯಹತ್ತಿತು. ಅಂತರಂಗದ ಗರ್ಭವು ಒಡನೊಡನೆ ಬೆಳೆವುತಿರಲು ಆವಳ ಅಂಗಲತೆಗೆ ನಯವೇರಿ ಅದು ಬೇರೊಂದು ಚೆಲುವನ್ನು ಹೊಂದಿತು. ಆವಳ ಮಂಗಳ ಮುಖವು ಅರಳಿದ ಕಮಲದಂತಾಯಿತು. ನವಮಾಸಗಳು ಕಳೆಯಲಾಗಿ ಅಂತಃ ಸ್ಥಳದ ಪುಣ್ಯ ಶಿಶುವು ಮುಕುರದಲ್ಲಿ ಮಾರ್ಪೊಳೆವ ಚಂದ್ರಮಂಡಲ ದಂತೆ ತಿಳಿನೀರಿನಲಿ ಹೊಳೆವ ಹಂಸದ ಮರಿಯಂತೆ ಹೊಳೆಯಹತ್ತಿತು. ಹೊರಮಡಲು ಇಚ್ಛಿಸಿ ಇಳೆಯಲ್ಲಿ ಶಿವಭಕ್ತಿಯನ್ನು ತುಂಬಲು ನಿಶ್ಚಯಿ ಸಿತು. ನಂತರ ಚಿಪ್ಪಿನಲ್ಲಿ ಮುತ್ತು, ಕಾಸಾರದಲ್ಲಿ ಕಮಲ, ನೀರಿನಿಂದ ತಣ್ಪು, ಮಲಯಪರ್ವತದಿಂದ ಶ್ರೀಗಂಧ, ಕೇತಕೀ ಕುಸುಮದಿಂದ ಮನೋಹರ ಪರಿಮಳ, ಚಂದ್ರನಿಂದ ಸಾಂದ್ರತರವಾದ ಬೆಳುದಿಂಗಳದ ಪ್ರಭೆಯು ಹೊರಹೊರಡುವಂತೆ ಮಾತೆಯ ಗರ್ಭದಿಂದ ಕಾರಣಿಕ ಶಿಶುವು ಸುಮುಹೂರ್ತವೇ ಗಂಡು ರೂಪಾದ ತೆರದಿಂದ ಪುಟ್ಟಿತು.

ಆಗ ಕೂಸಿಗೆ ಜಾತಕರ್ಮವು ನಡೆಯಿತು. ಬಸವನೆಂಬ ಹೆಸರು ಕೂಸಿಗಾಯಿತು. ಹರಸಿತ್ತ ಹೆಸರೇ ವಂಶಾವಳಿಯ ಹೆಸರಾಯಿತು. ಬಸವನ ಜನನದಿಂದ ಧರೆಯ ಭಕ್ತರಿಗೆ ಅನಿಮಿತ್ತನಾದ ಉತ್ಸವವಾಯಿತು. ಲಿಂಗವನ್ನು ತೋರಿದಾಗ ಮಾತ್ರ ಕೂಸು ಕಣ್ದೆರೆದು ಸುಖಿಯಾಯಿತು. ಲಿಂಗಪ್ರಸಾದವನ್ನು ಪಡೆದು ಸಂತೋಷವನ್ನು ಹೊಂದಿತು. ಈ ಪುಣ್ಯ ಶಿಶುವು ಮಾತೆಯ ಮನೋರಾಜ್ಯ, ಪಿತನ ಕಣ್ಗಳ ಸೊಂಪು, ಹಾಡುವವರ ಜೋಗುಳ ಜೊಂಪು, ಮುಟ್ಟುವವರ ಮುದ್ದು, ಮುದ್ದಾಡುವವರ ನಿಜಸುಖದಂತೆ ಶೋಭಿಸುತ್ತಿತ್ತು. ಅಲ್ಲದೆ ಅದು ಉಡಿಯೊಳಗಿನ ಅಮೃತ ಕಿರಣವೂ, ಅಂಗೈಯ ಮಾಣಿಕವೂ ಆಗಿತ್ತು. ಪುಣ್ಯ ಶಿಶುವು ಪೋಷಿಸುವವರ ಪರಬೊಮ್ಮನಾಗಿ, ನೋಡುವವರ ನಯನ ಸುಧೆಯಾಗಿ, ಸೋಂಕುವವರ ರೋಮಾಂಚನವಾಗಿ,ಅಪ್ಪುವವರ ಪುಣ್ಯದ ಸುಗತಿಯಾಗಿ ಬೆಳೆಯುತ್ತಿತ್ತು. ಅರಳೆಲೆ ಸುಳಿಗುರುಳ್ಗಳಿಂದ ಶೋಭಿತನಾಗಿ ಮಂದಸ್ಮಿತನಗೆಗಳ ದಾನಿಯಾಗಿ ಪರಮಶಿವಧ್ಯಾನಿಯಾಗಿ ಬೆಳೆಯುತ್ತಿತ್ತು. ತೊದಲ್ನುಡಿ. ಅಲರ್ಗಣ್ಣುಗಳ ಸ್ವಾಭಾವಿಕ ಸೊಗಸಿನೊಡನೆ ಮಾಗಾಯಿ, ಬಳೆದೋಳು, ಹುಲಿಯುಗುರು ಇವುಗಳ ನಳನಳಿಪ ಲಾವಣ್ಯವು ಬೆರೆತಿತ್ತು. ಶಿಶುವೇಷದ ವೃಷಭಮುಖದ ನೊಸಲಚಂದ್ರ ಶೋಭೆ, ತುಟಿಗಳ ಸೊಂಪು, ವಿವಿಧ ಆಭರಣಗಳ ಸೊಗಸು, ಇವುಗಳ ಹೊಂದಿಕೆಯು ಮನೋಹರವಾಗಿತ್ತು. ಬಸವನು ನಾನಾವಿಧದ ಬಾಲಲೀಲೆಗಳಿಂದ ವಿವಿಧ ವಿನೋದಗಳಿಂದ ಒಪ್ಪುತ್ತಿದ್ದನು.

ಬಸವಣ್ಣನು ಕಲ್ಪವೃಕ್ಷದ ಅಂಕುರದಂತೆ ನಯವನ್ನು, ಚಂದ್ರಕಿರಣದಂತೆ ಸುಕುಮಾರ ವೃತ್ತಿಯನ್ನು ಬಾಲಸೂರ್ಯಮಂಡಲದಂತೆ ಉರುತರ ತೇಜವನ್ನು ಮೆರೆದು ಕಾಮಧೇನುವಿನ ಶೀಲದಂತೆ ಸುಕೃತ ಮೂರ್ತಿಯಾಗಿ ಬೆಳೆಯುತ್ತಿದ್ದನು. ಹೀಗೆ ಶುದ್ಧಾಂಗನಾಗಿ ಸುಖಿಯಾಗಿ ಸುಖವಲ್ಲಿರಲು ನೆಲದಲ್ಲಿ ಮೂಡಿದ ಸ್ವಯಂಭು ಲಿಂಗಕ್ಕೆ ತಾಯಾಗಲಾರದೆಂಬಂತೆ ಶಿವನ ಆಜ್ಞೆಯನ್ನು ಧರಿಸಿ ಹಲವು ಕಾರಣಗಳಿಗಾಗಿ ಮೃತ್ಯುಲೋಕದಲ್ಲಿ ಹುಟ್ಟಿದ ಗಣೇಶ್ವರನಾದ ಬಸವರಾಜನಿಗೆ ತಂದೆ ತಾಯಿಗಳು ಇಲ್ಲವೆಂಬುದನು ತಿಳಿಸುವಂತೆ ಆತನ ತಾಯಿತಂದೆಗಳು ಶಿವನಾಜ್ಞೆಯಿಂದ ಕೈಲಾಸಕ್ಕೆ ಹೋದರು.

(೩)

ಪುಸಿಯು ತಾಯ್ತಂದೆಗಳು ಹೋದುದರಿಂದ ಬಸವರಾಜನಿಗೆ ಸಂಸಾರದ ಭಾರನಿಳಿದಂತಾಯಿತು. ಆಮೇಲೆ ಶಿವಭಕ್ತಿಯ ಮುತ್ತಿನಂತಿದ್ದ ಮುತ್ತಜ್ಜಿಯ ಪಕ್ಕದಲ್ಲಿ ಶಿವಪ್ರಸಾದ ಸಂತುಷ್ಟ ಹೃದಯನಾಗಿ ನಾಲ್ಕೆರಡು ವರುಷ ಸುಖದಿಂದ ಇದ್ದನು. ಬಸವರಾಜನ ಬಾಲ್ಯವು ಕಳೆದು ಹದಿನಾರು ವರುಷದ ಯೌವನವು ತಲೆದೋರಲು ಭಸ್ಮಕ್ಕೆ ಬಣ್ಣವೇರುವಂತೆ, ರುದ್ರಾಕ್ಷಿಗೆ ಸೌಂದರ್ಯವು ಸಾರುವಂತೆ, ಪಂಚಾಕ್ಷರಿಯ ಮಂತ್ರಕ್ಕೆ ಸಾಮರ್ಥ್ಯವು ಹೊಂದುವಂತೆ, ಶಿವಲಿಂಗವನ್ನು ನವಪೂಜೆಯು ಅಡರುವಂತೆ, ಬಸವರಾಜನ ಸೌಂದರ್ಯವು ಕಂಗೊಳಿಸಿತು. ಆತನ ರೂಪವು ಬಗೆಬಗೆಯ ಬೆಡಗನ್ನು ಪಡೆಯಿತು. ಶಿವಪ್ರಸಾದವನ್ನು ಹೊತ್ತು ನಿತ್ತರಿಸುವವನು ತಾನೊಬ್ಬನೆಂಬುದನ್ನು ತೋರುವಂತೆ ಮಲ್ಲಿಗೆ, ಮೊಲ್ಲೆ, ಜಾಜಿ, ಕೇತಕಿ ಮೊದಲಾದ ಕುಸುಮ ಸಮೂಹವನ್ನು ಧರಿಸಿ ಮೆರೆಯುವ ದುಂಡಾದ ಜಡೆ, ಗಂಗೆಯನ್ನು ಧರಿಸಿದ ಶಿವನೊಡನೆ ಮತ್ಸರಿಸಿ ಶಿರೋಮಧ್ಯದಲ್ಲಿರುವ ಕೇಶರಾಶಿಯ ಕಾಳಂದೀ ನದಿಯು ಹೊರಸೂಸುವದೆಂದು ತಡೆಗಟ್ಟಲು ಮೇಲಿಕ್ಕಿದ ರುದ್ರಾಕ್ಷಿಯ ಶಿರೋಮಾಲೆಯೆಂಬ ಆಣೆಕಟ್ಟಿನಿಂದ ಒಸರ್ವ ಕಾಳಿಮ ಜಲಕಣಗಳಂತೆ, ಹಣೆಯ ಮೇಲೆ ನರ್ತಿಸುತ್ತಿರುವ ಮುಂಗುರುಳು, ಭಸ್ಮಭೂಷಿತ ಭಾಳ ಪ್ರದೇಶದ ಸೀಮಾ ರೇಖೆಯಂತೆ, ಒಪ್ಪುವ ಹುಬ್ಬುಗಳು, ವರ್ಣನೆಗೆ ಅತಿ ಅಗ್ಗಳವಾದ ಕರ್ಣಕುಂಡಲಗಳು, ಮತ್ತು ಶರಣರ ಮೂರ್ತಿಯ ಕಣ್ಣಮಣಿಯಂತಿರುವ ಲೋಚನಗಳು, ಪ್ರಸಾದ ಪರಿಮಳವನ್ನು ಘ್ರಾಣೇಂದ್ರಿಯಕ್ಕೆ ಸಾಗಿಸುವ ಸಂಪಗೆಯಂತಿರುವ ನಾಸಿಕವು, ಕಂಠಮಾಲೆಯಿಂದ ಶೋಭಿಸುವ ಕುತ್ತಿಗೆಯು, ಹಣೆಯಿಂದ ಎರಡೂ ಭಾಗಗಳಲ್ಲಿ ಉದುರಿ ಬಿದ್ದ ಭಸ್ಮದ ರಾಶಿಗಳಂತೆ ತೋರುವ ಭುಜಮಂಡಲಗಳು, ಶಿವಪೂಜೆಯ ಕುಸುಮಿತ ಲತೆಯಂತಿರುವ ನಳಿತೋಳ್ಗಳು, ಶರಣರ ಚರಣಾಲಿಂಗನಕ್ಕೆ ಎಡೆಗೊಟ್ಟು ಮೆರೆಯುವ ವಿಶಾಲವಾದ ಎದೆಯು, ಪಂಚಾಕ್ಷರಿಯು ಇಮ್ಮಡಿಸಿದಂತಿದ್ದ ಕೈಬೆರಳುಗಳು, ಪ್ರಸಾದಸ್ಥಲವೆನಿಸಿದ ಪುಣ್ಯೋದರವು, ಪ್ರದಕ್ಷಣೆಗೆ ಬಾಲಕನು ನಲಿದಾಡುವ ಗಿಲಗಿಲಿ ಕಂಭಗಳಂತಿರುವ ತೊಡೆಗಳು, ಶರಣ ಮಾರ್ಗಕ್ಕೆ ಅಡಿಯಿಡಲು ಶಿವನನ್ನು ಸುತ್ತುವರಿ

ಯುವಂತೆ ಇರುವ ಪಾದಗಳು, ಇವೆಲ್ಲವುಗಳ ಸೌಂದರ್ಯದಿಂದ ಶಿವಪೂಜೆಗೆ ನವಯೌವನವಾದಂತೆ ಬಸವರಾಜನು ಶೋಭಿಸುತ್ತಿದ್ದನು. ಶಿವಭಕ್ತಿಸರ್ವಾಂಗ ಚರಿತನೂ, ಕಾರಣಿಕ ಪುರುಷನೂ, ಆದ ಬಸವ ರಾಜನು ಹದಿನಾರು ವರುಷ ಪ್ರಾಯದ ಉಜ್ವಲಮೂರ್ತಿಯಾಗಿದ್ದನು. ಆತನ ಈ ಪ್ರಾಯವು ಶಿವಪೂಜೆಯಲ್ಲಿ ಸವೆಯಹತ್ತಿತು. ಆದರೆ ಶಿವಭಕ್ತಿಯು ಕರ್ಮವು ಕೂಡಿ ಒಂದೆಡೆಯಲ್ಲಿ ಇರಲಾರವು. ಆದ್ದರಿಂದ ಪರಮವೈರಾಗ್ಯಯುಕ್ತನೂ ಶಿವಲಿಂಗಾರ್ಚನಾಯತ್ತ ಚಿತ್ತನೂ ಆದ ಬಸವರಾಜನು ಕರ್ಮದ ಲತೆಯಂತೆ ಇದ್ದ ಜನಿವಾರವನ್ನು ಕಳೆದು ಬಿಸುಟಿ, ಹೋತಿನ ಗಂಟಲವನ್ನು ಬಿಗಿಯುವಂತಿದ್ದ ಮೌಂಜಿ ಯನ್ನು ಹರಿದುಹಾಕಿ, ದಿವ್ಯ ವಸ್ತ್ರವನ್ನು ಧರಿಸಿ, ಹರಭಕ್ತಿಯ ಆತುರ ದಿಂದ ಮನೆಯನ್ನು ಬಿಟ್ಟು ಹೊರಟನು. ಹಾಗೂ ಮನೆನೆಳಲನ್ನು ನೆನೆಯದೆ, ಧನವನ್ನು ಲೆಕ್ಕಿಸದೆ, ವೃತ್ತಿಯನ್ನು ವಿಚಾರಿಸದೆ, ಬಂಧು ಗಳನ್ನು ಲಕ್ಷಿಸದೆ, ಪುರಜನವನ್ನು ಪರಿಕಿಸದೆ, ಬಾಗೆವಾಡಿಯನ್ನು ಬಿಟ್ಟು ಪೂರ್ವದಿಕ್ಕಿಗೆ ನಡೆದನು. ಹೀಗೆ ನಡೆದುಬಂದು ಮಲಪ್ರಭಾ ಕೃಷ್ಣೆಗಳ ಸಂಗಮಸ್ಥಾನದಲ್ಲಿ ಕೂಡಲಸಂಗಮನಿರುವ ಪಟ್ಟಣಕ್ಕೆ ಬಂದನು. ಅಲ್ಲಿ ಶಂಕರನ ದೇವಸ್ಥಾನವನ್ನು ಒಮ್ಮೆಲೆ ಕಂಡು, ಪೂರ್ವ ಸ್ಮರಣೆ ಕೈಗೂಡಿ ಬಂದು ಕಣ್ಣು ಬಂದಂತೆ, ಉಸಿರು ಬಂದಂತೆ, ಭಾವಾವೇಶ ದಿಂದ ರಂಗಮಂಟಪದಲ್ಲಿ ದೊಪ್ಪನೆ ಬಿದ್ದನು ಹೇಗೋ ಎದ್ದು ನಿಂತು 'ದೇವ ದೇವ, ಅನಾಥಬಂಧು, ಅನಿಮಿತ್ತ ಬಂಧುವೇ, ತಾಯ್ತಂದೆ ಬಂಧು ಬಳಗವೇ, ಕುಲವೆ, ಬಲವೆ, ಛಲವೆ, ತವರೆ, ಕಣ್ಣೇ, ಗತಿಯೇ, ಮತಿಯೇ, ಪುಣ್ಯವೇ, ಪ್ರಾಣವೇ, ಕಾಯಬೇಕು, ಕಾಯಬೇಕು, ಎಂದೆನುತ್ತ ಒಳಗೆ ಅನುತಾಪವು ಹೆಚ್ಚುತ್ತಿರಲು, ಭವದ ಬೇಗೆ ಬೆನ್ನು ಹತ್ತಿ ಇಂದ್ರಿಯ ಗಳು ಕಾಯ್ದು, ಜೀವವು ಕತಕತನೆ ಕುದಿದು, ದೇಹವು ಜಡವಾಗಿ, ಕಣ್ಣುಗಳು ಮುಚ್ಚಿ, ಕೊರಳ ಸಿರ ಬಿಗಿದು, ದಡವಡಿಸಿ ದೊಪ್ಪನೆ ಬಿದ್ದು 'ಸಂಗ ಶರಣು' ಎನುತ ಮೂರ್ಛೆ ಹೋದನು. ಅದನ್ನು ಕಂಡು ಹರನು ಕರುಣದಿಂದ ಬಸವನ ಚಿತ್ತದೊಳಗೆ ಪೊಕ್ಕು 'ಅಂಜದಿರು, ಅಂಜದಿರು ಮಗನೇ, ಭವದ ಭಾರವು ನಿನಗೆ ತಟ್ಟದಂತೆ ಸಲಹು ವೆನು.' ಎಂದು ಬೆಸಸಿದನು. ಶಿವನ ದಯೆಯಿಂದ ಚಿತ್ತವು ಅಂಕು ರಿಸಿ, ಬುದ್ಧಿಯು ಪಲ್ಲವಿಸಿ, ಮನವು ಮೊಗ್ಗೆಯಾಗಿದ್ದ ಬಸವರಾಜನನ್ನು

ಸಂಗಮೇಶ್ವರ ದೇವರಿಗೆ ವಂಶಪರಂಪರೆಯಿಂದ ಸೇವಕನಾಗಿ ಸ್ಥಾನ ಪತಿಯಾಗಿದ್ದ ಈಶಾನ್ಯ ಗುರುಗಳು ಕಂಡು, ಆತನು ಕಾರಣ ಪುರುಷನಾಗುವನೆಂಬುದನ್ನು ತಿಳಿದು, ಸಮೀಪಕ್ಕೆ ಬಂದು 'ಎಲೆ ಭಕ್ತ, ನೀನೆಲ್ಲಿಗೂ ಹೋಗಬೇಡ, ಯಾವುದೂ ಚಿಂತೆ ಮಾಡಬೇಡ. ಸಂಗಮೇಶ್ವರನಿಗೆ ಹೊಸ ಹೂವನ್ನು ತಿಳಿಯಾದ ನೀರನ್ನು ತಂದು, ಪೂಜೆಮಾಡಿ ಸುಖದಿಂದ ಇರಬೇಕು' ಎನಲು, ಆ ಮಾತನ್ನು ಕೈಕೊಂಡು, ಬಸವರಾಜನು ಕಪ್ಪಡಿಸಂಗಮದಲ್ಲಿ ಕೂಡಲಸಂಗಮೇಶ್ವರ ಪಾದಕಮಲ ಮಕರಂದ ಮಧುಕರನಾಗಿ ಇರಹತ್ತಿದನು.

(ಮುಂದುವರಿಯುವದು.)

---

# ಸಾಕು ಮಾಡೈ ತಂದೆ!

ಸಾಕು ಮಾಡೈ ತಂದೆ, ಈ ಭವದ ಭಾರವನು!
ಲೋಕದೀ ಸ್ವಾರ್ಥ ವಂಚನೆಗಳಿಗೆ ಬಗೆ ಕುಗ್ಗಿ

ಹೇಸಿಹುದು! ನಿನ್ನ ಆ ದಿವ್ಯ-ಪದ-ತೀರವನು
ಸೇರ್ವ ಮುನ್ನವೆ, ದೇವ, ಎನ್ನಾಸೆಗಳ ಮೊಗ್ಗೆ-

ಗಳು ಹಾಗೆ ಕಳಚಿದವು! ಐಸಿರಿಯ ಕಟು-ಕಪಟ-
ಜಾಲದಲಿ ಸಿಕ್ಕು ಹಾ! ನರಳುತಿದೆ ಆ ಸತ್ಯ-

ಸಂಕಲ್ಪ, ನಿನ್ನೆಡೆಗೆ ನುಗ್ಗಲೆಂದನು-ನಿತ್ಯ!
ಘನ-ತಿಮಿರ-ಪರಿವೃತಂ ಜಗವಿದೆತ್ತೆತ್ತಕಟ!

ಇದುವು ಸಹ ನಿನ್ನ ಸಂಕಲ್ಪವಿದ್ದಿರಬಹುದು!
ಉಷೆಯಂತೆ ನಿಶೆಯು ಸಹ ನಿನ್ನ ಲೀಲೆಯೆ ಆಹುದು!

ಉಷೆಯ ವೈಭವದೊಡನೆ ಪರಿಮಳಿತ-ಸುಮ-ಮಾಲೆ
ಯನು ನಲಿಪ ಭಾಗ್ಯವಿರದಿರೆ, ಭಗ್ನ ಹೃತ್ಪಾತ್ರೆ-

ಯಲಿಯಾತ್ಮ ಸರ್ವಸ್ವವನು ನಯನ-ಜಲ-ಮಾಲೆ
ಯಲಿ ಸಲಿಪೆ! ಮುಗಿಯಲೈ ಎನ್ನ ಜೀವನ-ಯಾತ್ರೆ!

— ಈಶ್ವರ ಸಣಕಲ್ಲ.

# ಸಂಗೀತದಲ್ಲಿ ಶಿವಶರಣರ ವಚನಗಳು.

ಲೇಃ— ಶ್ರೀ. ಶರಪ್ಪ ವೀರಪ್ಪ ಪಾಟೀಲ ಸಂಗೀತ ಶಿಕ್ಷಕರು
ಶ್ರೀಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.

(ಸಂಪುಟ ೧೩, ಸಂಚಿಕೆ ೨, ಪುಟ ೧೦೨ ರಿಂದ ಮುಂದೆ ಸಾಗಿದ್ದು.)



೩೩

ರಾಗಃ— ಖಂಬಾವತಿ ತಾಲಃ— ತ್ರಿತಾಲ

(ಸಖಿಮೋಹನ ಮುರಲಿ ಸುನಾವೆ ಎಂಬಂತೆ)

ಜೀವಿನ ಬೀಜವ ಬಿತ್ತಿ। ಬೆಲ್ಲದ ಕಟ್ಟೆಯ ಕಟ್ಟಿ॥ ಪಲ್ಲ॥

ಆಕಳ ಹಾಲನೆರೆದು। ಜೇನ ತುಪ್ಪ ಹೊಯ್ದರೆ।
ಸಿಹಿಯಾಗ ಬಲ್ಲುದೆ। ಕಹಿಯುಹುದಲ್ಲದೆ ॥೧॥

ಶಿವಭಕ್ತರಲ್ಲದವರ। ಕೂಡೆ ನುಡಿಯಲಾಗದು।
ಕೂಡಲಸಂಗಮ। ದೇವಾ ॥೨॥

[ಬಸವಣ್ಣ]

೩೪

ರಾಗಃ— ಭೈರವ (ಕರ್ನಾಟಕಿ) ತಾಲಃ— ದೀಪಚಂದಿ

ಅಕಟಕಟಾ ಶಿವ। ನಿನಗಿನಿತು ಕರುಣವಿಲ್ಲ।
ಅಕಟಕಟಾ ಶಿವ। ನಿನಗಿನಿತು ಕೃಪೆಯಿಲ್ಲ॥ ।ಪಲ್ಲ।

ಯಾಕೆ ಹುಟ್ಟಿಸಿದೆ। ಇಹಲೋಕ ದುಃಖಿಯ।
ಯಾಕೆ ಹುಟ್ಟಿಸಿದೆ ಪರಲೋಕ ದೂರನ ॥೧॥

ಯಾಕೆ ಹುಟ್ಟಿಸಿದೆ ಕೂಡಲ। ಸಂಗಮದೇವ ಕೇಳಯ್ಯಾ।
ಎನಗೆ ಮತ್ತೊಂದು। ತರುಮರಾದಿಗಳಿದ್ದಿಲ್ಲವೇ ॥ ೨ ॥

[ಬಸವಣ್ಣ]

೩೫

ರಾಗಃ— ದುರ್ಗಾ ತಾಲಃ— ತ್ರಿತಾಲ

(ಮನಮೋಹನ ಮುರಲೀವಾಲಾ ಎಂಬಂತೆ)

ಬೇಕೆನಲಾಗದು ಶರಣಂಗೆ।
ಬೇಡೆನಲಾಗದು ಶರಣಂಗೆ ॥ ಪಲ್ಲ ॥

ಬಂದ ಸುಖವನತಿಗಳೆಯ। ಲಾಗದು ಶರಣಂಗೆ।
ಇದು ಕಾರಣ ಕೂಡಲ ಚನ್ನಸಂಗಯ್ಯ।
ನಿಮ್ಮ ಶರಣರು ಉಂಡು। ಉಪವಾಸಿಗಳು।
ಬಳಸಿ ಬ್ರಹ್ಮಚಾರಿಗಳು ॥ ೧ ॥

[ಚನ್ನಬಸವಣ್ಣ]

೩೬

ರಾಗಃ— ಭೀಮಪಲಾಸ ತಾಲಃ— ತ್ರಿತಾಲ

(ಭೂಷಣ ಸಂಸಾರ ಎಂಬಂತೆ)

ತುಂಬಿದುದು ತುಳುಕದು ನೋಡಾ।
ನಂಬಿದುದು ಸಂದೇಹಿಸದು ನೋಡಾ ॥ ಪಲ್ಲ ॥

ಒಲಿದುದು ಓಸರಿಸದು ನೋಡಾ।
ನೆರೆಯರಿದುದು ಮರೆಯದು ನೋಡಾ ॥ ೧ ॥

ಚನ್ನಮಲ್ಲಿಕಾರ್ಜುನಯ್ಯ। ನೀ ನೊಲಿದ।
ಶರಣಂಗೆ। ನಿಸ್ಸೀಮ ಸುಖವಯ್ಯಾ ॥ ೨ ॥

[ಅಕ್ಕಮಹಾದೇವಿ]

೩೭

ರಾಗಃ— ಮಾಲಕಂಸ ತಾಲಃ— ತ್ರಿತಾಲ

ಮುಖ ಮೋರಮೋರ ಮೂಸೆ ಎಂಬಂತೆ

ಮಾರಿ ಮಸಣಿ ಎಂಬವು ಬೇರಿಲ್ಲ ಕಾಣಿರೊ।
ಮಾರಿಯೆಂಬುದೇನು। ಕಂಗಳು ತಪ್ಪಿನೋಡಿದರೆ ಮಾರಿ ॥ ಪಲ್ಲ ॥

ನಾಲಿಗೆ ತಪ್ಪಿ ನುಡಿದರೆ ಮಾರಿ ।
ನಮ್ಮ ಕೂಡಲ ಸಂಗಯ್ಯನ ।
ನೆನಹ ಮರೆದರೆ ಮಾರಿ ॥೧॥

[ಬಸವಣ್ಣ]

೩೮

ರಾಗಃ— ಯಮನ ತಾಲಃ— ಝಪತಾಲ

(ನಯನೇ ಲಾಜವಿತ ಎಂಬಂತೆ

ಹುತ್ತವ ಬಡಿದರೆ । ಹಾವು ಸಾಯಬಲ್ಲುದೇನಯ್ಯ ।
ಅಘೋರ ತಪವ । ಮಾಡಿದಡೇನು ॥ ಪಲ್ಲ ॥

ಅಂತರಂಗ ಆತ್ಮ ಶುದ್ಧ । ವಿಲ್ಲದವರನೆಂತು ।
ನಂಬುವೆನಯ್ಯ । ಕೂಡಲ ಸಂಗಮದೇವಾ ॥೧॥

[ಬಸವಣ್ಣ]

೩೯

ರಾಗಃ— ಮಾಂಡ ತಾಲಃ— ದಾದರಾ

(ಭಾನಹರಿಹಾ ಮೋಹಿ ನಯನಾ ... ... ಎಂಬಂತೆ

ಘಟವನೊಡೆದು । ಬಯಲ ನೋಡಲದೇಕೆ ॥ ಪಲ್ಲ ॥

ಘಟದೊಳಗಿಪ್ಪುದೇ । ಬಯಲೆಂದರಿದಡೆ ಸಾಲದೇ ।
ಪಟವ ಹರಿದು । ತಂತುವ ನೊಡಲದೇಕೆ ॥೧॥ ಬಯಲ
ನೋಡಲದೇಕೆ ॥

ಆ ಪಟವ ತಂತು । ವೆಂದರಿದಡೆ ಸಾಲದೇ ।
ಕಟಕವ ಮುರಿದು । ಕಾಂಚನವ ನೋಡಲದೇಕೆ ॥೨॥ ಬಯಲ
ನೋಡಲದೇಕೆ ॥

ಆ ಕಟಕವೇ ಕಾಂಚನ। ವೆಂದರಿದಡೆ ಸಾಲದೇ।
ತನ್ನನಳಿದು ಘನವ। ನೋಡಲದೇಕೆ ॥೩॥ ಬಯಲ ನೋಡಲದೇಕೆ॥

ತಾನೆ ಘನವೆಂ। ದರಿದಡೆ ಸಾಲದೇ।
ಹೇಳಾ ರಾಮನಾಥಾ ॥೪॥ ಬಯಲ ನೋಡಲದೇಕೆ॥
[ದೇವರ ದಾಸಿಮಯ್ಯ]

೪೦

ರಾಗಃ— ಸೋಹನಿ ತಾಲಃ— ತ್ರಿತಾಲ

(ಲೋಳತ ಕಚಮುಖ ಮಧುವರಿ ಎಂಬಂತೆ)

ದೇವಲೋಕ ಮರ್ತ್ಯಲೋಕ। ವೆಂಬವು ಬೇರಿಲ್ಲ ಕಾಣಿರೋ।
ಸತ್ಯವ ನುಡಿವುದೇ ದೇವಲೋಕ। ಅಸತ್ಯವ ನುಡಿವುದೇ ಮರ್ತ್ಯಲೋಕ॥ ಪಲ್ಲ॥

ಆಚಾರವೇ ಸ್ವರ್ಗ। ಅನಾಚಾರವೇ ನರಕ।
ಇದಕ್ಕೆ ನೀವೇ ಪ್ರಮಾಣು। ಕೂಡಲ ಸಂಗಮದೇವಾ ॥೧॥
[ಬಸವಣ್ಣ]

೪೧

ರಾಗಃ— ಬಿಹಾಗ ತಾಲಃ— ತ್ರಿತಾಲ

(ಬಾಲಮರೇ ಎಂಬಂತೆ)

ಕಳಬೇಡ ಕೊಲಬೇಡ।
ಹುಸಿಯ ನುಡಿಯಲು ಬೇಡ। ಮುನಿಯ ಬೇಡ।
ಅನ್ಯರಿಗೆ ಅಸಹ್ಯ ಬಡಬೇಡ ॥ಪಲ್ಲ॥

ತನ್ನ ಬಣ್ಣಿಸ ಬೇಡ। ಇದಿರ ಹಳಿಯಲು ಬೇಡ।
ಇದೇ ಅಂತರಂಗ ಶುದ್ಧಿ ॥೧॥

ಇದೇ ಬಹಿರಂಗ ಶುದ್ಧಿ । ಇದೇ ನಮ್ಮ ।
ಕೂಡಲ ಸಂಗನನೊಲಿಸುವ ಪರಿ ॥ ೨ ॥

[ಬಸವಣ್ಣ]

೪೨

ರಾಗಃ— ಕಾಫಿ ತಾಲಃ — ತ್ರಿತಾಲ

(ಭಕ್ತಿ ಭಾವ ಹಾ ಘ್ಯಾ ಎಂಬಂತೆ)

ಪರಧನ ಒಲ್ಲದಿಪ್ಪುದೇ ವ್ರತ ।
ಪರಸ್ತ್ರೀಯರ ಕೂಡದಿಪ್ಪುದೇ ಶೀಲ ।
ಸರ್ವ ಜೀವವ ಕೊಲ್ಲದಿಪ್ಪುದೇ ನೇಮ ॥ ಪಲ್ಲ ॥

ತಥ್ಯ ಮಿಥ್ಯವನಳಿದು ।
ಇಪ್ಪುದೇ ನಿತ್ಯ ನೇಮ ॥ ೧ ॥

ಇದು ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ।
ಲಿಂಗಕ್ಕೆ ಸಂದೇಹವಿಲ್ಲದ ವ್ರತ ॥ ೨ ॥

[ಶಿವಲೆಂಕ ಮಂಚಣ್ಣ]

೪೩

ರಾಗಃ — ಭೈರವಿ ತಾಲ: — ತ್ರಿತಾಲ

(ನ ಚ ಮಾನಸಾ ಎಂಬಂತೆ

ಕಾಯ ಕರ್ರನೆ । ಕಂದಿದರೇನಯ್ಯ ।
ಕಾಯ ಮಿರ್ರನೆ ಮಿಂಚಿದರೇನಯ್ಯ ॥ ಪಲ್ಲ ॥

ಅಂತರಂಗ । ಶುದ್ಧವಾದ ಬಳಿಕ ।
ಚನ್ನ ಮಲ್ಲಿಕಾರ್ಜುನ ।
ಲಿಂಗವು ಒಲಿದ ಕಾಯವು । ಹೇಗಿದ್ದರೇನಯ್ಯ ॥ ೧ ॥

[ಅಕ್ಕ ಮಹಾದೇವಿ]

# ವೀರಶೈವ ಧರ್ಮದ ವೈಶಿಷ್ಟ್ಯ.

(ಪ್ರೊ॥ ಎಸ್. ಎಸ್. ಬಸವನಾಳ ಎಮ್. ಎ. ಇವರು ವೀರಶೈವ ಮಹಾಸಭೆಯಲ್ಲಿ ಮಾಡಿದ ಅಧ್ಯಕ್ಷೀಯ ಭಾಷಣ.)

ವೀರಶೈವ ಮಹಾಸಭೆಯ ೧೩ನೆಯ ಅಧಿನಿವೇಶನವು ಹುಬ್ಬಳ್ಳಿಯಲ್ಲಿ ದಿಸೆಂಬರ ಕೊನೆಯ ವಾರದಲ್ಲಿ ಬಹು ವಿಜೃಂಭಣೆಯಿಂದ ಕೊನೆಗಂಡಿತು. ಅದರ ಅಧ್ಯಕ್ಷರಾದ ಪ್ರೊ॥ ಎಸ್. ಎಸ್ ಬಸವನಾಳ ಇವರು ವಿಚಾರ ಪರಿಪ್ಲುತವಾದ ತಮ್ಮ ಅಧ್ಯಕ್ಷ ಭಾಷಣವನ್ನು ಮಾಡಿದರು. ಅದರಲ್ಲಿ ಅವರು ವೀರಶೈವ ಮತತತ್ವಗಳನ್ನು ಕುರಿತು ಕೆಲವಷ್ಟಿಗೆ ಪ್ರಸ್ತಾಪಿಸಿದರು. ಅವುಗಳ ಮೇಲಿಂದ ವೀರಶೈವ ಧರ್ಮದಲ್ಲಿರುವ ಉದಾತ್ತವಾದ ಸಾಮಾಜಿಕ ಮತ್ತು ಧಾರ್ಮಿಕ ತತ್ವಗಳ ನಿಜಸ್ವರೂಪವನ್ನು ನಾವು ತಿಳಿಯಬಹುದಾಗಿದೆ. ಅವರು ಅನ್ನುವದೇನೆಂದರೆ:—

"ದೇವರೆಂದರೆ ವಿಶ್ವಾಂತರ್ಯಾಮಿಯಾದ ಚೈತನ್ಯರೂಪನೆಂದೂ, ಲಿಂಗಾಂಗ ಸಾಮರಸ್ಯದ ಮೂಲಕ ಆತ್ಮವಿಕಾಸವನ್ನು ಮಾಡಿಕೊಂಡ ನಿಜವಾದ ವೀರಶೈವನಿಗೆ ಅಂತಹ ದೇವರೊಡನೆ ಇಹದಲ್ಲಿಯೇ ತಾದಾತ್ಮ್ಯವನ್ನು ಹೊಂದಲು ಸಾಧ್ಯವೆಂದೂ ಕಲಿಸುವ ನಮ್ಮ ಧಾರ್ಮಿಕ ಭಾವನೆಯು ಭರತಖಂಡದ ಧಾರ್ಮಿಕ ವಿಚಾರಗಳಲ್ಲಿ ಅಂದೋಲನೆಯನ್ನೇ ಮಾಡಿಬಿಟ್ಟಿದೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ" ಎಂಬುವರ ನಿಜವಾದ ಹೊಲಬು ಇದು. ಇದರ ಪರಿಣಾಮವಾಗಿ ವೀರಶೈವನಿಗೆ ಪರಲೋಕದ ಆಶೆಯಿಲ್ಲ; ನರಕದ ಅಳುಕಿಲ್ಲ, ಪಾಪ ಪುಣ್ಯಗಳ ಭಯವಿಲ್ಲ. ವೀರಶೈವ ದೀಕ್ಷೆಯನ್ನು ಪಡೆದ ಆವ ಮನುಷ್ಯನಾದರೂ ಪೂರ್ವ ಜನ್ಮಗಳ ಕರ್ಮಪರಿಪಾಕವನ್ನಳಿದು ತನ್ನ ಕಲ್ಯಾಣವನ್ನು ತನ್ನ ಶೇಷಾಯುಷ್ಯದಲ್ಲಿಯೇ ಸಾಧಿಸಿಕೊಳ್ಳಲು ಸಮರ್ಥನಾಗುತ್ತಾನೆಂದು ನಮ್ಮವರ ಗ್ರಹಿಕೆ. ಇದರ ಪರಿಣಾಮವಾಗಿ ಜಾತಿ-ಕುಲಗಳ ಕೀಳುಮೇಲುಗಳು ವೀರಶೈವನಿಗೆ ಇಲ್ಲವಾಗಿವೆ. "ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರನೆಲ್ಲರನು ಒಂದೇ ಎಂಬೆ." ಎಂಬುದರ ನಿಜವಾದ ತಿರುಳು ಇದು. ಪುರುಷ

ನಿಗೆ ಮಾತ್ರ ಆತ್ಮವಿರುವದರಿಂದ ಅದರ ವಿಕಾಸವನ್ನು ಮಾಡಿಕೊಳ್ಳು ವುದು ಆತನಿಗಷ್ಟೇ ಸಾಧ್ಯವಿದೆಯೆಂಬ ಅನೇಕ ಧರ್ಮಗಳೊಳಗಿನ ತತ್ತ್ವಕ್ಕೆ ವಿರುದ್ಧವಾಗಿ ಸ್ತ್ರೀಯರಿಗೂ ಆತ್ಮವಿದೆ, ಅವರೂ ಆತ್ಮೋನ್ನ ತಿಯನ್ನು ಮಾಡಿಕೊಳ್ಳಬಲ್ಲರೆಂಬ ತತ್ತ್ವವನ್ನು ಬೀರಿ, ಪುರುಷರೊಡನೆ ಸ್ತ್ರೀಯರಿಗೂ ಸಮಾನತ್ವವನ್ನು ಕಲ್ಪಿಸಿದ ವೀರಶೈವರ ಉದಾತ್ತ ಭಾವ ನೆಗೂ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಭಾವನೆಗೂ ಅಂತರವೆಷ್ಟಿ ದೆಯೆಂಬುದನ್ನು ಲೆಕ್ಕಮಾಡಿ ಹೇಳುವ ಕಾರಣವಿಲ್ಲ. "ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದೀತೇ? ಒಡೆಯನ ಪ್ರಾಣಕ್ಕೆ ಇದ್ದೀತೇ ಯಜ್ಞೋಪವೀತ? ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಪ್ರಾಣದಲ್ಲಿ ಹಿಡಿಗೋಲ?" ಎಂದು ಮುಂತಾಗಿ ನಮ್ಮ ಆದ್ಯರು ಒತ್ತಿಯೊತ್ತಿ ಹೇಳಿರುವರು. ಬೇಕಾದಾಗ ಸ್ವಾರ್ಥತ್ಯಾಗ ಮಾಡಲು ಹಗುರಾಗಬೇ ಕೆಂಬ ಮುನ್ನೋಟದಿಂದಲೇ ವೀರಶೈವನು ತಾನು ಗಳಿಸುವುದೆಲ್ಲ ಗುರು ಲಿಂಗ ಜಂಗಮದ ಸೇವೆಗಾಗಿ ಎಂದು ಎಣಿಸಬೇಕೆಂದೂ, ಇಂದಿಗೆ ಉಳಿದುದು ನಾಳೆಗೆ ತಂಗುಳವೆಂದು ತಿಳಿದು ಒಂದೊಂದು ದಿನದ ಚರಿ ತಾರ್ಥವನ್ನು ಸಾಗಿಸುವದನ್ನಷ್ಟೇ ಯೋಚಿಸಬೇಕೆಂದೂ, ತಾನು ಭೋಗಿ ಸುವ ಎಲ್ಲ ವಸ್ತುಗಳನ್ನು ಲಿಂಗಮುಖದಿಂದ ಪ್ರಸಾದ ರೂಪವಾಗಿ ಗ್ರಹಿಸಬೇಕೆಂದೂ ನಮ್ಮ ಮತತತ್ತ್ವವಿರುವುದರಿಂದ ತ್ಯಾಗಭೋಗ ಸಮನ್ವಯವನ್ನು ಮಾಡುವ ಅನ್ಯಾದೃಶ್ಯವಾದ ಶಕ್ತಿಯು ವೀರಶೈವ ನಲ್ಲಿ ಬರುತ್ತದೆ. ತನ್ನ ಇಂದ್ರಿಯಗಳೆಲ್ಲವೂ ಲಿಂಗಮಯವಾಗಿವೆ ಎಂಬ ಕಲ್ಪನೆಯು ವೀರಶೈವನನ್ನು ತ್ರಿಕರಣಪೂರ್ವಕವಾಗಿಯೂ ಪುನೀತನ ನ್ನಾಗಿ ಮಾಡಬಲ್ಲುದು. ಸ್ಥಾನ-ಮಾನಗಳ ಭೇದವಿಲ್ಲದೆ ಎಂತಹ ವೀರಶೈವನಾದರೂ ಕಾಯಕವನ್ನು ಮಾಡಲೇಬೇಕೆಂಬ ನಿಯಮವಿರುವು ದರಿಂದ ಸಮಾಜ ಸೇವೆಯು ನೆವದಲ್ಲಿ ಬಿಕ್ಕೆ ಬೇಡುವುದಕ್ಕೆ ಆಸ್ಪದ ವಿಲ್ಲ. "ಕಾಯಕದಲ್ಲಿ ನಿರತನಾದೊಡೆ ಗುರುದರ್ಶನವಾದರೂ ಮರೆಯ ಬೇಕು. ಲಿಂಗಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿ ದ್ದರೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ." "ಭಕ್ತರು ನಾವೆಂದು ನಿತ್ಯನೇಮವ ಮಾಡಿಕೊಂಡಿಹೆವೆಂದು ಕಾಯಕವ ಬಿಟ್ಟು ಮನೆ ಮನೆಯ ತೊಪ್ಪಲ ಕಾಯಲೇತಕ್ಕೆ?" ಮುಂತಾದ ವಚನಗಳು ಈ ತತ್ತ್ವವನ್ನೇ ಸಾರುವುವು.

ಹೀಗೆ ನಡೆನುಡಿಗಳಲ್ಲಿ ಅಭಿನ್ನತೆಯುಂಟಾಗುವದರಿಂದ ವೀರಶೈವನಿಗೆ "ಇದೇ ಜನ್ಮ ಕಡೆ" ಎಂದು ನಂಬಲು ಆತಂಕವಿಲ್ಲದಾಗುತ್ತದೆ. ಅಷ್ಟಾವರಣ-ಪಂಚಾಚಾರಗಳನ್ನು ಆಚರಿಸುವದರಿಂದ ವೀರಶೈವನಲ್ಲಿ ಕರ್ತವ್ಯದಕ್ಷನಾಗುವ ವೀರತ್ವವು ಆವಿರ್ಭಾವವಾಗುತ್ತದೆ. ದಾಸೋಹಂ ಭಾವವೂ, ಅದರಲ್ಲಿಯೆ ಇನ್ನೂ ಹೆಚ್ಚಿನ ಮೆಟ್ಟಿಲಾದ ಕಿಂಕರತ್ವವೂ ವೀರಶೈವನಲ್ಲಿ ಪ್ರಕಟವಾಗುತ್ತವೆ. ಈ ರೀತಿಯಲ್ಲಿ ಸರ್ವಾಂಗ ಪರಿಪೂರ್ಣವಾದ ಆತ್ಮವಿಕಾಸವನ್ನು ಹೊಂದಿದ, ಪರರಿಗಾಗಿ ತಮ್ಮ ಬಾಳನ್ನು ಮೀಸಲಿಡಲು ಯೋಗ್ಯರಾದ ವೀರಶೈವ ವ್ಯಕ್ತಿಗಳಿಂದ ರಚಿತವಾದ ಸಮಾಜದಲ್ಲಿ ಸಾಂಘಿಕ ಶಕ್ತಿಯು ಒಡಮೂಡುವುದು ಅರಿದಲ್ಲ. ಇಂತಹ ಉದಾತ್ತವಾದ ಮತದಲ್ಲಿ ಪತಿತರನ್ನು ಪಾವನರನ್ನಾಗಿ ಮಾಡುವ ಶಕ್ತಿಯು ಹೊರಹೊಮ್ಮುವದು ಆಶ್ಚರ್ಯವಲ್ಲ. ಸೂತಕ-ಪಾತಕಗಳ ಮಾತು ಎತ್ತಲೇಕೆ? ಅಂತೆಯೇ ಪ್ರತಿಪಾದಿತವಾದ ಕೆಲಕಾಲದಲ್ಲಿಯೇ ಈ ಮತವು ವಿಸ್ತಾರವಾಗಿ ಹಬ್ಬಿದುದು ಸೋಜಿಗವಲ್ಲ. ಸ್ವಾರ್ಥದ ಲವಲೇಶವಾದರೂ ಇಲ್ಲದೆ ಕೇವಲ ವಿಶಾಲ ತತ್ವಗಳ ಪ್ರಸಾರದಲ್ಲಿ ಛಲದಂಕರಾದ ಅಸಂಖ್ಯಾತ ಶರಣರು ಉದಯವಾದುದು ಅಚ್ಚರಿಯಲ್ಲ.

ಹೀಗೆ ಸದಾ ಜಾಗ್ರತವಾಗಿದ್ದ, ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಸೇವೆಯನ್ನು ಅರ್ಪಿಸಲು ಸಜ್ಜಾಗಿದ್ದ, ನಮ್ಮ ಸಮಾಜವು ಕಾಲಾನುರೋಧದಿಂದ, ಸೃಷ್ಟಿನಿಯಮಕ್ಕನುಸರಿಸಿ, ಖಿಲವಾಗಲಾರಂಭಿಸಿತು. ತತ್ತ್ವಗಳ ವಿಪರ್ಯಾಸವಾಗಿ ಜಾತಿ ಪಂಗಡಗಳ ನಿವಾರಣಾರ್ಥವಾಗಿ ಜನ್ಮವೆತ್ತಿದ ಸಮಾಜದಲ್ಲಿಯೇ ಅವುಗಳು ಪುನಃ ರೂಢವಾದುವು; ನೆರೆಯ ಸಮಾಜಗಳ ಅಜ್ಞಾನ ಮೂಲಕವಾದ ಅನುಕರಣದಿಂದ ಅನಿಷ್ಟ ಸಂಪ್ರದಾಯಗಳು ಬಳಕೆಯಲ್ಲಿ ಬಂದುವು. ಸಮಾಜದ ಬಹುಭಾಗವನ್ನು ಅಜ್ಞಾನಾಂಧಕಾರವು ಮುಸುಕಿತು. ಪ್ರಾಗತಿಕ ಸಮಾಜವೆಂದು ಹೆಸರಾದ ಸಮಾಜವೇ ಹಿಂದುಳಿದ ವರ್ಗಗಳ ಗಣನೆಯಲ್ಲಿ ಸೇರ್ಪಡೆಯಾಯಿತು."

ಈ ಪ್ರಕಾರ ಅಧ್ಯಕ್ಷರು ವೀರಶೈವ ಮತದ ಒಂದು ಮುಖ್ಯ ವೈಶಿಷ್ಟ್ಯವನ್ನೂ ಅದರ ಈಗಿನ ಸ್ಥಿತಿಯನ್ನೂ ತಮ್ಮ ಭಾಷಣದಲ್ಲಿ ವಿವರಿಸಿದ್ದಾರೆ. ಇದರಲ್ಲಿ ಸತ್ಯಾಂಶವಿರುವದು ನಿಃಸಂದೇಹವಾದದ್ದು.

---

# ಭೈರವೇಶ್ವರನ ಕಾವ್ಯದ ಕಥಾಮಣಿ ಸೂತ್ರರತ್ನಾಕರ.



ಶಿವನ ನಿರೂಪದಿಂ ವೀರಶೈವಾಚಾರದಿಂ ಲೋಕವನುದ್ಧರಿಸಲೆಂದು ಬಸವಣ್ಣ, ಚನ್ನಬಸವಣ್ಣ, ಅಲ್ಲಮಪ್ರಭುದೇವ, ಮಡಿವಾಳಮಾಚಯ್ಯ, ಸೊಡ್ಡಳಬಾಚಯ್ಯಗಳು. ಕಿನ್ನರೀಬ್ರಹ್ಮಯ್ಯ, ಕನ್ನದ ಬ್ರಹ್ಮಯ್ಯಗಳೆಂಬೇಳು ನೂರೆಪ್ಪತ್ತೇಳು ಪುರಾತನರಾಗಿ ಮರ್ತ್ಯಕ್ಕವತರಿಸಿ ವೀರಶೈವಾಚಾರದಿಂದ ಶಿವಾಚಾರವನುದ್ಧರಿಸಿ ಮರ್ತ್ಯದಲ್ಲಿ ನಿತ್ಯಾನಂದ ನಿಜಲಿಂಗೈಕ್ಯರಾಗಿರುತಂ ಮರ್ತ್ಯಲೋಕದ ಮಣಿಹವಂ ಪೂರೈಸಿ ಕೈಲಾಸಕ್ಕೈದಿ ಘನಲಿಂಗ ಸುಖದಿಂದಿರಲು,

ಇತ್ತ ಭೂಲೋಕದಲ್ಲಿ ವೀರಶೈವಾಚಾರವೆಲ್ಲವು ಮುಸುಳಿಸಿ ಪೋಗಲು ನಾರದನೆಂಬ ಮುನಿರಾಜನು ಮರ್ತ್ಯಕ್ಕೈತಂದು ಭೂಲೋಕದ ಸ್ಥಿತಿಗತಿಯನರಿದು, ಕೈಲಾಸಕುರುವಣಿಸಿ ಪೋಗಿ, ಶಿವಂಗಷ್ಟಾಂಗವೆರಗಿ, ಕೈಮುಗಿದು ನಿಂದು, ದೇವ ದೇವ ಶರಣುಜನ ಮನೋವಲ್ಲಭ, ಭಕ್ತದೇಹಿಕದೇವ, ಎನ್ನ ಬಿನ್ನಪವನವಧರಿಸೆನಲು ಶಿವಂ ಲಾಲಿಸುತ್ತಿರೆ ಬಿನ್ನೈಸಿದಂ.

ಬಸವಣ್ಣ ಚನ್ನಬಸವಣ್ಣ ಅಲ್ಲಮಪ್ರಭುದೇವರು ಮುಖ್ಯವಾದ ಪ್ರಮಥರು ಭೂಲೋಕದೊಳು ಶಿವಭಕ್ತಿಯನ್ನುದ್ಧರಿಸಿ ನಿಮ್ಮೊಳು ಬೆರಸಿ ದಂದಿಂದ ಭೂಲೋಕದಲ್ಲಿ ವೀರಶೈವಾಚಾರದ ಕುರುಹಳಿದಂತಾಯಿತ್ತು. ಪರಶಿವ, ನೀವೆ ಬಿಜಯಂಗೆಯ್ದು ಭೂಲೋಕದಲ್ಲಿ ವೀರಶೈವಾಚಾರವನ್ನುದ್ಧರಿಸಬೇಕು ದೇವ, ಎಂದು ನಮಿಸಲು, ಮುನಿಯ ಬಿನ್ನಪವ ಗೇಳ್ದು ಪರಶಿವಂ ನಸುನಗುತಂ ಸುತ್ತಿರ್ದ ಪ್ರಮಥಗಣದ ಮೊತ್ತಮಂ ನೋಡುತಂ, ಕಾಲಸಂಹರನೆಂಬ ಗಣಾಧೀಶ್ವರನಂ ಕರೆದು ಮನ್ನಿಸುತಂ, ಮರ್ತ್ಯದೊಳು ನೀ ಪೋಗಿ, ವೀರಶೈವಾಚಾರವನುಂಟುಮಾಡಿ, ಪವಾಡವ ಗೆಲಿದು ವಾದವ ಖಂಡಿಸಿ ಗೆಲಿದು ನೀನಿರುತಿರಲ್ಕೆ ನಾ ಬಂದು ಕೈಲಾ

ಸಕ್ಕೆ ಕರೆದುಕೊಂಡು ಬಪ್ಪೆನು ಪೋಗೆನಲು, ಶಿವಂಗೆರಗಿ ಎನಗೆ ಜನ್ಮ ಸ್ಥಲವಾವುದು ದೇವ ಎನಲು,

ಭೂಲೋಕದೊಳಾಂಧ್ರ ದೇಶದಲ್ಲಿ ವೋಪುರನೆಂಬ ಪಟ್ಟಣದರಸು ಸಂಗಮರಾಜ ಹೈಮವತಿ ಎಂಬ ಸತಿಯುಳ್ಳ ಕ್ಷತ್ರಿಯ ಭೂಪಾಲನು ಪುತ್ರಕಾಂಕ್ಷೆಯಿಂದೆಮ್ಮ ಶ್ರೀಪಾದವ ಧ್ಯಾನಿಸುತ್ತಿಪ್ಪನಾತಂಗೆ ಪುತ್ರನಾಗು ಪೋಗೆನಲು. ಶಿವಂಗೆ ಪ್ರಮಥರೆರಗಿ ಬೀಳ್ಕೊಂಡು ಭೂಲೋಕಕ್ಕೈದಿ ಇವರಿಗೆ ಪುತ್ರನಾಗಿ ಉದಯಿಸಿ, ಭೈರವರಾಜನೆಂಬ ನಾಮದಿಂದೊಪ್ಪಿರುತ್ತಂ.

ಬಾಲಲೀಲೆಯಿಂ ಕಳೆದು ಕರಿತುರಗ ಶಾಸ್ತ್ರಾಭ್ಯಾಸ ಚತುಃಷಷ್ಟಿ ಕಳಾವಿದ್ಯಾಪರಿಣತನಾಗಿ ಸುಲಕ್ಷಣ ಸಂಪೂರ್ಣನಾಗಿಪ್ಪ ಕನ್ನಿಕೆ ಮಹಾದೇವಿ ಎಂಬ ಸ್ವಸ್ತ್ರೀಯುಕ್ತನಾಗಿ ಸಕಲೈಶ್ವರ್ಯ ವಿನಿಯೋಗಪರನಿ ಚತುರಂಗಬಲದಿಂದೊಪ್ಪುತಂ, ಕಾಮನ ಚೆಲ್ವ, ಧರ್ಮನ ಸತ್ವ, ಸುರಪನ ಭೋಗ, ಕರ್ಣನ ತ್ಯಾಗ, ಬೃಸ್ಪನ ಚತುರತ್ವ, ಸೂರ್ಯನ ಶೂರತ್ವ, ಕುಬೇರನ ಭಾಗ್ಯ, ಇವುಗಳಿಂ ಸೂರ್ಯ ಕುಲದರಸು ಶ್ರೇಷ್ಠನಾಗಿರುತ್ತಂ, ದಾನಧರ್ಮ ಸ್ನಾನ ಜಪ ನೀತಿ ಕೇಳಿಯಿಂದಿರುತ್ತಂ. ಸಕಲಶಾಸ್ತ್ರಂಗಳ ಕೇಳ್ವ ಕಾಂಕ್ಷೆಯುಳ್ಳವನಾಗಿ, ವೇದ ಶಾಸ್ತ್ರಾಗಮ ಪುರಾಣೇತಿಹಾಸ ದಿ ಕೋವಿದನಾದ ಪ್ರೌಢಾಚಾರ್ಯನೆಂಬ ಪುರಾಣಿಕನ ಕರಸಿ, ತ್ಯಾಗ ಭೋಗ ವೀರವಿತರಣ ಚರಿತದಿಂ ರಾಜತೇಜ ಕೀರ್ತಿ ಪ್ರತಾಪದಿಂ ರಾಜ್ಯವನಾಳಿದರಸುಗಳಾರೆಂದು ಕೇಳಲು, ಭೈರವ ರಾಜನೊಳು ಪೇಳುತಿರ್ದನದೆಂತೆಂದೊಡೆ,

ನಳ ಹರಿಶ್ಚಂದ್ರ ಪುರೂರವ ಸಗರ ಕಾರ್ತವೀರ್ಯ ಮೊದಲಾದ ಷಡುಚಕ್ರವರ್ತಿಗಳಂ, ಗಯನೇ ಆದಿಯಾದ ಅಂಬರೀಶನಂತ್ಯವಾದ ಷೋಡಶ ರಾಜರಂ, ಕರ್ಣ, ಕೌರವ, ರಾಮ, ರಾವಣ, ಬಲಿ, ಯಯಾತಿ, ನಹುಷ, ರಘು, ಭೀಮ, ಬಲಭದ್ರ, ಕೀಚಕ, ದಶರಥ ಮೊದಲಾದವರು ಕೆಟ್ಟು ಹಾಸ್ಯಕ್ಕೆ ಕಾರಣವಾದ ಕಥೆಗಳಂ, ಕೇಳಿ ನಗುತ್ತಂ, ಸಪ್ತ ಮಾತೃಕೆಯರು, ಅಷ್ಟ ತನು, ಅಷ್ಟ ಕುಲಶೈಲಂಗಳು, ಅಷ್ಟ ದಿಕ್ಪಾಲಕರು, ಕ್ಲೇಶದಿಂ ಕಾದಿ ಮಡಿದರೆಂಬುದ ಕೇಳಿ ಚಿಂತಿಸುತ್ತಂ, ಕೌರವ

ಪಾಂಡವರು, ಮೌರ್ಯ ಕದಂಬರು, ಜೂಜು ಮೊದಲಾದ ರಾಜ
ಗರ್ವದಿಂ ಮಡಿದರೆಂಬುದಂ ಕೇಳ್ದು, ಚಿಂತಾಕ್ರಾಂತನಾಗಿ, ಮತ್ತಿಂತೆಂ
ದನು, ಶಿವಭಕ್ತಿಯುಕ್ತರಾದವರುಂಟೇ ಎನಲು, ಮೂರು ಲೋಕ
ದೊಳಗುಳ್ಳವರ ಪೇಳುತಿರ್ದಂ ನವಬ್ರಹ್ಮರುಂ ನವಗ್ರಹಂಗಳುಂ ನವ
ಒಲ್ಲಾಳರುಂ ನವಮುಗ್ಧರುಂ ನವಸಿದ್ಧರುಂ ಇಂತಿವರೊಳು ಶಿವಭಕ್ತಿ
ನಿಷ್ಠರಾಗಿ ಕೆಟ್ಟವರ್ಕೆಲಬರು. ಆರು ಶೈವದಲ್ಲಿಯು ಮುಕ್ತಿಯ ಪಡೆದ
ವರಾರು ಎಂದು ಕೇಳಲು, ಭೈರವರಾಜನಿಗೆ ಪೇಳಿದನು. ಮನುಮುನಿ
ಯಕ್ಷರಾಕ್ಷಸರು ಅರುವತ್ತು ಮೂರು ಪುರಾತನರು, ಶೈವದಲ್ಲಿ ಮುಕ್ತಿಯ
ಪಡೆದರು. ವೀರಶೈವದಲ್ಲಿ ದಶಗಣ. ತ್ರೀರಸಗಣ. ಷೋಡಶಗಣ,
ಪ್ರಮಥಗಣ, ರುದ್ರಗಣ, ಅಮರಗಣ, ಭಕ್ತಗಣ, ಮೊದಲಾದೇಳು
ನೂರೆಪ್ಪತ್ತೇಳು ಪುರಾತನರುಂ ನೂರೊಂದು ವಿರಕ್ತರುಂ ಮೊದಲಾದ
ವರು ಶ್ರೀ ವೀರಶೈವದಲ್ಲಿ ಶಿವನ ಕೃಪೆ ಪ್ರಸನ್ನತ್ವವಂ ಪಡೆದು ನಿತ್ಯಾ
ನಂದ ನಿಜಸುಖಿಗಳಾದರು, ಎಂದು ಪುಣ್ಯಕ್ಕೆ ಕಾರಣವಾದ ಪುರಾತ
ನರ ಕಥೆಗಳಂ ಪೇಳಲು, ಕೇಳ್ದು ಭೈರವರಾಜನು ಇಂತೀ ಹಾಸ್ಯಕ್ಕೆ
ಈಡಾದ ಹಾನಿ ಕಥೆಗಳಂ, ದೂಷ್ಯಕ್ಕೆ ಈಡಾದ ಜಾರ ಚೋರರ ಕಥೆ
ಗಳಂ, ಲೋಕ ವರ್ತನೆಗೆ ಬೇಕಾದ ನೀತಿಯ ಕಥೆಗಳಂ, ಮೋಕ್ಷಕ್ಕೆ
ಕಾರಣವಾದ ಪೂರ್ವ ಪುರಾತನರ ಕಥೆಗಳಂ ಕೇಳ್ದು, ಮೋಕ್ಷಾಪೇ
ಕ್ಷಿತನಾಗಿ ಎಂದಿಂಗೆ ನಾವು ಈ ಸಂಸಾರದ ಬಂಧನವಳಿದು ಕಳೆದು,
ಎಂದಿಂಗೆ ಶಿವಭಕ್ತಿಯುಕ್ತರಾಗಿಪ್ಪೆವೋ ಎಂದು ಸತಿಪತಿಗಳಿಬ್ಬರು ಶಿವ
ಜ್ಞಾನ ಶಿವಚಿಂತೆಯಿಂದ ಮರೆದೊರಗಿದಂತೆ ನಿದ್ರೆಗೆಯ್ಯಲು, ಸ್ವಪ್ನದಲ್ಲಿ
ಶಿವನು ಬಂದು ಭೈರವರಾಜನೊಳೆಂದನು.

'ನಿನ್ನ ಕರದ ಸುರಿಗೆ, ಚರಣದ ಬಿರಿದು, ನಿನ್ನ ತರುಣಿ ಸಹ
ವಾಗಿ ಮಲ್ಲಿ ಪಟ್ಟಣಕ್ಕೆ ಪೋಗಿ ಅಲ್ಲಿ ಗುರು ಕಾರುಣ್ಯವಂ ಪಡೆದು
ಸೋಸಲೆಗೆ ಪೋಗಿ ಜಂಗಮಾರ್ಚನೆಯ ಮಾಡುತ್ತಿರು. ನಿನಗೆ ನಿತ್ಯಾ
ನಂದ ಸುಖವನಿತ್ತಪೆನು. ಎನ್ನ ಪೆಸರು ಸೋಸಲ ಸೋಮೇಶ್ವರ
ಐಟ ನಿನ್ನಾಣೆ ನಂಬು' ಎಂದು ತನ್ನ ಹಸ್ತವಂ ಮಸ್ತಕದ ಮೇಲಿಟ್ಟು
ಪೋಗಲು ಎಚ್ಚತ್ತು, ಕಣ್ದೆರೆದು ಕಂಡ ಕನಸ ಸತಿಗೆ ಪೇಳಲು,
ಕಣ್ಣಪ್ಪ ಚಾರಮರಾಯ ನಂಜಣ್ಣ ಮೊದಲಾದ ಪುರಾತನರಿಗೆ ಶಿವನು
ಸ್ವಪ್ನದಲ್ಲಿ ಪೇಳಿದಂತಾಯಿತ್ತೆಂದು ಸತಿಯು ಪತಿಗೆರಗಿ, ನಮಗೆ ನಿಜ

ಮುಕ್ತಿಗೆಯ್ದುವ ಪಯಣವಾದುದೆಂದು ನಿಶ್ಚೈಸಿ, ಹರುಷದಿಂದ ದೇಶ ಕೋಶ ಜೊಕ್ಕಸ ಭಂಡಾರ ಆನೆ ಕುದುರೆ ರಥ ಪದಾತಿ ಛತ್ರ ಚಾಮರ ಸಿಂಧು ಸಿಗುರಿ ಮುತ್ತು ರತ್ನ ಮೊದಲಾದ ಸಕಲೈಶ್ವರ್ಯಮಂ ಶಿವ ಭಕ್ತರಿಗಿತ್ತು ಪಂಡಿಸಿ, ಭೈರವರಾಜಂ ತನ್ನ ಸ್ತ್ರೀ ಮಹಾದೇವಿ ಸಹವಾಗಿ ಪೋಪುರವ ಪೊರವಂಟು ಪೋಗುತ್ತಿರಲು ಕಂಡು, ಪಾರಿಯಾತ್ರಿಕ ಧನಸೇನ ಭರ್ತೃಹರಿ ಮೊದಲಾದವರು ಸಂಸಾರವ ಬಿಟ್ಟು ಪೋದಂ ತಲ್ಲವೆಂದು ಸರ್ವಜನರು ಕೀರ್ತಿಸುತ್ತಿರಲು, ಸತಿ ಪತಿಗಳು ಶಿವ, ಪಾರ್ವತಿ, ದುಗ್ಗಳವ್ವೆ ಚಂಗಳವ್ವೆ, ನಾಗಲೆ ಮೊಲಾದ ಶರಣೆಯರ ನೆನೆವುತಂ, ಮನೋವೇಗದಿಂ ಬಂದು ವಲ್ಲಿ ಪಟ್ಟಣಮಂ ಪೊಕ್ಕು ಉಳಿವಿ ಉಮೇಶ್ವರ ಲಿಂಗಮಂ ಕಂಡು ನುತಿಸಿ ಕರುಣಮಂ ಪಡೆದು ಇರುವಷ್ಟರೊಳಾ ಪಟ್ಟಣದರಸು ರಾಮರಾಜ ವೈಹಾಳಿಗೆಯ್ದುವಲ್ಲಿ ಭೈರ ವಾಂಕನ ಚರಣದಲ್ಲಿ ಬಿರಿದಂ ಕಂಡು ಕದನಂಕ ಶೂರನೆಂಬ ಪಟು ಭಟಂ ತಡೆಯಲು, ಕಾದಿ ಗೆಲ್ದು ಅವನಂ ಸಂಹರಿಸಿ, ರಾಮರಾಜನಿಂದ ಮನ್ನಣೆವೇರುವನಿತರೊಳು ಮುಂದೆ ಶಿವನ ಕಾರುಣ್ಯ ಸೂತ್ರದಿಂ ಭೈರವ ದೇವ ಮೆರೆದ ಪವಾಡವೆಂತೆಂದಡೆ, ಲಿಂಗ, ನದಿ, ಸ್ವಪ್ನ, ಆವರೆ, ಸಮರಾಂಗಣ, ಬೆರಳು, ಪನ್ನಗ, ಜಂಗಮ ದಿವ್ಯ ಫಲಂಗಳು, ಒನಕೆ, ತಪಸಿಧಿ ಹಾಗೆ ಸೋಮೇಶನುಂಟೆಂದು ನುಡಿವುದು.

---

## ಲಿಂಗದ ಪವಾಡ.

ಮೊದಲು ಲಿಂಗದ ಪವಾಡವೆಂತೆಂದೊಡೆ, ಭೈರವಾಂಕನು ಬೇಂಟೆ ಗೆಯ್ದು ತೋಹಿನಲ್ಲಿರ್ದು ಎರಳೆಯನಿರಿಯಲು ಎರಳೆಯ ರೂಪು ಹೋಗಿ ನಿಶ್ಶಾಪವಾಗಿ ಗಂಧರ್ವ ಶಿವಲೋಕಕ್ಕೈದಿ ಕಂಡು ಸಿದ್ಧರಾಮೇಶ, ಪರಾ ಶರ ಮೊದಲಾದವರ ಕೈಸೋಂಕಿನಿಂದ ನಿಃಶಾಪವಾಯಿತ್ತೆಂದು ಕೀರ್ತಿ ಸುತ್ತಿರಲು, ಭೈರವಾಂಕ ಎರಳೆಯನಿರಿದ ಕಠಾರಿಗೆ ಎರಡು ಲಿಂಗ ಸಿಲ್ಕಿ ಬರಲ್ಕಂಡು ಸಮಸ್ತ ಜನರು ಕೀರ್ತಿಸುತಿರ್ದುದು. ಲಿಂಗವಂ ಕಂಡು ರಾಮರಾಜ ಭೈರವಾಂಕರಾಜಂಗೆರಗಿ ಸಂಭ್ರಮದಿಂದ ಪಟ್ಟಣಕ್ಕೈತಂದು ದನಧಾನ್ಯ ಸಕಲ ವಸ್ತುವನಿತ್ತು ಪೊಡಮಟ್ಟು ಪೋಗಲು, ಏಕಾಂತ

ರಾಮಯ್ಯ ನೈನಾರ ಮೊದಲಾದವರಿಗೆ ಆಕಾಶವಾಣಿ ನುಡಿದಂತೆ ಶಿವನು ಪೇಳಿದನು ಸೋಸಲ ಪುರದಿಂದ ನಾಂ ಬಂದು ನಿನ್ನಂ ಕಾಣ್ಬೆ ನೆಂದೆನಲ್ಕೆ ಕೇಳಿ ಗುರುಪಾದ ಧ್ಯಾನದಿಂದಿರಲು ಸೋಸಲ ಸೋಮೇ ಶನು ಬರಲ್ಕಂಡೇಳ್ದು ಸತ್ಕರಿಸಿ ಪೂರ್ವಾಪರವಂ ಪೇಳಲು ಎನಗೆ ದೀಕ್ಷೆಯು ಕರುಣಿಸೆಂದು ಬಿನ್ನವಿಸಲು ಸರ್ವ ಗಣ ಸಮ್ಮತದಿಂ ದೀಕ್ಷಾ ತ್ರಯುವನಿತ್ತು ಸರ್ವಾಚಾರವಮಂ ಮಾಡಿ ಚರಣವ ಬಿಂದು ಇರಲಿ ಮುಂದೆ ಕಾರಣಮುಂಟೆಂಬುದೇ ಲಿಂಗವ ಪವಾಡವು.

---

## ನದಿಯು ಪವಾಡ.

ನದಿಯು ಪವಾಡವೆಂತೆಂದೊಡೆ ಮಲ್ಲಿಪಟ್ಟಣದಿಂದ ಸೋಸಲಿಗೆ ಹಾಲ ಸೋಮೇಶ ಭೈರವದೇವ ಮಹಾದೇವಿ ಶಿವಶರಣರೊಡಗೂಡಿ ಪೋಗುವಲ್ಲಿ ಹೇಮವತಿ ಎಂಬ ಹೊಳೆ ಕಟ್ಟಲು ಸರ್ವ ಜನರು ಗೂಳೆಯು ದೆಗೆದು ನದಿಯುರವಣಿಯು ಕಂಡು ನಡಗುತ್ತಿರಲು ಭೈರವದೇವ ಸರ್ವ ಜನರೊಡಗೂಡಿ ಅದರೊಳ್ ನಡೆಯಲು ಕಂಡು ಮಡಿವಾಳ ಮಾಚಯ್ಯ ಮುಸಡಿಯು ಚೌಡಯ್ಯ ಕೇಶಿ ರಾಜಯ್ಯ ನೊದಲಾದ ಪುರಾತನರು ನದಿಯು ದಾರಿಯು ಬಿಡಿಸಿ ನಡೆದಂತಾಯಿತ್ತೆಂದು ಕೀರ್ತಿಸಿದರೆಂಬುದೇ ನದಿಯು ಪವಾಡವು.

---

## ಸ್ವಪ್ನದ ಪವಾಡ.

ಇನ್ನು ಸ್ವಪ್ನದ ಪವಾಡವೆಂತೆಂದೊಡೆ, ಅಂದು ಪೋಪುರದಲ್ಲಿ ಮಲ್ಲಿ ಪಟ್ಟಣಕ್ಕೆ ಪೋಗೆಂದು ಸ್ವಪ್ನದಲ್ಲಿ ಪೇಳಿದ ಪರಶಿವ ತಾನೆ ಮುಂದೆ ಸೋಸಲೆಗೆ ಹೋಗಿ ಎನ್ನಾಚಾರ ಎನ್ನ ಸಮಯ ಸಮುದ್ಧರಣ ಭೈರವ ದೇವನಂ ಇದಿರ್ಗೊಳ್ಳಿ ಎಂದು ಪೇಳಲ್ಜನರು ಸರ್ವ ಸಂಭ್ರಮದಿಂ ಇದಿರ್ಗೊಂಡು ಸತ್ಕರಿಸಿ ಕರೆಕೊಂಡೊಯ್ದು ಸಕಲ ವಸ್ತುವನಿತ್ತು ಇರು ತ್ತಿರಲಿತ್ತ ಭೈರವದೇವನು ಗುರುಭಕ್ತಿ ಲಿಂಗಪೂಜೆ ಜಂಗಮ ದಾಸೋಹ ಮಾಡುತಿರ್ದನೆಂಬುದೇ ಸ್ವಪ್ನದ ಪವಾಡವು.

---

## ಅವರೆಯ ಪವಾಡ.

ಇನ್ನು ಅವರೆಯ ಪವಾಡವೆಂತೆಂದಡೆ, ಶಿವನು ಚರಲಿಂಗವಾಗಿ ಬಂದು ಒಂದು ಅವರೆಯ ಬೀಜವಂ ಭೈರವಂಗಿತ್ತು ಹೋಗಲು ಹಿತ್ತಲೊಳು ಬಳ್ಳಿ ಬಿತ್ತಲಂಕುರಿಸಿ ಪಲ್ಲವಿಸಿ ಪೂ ಫಲ ಕಾಯಾಗಿರೆ, ಪಾಕವ ಮಾಡಿ ಶರಣರಿಗೆ ನೀಡಿ ಅನಂತ ಕಾಲ ಹೋಗಲು ಫಲವಿಸ್ತು ಬಳ್ಳಿ ಒಣಗಿ ಹೋಗಲಿತ್ತ ಚರಮೂರ್ತಿ ಬಂದು ಅವರೆ ಫಲವಾಯಿತೇ ಎಂದು ಕೇಳಲು ಭೈರವಾಂಕ ಪವಾಡದಿಂದ ಫಲವಂ ತೋರಿ ಕಾಯ ಕೊಯ್ದು ಪಾಕವ ಮಾಡಿ ಶರಣರಿಗೆ ನೀಡಲು ಕಂಡು, ಬಸವಣ್ಣ, ನೊರಟದ ಬಂಕಣ್ಣ, ಆದಯ್ಯ ಮೊದಲಾದ ಪುರಾತನರು ಕೊಂಡು ಕೊಂಡಾಡಿ ಬರಡ ಹಯನ ಕರಸಿ ಕುರುಡ ಹೆಳವರಿಗೆ ಕಣ್ಣು ಕಾಲಿತ್ತುದರಿಂದ ಭೈರವ ದೇವನ ಪವಾಡವೇ ಅಧಿಕವೆಂದು ಕೀರ್ತಿಸಿದರೆಂಬುದು ಅವರೆಯ ಪವಾಡವು.

---

## ಸಮರಾಂಗಣದ ಪವಾಡ.

ಇನ್ನು ಸಮರಾಂಗಣದ ಪವಾಡವೆಂತೆಂದಡೆ, ಚರಣದಲ್ಲಿ ಬಿರಿದ ಕಟ್ಟಿ ಭೈರವದೇವ ಗುರುಲಿಂಗ ಜಂಗನು ಭಕ್ತಿಯ ಮಾಡುತ್ತಿರಲು ಬಿರಿದಂಕನಾದ ಚರಮೂರ್ತಿಯು ಬಂದು ಭೈರವದೇವನ ಕದನಕ್ಕೆ ಬಾರೆಂದು ಕರೆಯಲು, ಒಲ್ಲೆನು ಶಿವಶಿವ ಎನಲು ಯುದ್ಧಭಿಕ್ಷಾ ಎಂದು ಆಣೆಯನಿಕ್ಕಿ ಕಾದುವನಿತರೊಳ್ ಚರಮೂರ್ತಿ ಮಡಿಯಲು ಭೈರವ ನಿಂದು ಜಂಗಮುವನಿರಿಯಬಹುದೇ ಎಂದು ಶರಣಾಳಿ ಭೋರೆಂದು ಉಲಿವುತ್ತಿರೆ ಭೈರವದೇವ ಲಿಂಗಾರ್ಪಿತಕ್ಕೆ ಬನ್ನಿ ಎಂದು ಬಿನ್ನವಿಸಲು ನಿಜ ಜಂಗಮವಂ ಕೊಂದೆ ಒಲ್ಲೆವೆನೆ ನಿಮಗಿಂದು ನಾನವರ ಕರೆ ತಂದಪೆನು ಎಂದು ನುಡಿಯಲು ಚರಣವಂ ಪಿಡಿದು ಶರಣು ಮಾಡಿ ಕರೆಯಲು ಮಡಿದ ಚರಮೂರ್ತಿ ನುಡಿವುತೆದ್ದು ಬರಲು ಕಂಡು ಬಸವಣ್ಣ ನಂಬೆಣ್ಣ ಮುಸುಡಿಯ ಚೌಡಯ್ಯ ಸಕಳೇಶ ಮಾದರಸರು ಪ್ರಾಣವನಿತ್ತುದಕಿಂತ ಇದೇ ಅಧಿಕವೆಂದು ಭಕ್ತರು ಕೊಂಡಾಡಿದಂತೆ ಜಂಗಮದ ಪವಾಡವೆಂಬುವದೇ ಸಮರಾಂಗಣದ ಪವಾಡವು.

---

## ಬೆರಳ ಪವಾಡ

ಇನ್ನು ಬೆರಳಪವಾಡವೆಂತೆಂದಡೆ, ಭೈರವದೇವ ತಮ್ಮ ಶೀಲಕ್ಕೆ ತಿಲಪ ಗಾಣವನಾಡಿಸುತ್ತ ಸುಯಿಧಾನದಿಂದಿರೆ ಶಿವನು ಭಕ್ತನಂತೆ ಬಂದು ಹಿತನ ನುಡಿದು ಎಳ್ಳ ನೀ ನೂಕು ನಾನು ತಿರುಹುವನೆಂದು ನೋಪ ದೊಳ್ತಿರುಹಲು ಭೈರವದೇವನ ಕೈ ಬೆರಳು ಖಂಡಿಸಿ ಬೀಳಲು ಭೈರವನು ನಮಃಶಿವಾಯ ಎಂದು ಭಸ್ಮ ಮುಟ್ಟಿ ಲಿಂಗಾರ್ಚನೆಗೆಯ್ಯಲು ಕಂದ ಬೆರಳ ಚಿಗಿತು ಬರಲು ಕಂಡು ಕೋವೂರ ಬೊಮ್ಮಯ್ಯ ಬಾಣಕವೀಶ್ವರ ಗುರುಭಕ್ತಯ್ಯ ಮೊದಲಾದ ಭಕ್ತರು ಚರಣ ಕರ ಕಣ್ಣ ಪಡೆದುದಕ್ಕಿಂತ ಇವೇ ಘನ್ನವೆಂದು ಶರಣರು ಕೊಂಡಾಡಿದರೆಂಬುದೇ ಬೆರಳಪವಾಡವು.

---

## ಪನ್ನಗನ ಪವಾಡ.

ಇನ್ನು ಪನ್ನಗನ ಪವಾಡವೆಂತೆಂದಡೆ ಭೈರವನು ಪುಷ್ಪದ ತೋಟಕ್ಕೆ ಪೋಗುವಲ್ಲಿ ಶಿವನಾಜ್ಞೆಯಿಂದ ಸರ್ಪ ಕಚ್ಚಿ ತಾನೇ ಮಡಿಯುಲು ಭೈರವದೇವ ಪೂಕೊಯ್ದು ಮನೆಗೆ ಬಂದು ಶರಣಗೋಷ್ಠಿಯಿಂದಲು ನಿಮ್ಮ ಕಡಿದ ಸರ್ಪ ಸತ್ತುದೆಂದು ಪೇಳಲು ಕೇಳಿ ಶರಣಾಳಿ ಸಹಿತ ನಡೆತಂದು ಉರುಗನ ಶವವ ಕಾಣುತ್ತ ಶಿವಶಿವ ನಮಃ ಶಿವಾಯ ಎಂದು ಕರವಿಟ್ಟು ನೇವರಿಸಲು ಭೋರೆಂದು ಮುರಿದೆದ್ದು ಪೆಡೆಯನೆತ್ತುತಿರೆ ಭೈರವಾಂಕ ಪೋಗೆಂದು ಕಳುಪಲು ಕಂಡು ಶರಣಾಳಿ ಹಾವಿನಹಾಳ ಕಲ್ಲಯ್ಯ, ಸಿಂಗಿ ಬೊಪ್ಪಯ್ಯ ಕದಿರಿ ರೆಮ್ಮವ್ವೆ ವೇಮನಾರಾಧ್ಯರು ಮೊದಲಾದ ಪುರಾತನರು ಸರ್ಪದಿಂದಳಿದವರಿಗೆಯೂ ಪ್ರಾಣವನಿತ್ತುದಕ್ಕಿಂತ ಭೈರವದೇವ ಸರ್ಪಂಗೆ ಪ್ರಾಣವನಿತ್ತುದೇ ಆಶ್ಚರ್ಯವೆಂದು ಭಕ್ತರು ಕೊಂಡಾಡುತಿರ್ದರೆಂಬುದೇ ಪನ್ನಗನ ಪವಾಡವು.

---

## ಜಂಗಮುದಿಷ್ಟ ಫಲದ ಪವಾಡ.

ಇನ್ನು ಜಂಗಮುದಿಷ್ಟ ಫಲದ ಪವಾಡನೆಂತೆಂದಡೆ ಶರಣರೊಡನೆ ಭೈರವಾಂಕನು ವನದೊಳಗಿರಲು ಶಿವನು ಚರಲಿಂಗವಾಗಿ ಬಂದು ಆಕಾಶದಲ್ಲಿ ಚೂತ ವೃಕ್ಷದಿಂ ಪವಾಡದಿಂದ ಚೂತಫಲವಂ ಮಾಡಿ ಅನು

ತ್ರರ ಅಪಂ ಭಕ್ತರ್ಸವಿದು ಲಿಂಗ ತೃಪ್ತಿಯೊಳಗಿರಲು ಕಾರಿಕಾಲಮ್ಮೆ ದಂಡನಾಥ ಮುಸುಡಿ ಚೌಡಯ್ಯ ಮೊದಲಾದ ಪುರಾತನರು ಜಂಗಮಕಿತ್ತುದರಿಂದ ಭೈರವದೇವನಿತ್ತುದು ಕರಚೋದ್ಯವೆಂದು ಭಕ್ತರು ಕೊಂಡಾಡಿದರೆಂಬುದೇ ಜಂಗಮದಿಷ್ಟಫಲದ ಪವಾಡವು.

---

## ಒನಕೆಯ ಪವಾಡ.

ಇನ್ನು ಒನಕೆಯ ಪವಾಡವೆಂತೆಂದಡೆ ಮಹಾದೇವಿಯಮ್ಮನು ರಾಜಾನ್ನದಕ್ಕಿಯಂ ತಳಿಸುತ್ತ ಶ್ರೀಗುರುನಾಥ ನಾಗಮ್ಮ, ನೀಲಮ್ಮ, ಕಮಳವ್ವೆ ಮೊದಲಾದ ಶರಣೆಯರ ಪಾಡುತ್ತಿರಲು ಸೋಮೇಶನು ಚರ ಲಿಂಗವಾಗಿ ಬಂದು ಮರೆಯಲಿ ನಿಂದು ಲಾಲಿಸಿ ಬಾಗಿಲಿಗೆ ಬಂದು ಮಹಾದೇವಿ ಎನಲು ಕಂಡು ಕಡುಭೀತಿಯಿಂದ ಕೈಯಲಿದ್ದೊನಕೆಯ ಅಂತರದಲ್ಲಿಯೇ ಬಿಟ್ಟು ಬೇಗ ಬಂದು ಪಾದಕ್ಕೆರಗಿ ಸರ್ವ ಸತ್ಕಾರವನಿತ್ತು ಅನಿತರೊಳು ಗುರು ಸೋಮನಾಥ ಅಂತರದಲ್ಲಿ ನಿಂತಿರ್ದ ಒನಕೆಯಂ ಕಂಡು ನಂದೀಶ ಬಸವಣ್ಣ ಮಡಿವಾಳಯ್ಯಗಳು ಮೊದಲಾದ ಶರಣರ ಮಹಿಮೆಗಿಂತ ಮಹಾದೇವಿಯಮ್ಮನ ಪವಾಡವೇ ಅಧಿಕವೆಂದು ಕೊಂಡಾಡಿದರೆಂಬುದೇ ಒನಕೆಯ ಪವಾಡವು.

---

## ತವನಿಧಿಯ ಪವಾಡ.

ಇನ್ನು ತಪನಿಧಿಯ ಪವಾಡವೆಂತೆಂದಡೆ ಶಂಕರದಾಸಯ್ಯನಂತೆ ಸೂಜಿ ಕಾಯಕವ ಮಾಡಿ ಜಂಗಮಾರ್ಚನೆಯ ಮಾಡಬೇಕೆಂದು ಭೈರವಾಂಕನು ನೂತನದಂಗಿಯಂ ಪೊಲಿದು ವಿಕ್ರೈಸುವಷ್ಟಕ್ಕೆ ಶಿವನು ಚರ ಲಿಂಗವಾಗಿ ಬಂದು ಹರಸಿ ಭಸಿತವನಿಟ್ಟು ಅಂಗಿಯ ಬೇಡಲು ಭೈರವಾಂಕ ಅಂಗಿಯನಿತ್ತು ವಂದಿಸಲು ಶರಣರು ಕಂಡು ಭಾಪೆಂದು ಕೀರ್ತಿಸುತ್ತಿರೆ ಬಸವಣ್ಣ, ನಿಡುಗುಡಿಯ ಮಾರಯ್ಯ, ದಾಸಯ್ಯ ಮೊದಲಾದ ಶರಣರು ಜಂಗಮಕ್ಕೆ ವಸನವನಿತ್ತುದರಿಂದೇನು ಚೋದ್ಯವೆಂದು ಕೆಲರು ಕಿರಿದು ಮಾಡಿ ನುಡಿಯಲು ಕೆಲರು ಘನವ ಮಾಡಿ ಕೊಂಡಾಡು

ವನಿತಕ್ಕೆ ತವನಿಧಿ ಹೆಚ್ಚಲು ಕಂಡು, ಕೊಟ್ಟಿಗೆಯ ಶಿವದೇವ ನಂಬೆಣ್ಣ ಚಿರುಪುಲಿಯೂರು ಮೊದಲಾದ ಪುರಾತನರು ತವನಿಧಿಯ ಪಡೆದುದಕಿಂದಿದೇ ಚೋದ್ಯವೆಂದು ಕೊಂಡಾಡಿದರು ಭಕ್ತರು ಎಂಬುವದೇ ತವನಿಧಿಯ ಪವಾಡವು.

---

## ಸೋಮೇಶನುಂಟೆಂದ ಪವಾಡ.

ಸೋಮೇಶನುಂಟು ಎಂದ ಪವಾಡವೆಂತೆಂದಡೆ ಭೈರವಾಂಕನು ಪೋಸಲೆಯಿಂದ ಕಕ್ಕೆರೆಯಾರಾಧ್ಯ ಮಲ್ಲಣ್ಣಯ್ಯನಂ ಗಣಾಡಂಬರದ ಪರ್ವಕ್ಕೆ ಬಿನ್ನಹಮಂ ಮಾಡಲು ಭಕ್ತಾಳಿಗೂಡಿ ಪೋಗಿ ಪಾದಾಂಬುವಂ ಸವಿದು ಶಿವಗಣ ಸುಖಾಬ್ಧಿಯೊಳೋಲಾಡುತ್ತಿರಲತ್ತ ಕಮಲಸಖನಸ್ತಾದ್ರಿಯನೇರಲು ಕಾರ್ಗತ್ತಲೆಯಾಗೆ ಮರಳಿ ಭೈರವಾಂಕ ಪೊಸಲೆಗೆ ನಡೆತರುವಾಗ ಪುರಹರನು ಚತುರಂಗ ಬಲವೆರಸಿ ಬಂದು ಅಭೂತರೂಪಂ ತೋರಿ ದೇವತಾಸುರರು ಸಹವಾಗಿ ಭೈರವನೊಡನೆ ಕಾದುವಲ್ಲಿ ಹರನ ಚತುರಂಗಬಲ ಮುರಿದೋಡಲು ಕಂಡು ಶಿವನು ಭೈರವಂಗೆ ನಿಜದೋರಲು ಎರಗಿದ ಭೈರವನಂ ಮನ್ನಿಸಿ ಮೈದಡಹಿ ಛಲವಂತ ಶರಣ ಕೈಲಾಸಕ್ಕೆ ಬಾರೆನಲು ಇಂದಿಗೆ ತಿಂಗಳಿಗೆನ್ನ ಮಡದಿ ಸಹಿತ ಬಂದೆಪೆನೆನಲು ಶಿವನು ಕೈಲಾಸಕ್ಕೆ ಪೋಗಲಿತ್ತ ಭೈರವಾಂಕನು ಮಂದಿರಕ್ಕೈತಂದು ಲಿಂಗಪೂಜೆಯಂ ಮಾಡಿ ಸುಖದಿಂದಿರ್ದು ಬೆಳಗಾಗಲೆಯ್ತಂದು ಶ್ರೀಗುರುವಿಗೆ ಶಿವನ ಕೃಪೆಯ ಬಿನ್ನವಿಸಲು ಕೇಳಿ ಶರಣಾಳಿ ಚೋದ್ಯವೆಂದು ವೀರೇಶ ದಕ್ಷಾಧ್ವರಕ್ಕೆ, ಪೂಗಾರಿ ತ್ರಿಪುರ ಸಂಹಾರಕ್ಕೆ, ನಡೆದ ದಂಡಿನಂತಲ್ಲವೆಂದು ಕೀರ್ತಿಸುತ್ತಿರಲು ವಾದಿಗಳು ನೆರೆದು ಸಟೆಯೆಂದು ಹಾಸ್ಯದಿಂದ ಘೋರಾಂಧಕಾರದ ಊರಿಂದ ಬರುವ ದಾರಿಯಲ್ಲಿ ಗೊರವ ಕರೆದಪಂ ಗಡಾ ಎನುತ್ತಿರಲು ವೇದಾಗಮೋಕ್ತದಿಂದವರವರ ಮತವಂ ಖಂಡಿಸಿ ಬಾಡಾ ಬಂಧವಾಗಿ ಬಂಧಿಸಿ ಪೂರ್ವದ ಪುರಾತನರು ಸಮಸ್ತ ಸಮಯವಂ ಸಂಹರಿಸಿ ಮದಂ ಪೇಳಲು ಸೋತು ತಲೆವಾಗಿ ಕಪಟದಿಂದಲಿಂತೆಂದರು, ಅಂದು ಕರೆದ ಶಿವನು ಇಂದು ಕರೆದನೆನಲಾದರೆ ಭೈರವದೇವನ ನುಡಿಸು ಎನಲು ಅಂತಾಗಲೆಂದು ಶರಣ ಸಹವಾಗಿ ಸೋಮೇಶನಾಲಯಕ್ಕೈ

ತಂದು ಕರೆದು ನುಡಿ ದೇವ ಎನ್ನೊಳಿರುಳೆಂದಂತೆ ಎನಲು ನನ್ನಸು ನನ್ನಾಚಾರ ನನ್ನ ಸಮಯ ಸಮುದ್ಧರಣ ಭೈರವದೇವ ನನ್ನ ಕರೆದುದುಂಟೆಂದು ನುಡಿಯಲು ಭುವನವೆಲ್ಲ ಜಯ ಜಯ ಎಂದು ಕೀರ್ತಿಸಿ ಶರಣರ ಮರೆಹೊಕ್ಕು ಬಸವಣ್ಣ ನಂಬೆಣ್ಣ ದಾಸೈಯ್ಯ ವಾಗೀಶಯ್ಯ ಮೊದಲಾದ ಪುರಾತನರು ಲಿಂಗವ ನುಡಿಸಿದುದಕ್ಕಿಂತ ಭೈರವದೇವನು ಲಿಂಗವ ಮಾತಾಡಿಸಿದುದತ್ಯದ್ಭುತವೆಂದು ಸಮಸ್ತ ಶರಣರು ಕೊಂಡಾಡಿದರೆಂಬುದೇ ಸೋಮೇಶನುಂಟೆಂದ ಪವಾಡವು.

ಅಂದಿಗೆ ತಿಂಗಳು ತುಂಬಲು ಭೈರವಾಂಕನು ಭುವನದೊಳಷ್ಟದಿಕ್ಕಿನೊಳಗುಳ್ಳ ಸದ್ಭಕ್ತ ಶರಣಾಳಿಗಳಿಗೆ ವಿಭೂತಿ ವೀಳೆಯ ಬಿನ್ನವತ್ತಳೆಯಂ ಕಳುಹಿ ಕರಸಿ ಬರಲವರ ಇದಿರ್ಗೊಂಡು ಸತ್ಕರಿಸಿ ಶಿವಗಣಾನಂದಾಬ್ಧಿ ಸಂಭ್ರಮ ಸುಖದೊಳೋಲಾಡುತ್ತಿರಲು ಅಸಿತದೊಳು ಶಿವನು ಭೇರೀನಾದ ಪೂಮಳೆ ಪ್ರಮಥರ ಸಂದಣಿಯಿಂದೆ ಪ್ರಸನ್ನವಾಗಲು ಅಡಿಗೆರಗಿದ ಭೈರವನ ಪಿಡಿದೆತ್ತಿ ಸಂತೈಸಿ ಸತ್ಕರಿಸಿ ಮಡದಿಸಹಿತ ಪುಷ್ಪಕದೊಳಗಿಟ್ಟು ದೇವಗಣ ದುಂದುಭಿ ಜಯ ಜಯ ರವದಿಂದ ಕೈಲಾಸಕ್ಕೆ ಕೊಂಡೊಯ್ದು ಶ್ರೀಗುರು ನಂದೀಶ್ವರರಿಗೆ ತೋರಿ, ಬೀರ ಶರಣ ಭೈರವಂಗೆ ಶಂಕರನು ನಿತ್ಯಾನಂದ ನಿಜಸುಖವನಿತ್ತನು ಕಕ್ಕೇರಿಯಾರಾಧ್ಯರು ನಂಜುಂಡೇಶನೆಂಬ ಶಿವಕವೀಶ್ವರನು ವಸ್ತುಕವರ್ಣಕದಿಂದ ನವರಸಾರ್ಥ ಹದಿನೆಂಟು ಶೃಂಗಾರಯುಕ್ತವಾಗಿ ಕರ್ನಾಟಕ ಕಾವ್ಯ ಪ್ರಬಂಧಮಂ ಪೇಳಿದನೆಂಬುದೇ ಭೈರವೇಶ್ವರನ ಕಾವ್ಯದ ಕಥಾಗರ್ಭಸೂಚನೆಯೆಂದರಿವುದು.

ಮುಂದೆ ಕಥಾಗರ್ಭ ಸೂತ್ರಾರ್ಥದ ವಿಸ್ತಾರವೆಂತೆಂದೊಡೆ,

# ಪಾಲ್ಕುರಿಕೆ ಸೋಮಾರಾಧ್ಯ.

"ಶಿವಾನಂದ ಜಲಧೇಂದು ಶಿವೆ" ಎಂಬುದಕ್ಕೆ ಕಥೆಃ—

ಪಾಲ್ಕುರಿಕೆ ಸೋಮಾರಾಧ್ಯರು ವಾದವ ಖಂಡಿಸುತ್ತಿದ್ದರು. ಪರಶಿವನೆಂಬ ಸಮುದ್ರದಲ್ಲಿ ಬ್ರಹ್ಮ ವಿಷ್ಣ್ವೇಂದ್ರಾದಿ ಸಚರಾಚರ ಪ್ರಾಣಿಗಳೆಂಬ ತುಂತುರ್ವನಿಗಳೊಳ್ ನೊರೆ ತೆರೆಗಳು ಬುದ್ಬುದಾದಿಗಳು ಅಲ್ಲಿಯೇ ಪುಟ್ಟಿ ಅಲ್ಲಿಯೇ ಅಡಗುತ್ತಿಹವು. ಚಂದ್ರ ಕಂಡಡೆ ಸಮುದ್ರ ಹೆಚ್ಚುತ್ತಿಹುದು. ಸಖ್ಯತ್ವ ಉಂಟಾದ ಕಾರಣ. ಕೋಟಿ ಚಂದ್ರ ಪ್ರಕಾಶವನು ಮೀರಿ ತೋರುವ ಮುಖವನುಳ್ಳ ಪಾರ್ವತಿಯು ಕಂಡಡೆ ಪರಶಿವನೆಂಬ ಸಮುದ್ರಕ್ಕೆ ಜಗತ್ ಸೃಷ್ಟಿಯನುಂಟುಮಾಡುವ ಲೀಲೆ ಹೆಚ್ಚುವದು. ಶಿವಭಕ್ತಿ ಸಂಪುಟದಿಂದ ಅನಂತಕೋಟಿ ಬ್ರಹ್ಮಾಂಡಂಗಳುದಯಿಸಿದವು. ಶಿವಭಕ್ತಿಗಳಿಂದ ಸಕಲ ಸುಖ ಭೋಗ ಮೋಕ್ಷಂಗಳುಂಟಾಗುತ್ತಿಹವು. ನಿತ್ಯಾನಂದ ನಿಜಮೋಕ್ಷವೆಂಬ ಸಮುದ್ರವ ಹೆಚ್ಚಿಸುವದಕ್ಕೆ ಜ್ಞಾನಶಕ್ತಿ ಎಂಬ ಚಂದ್ರನೇ ಕಾರಣನು ಎಂದು ಪಾಲ್ಕುರಿಕೆಯ ಸೋಮಾರಾಧ್ಯರು ನುಡಿಯಲು, ಶಂಖ ಚಕ್ರ ಸಹ ಪುಟ್ಟಿದ ಚಕ್ರಪಾಣಿ ರಂಗನು ಹರಿಯು ನಾಭಿಯಲ್ಲಿ ಗಂಡನ್ನು, ಕಾಲಲ್ಲಿ ಹಣ್ಣನ್ನು ಹೆತ್ತನೆನಲು, ಅದು ಸಟೆ ಎಂದು ಲಲಿತ ಭೈರವಿಯಲ್ಲಿ ಶಿವನೆಂಬ ಸಮುದ್ರದಲ್ಲಿ ಬ್ರಹ್ಮವಿಷ್ಣ್ವೇಂದ್ರಾದಿ ದೇವತೆಗಳೆಂಬ ಜಲ ಪ್ರಾಣಿಗಳುದಯಿಸಿದವೆಂಬುದನುಂಟುಮಾಡಿ ತೋರಲು, ಸೋತು ಭಂಗಿತನಾಗಿ ಅಡಿಗೆರಗಿ ಪೋಬಳಕ್ಕೆ ಪೋಗುವಲ್ಲಿ, ಶ್ರೀಗಿರಿಯ ಶಿಖರವ ತಾನು ನೋಡಬಾರದೆಂದು ಮರೆಮಾಡಿ ತಾ ಪೋಗುತ್ತಿರಲು, ನಯನವೆರಡು ಪೋದವು ಹರಿಯು ನುತಿಸಿ ಕೇಳಲು ಮಲ್ಲಿಕಾರ್ಜುನ ಕೊಟ್ಟಿಹನೆನಲು ಮಲ್ಲಿಕಾರ್ಜುನಂಗೆರಗಿ ಒಂದು ನಯನವನಿತ್ತು, ಇನ್ನೊಂದು ನಯನವ ಪಾಲ್ಕುರಿಕೆ ಸೋಮಾರಾಧ್ಯರು ಕೊಟ್ಟಾರು ಹೋಗೆನಲು, ಮರಳಿ ಬಂದು ವಂದಿಸಲವನ ನಯನವಂ ಕೊಟ್ಟು ಚತುರ್ಮುಖ ಬಸವರಸನಿಂ ದೀಕ್ಷೆಯಂ ಕೊಡಿಸಿಲು, ಅವನು ವೀರಭದ್ರ ವಿಜಯವ ಪೇಳುವಲ್ಲಿ ಹರಿಯು ಸಮವಾಗಿ ವೀರಭದ್ರನ ಕೂಡೆ ಕಾದಿದನೆನಲು ಹಿಂದಣ ಜಡ್ಡು ಬಿಡದೇ ಎಂದು ಜರಿಯಲು ಶರಭ ದಂಡಕವ ಪೇಳಲು ಒಪ್ಪಿಗೊಂಡರು. ಬಳಿಕವನು ಪಾರ್ವತೀಶ್ವರನ ನುತಿಸುವಲ್ಲಿ ಅರ್ಧನಾರೀಶ್ವರನ ಸ್ತೋತ್ರವ ಮಾಡಿದನು.

# ಸಿದ್ಧರಾಮ.

ನಂದಿಕೇಶ್ವರ ಭೃಂಗಿ ಸ್ಕಂದ ಮುಖ್ಯಾಮರಾಳಿ ಬಂದೆಸ್ನ ಹೃತ್ಕಮಲದೊಳು ನಿಂದು ಎಂಬುದಕ್ಕೆ ಕಥೆ। ಸೊನ್ನಲಾಪುರದಲ್ಲಿ ಸಿದ್ಧರಾಮೇಶ್ವರನೊಪ್ಪುತ್ತಿರಲು ಶಿವಭಕ್ತರು ಸುಖಗೋಷ್ಠಿ ಪ್ರಸಂಗದಿಂದ ಕೇಳ್ವರು, ನೊಸಲ್ಗಣ್ಣ ಮುಕುಟವು ತನಗೆ ತಾನೇ ಪುಟ್ಟಿ ಅನ್ನ ಪಾನಾದಿಗಳ ಹಂಗಿಲ್ಲದೆ, ನಿಂದರೆ ನೆಳಲಿಲ್ಲ, ನಡೆದರೆ ಹೆಜ್ಜೆಯಿಲ್ಲದೆ ಚರಿಸಿ, ಸಮಾಧಿಯುಂತ್ಯದಲ್ಲಿ ಕೈಲಾಸಕ್ಕೆ ಪೋಗಿ ಪ್ರಮಥರ ಸದ್ಗೋಷ್ಠಿಯುಲ್ಲಿ ತತ್ವಾರ್ಥವನರಿದು ಮರಳಿ ಧರೆಗೆ ಹೋಗುತ್ತ ಬರುತ್ತ ಇದ್ದಿರಿ, ಅಲ್ಲಿ ನೀವು ಪ್ರಮಥ ನಾಯಕ ನಿರ್ಮಲ ಬಸವನ ಕಂಡಿರೇ? ಶಿವಭಕ್ತಿ ಸಮತೆಯುಲ್ಲಿ ಇಪ್ಪನೆಂದು ಕೇಳ್ದಿವು ಎನಲು, ಆತನ ನೆಲೆಯು ತಿಳಿದು ಬಂದು ಪೇಳಿಹೆನೆಂದು ಸಿದ್ಧರಾಮಯ್ಯ ಕೈಲಾಸಕ್ಕೈದಿ ಸಕಲ ಪ್ರಮಥರಂ ಶಿವನಂ ಕಂಡೆರಗಿ, ಪರಶಿವನೇ ಪ್ರಮಥ ಲೋಕದಲ್ಲಿ ಬಸವನುಂಟೇ ಕಂಡಿರೇ, ಎಂದು ಭೂಲೋಕದ ಭಕ್ತರು ಎನ್ನ ಕೇಳ್ವರು, ಬಸವನಿರವನೆನಗೆ ಪೇಳಿ ಎನಲು, ಬಸವನಿಲ್ಲದ ಭುವನ ಭವನವ ಪುದು, ಭಕ್ತರೊಳು ಜಂಗಮದೊಳು ಪ್ರಮಥರೊಳು ತನ್ನೊಳಗಿಲ್ಲವೇ ಎಂದು, ಶಿವನು ತಮ್ಮುದರವಂ ಬಗಿದು ತೋರುವಲ್ಲಿ, ಶಿವನೋಲಗವ ವಿಸ್ತಾರವೆಲ್ಲವಂ ಶಿವನ ಹೃತ್ಕಮಲದಲ್ಲಿ ಬಸವಣ್ಣನೋಲಗವಾಗೊಪ್ಪುತ್ತಿರಲು, ಕರಿಮುಖ ಶರಭಮುಖ ಶಾರ್ದೂಲಮುಖ ಸ್ಕಂದ ಭೃಂಗಿ ವೀರಕ ವೀರಭದ್ರಾದಿ ಪ್ರಮಥರು, ಹರಿಯಜ, ಇಂದ್ರರು, ಮನುಮುನಿ, ಯಕ್ಷ, ರಾಕ್ಷಸ, ನರ, ಸುರ, ಗರುಡ, ಗಂಧರ್ವರು ಬವಸಣ್ಣನಿಗೆರಗಿ ಕೀರ್ತಿಸಲು, ರಾಮಯ್ಯ ನೋಡುತ್ತಿರೆ ಶಿವನೆಂಬನು, ಶಿವಭಕ್ತರೇ ಕರ್ತರು, ನಾನೇ ಭೃತ್ಯನು, ಶರಣರುಂಡೊಕ್ಕ ಶೇಷ ಪ್ರಸಾದವ ಸವಿವ ಸುಖನಾದರೆ ಸಂಸಾರವೇ ಲೇಸು ಎನಲು, ಸಿದ್ಧರಾಮೇಶ್ವರ ಕಂಡು, ಶಿವನಿಗೆರಗಿ ಭೂಲೋಕಕ್ಕೈತಂದು ಶಿವನು ತನಗೆ ತೋರಿಸಿದಂತೆ ಸಿದ್ಧರಾಮಯ್ಯನು ತನ್ನುದರವ ಬಗೆದು ಭಕ್ತರಿಗೆ ತೋರುವಲ್ಲಿ, ಸ್ಕಂದ ಭೃಂಗಿ ವೀರೇಶ ಸಕಲ ಪ್ರಮಥರು ದೇವತಾಸುರರು ರುದ್ರಗಣ ಪ್ರಮಥಗಣ ಅಮರಗಣ ಮೊದಲಾದ ಪ್ರಮಥರಿಂದೊಪ್ಪುತ್ತ

ಬಸವಣ್ಣ ಸಿದ್ಧರಾಮಯ್ಯನ ಹೃದಯದಲ್ಲಿ ಒಪ್ಪುತ್ತಿರಲು, ಸಕಲ ಭಕ್ತರು ಕಂಡು, ಶಿವನ ನೆನೆವ ಭಕ್ತರ ಹೃದಯದಲ್ಲಿ ಬಸವಣ್ಣ ಮೊದಲಾದ ಸಕಲ ಪ್ರಮಥರು ಇಪ್ಪುದು ತಪ್ಪದೆಂದು ಕೊಂಡಾಡುತಿರ್ದರು.

---

## ರಾಘವಾಂಕ ಪಂಡಿತ.

ಆಂಧ್ರದೇಶದಲ್ಲಿ ಓರುಗಲ್ಲೆಂಬ ಪಟ್ಟಣದಲ್ಲಿ ಪ್ರತಾಪ ರುದ್ರನೆಂಬ ಅರಸಿರಲು ಅಲ್ಲಿ ಏಕದಂಡಿ ದ್ವಿದಂಡಿ ತ್ರಿದಂಡಿ ಎಂಬ ಮೂವರು ವೈಷ್ಣವ ಕವಿಗಳು ಸಕಲ ವಿದ್ವಾಂಸರು ಮಾಡಿದ ಪದ್ಯವಂ ಮೂರು ವೇಳೆ ಓದಿಸಿ, ನಿನ್ನ ಪದ್ಯ ತಪ್ಪೆಂದು ಆ ಪದ್ಯವ ಪಾಠವಂ ಮಾಡಿ ತಾವು ಮೂವರು ಓದಲು ನಮ್ಮ ಪದ್ಯವ ನೀನೆಲ್ಲಿ ಕಲಿತೆ ಎಂದು ಸಮಸ್ತ ಕವಿಗಳನ್ನು ಆ ರಾಜನಲ್ಲಿ ಮನ್ನಣೆ ಇಲ್ಲದಂತೆ ಸೋಲಿಸುತ್ತಿರಲು, ಇತ್ತ ವಿದ್ಯಾನಗರವೆಂಬ ಪಟ್ಟಣದಲ್ಲಿ ಉಭಯ ಕವಿ ಶರಭ ಭೇರುಂಡನೆಂಬ ಬಿರುದಾಂಕಿತನಾದ ರಾಘವಾಂಕ ಪಂಡಿತನೆಂಬ ಶಿವ ಕವೀಶ್ವರನು ಆ ವಾರ್ತೆಯ ಕೇಳಿ ಕಪಿ ಮುಖ ಕವಾಟವೆಂಬ ಪದ್ಯ ಶಾಸ್ತ್ರವಂ ರಚಿಸಿ ಓರುಗಲ್ಲಿಗೆ ಹೋಗಿ ಆ ರಾಯನ ಸಭೆಯಲ್ಲಿ ಆ ತ್ರಿದಂಡಗಳೆಂಬ ವಾದಿಗಳ ಮುಂದೆ ಓದಲು ಅವರಿಗೆ ಮೂರು ವೇಳೆ ಓದಿದರೆಯೂ ಪಾಠ ಬಾರದಿರಲು ರಾಘವಾಂಕ ಪಂಡಿತ ನಿನ್ನ ಪದ್ಯವು ತಪ್ಪು ಎನಲು, ಅದಕ್ಕೆ ಅರ್ಥ ಸಮಸ್ಯಕ್ಕೆ ಪದ್ಯವಂ ಮಾಡಿಸಿ ಅರ್ಥೈಸಿ ಎನೆ, ಆ ಮೂವರಿಗೆಯೂ ಬಾರದಿರಲು, ಪ್ರತಾಪರಾಯನು ರಾಘವಾಂಕ ಪಂಡಿತರಿಗೆ ಕರವ ಮುಗಿದು ವಂದಿಸಿ ನೀವು ಅರ್ಥೈಸಿ ಎನೆ ಆ ತ್ರಿದಂಡಿಗಳು ನಿಮ್ಮ ಪದ್ಯ ತಪ್ಪೆಂದುದು ನಮ್ಮದು ತಪ್ಪು ಎಂದ. ಹೊಡೆಗೆಡದು ಹೊರಡಿಸಿ ಬಿಡು ಎನಲು ಹಾಗೆ ತಪ್ಪೆನಿಸಿ ಸಭೆಯಿಂದ ಹೊರಡಿಸಿದನು. ಆಗ ರಾಘವಾಂಕ ಪಂಡಿತರು ಪೂರ್ವ ಪಸ್ಯವ ಕೂಡಿ ಅರ್ಥೈಸಲು ಪ್ರತಾಪರಾಯನ ಸಭೆಯಲ್ಲಿರ್ದವರೆಲ್ಲ ಕೀರ್ತಿಸಿದರು ಉಭಯ ಕವಿಶರಭ ಭೇರುಂಡ ರಾಘವಾಂಕ ಪಂಡಿತರು ಎಂಬ ಶಿವ ಕವೀಶ್ವರನ ಕವಿತ್ವದಲ್ಲಿ ತಪ್ಪಿಲ್ಲವೆಂದು ಸಮಸ್ತ ಸಮಯದ ಕವಿಗಳೆಲ್ಲ ಕೀರ್ತಿಸಿದರು.

---

# ಬಾಣಕವಿ.

ಭೂಲೋಕದಲ್ಲಿ ಗಾಂಧಾರಪುರವೆಂಬ ಪಟ್ಟಣದಲ್ಲಿ ನಂದ ಚಕ್ರವರ್ತಿ ರಾಜ್ಯವನ್ನಾಳುವಾಗ ಆತನ ಓಲಗದಲ್ಲಿ ಬಾಣನು ಮಯೂರನು ಕಾಳಿದಾಸನು ವರರುಚಿ ಮೊದಲಾದ ಮುನ್ನೂರರುವತ್ತು ಕವಿಗಳಿರುವಲ್ಲಿ, ಬಾಣನು ಕಾಳಿದಾಸನು ಸಹವಾಗಿ ಮಯೂರನ ಮೇಲೆ ಮತ್ಸರವ ಮಾಡುತ್ತಿರಲು, ನಂದರಾಜನ ಓಲಗದಲ್ಲಿ ಕವಿತ್ವದ ಹುರುಡು ಮನದೊಳಗೆ ಹೆಚ್ಚಿ, ತಾವಿಬ್ಬರೂ ಕೂಡಿ ಏಕಾಂತದಲ್ಲಿ ನಂದರಾಜನ ಕೂಡೆ ಹೇಳಿದರು. ಕವಿ ಮಯೂರನ ಇಲ್ಲಿಗೆ ಪೊಗಿಸಬೇಡ ಎನಲು, ರಾಜನೇಕೆಂದು ಕೇಳಲು ಆತನು ಕುಷ್ಠ ಎನಲು, ರಾಜನು ಕೇಳ್ದು ಕೌತುಕವ ತಾಳ್ದು ನೋಡುವೆನೆಂದು ನಾಳೆ ಜಲ ಕೇಳಿಗೆ ಒಸ್ಸಿ ಎಂದು ಸಾರಿಸುತ ಸಂಭ್ರಮಿಸುವನಿತಕ್ಕೆ. ಬಾಣಕವಿ ಕಾಳಿದಾಸರ ತಂತ್ರವೆಂದರಿದು ಮಯೂರ ಚಿಂತಿಸುತ್ತಿರಲು, ಸೂರ್ಯನಸ್ತಮಿಸಲು ಕತ್ತಲೆಯಾಗೆ ಗಿರಿಜೆಯ ನಗೆಯಂತೆ ಚಂದ್ರನು ಬೆಳಗಿರಲು, ನಿದ್ರೆಯಿಲ್ಲದೆ ಮಯೂರ ಚಿಂತೆಯೊಳಿರ್ದು, ಸೂರ್ಯನಿಂದೆನ್ನಂಗದ ಕುಷ್ಠವ ಕಳೆವೆನೆಂದು ನಿರ್ಮಳ ಗುಣವ ನಿಶ್ಚಯಿಸುತ್ತ ಬೆಳಗು ಜಾವದಲೆದ್ದು ಗಳ ಪೂರ ನೀರೊಳು ನಿಂದು ರವಿಯತ್ತಭಿಮುಖನಾಗಿ ವಂದಿಸಿ ಸೂರ್ಯ ಮಂತ್ರವ ನೆನೆದು, ಮೂರು ಲೋಕಕ್ಕೆ ಬೆಳಗುವಾತನೇ ಜಗಚ್ಚಕ್ಷು ಮಹಿಮಾಢ್ಯ ಎಂಬ ಸೂರ್ಯ ಶತಕವನೋದಿ ಸ್ತುತಿಸಲು. ಆಗ ಸೂರ್ಯ ಬಂದಿಹೆ ಏನು ಬೇಕೆನಲು ನನ್ನ ಕುಷ್ಠರೋಗವ ತೊಲಗಿಸೆನಲು, ನನ್ನ ಕೈಯ್ಯಲಾಗದು, ನಿನ್ನ ಮೈ ಮಿಂಚಾಗುವಂತೆ ನಾಳೆ ಒಂದು ದಿನಕ್ಕೆ ಒಂದು ಕಿರಣವ ಕೊ ಎಂದು ಕೊಟ್ಟು ಹೋಗಲು, ಮೈ ಮಿಂಚಾಗಿ ಸುವರ್ಣದಂತಿರಲು ಇತ್ತ ಬೆಳಗಾಗಲು ನಂದರಾಜನ ಓಕುಳಿಗುಪ್ಪಸವನೆಲ್ಲರಿಗೆಯೂ ಇತ್ತು, ಮಯೂರಗಿತ್ತು ಶೃಂಗಾರವಾಗಿ ನಂದರಾಜನೈತಂದು, ನೀರಾಟದಲ್ಲಿ ಮಯೂರನಂಗವನರಿಯಬೇಕೆಂದು, ರಾಜನಿಲ್ಲೆಂದು ನೀರ ಪೊಯ್ಯಲು, ಪೊಯ್ಯಿ ಪೊಯ್ಯಿ' ಎಂದು ನಿಲ್ಲಲು ನೊಂದನೆಂದು ಮಯೂರನ ಸಂತೈಸಿ ಬಾಸುಳಪ ನೋಡುವ ನವದಿಂದ ಕುಪ್ಪಸವ ಕಳೆದು ನೋಡುವಾಗ, ಮಯೂರನ ಮೈ ಸುವರ್ಣವಾಗಿರೆ, ನಂದ ನೃಪ ಮನೆಗೆ ಬಂದು ಕವಿ ಕಾಳಿದಾಸ ಬಾಣ ಎಂದು ಕೋಪಿಸಿ ಹುಸಿಗಳಸಿ ಸಂತಾಪಿಸುತ ಕರೆಕರೆ ಎನೆ ಬಾಣ ಬಂದು

ಸಭೆಯ ಮುಂದಿರಲು ಮಯೂರನ ಮೈ ಸುವರ್ಣವಾಗಿ ಪುಃಿಯ ನುಡಿದಿರಿನೆ ದುರ್ಬಣ್ಣ ಮುನ್ನ-ಟು, ರವಿಯಿಂದ ಇರಳು ಪಡೆದನೆನೆ ಬಾಣನೆಂದಂತೆ ಮಯೂರ ಅಹುದೆನಲು ಒಂದಿರುಳಿಗೆ ಸೂರ್ಯನಿಂದ ಪಡೆದವರಾರು ಅರಿದು, ಎಂದು ಬಾಣನ ಮೂದಲಿಸುತ್ತಿರಲು ಘುಡಿ ಘುಡಿಸಿ ಬಾಣ ಕರಂಗಳ ಕಡಿದು ಸಭೆಯ ಮುಂದಿರಿಸಿ, ಸರ್ವಜನ ನೋಡುತ್ತಿರೆ, ಬಾಣ ಪೊಗಳ್ದನು ದೇವ ಜಯ ಜಯ ಮಹಾದೇವ ಕರುಣಿಸುದು, ದೇವಘೇಕರ ಮಹಾಕಾಳ ಕರುಣಿಪುದು, ದೇವಗಂಗಾ ತಟಾಭಾರ ಕರುಣಿಪುದು ದೇವ ತ್ರಿಲೋಚನ ಮಹಾಗುರುವೇ ಕರು ಣಿಪುದು' ಎಂದು ಪೊಗಳಲು, ಶಂಕರಂ ಸುಮ್ಮನಿರಲು, ಅಂಬಿಕಾ ನಿತಂಬ •ಬಿಂಬ ಲಂಪಟ ಹಸ್ತನೆಂಬ ನುಡಿಗೇಳಿ ಗಿರಿಜೆಯರು ಕೋಪಿಸಿ, ಅವ ಭಂಡ ಎಂದು ಶಿವಂಗೆ ಬಿನ್ನವಿಸಲು, ಶಂಕ ಬಂದು ಎಲೆ ಬಾಣ ಹೀಗೇಕೆ ಬಂಡುಗೆಲೆವುತಿದ್ದೆ ಎನಲು, ಮೊಂಡಮೋಟರಿಗೆ ಕುರುಡ ಕುಂಟರಿಗೆ ಬಂಡು ಗೆಲೆವುದು ಸಹಜವೆನಲು, ನಸುನಗುತ ಶಂಕರನು ಮೆಚ್ಚಿ ಹಸ್ತಂಗಳನು ಕೊಟ್ಟು. ಮತ್ತೇನು ಬೇಕೆನಲು ಮೋಟಮೊಂಡ ರಿಗೆ ಕೈಕಾಲ್ಗಳ ಕೊಡುವ ವರವನೇ ಕೂಡಿ ಎನಲು ಕಡೆಯಲ್ಲಿ ನಿಮ್ಮ ಡಿಯೊಳಿಪ್ಪ ನಿಜಪದವ ಕೊಡಿ ಎನಲು ಕೊಟ್ಟು, ಮೂರು ಲೋಕ ದೊಳಿಪ್ಪ ಸೂರಿ ಜನರು ಬಾಣ ಕವಿಯ ವಾಕ್ಯವನೇ ಬಣ್ಣಿಪರು ಎಂಬ ಬಿರುದನಿತ್ತು ಶಂಕರ ಕೈಲಾಸಕ್ಕೈಯ್ದಲು ಬಳಿಕಾ ಬಾಣನು ಅನೇಕ ಕೋಟಿ ಪದ್ಯಂಗಳಂ ಮಾಡಿ ಶಿವನ ಸ್ತುತಿಸುತ್ತಿರಲು ನಂದರಾಜ ಕೇಳಿ, ಬಾಣಂಗೆ ಪೊಡಮಟ್ಟು ಪೊಗಳಿ ವಂದಿಸುತ್ತ ಮತ್ತೆ ಗಜದ ಮೇಲೇ ರಿಸಿ ಮೆರೆಯಿಸುತ್ತ ಕೆಲವು ದಿನವಿರುತ್ತಿರಲು ಶಿವನೊಲಿದು ಬಾಣನ ಭಕ್ತಿಗೆ ಮೆಚ್ಚಿ ಕೈಲಾಸಕ್ಕೊಯಿದನು

---

## ಮಯೂರ.

ಬಾಣ ಕರವ ತಂದು ಪಡೆದುದ ಕಂಡು ನಂದ ಸಭೆಯೊಳು ಕಾಳಿ ದಾಸ ಮೊದಲಾದ ಕವಿಗಳು ರಾಜವಿನಿಯೋಗದವರೆಲ್ಲ ಹರ ಕವೀಶ್ವರ ಬಾಣನೆಂದು ನುತಿಸುತ್ತಿರಲು ಮಯೂರಂಗೆ ಪಂಥ ಪುಟ್ಟಿ ಹರಿಯಿಂ ದೆನ್ನಂಗ ಸುವರ್ಣವಾಯಿತ್ತು ಒಂದು ದಿನಕ್ಕೆ, ಹರನಿಂದ ಪರವಿಲ್ಲೆಂ

ಬುದೇನು ಕಾರಣವೆಂದು ಮಯೂರ ಸೂರ್ಯನ ನುತಿಸಿ ಕೇಳಲು ಸೂರ್ಯನೆಂದನು ಮುನಿ ಕೊಟ್ಟ ಶಾಪದಿಂದೆನ್ನಂಗದ ಕುಷ್ಠನು ಬಾಲಾರ್ಕೇಶ್ವರನಿಂದ ನಿಜದೇಹವ ಪಡೆದೆನೆನೆ, ಅದನೆನಗೆ ಕೊಡು ಎನಲು ನಾ ಕೊಡಲಾಗೆನೆನಲು ಹರಿ ಭಕ್ತಿಯಂ ಬಿಟ್ಟು ಬಾಣನೆನಗೆ ಪರಮ ಗುರುವಾದನೆಂದು ನಂಬಿ ಮಯೂರನು ಹರಭಕ್ತಿಯಿಂದ ಹರಿವುದು ಎನ್ನಂಗದ ಭವರೋಗವೆಂಬ ಕುಷ್ಠವೆಂದು ಶಿವಭಕ್ತಿ ಪ್ರಯುಕ್ತನಾಗಿ ಬೆಳಗಿಗೆ ಏಳು ಗಳಿಗೆ ಏಳ್ದು, ಭಸ್ಮ ರುದ್ರಾಕ್ಷಿ ಪಂಚಾಕ್ಷರಿಯುಕ್ತನಾಗಿ. ಸರ್ವಾತ್ಮಸಿತಗಾತ್ರನೆಂದು ಒಂಬತ್ತು ಪದ್ಯವ ನುತಿಸುತ್ತ ಶಿವನತಿಯುದಾರನೆಂಬುದ ತೋರ್ಪಂತೆ ಏಳು ಕಾಲಿನ ನೆಲುವಂ ಕಟ್ಟಿ ಕೆಳಗೆ ಅಲಗಿನ ಮೊನೆಯ ಮೇಲಾಗಿ ನಿಲಿಸಿ ನೆಲುವನೇರಿ 'ವರದ ಹಸ್ತ ಅಭಯಕರ ಕಾಯಿ ಕಾಯಿ ಕರುಣನಿಧಿಯೇ' ಎಂದು ನೆಲುವಿನ ಕಾಲಂ ಕೊಯ್ಯೆ ಶಿವಂ ಮೆಚ್ಚಿ ಬಂದು ಮೇಲೆ ಮಸ್ತಕವ ವರದ ಕರದಿಂದ ಪಿಡಿದು ಕೆಳಗೆ ಅಲಗಿನ ಮೇಲೆ ಬೀಳದಂತೆ ಅಭಯ ಕರದಿಂದ ಪಿಡಿದು ಮೆಚ್ಚಿದೆ ಬೇಡೆಂದು ನುಡಿಸಲು ನುತಿಸುತ್ತ ಮಡಿಯದೆ ಮತ್ತೆ ನೆಲುವಂ ಕೊಯ್ವು ಕರವ ಪಿಡಿದು ಕಡೆಗೆ ತೆಗೆದು ಮಯೂರಂಗೆ ಶಿವಭಕ್ತಿ ಪ್ರಭಾವವನಿತ್ತು ನಿತ್ಯ ನಿರ್ಮಳಾಂಗವನು ಮಯೂರಂಗಿತ್ತು ಕೈಯ್ಯಿತ್ತು, ಬಾಣ ಮಯೂರನೆಂದು ಧನದ ಸಖ ಕೊಂಡಾಡುತ್ತ ಗಣಪದವಿಯನೀಯಲು ಕಾಳಿದಾಸ ನಂದಭೂಪ ಮೊದಲಾದವರು ಕೊಂಡಾಡುತ್ತಿರಲು, ಶಿವನ ನುತಿಸಿದವರು ಶಿವನ ದೇಹದಂತೆ ಶಿವಶರೀರಿಗಳಾದರೆಂದು ದೇವಗಣ ಕೊಂಡಾಡುತ್ತಿರಲು, ಮಯೂರನು ಶಿವನ ಸ್ತುತಿಯಿಂದ ಶಿವನೊಳು ಬೆರೆದನು.

## ಉದ್ಭಟದೇವ.

ಗುರ್ಜರ ದೇಶದ ಮಂಗಳಪುರ ಎಂಬ ಪಟ್ಟಣದಲ್ಲಿ ಕುಮಾರಪಾಲ ಗುರ್ಜರ, ಉದ್ಭಟದೇವನೆಂಬುಭಯ ನಾಮದಿಂದೊಪ್ಪುತ್ತಿರಲು ಆತನ ಸತಿ ಮಂಗಳಾಂಬಿಕೆಯೂ ತಾನೂ ರಾಜ್ಯವಾಳುತ್ತ ಶಿವಭಕ್ತಿಯುಕ್ತರಾಗಿ ಕರಣಂಗಳು ಶಿವನುಪಕರಣಂಗಳಾಗಿ, ಇಂದ್ರಿಯಂಗಳು ಪರಿಚಾರಕರಾಗಿ, ಹೃದಯಕಮಲವೇ ಸೆಜ್ಜೆಯಾಗಿ, ನಿರ್ಮಲ ಮನವೇ ಕುಸುಮವಾಗಿ, ಪ್ರಾಣವೇ ಶಿವಲಿಂಗವಾಗಿ. ಪರಿಣಾಮವೇ ಅಮೃತ

ಜಡತನಂ ಲತೆಗಳೊಳ್ ಲಲನೆಯರ ನಡುವಿನೊಳ್
ಕೆಡಿಸುವುದು ವಂಶಮಂ ಮೋದರೊಳ್ ವೃಷಭನೊಳ್
ಅವನಿಗತಿ ಕಂಟಕಂ ಕೇತಕೀ ವೃಂದದೊಳ್
ಭುವನಕಂಟಕವೆಂಬುದಂಬುಜದ ನಾಳದೊಳ್
ಪೆರ್ಚುಕುಂದೆಂಬುದಾ ಚಂದ್ರನೊಳ್ ಶರಧಿಯೊಳ್
ಪೆರ್ಚಿರ್ದ ದಾನಾರ್ಥವೆಂಬುದಾ ತುಂಬಿಯೊಳ್
ಇಂತಿವರೊಳಲ್ಲದಾ ನಾಡೊಳೆಲ್ಲೆಲ್ಲಿಯುಂ
ಸಂತತಂ ಸುಖಮಯಂ ದೇಶದೊಳಗೆಲ್ಲಿಯುಂ

ಆ ದೇಶದೊಳ್ ರಾಜಧಾನಿಯೆನಲೊಪ್ಪುವುದು
ಭೂದೇವತೆಯ ನೊಸಲತಿಲಕವೆನಲೊಪ್ಪುವುದು
ಭಾರತೀಯ ಪೀಠವೆಂಬುದು ಪಟ್ಟಣದ ನಾಮ
ಈರೇಳ್ಜಗಂಗಳಿಗೆ ಕೀರ್ತಿವಡೆದುದು ಗ್ರಾಮ
ಅಲ್ಲಿ ಶುದ್ಧ ಸ್ಫಟಿಕದಿಂದೆಸೆವ ಕೋಂಟೆಯಿಂ
ಅಲ್ಲಿ ಕಸ್ತೂರಿಯ ಕೆಸರಾಳ್ವೇರಿಮಹಿಮೆಯಿಂ
ಅಲ್ಲಿ ಮನೆಮನೆಗಳೊಳ್ಕುಂಕುಮದ ಮಡಿಗಳಿಂ
ಅಲ್ಲಲ್ಲಿ ದ್ರಾಕ್ಷಾಲತಾಮಂಟಪಂಗಳಿಂ
ಬಾಳೆ ಕಿತ್ತಳೆ ಹೇರಿಳೆ ನಿಂಬೆ ವನಂಗಳಿಂ
ನಾರಿಕೇಳಂ ನವಾಮ್ರಂ ಮಾತುಳಂಗಳಿಂ
ತಳಿರೊತ್ತಿ ರಾಜಿಸುವಶೋಕದ್ರುಮಂಗಳಿಂ
ಕಳಹಂಸ ಮಿಥುನದಿಂ ಬಳಸಿದ ಕೊಳಂಗಳಿಂ
ವೇದಘೋಷಂ ಪುರಾಣ ಪ್ರಸಂಗಂಗಳಿಂ
ಆದರಿಪ ಶಿವಕಥನ ಶೈವಾಗಮಂಗಳಿಂ
ಅಲ್ಲಲ್ಲಿ ಶಶಿಕಾಂತ ಭವನಿಕೆಗಳಿಂದೆಸೆವ
ಅಲ್ಲಲ್ಲಿ ನೆಲೆಯ ಕರುಮಾಡಂಗಳಿಂದೆಸೆವ
ರಾಜಿಸುವ ನವಸೂರ್ಯಸೋಮವೀಧಿಗಳೆಸೆವ
ರಾಜಭೂಷಣನ ಭವನಾವಳಿಗಳಿಂದೆಸೆವ

ಪಟ್ಟಣವನಾಳ್ವನಪ್ರತಿಮಭೂಪಂ ನೋಡ
ಕಟ್ಟಧಿಕನುತ್ತಮ ಪ್ರವರಸೇನಂ ನೋಡ

ಗಜಘಟಾಶ್ವಾಳಿ ರಥನಿಕರ ಸಂಪದ ಕರಂ
ನಿಜಭುಜಾಗ್ರಪ್ರಯುತ ವೀರಲಕ್ಷ್ಮೀವರಂ
ವಿವಿಧವಿದ್ಯಾಧರಂ ಸತ್ಕಾವ್ಯಕೋವಿದಂ
ನವಗೀತವಾದ್ಯನೃತ್ಯತ್ರಯಕಳಾವಿದಂ
ನಿತ್ಯ ಸಾರಸ್ವತಂ ಸತ್ವ ಸಂಪದಕರಂ
ಸತ್ಯಸಾಹಿತ್ಯಗುಣಗಾಂಭೀರ್ಯ ವಿಸ್ತರಂ
ಆ ಪ್ರವರಸೇನರಾಜಂಗೆ ಹೊಯ್ಕೈಯ್ಯೆನಿಸಿ

ವಿಪ್ರನೊಪ್ಪುವನಾ ಪುರಕ್ಕೆ ಧನಪತಿ ಯೆನಿಸಿ
ತನ್ನ ಪೆಸರೊಪ್ಪುವ ಸುವರ್ಣಭಟ್ಟಂ ನೋಡ
ತನ್ನ ಸಂಪನ್ನತೆ ಕುಬೇರಂಗೆ ಸರಿ ನೋಡ
ಪೊರ್ದಿದಪೊರ್ರೆದರ್ಗೆ ಕೋಟಿ ಸಂಖೆಯ ಧನಂ
ಸಾರ್ದ ಶಿಷ್ಯಾವಳಿಗನಂತ ಸಂಖೆಯ ಧನಂ
ಹೆಸರಸತ್ರಂ ಹೆಸರ ಪುರವರ್ಗವಲ್ಲಲ್ಲಿ
ಹೆಸರ ಕೆರೆಯುರವಟಿಗೆಯಾರವೆಗಳಲ್ಲಲ್ಲಿ
ಹೆಸರಗ್ರಹಾರಂ ಶಿವಾಲಯಗಳಲ್ಲಲ್ಲಿ
ಹೆಸರ ಧರ್ಮಪ್ರಕರವೆಣಿಸಲೆನಗರಿದಲ್ಲಿ

ಇಂತೆಸೆವ ವಿಪ್ರಂಗೆ ಸುತನೋರ್ವನೊಪ್ಪುವಂ
ಸಂತತಸುವರ್ಣಭಟ್ಟನ ಮನವನಪ್ಪುವಂ
ಆತನ ಪೆಸರ್ಪುರಕೆ ಮೆರೆವ ಮಲುಹಣನೆಂದು
ಆತನ ವಿಳಾಸದೊಳ್ ಪಿತನ ಚಿತ್ತಂ ಸಂದು
ಉಪನಯನ ವೈವಾಹಮುಂ ವಿಭವದಿಂಮ್ಮಾಡಿ
ವಿಪುಳವೇದ ಸರಸ ಶಾಸ್ತ್ರಜ್ಞರಂ ಕೂಡಿ
ಶೈವೋಪದೇಶಮುಂ ಪಿರಿಯರಿಂ ಮಾಡಿಸುತೆ
ದೈವಜ್ಞನಪ್ಪ ಮಗನಂ ನೋಡಿ ಪುಳುಕಿಸುತೆ
ದಿವ್ಯವಸ್ತ್ರಂ ಗಂಧಕಸ್ತೂರಿ ಪುತ್ರಂಗೆ
ನವ್ಯ ಭೂಷಣವಿತತಿವಿಸ್ತರಂ ಪುತ್ರಂಗೆ
ಗೀತ ವಾದ್ಯಂ ನೃತ್ಯ ಲೀಲೆ ಪುತ್ರನ ಮುಂದೆ
ನೂತನ ವಿನೋದ ಸರಸೋಕ್ತಿ ಪುತ್ರನ ಮುಂದೆ

ನವಫಳಂ ನವರಸಂ ನವಸುಖಂ ಪುತ್ರಂಗೆ
ನವವಾಹನಂ ನೂತನ ರತ್ನಂ ಪುತ್ರಂಗೆ
ಇಂತು ಪುತ್ರಂಗಿತ್ತು ಕಣ್ತೀವಿ ನೋಡುತಂ
ಸಂತತಂ ಮಲುಹಣನ ನೋಹದೊಳ್ನಲಿಯುತಂ

ಚಿಂತಿಸಿದನಾತಂಗೆ ಸುಖದೊಳಿರ್ಪಂದವಂ
ಮುಂತೆ ಮಾನಿಸರ ಹಂಗಿಲ್ಲದೊಂದಂದವಂ
ಸಿಚ್ಚಂ ಸಹಸ್ರ ಹೊನ್ನಂ ಲೆಕ್ಕವಂ ಮಾಡಿ
ಅಚ್ಚರಿ ಮಿಗಲ್ಮೂರು ವತ್ಸರಕ್ಕನುವಾಡಿ
ಓರ್ವಂಗೆ ಪರವಾಯು ನೂರು ವತ್ಸರವೆಂದು
ಸರ್ವ ಧನದೊಳಗೆ ತೆಗೆದಂ ಮಲುಹಣಂಗೆಂದು
ಮೂರು ಕೋಟಿಯು ಮೇಲೆ ಲಕ್ಕವರುವತ್ತಾಗೆ
ಬೇರೆ ವಿವರಿಸಿದ ಹೊನ್ನಂ ಮಲುಹಣಂಗಾಗೆ
ಕಟ್ಟಿ ಮುದ್ರಿಸಿದಂ ಸುವರ್ಣಭಟ್ಟಂ ನೋಡ
ಪಟ್ಟಣಕ್ಕಿಳಿಗೆ ಪೊಸತಾಗಲಾತಂ ನೋಡ
ಈ ತೆರದೊಳರ್ಥವುಂ ಪುತ್ರಂಗೆ ಬೈತಿಟ್ಟು
ನೂತನ ಸುಖಂಗಳಂ ಮನದೊಳಗೆ ಮುಂತಿಟ್ಟು
ಒಂದೆರಡು ವತ್ಸರಂ ಸುಖದೊಳಿರ್ಪನಿತಕ್ಕೆ
ಸಂದಣಿಸಿ ಹರ್ಷದಿಂ ಪದುಳವಿರ್ಪನಿತಕ್ಕೆ

ಬಂದುದು ಸುವರ್ಣಭಟ್ಟಂಗೆ ಕಾಲನ ದಾಳಿ
ನಿಂದು ಸೋಂಕಿತ್ತಸುವನೆಯ್ದೆ ರೋಗದ ದಾಳಿ
ಸೋಂಕಿತ್ತುಗ್ರಜ್ವರಂ ತಾಪದಿಂದಳ್ಕಿದಂ
ಭೋಂಕನೆ ಸುವರ್ಣಭಟ್ಟಂ ದಿವಕ್ಕೈದಿದಂ
ತಂದೆ ಸ್ವರ್ಗಸ್ತನಾದುದನರಿದು ಮಲುಹಣಂ
ಮುಂದುಗೆಟ್ಟರಿವುಗೆಟ್ಟೊರಲುತ್ತೆ ಮಲುಹಣಂ
ಸರ್ವಸಂಭ್ರಮದಿಂದ ತಂದೆಯುಂ ಸಂಸ್ಕರಿಸಿ
ಸರ್ವಮುಖದಿಂ ಪಿಂಡಪಿತೃಕಾರ್ಯಮಂ ಸಲಿಸಿ
ಸಕಲ ಭರಭಾರಕ್ಕೆ ತಾನೆ ವಲ್ಲಭನಾಗಿ
ಸಕಲ ಪರಿಜನಕೆಲ್ಲ ರಕ್ಷೆಶಿಕ್ಷಕನಾಗಿ

ಉತ್ತಮಂ ವ್ಯವಹಾರಪರಿಣತಂ ತಾನಾಗಿ
ಉತ್ತಮೋತ್ತಮ ಸಂಪದಕ್ಕೆ ನೆಲೆವನೆಯಾಗಿ
ಇರೆ ಮಲುಹಣನನಪ್ಪಿದುದು ಯೌವ್ವನೋದಯಂ

ಸ್ಮರನ ಕೈಗೆಯ್ದಿತ್ತು ಪುಷ್ಪಚಾಪೋದಯಂ
ಸವಿ ನುಡಿಗಳಂ ಕಿವಿಗಳಾಲಿಸಲ್ತೊಡಗಿದವು
ಅವಯವಂ ಮೃದುವಸನದಿಚ್ಛೆಯನೊಡರ್ಚಿದವು
ನೋಟವೊಪ್ಪುವ ರೂಪನೆಚ್ಚರಿಸಲೆಳಸಿದವು
ತೋಟಿಗೆಳಸುವ ಪುರ್ಬು ಗಂಟಿಕ್ಕತೊಡಗಿದವು
ಸವ ಮಧುರಮಂ ಜಿಹ್ವೆ ಬಯಸಲನುಗೈಯಿತ್ತು
ನವ ಗಂಧಮಂ ಘ್ರಾಣವರಿಯಲನುಗೈಯಿತ್ತು
ಗುಡಿ ಮೆಲ್ಲಮೆಲ್ಲನಕ್ಷಿಗಳತ್ತ ಹೊದ್ದಿತ್ತು
ನಡೆಯುರವಣೆಯನುಳಿದು ಗಮಕದೊಳ್ಬೆರಸಿತ್ತು
ಕರತಳಂ ತನುರುಚಿಯ ನೋವನಂಗೈಸಿದವು
ಕರಣತತಿ ಭೋಗಸಂಪದಮನಿಚ್ಛೈಸಿದವು
ಇಂತು ಸರ್ವೇಂದ್ರಿಯಂ ಸುಖದ ಬಳಕೆಗೆ ಸಲಲ್
ಕಂತು ಚಿಂತಿಸಿ ಷೋಡಶಪ್ರಾಯದೊಳ್ನಿಲಲ್
ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ
ಅಂಗಲತೆ ತರುಣಿಯರ ಸಂಗಸಂಪದವಾಗೆ
ಸುರಕುಜದ ಚಂದನದ ಕರ್ಪುರದ ಸಸಿಯಂತೆ
ಪರಿಮಳದ ಚಂದ್ರಿಕೆಯ ಕಾಂತಿ ಕರುವಿಟ್ಟಂತೆ
ಬೆಳೆಯುತಿರ್ದಂ ಸುಖಮನೆಳಸಿ ಮಲುಹಣಸಿತ್ತ
ಬೆಳೆಯುತಿರ್ದಳ್ ಸುಖಾಕಾರೆ ಮಲುಹಣಿಯತ್ತ

ಆ ದೇಶದಧಿದೈವವೆನಿಪ ವಿಜಯೇಶ್ವರನ
ವೇದಕ್ಕಗವ್ಯವೆಂದೆನಿಪ ವಿಜಯೇಶ್ವರನ
ಪಾತ್ರದ ವಿಳಾಸಿನಿಯೆನಿಪ್ಪ ಪದ್ಮಾವತಿಯ
ಚಿತ್ರತರ ಮಧುರತರ ನಾಟಕಕಳಾವತಿಯ
ಎಸೆವ ಬಸಿರೊಳ್ ಬಂದು ಶಿಶುಭಾವಮಂ ತಳೆದು
ಕುಸುಮಬಾಣನ ಕೀರ್ತಿ ಬೆಳೆವಂದದಿಂ ಬೆಳೆದು

ಮಲುಹಣಿಯ ಜೌವ್ವನವನೇನೆಂದು ಬಣ್ಣಿಪೇಂ
ಮಲುಹಣನ ಸಕಲ ಸುಖನಿಧಿಯನೇನೆಂದಪೇಂ

ಮನವನೆಡೆಗೊಂಡನಾ ಮನಸಿಜಂ ಪರಿತಂದು
ತನುವನೆಡೆಗೊಂಡುದಾ ಸೌಭಾಗ್ಯವೆಯ್ತಂದು
ಪ್ರೇಮದಿಂ ಮಧುರೂಪಿನೊಳ್ಪುಗಲ್ನಾತನಂ
ಪೂಮುಡಿಯನಿಂಬುಗೊಂಡುದು ಮಕರಕೇತನಂ
ಭ್ರೂಲತೆಯನಾಶ್ರಯಿಸಿತಿಕ್ಷುಚಾಪಂ ನೋಡ
ಆಲೋಕನವನೊತ್ತುಗೊಂಡವಲರ್ಗಣೆ ನೋಡ
ಮಿಗೆ ಸೊಬಗಿನೊಳ್ಪೊಕ್ಕಳಲ್ಲಿ ರತಿಯೆಯ್ತಂದು
ಮೊಗಮನೋಲೈಸಿದಳ್ ಸರಸಿಜಶ್ರೀ ಬಂದು
ನೆಯ್ದಿಲೆಯರಲ್ಬಯಸಿ ಕರ್ಣಪಾಲಿಕೆಯೊಳಿರೆ
ಎಯ್ದ ಶಶಿಕಾಂತ ಗಂಡಸ್ಥಲವನಪ್ಪುತಿರೆ
ಗಂಧವಹನೆಳಸಿ ಮಧುರಶ್ವಾಸದೊಳ್ ಪುಗಲ್
ಬಂಧುರಮೃಣಾಲರುಚಿ ಭುಜಲತೆಗಳೊಳ್ಮಿಗಲ್
ಆಮಳ್ವಕ್ಕಿಗಳ ಚೆಲ್ವು ಘನಕುಚವನಿಚ್ಚೈಸೆ
ಕಮಲಸೂತ್ರದ ಕಾಂತಿ ಬಾಸೆಯಂ ಬಾಸಣಿಸೆ
ಬಾಸೆ ತನ್ನಂ ತೋರಿ ಬಡನಡುವನುಂಟೆನಿಸೆ
ಮೀಸಲ್ಗೊಳನ ಗುಣ್ಪು ಸುಳಿನಾಭಿಯೊಳ್ನೆಲಸೆ
ಮದನನಿಳಯದ ನೇತ್ರದಂಡದಾಕೃತಿ ಬಂದು
ಸದಮಳ ತಿವಳಿಯೊಳ್ನೆಲಸೆ ನಲವಿಂದಂದು
ಕೃತಕಾಚಲದ ಸೊಂಪು ತಣ್ಪು ವೃತ್ತಂ ಬಯಸಿ
ನುತ ಜಘನಮಂ ಬಳಸಿ ಪರ್ಬಿ ಪದಪಿಂದೆಳಸಿ
ಕದಳಿಯಾಕೃತಿ ಬಟ್ಟದೊಡೆಗಳಂ ಸಾರುತಿರೆ
ಮದನದೊಡೆಯಾಕಾರ ಕಣಗಾಲ್ಗೆ ಸೇರುತಿರೆ
ಕೆಂದಾವರೆಯ ಕೆಂಪು ಪದತಳಮನೋಲೈಸೆ
ಮಂದಯಾನಂ ಎಸೆವ ಹಂಸಗತಿಯಾವರಿಸೆ
ಇಂತು ಸರ್ವಾಂಗ ಸೌಂದರ್ಯಮಂ ಕೆಳೆಗೊಂಡು
ಕಂತು ಮೊದಲಾಗಿ ಚರಿಸುವ ರೂಪನೊಳಕೊಂಡು
ಅಳಿ ತುಡುಂಕದ ಮಘಮಘಿಪ ಬಿರಿ ಮುಗುಳಂತೆ

ಎಳಸುವ ಚಕೋರಿ ಮೊಗವಿಡದ ಚಂದ್ರಿಕೆಯಂತೆ
ಪಿಕಚಂಚು ಸಂಚಾರವಿಲ್ಲದೆಳೆದಳಿರಂತೆ
ಶುಕಮುಖದಿ ಅಣ್ಣೆವಳಿಯದ ಪಕ್ವ ಫಳದಂತೆ
ತೊಳತೊಳಗಿ ಬಳೆವುತಿರ್ದಳ್ ಚಂದ್ರಕಳೆಯಂತೆ
ನಳನಳಿಸಿ ಬಳೆವುತ್ತಿರ್ದಳ್ ಕುಸುಮಶರದಂತೆ

ಬಳೆವ ಮಲುಹಣಿಯು ರೂಪಂ ಜನನಿ ಮಿಗೆ ನೋಡಿ
ಅಳವಲ್ಲದಕ್ಕರಿಂ ಸುಖರಸದೊಳೋಲಾಡಿ
ನವ ಯೌವ್ವನದ ನೆಲೆಗೆ ಮನದೊಳಗೆ ತೂಪಿರಿದು
ಅವಯವದ ಚೆಲ್ವಿಂಗೆ ಕಣ್ಗಳೊಳ್ ತೂಪಿರಿದು
ಕಡು ನೇಹದಿಂದೆ ನವ ಲಾಸ್ಯಮಂ ಮೈಗೊಳಿಸಿ
ಮೃಡನೊಲ್ಪ ರಸಗಾನಮಂ ನೆರೆ ಕೊರಳ್ಗೊಳಿಸಿ
ಮಗಳ ನಿಟ್ಟಿಸುತ ಕಣ್ಣೊಳಗಿಕ್ಕಿ ಮುಚ್ಚುತ್ತಿರೆ
ಮಿಗೆ ವಿಳಾಸಿಸಿಯರಿಂ ಸಿಂಗರಿಸುತಿರುತಮಿರೆ

**ಪ್ರಥಮಸ್ಥಲ ಸಂಪೂರ್ಣ**

---

# ದ್ವಿತೀಯಸ್ಥಲ.



**ಕಂದ**॥ ಹೊಸನಡೆ ಹೊಸನುಡಿ ಹೊಸಮುಡಿ ।
ಹೊಸ ಹೊಸ ಸೌಭಾಗ್ಯವೆಸೆವ ಹೊಸ ಲಾವಣ್ಯಂ ।
ಹೊಸಹರೆಯಂ ಹೊಸನೋಟಂ ।
ಹೊಸ ಜವ್ವನದೇಳ್ಗೆ ಮಲುಹಣಿಗೆ ಚಿತ್ರತರಂ ॥

## ಗದ್ಯ.

ಇಂತೊಪ್ಪೆ ಚರಣಂ ತೀವಿದ ಮಂದಗತಿಯಿಂದಪರಭಾಗಂ ತೀವಿದ ನಿತಂಬದಿಂ ಉರಂ ತೀವಿದ ಪೇರ್ಮೊಲೆಯಿಂ ಮೊಗಂ ತೀವಿದ ಲೋಚನದಿಂ ಅವಯವಂ ತೀವಿದ ಚೆಲ್ವಿಂ ಮೆಯ್ದೀವಿದ ಜವ್ವನದಿಂ ಮನಂ ತೀವಿದ ಸುಖದಿಂ ಮರೆದು ಮನಸಿಜಂ ಮುದ್ರಿಸಿದ ನನೆಗಣೆಯಂತಿರ್ದ ಮಲುಹಣಿಗೆ ಸುಕುಮಾರಾಂಗಿಗೆ ಹೊಸ ಹರೆಯದೊಡನೆ ರಸಮಯ ಮೆನಿಪ್ಪ ಲಾಸ್ಯ ಸಂಪದಂ ಕೈಗೂಡಿತ್ತೆಂಬುದಂ ಪದ್ಮಾವತಿಯರಿದು ವಸಂತ ಮಾಸದೊಳೊಂದು ದಿವಸಂ ವಿಜಯೇಶ್ವರದೇವರಂ ಕೇಳಿಸಲೆಂದು ಕ್ಷಣಮಂ ಕೈಕೊಂಡು ಮಲುಹಣಿಗೆ ಸಿಂಗರಂ ಮಾಡಲ್ಕೆ ಸಖೀಜನಕ್ಕೆ ಪೇಳೆ,

ಕೆಳದಿಯರ್ನಲಿದು ಬಂದು ಮಾಂದಳಿರ ಹಸೆಯ ಮೇಲೆ ಪುಷ್ಪ ಮಂಜರಿಯಪ್ಪಂತಿರ್ದ ಸುಕುಮಾರಾಂಗಿಗೆ ನನೆಯಂಬಂ ಕೈಗೆಯ್ವ ವಸಂತವಿಳಾಸಿನಿಯರಂತಿರ್ದ ವಿಳಾಸಿನಿಯರ್ಮಲುಹಣಿಗೆ ಪಾದಮುದ್ರಿಕೆಯನಲಂಕರಿಸಿ ಸೊಡಗಮನಮಲರ್ಚಿಸಿ ನೇವುರಮನಳವಡಿಸಿ ಕಂಕಣಮಂ ತಿರುಂಪಿ ನೂಂಕಿ ರತ್ನಮುದ್ರಿಕೆಗಳಂ ಕೆಯ್ಗೊಳಿಸಿ ಬಾಹುಪೂರಯಮನಿಕ್ಕಿ ಕರ್ಣಾವತಂಸಮಂ ಕೆಳೆಗೊಳಿಸಿ ಚಕ್ರಮಿಥುನಕ್ಕೆ ಗವಸಣಿಗೆಯನಿಕ್ಕುವಂತೆ ಕುಚಯುಗಕ್ಕೆ ಕಂಚುಕೆಯಂ ತೊಡಿಸಿ ತೋರಮುತ್ತಿನ ಹಾರಮಂ ಹತ್ತೆ ಸಾರ್ಚಿ ಶಶಿಬಿಂಬಕ್ಕೆ ಶುಕ್ರನಂ ಸೇರಿಸುವಂತೆ ಮುಖಬಿಂಬದೊಳ್ ಮುತ್ತಿನ ಮೂಕುತಿಯಂ ಮೇಳೈಸಿ ಕಾವನಂಬಂ ಕತ್ತುರಿಯ ಸಾಣೆಯಿಕ್ಕುವಂತೆ ಕಜ್ಜಳಮನೆಚ್ಚಿ ಎಳೆಲತೆಯಂ ಬೆಳ್ದಿಂಗಳಿಂ ಬಾಸಣಿಸುವಂತೆ ನವದುಕೂಲಮಂ ನಿರಿವಿಡಿದುಡಿಸಿ ನಿರ್ಮಳ ಶಶಿಬಿಂಬದಂತಿರ್ದ ಮುಖಮಂಡಲಕ್ಕೆ ಚಂದ್ರಮನ ದಿಟ್ಟಿ ತಾಗದಂತೆ

ಕತ್ತುರಿಯ ತಿಲಕಮಂ ನೊಸಲೊಳಿಟ್ಟು ಕಾಮನ ಮೆಯ್ವೆಗು ಮರೆ ಪೊಕ್ಕಂತೆ ಕತ್ತಲಿಪ ಮುಡಿಯೊಳ್ ಹೊಸ ಕುಸುಮದೆಸಳಂ ತುರುಂಬಿ ತೊಡಿಸಿದಾಭರಣಮುಮಂ ಮುಡಿಸಿದ ಪೊಸ ಪುಷ್ಪಂ ನಸುದೋರ್ಪ ಸಪ್ಪುರ ದುಕೂಲಮಂ ಮುಸುಂಕಿಟ್ಟು,

ಗಿಳಿ ಹಂಸೆ ಕೋಗಿಲೆ ಕುಸುಮಕುಲಂ ಮಧುಕರಂ ಮಂದಾನಿಲಂ ಚಂದ್ರಿಕೆ ಚಕೋರ ಚಕ್ರವಾಕನೆಳಗಳ್ಪಿಗಳ್ನೆರೆದು ಬಂದು ಕಾಮನ ಪುಷ್ಪಿನಂಬಂ ನಡುವಿಟ್ಟುಕೊಂಡೋಲೈಸುತುಂ ಬರ್ಪಂತೆ ಪದ್ಮಾವತಿ ಮೊದಲಾದ ಸಕಲ ಸಂಪ್ರದಾಯಮುಂ ಸಖೀ ಜನಂಗಳುಂ ಸುತ್ತಿ ಮುತ್ತಿ ಬರೆ ಮಲುಹಣಿಯ ಮರೆಗೊಂಡು ಕರ್ಬಿನ ಬಿಲ್ಲಗೊಲೆಗೇರಿ ಸುತ್ತ ಎಲರಂಬಂ ನಡೆತರೆ ಪೂಸಿದ ಚಂದನದ ಜವಾಜಿಯ ಯಕ್ಷ ಕರ್ದಮದ ಸೌರಭ್ಯದೊಡನೊಡನೆ ದೆಸೆದೆಸೆಗೆ ಪಸರಿಸಿ ತೀಡುವ ಹೊಸ ಜವ್ವನದ ಪಸಿಯ ಕಂಪಿನ ಬಳಿವಿಡಿದು ಸುವಿಟರ್ಕವಿದು ಬರೆ ತುಂಬಿ ಗಳ ಝೇಂಕಾರಂ ಕಂಕಣದ ಝಣತ್ಕಾರಂ ಮಾಪುರದ ಕ್ರೇಂಕಾರಂ ಪಾದಮುದ್ರಿಕೆಯ ಠಣತ್ಕಾರಂ ಮದನನಬಿಲ್ಲ ಟೇಂಕಾರಂ ಬೆರಸಿ ಬೆಳೆದು ಪುರಜನರ ಕಿವಿಗಳ್ಗೆ ಹೊಸ ಸವಿಗಳಂ ಸಾಲಿಡೆ ವಿಳಾಸದಿಂ ವಿಜಯೇಶ್ವರದೇವರ ರಂಗಮಂಟಪಕ್ಕೆ ಬಂದು ಚಂದ್ರಧರಂಗೆ ವಂದನಂಗೆಯ್ದು ಗಿರಿಜಾವಲ್ಲಭನಂ ಕೇಳಿಸಲೆಂದು ಸಕಳ ಸಂಪ್ರದಾಯಮುಂ ಸುಗತಿ ಸಂವರಣೆಗೊಂಡು ರಂಗಂಬುಗುತ್ತಿರಲು,

ಇತ್ತ ಮಲುಹಣದೇವಂ ವಿಜಯೇಶ್ವರದೇವರ ದಿವ್ಯ ಪಾದಪ್ರಣುತ ನಿತ್ಯ ನಿಯಮಾಸಕ್ತನಾಗಿ ನೊಸಲೊಳಿಟ್ಟ ಭಸಿತದ ಕೀಲಿಸಿದ ಕರ್ಣಾಭರಣದ ಕೈಗೊಳಿಸಿದ ತೋರಹಾರದ ಉಟ್ಟು ಹೊದೆದ ಹೊಸ ದುಕೂಲದ ಕಿವಿಯೊಳಂಕೆಗೊಂಡ ಮೃಗಮದದ ಕಕ್ಷಪುಟದೊಳ್ಮಗಮಗಿಪ ಕತ್ತುರಿಯ ಸಾರದ ಉದ್ವರ್ತನಂಗೆಯ್ದು ಚಂದನದ ತುರುಂಬಿದ ಕುಸುಮಾವಳಿಯ ಪೊಸ ಕಂಪುಂ ಸೊಗಯಿಸುವ ಸೊಂಪುಂ ಮೋಹಿಸುವ ಬೆಳಗುಂ ಮುಪ್ಪುರಿಗೊಂಡು ಬಳಸಿ ಬೀದಿವರಿಯೆ ಏರುಂಜವ್ವನದುರ್ಬು ಕೊರ್ಬು ಪರ್ಬುಗೆವಡೆಯೆ ನಿಜ ನಿಳಯಮಂ ಪೊರಮಟ್ಟು ಬಪ್ಪಾಗಳ್ ವೇದ ನಾದಾಕ್ಷರದೊಡನಕ್ಷತೆಗಳಂ ನೀಡುವ ವಿಪ್ರಕುಲದ ನವೀನ ಗದ್ಯ ಪದ್ಯದೊಡನೆ ನಲವರಕೆಯಂ ನೀಡುವ ಕವಿಗಳ ಕೈವಾರದೊಡನೆ ಸ್ತುತಿಗಳಂ ನೀಡುವ ವಂದಿಗಳಂ ತುಂಬಿಗಳ ನುಣ್ಚರದೊಡನೆ ಜೋಳಿಸಿ

ಮಾಣದಾಣತಿಗುಡುವ ಗಾಯಕರಿಂ ಸಮ ಕುಲಂ ಸಮ ಶೀಲಂ ಸಮ ರೂಪು ಸಮಪ್ರಾಯದೊಡನೆ ಮನಂಗೊಡುವ ಮಿತ್ರರೆನಿಪ ವಿಟ ವಿದೂಷಕ ನಾಗರಿಕ ಪೀಠಮರ್ದನರ್ನಡುವೆ ಕಾಮನ ಕೆಯ್ಸೆರೆ ಒರ್ಪಂತೆ ವಿಜಯೇಶ್ವರ ದೇವರ ಶಿವಾಲಯಕ್ಕೆ ನಡೆತಂದು,

ಮಲುಹಣಿಯು ತನ್ನ ಸ್ನೇಹಂ ತನ್ನನೀ ತೆರದೊಳ್ ಸುತ್ತುವುದೆಂಬುದಂ ತೋರುವಂತೆ ಪ್ರದಕ್ಷಿಣಂ ಬಂದೊಳಪೊಕ್ಕು ಸೋಮಧರನ ವಾಮಭಾಗದೊಳ್ಪದ್ಮಾಸನನಾಗುತ್ತಂ ಆಗಮಸ್ಥಾನದೊಳ್ವಿಭೂತಿಯನಿಟ್ಟು ಪಂಚಬಾಣಕ್ಕೆಡೆಮಾಡುವಂತೆ ಶೋಷಣ ದಹನ ಪ್ಲವನಂಗಳಿಂ ಹೃದಯಾಧಾರಮಂ ಶುದ್ಧಿಮಾಡಿ ಎಲೆ ದೇವ ಈ ಕನ್ನೆಯಂ ನೋಂಕಿದ ಬಳಿಕ್ಕಮೆನ್ನಂಗವಿಕಾರವೆಲ್ಲಂ ತನ್ನಂಗದೊಳೆಂಬುದಂ ಮುಟ್ಟಿ ತೋರುವಂತಂಗನ್ಯಾಸಕರನ್ಯಾಸಮಂ ನಿಮಿರ್ಚಿ ಎಲೆ ದೇವ ಪಲವು ದಿನಕ್ಕಲ್ಲದೆ ನಿತ್ಯ ನಿಯಮಕ್ಕೆ ಬಾರೆನೆಂಬುದನೇಕಾಂತದೊಳ್ಬಿನ್ನವಿಪಂತೆ ಜಪಮನೆಣಿಸಿ ಎಲೆ ದೇವ ಮಲುಹಣಿಯಂ ಕಂಡ ಬಳಿಕ ನಿನ್ನಂ ಕಾಣ್ಬುದರಿದೆಂಬುದಂ ಅರಿಪುವಂತೆ ಕಣ್ಗಳಂ ಮುಚ್ಚಿ ಎಲೆ ದೇವ ನಿನ್ನೋಲಗದ ಕನ್ನೆಯಂ ಬೇಗ ಕರುಣಿಸೆಂದು ಕಾಲ್ವಿಡಿವಂತೆ ಲಿಂಗದಂಘ್ರಿಯೊಳ್ ಸ್ಪರ್ಶನಮಂ ಮಾಡಿ ಮಲುಹಣಿಯಂ ಬೇಡಿ ಸದಾಶಿವನಿಂ ಧಾರೆಯಂ ಪಡೆವಂತೆ ಪಾದೋದಕಮಂ ಕೊಂಡು ಪೊಡೆಮಟ್ಟು ಬೀಳ್ಕೊಂಡು ಸೌಂದರ್ಯಸಂಪನ್ನಂ ವಿಳಾಸನಿಧಿ ಸೌಭಾಗ್ಯಸಾರೋದಯಂ ಸೌಕುಮಾರ್ಯಕಟಾಕ್ಷವಿಕ್ಷೇಪಂ ರಸಭರಿತಚಿತ್ತನಪ್ಪ ಮಲುಹಣದೇವಂ ತಿರಿಗಿ ಬರ್ಪಾಗಳ್,

ಮುಂದಣ ರಂಗಮಂಟಪದ ಮಧ್ಯದೊಳಿತ್ತರಂಗೊಂಡೋಲಗವಿತ್ತು ಕುಳ್ಳಿರ್ದ ಪರಮಭಕ್ತರ ಸಚಿವರ ರಾಜಪುತ್ರರ ವಡ್ಡವ್ಯವಹಾರಿಗಳ ಕವಿಗಳ ಕಳಾವಿದರ ಸತ್ಯರ ಸಾಹಿತ್ಯರ ಸಂಗೀತ ಸಂಪನ್ನರ ವಿಳಾಸಿನಿಯರ ಪರಿಜನದ ಪುರಜನದ ನಡುವಣ ರಂಗಮಂಟಪದೊಳ್ನರ್ತನಂಗುಡುವ ತಾಳದ ಗತಿಗುಡುವ ಮದ್ದಳೆಯ ಲಹಣಿಗುಡುವ ಆವುಜದ ದೆಖ್ಖಾಳಂಗುಡುವ ಕರಡೆಯ ಸವಿಗುಡುವ ವೀಣೆಯ ನಯಂಗೊಡುವ ಕಿನ್ನರಿಯ ಉಲ್ಲೆಗೊಡುವ ಕೌಸಳದ ಹಲ್ಲಣಿಗುಡುವ ವಾಸದ ಉಲ್ಲೆಗುಡುವ ಜೇವಣಿಗೆಯರ ಸಂಗೀತದ ಸಂದಣಿಯೊಳ್ಪುಷ್ಪಾಂಜಲಿಯ ಸಮಯದೊಳ್ ನವೀನ ಕನ್ಯಾವರವಿವಾಹಮುಹೂರ್ತದ ತೆರೆ ಸರಿವಂತೆ

ಮಲುಹಣ ನೊಡೆ ನೊಡೆ ಜವನಿಕೆಯೋಡೆ ದೊಡೆಯನಗಲ್ದ ಕಾಮ-
ನಂಬಿನಂತಿರ್ದ ಮಲುಹಣಿಯ ರೂಪಿನೊಳ್ನೋಟಂ ಸಿಲ್ಕಿ ಎವೆ ಜಿರಗಾಗಿ
ಕಣ್ಗಳ ಧಾರೆಯಿಂದೊಳಪೊಕ್ಕು ರೂಪು ಕರಣವನೊಕ್ಕಲಿಕ್ಕಿ ಭಾವಮಂ
ಬರಿಕೈದು ಚಿತ್ತಮಂ ತೊತ್ತುಳಿದುಳಿದು ಜೊಲ್ಲು ಝೊಂಪಿಸಿ ಮಿತ್ರರ
ಮೇಲೆ ಮೆಯ್ಯನೀಡಾಡುವ ಜೌವ್ವನಿಗನಂ ಮಲುಹಣಿ ಭೋಂಕನೆ
ನೋಡಿ ಕಂಡು ಮನಂ ಬೆದರಿ ಹೃದಯಂ ನಡುಗಿ ತನು ಬೆಮರ್ತು
ಗತಿ ಸ್ತಂಭಿಸಿ ಪಾದಂ ಪೈಸರಂಬೋಗಿ ಹಸ್ತಂ ಮಲಂಗಿ ನೋಟ
ಮಚ್ಚೊತ್ತಿ ಮೂರ್ಛಿಸುವ ಮಗಳಂ ಪದ್ಮಾವತಿ ಕಂಡು ಇದೇನಿದೇನು
ರಂಗಮಂಟಪಂ ವಿರಹಮಂಟಪವಾದುದು ಈಶ್ವರ ಕೇಳಿಕೆ ರತೀಶ್ವರ ಕೇಳಿಕೆ
ಯಾದುದು ಅಕ್ಕಕ್ಕ ಸೋಜಿಗಂ ಸೋಲ್ತ ಮಲುಹಣಂ ಸದರ್ಥನೆಂ
ಬುದಂ ಅರಿದು ಮನಮಂ ಬಲಿದು ಈರ್ವರುಮನೊಡಗೊಂಡು ಬಂದು,

ಪರ್ಬಿದ ನೇಹಮಂ ನೆಲೆವೆರ್ಚಲೊಡರ್ಚಿಸಿ ನಿಜನಿಳಯಕ್ಕೈತಂದು
ಮದನಕೇಳಿ ಸದನಮೆನಿಪ್ಪ ಸೆಜ್ಜೆಯ ಮನೆಯ ಸಿರಿಮಂಚದ ಹಂಸತೂಳ
ತಳ್ಪದೊಳ್ಜವಳಿಗೊಳಿಸಿ ತಾನುಂ ಸಖೀಜನಂಗಳುಂ ಜಾಣಂ ಜಾರಲನಂಗ
ಕೇಳಿಗೆ ಮನಂ ಸಂದಣಿಯಲ್ಲಿಂದ್ರಿಯಂಗಳುಂವಣಿಸೆ ತವಕಮನುಗುಳೆ
ಲಜ್ಜೆ ಹೆಜ್ಜೆದೆಗೆಯೆ ಮನಂ ಮುಂದುಗೆಟ್ಟು ಅನುರಾಗಮಲ್ದು ಸ[illegible]
ನೋಟಂ ಒಳಪೊಕ್ಕು ಭೀತಿ ಬಿಟ್ಟು ಮಂಡಿಮಾಳಂ ಪೈಸಂದು ಸೋಂಕು
ಸವಿಗಂಡಾಲಿಂಗನಕ್ಕಾತುರಿಸಿ ರೂಪಂ ಕಣ್ತೀವಿ ನೋಡಿ ಕುಚಮಾರ
ಲಪ್ಪಿ ಮೆಯ್ಯಾರೆ ಕೂಡಿ ಮಸಂದಣಿಯೆ ಮರೆದು ಮರಹನರಿಯದೆ
ಅರುಲುಗೊಂಡ ಚಕೋರನಂ ಬೆಳ್ದಿಂಗಳೊಳ್ ಬಿಸುಟಂತೆ ಹಸಿದ
ಪಿಕನಂ ಪೊಸ ಬನದೊಳಿರಿಸಿದಂತೆ ಬಳಲ್ದ ಚಕ್ರಮಿಥುನಕ್ಕೆ ಬಿಸಿಲೊಳ್
ಬಳಲ್ಪಂತೆ ಮನದರ್ಥದೊಡನೆ ತನುವಿನ ಸುಖಂ ತಲೆಗೇರೆ ಬೇರೆ
ಬೇರೆ ಅವಯವದ ಕೂಟಕ್ಕೆ ಸರ್ವಾಂಗಮನೊಪ್ಪಿಸಿ ಕೊಟ್ಟು ಅಪ್ಪಿ
ಪೊಡೆ ಬಿಡಲರಿದು ಅಗಲ್ದೊಡೆ ಬಾಳಲರಿದೆನಿಪ ಮಲುಹಣಿಯ ತನು
ವಿನ ಕದಂಬಾಮೋದಂ ತೀಡೆ ಮನೋಮೋಘಂ ತೊರೆಯೆ ನೋಟದ
ಮಿಂಚಡರೆ ಬಳಲ್ಮುಡಿಯೆಂಬ ನವಿಲಾಡೆ ಕೂಡೆ ಪೊಣ್ಮುವ ಸವಿದನಿ
ಮೊಳಗೆ ಎಚ್ಚರೆಂಬ ಹಂಸೆಯೋಡೆ ಮೋಹದ ಮಳೆ ಕರೆದು ಚಿತ್ತ
ಭೂಮಿ ತಣಿದು ಅನುರಾಗದ ಬೀಜಂ ಬಿತ್ತಿ ಮುನಿಸಂಕುರಿಸಿ ಪ್ರಣಯ
ಕಲಹಂ ಪಲ್ಲವಿಸಿ ತೀವಿನ ಮೊನೆ ಮುಗುಳೊತ್ತೆ ಆಲಿಂಗನಂ ಫಲಿತ

ನಾದ ಸಮಾನಾನುರಾಗದೊಳಗಲದಿರೆ ಮತ್ತೆ ಮತ್ತೆ ಬೇಡಿ ಕೂಡುವಲ್ಲಿಂ ನೋಟವರಿದಪ್ಪುವ ಸ್ಯೈರಣೆಯಿಂದು ಸೋಂಕುವ ಆಸೆಯಿಂದಾಲಿಂಗಿಸುವ ಬಯಕೆಯಿಂದು ಬೆರಸುವ ಮನವರಿವನುಭವಿಸುವ ಇಚ್ಛೆಯಿರಿದು ಹೆಚ್ಚುವ ಅಗ್ಗಳಿಕೆಯಿಂದು ಬೋಳೈಸುವ ಎಚ್ಚರಿಕೆಯು ಸಮರತಿಯೊಳಿರ್ದು ಹಿಗ್ಗಿ ಸುಖದ ಸೋಂಕು ಮಿಕ್ಕು ಮೀರಿ ನಲಿವು ತಲೆಗೆತ್ತಿ ನಖಮುಖದಿಂ ಸೋಂಕಿ ಸೆಳೆಯಲನುಗೈಯ್ವಲ್ಲಿಂ ಮುನ್ನಂ ರೋಮಾಂಚದ ಬಾಸುಳೆಳ್ಪ ಸುಕುಮಾರಾಂಗಿಯೊಳೊಲ್ದು ನೆರೆವ ಸುಖಸಮಯದೊಳ್ಕರುಣವೆಲ್ಲಂ ನೋಟ ನೋಟವೆಲ್ಲಂ ನುಡಿ ನುಡಿಯೆಲ್ಲಂ ವಿರಹ ವಿರಹವೆಲ್ಲಂ ದೈನ್ಯ ದೈನ್ಯವೆಲ್ಲಂ ಸಾತ್ವಿಕಂ ಸಾತ್ವಿಕವೆಲ್ಲಂ ಮೆಯ್ ಮೆಯ್ಯೆಲ್ಲಂ ಕೂಟಂ ಕೂಟವೆಲ್ಲಂ ಮನಂ ಮನವೆಲ್ಲಂ ಮೆಚ್ಚು ಮೆಚ್ಚೆಲ್ಲಂ ಸೋಲಂ ಸೋಲವೆಲ್ಲಂ ರಸಮಯವಾಗಿ,

ಸಂವತ್ಸರಂಗಳುಂ ದಿನಂಗಳಾಗಿ ದಿನಂಗಳುಂ ನಿಮಿಷಗಳಾಗಿ ಪದ್ಮಾವತಿ ಸಂಪನ್ನೆಯಾಗಿ ನಿಚ್ಚಂ ಸಾಸಿರ ಹೊನ್ನೊಂದು ನೂರುಂ ಬರಿಸಕ್ಕೆ ತಂದೆ ಮಡಗಿದ ಧನಂ ಹತ್ತು ಬರಿಸಕ್ಕೈದದಿರೆ ಧನಂ ತೀರೆ ಮನಂ ತೀರದಿರೆ ಮುಡಿದ ಹೂವಗಲ್ದೊಡಂ ಹಿಡಿದ ಪರಿಮಳವಗಲದಿರ್ಪಂತೆ ಮೋಹರಸಮಾರದೆ ಸಮಸುಖಸಾರಹೃದಯಸಂಜಾತಹರ್ಷರಾಗಿ ಮಲುಹಣನುಂ ಮಲುಹಣಿಯುಂ ಪರಮಾನುರಾಗದೊಳಗಲದಿರೆ ಮೆಲ್ಲಮೆಲ್ಲನೆ ಪಲವುಂ ದಿನಕ್ಕೆ ಬರ್ಪ ಪೊನ್ನಿನುರುವಣೆಯುಡುಗೆ ಉಚಿತ ವ್ಯಯಕ್ಕೆ ಆಪದ್ಧನವಿಲ್ಲದಿರೆ ಪದ್ಮಾವತಿ ಬೆಚ್ಚಿ ಬೆದರಿ ಎಚ್ಚರಂಗೊಂಡರ್ಥದ ಸವಿಗೆ ಮನಮುಂ ನಾಲಗೆಯುಂ ಲವಲವಿಸಿ ಮಿಕ್ಕು ಮೀರಿದ ರಕ್ಕಸಿಗುಂಟಿಣಿ ಚೂತಮನಪ್ಪಿದ ಮಲ್ಲಿಕಾಲತೆಯನಗಲ್ಚುವ ಬಿರುಗಾಳಿಯಂತೆ ಭೇರುಂಡಪಕ್ಕಿಯ ನಡುವಂ ಸೀಳಲೊಯ್ವ ಲುಬ್ಧಕನಂತೆ ಮಗಳನಗಲ್ಚಲ್ ಬಗೆದು,

ಏಕಾಂತಮುಂಟೆಂದು ವಿಳಾಸಿನಿಯರಂ ಕಳುಪೆ ಬಂದ ಸಖಿಯುರವರೀರ್ವರಿರವಂ ಕಂಡು ಕರೆಯಲಾರದೆ ಪೋಗಲುಂ ಮೀರಲುಂ ಅರಿಯದೆ ತಳುವಿತ್ತಂ ಕಂಡು ಸಿಡಿಮಿಡಿಗೊಳುತ್ತುಮಿರೆ ತಾನೆ ಬಂದು ರವಣಿಸಿ ನುಡಿದೆಲ್ಲರಂ ಜರಿದು ಝುಂಕಿಸಿ ಏಳೇಳ್ಮಗಳೆ ನಿಮ್ಮ ಮಾವಂ ದ್ವೀಪಾಂತರದಿಂ ದಿವ್ಯ ವಸ್ತ್ರಾಭರಣಂಗಳಂ ಕೊಂಡು ಬಂದನವನ

ನೋಡಲ್ಕೆ ಏಳೇಳ್ಕ್ರಗಳೆ ಎಂಬ ನುಡಿ ಕಿವಿಯೊಳಂಬಂ ಹೊಸದಂತಾಗೆ
ಆಲಿಂಗನಮನಗಲಲಾರದೆ ಅಂತಃಕರಣದೊಳ್ ಹೊತ್ತಿದ ಕಾಮಗಿಚ್ಚಿನ
ಕಿದಿಯೊತ್ತಿದಂತೆ ಕಿಡಿ ಸೂಸೆ ಸೂಯ್ಪು ಕೋಪಂ ಸೂಸಲರಿದು ಹರಣಂ
ಹಾರೆ ಹಮ್ಮಯಿಸುತ್ತಿಂತಕ್ಕೆ ಸಂತಯಿಸಿಕೊಳ್ಳಲಾರದೆ ಈ ರಕ್ಕಸಿಯ
ನುಡಿ ಯೆದೆಗಿಚ್ಚಂ ನಂದಿಸಿ ಬರ್ಪೆನಂಜದಿರೆಂಬಂತೆ ಮಲುಹಣನಂ
ದಯಾದೃಷ್ಟಿಯಿಂ ನೋಡಿ ಮೆಲ್ಲಮೆಲ್ಲನಚ್ಚಳಿಯದಾಲಿಂಗನಮಂ ಬಿಚುರ್
ತಿರ್ಪಲ್ಲಿ ಹಂಸೆಯೆಂಬುಗೀಡಾಗಿ ಬೀಳ್ವಂತೆ ಮಂಚದಿಂ ಕೆಳಕ್ಕೆ ಬೀಳ್ವ
ಮಲುಹಣೆಯಂ ಸಖಿಯರ್ಕಯ್ಯಾಂತು ಪಿಡಿಯಲಂತಂತು ತರಹರಿಸಿ
ನೊಸಲ ಕಣ್ಣ ಹೊಗೆ ಸುತ್ತಿದ ಪೂಸರನಂತೆ ಕೆಳದಿಯರ ಕೈಯ್ಯೊ
ಳ್ಕೈಯ್ಯನೀಡಾಡೆ,

ಮೆಲ್ಲಮೆಲ್ಲನೆ ಬಂದು ತಾಯಂ ನೋಡಿ ಕೆಯ್ಯಂ ನೀಡಿ ಎಲೆ
ಪಾಪಿ ಎಲೆ ಸುಖಸ್ವೈರಿ ಕರೆದ ಕಾರಣವೇನೆಂದು ಬೆಸಗೊಳ್ವುದುಂ
ಎಲೆ ಮರುಳ್ಗಳೆ ಅರ್ಥಂ ತೀರ್ದುದು ಜವ್ವನಂ ಸೋರ್ದುದು ಇನ್ನೀ
ಮಲುಹಣನಂ ಬಿಡುಬಿಡೆಂದು ನುಡಿಯೆ ಸಿಡಿಲದನಿಗೇಳ್ದ ಹಂಸೆಯಂತೆ
ನಡನಡನೆ ನಡುಗಿ ಎಲೆ ತಾಯೆ ಕಮಲತಂಡುಲಮನಾರೋಗಿಸ
ಹಂಸೆಗೆ ಹರಳನಿಕ್ಕುವರೆ ಕೋರಕಮಂ ಸವಿವ ಕೋಕಿಲೆಗೆ ಕೊರಡ
ನಿಕ್ಕುವರೆ ಬೆಳ್ದಿಂಗಳನಾಸ್ವಾದಿಸ ಚಕೋರಿಗೆ ಬಿಸಿಲಂ ಮಾಳ್ಪರೆ ಪರಿ
ಮಳವನುಣ್ಬ ತುಂಬಿಗೆ ಹೊಗೆಯನಿಕ್ಕುವರೆ ಪಳರಸವನೀಂಟುವರ
ಗಿಳಿಗೆ ಕಾದನೀರೆರೆವರೆ ಮಲುಹಣನೊಳಭೇದ ಸುಖದೊಳಿರ್ಪೆನ್ನೊಡ
ನಿಂತು ಮಾತಂ ನುಡಿವರೆ ಲೋಭಮುಂತಾಗಿ ಹುಟ್ಟಿದ ದೀನೆ ಮುಪ್ಪು
ಮುಂತಾಗಿ ಹುಟ್ಟಿದ ನಿರಸೆ ಸುಖಮಂ ಕೊಯ್ವ ಮಾನಸಗರಗಸವೆ
ಆಯ್ಯೋ ಏಕೆನ್ನನರಿದರಿದು ಸುಟ್ಟಪೆ ಇದಿರಿದು ಬಿಸುಟಪ್ಪೆ ದಾಕ್ಷಿಣ್ಯ
ದಹನೆ ಪೋಗು ಪೋಗೆಂದು ಭೋಂಕನೆ ತಿರುಗಿ ಮಲುಹಣನೊಳ್
ನೇಹ ಸುಖ ಸುಪ್ತಿಯಿಂದಿರ್ಪ ಮಗಳ ಮೋಹಕ್ಕೆ ಪದ್ಮಾವತಿ ಬೆರ
ಗಾಗಿ ಕೈಯರ್ಥಮಂ ಸೆಳೆದು ಕೊಂಡಂತೆ ಮಮ್ಮಲಂ ಮರುಗಿ ಮಗಳ
ದಾಕ್ಷಿಣ್ಯಕ್ಕೆ ಮತ್ತಂ ಕೆಲವು ದಿನಮಿರಿಸಿ ಸೈರಿಸಲಾರದೆ ಮಲುಹಣೆಯ
ನಂದಂದಿಂಗೆ ಕರೆಕರೆದಗಲ್ಕೆಯನಭ್ಯಾಸಂಮಾಡಿ ಮಲುಹಣನಂ ಸೆಜ್ಜೆ
ಯೊಳ್ಮೊದಲಿಸಿ ಕುಳ್ಳಿರ್ದೆಡೆಯೊಳ್ಕುಸುರಿದರಿದು ನಿಂದಿರ್ದೆಡೆಯೊಳ್ನೀರಂ
ಚಲ್ಲಿ ಮನೆಯ ಮುಂದೆ ಸುಳಿವ ಹೊಸ ಹರೆಯದ ಸಂಪನ್ನರಪ್ಪ

ರಾಜಪುತ್ರರುಟ್ಟುಡುಗೆಯುಂ ತೊಟ್ಟ ತೊಡಿಗೆಯುಂ ಕಂಡು ಸ್ಪೈರಿಸಲಾ ರದೆ ಮನಂ ಮರುಗಿ ಔಡಂ ಕಚ್ಚಿ ವಿಳಾಸಿನಿಯರಂ ನಿಃಕಾರಣಂ ಬಡಿದು ಕಾಳ್ಗಗಳಮಂ ತೆಗೆದು ಬೇನೆ ಇಲ್ಲದೆ ನರಳ್ದು ಸಾವಿಲ್ಲದೆ ಶೋಕಂಗೈಯ್ದು ಬರಿಸಾಲಕ್ಕೆ ಪುಸಿದಗಹಂ ಕೊಟ್ಟು ಮಲುಹಣನಂ ಮನೆಯುಂ ಪೊರಮಡಿಸಿ ನಿಶ್ಚಲನಂ ನಿಃಕರಿಸಿ ಸಸ್ವನನಿದಿಗೋಳಲೆಂದು ಪದ್ಮಾವತಿಯು ಮಲುಹಣಿಯುಂ ಮಲುಹಣನ ವಿರಹ ಸಂತಪ್ತ ಚಿತ್ತೆಯುಂ ತಿಳುಹಿ ಬೋಧಿಸುತ್ತಮಿರೆಯಿರೆ.

ದ್ವಿತೀಯ ಸ್ಥಲ ಸಂಪೂರ್ಣ

---

## ತೃತೀಯ ಸ್ಥಲ.

**ಕಂದ॥** ಪೊರಮಡಿಸೆ ಮಲುಹಣಂ ನೆರೆ।
ಮರುಗಿ ಮಸಂಗುಂದಿ ಕಂದಿ ಮನ್ಮಥಬಾಣಂ॥
ಮರುವೊಸೆಗಂಡಂತದರೊಳ್।
ಗೆರಗಿ ಕರಂ ತನುವನುರುಪಿ ಪೊರಳುತ್ತಿರ್ದಂ॥

### ರಗಳೆ.

ಇಂತು ಮಲುಹಣನಂಗಜಾಗ್ನಿಯೊಳ್ಬೇವುತಂ
ಸಂತತಂ ಮಲುಹಣಿಯ ಮೋಹದೊಳ್ಪೊರಳುತಂ
ಪೊರಮಡಿಸೆ ಪೋಗಲಾರದೆ ಮನೆಯ ಮುಂದಿರ್ದು
ಮರುಗಿ ಮನವುಕ್ಕಿ ತಲೆಗರೆದು ತಾಪಿಸುತಿರ್ದು
ನಡೆದು ಗಳಗಳನೆ ಪೋಪಂ ಕಾರ್ಯವಿನಿತಿಲ್ಲ
ನುಡಿವನೊರ್ವರ್ ತನ್ನಂ ನುಡಿಸುವವರಿಲ್ಲ
ಸುಮ್ಮನಿರ್ಪಂ ಧ್ಯಾನಪೆಳ್ಪಿನಿತು ತನಗಿಲ್ಲ
ನೆಮ್ಮಿ ಕುಳ್ಳಿರ್ಪನನುಸಂಧಾನವಿಸಿತಿಲ್ಲ
ನಿಂದರಂ ಕಂಡು ಮಲುಹಣಿ ಎನುತೆ ನೋಂಕುವಂ
ಬಂದರಂ ಕಂಡು ಮಲುಹಣಿ ಎನುತಪ್ಪುವಂ
ದಾರಿಯೊಳ್ಬೀದಿಯೊಳ್ಮಲುಹಣಿಯ ಕಳವಳಂ
ಕೇರಿಕೇರಿಗಳೊಳಗೆ ಮಲುಹಣಿಯ ಕಳವಳಂ
ನಿಂದಿರ್ದು ಕುಳ್ಳಿರ್ದು ನಡೆನಡೆದು ಬೆಚ್ಚುವಂ
ಮುಂದಿರ್ದರಂ ಕಂಡು ಬಂದಂತೆ ಹೆಚ್ಚುವಂ
ಭಾವರತಿಯೊಳ್ಕೂಡಿ ಕಣ್ಮುಚ್ಚಿ ಕರಗುವಂ
ಭಾವದಚ್ಚಳಿಯೆ ಕಣ್ದೆರೆದರಸಿ ತಿರುಗುವಂ
ತನುವೆತ್ತಿ ಪೊರವಳಲಬನದೊಳಗೆ ಪರಿದಲ್ಲಿ
ತನತನಗೆ ತೀವಿರ್ದ ಪೂಗೊಳನ ತಡಿಯಲ್ಲಿ
ಕಮಳಮಂ ಮಲಹಣಿಯ ಮೊಗವೆಂದು ಮುಟ್ಟುವಂ
ಕುಮುದಮಂ ಮಲುಹಣಿಯ ಕಣ್ಗಳೆಂದಕ್ಷಿಯೊಳಗೊತ್ತುವಂ
ಮಧುಕರಂಗಳನಳಕವೆಂದು ತಲೆಯೊತ್ತುವಂ
ಅಧರವೆಂದಾ ಬಿಂಬಫಳಮನಚ್ಚೊತ್ತುವಂ

ದಾವಾಗ್ನಿಯೆಂದಶೋಕೆಯನರಿದು ಹೆರೆ ಸಾರ್ದು
ಪೂವನಂಗಜಬಾಣವೆಂದು ಕಂಡೊಳಸಾರ್ದು
ಬಿಸಿಯ ಬೆಳಗೆಂದು ಬೆಳ್ದಿಂಗಳಿಗೆ ಹೇಡೈಸಿ
ಪಸಿಯ ಕಿಚ್ಚೆಂದು ಪೊಸ ಪಲ್ಲವಕೆ ತಲ್ಲಣಿಸಿ
ಯೋಡಿಬಂದೂರೊಳಗೆ ಹಳಹಳಿಸುತಂ ಪೊಕ್ಕು
ಬಾಡಿ ಬಸವಳಿದು ಮಲುಹಣಿಯ ವಿರಹಂ ಮಿಕ್ಕು
ಗಳಗಳನೆ ನಾಲ್ಕೈದವಸ್ಥೆ ದೇಹದೊಳೇರೆ
ಯೊಳಗೊಳಗು ಸುಡಲೊಳಗು ಪೊರಗೆಲ್ಲ ಕಾಹೇರೆ
ಪೈಸೋಂಕೆ ಮೆಲ್ಗಾಳಿ ಘರಿಘರಿಲನರಿದಪುದು
ಕೈ ಸೋಂಕೆ ಬೆಳ್ದಿಂಗಳಗ್ಗಳಂ ಕಾದಪುದು
ಹೊಕ್ಕ ಕೊಳನುಕ್ಕಿ ನೆರೆ ಬತ್ತಿ ಬರಿದಾದಪುದು
ಮಿಕ್ಕ ಮುಟ್ಟಿದ ಪಲ್ಲವಂಗಳುರೆ ಸೀದಪುದು
ಯೆಂಬ ವಿರಹದೊಳಿರುತಿರಲಾರದೆಯ್ತಂದು
ಇಂಬಿಲ್ಲದಾತುರಂ ತಲೆಗೇರೆ ಪರಿತಂದು

ಮಲುಹಣಿಯ ಮನೆಯ ಮುಂದಲ್ಲಲ್ಲಿ ನಿಂದಿರ್ದು
ಮಲುಹಣಂ ಮತಿಗೆಟ್ಟು ಕಳವಳಿಸುತುಂ ಸಾರ್ದು
ಉರವಣೆಯ ಕರಣಂಗಳೊಡಗೂಡಿ ತಾಪಿಸುತ್ತ
ತಿರುಗಿ ಮಲುಹಣಿ ಮಲುಹಣಿ ಎಂದು ಮೂರ್ಛಿಸುತ್ತ
ತನ್ನಿಂದ ತಾನೆ ಮತ್ತೆಚ್ಚತ್ತು ನೋಡುತ್ತ
ಉನ್ನತಾನಂಗ ಶಿಖಿಯಿಂದುರಿದು ಬೇವುತ್ತ
ನಡೆತಂದು ಮಲುಹಣಿಯ ಬಾಗಿಲೊಳ್ ಬಳಲುತುಂ
ಅಡಿಗಡಿಗೆ ಘನತಾಪವೆಡೆಗೊಂಡು ಕಳಲುತುಂ
ದೂರಿಸುತೆ ತಾಪಿಸುತೆ ತಾ ಭಿತ್ತಿಯಂ ನೆಮ್ಮಿ
ಹಾರುತುಂ ಕಣ್ಮುಚ್ಚಿ ಕೊರಗಿ ವಿರಹಂ ಪೊಣ್ಮಿ
ಮಲುಹಣಿಯನೀಕ್ಷಿಸಿದ ಕಣ್ಗೆ ತೊತ್ತಾಗುತುಂ
ಮಲುಹಣಿಯ ನುಡಿಗೇಳ್ವ ಕಿವಿಗೆ ಮಾರಾಗುತುಂ
ಕೆಳದಿಯರ್ ಪೊರಮಡಲು ಚರಣದೊಳ್ ಪೊರಳುತುಂ
ಅಳವಲ್ಲದುರವಣೆಯ ತಾಪದೊಳು ಕೆರಳುತುಂ
ಮನದೊಳಗೆ ಕಣ್ಣೊಳಗೆ ಮಲುಹಣಿಯ ಕಳವಳಂ

ತನುವಿನೊಳ್ ತವಕವೊಳ್ ಮಲುಹಣಿಯು ಕಳವಳಂ
ಬಂದೆಂಜಲಂ ಚೆಲ್ಲುವೊಂದು ಹೊಸ ಕುಳಿಯೊಳಗೆ
ನಿಂದು ಮಧ್ಯಮ ರಾತ್ರಿ ಪರ್ಯಂತವದರೊಳಗೆ
ಇರಲಲ್ಲಿ ಮಲುಹಣಿದೇವಿಯಾರೋಗಿಸಿದ
ಪರಿಯಾಣಮುಮನೊರ್ಬ ಹೊಸ ವಿಳಾಸಿನಿ ತೊಳೆದ
ಉದಕಮಂ ಚಲ್ಲಲಾತನ ಮೇಲೆ ಪಸರಿಸಲ್
ಪಡೆದು ಪುಳಕಪ್ರತತಿ ತನ್ನ ಮೆಯ್ಯೊಳ್ಗಿಗಲ್
ಹಾ ಮಲುಹಣಿ ಮಲುಹಣಿ ಎಂದು ಹಾರೈಸೆ
ಆ ಮಾತು ಮಲುಹಣಿಯ ಕಿವಿಗಳೊಳ್ಪೂರಯಿಸೆ

ಮಲುಹಣನ ದನಿಯೆಂದು ಗಳಗಳನೆ ನಡೆತಂದು
ಮಲುಹಣ ಇದೇಕಿಂತು ನಿಲ್ವರೇ ನೀನೆಂದು
ಕೆಟ್ಟೆ ನೀನೇಕಿಲ್ಲಿ ನಿಂದಿರ್ಪೆ ಪೋಗೆನ್ನುತೆ
ಮುಟ್ಟೆ ಕೈಗೊಡಹಿ ಕಡು ವಿರಹಕ್ಕೆ ಕಂಪಿಸುತೆ
ಹೋಗಲುರಿಯೊಳಗೆ ತುಪ್ಪವನೆರೆದ ತೆರನಾಗೆ
ಪೂಗಣೆಗಳಟ್ಟಣಿಸಿ ಮುಸುರಿ ಮನವುಂ ತಾಗೆ
ಮತ್ತೆ ವಿರಹಂ ನೆಗೆದು ಕರಣದೊಳ್ನೂರ್ಮಡಿಸೆ
ಹೊತ್ತಿ ಹೊಗೆಯಿಲ್ಲದೊಳಗುರಿ ಪರಿದು ನೂರ್ಮಡಿಸೆ
ನಿಂದಿರ್ದನಿರ್ದನಿರ್ದಂ ಮಹಾ ನಿಶಿಯೊಳಗೆ
ಸಂದಣಿಸಿ ಮಂದೈಸಿ ಕವಿವ ಹೊಸ ಹಿಮದೊಳಗೆ
ಇರೆ ಕರೆದುದತಿ ನೂತ್ನ ಶೀತಪಾತನ ಮೇಲೆ
ಪರಿಪರಿಯ ಹೊಸ ಹಿಮದ ಘಟ್ಟಿಯಾತನ ಮೇಲೆ
ಮುಚ್ಚಿ ಮುಸುಕಲು ನಡುವೆ ಮಲುಹಣಂ ನಿಂದಿರ್ದ
ನಚ್ಚರಿಯ ವಿರಹದಿಂ ಹಿಮದೊಳಗೆ ಸಂದಿರ್ದ
ಎಳೆಯ ಬೆಳ್ಮುಗಿಲೊಳಗೆ ಹೊಳೆವ ಪಾವಕನಂತೆ
ಹೊಳೆವಾಲಿಕಲ್ಲಮನೆಯೊಳಗಿರ್ಪ ರವಿಯಂತೆ
ದಿಟ್ಟಿಸಲ್ಕಣ್ಮುಚ್ಚಿ ಕೊಯ್ವ ಸೀತದ ನಡುವೆ
ಮುಟ್ಟಿದೊಡೆ ಕೈಕಡಿದು ಬೀಳ್ವ ತುಹಿನದ ನಡುವೆ
ನೆನೆದೊಡೆ ಮನಂ ಮುರುಂಟುವ ಸೀತಳದ ನಡುವೆ
ತನು ಕರಗಿ ಕೋಡಿಸುವ ಬಹಳ ಸೀತದ ನಡುವೆ

## ವಚನ.

೫೭. ಅನಾದಿ ಅಖಂಡ ಪರಿಪೂರ್ಣ ನಿಜಾಚರಣೆಯನಗಲದೆ ಮಹಾ ವೈರಾಗ್ಯದಿಂದ ಪರಶಿವಲಿಂಗಕ್ಕು ಎನಗು ಚಿನ್ನಬಣ್ಣದ ಹಾಗೆ ಪುಷ್ಪಪರಿಮಳದ ಹಾಗೆ ಶಿಖಿ ಕರ್ಪೂರದ ಹಾಗೆ ಉಪ್ಪು ಉದಕದ ಹಾಗೆ, ಅಗ್ನಿ ವಾಯುವಿನ ಹಾಗೆ, ಕ್ಷೀರ ಕ್ಷೀರವ ಬೆರೆದ ಹಾಗೆ, ವಾರಿ ಶರಧಿಯ ಕೂಡಿದ ಹಾಗೆ, ತಿಳಿದುಪ್ಪ ಹೆರೆತುಪ್ಪದ ಹಾಗೆ, ಹೆಪ್ಪು ನವ ನೀತದ ಹಾಗೆ, ಸೂಜಿಗಲ್ಲಾದಂತೆ, ಮರ್ತ್ಯದಲ್ಲಿರ್ದು ಕನ್ನಡಿಯ ಪ್ರತಿ ಬಿಂಬ, ಸೂರ್ಯನ ಕಿರಣದಂತೆ, ಕಾಲ ಕಾಮರ ಪಾಶಕ್ಕೆ ಹೊರ ಗಾಗಿ, ಬಾವನ್ನದಿರವನೊಳಕೊಂಡು, ಸರ್ವಾಚಾರ ಸಂಪತ್ತಿನಲ್ಲಿ ಎಡ ದೆರಹಿಲ್ಲದೆ ಮಹಾಮೋಹಿಯಾಗಿ ಲೋಕಪಾವನಕ್ಕೋಸ್ಕರ ಸಂಚ ರಿಸುವಾತನೇ ನಿರಂಜನ ಭಕ್ತಜಂಗಮ ಕಾಣಾ ಕಲಿದೇವರದೇವಾ.

---

**ವಿವರಣೆಃ—** ಜ್ಞಾನಿಯಾದವನು ಆಚಾರವನ್ನು ಬಿಡಕೂಡದು. ಅವನು ಸದಾಚಾರದಲ್ಲಿರಬೇಕು. ಇದರಿಂದ ಜ್ಞಾನವು ಹೆಚ್ಚುವದು.

## ವಚನ.

೫೮. ಅರಿವ ನರಿದೆನೆಂದು ಕ್ರಿಯೆಯ ಬಿಡಲಾಗದು. ಮಧುರಕ್ಕೆ ಮಧುರ ಒದಗಲಾಗಿ ಸವಿಗೆ ಕೊರತೆಯುಂಟೇ? ದ್ರವ್ಯಕ್ಕೆ ದ್ರವ್ಯ ಕೂಡ ಲಾಗಿ ಬಡತನಕ್ಕೆಡೆಯುಂಟೆ? ನೀ ಮಾಡುವ ಮಾಟದಿ ಶಿವಪೂಜೆಯ ನೋಟ ಭಾವವಿರಬೇಕು. ಅದು ಕಲಿದೇವರದೇವಯ್ಯನ ಕೂಟ.

---

**ವಿವರಣೆಃ—** ಶರಣನು ಜ್ಞಾನವನ್ನು ಹೊಂದಿದಲ್ಲಿ ಅವನಲ್ಲಿ ಉಂಟಾಗುವ ಪರಿಣಾಮಗಳನ್ನು ಇಲ್ಲಿ ವಚನಕಾರನು ವಿವರಿಸಿದ್ದಾನೆ. ಅವನು ಅತ್ಯಂತ ಪರಿಶುದ್ಧನಾಗಿ ವರ್ತಿಸುತ್ತಾನೆ.

## ವಚನ.

೫೯. ಎಲೆ ಕಲಿದೇವಯ್ಯ ಆದಿಯ ಕುಳವು ಅನಾದಿಯ ಕುಳವು ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಮೂಲ ಶುದ್ಧ ಕಾಯ

ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಉಭಯ ಕಿರಣ ಶಕ್ತಿ ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಭಾವ ನಿರ್ಭಾವ ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಆದಿ ಅನಾದಿಯು ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಸಾಧ್ಯಾಸಾಧ್ಯವು ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಅರ್ಥ ಪ್ರಾಣಾಭಿಮಾನವು ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಅಂಗ ಲಿಂಗಸಂಗ ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದಿತ್ತು. ಅಷ್ಟದಳ ಕಮಲದ ಸರ್ವ ಕನ್ನಿಕೆಯರು ನಿಮ್ಮ ಜಂಗಮ ಮೂರ್ತಿಯಲ್ಲಿಯೇ ನಿಂದವು. ಎನ್ನ ನಡೆಗೆಟ್ಟಿತ್ತು. ನಿಮ್ಮ ಜಂಗಮ ಮೂರ್ತಿಯಿಂದ ಎನ್ನ ನುಡಿಗೆಟ್ಟಿತ್ತು. ನಿಮ್ಮ ಜಂಗಮದಿಂದ ಎನ್ನ ಮಾಟ ಸಮಾಪ್ತಿಯಾಯಿತ್ತು. ನಿಮ್ಮ ಜಂಗಮ ಮೂರ್ತಿಯ ಪ್ರಸಾದದಿಂದ ಎನ್ನ ತನು ಶುದ್ಧವಾಯಿತ್ತು. ಬಸವಣ್ಣ ತೋರಿದ ಕಾರಣ ನಿಮ್ಮ ಜಂಗಮ ಮೂರ್ತಿಯ ಕಂಡು ಬದುಕಿದೆನು ಕಾಣಾ ಕಲಿದೇವರ ದೇವಯ್ಯ.

---

**ವಿವರಣೆ:—** ಜಂಗಮನು ಭಕ್ತನ ಮನೆಗೆ ಹೋದಾಗ ಹೇಗೆ ಆಚರಿಸಬೇಕೆಂಬುದನ್ನು ಇಲ್ಲಿ ಹೇಳಿದ್ದಾನೆ. ಅವನೊಡನೆ ಪ್ರಸನ್ನಮನಸ್ಕನಾಗಿ ಆಚರಿಸಬೇಕೆಂದು ವಚನಕಾರನು ಹೇಳುತ್ತಾನೆ.

## ವಚನ.

೬೦. ಕರ್ತೃ ಭೃತ್ಯನ ವಾಸಕ್ಕೆ ಐದಿದಲ್ಲಿ, ಆತನ ಭಕ್ತಿಯ ನರಿತು, ತಾ ಒಡಕೂಡಿದಲ್ಲಿ ಆತ ಕೊಟ್ಟುದ ತಾ ಮುಟ್ಟದೆ, ಆತನಲ್ಲಿ ದುರ್ವಾಕ್ಯ ದುಶ್ಚರಿತ್ರ ಪರಿಹಾಸ ಕಂಗಳಂ ಬೀರದೆ, ಆತನ ಚಿತ್ತ ನೋಯುವಂತೆ ಮತ್ತಾವ ಬಂಧನನ ಕಟ್ಟನಿಕ್ಕದೆ, ಕೃತ್ಯವ ನೇಮಗೊಂಡು ಮಾಡೆಂದು ನೇಮವ ಲಕ್ಷಿಸದೆ, ಆತ ತನ್ನ ತಾನರಿತು ಮಾಡಿದಲ್ಲಿ ಅದು ತನಗೆ ಮುನ್ನಿನ ಸೋಂಕೆಂಬುದನರಿತು ಮುಟ್ಟದೆ, ಆ ಪ್ರಸನ್ನವಪ್ಪ ವಸ್ತು ಮಹಾಮಹಿಮ ಕಲ್ಲೇಶ್ವರ ಲಿಂಗವು ತಾನಾದ ಶರಣ.

**ವಿವರಣೆ:**— ಜ್ಞಾನವನ್ನು ಹೊಂದುವದೆಂದರೆ ೬೪ ವಿದ್ಯೆ ಕಲೆಗಳನ್ನು ಕಲಿಯುವದಲ್ಲ. ಇವು ಮಾಯೆಯುಳ್ಳವು. ಅವನು ನೀತಿ, ನಡತೆ, ಸದಾಚಾರವೇ ನಿಜವಾದ ಲಿಂಗಜ್ಞಾನವನ್ನೇ ಹೊಂದತಕ್ಕದ್ದೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

## ವಚನ.

೬೧. ಅಕ್ಷರ, ಲೆಕ್ಕ, ಗಂಧರ್ವ, ಜ್ಯೋತಿಷ್ಯ, ಆತ್ಮವಿದ್ಯೆ, ತರ್ಕ, ವ್ಯಾಕರಣ, ಅಮರಸಿಂಹ, ಛಂದಸ್ಸು, ನಿಘಂಟು, ಶಾಲಿಗೋತ್ರ, ಗ್ರಹವಾದ, ಗಾರುಡ, ದೂತ, ವೈದಿಕಶಾಸ್ತ್ರ, ಸಾಮುದ್ರಿಕಶಾಸ್ತ್ರ, ಲಕ್ಷಣಶಾಸ್ತ್ರ, ಅಶ್ವಪರೀಕ್ಷೆ, ಗಜಶಿಕ್ಷೆ, ಗೋಕರ್ಣ, ದಾಡಾಬಂಧ, ಮೂಲಿಕಾಸಿದ್ಧಿ, ಭೂಚರತ್ವ, ಖೇಚರತ್ವ, ಅತೀತ, ಅನಾಗತ, ವರ್ತಮಾನ, ಸ್ಥೂಲ, ಸೂಕ್ಷ್ಮ, ಇಂದ್ರಜಾಲ, ಮಹೇಂದ್ರಜಾಲ, ಉತ್ರಾಣಚೇಷ್ಟೆ ಪರಕಾಯಪ್ರವೇಶ, ದೂರದೃಷ್ಟಿ, ದೂರಶ್ರವಣ, ಋಗ್ಯಜುಸ್ಸಾಮಾಥರ್ವಣ, ಶೃತಿ ಸ್ಮೃತಿ, ಆಯುರ್ದಾಯ, ನಷ್ಟಮುಷ್ಟಿ ಚಿಂತನೆ, ಚೋರವಿದ್ಯೆ, ಅಮೃತೋದಯ, ಭಾಷಾಪರೀಕ್ಷೆ, ವೀಣಾವಿದ್ಯೆ, ಭೃಂಗಿವಿದ್ಯೆ, ಶಸ್ತ್ರವಿದ್ಯೆ, ಮಲ್ಲವಿದ್ಯೆ, ಧನುರ್ವಿದ್ಯೆ, ಅಗ್ನಿಸ್ತಂಭನ, ಜಲಸ್ತಂಭನ, ವಾಯುಸ್ತಂಭನ, ವಾದ, ವಶ್ಯ, ಅಂಜನಾಸಿದ್ಧಿ, ಘಟಿಕಾಸಿದ್ಧಿ, ಮಂತ್ರತಂತ್ರಸಿದ್ಧ, ಇವೆಲ್ಲವ ಕಲಿತಡೇನೋ? ಚೌಷಷ್ಟಿವಿದ್ಯಾಕಳಾವಿದನೆನಿಸಿಕೊಂಬನಲ್ಲದೆ, ಲಿಂಗವಂತನೆನಿಸಿಕೊಂಬುದಿಲ್ಲ. ಲಿಂಗವುಳ್ಳ ಶಿವಭಕ್ತಂಗೆ ಇವರೆಲ್ಲ ಕೂಡಿ ಸರಿಬಾರರೆಂದ ಕಲಿದೇವರದೇವಾ.

# ಜಂಗಮರು ಸದಾಚಾರಿಗಳಾಗಿರತಕ್ಕದ್ದು.

**ವಿವರಣೆಃ** – ಜಂಗಮರು ಶುದ್ಧವಾದ ನಡೆಯುಳ್ಳವರಿರತಕ್ಕದ್ದು. ಅವರಲ್ಲಿ ದುರಾಚಾರಗಳು ಲವಲೇಶವಾದರೂ ಇರತಕ್ಕುದಲ್ಲ. ಆದರೆ ಇವರಲ್ಲಿ ಇದಕ್ಕೆ ವಿಪರೀತವಾಗಿ ಆಚರಿಸುವವರನೇಕರಿರುತ್ತಾರೆ. ಇಂಥ ವರನ್ನು ವಚನಕಾರರು ಬಹು ತೀಕ್ಷ್ಣಶಬ್ದಗಳಿಂದ ಹಳಿಯುವದುಂಟು. ಮಡಿವಾಳ ಮಾಚಿದೇವನಾದರೂ ಇಂಥವರ ಹೊಲ್ಲದ ಕೃತ್ಯಗಳನ್ನು ಇಲ್ಲಿ ನಿಷೇಧಿಸುತ್ತಲಿದ್ದಾನೆ. ವಚನ ೬೩ ರಿಂದ ೭೨ ರ ವರೆಗೆ ಈ ಬಗೆಯ ವಚನಗಳು ಇಲ್ಲಿ ಬಂದಿವೆ. ಕೆಲವು ವಚನಗಳಲ್ಲಿ ವೀರಶೈವರ ಉಚ್ಚ ತತ್ವಗಳೂ ಹೇಳಲ್ಪಟ್ಟಿವೆ. ಪಾದೋದಕ ಪ್ರಸಾದದ ಮರ್ಮವಾವುದೆಂ ಬುದು ೬೫ ನೇ ವಚನದಲ್ಲಿ ಬಂದಿದೆ. ಜಂಗಮರು ಸರ್ವರಲ್ಲಿಯೂ ಶಾಂತತೆಯಿಂದ ಇದ್ದು ಜ್ಞಾನವೆಂಬ ಪ್ರಭೆಯನ್ನು ಸೂಸುವವರಾಗಿರ ಬೇಕೆಂದು ೬೬ ನೇ ವಚನದಲ್ಲಿ ಹೇಳಿದೆ. ಜಂಗಮರು ಮೂರು ಸ್ಥಲ ಗಳ ನಿಜವನ್ನು ಅರಿಯಬೇಕು ಮತ್ತು ಪುಣ್ಯ ಪಾಪಗಳ ವಿವರಗಳನ್ನು ತಿಳಿಯಬೇಕೆಂದು ೬೮ ನೇ ವಚನದಲ್ಲಿ ಹೇಳಿದೆ. ಅವರು ಕೇವಲ ಕಾಷಾಯಾಂಬರಗಳನ್ನು ತೊಟ್ಟು ವೇಷಧಾರಿಗಳಾಗಿ ಸಂಚರಿಸುತ್ತಿರ ಬಾರದೆಂದು ಅನೇಕ ವಚನಗಳಲ್ಲಿ ಹೇಳಲ್ಪಟ್ಟಿದೆ. ಅವರು ಪಂಚ ಸೂತ ಕಗಳನ್ನು ಕಲ್ಪಿಸದೆ ಪಂಚಾಚಾರಗಳ ರೀತಿಯನ್ನು ತಿಳಿದುಕೊಂಡು ತಮ್ಮ ನಿಜ ಚಿತ್ಕಳೆಯನ್ನು ತೋರಿಸುವದು ಅವರ ಕರ್ತವ್ಯವು. ಪಾದೋ ದಕ ಪ್ರಸಾದದ ಅರಿವೇ ಇದಾಗಿದೆ ಎಂದು ೭೧ ನೇ ವಚನದಲ್ಲಿ ನಿರೂ ಪಿಸಿದೆ. ಅಲ್ಲದೆ ಜಂಗಮನು ಅಂತಃಶಕ್ತಿಯನ್ನು ಬೆಳಿಸುವವನಾಗಬೇಕು. ಅವನು ಯಾವ ಪರಶಿವಲಿಂಗವು ಮೇಲುಗಿರಿಯಲ್ಲಿ ಇದೆಯೋ ಅದರ ಪ್ರಕಾಶದಲ್ಲಿ ಬೆರೆಯಬೇಕು. ಈ ರೀತಿಯಾಗಿ ವಚನಕಾರನು ಟೀಕಾ ತ್ಮಕ ರೀತಿಯಿಂದ ಜಂಗಮರ ನಿಜಕರ್ತವ್ಯಗಳನ್ನು ಇಲ್ಲಿ ಬೋಧಿಸಿದ್ದಾನೆ.

## ವಚನಗಳು.

೬೨. ಹಸಿವು ತೃಷೆ ವ್ಯಸನಕ್ಕೆ ಕುದಿಕುದಿದು, ಚರಾಚರದೊಳಗೆ ಲಯವಾಗಿ ಹೋದರಲ್ಲಾ! ಉದರವ ಹೊರೆವ ಕೋಟಿ ವೇಷಧಾರಿಗಳೆಲ್ಲ ಜಂಗಮವಪ್ಪರೆ? ಅಲ್ಲ. ಲಿಂಗ ಸ್ಥಲವನರಿಯರು. ಜಂಗಮ ಸ್ಥಲವ

ನರಿಯರು. ಪ್ರಸಾದ ಸ್ಥಲವನರಿಯರು. ಇಂತೀ ತ್ರಿವಿಧ ಸ್ಥಲವನರಿಯದ ಕಾರಣ, ಅವರ ಗಾವಿಲರ ಮಕ್ಕಳೆಂಬೆ ಕಲಿದೇವಾ.

೬೩. ಅಯ್ಯ ಕಂಡವ ತಿಂದು ಹೆಂಡವ ಕುಡಿದು ರಂಡಿಯ ಸಂಪರ್ಕವ ಮಾಡಿ ದಂಡವ ಕೊಡುವ ಜಗಭಂಡ ತಾಯಿಗ್ಗಂಡ ಹೆಂಡಗಾರರಿಗೆ ಸದ್ಭಕ್ತ ಸಿದ್ಧವೀರ ಮಾಹೇಶ್ವರರೆಂದು ಮನದಲ್ಲಿ ಭಾವಿಸಿದಡೆ ಹುಳಗೊಂಡದಲ್ಲಿಕ್ಕುವ ಕಾಣಾ ನಿಮ್ಮ ಶರಣ ಕಲಿದೇವರದೇವಾ.

ಟೀಕು:--ಸುಜ್ಞಾನೋದಯವಾಗಿ ಸಕಲ ಮಾಯಾ ಪ್ರಪಂಚವ ನಿವೃತ್ತಿಯ ಮಾಡಿ ಶ್ರೀಗುರುಕಾರುಣ್ಯವ ಪಡೆದ ಜ್ಞಾನಕಲಾತ್ಮಕನು ಕಂಡವೆಂದಡೆ ಪರತತ್ವ ಸ್ವರೂಪವಾದ ಇಷ್ಟಲಿಂಗವು, ಹೆಂಡವೆಂದಡೆ ಪರಮಾಮೃತ ಸ್ವರೂಪವಾದ ಪ್ರಾಣಲಿಂಗವು, ಕುಡಿದು ಎಂದಡೆ ಅಂತಪ್ಪ ಇಷ್ಟ ಪ್ರಾಣಲಿಂಗವನು ದೇಹ ಪ್ರಾಣಗಳಲ್ಲಿ ಸ್ವಾಯತವ ಮಾಡಿಕೊಂಡು, ಆ ಉಭಯ ಲಿಂಗದೇಕ ಸ್ವರೂಪವಾದ ಭಾವಲಿಂಗದ ಪರಮಾಮೃತ ಪರಮಾನಂದವ ಸೇವಿಸುತ್ತಿರ್ದನೆಂಬುದೀಗ ಕಂಡವ ತಿಂದು ಹೆಂಡವ ಕುಡಿದು ಎಂಬ ಶಬ್ದಕ್ಕರ್ಥ ರಂಡಿಯೆಂದಡೆ ಚಿತ್ ಶಕ್ತಿ. ಅದೆಂತೆಂದಡೆ ೩, ೬, ೯, ೧೮, ೩೬, ೯೬, ೧೦೮, ೨೧೬, ೧೨೫೨ ಲಿಂಗ ಮೊದಲಾಗಿ ಅನೇಕ ಲಿಂಗವನು ಗರ್ಭೀಕರಿಸಿಕೊಂಡಿರುವ ಚಿದ್ಘನ ಮಹಾಲಿಂಗವನು ತನ್ನ ಮೂಲ ಜ್ಞಾನಪ್ರಕಾಶವೆಂಬ ಶಸ್ತ್ರದಿಂ ಅಂಗಲಿಂಗವೆಂಬ ಭಿನ್ನ ಭಾವವ ಛೇದಿಸಿ, ನಿರಾಭಾರಿ ವೀರಶೈವನಾಗಿರ್ದ ಕಾರಣ, ಆ ಮಹಾ ಜ್ಞಾನಶಕ್ತಿ ಎಂಬ ಚಿತ್‌ಶಕ್ತಿಗೆ ರಂಡಿ ಎಂಬ ಹೆಸರಾಯಿತ್ತು. ಅಂತಪ್ಪ ತ್ರಿವಿಧಲಿಂಗ ಸಂಬಂಧಿಗಳಾದ ಜ್ಞಾನಕಲಾತ್ಮರು ತಮ್ಮ ಸ್ವಾನುಭಾವದಿಂದ ಚಿತ್‌ಶಕ್ತಿಯಲ್ಲಿ ಸಮರಸಭಾವಿಯಾಗಿರ್ದರೆಂಬುದೀಗ ರಂಡಿಯ ಸಂಪರ್ಕವ ಮಾಡಿ ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಲಿಂಗಾನುಭಾವಿಗಳು ಆತ್ಮದ್ರವ್ಯವೆಂಬ ಮನಮೊದಲಾದ ಅರುವತ್ತಾರು ಕೋಟಿ ಕರಣಂಗಳನು ಪರಶಿವಲಿಂಗಕ್ಕೆ ನಿರ್ವಂಚಕ ಭಾವದಿಂದ ಅರ್ಪಿಸುತ್ತಿರ್ದರೆಂಬುದೀಗ ದಂಡವ ಕೊಡುವ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸವನುಳ್ಳ ಜ್ಞಾನಕಲಾತ್ಮರೇ ಮೂರು ಲೋಕಕ್ಕೆ ಪ್ರಖ್ಯಾತರೆಂಬುದೀಗ ಜಗಭಂಡರು ಎಂಬ ಶಬ್ದಕ್ಕರ್ಥ. ಮೂರು ಲೋಕಕ್ಕೆ ಪ್ರಖ್ಯಾತರಾದ ಶಿವಶರಣರೇ ಆ ಚಿತ್‌ಶಕ್ತಿಯಿಂದ ಉದ್ಭವಿಸಿ ಮರಳಿ ಆ ಚಿತ್‌ಶಕ್ತಿ

ಯಲ್ಲಿಯೇ ಸಮರಸ ಸಂಯೋಗವ ಮಾಡಿದರೆಂಬುದೀಗ ತಾಯಿಗ್ಗಂಡರು ಎಂಬ ಶಬ್ದಕ್ಕರ್ಥ. ಆ ಅರಿವು ಸಂಬಂಧವನುಳ್ಳ ಚಿತ್‌ಶಕ್ತಿಯಲ್ಲಿ ಸಮರಸವಾದ ಪರಮಾವೃತ ಸ್ವರೂಪರಾದ ಶಿವಜ್ಞಾನ ಶರಣರಿಗೆ ಭಕ್ತಮಹೇಶ್ವರರು ಎನಬೇಕು ಎಂಬುದೀಗ ಹೆಂಡಗಾರರಿಗೆ ಸದ್ಭಕ್ತ ಸಿದ್ಧವೀರ ಮಹೇಶ್ವರರೆಂದು ಎಂಬ ಶಬ್ದಕ್ಕರ್ಥ. ಮತ್ತಂ ಇಂತಪ್ಪ ನಿಜದ ನಿಲುಕಡೆಯನರಿಯದೆ. ತಮ್ಮ ನಿಜ ಸ್ವರೂಪ ಮರೆದು ಜೀವರಾಗಿ ಗುರುಲಿಂಗ ಜಂಗಮವ ತಮ್ಮಂಗ ಮನ ಪ್ರಾಣಂಗಳಿಂದ ಭಿನ್ನವಿಟ್ಟು ತ್ರಿಕಾಲದಲ್ಲಿ ಪೂಜಿಸಿ, ಆಯ್ಯಾ ಹಸಾದ ತೀರ್ಥ ಪ್ರಸಾದವ ಪಾಲಿಸಿರೆಂದು ಪಡೆದುಕೊಂಡು ಸಲಿಸುವ ಜೀವಾತ್ಮರು ಭಂಡನೆಂಬ ಪರತತ್ವದಿಂದ ಫುಟ್ಟಿದ ಫಲಪದಂಗಳ ಪಡೆದು ಅನುಭವಿಸುತಿರ್ದರು ಎಂಬುದೀಗ ಕಂಡವ ತಿಂದು ಎಂಬ ಶಬ್ದಕ್ಕರ್ಥ. ಆ ಫಲಪದಂಗಳಂ ಪಡೆದ ಜೀವಾತ್ಮರು ಮರಳಿ ಮರ್ತ್ಯಲೋಕದಲ್ಲಿ ಅವತರಿಸಿ ಸಂಸಾರ ರಸವೆಂಬ ಹೆಂಡವನೀಂಟಿಸುತಿರ್ದರೆಂಬುದೀಗ ಹೆಂಡವ ಕುಡಿದು ಎಂಬ ಶಬ್ದಕ್ಕರ್ಥ. ಅಂತಪ್ಪ ಸಂಸಾರ ವಿಷಯವೆಂಬ ಅಷ್ಟಮದದಲ್ಲಿ ಕಟ್ಟುವಡೆದು ಊರಲಿಕ್ಕಿ ಕೋಣನಂದದಿ ತಿರುಗುವ ಜೀವಾತ್ಮರು ದಾಸಿವೇಶಿಯರ ಸಂಗವ ಮಾಡುತಿರ್ದರೆಂಬುದೀಗ ರಂಡಿಯ ಸಂಪರ್ಕವ ಮಾಡಿ ಎಂಬ ಶಬ್ದಕ್ಕರ್ಥ. ಇಂತಪ್ಪ ವಿಷಯವಿಕಾರದಿಂದ ತಿರುಗುವ ಜೀವಾತ್ಮರು ಇರುಹೆ ಮೊದಲು ಆನೆ ಕಡೆ ಎಂಬತ್ತು ನಾಲ್ಕು ಲಕ್ಷ ಜೀವರಾಶಿಯಲ್ಲಿ ಹುಟ್ಟಿ ಮೆಟ್ಟದ ಭೂಮಿಯ ಮೆಟ್ಟಿ, ಉಣ್ಣದ ಆಹಾರವನುಂಡು, ಬಾರದ ಭವಂಗಳಲ್ಲಿ ಹುಟ್ಟಿಬಂದು ಕಡೆಯಲ್ಲಿ ಯಮದಂಡನೆಗೆ ತಮ್ಮ ತನುವೆಂಬ ದ್ರವ್ಯವ ದಂಡವ ಕೊಡುತಿರ್ದರೆಂಬುದೀಗ ದಂಡವ ಕೊಡುವರು ಎಂಬ ಶಬ್ದಕ್ಕರ್ಥ ಇಂತೀ ಜೀವಾತ್ಮರು ಚತುರ್ದಶ ಭುವನಕ್ಕೆ ಭೂಭಾರಕರಾದ ಚಾಂಡಾಲರು ಎಂಬುದೀಗ ಜಗಭಂಡರು ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವಾತ್ಮರು ತಾ ಬಂದ ಯೋನಿ ಉಂಡ ಮೊಲೆ ಎಂಬುದನರಿಯದೆ ತಾನಿದ್ದ ಆಲಯಕ್ಕೆ ಬಂದಡೆ ತಾಯೆಂದು ನೋಡದೆ ಅಕ್ಕತಂಗಿ ಎಂದು ತಿಳಿಯದೆ ಕಾಮವಿಕಾರ ತಲೆಗೇರಿ ಕಣ್ಣ ಮುಚ್ಚಿ ತಕ್ಕೈಸಿ ಮುದ್ದು ಮುಖದ ಮೇಲೆ ಮುದ್ದುಕೊಟ್ಟು ಅಮರ್ದಪ್ಪಿ ಸಂಪರ್ಕವ ಮಾಡುವರು ಎಂಬುದೀಗ ತಾ ಗಂಡರು ಎಂಬ ಶಬ್ದಕ್ಕರ್ಥ. ಇಂತಪ್ಪ ಮಲ ಮಾಯಾ ಸಂಸಾರವಿಷಯ ಸುಖದಲ್ಲಿ ಮನ ಮಗ್ನರಾಗಿ ಮಲತ್ರಯವ ಕಟ್ಟಿ ಒದ್ದಾಡುವ ಮೂಳಿ ಹೊಲೆ ಮಾದಿಗರಿಗೆ ಸತ್ತು

ಚಿತ್ತಾನಂದ ಸ್ವರೂಪವಾದ ಸದ್ಭಕ್ತ ಸಿದ್ಧವೀರ ಮಹೇಶ್ವರರೆಂದು ಪಟ್ಟ ಚರಮೂರ್ತಿ ಮೊದಲಾದ ಷಟ್‌ಸ್ಥಲಾಂತ್ಯವಾದ ಶ್ರೀಗುರುಲಿಂಗ ಜಂಗಮ ದೇವರೆಂದು ಮನದಲ್ಲಿ ಯೋಚಿಸಿ ವಂದಿಸಿದವರಿಗೆ ಹರಿ ಸುರ ಬ್ರಹ್ಮಾದಿಗಳು ಮೊದಲಾದ ದೇವತೆಗಳು ಬಿದ್ದ ಮಳುಗೊಂಡದಲ್ಲಿಕ್ಕೆಂದ ನೋಡಾ ನಿಮ್ಮ ಶರಣ ಎಲೆ ಪರಶಿವಲಿಂಗವೇಎಂಬುದೀಗ ಹೆಂಡಗಾರರಿಗೆ ಸದ್ಭಕ್ತ ಸಿದ್ಧವೀರ ಮಹೇಶ್ವರರೆಂದು ಮನದಲ್ಲಿ ಭಾವಿಸಿದಡೆ ಹುಳುಗೊಂಡದಲ್ಲಿಕ್ಕುವ ಕಾಣಾ ಶರಣ ಕಲಿದೇವರದೇವಾ ಎಂಬ ಶಬ್ದಕ್ಕರ್ಥ.

೭೪. ಅಯ್ಯಾ ನಾವು ಪರಮ ವಿರಕ್ತರು ಪಟ್ಟದೊಡೆಯರು ಅತೀತ ಚರಮೂರ್ತಿಗಳೆಂದು ಶಂಖ ಗಿಳಿಲು ದಂಡಾಗ್ರವ ಪಿಡಿದು ಕಾವಿ ಕಾಷಾಯಾಂಬರವ ಹೊದ್ದು ಮಹಾ ಘನಲಿಂಗ ಚರಮೂರ್ತಿಗಳೆಂದು ಚನ್ನಾಗಿ ನುಡಿದುಕೊಂಬ ತೊನ್ನ ಹೊಲೆಮಾದಿಗರ ಪ್ರಸಂಗಕ್ಕೆ ಮನವೆಳಸದೆ ಮುಖನೆತ್ತಿ ನೋಡದೆ ಶಬ್ದಮುಗ್ಧನಾಗಿ ಸುಮ್ಮನೆ ಕುಳಿತಿರ್ದನು ಕಾಣಾ ನಿಮ್ಮ ಶರಣ. ಅದೇನು ಕಾರಣವೆಂದಡೆ ತನ್ನ ತಾನಾರೆಂದರಿಯದೆ, ತನ್ನ ಇಷ್ಟಮಹಾಘನಲಿಂಗದ ಗೊತ್ತ ಮುಟ್ಟದೆ, ತನು ಮನಧನವೆಂಬ ತ್ರಿವಿಧ ಪದಾರ್ಥವನರ್ಪಿಸಿ ತ್ರಿವಿಧಪ್ರಸಾದವ ಗರ್ಭೀಕರಿಸಿಕೊಂಡ ಪ್ರಸನ್ನಪ್ರಸಾದವ ಸ್ವೀಕರಿಸಿ ಪರತತ್ವ ಪ್ರಸಾದ ಮೂರ್ತಿ ತಾನಾಗಲರಿಯದೆ, ಉಚ್ಚಂಗಿ ದುರ್ಗಿಗೆ ಬಿಟ್ಟ ಪೋತರಾಜನಂತೆ ಮಾರು, ಮಾರು ಜಡೆಮುಡಿಗಡ್ಡಗಳ ಬಿಟ್ಟುಕೊಂಡು ಡೊಂಬ ಜಾತಿಕಾರರಂತೆ ವೇಷವ ತೊಟ್ಟು. ಸಂಸ್ಕೃತಾದಿ ಪ್ರಾಕೃತಾಂತ್ಯವಾದ ನಾನಾ ಶಾಸ್ತ್ರವ ಹೇಳಿ ಸುಡುಗಾಡ ಸಿದ್ಧಯ್ಯಗಳಂತೆ ಕುಟಿಲ ಕುಹಕ ಯಂತ್ರ ತಂತ್ರಗಳ ಕುಟ್ಟುತ ಪುರಜನರ ಮೆಚ್ಚಿಸಬೇಕೆಂದು, ಅಯ್ಯ ನಾವು ಕೆರೆ ಬಾವಿ ಮಠಮಾನ್ಯ ಮದುವೆ ಮಾಂಗಲ್ಯದೀಕ್ಷೆ ಪಟ್ಟ ಪ್ರಯೋಜನ ಔತನ ಅನ್ನಕ್ಷೇತ್ರ ಅರವಟ್ಟಿಗೆ ದಾಸೋಹ ಪುರಾಣ ಪುಸ್ತಕ ಮಾಡಿಸಬೇಕೆಂದು ಗುರುಲಿಂಗಜಂಗಮಕ್ಕಲ್ಲದೆ ನಿರಾಭಾರಿ ವೀರಶೈವಕ್ಕೆ ಹೊರಗಾಗಿ ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ಹುಸಿಯ ಬೊಗಳಿ ವ್ಯಾಪಾರದ ಮರೆಯಿಂದ ನಡು ಊರ ಬೀದಿ ನಡುವೆ ಕುಳಿತು ಪರರೊಡವೆಯ ಅಪಹರಿಸುವ ಸೆಟ್ಟಿ ಮುಂತಾದ ಸಮಸ್ತ ಕಳ್ಳರ ಮಕ್ಕಳ ಕಾಡಿ ಬೇಡಿ ಅವರು ಕೊಟ್ಟರೆ ಹೊಗಳಿ ಕೊಡದಿರ್ದಡೆ ಬೊಗಳಿ ಆ ಭ್ರಷ್ಟ ಹೊಲೆಮಾದಿಗರು ಕೊಟ್ಟ ದ್ರವ್ಯಗಳ ಕೊಂಡು ಬಂಮ ಚೋರ

ರೊಯ್ದರೆಂದು ಮಠದೊಳಗೆ ಮಡಿಗಿಕೊಂಡು ಇಂತಹ ದುರ್ಗುಣ ದುರಾಚಾರಿಗಳ ಶ್ರೀಗುರುಲಿಂಗಜಂಗಮವೆಂದು ಕರೆತಂದು ತೀರ್ಥಪ್ರಸಾದವ ತೆಗೆದುಕೊಂಬುವರಿಗೆ ಇಪ್ಪತ್ತೆಂಟು ಕೋಟಿ ಯುಗ ಪರಿಯಂತರದಲ್ಲಿ ನರಕ ಕೊಂಡದಲ್ಲಿಕ್ಕುವ ಕಾಣಾ ನಿಮ್ಮ ಶರಣ ಕಲಿದೇವರದೇವ.

೬೫. ಅಯ್ಯ ನಾವು ಗುರುಲಿಂಗಜಂಗಮದ ಪಾದೋದಕ ಪ್ರಸಾದ ಸಂಬಂಧಿಗಳೆಂದು ನುಡಿದುಕೊಂಬ ಪಾತಕರ ಮುಖವ ನೋಡಲಾಗದು. ಅದೇಕೆಂದಡೆ ಪಾದೋದಕವ ಕೊಂಡ ಬಳಿಕ ಜನನದ ಬೇರ ಕಿತ್ತೊರಿಸಬೇಕು. ಪ್ರಸಾದವ ಕೊಂಡ ಬಳಿಕ ಪ್ರಳಯುವ ಗೆಲಿಯಬೇಕು. ಇಂತಪ್ಪ ಚಿದ್ರಸ ಪಾದೋದಕ ಚಿತ್‌ಪ್ರಕಾಶ ಪ್ರಸಾದ ತನ್ನ ಚಿನ್ಮಯ ಸ್ವರೂಪವಾದ ಹೃದಯ ಮಂದಿರ ಮಧ್ಯದಲ್ಲಿ ನೆಲಸಿರುವ ಸಕೀಲ ಸಂಬಂಧವ ಚಿದ್ಘನ ಗುರುವಿನ ಮುಖದಿಂದ ಸಂಬಂಧಿಸಿ ಕೊಳಲರಿಯದೆ ಅರ್ಥದಾಸೆಗಾಗಿ ಬಡ್ಡಿಯ ತೆಗೆದುಕೊಂಡು ಬಡವರ ಬಂಧನ ಕಿಕ್ಕಿ ತುಡುಗ ವ್ಯಾಪಾರವ ಮಾಡಿ ಸದಾಚಾರದಿಂದ ಆಚರಿಸಲರಿಯದೆ ತನು ಮನ ಧನದಲ್ಲಿ ವಂಚನೆ ಇಲ್ಲದ ಭಕ್ತಿಯನರಿಯದೆ ತೀರ್ಥ ಪ್ರಸಾದದಲ್ಲಿ ನಂಬುಗೆ ವಿಶ್ವಾಸವಿಲ್ಲದೆ ಕಂಡವರ ಕಂಡು ಕೈಯೊಡ್ಡಿ ಇಕ್ಕಿಸಿಕೊಂಡು ವಿಶ್ವಾಸವಿಲ್ಲದವರಿಗೆ ಅಷ್ಟಾವರಣ ಎಂತು ಸಿದ್ಧಿಯಹುದೋ? ಅದೇನು ಕಾರಣವೆಂದಡೆ ಸಕಲ ವೇದಾಗಮ ಪುರಾಣ ಸಪ್ತಕೋಟಿ ಮಹಾಮಂತ್ರ ಉಪಮಂತ್ರ ಕೋಟಾನುಕೋಟಿಗೆ ಮಾತೃಸ್ಥಾನವಾದ ಪಂಚಾಕ್ಷರಿಯ ಮಂತ್ರ ಸಟೆಯಾಯಿತ್ತು. ಅನಂತ ಕೋಟಿ ಬ್ರಹ್ಮಾಂಡಗಳ ನೊಳಗೊಂಡಂತಹ ಗುರು ಕೊಟ್ಟ ಇಷ್ಟಲಿಂಗ ಸಟೆಯಾಯಿತ್ತು. ದೇಗುಲದೊಳಗಣ ಕಲ್ಲು, ಕಂಚು, ಕಟ್ಟಿಗೆ, ಬೆಳ್ಳಿ, ತಾಮ್ರ, ಭಂಗಾರದ ದೇವರ ಪೂಜಿಸುವ ಪೂಜಾರಿಗಳ ಮಾತು ದಿಟವಾಯಿತ್ತು. ಆದಿ ಅನಾದಿಯಿಂದತ್ತತ್ತಲಾಗಿ ಮೀರಿ ತೋರುವ ಮಾಯಾಕೋಳಾಹಾಳ ನಿರಂಜನ ಜಂಗಮದ ಪಾದೋದಕ ಪ್ರಸಾದ ಸಟೆಯಾಯಿತ್ತು. ಕ್ಷೇತ್ರಾದಿಗಳ ತೀರ್ಥ ಪ್ರಸಾದ ದಿಟವಾಯಿತ್ತು ಅಂತಪ್ಪ ಅಗಮ್ಯ ಅಗೋಚರವಾದ ಅಷ್ಟಾವರಣ ಇಂತವರಿಗೆ ಎಂತು ಸಾಧ್ಯವಹುದು? ಆಗದೆಂದಾತ ನಮ್ಮ ಶರಣರ ಕಲಿದೇವರದೇವ.

೬೬. ದೇಶಾಂತರಿ ದೇಶಾಂತರಿ ಎಂದು ನುಡಿವ ಹುಸಿ ಭ್ರಷ್ಟರನೇನೆಂಬೆನಯ್ಯಾ? "ಏಕಮೂರ್ತಿಸ್ತ್ರಯೋಭಾಗಂಗುರುರ್ಲಿಂಗಂತು ಜಂ

ಗಮಃ" ಎಂಬುದನರಿಯದೆ ದೇಶಾಂತರಿ ಎಂದರೆ ಆರು ಮೆಚ್ಚುವ ರಯ್ಯಾ? ಸುಮ್ಮನಿರಿ ಭೋ ಬರುಕಾಯುರುಗಳಿರಾ. ದೇಶಾಂತರಿಯಾದರೆ ಮೂರು ಲೋಕದ ಕರ್ತನಂತೆ ಶಾಂತನಾಗಿರಬೇಕು. ಜಲದಂತೆ ಶೈತ್ಯವ ತಾಳಿರಬೇಕು. ಸೂರ್ಯನಂತೆ ಸರ್ವರಲ್ಲಿ ಪ್ರಭೆ ಸೂಸುತ್ತಿರಬೇಕು. ಪೃಥ್ವಿಯಂತೆ ಸರ್ವರ ಭಾರವ ತಾಳಿರಬೇಕು. ಹೀಗಾದರೆ ಮಹಂತಿನ ಕೂಡಲ ದೇವರೆಂಬೆನಯ್ಯಾ. ಹೀಗಲ್ಲದೆ ತ್ರಿವಿಧ ಮಲಗಳ ಭುಂಜಿಸ ತ್ತ ಗುರುಲಿಂಗಜಂಗಮುಕ್ಕೆ ತನುಮನಧನ ಸವಿಯದೆ ತಾವೇ ದೇವರೆಂದು ತಮ್ಮುದರವ ಹೊರೆವ ಶ್ವಾನ ಸೂಕರನಂತೆ ಪ್ರಪಂಚನ ಗರ್ವಿಗಳ ದೇಶಾಂತರಿ ಮಹಂತೆನಬಹುದೇನಯ್ಯಾ? ಎನಲಾಗದು ಕಾಣಾ ಕಲಿದೇವರ ದೇವಾ.

೬೭. ಅಯ್ಯ ತನ್ನ ತಾನರಿಯದೆ ತನ್ನಿಷ್ಟ ಲಿಂಗನ ಹೊಲುಬು ತಿಳಿಯದೆ, ಕಾಮವ ತೊರೆಯದೆ, ಹೇಮವ ಜರಿಯದೆ, ನಾವು ಹರ ಗುರುಚರ ಷಟ್‌ಸ್ಥಲವ ವಿರಕ್ತರೆಂದು ಚನ್ನಾಗಿ ನುಡಿದುಕೊಂಡು, ಕಾವಿ ಕಾಷಾಯಾಂಬರವ ಹೊದ್ದು ಶಂಖ ಗಿಳಿಲು ದಂಡಾಗ್ರವ ಹೊತ್ತು, ಕೂಳಿಗಾಗಿ ನಾನಾ ದೇಶವ ತಿರುಗಿ, ಕಾಂಚನಕ್ಕೆ ಕೈಯೊಡ್ಡುವ ಪಂಚಮಹಾಪಾತಕರನ್ನು ಕಾಗೆಯ ಗರ್ಭದಲ್ಲಿ ಹುಟ್ಟಿಸಿ ಕಾಕಾ ಎಂದು ಕೂಗಿಸುತಿರ್ಪನು ಕಾಣಾ ಕಲಿದೇವರದೇವ.

೬೮. ಮೂರುಸ್ಥಲದ ಮೂಲವನರಿಯರು. ಪುಣ್ಯ ಪಾಪವೆಂಬ ವಿವರವನರಿಯರು. ಇಹಪರವೆಂಬುಧನರಿಯರು. ಇವರನೆಂತು ಮಹಂತಿನ ದೇವರೆಂಬೆನಯ್ಯ? ಹೊನ್ನು ವಸ್ತ್ರದವನ ಬಾಗಿಲ ಕಾಯ್ವ ಪಶು ಪ್ರಾಣಿಗಳ ದೇವರೆನ್ನಬಹುದೇನಯ್ಯ? ಜಗದ ಕರ್ತನ ವೇಷವ ಧರಿಸಿಕೊಂಡು ಸರ್ವರಿಗೆ ಬೇಡಿ ಕೊಟ್ಟರೆ ಒಳ್ಳೆಯವ. ಕೊಡದಿರ್ದಡೆ ಕೆಟ್ಟವನು. ಪಾಪಿ ಚಾಂಡಾಲಿ ಅನಾಚಾರಿ ಎಂದು ದೂಷಿಸಿ ಒಳಹೊರಗೆಂದು ಬೊಗಳುವ ಮೂಳ ಮಾನವರಿಗೆ ಮಹಂತಿನ ಆಚರಣೆ ಎಲ್ಲಿಯದೊ? ಇಲ್ಲವೆಂದ ಕಲಿದೇವರದೇವ.

೬೯. ಹೊನ್ನು ಹೆಣ್ಣು ಮಣ್ಣನಾವರಿಸಿಕೊಂಡು ಒಡವೆ ಆಭರಣಂಗಳ ಹಲ್ಲಣಸಿಕೊಂಡು ಬಂದು ಸರ್ವರಿಗೆ ಶಾಸ್ತ್ರೋಪದೇಶವ ಹೇಳುವರು ವೇಷಧಾರಿಗಳು. ಸೂಳೆಯರಂತೆ ತಮ್ಮ ಉಪಾಧಿಕೆಗೆ ಒಡಲಾ

ಸೆಗೆ ಹಿತವಚನವ ನುಡಿವರು. ಇಂತಪ್ಪ ಪ್ರಸಂಚಿನ ವೇಷಡಂಭಕ ಧೂರ್ತಲಾಂಛನ ಧಾರಿಗಳಿಗೆ ಮಹಂತಿನ ದೇವರೆನ್ನಬಹುದೇ? ಎನ ಲಾಗದು. ಅದೇನು ಕಾರಣವೆಂದಡೆ ತವರ್ಮ್ಮಾದಿಯು ನಿಲವ ತಾವ ರಿಯರು. ಷಟ್‌ಸ್ಥಲದ ನಿರ್ಣಯವ ಏನೆಂದರಿಯರು. ಆಚಾರದಸು ಭಾವದಂತರಂಗದ ಮೂಲವ ಮುನ್ನವೇ ಅರಿಯರು. ಇಂತಿದನರಿ ಯದ ಪಶುಪ್ರಾಣಿಗಳಿಗೆ ಜಂಗಮವೆನ್ನಬಹುದೆ? ಎನಲಾಗದು ಅಯ್ಯ ಕಲಿದೇವರದೇವಾ.

೭೦. ಭಕ್ತ ಜಂಗಮಕ್ಕೆ ಲೆತ್ತ ಪಗಡಿ ಚದುರಂಗ ಜೂಜು ಕಳವು ಕರ್ಕಶ ಪಗಡಿ ಪರಿಹಾಸಕ ಸರಸ ವಿನೋದ ಕುಚಿತ ಕುಟಿಲ ಕುಹಕ ಆಟಮಟ ಸಟೆ ಸಂಕಲ್ಪ ಉದಾಸೀನ ನಿರ್ದಯ ನಿರ್ದಾಕ್ಷಿಣ್ಯ ದಾಸಿ ವೇಶಿ ಪರಸ್ತ್ರೀ ಪರಧನ ಪರಾಪೇಕ್ಷೆ ಪರದೈವ ಭವಿಸಂಗ ಇಷ್ಟ ಭೃನ್ನಕ್ಷ ಅವನು ನಾಯಡಗು ನರಮಾಂಸ ಕ್ರಿಮಿಕೀಟನು ಸುರಾ ಪಾನ ಸೇವಕನಪ್ಪನಲ್ಲದೆ ಭಕ್ತನಲ್ಲ, ಜಂಗಮವಲ್ಲ. ಅದೆಂತೆಂದೊಡೆ ಅಕ್ಷದೂತ ವಿನೋದಶ್ಚ ನೃತ್ಯ ಗೀತ ಸಮ್ಮೋಹನಂ। ಅಷ್ಟಶಬ್ದ ಪ್ರಯೋ ಗಸ್ಯ ಜ್ಞಾನಹೀನಸ್ಯಕಾರಣಂ। ತಸ್ಕರಂ ಪರದಾರಂಚ ಅನ್ಯದೈವಮುಪಾ ಸಕಂ। ಅನೃತಂನಿಂದಕಶ್ಚೈವ ತಸ್ಯಚಾಂಡಾಲವಂಶ। ಎಂದುದಾಗಿ ಇಷ್ಟಭೃನ್ನಕ್ಷ ಆವ ಭಕ್ತನಲ್ಲ, ಜಂಗಮವಲ್ಲ. ಅವರಿಬ್ಬರ ಮೇಳಾಪದ ಪರಿ ಎಂತೆಂದಡೆ, ಈ ಹಂದಿಯು ಹೇಲ ತಿಂದು ಒಂದರ ಮೋರೆಯ ನೊಂದು ಮೂಸಿದಂತಾಯಿತ್ತೆಂದ ಕಲಿದೇವರದೇವಯ್ಯಾ.

೭೧. ನಾವು ಸಿದ್ಧವೀರ ಮಾಹೇಶ್ವರರೆಂದು ಹೇಳುವ ಅಣ್ಣಗಳಿರಾ, ನಿಮ್ಮ ವೀರಮಾಹೇಶ್ವರತ್ವದ ಕುರುಹ ಹೇಳಿರಣ್ಣಾ. ಅರಿಯದಿರ್ದರೆ ಕೇಳಿರಣ್ಣಾ. ಪಂಚಮಹಾಪಾತಕಂಗಳ ಬೆರಸದೆ ಪೂರ್ವವಳಿದು ಪುನ ರ್ಜಾತರಾದ ಸದ್ಭಕ್ತರೆಲ್ಲ ಪಂಚ ಸೂತಕಂಗಳ ಕಲ್ಪಿಸದೆ ಪಂಚಾಚಾ ರಂಗಳ ಭೇದಿಸಿ ಅನಾಚಾರಂಗಳ ಸಂಹರಿಸಿ ತನ್ನ ನಿಜ ಚಿತ್ಕಳೆಗಳ ತೋರಿಸಿ ಅವರ ಗೃಹವ ಹೊಕ್ಕು ಪಾದೋದಕ ಪ್ರಸಾದವ ಕೊಟ್ಟು ಕೊಳಬಲ್ಲಾತನೇ ಸಿದ್ಧವೀರಮಾಹೇಶ್ವರ ನೋಡಾ ಕಲಿದೇವರದೇವಾ.

೭೨. ನಾವು ಮೀರಿದ ಸ್ಥಲದ ವಿರಕ್ತರೆಂದು ಹೇಳುವ ಅಣ್ಣಗ ಳಿರಾ, ಎಂತಾದಿರಿ ಹೇಳಿರಿ, ಅರಿಯದಿರ್ದಡೆ ಕೇಳಿರಿ. ಮೀರಿ ನಿಂದ

ವಿರಕ್ತನ ವಿಚಾರದ ಭೇದವ. ಅನಾದಿ ಚಿದ್ಬಿಂದುವ ಅಧೋದ್ವಾರದಲ್ಲಿ ಬೀಳುಗೊಡದೆ ಸದ್ಗುರು ಕರುಣ ಕಟಾಕ್ಷೆಯಿಂದ ಮಹಾ ಮಂತ್ರವ ಪಡೆದು ಆ ಚಿನ್ಮಂತ್ರದ ಬಲದಿಂದ ಊರ್ಧ್ವಕ್ಕೆ ಮುಖವ ಮಾಡಿ ಮೇಲು ಗಿರಿ ಸಿಂಹಾಸನದಲ್ಲಿ ಮೂರ್ತಗೊಂಡಿರುವ ಪರಶಿವ ಲಿಂಗದ ಮಹಾ ಬೆಳಗಿನೊಳಗೆ ಏಕಾರ್ಥವ ಮಾಡಬೇಕು. ಜಿಹ್ವೆಯ ತುದಿಯಲ್ಲಿ ಅಜ್ಞಾನದ ಹುಸಿ ಕುಶಬ್ದ ಕುರುಚಿಯ ನೀಗಬೇಕು. ಸದ್ಗುರು ಮುಖದಿಂದ ನಿಜ ನುಡಿ ಘನ ಪಾದೋದಕ ಪ್ರಸಾದ ಮಂತ್ರವ ಪಡೆದು ಸದ್ಧರ್ಮ ರೂಪದಿಂದಿರಬೇಕು. ಸರ್ವಾಚಾರ ಸಂಯುಕ್ತವಾದ ಭಕ್ತನೇ ನಿಜ ಮುಕ್ತಿ ಮಂದಿರವೆಂದು ಭಾವ ಮನ ಕಾಯ ತುಂಬಿ ಪರಿಪೂರ್ಣ ತೃಪ್ತನಾದಾತನೇ ಮೀರಿದ ಸ್ಥಲದ ವಿರಕ್ತ ನೋಡಾ ಕಲಿದೇವರದೇವಾ.

---

# ಐಕ್ಯ ಸ್ಥಲ

ಸಾಮರಸ್ಯವನ್ನು ಹೊಂದುವವನು ಜಂಗಮಸ್ಥಲವನ್ನು ದಾಟಿ ಈ ಸ್ಥಲವನ್ನು ಹೊಂದಬೇಕು. ಹಿಂದಿನ ಸ್ಥಲಗಳಲ್ಲಿ ಅವನ ಶಕ್ತಿಗಳು ಗುಣಗಳು ಶರೀರಗಳು ಅತ್ಯಂತವಾಗಿ ವಿಕಾಸತೆಯನ್ನು ಹೊಂದುತ್ತವೆ. ಅವುಗಳಲ್ಲಿ ಪರಸ್ಪರತೆಯುಂಟಾಗುತ್ತದೆ. ಈ ಪರಸ್ಪರತೆಯಿಂದ ಅವುಗಳು ತಮ್ಮ ತಮ್ಮೊಳಗೆ ಬೆರೆದು ಹೋಗುವ ಸ್ಥಿತಿಯು ಪ್ರಾಪ್ತವಾಗುತ್ತವೆ. ಈ ಬೆರೆಯುವಿಕೆಯೇ ಐಕ್ಯಸ್ಥಲವೆನಿಸಿಕೊಳ್ಳುತ್ತದೆ.

---

**ವಿವರಣೆ**:— ಇಲ್ಲಿ ನಿಜದಲ್ಲಿ ಬೆರೆಯುವದನ್ನು ವಚನಕಾರನು ಉಲ್ಲೇಖಿಸಿದ್ದಾನೆ. ಇದು ಕ್ರಿಯಾರಹಿತವಾದ ಸ್ಥಿತಿಯು.

### ವಚನ.

೭೩. ಎನ್ನಾಯತ ಅವಧಾನ ಕೆಟ್ಟಿತ್ತಯ್ಯಾ. ಎನ್ನ ಸ್ವಾಯತ ಸಂಪಳಿಯಿತ್ತಯ್ಯಾ. ಎನ್ನ ಸಮಾಧಾನ ತರಹರವಾಯಿತ್ತಯ್ಯಾ. ಎನ್ನರಿವು ನಿಜದಲ್ಲಿ ನಿಃಷ್ಪತ್ತಿಯಾಯಿತ್ತಯ್ಯಾ. ಕಲಿದೇವರದೇವಯ್ಯ, ನಿಮ್ಮಲ್ಲಿ ಶಬ್ದಮುಗ್ಧನಾಗಿರ್ದೆನು.

---

**ವಿವರಣೆ**:— ಪರಮಾತ್ಮನಲ್ಲಿ ಬೆರೆಯುವ ಕ್ರಿಯೆಯು ತನ್ನಿಂದ ಹೊರಗಿನದಾದುದಲ್ಲ. ಕ್ರಿಯೆಯು ನಾದಬಿಂದು ಕಳೆಗಳುಳ್ಳುದಾಗಿರುತ್ತದೆ. ಈ ಐಕ್ಯ ಸ್ಥಿತಿಯಲ್ಲಿ ರೂಪುಳ್ಳುದಾದ ಬಿಂದುವು ನಷ್ಟವಾಗುತ್ತದೆ. ಸೂಕ್ಷ್ಮತರವಾದ ನಾದವು ನಿರವಯ ಸ್ಥಿತಿಯನ್ನು ಹೊಂದುತ್ತದೆ. ಪ್ರಕಾಶ ರೂಪಾದ ಕಳೆಯು ಹೆಚ್ಚಿನ ತರಗತಿಯನ್ನು ಮುಟ್ಟುತ್ತದೆ. ಹೀಗೆ ಕಾಯ ಮಾಯೆಗಳು ನಷ್ಟವಾಗಿ ಮನುಷ್ಯನು ಶೂನ್ಯ ಸ್ಥಿತಿಯನ್ನು ಹೊಂದುತ್ತಾನೆ.

### ವಚನ.

೭೪. ಬಿಂದುವ ಹರಿದು ನಾದವನತಿಗಳೆದು ಕಳೆಯ ಬೆಳಗಸಾಧಿಸಿ ಅಸಾಧ್ಯ ಸಾಧಕನಾದೆಯಲ್ಲ. ಕಾಯುವ ಹೊದ್ದದೆ ಮಾಯುವ

ಸೋಂಕದೆ ನಿರಾಳದಲ್ಲಿ ನಿಂದೆಯಲ್ಲ. ನೀನೆನ್ನನವಗ್ರಹಿಸಿ ಸಂದು ಭೇದವಿಲ್ಲದಪ್ಪಲ್ಲಿ ಹೊಗಳಲಿಂಬುಂಟೇ? ಕಲಿದೇವರದೇವನು ಕಾಯ ಗೊಂಡಿಪ್ಪುದ ನಿಮ್ಮಿಂದ ಕಂಡೆನು ಕಾಣಾ ಸಂಗನಬಸವಣ್ಣಾ.

---

**ವಿವರಣೆ:—** ಹಿಂದಿನ ವಚನದಲ್ಲಿಯು ಭಾವವೇ ಇಲ್ಲಿ ಹೆಚ್ಚಿಗೆ ಸ್ಪಷ್ಟರೀತಿಯಿಂದ ಹೇಳಿದೆ. ಅದು ಬಸವನನ್ನುದ್ದೇಶಿಸಿ ಹೇಳಿದ್ದಾದರೂ ಅದು ಎಲ್ಲರಿಗೂ ಅನ್ವಯಿಸುತ್ತದೆ. ಬಸವನು ಹೇಗೆ ನಿರಾಲಂಬ, ನಿರಾಕಾರನಾಗಿ ಅಗೋಚರವಾದನೆಂದು ಇಲ್ಲಿ ಹೇಳಲ್ಪಟ್ಟಿದೆ. ಇದೇ ಮನುಷ್ಯನ ಅಂತಿಮ ಸ್ಥಿತಿಯು.

## ವಚನ.

೭೫. ಬಿಂದುವ ಹರಿದೆಯಲ್ಲಾ ಬಸವಣ್ಣ. ನಾದದ ಸಿಂಹಾಸನವ ಮಾಡಿಕೊಂಡೆಯಲ್ಲಾ ಬಸವಣ್ಣ. ಅಷ್ಟಗುಣಂಗಳ ನಷ್ಟವ ಮಾಡಿದೆಯಲ್ಲಾ ನಿಜಲಿಂಗ ಬಸವಯ್ಯ. ಭಕ್ತಿ ರೂಪುಗೆಟ್ಟು ಮತ್ತೊಂದು ರೂಪಾದೆಯಲ್ಲಾ ವಿರೂಪ ಬಸವಣ್ಣಯ್ಯ. ಶುಕ್ಲ ಶೋಣಿತದಿಂದಾದ ಈ ಕಾಯವೆತ್ತ ಹೋಯಿತ್ತು ಘನಲಿಂಗ ಬಸವಯ್ಯ? ಮೂರ್ತನಲ್ಲದ ಲಿಂಗವ ತೋರಿದೆಯಲ್ಲಾ ಬಸವಣ್ಣ. ಅಯೋನಿಜವಲ್ಲದ ಭಕ್ತಿಯ ಹರಹಿದೆಯಲ್ಲಾ ಬಸವಣ್ಣ ತಂದೆ. ಬೆಳಗನುಟ್ಟು ಬಯಲಾದನು ನಮ್ಮ ಬಸವಣ್ಣನು. ನಿರಾಕಾರವಾದನು ನಮ್ಮ ಬಸವರಾಜನು. ನಿರವಯವಾದನು ನಮ್ಮ ಬಸವದೇವನು. ನಿರಾಲಂಬವಾದನು ನಮ್ಮ ಬಸವಯ್ಯ. ಇದು ಕಾರಣ ನಾನು ಬಸವಣ್ಣ ಬಸವಣ್ಣ ಬಸವಣ್ಣ ಎಂದೆನೆಲವ್ಮನು. ಎನ್ನ ವಾಙ್ಮನಕ್ಕೆ ಅಗೋಚರವಾದನಾಗಿ ಆ ಬಸವಣ್ಣನ ಹಿಂದುಗೊಂಡು ಹರಪಥವನೇ ತೋರಿ ಕಂಡಾ ಕಲಿದೇವರದೇವಾ.

---

**ವಿವರಣೆ:—** ಮಡಿವಾಳ ಮಾಚಿದೇವನು ಬಸವಣ್ಣನ ಕೇವಲ ಭಕ್ತನು. ಅವನು ತನ್ನ ಇಂದ್ರಿಯಗಳೂ, ಪ್ರಾಣಗಳೂ, ವಾಯುಗಳೂ ಹೇಗೆ ಸಾಮರಸ್ಯವನ್ನು ಹೊಂದಿದವೆಂಬುದನ್ನು ಇಲ್ಲಿ ಹೇಳಿದ್ದಾನೆ. ಇವೆಲ್ಲವೂ ಮಹಾಭಕ್ತನಾದ ಬಸವಣ್ಣನ ಅನುಗ್ರಹದಿಂದಲೇ ಆದವೆಂದು ಹೇಳಿ ಅವನ ಬಗ್ಗೆ ತನ್ನಲ್ಲಿದ್ದ ಭಕ್ತಿ ಭಾವವನ್ನು ಇಲ್ಲಿ ಪ್ರಕಟಪಡಿಸಿದ್ದಾನೆ.

## ವಚನ.

೭೬. ಪೃಥ್ವಿಯ ಚಿತ್ತದ ಪಂಚ ಕರ್ಮೇಂದ್ರಿಯಂಗಳೈದು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ಅಪ್ಪುವಿನ ಬುದ್ಧಿಯ ಪದಾರ್ಥಂಗಳೈದು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ಅಗ್ನಿಯ ಅಹಂಕಾರ ಪಂಚೇಂದ್ರಿಯಂಗಳೈದು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ವಾಯುವಿನ ಮನದ ಪಂಚ ಪ್ರಾಣವಾಯುಗಳೈದು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ಆಕಾಶದ ಸುಜ್ಞಾನಂಗಳೈದು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ಆತ್ಮನ ಪರಮಾತ್ಮನ ಹಸ್ತಂಗಳೈದು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ಇಂತಿವೆಲ್ಲವು ಲಿಂಗೈಕ್ಯವಾದವು ಬಸವಣ್ಣ ನಿಮ್ಮಿಂದ. ಕಲಿದೇವಾ ನಿಮ್ಮ ಶರಣ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.

---

**ವಿವರಣೆ:**— ವಚನಕಾರನು ಬಸವಣ್ಣನ ಐಕ್ಯದ ರೀತಿಯನ್ನು ಬೆಡಗಿನ ಭಾಷೆಯಲ್ಲಿ ಇಲ್ಲಿ ಚಿತ್ರಿಸಿದ್ದಾನೆ.

## ವಚನ.

೭೭. ಉಟ್ಟ ಸೀರೆಯು ಹರಿದು ಹೋದಾತ ನೀನಲ್ಲ ಬಸವಣ್ಣಾ. ಮೆಟ್ಟಿದ ಕೆರಹ ಕಳೆದು ಹೋದಾತ ನೀನಲ್ಲ ಬಸವಣ್ಣಾ. ಕಟ್ಟಿದ ಮುಡಿಯು ಬಿಟ್ಟು ಹೋದಾತ ನೀನಲ್ಲ ಬಸವಣ್ಣ. ಸೀಮೆ ಸಂಬಂಧವ ತಪ್ಪಿ ಹೋದಾತ ನೀನಲ್ಲ ಬಸವಣ್ಣ. ಲಿಂಗಕ್ಕೆ ಮಾಡಿದುದ ಸೋಂಕದೆ ಹೋದೆಯಲ್ಲ ಬಸವಣ್ಣ. ಜಂಗಮಕ್ಕೆ ಮಾಡಿದ ಮಾಟವ ಕೈಯ್ಯಲ್ಲಿ ಹಿಡಿದುಕೊಂಡು ಹೋದೆಯಲ್ಲ ಬಸವಣ್ಣಾ. ಬೆಳಗನುಟ್ಟು ಬಯಲಾಗಿ ಹೋದೆಯಲ್ಲ ಬಸವಣ್ಣ. ಬಸವಣ್ಣಂಗೆ ಶರಣೆಂಬೆ. ಪಥವನೇ ತೋರು ಕಂಡಾ ಕಲಿದೇವರದೇವಾ.

---

**ವಿವರಣೆ:**— ಐಕ್ಯದ ಸ್ವರೂಪು ಇಲ್ಲಿ ಹೇಳಲ್ಪಟ್ಟಿದೆ. ಶೂನ್ಯಸ್ಥಿತಿಯ ವಿವರಣೆಯು ಇಲ್ಲಿ ಬಂದಿರುತ್ತದೆ.

### ವಚನ.

೭೮. ನಿನ್ನಾಕಾರ ನಿರಾಕಾರವಾಯಿತ್ತಲ್ಲ ಬಸವಣ್ಣ. ನಿನ್ನ ಪ್ರಾಣ ನಿಃಪ್ರಾಣವಾಯಿತ್ತಲ್ಲ ಬಸವಣ್ಣ. ಲಿಂಗ ಜಂಗಮದ ಮಾಟ ಸಮರ್ಪಿತವಾಯಿತ್ತಲ್ಲ ಬಸವಣ್ಣ. ನಿಶ್ಶಬ್ದವೇದಿಯಾದೆಯಲ್ಲ ಬಸವಣ್ಣ. ಕಲಿದೇವರ ದೇವನ ಹೃದಯ ಕಮಲವ ಹೊಕ್ಕು ದೇವರಿಗೆ ದೇವನಾಗಿ ಹೋದೆಯಲ್ಲ ಸಂಗನ ಬಸವಣ್ಣ.

---

**ವಿವರಣೆ:**— ಸಾಮರಸ್ಯ ಸ್ಥಿತಿಯು ಇಲ್ಲಿ ಹೇಳಲ್ಪಟ್ಟಿದೆ. ಇದು ಕಟ್ಟ ಕಡೆಯ ಬಯಲು.

### ವಚನ.

೭೯. ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನ ನಷ್ಟ. ಇಂತೀ ಪಂಚ ನಷ್ಟದೊಳಗೆ ನಾ ನಷ್ಟವಾದೆನು. ಆ ನಷ್ಟದೊಳಗೆ ನೀ ನಷ್ಟವಾದೆ. ಕಲಿದೇವರದೇವಾ ಎಂಬ ನುಡಿ ನಿಃಶಬ್ದ ಬ್ರಹ್ಮ ಮುಚ್ಯತೆ ಎನುತ್ತಿದ್ದಿತ್ತು.

---

**ವಿವರಣೆ:**— ಇಲ್ಲಿ ಭಕ್ತನು ಬಯಲಲ್ಲಿ ಬೆರಸಿ ಬೇರಾಗದಿಪ್ಪುದನು ವಚನಕಾರನು ನಿರೂಪಿಸಿದ್ದಾನೆ. ಇದೇ ಸಾಮರಸ್ಯವು.

### ವಚನ.

೮೦. ತನುವಳಿಯಿತ್ತು; ಮನವಳಿಯಿತ್ತು; ಭಾವವಳಿಯಿತ್ತು: ಎನ್ನ ಬಯಕೆಯುಳಿಯಿತ್ತು; ನಿಜವೆಂಬುದುಳಿಯಿತ್ತು. ನಾವು ನೀವು ಬಯಲಲ್ಲಿ ಬೆರಸಿ ಕಲಿದೇವರ ದೇವನಲ್ಲಿ ಬೇರಿಲ್ಲದಿರ್ದೆನು.

# ಅಷ್ಟಾವರಣಗಳು.

ಈ ವರೆಗೆ ಷಟ್ ಸ್ಥಲಗಳು ವಿವೇಚಿಸಲ್ಪಟ್ಟವು. ಇವು ಮನುಷ್ಯನ ಪ್ರಗತಿಯು ಆವ ಆವ ಮೆಟ್ಟಲುಗಳಿಂದ ಮುಂದುವರಿಯುತ್ತ ಹೋಗುತ್ತ ವೆಂಬದನ್ನು ತೋರಿಸುತ್ತವೆ. ಈ ಪ್ರಗತಿಯು ಮನುಷ್ಯನ ಆಚರಣೆಗ ಳಿಂದಲೇ ಮುಂದುವರಿಯುತ್ತದೆ. ಅಷ್ಟಾವರಣಗಳೇ ಈ ಆಚರಣೆಗಳು. ಇವುಗಳ ಮೂಲಕ ಮನುಷ್ಯನು ದುಷ್ಪ್ರವರ್ತನೆಗಳನ್ನು ದೂರ ಮಾಡಿ ಕೊಂಡು ಮುಂದುವರಿಯುವನು.

ಈ ಅಷ್ಟಾವರಣಗಳಲ್ಲಿ ಮೊದಲಿನ ಇನೆಯವಾದ ಗುರುಲಿಂಗ ಜಂಗಮಗಳು ಅನುಕ್ರಮವಾಗಿ ಮನುಷ್ಯನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ ಲಿಂಗ ಶಕ್ತಿಯನ್ನು ನೆಲೆಗೊಳಿಸುತ್ತವೆ. ಇವು ಈ ಶರೀ ರಗಳಲ್ಲಿ ಪರಿಣಾಮವನ್ನುಂಟುಮಾಡಿ ಅವನ ಷಟ್‌ಸ್ಥಲಾಚರಣೆಗೆ ಸಹಾ ಯಕವಾಗುತ್ತವೆ. ಈ ಗುರುಲಿಂಗ ಜಂಗಮದ ಕ್ರಿಯೆಗಳಿಗೆ ಉಳಿದ ಐದು ಆವರಣಗಳು ಸಹಾಯವಾಗುತ್ತವೆ. ವೀರಶೈವರಲ್ಲಿ ಈ ಅಷ್ಟಾ ವರಣಗಳ ಹೊರ್ತು ಬೇರೆ ಆಚರಣೆಗಳಿಲ್ಲ. ವೈದಿಕ ಮಾರ್ಗದಲ್ಲಿರುವ ಅನೇಕ ಆಚರಣೆಗಳ ಫಲಗಳು ಈ ಅಷ್ಟಾವರಣಾಚರಣೆಯ ಮೂಲ ಕವೇ ದೊರೆಕೊಳ್ಳುವವು. ಹೀಗೆ ತಿಳಿಯಲ್ಪಡುವದರಿಂದ ಇವುಗಳ ಮಹತ್ವವು ವೀರಶೈವರಲ್ಲಿ ವಿಶೇಷವಾಗಿರುತ್ತದೆ. ಇವುಗಳಮರ್ಮವನ್ನು ವೀರಶೈವರು ಅರಿಯಲೇಬೇಕು.

---

## ೧ ಗುರು.

ಗುರುವು ಬಾಹ್ಯ ಕ್ರಿಯೆಗಳಿಗೆ ಸಂಬಂಧಿಸಿಕೊಂಡು ಪರಿಣಾಮ ಮಾಡುತ್ತಾನೆ. ಅವನ ಮೂಲಕವೇ ಕ್ರಿಯೆಗಳು ಶುದ್ಧವಾಗುತ್ತವೆ. ಭಕ್ತನು ಅವನ ಉಪದೇಶವಂತೆ ವರ್ತಿಸತಕ್ಕದ್ದು. ಹೀಗೆ ವರ್ತಿಸಿದಲ್ಲಿ ಅವನ ಸ್ಥೂಲ ಶರೀರದಲ್ಲಿ ಲಿಂಗದ ಗುಣಗಳು ತಲೆದೋರುತ್ತವೆ ಈ ಲಿಂಗಕ್ಕೆ ಇಷ್ಟ ಲಿಂಗವೆಂಬ ಹೆಸರು. ಇದಕ್ಕೆ ಕ್ರಿಯಾ ಲಿಂಗವೆಂತಲೂ ಬೇರೊಂದು ಹೆಸರು ಇವೆ.

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

# "ಶರಣ ಸಾಹಿತ್ಯ"

[ಮಾಸಪತ್ರಿಕೆ]

---

**ಸಂಪಾದಕ:— ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿ,**

ಹುಲಕುಂಟೆಮಠ ತುಮಕೂರು

**ಮಹಾಜನರಲ್ಲಿ ವಿಜ್ಞಾಪನೆಗಳು—**

ಹಿಂದೂಧರ್ಮ, ಕನ್ನಡ ಸಾಹಿತ್ಯ, ಲಿಂಗವಂತ ಸಂಸ್ಕೃತಿಗಳ ಉನ್ನತಿಗಾಗಿ ಪ್ರಯತ್ನಿಸುವದೇ ಈ ಪತ್ರಿಕೆಯ ಮುಖ್ಯೋದ್ದೇಶ. ಪ್ರಾಚೀನ ಕನ್ನಡ, ಹಾಗೂ ಸಂಸ್ಕೃತ ಗ್ರಂಥಗಳ ಪ್ರಕಟನೆಯನ್ನೂ, "ಶರಣಸಾಹಿತ್ಯ ಗ್ರಂಥಮಾಲಾ" ಎಂಬ ಹೆಸರಿನಿಂದ ನಡೆಸಲಾಗುತ್ತದೆ. ಇಂತಹ ಉದಾತ್ತ ಧ್ಯೇಯದಿಂದ ಹೊರಟ ಪತ್ರಿಕೆಯನ್ನು ಸಂರಕ್ಷಿಸುವ ಭಾರ ನಮ್ಮ ನಾಡಿನ ಹಾಗೂ ಸಮಾಜದ ಅಭಿಮಾನಶಾಲಿಗಳನ್ನವಲಂಬಿಸಿದೆ.

**ಪೋಷಕರು**—ಒಟ್ಟಾಗಿ ೧೦೦ ರೂ. ಕೊಟ್ಟವರು. ಇವರಿಗೆ ಶರಣ ಸಾಹಿತ್ಯ ಮಾಸಿಕವನ್ನೂ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಕೃತಜ್ಞತೆಯಿಂದ ಅರ್ಪಿಸಲಾಗುತ್ತದೆ.

**ಸಹಾಯಕರು**— ಒಟ್ಟಾಗಿ ೫೦ ರೂ. ಕೊಟ್ಟವರು. ಇವರಿಗೆ ಮಾಸಿಕವು ಸದಾ ಉಚಿತವಾಗಿ ಸಮರ್ಪಿಸಲ್ಪಡುತ್ತದೆ.

**ಉಪಕಾರಿಗಳು**— ವರ್ಷಕ್ಕೆ ೧೦ ರೂ. ಕೊಡತಕ್ಕವರು.

**ಹಿತಚಿಂತಕರು**— ವರ್ಷಕ್ಕೆ ೫ ರೂ. ಕೊಡತಕ್ಕವರು.

**ಚಂದಾದಾರರು**— ವರ್ಷಕ್ಕೆ ೩-೮-೦ ಕೊಡತಕ್ಕವರು, ಶರಣ ಸಾಹಿತ್ಯ ಗ್ರಂಥಮಾಲೆಯ ಎಲ್ಲ ಗ್ರಂಥಗಳನ್ನೂ ಸಹಾಯಕ ಮತ್ತು ಉಪಕಾರಿಗಳಿಗೆ ಅರ್ಧ ಬೆಲೆಗೂ ಹಿತಚಿಂತಕರ ಹಾಗೂ ಚಂದಾದಾರರಿಗೆ ಮುಕ್ಕಾಲು ಬೆಲೆಗೂ ಕೊಡಲಾಗುತ್ತದೆ.

ದೇಶ, ಧರ್ಮ, ಭಾಷೆ, ಸಮಾಜ, ಇವುಗಳ ಉನ್ನತಿಯನ್ನು ಬಯಸುವವರೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹಕೊಡಬೇಕೆಂದು ವಿನಂತಿ.

**ಶಿವಂಭೂಯಾತ್**

ಇಂತು
ಕನ್ನಡಿಗರ ಕಿಂಕರ.
**ಬಿ. ಶಿವಮೂರ್ತಿ ಶಾಸ್ತ್ರಿ,**

ಶರಣಸಾಹಿತ್ಯ ಕಾರ್ಯಾಲಯ
ಬೆಂಗಳೂರು ಸಿಟಿ

R. N. B. 2554

ಶ್ರೀ




೧

ಸಂಪುಟ ೧೩ ]  ಫೆಬ್ರುವರಿ ೧೯೩೯.  [ ಸಂಚಿಕೆ ೫

## ವಿಷಯಾನುಕ್ರಮಣಿಕೆ.

ಶಿವಾನುಭವ.

ವರ್ಷ ೧೩]　　ಫೇಬ್ರುವರಿ ೧೯೩೯　　[ಸಂಚಿಕೆ ೫

# ಬಸವಣ್ಣನಕಿಂತ ಪೂರ್ವದ ಕಾಲ.

## ೦ ರೇವಣಸಿದ್ಧೇಶ್ವರ

(ರಾ. ಸಾ. ಪಿ. ಜಿ. ಹಳಕಟ್ಟಿ ಬಿ. ಏ. ಎಲ್ ಎಲ್. ಬಿ. ವಿಜಾಪುರ.)

ನಾನು ಶಿವಾನುಭವ ಪತ್ರಿಕೆಯು ಹಿಂದಿನ ೩ನೇ ಸಂಚಿಕೆಯಲ್ಲಿ " ಪೆರ್ಮಾಡಿರಾಯ " ಈ ಶಿರೋಲೇಖದ ಕೆಳಗೆ ಈ ರಾಯನ ಕಾಲದಲ್ಲಿ ಶಿವಶರಣರು ಉದ್ಭವಿಸಿದ್ದನ್ನು ವಿವರಿಸಿದ್ದೇನೆ. ಈ ಪೆರ್ಮಾಡಿ ರಾಯನು ಚಾಲುಕ್ಯರ ೩ನೇ ಸೋಮೇಶ್ವರನಿಗೆ ಮಾಂಡಲಿಕನಾಗಿ ತರ್ದೇವಾಡಿ ನಾಡಿನಲ್ಲಿ ರಾಜ್ಯವಾಳುತ್ತಿದ್ದನೆಂದು ಶಿಲಾಶಾಸನಗಳಿಂದ ತಿಳಿಯುತ್ತಿದೆ. ಈ ತರ್ದೇವಾಡಿ ನಾಡಿನಲ್ಲಿ ಈಗಿನ ವಿಜಾಪುರ ಜಿಲ್ಲೆಯ ಮಧ್ಯ ಮತ್ತು ಉತ್ತರ ಭಾಗಗಳೂ ಸೊಲ್ಲಾಪೂರ ಜಿಲ್ಲೆಯ ದಕ್ಷಿಣ ಭಾಗವೂ ಸೇರಿದ್ದವು. ಈ ಪೆರ್ಮಾಡಿರಾಯನ ಮಗನೇ ಬಹು ಪ್ರಸಿದ್ಧನಾದ ಬಿಜ್ಜಳನು.

ಈ ಪೆರ್ಮಾಡಿರಾಯನ ಕಾಲದಲ್ಲಿ ಕೊಂಡಗುಳಿಯ ಕೇಶಿರಾಜ, ತೆಲಗು ಜೊಮ್ಮಯ್ಯ, ಇಳಿಹಾಳಬೊಮ್ಮಯ್ಯ ಮೊದಲಾದ ಶಿವಶರಣರು ಪ್ರಸಿದ್ಧಿಗೆ ಬಂದರು. ಇದು ಹರಿಹರರಾಯನ ರಗಳೆಗಳಿಂದ ತಿಳಿದು ಬರುತ್ತದೆ. ಅಲ್ಲದೆ ಇತರ ಅನೇಕ ಗ್ರಂಥಗಳಲ್ಲಿ ಇರುವ ಶಿವಶರಣರ ಚರಿತ್ರೆಗಳಿಂದಲೂ ಈ ಸಂಗತಿಯು ಧೃಡಪಡುತ್ತದೆ.

ಯಾವದಾದರೊಂದು ಮಹತ್ತರವಾದ ಕ್ರಾಂತಿಯು ತತ್ಕಾಲದಲ್ಲಿ ಎಂದೂ ಸಂಭವಿಸುವದಿಲ್ಲ. ಅದು ರೂಪಕ್ಕೆ ಬರಲು ಕೆಲಕಾಲ ಹತ್ತು

ತ್ತದೆ. ಅದಕ್ಕೆ ಒಂದು ಪೂರ್ವೇತಿಹಾಸವಿರುತ್ತದೆ ಈ ಕಾಲದಲ್ಲಿ ಅನೇಕರು ಉದ್ಭವಿಸಿ ಮತಪ್ರಚಾರ ಕಾರ್ಯ ಮಾಡುವದುಂಟು. ಅದರ ಪರಿಣಾಮವಾಗುತ್ತ ಕೆಲ ಕಾಲದ ಮೇಲೆ ಮತ್ತೊಬ್ಬ ಮಹಾವ್ಯಕ್ತಿಯು ಉದ್ಭವಿಸಿ ಅವನು ತನ್ನ ಘಟನಾಶಕ್ತಿಯಿಂದ ಒಂದು ಅದ್ಭುತವಾದ ಕ್ರಾಂತಿಯನ್ನು ಸಮಾಜದಲ್ಲಿ ಎಸಗುವನು. ಅವನ ಹೆಸರೇ ಮುಂದೆ ಬಹುಕಾಲ ಉಳಿಯುತ್ತದೆ ಅವನು ಮಹಾತ್ಮಿಕನಾಗುತ್ತಾನೆ. ಆದರೆ ಅವನಕಿಂತಲೂ ಮೊದಲು ನಡೆದ ಪ್ರಯತ್ನಗಳನ್ನು ನಾವು ಮರೆಯು ಕೂಡದು. ಅವಾದರೂ ಬಹು ಉದ್ಬೋಧಕವಾಗಿರುತ್ತವೆ. ಇತಿಹಾಸಜ್ಞರು ಈ ಪೂರ್ವೇತಿಹಾಸವನ್ನು ಕಂಡುಹಿಡಿಯುವದು ಬಹು ಅವಶ್ಯವಾದುದು.

ಕರ್ನಾಟಕದ ಇತಿಹಾಸ ಮತ್ತು ಶಿವಶರಣರ ಚರಿತ್ರೆ ಇವುಗಳನ್ನು ನಾವು ಪರೀಕ್ಷಿಸಿದಲ್ಲಿ ವೀರಶೈವ ಧಾರ್ಮಿಕ ಚಳವಳಿಗಳು ಬಸವೇಶ್ವರನಕಿಂತಲೂ ಮೊದಲು ಕೆಲವು ಬಾರಿ ಜರಗಿದ್ದು ಕಂಡುಬರುತ್ತದೆ. ಮೊನಲನೇ ಚಳವಳಿಯು ದೇವರದಾಸಿಮಯ್ಯನ ಕಾಲದಲ್ಲಿ. ಆಗ ಕೆಂಭಾವಿಯ ಭೋಗಣ್ಣ,, ನವಿಲಿಯ ಶಂಕರದಾಸಿಮಯ್ಯ, ಗೊಲ್ಲಗಿರಿಯ ಗೊಲ್ಲಾಳೇಶ್ವರ, ಮುದನೂರಿನ ಏಕೋರಾಮಾರಾಧ್ಯ ಇವರೇ ಮೊದಲಾದವರು ಉದಯಿಸಿದರು. ಈ ಯಾವತ್ತರ ಚರಿತ್ರೆಗಳು ಈಗ ನಮಗೆ ಉಪಲಬ್ಧವಿರುತ್ತವೆ. ಇವರೆಲ್ಲರು ಪ್ರಸಿದ್ಧ ಕ್ಷೇತ್ರವಾದ ಮುದನೂರಲ್ಲಿಯೂ ಇದಕ್ಕೆ ಸಮೀಪವಾಗಿರುವ ಗ್ರಾಮಗಳಲ್ಲಿಯೂ ಜನಿಸಿದರು. ಆಗ ಈ ಭಾಗದಲ್ಲಿ ಒಂದು ದೊಡ್ಡ ಧಾರ್ಮಿಕ ಚಳವಳಿಯು ಉಂಟಾಯಿತು. ಇದು ೧೧ನೇ ಶತಮಾನದ ಪೂರ್ವಾರ್ಧದಲ್ಲಿ ಜಯಸಿಂಹನ ಆಳಿಕೆಯಲ್ಲಿ ಆರಂಭವಾಯಿತೆಂದು ನಾವು ಊಹಿಸಬಹುದಾಗಿದೆ.

ಜಯಸಿಂಹನ ತರುವಾಯ ೨ನೇ ಸೋಮೇಶ್ವರ ಮತ್ತು ವಿಕ್ರಮಾದಿತ್ಯ ಈ ರಾಜರು ಕಲ್ಯಾಣದಲ್ಲಿ ಆಳಹತ್ತಿದರು. ಈ ವರೆಗೆ ನಮಗೆ ದೊರೆತಿರುವ ಶಿವಶರಣರ ಚರಿತ್ರೆಗಳಲ್ಲಿ ಈ ಉಭಯ ರಾಜರ ಸ್ಪಷ್ಟ ಉಲ್ಲೇಖಗಳು ನಮಗೆ ಇನ್ನೂ ಕಂಡುಬಂದಿಲ್ಲ. ಇದು ಇನ್ನೂ ಸಂಶೋಧಿಸತಕ್ಕ ವಿಷಯವು. ಯಾಕೆಂದರೆ ಆಗ್ಗೆ ಅನೇಕ ಶೈವ ಪಂಗಡಗಳಿದ್ದದು ಶಿಲಾಶಾಸನಗಳಿಂದ ತಿಳಿಯುತ್ತಿದೆ. ಆದರೆ ವೀರಶೈವ ಜಾಗೃತಿಯು

ಕಾರ್ಯಗಳು ಆಗ ಅಷ್ಟು ತೀವ್ರತರವಾಗಿ ಮುಂದುವರಿಯಲಿಲ್ಲೆಂಬ ಅನುಮಾನವು ಉಂಟಾಗುತ್ತದೆ.

ಮುಂದೆ ವಿಕ್ರಮಾರ್ಕನ ತರುವಾಯ ವೀರಶೈವ ಧಾರ್ಮಿಕ ಚಳವಳಿಯು ಪುನಃ ಪ್ರಾರಂಭವಾಯಿತು.. ಇದು ಎರಡನೇ ಕ್ರಾಂತಿಯ ಕಾಲವಾಗಿರುತ್ತದೆ. ಈ ಸಮಯದಲ್ಲಿ ಅನೇಕ ಶಿವಶರಣರು ಉದ್ಭವಿಸಿದರು. ಇದಕ್ಕೆ ಅವರ ಚರಿತ್ರೆಗಳೇ ಸಾಕ್ಷಿಯಾಗಿವೆ. ಇವುಗಳನ್ನು ನಾನು ಇಲ್ಲಿ ವಿವರಿಸುತ್ತೇನೆ.

ಪುರಾತನ ಕಾಲದಲ್ಲಿ ಕರ್ನಾಟಕದಲ್ಲಿ ವೀರಶೈವರ ಕ್ರಾಂತಿಗಳುಂಟಾದ ಪ್ರದೇಶಗಳು ತದ್ದೇವಾಡಿ ನಾಡು, ಸೊನ್ನಲಿಗೆಯ ಪ್ರಾಂತ, ಮತ್ತು ಕಲಬುರ್ಗಿಯ ಪಶ್ಚಿಮ ಪ್ರದೇಶ, ಇವುಗಳೇ ಮುಖ್ಯವಾದವುಗಳು. ಇಲ್ಲಿಯೇ ಪುರಾತನ ಶಿವಶರಣರು ಉದಯಿಸಿದರು. ಆದ್ದರಿಂದ ಈ ಭಾಗಗಳ ಇತಿಹಾಸವನ್ನು ನಾವು ಸಂಶೋಧನೆ ಮಾಡುವದರಿಂದ ವೀರಶೈವ ಸಮಾಜೇತಿಹಾಸದ ಮೇಲೆ ಬಹು ಮಹತ್ವದ ಪ್ರಕಾಶವು ಬೀಳದಿರದು. ಕಾರಣ ಈ ಭಾಗಗಳಲ್ಲಿ ಯಾರು ಯಾರು ರಾಜರು ಅಥವಾ ಮಾಂಡಲಿಕರು ಆಗ ಆಳುತ್ತಿದ್ದರು, ವಿಶೇಷವಾಗಿ ಬಿಜ್ಜಳನು ಯಾವ ಯಾವ ರಾಜಕಾರಣಗಳನ್ನು ಈ ಕಾಲದಲ್ಲಿ ಕೈಕೊಂಡಿದ್ದನು, ಇವೇ ಮೊದಲಾದ ವಿಷಯಗಳನ್ನು ಕಂಡುಹಿಡಿಯುವದು ಬಹು ಮಹತ್ವದ್ದಾಗಿರುತ್ತದೆ.

ತದ್ದೇವಾಡಿಯಲ್ಲಿ ಪೆರ್ಮಾಡಿರಾಯನು ೧೧೨೮ ರಲ್ಲಿ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿಯುತ್ತದೆ (ಇಂಗಳೇಶ್ವರ ಶಾಸನ). ಮುಂದೆ ೧೧೩೮ ರಲ್ಲಿ ಬರ್ಮದೇವನು ಇಲ್ಲಿ ಆಳುತ್ತಿದ್ದುದು ಕಂಡುಬರುತ್ತದೆ. ಮತ್ತು ಇದೇ ಕಾಲಕ್ಕೆ ಬಿಜ್ಜಳನು ಬನವಾಸಿ ನಾಡನ್ನು ಚಾಲುಕ್ಯರ ಮಾಂಡಲಿಕನಾಗಿ ಆಳುತ್ತಿದ್ದನೆಂತಲೂ ಇಲ್ಲಿಯ ಅನೇಕ ಶಿಲಾಶಾಸನಗಳಲ್ಲಿ ಉಲ್ಲೇಖಗಳಿವೆ. ಬಿಜ್ಜಳನು ಮಾಂಡಲಿಕನಾಗಿ ಆಳುತ್ತಿದ್ದುದರಿಂದ ಅವನ ತಂದೆಯು ಇಷ್ಟರಲ್ಲಿಯೇ ಬಹುಶಃ ತೀರಿಕೊಂಡಿರಬೇಕು ಮತ್ತು ಅವನ ತರುವಾಯ ಬರ್ಮದೇವನು ತದ್ದೇವಾಡಿ ಪ್ರಾಂತಕ್ಕೆ ಅಧಿಪತಿಯಾಗಿ ನೇಮಿಸಲ್ಪಟ್ಟಿರಬೇಕು ಎಂಬ ಅನುಮಾನವು ಹೊರಡುತ್ತದೆ.

೧೧೩೮ ನೆಯ ತರುವಾಯ ಚಾಲುಕ್ಯ ಜಗದೇಕಮಲ್ಲನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದನು. ಇವನನ್ನು ಅಷ್ಟು ಬಲಿಷ್ಠನಾದ ಅರಸನಾಗಿದ್ದಿಲ್ಲ. ಆದುದರಿಂದ ಅವನ ಕಾಲದಲಿ ಮಾಂಡಲಿಕರ ಪ್ರಾಬಲ್ಯವೇ ಹೆಚ್ಚಿತು. ಇವರಲ್ಲಿ ಬಿಜ್ಜಳದೇವ ಮತ್ತು ಬರ್ಮದೇವ ಇವರು ಅಗ್ರಗಣ್ಯರಾಗಿದ್ದರು. ಇವರಿಬ್ಬರಿಗೂ ಒಂದು ಮಹತ್ತರವಾದ ಇತಿಹಾಸ ಇದೆ. ಬರ್ಮದೇವನು ರಾಜನಿರ್ಮಾಣಕ (*King maker*) ಎಂದು ಹೇಳಬಹುದು. ಆದರೆ ಬಿಜ್ಜಳದೇವನಿರುವವರೆಗೆ ಬಿಜ್ಜಳನೇ ಅವನಕಿಂತಲೂ ರಾಜ್ಯದಲಿ ಪ್ರಬಲನಾಗಿದ್ದನು. ಅವನೇ ರಾಜ್ಯದ ಮಹತ್ವದ ಪ್ರದೇಶಗಳಲ್ಲಿ ಮಾಂಡಲಿಕನಾಗಿ ರಾಜ್ಯವಾಳಿದನು.

ಮುಂದೆ ಬಿಜ್ಜಳನು ದಕ್ಷಿಣ ದೇಶವನ್ನು ಬಿಟ್ಟು ತಿದ್ದೇವಾಡಿ ಸೀಮೆಯಲ್ಲಿ ೧೧೫೧ ರಲ್ಲಿ ಮಹಾಮಂಡಲೇಶ್ವರನಾಗಿ ಆಳುತ್ತಿದ್ದುದು ಕಂಡುಬರುತ್ತದೆ. (ವಿಜಾಪುರ ಶಿಲಾಶಾಸನ). ಈ ಸಮಯದಲ್ಲಿ ಜಗದೇಕಮಲ್ಲನ ತರುವಾಯ ನೂರ್ಮಡಿ ತೈಲಪನು ಚಾಲುಕ್ಯರ ಸಿಂಹಾಸನದ ಮೇಲೆ ಇದ್ದುಕೊಂಡು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದನು. ಇವನು ಚಾಲುಕ್ಯರ ಕಡೆಯ ರಾಜನು. ಇವನಾದರೂ ಪ್ರಬಲರಾಜನಾಗಿರಲಿಲ್ಲ.

ಈ ಪ್ರಕಾರ ಪೆರ್ಮಾಡಿರಾಯ ಮತ್ತು ಬಿಜ್ಜಳ ಇವರ ಸ್ಥೂಲ ವೃತ್ತಾಂತಗಳಿವೆ. ಇವರಲ್ಲಿ ಪೆರ್ಮಾಡಿರಾಯನ ಕಾಲದಲ್ಲಿ ನಾವು ಹಿಂದೆ ಹೇಳಿದ ಮೇರೆಗೆ ಅನೇಕ ಶಿವಶರಣರಿಗೆ ಅವನ ಆಸ್ಥಾನದಲ್ಲಿ ಮನ್ನಣೆಯು ದೊರೆಯಿತು. ಅವನ ತರುವಾಯ ಈ ಭಾಗದಲ್ಲಿ ಆಳುತ್ತಿದ್ದ ಬರ್ಮದೇವನಾದರೂ ಶಿವೋಪಾಸಕನಾಗಿದ್ದನು. ಇವನ ಅನೇಕ ಶಿಲಾಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಉಪಲಬ್ಧವಿರುತ್ತವೆ. ಅವುಗಳಲ್ಲಿ ಇವನು ಶೈವಧರ್ಮವನ್ನು ಪರಿಪಾಲಿಸುತ್ತ ಬಂದನೆಂಬು ತಿಳಿದುಬರುತ್ತದೆ. (ಶಿವಾ. ೩-೧೧-೫೧; ೧೨-೬೭) ಆದ್ದರಿಂದ ಅವನಾದರೂ ಶಿವಶರಣರಿಗೆ ಅನುಕೂಲವಾಗಿ ವರ್ತಿಸುತ್ತ ಬಂದಿರಲಿಕ್ಕೆ ಬೇಕು. ಮುಂದೆ ಅವನ ತರುವಾಯ ಬಿಜ್ಜಳನು ಈ ಭಾಗದಲ್ಲಿ ಮಾಂಡಲಿಕನಾಗಿ ಆಳ ಹತ್ತಿದನು. ಅವನಾದರೂ ಶೈವರಿಗೆ ವಿರೋಧಿಯಾಗಿರಲಿಲ್ಲ. ಅವನ ಅನೇಕ ಶಿಲಾಶಾಸನಗಳು ಮುದನೂರು ಬಳ್ಳಿಗಾವಿ ಪ್ರದೇಶಗಳಲ್ಲಿಯೂ ವಿಜಾಪುರ ಜಿಲ್ಲೆಯಲ್ಲಿ ಬಹು ಕಡೆಗೂ ಉಪಲಬ್ಧವಿರುತ್ತವೆ. ಅವುಗ

ಳಿಂದ ಅವನು ಅನೇಕ ಶಿವಾಲಯಗಳಿಗೆ ದಾನ ಕೊಟ್ಟಂತೆ ತಿಳಿದು ಬರುತ್ತದೆ. ಅವನ ತಂದೆಯು ಶಿವಶರಣರಿಗೆ ಉತ್ತೇಜನ ಕೊಟ್ಟಿದ್ದನು. ಅದ್ದರಿಂದ ಅವನ ಮಗನಾದ ಇವನಾದರೂ ಅವನಂತೆಯೇ ಅವರಿಗೆ ಉತ್ತೇಜನ ಕೊಟ್ಟಿರಬಹುದೆಂದು ನನಗೆ ತೋರುತ್ತದೆ. ಈ ಪ್ರಕಾರ ೧೧೨೬ ರಿಂದ ೧೧೫೧ ರ ವರೆಗೆ ವೀರಶೈವರಿಗೆ ಅನುಕೂಲ ಪರಿಸ್ಥಿತಿಯು ಇತ್ತು. ಆದರೆ ಇದು ಅವರ ಚಳವಳಿಯ ಪರಿಣಾಮವೆಂತಲೇ ಹೇಳಬೇಕು ಆಗ ಅನೇಕ ಶಿವಶರಣರು ಉದ್ಭವಿಸಿದರು. ಮತ್ತು ಅವರ ಧಾರ್ಮಿಕ ತೇಜಸ್ಸೂ ಮಹತ್ವವೂ ಆಗಿನ ರಾಜರ ಮೇಲೆ ಪರಿಣಾಮ ಮಾಡಿದವೆಂದು ತೋರುತ್ತದೆ.

ಮುಂದೆ ೧೧೫೧ರಿಂದ ೧೧೫೫ರವರೆಗೆ ಬಿಜ್ಜಳನು ಚಾಲುಕ್ಯ ರಾಜನಿಗೆ ಅಂಕಿತನಾಗಿ ತರ್ದವಾಡಿ ಪ್ರಾಂತಾಧಿಪತಿಯಾಗಿ ಆಳಿದನು ಅವನು ಆಗಲೂ ಮಾಂಡಲಿಕನಾಗಿಯೇ ಇದ್ದದ್ದು ಶಿಲಾಶಾಸನಗಳಿಂದ ತಿಳಿಯುತ್ತದೆ. ಆದರೆ ೧೧೫೫ ರಲ್ಲಿ ಅವನು ಇಡೀ ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿ ತನ್ನ ಅಧಿಕಾರವನ್ನು ನಡಿಸಹತ್ತಿದನು. ಮತ್ತು ತೈಲಪನನ್ನು ಹೆಸರಿಗೆ ಮಾತ್ರ ರಾಜನನ್ನಾಗಿ ಇಟ್ಟುಬಿಟ್ಟನು ಈ ಪ್ರಕಾರ ಅವನ ಆಳಿಕೆಯು ೧೧೬೨ ರ ವರೆಗೆ ಸಾಗಿತು. ಮುಂದೆ ಈ ವರ್ಷ ಅವನು ಕಲ್ಯಾಣ ಪಟ್ಟಣದಲ್ಲಿ ಸಿಂಹಾಸನವನ್ನೇರಿ ರಾಜ್ಯಾಭಿಷಿಕ್ತನಾದನು ಅಂದಿನಿಂದ ಅವನಿಗೆ ಕಲಚೂರ್ಯ ಚಕ್ರವರ್ತಿ ಎಂಬ ಅಭಿಧಾನವು ಪ್ರಾಪ್ತವಾಯಿತು. ಮತ್ತು ಚಾಲುಕ್ಯರ ರಾಜ್ಯವು ಮುಂದೆ ಕೆಲವು ಕಾಲ ಮುಗ್ಗಿಹೋಯಿತು.

ಬಿಜ್ಜಳನು ೧೧೬೨ರಿಂದ ೧೧೬೭ರ ವರೆಗೆ ಅಂದರೆ ೫ ವರ್ಷಗಳ ವರೆಗೆ ಅರಸನಂತೆ ರಾಜ್ಯವಾಳಿದನು. ಈ ಪ್ರಕಾರ ಬಿಜ್ಜಳನ ಇತಿಹಾಸವಿರುತ್ತದೆ. ಇದು ಅನೇಕ ಶಿಲಾಶಾಸನಗಳಿಂದ ಸಿದ್ಧವಾಗಿರುತ್ತದೆ. ಈಬಗ್ಗೆ ಫ್ಲೀಟ್, ಈಲಿಎಟ್, ಭಂಡಾರಕರ ಮೊದಲಾದ ಇತಿಹಾಸಕಾರರ ಗ್ರಂಥಗಳನ್ನು ನೋಡಬೇಕು.

ಮೇಲ್ಕಂಡ ಸಂಗತಿಗಳ ಮೇಲಿಂದ ನಾವು ಬಿಜ್ಜಳನ ಆಳಿಕೆಯಲ್ಲಿ ಎರಡುವಿ ಭಾಗಗಳನ್ನು ಕಲ್ಪಿಸಬಹುದು. ಒಂದು ೧೧೬೨ರಕಿಂತಲೂ ಮೊದಲನೆಯ ಕಾಲ ಮತ್ತೊಂದು ಅದರ ತರುವಾಯದ ಕಾಲ. ಈ ೧೧೬೨ ರ

ಸುಮಾರಕ್ಕೆ ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿರಬಹುದು. ಯಾಕಂದರೆ ಬಿಜ್ಜಳನು ಪೂರ್ಣ ರಾಜ್ಯಾಧಿಕಾರಿಯಾದ ಬಳಿಕ ಬಸವೇಶ್ವರನು ಮಂತ್ರಿಯಾದನೆಂದು ಬಸವೇಶ್ವರನ ಚರಿತ್ರೆಗಳಿಂದ ತಿಳಿದು ಬರುತ್ತದೆ. ಆದರೆ ಬಿಜ್ಜಳನು ನಿಜವಾಗಿ ಸ್ವತಂತ್ರಾಧಿಕಾರಿಯಾದದ್ದು ೧೧೫೫ ರಲ್ಲಿ. ಆದುದರಿಂದ ಬಸವೇಶ್ವರನು ಮಂತ್ರಿಯಾದದ್ದು ಈ ವರ್ಷವೆಂತಲೂ ಕೂಡ ನಾವು ಅನುಮಾನಮಾಡಬಹುದಾಗಿದೆ. ಇದು ಇನ್ನೂ ಸಂಶೋಧಿಸತಕ್ಕ ವಿಷಯುವಾಗಿದೆ.

ಆದರೆ ಪ್ರಕೃತದಲ್ಲಿ ೧೧೬೨ ಅಥವಾ ೧೧೫೫ರ ಕ್ಕಿಂತಲು ಮೊದಲು ದೇಶದಲ್ಲಿ ವೀರಶೈವ ಚಳವಳಿಯು ಇದ್ದಿತೇ ಹೇಗೆ, ಇದ್ದಿದ್ದರೆ ಅದು ಯಾರಿಂದ ನಡೆಸಲ್ಪಟ್ಟಿತು, ಮತ್ತು ಅದು ಯಾವ ಯಾವ ಪ್ರದೇಶಗಳಲ್ಲಿ ಎಂಬದನ್ನು ಚರ್ಚಿಸುವದೇ ಈ ಲೇಖದ ಮುಖ್ಯ ವಿಷಯುವಾಗಿದೆ.

ಬಸವೇಶ್ವರನ ಪೂರ್ವದ ಈ ಅವಧಿಯುಲ್ಲಿ ಬಿಜ್ಜಳನ ತಂದೆಯಾದ ಪೆರ್ಮಾಡಿರಾಯನ ಕಾಲದಲ್ಲಿ ಅನೇಕ ಶಿವಶರಣರು ಉತ್ಪನ್ನರಾದರೆಂಬುದನ್ನು ನಾನು ಹಿಂದೆ ಉಲ್ಲೇಖಿಸಿದ್ದೇನೆ. ಅವನ ತರುವಾಯ ಸಹ ವೀರಶೈವ ಮತೋದ್ಧಾರ ಕಾರ್ಯಗಳು ದೇಶದಲ್ಲಿ ವಿಶೇಷವಾಗಿ ನಡೆದವು. ಮತ್ತು ಅವರಲ್ಲಿ ರೇವಣಸಿದ್ಧೇಶ್ವರನು ಬಹು ಪ್ರಸಿದ್ಧನಾಗಿ ವೀರಶೈವ ಧರ್ಮಕ್ರಾಂತಿಯನ್ನು ಮಾಡಿದನೆಂದು ಕಂಡು ಬರುತ್ತದೆ.

ರೇವಣಸಿದ್ಧೇಶ್ವರನು ಬಸವೇಶ್ವರನಕ್ಕಿಂತಲೂ ಮೊದಲಿನವನೆಂದು ಅವನ ಚರಿತ್ರೆಯಿಂದಲೇ ಸ್ಪಷ್ಟವಾಗುತ್ತದೆ. ಬಸವೇಶ್ವರನ ಕಾಲದಲ್ಲಿ ರೇವಣಸಿದ್ಧೇಶ್ವರನು ಇದ್ದಿದ್ದರೆ ಅವನು ಇತರ ಶರಣರಂತೆ ಹಾಗೆ ನಿಶ್ಚಯವಾಗಿ ವೀರಶೈವ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಡುತ್ತಿದ್ದನು. ಆದರೆ ಅಂಥ ಉಲ್ಲೇಖಗಳು ಎಲ್ಲಿಯೂ ಇರುವದಿಲ್ಲ. ಶಿವಾನುಭವ ಮಂಟಪದ ವಾಗ್ವಾದಗಳಲ್ಲಿ ಅವನು ಅಂಗವಹಿಸಿದ್ದು ತೋರಿಬರುವದಿಲ್ಲ. ಆ ಮಂಟಪದಲ್ಲಿ ಮುಖ್ಯ ಭಾಗವನ್ನು ವಹಿಸಿದವರು ಪ್ರಭುದೇವ, ಚನ್ನಬಸವ, ಮೋಳಿಗೆಯ ಮಾರಯ್ಯ, ಮಹಾದೇವಿಯಕ್ಕ ಇವರೇ ಮೊದಲಾದವರು. ರೇವಣಸಿದ್ಧೇಶ್ವರನ ಮಗನಾದ (ರುದ್ರಮುನಿಯು) ಮಾತ್ರ ಕೆಲ ಪ್ರಸಂ

ಗಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಆದ್ದರಿಂದ ರೇವಣಸಿದ್ಧನು ಬಸವನ ಕಿಂತಲೂ ಹಿಂದಿನವನು. ಅಲ್ಲದೆ ಅವನು ಸೊಲ್ಲಾಪುರಕ್ಕೆ ಹೋಗಿ ಸಿದ್ಧರಾಮೇಶ್ವರನ ತಾಯಿತಂದೆಗಳನ್ನು ಕಂಡು ಅವರ ಉದರದಲ್ಲಿ ಒಬ್ಬ ಮಹಾಪುರುಷನು ಉದಯವಾಗುವನೆಂದು ಹೇಳುತ್ತಾನೆ. ಆದರೆ ಸಿದ್ಧ ರಾಮೇಶ್ವರನು ಬಸವನ ಸಮಕಾಲೀನನು. ಇದರ ಮೇಲಿಂದಾದರೂ ರೇವಣಸಿದ್ಧೇಶ್ವರನು ಬಸವನಕಿಂತಲೂ ಪೂರ್ವದವನೆಂಬುದು ದೃಢ ಪಡುತ್ತದೆ.

ರೇವಣಸಿದ್ಧೇಶ್ವರನ ಚರಿತ್ರೆಯನ್ನು ನಾವು ನೋಡಿದಲ್ಲಿ ಕಂಡು ಬರುವ ಸ್ಪಷ್ಟವಾದ ಸಂಗತಿ ಏನೆಂದರೆ, ಅವನು ಬಸವನಿಗೆ ಸಮಕಾಲೀ ನನಲ್ಲದಿದ್ದರೂ, ಬಿಜ್ಜಳನಿಗೆ ಸಮಕಾಲೀನನು ಇರುತ್ತಾನೆ ಅವನ ವಿಷಯದಲ್ಲಿರುವ ಆಖ್ಯಾಯಿಕೆಗಳು ಅಂದರೆ ಮಾಸನೂರಿನಲ್ಲಿ ನಡೆದ ಸಂದರ್ಭಗಳು ಮೊದಲಾದವುಗಳು ಬಿಜ್ಜಳನ ಇದಿರಿನಲ್ಲಿಯೇ ನಡೆದ ವೆಂದು ಹೇಳಲ್ಪಡುತ್ತಿದೆ. ಆದುದರಿಂದ ರೇವಣಸಿದ್ಧೇಶ್ವರನು ಬಸವೇ ಶ್ವರನ ಸಮಕಾಲೀನನಲ್ಲದಿದ್ದರೂ ಬಿಜ್ಜಳನೊಡನಿದ್ದನೆಂದು ತಿಳಿಯುತ್ತಿದೆ.

ಆದ್ದರಿಂದ ಅವನು ೧೧೬೨ ಅಥವಾ ೧೧೫೬ ಇದರ ಪೂರ್ವದಲ್ಲಿಯೇ ಪ್ರಸಿದ್ಧಿಗೆ ಬಂದಿರಬೇಕು. ಮತ್ತು ಅವನು ವೀರಶೈವ ಧರ್ಮದ ಬಗ್ಗೆ ಮಾಡಿದ ಚಳವಳಿಗಳು ಈ ವರ್ಷಗಳ ಪೂರ್ವದಲ್ಲಿಯೇ ಇರಬೇಕು ಎಂದು ತೋರುತ್ತದೆ.

ಅವನ ಈ ಚಳವಳಿಗಳು ಯಾವಕಡೆಯಲ್ಲಿ ನಡೆದವೆಂಬುದನ್ನು ನಾವು ಇನ್ನು ವಿಚಾರ ಮಾಡತಕ್ಕದ್ದಾಗಿದೆ.

ಹರಿಹರ ಕವಿಯು ವೀರಶೈವ ಗ್ರಂಥಕಾರರಲ್ಲಿ ಬಹು ಪುರಾತನ ಕಾಲದವನು. ಆದುದರಿಂದ ಅವನ ರಗಳೆಯಲ್ಲಿ ಅವನ ವಿಷಯಕ್ಕೆ ಬಂದ ಉಲ್ಲೇಖಗಳು ಬಹು ಮಹತ್ವವಾದವುಗಳು. ಇವುಗಳ ಮೇಲಿಂದ ರೇವಣ ಸಿದ್ಧೇಶ್ವರನು ತದ್ದೇವಾಡಿ ಪ್ರಾಂತದಲ್ಲಿ ಇದ್ದುಕೊಂಡು ಒಂದು ಮಹ ತ್ತರ ಕ್ರಾಂತಿಯನ್ನು ಮಾಡಿದನೆಂದು ನನಗೆ ತೋರುತ್ತದೆ.

ಈ ಕಾಲದಲ್ಲಿ ಅಂದರೆ ೧೧೫೧ರ ವರೆಗೆ ಬಿಜ್ಜಳನು ಈ ಪ್ರಾಂತಾ ಧಿಪತಿಯಾಗಿದ್ದನು. ಮುಂದೆ ಅವನು ಕಲ್ಯಾಣದ ರಾಜ್ಯವನ್ನು ಸಂ

ಪೂರ್ಣವಾಗಿ ಆಕ್ರಮಿಸುವ ವರೆಗೆ ಅಂದರೆ ೧೧೫೫ರ ವರೆಗೂ ಅವನು ಈ ತದ್ದೇವಾಡಿಯಲ್ಲಿಯೇ ಇದ್ದಿರಬೇಕು.

ಯಾಕಂದರೆ ತದ್ದೇವಾಡಿಯು ಕಲ್ಯಾಣದಿಂದ ಬಹಳ ದೂರವಿಲ್ಲ. ಅಲ್ಲಿಂದ ಅದು ೭೦ ಅಥವಾ ೮೦ ಮೈಲುಗಳ ಮೇಲೆ ಮಾತ್ರ ಇದೆ. ಕಲ್ಯಾಣದ ರಾಜಧಾನಿಯ ಮೇಲೆ ತನ್ನ ನಿಯಂತ್ರಣವನ್ನಿಟ್ಟು ನಡೆಯಲು ಅವನಿಗೆ ಅದು ಅನುಕೂಲ ಸ್ಥಳವು. ಇದೇ ಕಾಲದಲ್ಲಿಯೇ ರೇವಣಸಿದ್ಧೇಶ್ವರನು ತದ್ದೇವಾಡಿ ಸೀಮೆಗೆ ಬಂದು ತನ್ನ ಪ್ರಚಾರ ಕಾರ್ಯದಲ್ಲಿ ತೊಡಗಿದನು. ಈ ಬಗ್ಗೆ ಅವನ ಅನೇಕ ಕುರುಹುಗಳೂ ಇಲ್ಲಿ ದೊರೆಯುತ್ತವೆ. ಇವುಗಳನ್ನು ನಾನು ಇಲ್ಲಿ ವಿವರಿಸುತ್ತೇನೆ. ಇದರಲ್ಲಿ ನಾನು ಹರಿಹರನ ರಗಳೆಯನ್ನು ಮುಖ್ಯ ಆಧಾರವಾಗಿಟ್ಟು ಕೊಂಡಿದ್ದೇನೆ. ಇದರಿಂದ ತಿಳಿದು ಬರುವ ಸಂಗತಿಗಳಾವವೆಂದರೆ:—

ರೇವಣಸಿದ್ಧೇಶ್ವರನು ಚೋಳದೇಶದಲ್ಲಿ ಕೆಲಕಾಲವಿದ್ದು ಮುಂದೆ ಉತ್ತರಕ್ಕೆ ಹೊರಟು ಅಲ್ಲಿದ್ದ ಮಾಸನೂರ ಎಂಬ ಗ್ರಾಮಕ್ಕೆ ಬರುವನು. ಅಲ್ಲಿ ಬಂದ ಬಳಿಕ ಅಲ್ಲಿಯ ಒಂದು ಶಿವಾಲಯದಲ್ಲಿ ಬಂದು ಇಳಿದನೆಂತಲೂ ಅದರ ಮುಂದಿನ ವೃಕ್ಷದಲ್ಲಿ ಎರಡು ತಿಗುಣಿಗಳಿದ್ದು ಒಂದು ರಾಕ್ಷಸ ಮಿಥುನವು ಶಾಪಹತವಾಗಿ ಆ ಸ್ವರೂಪನ್ನು ಹೊಂದಿದ್ದವೆಂತಲೂ ಅವುಗಳನ್ನು ರೇವಣಸಿದ್ಧೇಶ್ವರನು ಭಸ್ಮ ಮಾಡಲು ಅವು ಉಕ್ಕಿನ ಗುಂಡುಗಳಾದವೆಂತಲೂ ಅವುಗಳಿಂದ ಒಂದು ಕಠಾರಿಯನ್ನು ಅವನು ಮಾಡಿಸಿದನೆಂತಲೂ ಆ ಕಠಾರಿಯನ್ನು ಮಾಸನೂರ ಮುಂದೆ ಹರಿಯುವ ನದಿಯ ಮಧ್ಯದಲ್ಲಿದ್ದ ಮಡುವಿನಲ್ಲಿ ಒಗೆದನೆಂತಲೂ ಹರಿಹರನ ರಗಳೆಯಲ್ಲಿ ಹೇಳಲ್ಪಟ್ಟಿದೆ. (ಹರಿಹರನ ರಗಳೆಗಳು ಭಾಗ ೩ ಪುಟ ೨೫.)

ಈ ಮಾಸನೂರು ಸೊಲ್ಲಾಪುರ ಜಿಲ್ಲಾ ಪಂಢರಪುರ ತಾಲೂಕಿನಲ್ಲಿ ಇದೇ ಹೆಸರಿನ ಈಗಿನ ಗ್ರಾಮವೇ ಇರುತ್ತದೆ. ಇದರ ಸವಿಸ್ತಾರವಾದ ವರ್ಣನೆಯನ್ನು ಶಿವಾನುಭವ ಸಂಚಿಕೆ ೯ ಪುಟ ೩೫೩ರಲ್ಲಿ ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳು ಮಾಡಿರುತ್ತಾರೆ. ಅದನ್ನು ವಾಚಕರು ನೋಡಬೇಕು.

ಈ ಮಾಸನೂರು ಗ್ರಾಮದ ಪಕ್ಕದಲ್ಲಿಯೇ ಭೀಮಾನದಿಯು ಹರಿಯುತ್ತದೆ. ರೇವಣಶಿದ್ಧನ ದೇವಾಲಯವು ಈ ಊರ ಸಮೀಪಕ್ಕೆಯೇ ಇದೆ.

ಹರಿಹರನು ವಿವರಿಸಿದ ಶಿವಾಲಯವು ಈ ಗ್ರಾಮದಲ್ಲಿ ಇದ್ದ ಮಲ್ಲಿಕಾರ್ಜುನ ದೇವಾಲಯವೇ ಇರಬಹುದು. ಯಾಕೆಂದರೆ ಇದು ಪ್ರಾಚೀನವಾದುದು. ಅದು ಸುಂದರವೂ ಶಿಲ್ಪಕಲಾದೃಷ್ಟಿಯಿಂದ ಗಣನೀಯವೂ ಆಗಿರುತ್ತದೆ. ನದಿಯು ಇಲ್ಲಿ ಬಹಳ ಆಳವಾಗಿ ಬಹು ರಭಸದಿಂದ ಹರಿಯುತ್ತದೆ. ಈ ಮಡುವಿನಲ್ಲಿಯೇ ರೇವಣಸಿದ್ಧನು ಸುರಿಗೆಯ ಮಹಿಮೆಯನ್ನು ಮೆರೆಯಿಸಿದನೆಂದು ಇಲ್ಲಿಯ ಜನರು ಈಗಲೂ ಕೂಡ ನಂಬುತ್ತಾರೆ. ಇಲ್ಲಿ ಶಿವರಾತ್ರಿಯಲ್ಲಿ ಬಹು ದೊಡ್ಡ ಜಾತ್ರೆಯಾಗುತ್ತದೆ. ಆದ್ದರಿಂದ ಈ ಮಾಸನೂರೇ ರೇವಣಸಿದ್ಧೇಶ್ವರನು ಮೊದಲು ಬಂದಿದ್ದ ಗ್ರಾಮವಾಗಿರಬೇಕು. ಇದು ತದ್ದೇವಾಡಿಯಿಂದ ೨೪ ಮೈಲು ಮಾತ್ರ ದೂರವಿರುತ್ತದೆ.

ಹರಿಹರನು ಮುಂದೆ ಹೇಳುವದೇನೆಂದರೆ, ರೇವಣಸಿದ್ಧನು ಇಲ್ಲಿ ಕೆಲವು ದಿವಸವಿದ್ದು ಮುಂದೆ ಬನವಾಸಿಗೆ ಹೋಗಿ ಅಲ್ಲಿಯ ರಾಜನಿಂದ ಮನ್ನಣೆಯನ್ನು ಹೊಂದಿದನು. ಅಲ್ಲಿಂದ ಕಲ್ಯಾಣ ಪಟ್ಟಣಕ್ಕೆ ಹೋಗಿ ಅಲ್ಲಿ ಕೆಲವು ದಿವಸ ಗುಪ್ತವಾಗಿ ನಿಂತು ಅಲ್ಲಿಂದ ಪುನಃ ಮಂಗಳವಾಡಕ್ಕೆ ಬರುವನು. ಈ ಗ್ರಾಮದಲ್ಲಿ ಅವನು ಮಾಯಿದೇವಿ ಎಂಬವಳೊಡನೆ ಕೆಲವು ದಿವಸ ಕಾಲ ಕಳೆಯುತ್ತಾನೆ. ಈ ಮಂಗಳವಾಡವು ಮಾಸನೂರಿನಿಂದ ಪಶ್ಚಿಮಕ್ಕೆ ೮ ಮೈಲು ಮಾತ್ರ ದೂರವಿದೆ. ಮತ್ತು ತದ್ದೇವಾಡಿಯಿಂದ ೨೨ ಮೈಲು ಇರುತ್ತದೆ. ಮಂಗಳವಾಡವು ಪುರಾತನ ಪಟ್ಟಣವಿರುತ್ತದೆ. ಅಲ್ಲಿ ಈಗಲೂ ಊರ ಮಧ್ಯದಲ್ಲಿ ಕೋಟೆಯ ಮುಂಭಾಗದಲ್ಲಿ ರೇವಣಸಿದ್ಧನ ದೇವಾಲಯವಿದೆ. ಇದರ ಕಟ್ಟಡವು ಪ್ರಾಚೀನವಾದುದು ಆದರೆ ಅನೇಕರು ಮಂಗಳವಾಡವೆಂದರೆ ಕಲ್ಯಾಣ ಪಟ್ಟಣವೆಂದು ಭಾವಿಸಿದ್ದಾರೆ. ಆದರೆ ಇದು ತಪ್ಪು. ಹರಿಹರನು ಈ ಎರಡು ಪಟ್ಟಣಗಳು ಬೇರೆ ಬೇರೆ ಇರುವ ಹಾಗೆ ತನ್ನ ಇದೇ ರಗಳೆಯಲ್ಲಿ ವರ್ಣಿಸಿದ್ದಾನೆ. ಈ ಮಂಗಳವಾಡವು ತದ್ದೇವಾಡಿ ಸೀಮೆಯಲ್ಲಿಯ ಮುಖ್ಯ ಪಟ್ಟಣವು.

ರೇವಣಸಿದ್ಧನು ಈ ಮಂಗಳವಾಡದಲ್ಲಿ ಕೆಲವು ದಿವಸವಿದ್ದು ಆ ಮೇಲೆ ಲಂಕೆಗೆ ಹೋಗುವನು. ಲಂಕೆಯಲ್ಲಿ ೩ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿ ಪುನಃ ಮಂಗಳವಾಡಕ್ಕೆ ಬರುವನು. ಅಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಅವನನ್ನು ಪುನಃ ಕಾಣುತ್ತಾನೆ. ಹರಿಹರನು ಬಿಜ್ಜ-

ಳನು ಮಂಗಳವಾಡದಲ್ಲಿದ್ದನೆಂದು ತನ್ನ ರಗಳೆಯಲ್ಲಿ ಹೇಳುವದು ಬಹು ಮಹತ್ವವಾದದ್ದು. ಇದರಿಂದ ರೇವಣಸಿದ್ಧನು ಈ ಪ್ರಾಂತಗಲ್ಲಿ ಬಂದಾಗ್ಗೆ ಬಿಜ್ಜಳನು ಕಲ್ಯಾಣ ಪಟ್ಟಣದಲ್ಲಿ ಇನ್ನೂ ರಾಜ್ಯಾರೋಹಣ ಮಾಡಿದ್ದಿಲ್ಲೆಂದು ಗೊತ್ತಾಗುತ್ತದೆ. ಅವನು ಆಗ ಇನ್ನೂ ಮಾಂಡಲಿಕನಾಗಿಯೇ ತದ್ದೇವಾಡಿ ಸೀಮೆಯಲ್ಲಿ ಆಳುತ್ತಿರಬಹುದು. ಮತ್ತು ಅವನು ತದ್ದೇವಾಡಿಯಿಂದ ಅನತಿ ದೂರದಲ್ಲಿರುವ ಮಂಗಳವಾಡವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿರಬಹುದು. ಮತ್ತು ಅವನ ಕೈ ಕೆಳಗಿನ ಒಬ್ಬ ಅಧಿಕಾರಿಯು ಮಾತ್ರ ತದ್ದೇವಾಡಿಯಲ್ಲಿ ಇರುತ್ತಿದ್ದನು.

ರೇವಣಸಿದ್ಧೇಶ್ವರನು ಮುಂದೆ ಕೆಲವು ದಿನ ಇಲ್ಲಿ ವಾಸಮಾಡಿ ಪುನಃ ದೇಶಸಂಚಾರವನ್ನು ಆರಂಭಿಸುತ್ತಾನೆ. ಆ ಮೇಲೆ ಕೆಲವು ದಿವಸಗಳ ಮೇಲೆ ಪುನಃ ಮಂಗಳವಾಡಕ್ಕೆ ಬರುತ್ತಾನೆ. ಅಲ್ಲಿಗೆ ಬಂದು ಒಂದು ಕೆರೆಯನ್ನು ಕಟ್ಟಿಸಲು ಉದ್ಯುಕ್ತನಾಗುತ್ತಾನೆ. ಇದೇ ಸ್ಥಳದಲ್ಲಿ ಚೋಳ ರಾಜೇಂದ್ರನ ಪುತ್ರಿಯಾದ ಅವನ ಹೆಂಡತಿಯ ಉದರದಿಂದ ರುದ್ರ ಮುನಿಯು ಉತ್ಪನ್ನನಾಗುತ್ತಾನೆ. ಕೆರೆ ಕಟ್ಟಿದ ಈ ಸ್ಥಳವು ಮಂಗಳವಾಡಕ್ಕೆ ೧೨ ಮೈಲು ದೂರವಿರುತ್ತದೆ. ಈ ಕೆರೆಗೆ ಈಗಲೂ ರೇವಣಸಿದ್ಧನ ಕೆರೆ ಎಂದು ಜನರು ಅನ್ನುತ್ತಾರೆ ಅನೇಕರು ರುದ್ರ ಮುನಿಯು ಹುಟ್ಟಿದ ಸ್ಥಾನವು ಕಲ್ಯಾಣದ ತ್ರಿಪುರಾಂತಕ ಕೆರೆ ಎಂದು ಭಾವಿಸುತ್ತಾರೆ. ಇದು ತಪ್ಪು ಇರುತ್ತದೆ. ಈ ಸಿದ್ಧನಕೆರೆಯ ಸಮೀಪಕ್ಕೆ ಈಗಲೂ ರೇವಣಸಿದ್ಧನ ಪ್ರಾಚೀನ ದೇವಾಲಯವೊಂದಿದೆ. ಈ ಕೆರೆಯ ಪಕ್ಕದಲ್ಲಿ ಮಾಯಿದೇವಿಯ ದೇವಾಲಯವೂ ಇದೆ. ಇದು ಈಗ ಬಿದ್ದು ಹೋಗಿದೆ. ಈ ಮಾಯಿದೇವಿಯು ನಾನು ಹಿಂದೆ ಹೇಳಿದ ರೇವಣಸಿದ್ಧನ ಇನ್ನೊಬ್ಬ ಹೆಂಡತಿಯು ಇರಬಹುದು. ಈ ಗ್ರಾಮದಲ್ಲಿ ಒಂದು ಜಾತ್ರೆಯೂ ಆಗುತ್ತದೆ. ಈ ಎಲ್ಲ ಸಂಗತಿಗಳಿಂದ ರೇವಣಸಿದ್ಧನು ಇಲ್ಲಿ ಇದ್ದನೆಂಬುದು ಸ್ಪಷ್ಟವಾಗುತ್ತದೆ.

ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿದ್ದಾಗ್ಗೆ ಹಾವಿನಹಾಳ ಕಲ್ಲಯ್ಯನನ್ನು ಕಾಣುತ್ತಾನೆ. ಮತ್ತು ಅವನಿಗೆ ತನ್ನ ಮಗನಾದ ರುದ್ರ ಮುನಿಯಿಂದ ದೀಕ್ಷೆಯನ್ನು ಕೊಡಿಸುತ್ತಾನೆ. ಈ ಹಾವಿನಹಾಳವು ತದ್ದೇವಾಡಿಯಿಂದ ೬ ಮೈಲು ಮಾತ್ರ ದೂರವಿದೆ. ಮತ್ತು ಮಂಗಳವಾಡವು ಹಾವಿನಹಾಳದಿಂದ ೧೮ ಮೈಲು ದೂರವಿದೆ.

ಆ ಮೇಲೆ ರೇವಣಸಿದ್ಧೇಶ್ವರನು ಸೊನ್ನಲಿಗೆಗೆ ಅಂದರೆ ಸೊಲ್ಲಾಪುರಕ್ಕೆ ಹೋಗಿ ಅಲ್ಲಿದ್ದ ಮುದ್ದುಗೌಡ ಮತ್ತು ಸುಗ್ಗಲದೇವಿ ಇವರನ್ನು ಕಂಡು ಅವರ ಉದರದಲ್ಲಿ ಒಬ್ಬ ಕಾರಣಿಕ ಸಿದ್ಧನು ಉದಯಿಸುವನೆಂದು ಹೇಳುತ್ತಾನೆ. ಈತನೇ ಮುಂದೆ ಬಸವೇಶ್ವರನ ಕಾಲದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದ ಸಿದ್ಧರಾಮನು. ಈ ಸೊಲ್ಲಾಪುರವು ತದ್ದೇವಾಡಿ ಗ್ರಾಮದಿಂದ ಉತ್ತರಕ್ಕೆ ೩೪ ಮೈಲು ದೂರವಿರುತ್ತದೆ. ಇಲ್ಲಿ ರೇವಣಸಿದ್ಧನ ದೇವಾಲಯವೂ ರೇವಣಸಿದ್ಧನ ಪಾದಗಟ್ಟೆಯೂ ಎಂಬ ಎರಡು ಸ್ಥಾನಗಳಿವೆ.

ಈ ಪ್ರಕಾರ ಹರಿಹರನು, ರೇವಣಸಿದ್ಧನು ತದ್ದೇವಾಡಿ ಪ್ರಾಂತದಲ್ಲಿ ಮಾಡಿದ ಅನೇಕ ಮಹಿಮೆಗಳನ್ನು ತನ್ನ ರಗಳೆಯಲ್ಲಿ ವರ್ಣಿಸಿದ್ದಾನೆ. ಆದ್ದರಿಂದ ಅವನು ತದ್ದೇವಾಡಿ ಪ್ರಾಂತದಲ್ಲಿ ಇದ್ದುದು ಸಿದ್ಧವಾಗುತ್ತದೆ.

ಈ ಸ್ಥಳಗಳಲ್ಲದೆ ಇನ್ನೂ ಕೆಲವು ಸ್ಥಳಗಳು ರೇವಣಸಿದ್ಧೇಶ್ವರನಿಗೆ ಸಂಬಂಧಪಟ್ಟವು ಈ ಪ್ರಾಂತದಲ್ಲಿ ಇರುತ್ತವೆ. ಅವು ಈಗಿನ ಪುರಾಣಗಳಲ್ಲಿ ಹೇಳಲ್ಪಟ್ಟಿಲ್ಲ. ಸಾತಾರೆ ಜಿಲ್ಲೆಯಲ್ಲಿ ರೇಣಾವಿ ಎಂಬ ಗ್ರಾಮವು ಈಗ ಇರುತ್ತದೆ. ಅದು ಮಂಗಳವೇಡದಿಂದ ಪಶ್ಚಿಮಕ್ಕೆ ೬೦ ಮೈಲು ದೂರವಿರುತ್ತದೆ. ಈ ಸ್ಥಾನದ ವಿಸ್ತೃತ ವೃತ್ತಾಂತವು ಶಿವಾನುಭವ ಸಂಪುಟ ೪-೩-೧೯೪೯ ಇದರಲ್ಲಿ ಬಂದಿರುತ್ತದೆ. ಈ ಸ್ಥಾನವು ರೇವಣಸಿದ್ಧೇಶ್ವರನಿಗೆ ಅತ್ಯಂತ ಪವಿತ್ರವಾದುದೆಂದು ಈಗಲೂ ಅಲ್ಲಿಯ ಜನರು ಭಾವಿಸುತ್ತಾರೆ. ಈ ರೇಣಾವಿಯನ್ನು ಮಿ॥ ವೀರಭದ್ರಪ್ಪ ಹಾಲಭಾವಿ ರಿಟಾಯರ್ಡ ಫಸ್ಟ್ ಕ್ಲಾಸ ಸಬ್ಬ ಜಜ್ಜ ಇವರು ಸಂದರ್ಶಿಸಿ ವಿಸ್ತೃತ ವರ್ಣನೆಯನ್ನು ಈ ಲೇಖದಲ್ಲಿ ಮಾಡಿರುತ್ತಾರೆ.

ಇದಲ್ಲದೆ. ಈ ಭಾಗದಲ್ಲಿ ರೇವಣ ಮಡುವು ಎಂಬುದೊಂದು ಸ್ಥಳವಿದ್ದುದು ಮುಳುಜು ಎಂಬ ಗ್ರಾಮದಲ್ಲಿ ದೊರೆತ ಶಿಲಾಶಾಸನದಿಂದ ತಿಳಿದು ಬರುತ್ತದೆ ಈ ಶಿಲಾಸನವು ಅಮುಗಿದೇವನದು ಇರುತ್ತದೆ ಇದರ ವಿವರಣೆಯು 'ಶಿವಾನುಭವ 'ಸಂಚಿಕೆ' ೯-೬-೧೯೪೫ ರಲ್ಲಿ ಬಂದಿರುತ್ತದೆ.

ಈ ಯಾವತ್ತೂ ಸಂಗತಿಗಳಿಂದ ರೇವಣಸಿದ್ಧೇಶ್ವರನು ತದ್ದೇವಾಡಿ ಪ್ರಾಂತದಲ್ಲಿ ವಾಸಿಸಿದ್ದನೆಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ.

ಮೇಲ್ಕಂಡ ವಿವರಣೆಗಳಿಂದ ಕೆಳಗಿನ ಸಂಗತಿಗಳು ಸಿದ್ಧವಾಗುತ್ತವೆ. ಅವು ಯಾವವೆಂದರೆ—

೧. ರೇವಣಸಿದ್ಧನು ತದ್ದೇವಾಡಿ ಭಾಗದಲ್ಲಿ ಬಹು ದಿವಸಗಳವರೆಗೆ ವಾಸ ಮಾಡಿದನು. ತದ್ದೇವಾಡಿ ಭಾಗವೆಂದರೆ ಈಗಿನ ಸೊಲ್ಲಾಪೂರ ಜಿಲ್ಲೆಯ ದಕ್ಷಿಣ ಭಾಗ ಮತ್ತು ವಿಜಾಪುರ ಜಿಲ್ಲೆಯ ಉತ್ತರ ಭಾಗಗಳು. ಈ ಪ್ರದೇಶದಲ್ಲಿ ಅವನ ಅನೇಕ ಕುರುಹುಗಳು ಈಗಲೂ ಉಪಲಬ್ಧವಿವೆ. ಇಲ್ಲಿ ಅವನ ಹೆಸರಿನ ದೇವಾಲಯಗಳು ಅನೇಕ ಇರುತ್ತವೆ. ಅವನು ಸಂಚರಿಸಿದ ಸ್ಥಳಗಳು ಮತ್ತು ವಾಸ ಮಾಡಿದ ಗ್ರಾಮಗಳು ಈಗಲೂ ಪುಣ್ಯಕ್ಷೇತ್ರಗಳೆಂದು ಭಾವಿಸಲ್ಪಟ್ಟಿವೆ. ಅವುಗಳಲ್ಲೆಲ್ಲ ಈಗಲೂ ಜಾತ್ರೆಗಳಾಗುತ್ತಾ ಇವೆ. ಆದುದರಿಂದ ರೇವಣಸಿದ್ಧೇಶ್ವರನು ಈ ತದ್ದೇವಾಡಿ ಭಾಗದಲ್ಲಿ ಇದ್ದದ್ದು ಗೊತ್ತಾಗುತ್ತದೆ.

೨ ಅವನು ಈ ತದ್ದೇವಾಡಿ ಪ್ರಾಂತದಲ್ಲಿ ಬೇರೆ ಬೇರೆ ಕಡೆಗೆ ವಾಸಮಾಡುತ್ತಾ ಇದ್ದನೆಂದು ತೋರುತ್ತದೆ. ಮೊದಲು ಮಾಸನೂರಲ್ಲಿ ಇದ್ದು, ಆ ಮೇಲೆ ಮಂಗಳವಾಡವನ್ನು ತನ್ನ ಮುಖ್ಯ ಸ್ಥಳವನ್ನಾಗಿ ಮಾಡಿಕೊಂಡನು ಮುಂದೆ ಅವನು ರೇಣಾವಿ ಎಂಬ ಗ್ರಾಮದಲ್ಲಿಯೂ ಬಹಳ ದಿವಸ ವಾಸವಾಗಿರಬೇಕು. ಯಾಕಂದರೆ ಅಲ್ಲಿಯ ಈಗಿನ ಪರಿಸ್ಥಿತಿಯು ಈ ರೀತಿಯನ್ನು ಸೂಚಿಸುತ್ತದೆ. ಅವನ ಬಗ್ಗೆ ಇಲ್ಲಿ ಒಂದು ಸ್ಥಲ ಪುರಾಣವೂ ಇರುತ್ತದೆ. ಅದರಲ್ಲಿ ಅವನ ಮಹತ್ವವು ವಿಶೇಷವಾಗಿ ವರ್ಣಿಸಲ್ಪಟ್ಟಿದೆ. ಕಟ್ಟಕಡೆಗೆ ಸಿದ್ದನಕೆರೆ ಈ ಸ್ಥಳದಲ್ಲಿ ಬಹುದಿವಸ ವಾಸಮಾಡಿದನೆಂದು ತೋರುತ್ತದೆ. ಯಾಕಂದರೆ ರುದ್ರಮುನಿಯು ಇಲ್ಲಿಯೇ ಅವನಿಂದ ಹುಟ್ಟಿದನು. ಮತ್ತು ಯಾವ ಮಾಯಿದೇವಿಯು ಕೂಡ ಮಂಗಳವಾಡದಲ್ಲಿದ್ದನೋ ಆಕೆಯ ದೇವಾಲಯವಾದರೂ ಇಲ್ಲಿಯೇ ಇರುತ್ತದೆ. ಅದ್ದರಿಂದ ಅವನು ತನ್ನ ಹೆಂಡಂದಿರೊಡನೆ ಇಲ್ಲಿ ಬಹಳ ದಿವಸ ವಾಸಮಾಡಿರಬೇಕು.

೩. ರೇವಣಸಿದ್ಧೇಶ್ವರನು ಈ ಭಾಗದಲ್ಲಿ ಈ ಪ್ರಕಾರ ವಾಸಮಾಡಿದರೂ ಅವನು ಮೇಲಿಂದ ಮೇಲೆ ಪರನಾಡುಗಳಿಗೆ ಹೋಗುತ್ತಾ ಇದ್ದನು. ಆಗ ಅವನು ವೀರಶೈವ ಧರ್ಮ-ಪ್ರಸಾರಕ್ಕೋಸ್ಕರವೇ ಸಂಚರಿಸುತ್ತಿರಬೇಕು. ಅವನು ಕೊಲ್ಲಾಪುರಕ್ಕೆ ಹೋಗಿ ಗೋರಕ್ಷನೊಡನೆ ವಾದ

ವಿವಾದ ಮಾಡಿದನು. ಮುಂದೆ ಬನವಾಸಿ ಪ್ರಾಂತಕ್ಕೆ ಹೋಗಿ ಅಲ್ಲಿಯ ರಾಜನಿಂದ ಮನ್ನಣೆಯನ್ನು ಹೊಂದಿದನು. ಆಗ ಅವನು ಬನವಾಸಿ ಬಳ್ಳಿಗಾವಿ ಮುಂತಾದ ಸ್ಥಳಗಳಲ್ಲಿ ವಿಶೇಷ ಕ್ರಾಂತಿಯನ್ನು ಮಾಡಿರ ಬಹುದು. ಯಾಕಂದರೆ ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಅನೇಕ ಶಿವ ಶರಣರು ಅಲ್ಲಿ ಆಗಿಹೋದರು.

೪. ಆದರೆ ಅವನು ಚೋಳಮಂಡಲ ಸಿಂಹಲದ್ವೀಪ ಮತ್ತು ಉತ್ತರ ಹಿಂದುಸ್ಥಾನ ಈ ಕಡೆಗೂ ಹೋದಂತೆ ಉಲ್ಲೇಖಗಳಿವೆ. ಆದರೆ ಈ ಐತಿಹ್ಯಗಳು ಬಹು ಪುರಾತನ ಕಾಲದಲ್ಲಿ ಆಗಿ ಹೋದ ರೇಣುಕನಿಗೆ ಸಂಬಂಧಪಟ್ಟವಾಗಿರಬಹುದೆಂದು ನನ್ನ ಅಭಿಪ್ರಾಯವಿರುತ್ತದೆ. ಈ ವಿಷಯವಾಗಿ ನಾನು ಒಂದು ಸವಿಸ್ತಾರವಾದ ಲೇಖನವನ್ನು ಶಿವಾನುಭವ ಸಂಪುಟ ೨ ಸಂಚಿಕೆ ೫ ಪುಟ ೭೯ ಇದರಲ್ಲಿ ಬರೆದಿದ್ದೇನೆ.

೫. ರೇವಣಸಿದ್ಧೇಶ್ವರನು ಈ ಭಾಗದಲ್ಲಿ ಇದ್ದಾಗ್ಗೆ ಮುಖ್ಯವಾಗಿ ಸೊಲ್ಲಾಪೂರ ಮತ್ತು ವಿಜಾಪೂರ ಜಿಲ್ಲೆಗಳಲ್ಲಿ ವೀರಶೈವ ಧರ್ಮದ ಬಗ್ಗೆ ಬಹುದೊಡ್ಡ ಕ್ರಾಂತಿಯನ್ನುಂಟು ಮಾಡಿದನು. ಅವನು ಜನಸಾಮಾನ್ಯರಲ್ಲಿ ವೀರಶೈವ ಧರ್ಮಪ್ರಸಾರ ಮಾಡಿದನು. ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಕಲ್ಯಾಣ ಪಟ್ಟಣದಲ್ಲಿ ಉಪಸ್ಥಿತರಿದ್ದರಷ್ಟೇ. ಆದರೆ ಅವರಲ್ಲಿ ಬಹು ಜನರು ಈ ತದ್ದೇವಾಡಿ ಪ್ರಾಂತದವರೇ ಇರುತ್ತಾರೆ. ಇದು ಸ್ವಾಭಾವಿಕವಿರುತ್ತದೆ. ಯಾಕಂದರೆ ಈ ನಾಡಿನವರೇ ಕಲ್ಯಾಣ ಪಟ್ಟಣಕ್ಕೆ ನೆರೆ ಸೀಮೆಯವರು ಮತ್ತು ಇಲ್ಲಿ ಧಾರ್ಮಿಕ ಚಳವಳಿಗಳೂ ಬಹು ದಿವಸಗಳಿಂದ ನಡೆದಿದ್ದವು. ಬಸವೇಶ್ವರ, ಮಡಿವಾಳ ಮಾಚಿದೇವ, ಗುಡ್ಡಾಪುರದ ದಾಸಮ್ಮ, ಅಮುಗಿ ದೇವ, ಮಧುವರಸ ಈ ಮೊದಲಾದ ಮಹಾನುಭಾವರು ತದ್ದೇವಾಡಿ ಸೀಮೆಯವರೇ ಇದ್ದಾರೆ. ಇವರೆಲ್ಲರೂ ಮಂಗಳವಾಡಕ್ಕೆ ಹೋಗಿ ರೇವಣಸಿದ್ಧೇಶ್ವರನನ್ನು ಕಂಡಿರಬಹುದು. ಅಥವಾ ಅವನ ಬಗ್ಗೆ ಕೇಳಿರಬಹುದು. ಇವರು ಮುಂದೆ ಬಸವನ ಕಾಲದಲ್ಲಿ ನಡಿಸಿದ ಧರ್ಮ ಜಾಗ್ರತಿಯು ತಮ್ಮಕಿಂತಲೂ ಮೊದಲಿನವರಾದ ರೇವಣಸಿದ್ಧೇಶ್ವರ, ಕೊಂಡಗುಳಿಯ ಕೇಶಿರಾಜ, ಹಾವಿನಹಾಳ ಕಲ್ಲಯ್ಯ ಮೊದಲಾದ ಪೂರ್ವದ ಶಿವಶರಣರು ಮಾಡಿದ ಕಾರ್ಯಗಳ ಪರಿಣಾಮವೇ ಸರಿ.

೬. ರೇವಣಸಿದ್ಧೇಶ್ವರನು ಉದಯಕ್ಕೆ ಬಂದಿದ್ದು ಬಿಜ್ಜಳನು ಇನ್ನೂ ಚಾಲುಕ್ಯರಿಗೆ ಮಾಂಡಲೀಕನಾಗಿ ಆಳುತ್ತಿರುವಾಗ್ಗೆ ಮಾತ್ರ. ಅವನು ತರ್ದವಾಡಿ ಪ್ರಾಂತದಲ್ಲಿ ೧೧೫೧ರಲ್ಲಿ ಮಾಂಡಲೀಕನಾಗಿ ಆಳುತ್ತಿದ್ದನು. ಇದು ಶಿಲಾಶಾಸನದಿಂದ ತಿಳಿದು ಬರುತ್ತದೆ. ಆದರೆ ಬಿಜ್ಜಳನು ಚಾಲುಕ್ಯರ ರಾಜ್ಯವನ್ನು ಕೈವಶ ಮಾಡಿಕೊಂಡು ಕಲ್ಯಾಣ ಪಟ್ಟಣದಲ್ಲಿ ಆಳಹತ್ತಿದ ಬಳಿಕ ರೇವಣಸಿದ್ಧೇಶ್ವರನು ಅಸ್ತಿತ್ವದಲ್ಲಿ ಇದ್ದಿದ್ದಿಲ್ಲ. ಶಿವಾನುಭವ ಮಂಟಪದಲ್ಲಿ ಅವನು ಇದ್ದಿದ್ದಿಲ್ಲ. ಅವನು ಇದ್ದ ಕುರುಹುಗಳು ಕಲ್ಯಾಣದಲ್ಲಿ ಏನೂ ಇರುವದಿಲ್ಲ. ಅವು ಕೇವಲ ತರ್ದವಾಡಿ ಸೀಮೆಯಲ್ಲಿ ಮಾತ್ರ ಇವೆ.

೭. ರೇವಣಸಿದ್ಧನ ರಗಳೆಯಲ್ಲಿ ಮಂಗಳವಾಡದ ಉಲ್ಲೇಖವು ಬರುತ್ತದೆ. ಆದರೆ ಈ ಮಂಗಳವಾಡವು ಕಲ್ಯಾಣ ಪಟ್ಟಣವಲ್ಲ. ಆದರೆ ಅದು ಈ ತರ್ದವಾಡಿ ಸೀಮೆಯಲ್ಲಿದ್ದ ಅದೇ ಹೆಸರಿನ ಈಗಿನ ಗ್ರಾಮವೇ ಇರುತ್ತದೆ. ಅವನು ಕಲ್ಯಾಣ ಪಟ್ಟಣ ಮತ್ತು ಮಂಗಳವಾಡ ಎಂದು ಎರಡು ಪಟ್ಟಣಗಳನ್ನು ಬಿಂಗಡಿಸಿ ಹೇಳುತ್ತಾನೆ.

೮. ರೇವಣಸಿದ್ಧೇಶ್ವರನ ಮಗನ ಹೆಸರು ರುದ್ರಮುನಿಯು. ಈತನಾದರೂ ಬಹು ಪ್ರಖ್ಯಾತ ಪುರುಷನಾಗಿದ್ದನೆಂದು ವೀರಶೈವ ಗ್ರಂಥಗಳಿಂದ ತಿಳಿದು ಬರುತ್ತದೆ. ಇವನ ಕಡೆಯಿಂದಲೇ ರೇವಣಸಿದ್ಧನು ಹಾವಿನಹಾಳ ಕಲ್ಲಯ್ಯನಿಗೆ ಶಿವದೀಕ್ಷೆಯನ್ನು ಕೊಡಿಸಿದನು. ಇದರ ಮೇಲಿಂದ ಈ ಪ್ರಾಂತದಲ್ಲಿ ರೇವಣಸಿದ್ಧನು ತನ್ನ ಮಗನು ದೊಡ್ಡವನಾಗುವ ವರೆಗೆ ಅಂದರೆ ಕನಿಷ್ಟ ೨೦-೨೫ ವರ್ಷಗಳ ವರೆಗಾದರೂ ವಾಸವಾಗಿರಬೇಕು.

ಈ ಪ್ರಕಾರ ಕರ್ನಾಟಕ ಇತಿಹಾಸ, ಮತ್ತು ರೇವಣಸಿದ್ಧೇಶ್ವರನ ಚರಿತ್ರೆಗಳಿಂದ ಅನುಮಾನಗಳು ಹೊರಡುತ್ತವೆ. ಬಿಜ್ಜಳನ ಇತಿಹಾಸಕ್ಕೂ ಈಗಿನ ಈ ಭಾಗದಲ್ಲಿ ಕಂಡುಬರುವ ಸ್ಥಾನಿಕ ಕುರುಹುಗಳಿಗೂ ರೇವಣಸಿದ್ಧೇಶ್ವರನ ಚರಿತ್ರೆಗೂ ಬಹಳ ಮೇಳ ಬೀಳುತ್ತದೆ. ಈ ಸಂಗತಿಯು ವಾಚಕರಿಗೆ ಕಂಡುಬರದೆ ಇರಲಾರದು.

ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಅನೇಕ ಅಸಂಬದ್ಧ ಅದ್ಭುತಗಳು ವರ್ಣಿಸಲ್ಪಟ್ಟಿವೆ. ಅವುಗಳಲ್ಲಿ ಅನೇಕವು ಬಹು ಅಸಹ್ಯವಾಗಿವೆ. ಅನೈತಿಕಾಚಾರಗಳೂ ಇವೆ. ಈ ವಿಧದ ವರ್ಣನೆಗಳು ಬಸವೇಶ್ವರ,

ಚನ್ನಬಸವೇಶ್ವರ, ಪ್ರಭುದೇವ ಮೊದಲ್ಗೊಂಡು ಎಲ್ಲ ಶಿವಶರಣರ ಚರಿತ್ರೆಗಳಲ್ಲಿಯೂ ಇರುತ್ತವೆ. ಅವುಗಳೆಲ್ಲ ನಿಜವೆಂದು ಭಾವಿಸಲಿಕ್ಕೆ ಬರಲಾರದು. ವೀರಶೈವ ಪುರಾಣ ಕರ್ತರಿಂದಲೂ ವಿರೋಧಿಗಳಿಂದಲೂ ಶಿವಶರಣರ ಚರಿತ್ರೆಗಳು ಬಹಳ ಕೆಡಿಸಲ್ಪಟ್ಟಿವೆ. ದುರಾಚಾರ ವರ್ತನೆಗಳು ಅವರಿಗೆ ಹಚ್ಚಲ್ಪಟ್ಟಿವೆ. ಇವುಗಳು ನಿಜವೆಂದು ಭಾವಿಸಲಿಕ್ಕೆ ಬರಲಾರದು. ಯಾಕಂದರೆ ದುರಾಚಾರಿಗಳು ಧರ್ಮ ಜಾಗ್ರತಿಯನ್ನು ಎಂದೂ ಮಾಡಲಾರರು. ವಿಶೇಷವಾಗಿ ಕರ್ನಾಟಕವು ೧೧-೧೨ ಶತಮಾನಗಳಲ್ಲಿ ನಾಗರಿಕತೆಯಲ್ಲಿ ಬಹು ಮುಂದುವರಿದ ದೇಶವಾಗಿತ್ತು. ಇಲ್ಲಿ ಆಗ ಜೈನ ಬ್ರಾಹ್ಮಣ ಸಮಾಜಗಳಲ್ಲಿ ಉಚ್ಚ ತರಗತಿಯ ವಿದ್ವಾಂಸರೂ ಕವಿಗಳೂ ಆಗಿ ಹೋದರು. ಇಂಥ ಸಮಾಜಗಳ ಮೇಲೆ ದುರಾಚಾರಿಗಳು ತಮ್ಮ ವರ್ಚಸ್ಸನ್ನು ಕೆಡುಸುವದು ಅಸಂಭವವು. ಹಾಗೆಯೇ ಹೆಚ್ಚಿನ ತರಗತಿಯ ರಾಜರೂ ಆ ಕಾಲಕ್ಕೆ ಇದ್ದರು. ಇಂಥವರಲ್ಲಿ ಬಿಜ್ಜಳನೂ ಒಬ್ಬನು ಇದ್ದಾನೆ. ಅವನು ಅತ್ಯಂತ ಧಾರ್ಮಿಕ ಪುರುಷನಾಗಿದ್ದನು. ಒಂದು ವೇಳೆ ರೇವಣಸಿದ್ಧ, ಬಸವಾದಿಗಳು ಅವರವರ ಪುರಾಣಗಳಲ್ಲಿ ಹೇಳಿದಂತೆ ದುರಾಚಾರಿಗಳಾಗಿದ್ದರೆ ಬಿಜ್ಜಳ ಅಥವಾ ಆಗಿನ ಸಮಾಜಗಳ ಮೇಲೆ ಅವರು ಎಂದೂ ಪರಿಣಾಮವನ್ನು ಮಾಡಲು ಶಕ್ತರಾಗುತ್ತಿದ್ದಿಲ್ಲ. ಆದ್ದರಿಂದ ಇಂಥ ಕಥೆಗಳನ್ನು ನಾವು ನಂಬಲೇ ಬಾರದೆಂದು ನನ್ನ ಸ್ಪಷ್ಟ ಅಭಿಪ್ರಾಯವಿದೆ.

ರೇವಣಸಿದ್ಧೇಶ್ವರನಿಗೂ ಬಿಜ್ಜಳನಿಗೂ ಯಾವ ಸಂಬಂಧವಿತ್ತು ಮತ್ತು ರೇವಣಸಿದ್ಧೇಶ್ವರನು ಯಾವ ಯಾವ ರಾಜಕಾರಣದಲ್ಲಿ ತೊಡಗಿದ್ದನು ಇವೇ ಮೊದಲಾದ ವಿಷಯಗಳನ್ನು ನಾನು ಮುಂದಿನ ಲೇಖದಲ್ಲಿ ವಿಸ್ತರಿಸುತ್ತೇನೆ. ಲೇಖ ವಿಸ್ತಾರಕ್ಕೋಸ್ಕರ ನಾನು ಇಲ್ಲಿಯೇ ವಿರಮಿಸುತ್ತೇನೆ.

ಬಸವೇಶ್ವರನ ತರುವಾಯ ಕೆಲವು ರೇವಣಸಿದ್ಧರೂ ಕರ್ನಾಟಕದಲ್ಲಿ ಉತ್ಪನ್ನರಾಗಿದ್ದಾರೆ. ರೇವಣಸಿದ್ಧನೆಂದರೆ ಅವರಲ್ಲಾರಾದರೂ ಒಬ್ಬರಿರಬಹುದೆಂದು ಕೆಲವರು ಊಹಿಸುತ್ತಾರೆ. ಇದು ತಪ್ಪೆಂತಲೂ ಹಿಂದಿನ ವಿವರಣೆಗಳಿಂದ ತೋರಿ ಬರುವದು.

---

# ಶರಣ ಸಂದೇಶ.

ಶರಣ-ಸಂದೇಶವಿದು! ದೇವನಂತಃಸ್ಫೂರ್ತಿ
ಭಾಷೆಯಿದು! ಆತ್ಮನಾವೇಶವಿದು! ಚಂದ್ರಕಳೆ
ಯನು ತಳೆದು, ಸಚ್ಚಿದಾನಂದದಲಿ ನಿರುತ ಬಳೆ
ಬಳೆದು ಹೊಳೆ ಹೊಳೆಯುತನುಭಾವದಲಿ ಈ ಮೂರ್ತಿ,
ದೇವ-ದರ್ಪಣದಿ ಕಾಂಬಾತ್ಮಬಿಂಬಕೆ ಹಿಗ್ಗಿ
ನಡೆದಿಹುದು, ವಿಶ್ವವನೆ ತನ್ನುಸಿರಿನಲಿ ಸೆಳೆಯೆ!
ಕೋಟಿ-ಸೂರ್ಯರ ಪ್ರಭೆಯು ಇದರ ಪಥದಲಿ ಬುಗ್ಗೆ
ಬುಗ್ಗೆಯೊಲು ಚಿಮ್ಮುತಿದೆ, ತನ್ಮಯತೆ ಮೊಳೆಮೊಳೆಯೆ!
ಕತ್ತಲೆಯು ಕರಕರಗಿ ಬೆಳಕು ಮೈದೋರಿದುದು!
ವಿಷಮತೆಯು ಸಮತೆಯಲಿ ಮೈಗರೆದು ಹಾರಿದುದು!
ಬತ್ತಿದ ಸರೋವರದಿ ಶ್ರೀಪದ್ಮವರಳಿದುದು!
ಕ್ರಾಂತಿ-ಭ್ರಾಂತಿಗಳಳಿದು ಶಾಂತಿಯುಹ! ಮರಳಿದುದು!
ನಿನ್ನುಸಿರಿನಿಂದೆ, ಓ ಶರಣ-ಸಂದೇಶವೇ
ತುಂಬು-ತುಂಬಿಳೆಯು ದಿವ್ಯಾನುಭವ-ಕೋಶವೇ!

— ಈಶ್ವರ ಸಣಕಲ್ಲ

# ಬಸವೇಶ್ವರನಿಗೆ ಬೆರಗಾದವರು.

(ಲೇಖಕರು:— ಎಸ್ ಫ್ಹಿ. ಹಂಜಿ ಬಿ. ಏ. ಹಲಸಿ)

ನಾವು ಯಾರಿಗಾದರೂ ಉನ್ನತ ಸ್ಥಾನವನ್ನು ಕೊಡಬೇಕಾದರೆ ಅವರ ಗುಣಾವಗುಣಗಳನ್ನು ಚನ್ನಾಗಿ ಪರಿಶೀಲಿಸಿ, ವಿಶಾಲ ದೃಷ್ಟಿಯಿಂದ ನೋಡಿ, ವಿಶಾಲ ಹೃದಯದಿಂದ ತಿಳಿದುಕೊಂಡು, ನಿಷ್ಪಕ್ಷಪಾತ ಬುದ್ಧಿಯಿಂದ ವಿಮರ್ಶಾತ್ಮಕ ರೀತಿಯಿಂದ ವಿಚಾರಿಸಬೇಕಾಗುವದು. ಎಷ್ಟೋ ಮಹಾಪುರುಷರು ಯಾರಿಗೂ ತಿಳಿಯದಂತೆ ಗತಿಸಿ ಹೋದರೂ, ಹೀಗೆ ವಿಚಾರ ಮಾಡಿ ಬರೆದವರ ಲೇಖನಗಳಿಂದ ಎಲ್ಲರಿಗೂ ಪರಿಚಿತರಾಗಿ ಜನರ ಹೆಚ್ಚಿನ ಆದರಕ್ಕೆ ಪಾತ್ರರಾಗುತ್ತಾರೆ. ವಿಮರ್ಶಕರ ಪ್ರಭಾವವೇ ಇಂತಹದು ಇರುತ್ತದೆ. ಇಂಗ್ಲಂಡದ ಸುಪ್ರಸಿದ್ಧ ಕವಿಯಾದ ಜಾನ ಮಿಲ್ಟನ್ (*John Milton*) ನು ಪ್ಯಾರಡಾಯಿಜ ಲಾಸ್ಟ (*Paradise Lost*) ಎಂಬ ಉತ್ತಮ ಮಹಾ ಕಾವ್ಯವನ್ನು ಬರೆದಾಗ ಕೆಲವು ಕವಿಗಳಿಗೆ ಗೊತ್ತಿದ್ದರೂ ಅದು ಬಹು ಜನರಿಗೆ ಗೊತ್ತೇ ಇದ್ದಿಲ್ಲ. ಆದರೆ ಮುಂದೆ ದೇಶದಲ್ಲಿ ಶಾಂತತೆಯುಂಟಾದ ಮೇಲೆ ಎಡಿಸನ್ (*Addison*) ನೆಂಬ ಪ್ರಬಂಧ ಲೇಖಕನು ಆ ಕಾವ್ಯದ ವಿಮರ್ಶೆಯನ್ನು ತನ್ನ ಸ್ಪೆಕ್ಟೆಟರ (*The Spectator*) ಎಂಬ ಪತ್ರಿಕೆಯಲ್ಲಿ ಚನ್ನಾಗಿ ಮಾಡಲು ಅಷ್ಟು ದಿವಸಗಳ ವರೆಗೆ ಹುದುಗಿಕೊಂಡಿದ್ದ ಆ ಕಾವ್ಯದ ಮಹತ್ವವು ಎಲ್ಲರಿಗೂ ಗೊತ್ತಾಯಿತು. ಮಹಾಕವಿ ಕಾಲಿದಾಸನ ಅಭಿಜ್ಞಾನ ಶಾಕುಂತಲ ನಾಟಕವನ್ನು ಜರ್ಮನಿಯ ಗಯಟೆ (*Goethe*) ಎಂಬ ಮಹಾಕವಿಯು ಓದಿ ಆನಂದಪಟ್ಟು ಆ ಆನಂದದಲ್ಲಿ ನೃತ್ಯಮಾಡುತ್ತ ಅದನ್ನು ತಲೆಯ ಮೇಲಿಟ್ಟುಕೊಂಡು ನರ್ತಿಸುವಾಗ ಸಹಜವಾಗಿಯೇ ಆ ಕಾವ್ಯದ ಸೊಬಗಿನ ಬಗ್ಗೆ ಅವನ ಹೃದಯದಿಂದ ಕಾವ್ಯ ಮಯವಾದ ನಾಲ್ಕು ಮಾತುಗಳು ಹೊರಬಿದ್ದವು. ಅವುಗಳನ್ನು ಓದಿದಂದಿನಿಂದ ಪಾಶ್ಚಿಮಾತ್ಯರು ಕಾಲಿದಾಸನ ಕಾವ್ಯಗಳನ್ನು ಓದಿ ಅವನ ಕಾವ್ಯ ಪ್ರತಿಭೆಯನ್ನು ಕಂಡು ಆಗ ಅವನನ್ನು *Kalidasa, the Shakespeare of India* ಅಂದರೆ ಕಾಲಿದಾಸನು ಭರತಖಂಡದ ಶೇಕ್ಸಪೀಯರನು ಎಂದು ಮನ್ನಿಸಹತ್ತಿದರು. ಹಾಗೆಯೇ ಬಸವೇಶ್ವರನ ಹೃದಯವನ್ನೂ, ಗುಣಗಳನ್ನೂ, ಕಾರ್ಯಗಳನ್ನೂ ಚನ್ನಾಗಿ ಅಂ

ತವರು ಮಾಡಿದ ವರ್ಣನೆಗಳಿಂದ ಅವನೂ ಒಬ್ಬ ಮಹಾಪುರುಷನು ಎಂದು ಕಂಡುಹಿಡಿಯಬಹುದು. ಅಂದಿನಿಂದ ಇಂದಿನ ವರೆಗೆ ಅವನ ಗುಣಗಾಂಭೀರ್ಯವನ್ನೂ ಕಾರ್ಯಕಲಾಪಗಳನ್ನೂ ಬಗೆಬಗೆಯಿಂದ ಬಣ್ಣಿಸಿದವರು ಅನೇಕರಿರುವರು. ಅವನ ಭಕ್ತಿಯ ಪ್ರಭಾವವನ್ನು ಕಂಡ ಅವನ ಅನುಯಾಯಿಗಳು, ಭಕ್ತರು ಶಿವಶರಣರು ಅವನನ್ನು ಹಲವು ತರದಿಂದ ಹಾಡಿಹರಸಿದ್ದಾರೆ. ಪ್ರತಿಭಾಸಂಪನ್ನ ಕವಿಗಳು ಅವನ ಕೃತಿಗಳಿಂದ ಸ್ಫೂರ್ತಿಯನ್ನು ಪಡೆದು ತಮ್ಮ ಕಾವ್ಯ ನಾಯಕನನ್ನಾಗಿ ಮಾಡಿ ಪುರಾಣ ಕಾವ್ಯಗಳನ್ನು ಒದಗಿಸಿ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿದ್ದಾರೆ. ಸದ್ಯಕ್ಕಂತೂ ಬಸವೇಶ್ವರನ ವಚನಗಳನ್ನು ಓದದವರು, ಅವನು ಮಾಡಿದ ಕಾರ್ಯಗಳನ್ನು ಸ್ಮರಿಸದವರು ಇಲ್ಲವೇ ಇಲ್ಲ ಎಂದು ಹೇಳಬಹುದು. ಸಾಮಾನ್ಯ ಜನರು ಅವನನ್ನು ಹೊಗಳಿದರೆ ಬಹು ಜನರಿಗೆ ಅವರ ಹೊಗಳಿಕೆಯ ಮೇಲೆ ವಿಶ್ವಾಸ ಹುಟ್ಟಲಿಕ್ಕಿಲ್ಲ. ಆದುದರಿಂದ ಅವನ ಗುಣವರ್ಣನೆಯನ್ನು ಮಾಡಿದ ಮಹಾನುಭಾವರಲ್ಲಿ ಸುಪ್ರಸಿದ್ಧವಿದ್ದವರ ಅಭಿಪ್ರಾಯಗಳನ್ನಷ್ಟೇ ನೋಡಬಹುದು.

ಬಸವೇಶ್ವರನು ತನ್ನ ಜೀವಮಾನದಲ್ಲಿಯೇ ಒಳ್ಳೇ ಕೀರ್ತಿಯನ್ನು ಪಡೆದಿದ್ದನು. ಶಿವಾನುಭವ ಮಂಟಪದಲ್ಲಿದ್ದ ಶಿವಶರಣರು ಅವನನ್ನು ಹಲವು ಪರಿಯಿಂದ ವರ್ಣಿಸಿರುವರು. ಅವರೆಲ್ಲರು ಬಸವೇಶ್ವರನ ಸರಳ ಜೀವನ, ಸದಾಚಾರ, ಪರನಾರೀ ಸಹೋದರತ್ವ, ಭಕ್ತರಲ್ಲಿಯ ಉತ್ಕಟ ಪ್ರೇಮ, ಉಚ್ಚತರದ ಧಾರ್ಮಿಕ ವಿಚಾರ, ಉನ್ನತ ಮತ್ತು ವಿಶಾಲ ಹೃದಯ, ಇವುಗಳಿಗೆಲ್ಲ ಮನಸೋತವರಾಗಿದ್ದರು. ಅವರು ತಮ್ಮ ತಮ್ಮ ವಚನಗಳಿಂದಲೇ ಅವನನ್ನು ವರ್ಣನೆ ಮಾಡಿರುವರು. ಅಂಥ ಅನೇಕ ವಚನಗಳನ್ನು ನಾವು ನೋಡಬಹುದು.

ಇವರೆಲ್ಲರಲ್ಲಿಯೂ ಕೇವಲ ಸಹಜ ವೈರಾಗ್ಯಮೂರ್ತಿಯೆನಿಸಿ, ಒಳ್ಳೇ ಪ್ರಖ್ಯಾತಿಯನ್ನು ಹೊಂದಿದ, ಮಾಯಾ ಕೋಲಾಹಲನೂ ನಿತ್ಯ ಪರಿಪೂರ್ಣನೂ ಆದ, ಬಸವೇಶ್ವರನಿಂದ ಸ್ಥಾಪಿತವಾದ ಶೂನ್ಯ ಸಿಂಹಾಸನದ ಆದ್ಯ ಗುರುವಾದ ಅಲ್ಲಮ ಪ್ರಭುವು ಬಸವೇಶ್ವರನನ್ನು ಹೀಗೆ ವರ್ಣಿಸಿರುವನು.

"ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು

ತೊಳಗಿ ಬೆಳಗುತಿರ್ದುದಯ್ಯಾ ಶಿವನ ಪ್ರಕಾಶ. ಆ ಬೆಳಗಿನೊಳಗೊಪ್ಪುತಿರ್ದರಯ್ಯಾ ಅಸಂಖ್ಯಾತ ಭಕ್ತ ಮಹಾಗಣಂಗಳು. ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ?......"

"ಉಪಪಾತಕ ಮಹಾಪಾತಕವ ಮಾಡಿದ ಕರ್ಮಂಗಳು ಕೋಟಾನುಕೋಟಿ ಒಬ್ಬ ಶಿವಶರಣನ ಅಂಗಳವ ಕಂಡಲ್ಲಿ ಹರಿದು ಹೋಹವು ನೋಡಾ. ಅದೇನು ಕಾರಣವೆಂದರೆ ಶಿವಶರಣನಂತರಂಗದಲ್ಲಿ ಶಿವನಿಪ್ಪನಯ್ಯ. ಶಿವನಿದ್ದಲ್ಲಿ ಕೈಲಾಸವಿಪ್ಪುದು. ಕೈಲಾಸವಿದ್ದಲ್ಲಿ ಸರ್ವ ರುದ್ರಗಣಂಗಳಿರ್ಪರು, ಅಷ್ಟಾಷಷ್ಟಿ ತೀರ್ಥಂಗಳಿಪ್ಪವು. ಶಿವನು ಒಲಿದಲ್ಲಿ ಇಸಿತು ನೆಲಸಿಪ್ಪವಯ್ಯ. ಇಂತಪ್ಪ ಶರಣ ಬಸವಣ್ಣನಂಗಳವ ಕಂಡೆನಾಗಿ ಗುಹೇಶ್ವರ ಲಿಂಗನ ಕಂಗಳಿಗೆ ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯ."

"ಬಸವಣ್ಣ ನಿನ್ನ ಕಂಡು ಕಂಡು ಎನ್ನ ತನು ಬಯಲಾಯಿತ್ತು. ಬಸವಣ್ಣ ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರಿಯ ಬಯಲಾಯಿತ್ತು. ಬಸವಣ್ಣ ನಿನ್ನ ನೆನೆನೆನೆದು ಮನ ಬಯಲಾಯಿತ್ತು. ಬಸವಣ್ಣ ನಿನ್ನ ಮಹಾನುಭಾವ ಕೇಳಿ ಕೇಳಿ ಎನ್ನ ಭವ ನಾಸ್ತಿಯಾಯಿತ್ತು. ನಮ್ಮ ಗುಹೇಶ್ವರ ಲಿಂಗದೊಳಗೆ ನೀನಜಾತನೆಂಬುದ ನೆಲೆ ಮಾಡಿ ಭವ ಪಾಶಂಗಳ ಹರಿದಿಪ್ಪೆನಾಗಿ ನಿನ್ನ ಸನ್ನಿಧಿಯಿಂದ ಆನು ಬದುಕಿದೆನು."

ಬಸವೇಶ್ವರನ ಸೋದರಳಿಯನಾದ ಚನ್ನಬಸವೇಶ್ವರನು ಮಹಾಜ್ಞಾನಿಯಾಗಿದ್ದನು ಇವನು ಷಟ್‌ಸ್ಥಲ ಮಹತ್ವವನ್ನು ತಿಳಿಸಿಕೊಟ್ಟು ಹೆಚ್ಚು ಪ್ರಸಾರ ಮಾಡಿ ದೀಕ್ಷೆ ಹೊಂದಿದವರಿಗೆ ಆ ಕ್ರಮದಿಂದ ನಡೆಯಲಿಕ್ಕೆ ಹಚ್ಚಿದನು. ಇವನೂ ಸಹ ಬಸವೇಶ್ವರನನ್ನು ಬಹಳ ಕೊಂಡಾಡಿದನು. ಕೆಳಗಿನ ಆತನ ವಚನಗಳನ್ನು ನೋಡಬಹುದು.

"ಭಕ್ತಿ ಜ್ಞಾನ ವೈರಾಗ್ಯ ಕುಳಸ್ಥಳವ ಹರಹಲೆಂದು ಮರ್ತ್ಯಲೋಕಕ್ಕೆ ಇಳಿತಂದನಯ್ಯಾ ಬಸವಣ್ಣನು. ಪ್ರತಾಚಾರದ ಮುಂದಣ ಕನ್ನಡಕವ ಕಳೆದು ಕರತಳಾಮಳಕವ ಮಾಡಿ ತೋರಿ ಬಂದನಯ್ಯಾ ಬಸವಣ್ಣನು. ಪರವಾದಿ ಬಿಜ್ಜಳ ಒರೆಗಲ್ಲ ಹಿಡಿದು ಶಿವಭಕ್ತಿ ಸಂಪಾದನೆ ಮಾಡುವಲ್ಲಿ ಮೂವತ್ತಾರು ಕೊಂಡೆಯ ಪರಿಹರಿಸಿ ಶಿವಾಚಾರದ ಧ್ವಜವನ್ನೆತ್ತರಿಸಿ ಮೆರೆದನಯ್ಯಾ ಬಸವಣ್ಣನು. ಇದು ಕಾರಣ ಕೂಡಲ

ಚನ್ನಸಂಗಯ್ಯನಲ್ಲಿ ಬಸವಣ್ಣನ ನಿಲವ ಹೊಗಳುವದು ಎನ್ನಳವಲ್ಲ. ನಿನ್ನಳವಲ್ಲ.''

"ಮಾನವ ಭ್ರಮೆಯು ಕಳೆದು ಗುರುವ ಮಾಡಿ ಗುರುಭಕ್ತನಾದನಯ್ಯಾ ಬಸವಣ್ಣನು. ಪ್ರಾಣದ ಭ್ರಮೆಯು ಕಳೆದು ಲಿಂಗವ ಮಾಡಿ ಲಿಂಗಭಕ್ತನಾದನಯ್ಯಾ ಬಸವಣ್ಣನು. ಸಂಸಾರದ ಭ್ರಮೆಯು ಕಳೆದು ಜಂಗಮವ ಮಾಡಿ ಜಂಗಮ ಭಕ್ತನಾದನಯ್ಯಾ ಬಸವಣ್ಣನು. ಈ ತ್ರಿವಿಧದ ಭ್ರಮೆಯು ತ್ರಿಕರಣದಲ್ಲಿ ಕಳೆದು ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯನಾದನಯ್ಯಾ ಬಸವಣ್ಣನು."

"ಶರಣರ ಸಮತೆಯು ನಿಧಿ ಬಸವನಯ್ಯಾ. ಭಕ್ತಿಯ ಬೆಳೆ ಸಿರಿ ಬಸವನಯ್ಯಾ. ಮುಕ್ತಿಯು ತವನಿಧಿ ಬಸವನಯ್ಯಾ. ಸತ್ಯದ ನಿಧಿ ಬಸವನಯ್ಯಾ. ಹರಪದ ಕಮಲ ಭೃಂಗ ಬಸವನಯ್ಯಾ. ಕೂಡಲ ಚನ್ನಸಂಗಯ್ಯನಲ್ಲಿ ಅನುಮಿಷ ಬಸವನಯ್ಯಾ.''

ಪ್ರಸಿದ್ಧ ಶಿವಯೋಗಿಯಾದ ಸಿದ್ಧರಾಮೇಶ್ವರನು ಅಲ್ಲಮಪ್ರಭುವಿನ ಆಜ್ಞೆಯ ಮೇರೆಗೆ ಚನ್ನಬಸವೇಶ್ವರನಿಂದ ದೀಕ್ಷೆಯನ್ನು ಪಡೆದು ಅವರೆಲ್ಲರನ್ನು ಬಹಳ ಕೊಂಡಾಡಿದನು. ಅವನು ಬಸವೇಶ್ವರನನ್ನು ಹೀಗೆ ಹೊಗಳಿರುವನು.

''ಬಸವನ ಹೊಡೆಗೆಡೆಯುವವರ ಬಸವನ ಹೊಗಳದವರ ಬಸವಾಕ್ಷರತ್ರಯದ ಜಪವಿಲ್ಲದ ವೆಸಗೇಡಿ ಮನುಜರ ಎನ್ನತ್ತ ತೋರದಿರಯ್ಯ ತಂದೆ ವಿಷಮಾಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ."

ಬಸವಣ್ಣನೇ ತಾಯಿ. ಬಸವಣ್ಣನೇ ತಂದೆ. ಬಸವಣ್ಣನೇ ಪರಮ ಬಂಧುವೆನಗೆ. ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮ ಹೆಸರಿಟ್ಟ ಗುರು ಬಸವಣ್ಣ ಕೇಳಾ ಪ್ರಭುವೇ."

''ಭಕ್ತಿರೂಪನು ಬಸವನು. ನಿತ್ಯರೂಪನು ಬಸವನು. ಮುಕ್ತಾನಂದ ಸ್ವರೂಪನು ಬಸವಣ್ಣನು. ಸತ್‌ರೂಪನು ಬಸವನು. ಚಿದ್ರೂಪನು ಬಸವನು. ಎತ್ತೆತ್ತ ನೋಡಿದರೆ ಅತ್ತತ್ತ ಪರಿಪೂರ್ಣವಾಗಿಪ್ಪನು. ಬಸವಣ್ಣನಿಂದ ನಿತ್ಯ ಸುಖಿಯಾದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ."

ಪರಮ ವೈರಾಗ್ಯವನ್ನು ತಾಳಿದ ಮಹಾದೇವಿಯಕ್ಕನು ಬಸವೇಶ್ವರನ ಕೀರ್ತಿಯನ್ನು ಕೇಳಿ ಶಿವಾನುಭವ ಮಂಟಪಕ್ಕೆ ಅಕಸ್ಮಾತ್ತಾಗಿ ಬರಲು, ಅವನು ಅವಳನ್ನು ಬಹಳ ಆದರದಿಂದ ಸತ್ಕರಿಸಿದನು. ಆದರೆ ಅಲ್ಲಮಪ್ರಭುವು ಅವಳ ನಿಜ ವೈರಾಗ್ಯವನ್ನು ಪರೀಕ್ಷಿಸಲಿಕ್ಕೆ ಹಲವು ಪ್ರಶ್ನಗಳನ್ನು ಕೇಳುವನು. ಅವಳು ಸಮಾಧಾನದಿಂದ ಅವುಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡುವಳು. ಆಗ ಅವರೆಲ್ಲರು ಅವಳನ್ನು ಬಹಳ ಕೊಂಡಾಡುವರು. ಅವಳೂ ಆ ಶಿವಶರಣರನ್ನೆಲ್ಲ ಬಹಳ ಹೊಗಳುವಳು ಅದರಲ್ಲಿಯೂ ಮುಖ್ಯವಾಗಿ ಬಸವೇಶ್ವರನನ್ನು ಅವಳು ಹಲವು ಪರಿಯಿಂದ ಬಣ್ಣಿಸಿ ತನಗಾದ ಕೃತಜ್ಞತೆಯನ್ನು ತೋರಿಸಿದ್ದಾಳೆ. ಆಕೆಯ ಕೆಳಗಿನ ವಚನಗಳನ್ನು ನೋಡಬಹುದು.

"ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ. ಅಯ್ಯಾ ನಿಮ್ಮ ಶರಣರು ಇದ್ದ ಪುರವೇ ಕೈಲಾಸಪುರವಯ್ಯಾ. ಅಯ್ಯಾ ನಿಮ್ಮ ಶರಣರು ನಿಂದುದೇ ನಿಜ ನಿವಾಸವಯ್ಯಾ. ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತಿ ಕ್ಷೇತ್ರ. ಆನು ಬಸವಣ್ಣನ ಪಾದಕ್ಕೆ ನಮೋ ನಮೋ ಎನುತಿರ್ದೆನು."

"ನಮ್ಮ ಬಸವಣ್ಣನು ಜಗಹಿತಾರ್ಥವಾಗಿ ಮರ್ತ್ಯಕವತರಿಸಿ ವೀರಶೈವ ಮಾರ್ಗವನರುಪುವುದಕ್ಕೆ ಬಾವನ್ನ ವಿವರವನೊಳಕೊಂಡು ಚರಿಸಿಪನದೆಂತೊಡೆ, ಗುರುಕಾರುಣ್ಯ ವೇದ್ಯನು. ವಿಭೂತಿ ರುದ್ರಾಕ್ಷಿ ಧಾರಕನು. ಪಂಚಾಕ್ಷರೀ ಭಾಷಾಸಮೇತನು. ಲಿಂಗಾಂಗ ಸಂಬಂಧಿ. ನಿತ್ಯ ಲಿಂಗಾರ್ಚಕನು. ಅರ್ಪಿತದಲ್ಲಿ ಅವಧಾನಿ. ಪಾದೋದಕ ಪ್ರಸಾದ ಗ್ರಾಹಕನು. ಗುರುಭಕ್ತಿ ಸಂಪನ್ನನು. ಏಕ ಲಿಂಗ ನಿಷ್ಠಾಪರನು. ಚರಲಿಂಗ ಲೋಲುಪ್ತನು. ಶರಣ ಸಂಗಮೇಶ್ವರನು ತ್ರಿವಿಧಕ್ಕಾಯುತನು. ತ್ರಿಕರಣ ಶುದ್ಧನು. ತ್ರಿವಿಧ ಲಿಂಗಾಂಗ ಸಂಬಂಧಿ. ಅನ್ಯ ದೈವಸ್ಮರಣೆಯ ಹೊದ್ದ. ಭವಿಯ ಸಂಗವ ಮಾಡ. ಭವಿ ಪಾಕವ ಮುಟ್ಟ. ಪರಸ್ತ್ರೀಯರ ಬೆರಸ. ಪರಧನವನೊಲ್ಲ. ಪರನಿಂದೆಯನಾಡ. ಅನೃತವ ನುಡಿಯ. ತಾಮಸಭಕ್ತರ ಸಂಗವ ಮಾಡ. ಗುರುಲಿಂಗಜಂಗಮಕ್ಕೆ ಅರ್ಥ ಪ್ರಾಣಾಭಿಮಾನ ಮುಂತಾದವೆಲ್ಲವ ಸಮರ್ಪಿಸಿ ಪ್ರಸಾದಮುಂತಾಗಿ ಭೋಗಿಸುವ. ಜಂಗಮನಿಂದೆಯ ಸೈರಿಸ. ಪ್ರಸಾದನಿಂದೆಯ ಕೇಳ. ಅನ್ಯರನಾಸೆಗೆಯ್ಯ. ಪಾತ್ರಾಪಾತ್ರವನರಿವ. ಚತುರ್ವಿಧ ಪದ

ವಿಯ ಹಾರ. ಅರಿಷಡ್ವರ್ಗಕ್ಕೆ ಅಳುಕ. ಕುಲಾದಿ ಮದಂಗಳ ಬಗೆಗೊಳ್ಳ. ದ್ವೈತಾದ್ವೈತ ನುಡಿವನಲ್ಲ. ಸಂಕಲ್ಪ ವಿಕಲ್ಪವ ಮಾಡುವವನಲ್ಲ. ಕಾಲೋಚಿತವ ಬಲ್ಲ ಕ್ರಮಯುಕ್ತನಾಗಿ ಷಟ್‌ಸ್ಥಲಭರಿತ. ಸರ್ವಾಂಗಲಿಂಗಿ. ದಾಸೋಹ ಸಂಪನ್ನ. ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀಪಾದಕ್ಕೆ ಅಹೋರಾತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ, ಚನ್ನಮಲ್ಲಿಕಾರ್ಜುನಾ "

ಮೇಲಿನ ಕೊನೆಯ ವಚನದಿಂದ ಬಸವೇಶ್ವರನು ವೀರಶೈವನಿಗೆ ಅವಶ್ಯವಿದ್ದ ಐವತ್ತೆರಡು ಗುಣಗಳಿಂದ ಸಂಪನ್ನನಾಗಿದ್ದನೆಂಡು ಕಂಡು ಬರುವದು. ಶಿವಾನುಭವ ಮಂಟಪದ ಉಳಿದ ಶಿವಶರಣರೂ ಅವನನ್ನು ಹೀಗೆ ವಿವಿಧ ರೀತಿಯಿಂದ ತಮ್ಮ ವಚನಗಳಲ್ಲಿ ವರ್ಣಿಸಿರುವರು.

ತರುವಾಯ ವೀರಶೈವ ಕವಿಗಳಲ್ಲಿ ಅನೇಕರು ಬಸವೇಶ್ವರನ ಚರಿತ್ರವನ್ನು ಕಾವ್ಯರೂಪದಿಂದ ಒದಗಿಸಿ ಕೊಟ್ಟಿದ್ದಾರೆ. ಹರಿಹರ ಮಹಾಕವಿಯು ಬಸವರಾಜದೇವ ರಗಳೆಯನ್ನು ಬರೆದು ಆತನ ಜೀವನ ಚರಿತ್ರವನ್ನು ಚಿತ್ರಿಸಿದನು. ಪಾಲ್ಕುರಿಕೆಯ ಸೋಮನು ತೆಲಗು ಭಾಷೆಯಲ್ಲಿ ಬರೆದ ಬಸವ ಪುರಾಣದ ಆಧಾರದಿಂದ ಕನ್ನಡದಲ್ಲಿ ಭೀಮಕವಿಯು ಬಸವ ಪುರಾಣವನ್ನು ಷಟ್ಪದಿ ಪದ್ಯಗಳಲ್ಲಿ ರಚಿಸಿದನು. ಇದು ವೀರಶೈವರಲ್ಲಿ ಜನಪ್ರಿಯ ಗ್ರಂಥವಾಗಿರುತ್ತದೆ. ಇದರಲ್ಲಿ ಬಸವೇಶ್ವರನು ನಂದಿಯ ಅವತಾರನಾಗಿ ಬಂದು ವೀರಶೈವ ಮತವನ್ನು ಪುನರುಜ್ಜೀವನಗೊಳಿಸಿದನೆಂದು ಹೇಳಿದೆ. ಮತ್ತು ಬಸವೇಶ್ವರನು ವಿಷವನ್ನು ಅಮೃತವನ್ನಾಗಿ ಮಾಡುವದು ಸೂರ್ಯನನ್ನು ನಿಲ್ಲಿಸುವದು ಮೊದಲಾದ ಪವಾಡಗಳನ್ನು ಮಾಡಿದ ಕಥೆಗಳನ್ನು ಅದರಲ್ಲಿ ಹೇಳಿರುವನು. ಇವನ ತರುವಾಯ ಸಿಂಗಿರಾಜನೆಂಬವನು 'ಮಹಾ ಬಸವರಾಜ ಚರಿತ್ರ'ವೆಂಬ ಮತ್ತೊಂದು ಬಸವೇಶ್ವರನ ಚರಿತ್ರವನ್ನು ಒದಗಿಸಿಕೊಟ್ಟನು. ಇದು ಸಿಂಗಿರಾಜಪುರಾಣವೆಂದು ಪ್ರಸಿದ್ಧವಾಗಿದೆ. ಇದರಲ್ಲಿ ೮೮ ಪವಾಡಗಳ ವರ್ಣನೆ ಇರುವದು. ಮುಂದೆ ಉಭಯ ಕವಿತಾ ವಿಶಾರದನಾದ ಷಡಕ್ಷರದೇವನು ಬಸವೇಶ್ವರ ಚರಿತ್ರವನ್ನು ಚಂಪೂರೂಪದಲ್ಲಿ ವೃಷಭೇಂದ್ರ ವಿಜಯ ವೆಂಬ ಹೆಸರಿನಿಂದ ಒಂದು ಕಾವ್ಯವನ್ನಾಗಿ ಒದಗಿಸಿಕೊಟ್ಟನು. ತರುವಾಯ ಮರುಳಸಿದ್ಧನು ಬಸವರಾಜನ ಪವಾಡಗಳು ಎಂಬ ಗ್ರಂಥ

ವನ್ನು ಗದ್ಯದಲ್ಲಿ ರಚಿಸಿದನು. ಇದರಲ್ಲಿ ಆತನ ಪವಾಡಗಳು ೩೬೦ ರವರೆಗೆ ಇರುವವು. ಇವುಗಳಲ್ಲಿ ಅಲ್ಲದೆ, ಚಾಮರಸನು ರಚಿಸಿದ ಪ್ರಭುಲಿಂಗ ಲೀಲೆಯಲ್ಲಿಯೂ, ವಿರುಪಾಕ್ಷ ಪಂಡಿತನು ರಚಿಸಿದ ಚೆನ್ನಬಸವಪುರಾಣದಲ್ಲಿಯೂ ಬಸವೇಶ್ವರನ ಚರಿತ್ರವು ಸಿಗುವದು. ಮುಂದೆ ಶಿವಶರಣರ ವಚನಗಳನ್ನೆಲ್ಲ ವ್ಯವಸ್ಥಿತ ರೀತಿಯಿಂದ ಸಂಗ್ರಹಿಸಿ ಗೂಳೂರ ಸಿದ್ಧ ವೀರಣಾರ್ಯರು ಮೊದಲಾದವರು ರಚಿಸಿದ ಶೂನ್ಯಸಂಪಾದನೆಯೆಂಬ ಗ್ರಂಥವು ಬಸವೇಶ್ವರನ ಮತ್ತು ಆತನ ಅನುಯಾಯಿಗಳ ವಿಚಾರಗಳನ್ನು ತಿಳಕೊಳ್ಳಲಿಕ್ಕೆ ಯೋಗ್ಯವಿರುತ್ತದೆ.

ಈ ಎಲ್ಲ ಪುರಾಣ ಕಾವ್ಯಗಳಲ್ಲಿ ಬಸವೇಶ್ವರನ ಚರಿತ್ರವು ಪವಾಡಗಳನ್ನೊಡಗೂಡಿರುವದರಿಂದ ಆಧುನಿಕ ವಿಜ್ಞಾನದ ಯುಗದಲ್ಲಿ, ಅವನ ವಿಷಯವಾಗಿ ಹೇಳಿದ ಕೆಲವು ಸಂಗತಿಗಳು ನಂಬಲಿಕ್ಕೆ ಅನರ್ಹವಾಗಿವೆ. ಆದರೂ ಕಾವ್ಯಗಳಾಗಿರುವದರಿಂದ ಅವುಗಳನ್ನು ಓದಿ ಆನಂದಪಟ್ಟು ವಿಮರ್ಶಕ ಬುದ್ಧಿಯಿಂದ ಅವುಗಳನ್ನು ಚನ್ನಾಗಿ ಪರಿಶೀಲಿಸಿ, ಜೊಳ್ಳು ಭಾಗಗಳನ್ನು ಬಿಟ್ಟು ಗಟ್ಟಿ ಮತ್ತು ನಿಜವಿರಬಹುದಾದ ಕೆಲವು ಅಂಶಗಳನ್ನು ಗ್ರಹಿಸಬಹುದು. ಈ ಕವಿಗಳೆಲ್ಲರೂ ತಮ್ಮ ವೀರಶೈವ ಧರ್ಮದ ಅಭಿಮಾನದಿಂದ ಬಸವೇಶ್ವರನನ್ನು ಪ್ರತ್ಯಕ್ಷ ದೇವರೆಂದಾಗಲಿ ಇಲ್ಲವೆ ಅವತಾರ ಪುರುಷನೆಂದಾಗಲಿ ತಿಳಿದು ಕೊಂಡು ತಮ್ಮ ಕಾವ್ಯಪ್ರತಿಭೆಯಿಂದ ಕಾವ್ಯಸೃಷ್ಟಿಯಲ್ಲಿ ನಿರ್ಮಾಣ ಮಾಡಿರುವರು. ಆದುದರಿಂದ ಇಲ್ಲಿ ಬಸವೇಶ್ವರನ ಗುಣವರ್ಣನೆಯು ಅತಿಶಯವಾಗಿ ಆಯಿತೆಂದು ಹೇಳಬಹುದು. ಆದರೂ ಸಹ ಬಸವೇಶ್ವರನು ಗತಿಸಿದ ನಂತರ ಆತನ ಕೀರ್ತಿಯು ಅಲ್ಲಿಯೇ ನಿಂತು ಹೋಗಲಿಲ್ಲ. ಆದರೆ ಶತಮಾನಗಳ ವರೆಗೆ ಎಲ್ಲೆಡೆಯಲ್ಲಿಯೂ ಹಬ್ಬಿತೆಂದು ಅನ್ನಬಹುದು. ಪುರಾಣ ಕಾವ್ಯಗಳು ಮುಗಿದ ಮೇಲೆ ಬ್ರಿಟಿಶರ ಆಳಿಕೆಯಲ್ಲಿ ವಿದ್ಯಾ ಪ್ರಸಾರವು ಹೆಚ್ಚಾಗಲು ಪಾಶ್ಚಾತ್ಯ ಪದ್ಧತಿಯಂತೆ ಇಲ್ಲಿಯೂ ಹಿಂದಿನ ಗ್ರಂಥಗಳನ್ನು ಅಭ್ಯಾಸ ಮಾಡುವ ಕುತೂಹಲವು ಹುಟ್ಟಿತು. ಐತಿಹಾಸಿಕ ಶೋಧಗಳೂ ನಡೆದವು. ಇದರಿಂದ ಬಸವೇಶ್ವರನ ಸಂಬಂಧದ ಗ್ರಂಥಗಳನ್ನು ಶೋಧಿಸಲು ಅನುಕೂಲವಾಯಿತು. ಅವುಗಳನ್ನು ಶೋಧಿಸಿ ಅಂದವಾಗಿ ಮುದ್ರಿಸಿ ಸುಲಭ ಬೆಲೆಗೆ ಸಿಗುವಂತೆ ವ್ಯವಸ್ಥೆಯಾಯಿತು. ಹೀಗೆ ಬಸವೇಶ್ವರನ ಮತ್ತು ಉಳಿದ ಶಿವಶರಣರ ಅಭ್ಯಾ

ಸವು ನಡೆಯಿತು. ಶ್ರೀಯುತ ಹರ್ಡೇಕರ ಮಂಜಪ್ಪನವರು ಬಸವ ಚರಿತ್ರವನ್ನು ಐತಿಹಾಸಿಕ ಆಧಾರಗಳಿಂದ ರಚಿಸಿದರು. ಮತ್ತು ಅವರು ಈಗ್ಯೂ ತಮ್ಮ ಶರಣ ಸಂದೇಶದ ಮುಖಾಂತರ ಬಸವಾದಿ ಪ್ರಮಥರ ತತ್ವಗಳನ್ನು ಪ್ರಸಾರ ಮಾಡುತ್ತಲಿದ್ದಾರೆ. ಆದರೆ ಬಸವೇಶ್ವರನ ಮತ್ತು ಉಳಿದ ವಚನಕಾರರ ವಚನಗಳನ್ನು ಒಂದು ವ್ಯವಸ್ಥಿತ ರೀತಿಯಿಂದ ಅಂದವಾಗಿ ಮುದ್ರಿಸಿ ಕನ್ನಡಿಗರಿಗೆ ಮೊದಲು ಪರಿಚಯಮಾಡಿ ಕೊಟ್ಟವರೆಂದರೆ ರಾವಸಾಹೇಬ ಹಳಕಟ್ಟಿಯವರು. ಇವರು ತಮ್ಮ ಅಗಾಧವಾದ ವಿದ್ವತ್ಪರಿಶ್ರಮದಿಂದ ಸಂಶೋಧನ ಮಾಡಿ "ವಚನಶಾಸ್ತ್ರಸಾರ"ವೆಂದ ವಚನ ಸಂಗ್ರಹದ ಗ್ರಂಥವನ್ನು ಮೊದಲು ಪ್ರಕಟಿಸಿದರು. ಮುಂದೆ "ಶಿವಾನುಭವ" ವೆಂಬ ಪತ್ರಿಕೆಯನ್ನು ಹೊರಡಿಸಿ ಬಸವೇಶ್ವರ, ಮಹಾದೇವಿಯಕ್ಕ, ಅಲ್ಲಮ ಪ್ರಭು, ಸಿದ್ಧರಾಮೇಶ್ವರ ಇವರ ವಚನಗಳನ್ನೂ ಮತ್ತು ಶೂನ್ಯಸಂಪಾದನೆ ಮೊದಲಾದ ವಚನ ಗ್ರಂಥಗಳನ್ನೂ ಪ್ರಕಟ ಮಾಡಿದರು. ಮತ್ತು ಈಗ್ಯೂ ಅವರು ತಮ್ಮ ಶಿವಾನುಭವ ಪತ್ರಿಕೆಯ ಮುಖಾಂತರ ವಚನ ವಾಙ್ಮಯದ ಬಗ್ಗೆ ಇನ್ನೂ ಸಂಶೋಧನಮಾಡಿ ಕನ್ನಡಿಗರಿಗೆ ಉಪಕಾರ ಮಾಡುತ್ತಲಿದ್ದಾರೆ.

ಹೊಸ ರೀತಿಯಿಂದ ಅಭ್ಯಾಸ ಮಾಡಲಿಕ್ಕೆ ಅವರವರ ವಚನಗಳೇ ದೊರೆತದ್ದರಿಂದ ಅವುಗಳ ಮೇಲಿಂದಲೂ, ಹಿಂದಿನ ಪುರಾಣ ಕಾವ್ಯಗಳು, ಶಿಲಾಶಾಸನಗಳು ಮತ್ತು ಅನೇಕ ಐತಿಹಾಸಿಕ ಆಧಾರಗಳಿಂದ ಅವರವರ ಜೀವನ ಚರಿತ್ರಗಳನ್ನು ಕಂಡು ಹಿಡಿಯಲಿಕ್ಕೆ ಅನುವಾಯಿತು. ಇದರಿಂದ ಬಸವೇಶ್ವರನನ್ನು ಅನೇಕರು ಅಭ್ಯಾಸಮಾಡಿದ್ದರಿಂದ ಪುನಃ ಆತನ ಮೇಲೆ ವಿಮರ್ಶಾತ್ಮಕ ಲೇಖಗಳೂ, ಗ್ರಂಥಗಳೂ ಹುಟ್ಟಹತ್ತಿದವು. ಸ್ವಮತದವರೂ ಪರಮತದವರೂ ನಿಷ್ಪಕ್ಷಪಾತ ಮತ್ತು ವಿಮರ್ಶಕ ಬುದ್ಧಿಯಿಂದ ಅಭ್ಯಾಸಮಾಡಿ ಒಳ್ಳೇ ಅಭಿಪ್ರಾಯವುಳ್ಳ ಉದ್ಗಾರಗಳನ್ನು ತೆಗೆದಿರುವರು. ಹಿಂದಿನ ಪುರಾಣದೊಳಗಿನ ಪವಾಡಗಳನ್ನು ನಂಬದಿದ್ದರೂ ಈಗಿನವರ ಅಭಿಪ್ರಾಯಗಳನ್ನು ನಂಬಿದರೂ ಸಹ ಬಸವೇಶ್ವರನು ಒಬ್ಬ ಮಹಾಪುರುಷನೇ ಎಂದು ಸಿದ್ಧವಾಗುವದು.

ಕಳೆದ ೧೨೦ ವರ್ಷಗಳಿಂದ ಒಳ್ಳೇ ಊರ್ಜಿತ ಸ್ಥಿತಿಯಿಂದ ನಡೆದು ಬಂದು ಈಗ್ಯೂ ಒಳ್ಳೇ ವೈಭವದಿಂದ ಮುಂಬಯಿಯಿಂದ ಪ್ರತಿ ದಿನ

ಹೊರಡುತ್ತಿರುವ ಟಾಯಿಮ್ಸ್ ಆಫ್ ಇಂಡಿಯಾ (*The Times of India*) ಎಂಬ ಜಗತ್ಪ್ರಸಿದ್ಧ ಪತ್ರಿಕೆಯ ತಾರೀಖು ೧೭-೫-೧೯೧೮ನೆಯ ಸಂಚಿಕೆಯಲ್ಲಿ ಬಸವೇಶ್ವರನ ವಿಷಯವಾಗಿ ಹೀಗೆ ಪ್ರಕಟವಾಗಿದೆ.

"It was the distinctive feature of his mission that while illustrious religious and social reformers in India before him had each laid his emphasis on one or other items of religious and social reform, either subordinating more or less other items to it, or ignoring them altogether, Basawa sketched and boldly tried to work out a large and comprehensive programme of social reform with the elevation and independance of womanhood as its guiding point.

Neither social conferences which are annually held in these days in several parts of India, nor Indian social reformers, can improve upon that programme as to the essentials. As was in substance remarked by the late Sir James Campbell, whose knowledge of Indian History, customs and manners was almost phenominal, the present day social reformer in India is but speaking the language and seeking to enforce the mind of Basawa."

"ಭರತಖಂಡದಲ್ಲಿ ಬಸವನಿಗಿಂತ ಪೂರ್ವದಲ್ಲಿ ಪ್ರಸಿದ್ಧರಾದ ಧರ್ಮ ಮತ್ತು ಸಮಾಜ ಸುಧಾರಕರು ಆ ಆ ವಿಷಯಗಳಿಗೆ ಸಂಬಂಧಪಟ್ಟ ಯಾವುದಾದರೊಂದು ಸಂಗತಿಗಷ್ಟೇ ಹೆಚ್ಚು ಮಹತ್ವವನ್ನು ಕೊಟ್ಟು ಅನ್ಯ ವಿಷಯಗಳನ್ನು ಅಲಕ್ಷಿಸಿದ್ದರು. ಇಲ್ಲವೆ ಅವುಗಳಿಗೆ ಮಹತ್ವ ಕೊಟ್ಟಿದ್ದರು. ಆದರೆ ಬಸವನು ಸ್ತ್ರೀಯರ ಸ್ವಾತಂತ್ರ್ಯ ಮತ್ತು ಅಭಿವೃದ್ಧಿಗಳನ್ನೇ ಮುಂದಿಟ್ಟುಕೊಂಡು ಸಮಾಜ ಸುಧಾರಣೆಯ ಸರ್ವಾಂಗ ವಿಶಿಷ್ಟವಾದ ಬಹು ದೊಡ್ಡ ಕಾರ್ಯಕ್ರಮವನ್ನು ಗೊತ್ತುಮಾಡಿ ಅದನ್ನು ಬಳ್ಳೇ ಧೈರ್ಯದಿಂದ ಸಾಗಿಸಿದನು.

ಈಗ ಭರತಖಂಡದಲ್ಲಿ ಎಲ್ಲ ಭಾಗಗಳಲ್ಲಿ ಕೂಡುತ್ತಿರುವ ಸಾಮಾಜಿಕ ಪರಿಷತ್ತುಗಳಾಗಲಿ ಇಲ್ಲವೆ ಈ ದೇಶದ ಸಮಾಜ ಸುಧಾರಕರಾಗಲಿ ಬಸವನ ಕಾರ್ಯಕ್ಕಿಂತ ಹೆಚ್ಚಿನದಾವುದನ್ನೂ ಮಾಡಲಾರರು. ಭರತಖಂಡದ ಇತಿಹಾಸ ಮತ್ತು ಭಾರತೀಯರ ಆಚಾರಗಳನ್ನೂ ಪದ್ಧತಿಗಳನ್ನೂ ಬಹು ಚನ್ನಾಗಿ ಬಲ್ಲ ಸರ್ ಜೇಮ್ಸ ಕ್ಯಾಂಬೆಲರವರು ಹೇಳಿರುವಂತೆ ಭರತಖಂಡದ ಈಗಿನ ಸಮಾಜ ಸುಧಾರಕರು ಬಸವನ ನುಡಿಯನ್ನೇ ನುಡಿಯುತ್ತಲೂ ಆತನ ತತ್ವಗಳನ್ನೇ ಪ್ರತಿಪಾದಿಸುತ್ತಲೂ ಇದ್ದಾರೆ."

ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದವರೂ, ಇತಿಹಾಸ ಪ್ರೇಮಿಗಳೂ, ಮುಂಬಯಿ ವಿಶ್ವವಿದ್ಯಾಲಯದ ಸಭಾಸದರೂ ಶಿಕ್ಷಣದ ಪವಿತ್ರಕಾರ್ಯಕ್ಕೆ ತಮ್ಮ ಜೀವನವನ್ನೇ ಅರ್ಪಣ ಮಾಡಿ ಹಗಲಿರುಳು ಪ್ರಯತ್ನಪಡುತ್ತಿರುವವರೂ, ಉತ್ತಮ ಲೇಖಕರೂ ಆದ ಪ್ರೊಫೆಸರ ಎಸ್. ಎಸ್ ಬಸವನಾಳ ಎಂ. ಎ., ಎಂ ಆರ್. ಏ ಎಸ್. ಲಿಂಗರಾಜ ಕಾಲೇಜ ಬೆಳಗಾವ, ಇವರು ಚನ್ನಬಸವ ಪುರಾಣದ ವಿಮರ್ಶಾತ್ಮಕ ಪ್ರಸ್ತಾವನೆಯ ೧೮-೧೯ನೆಯ ಪುಟಗಳಲ್ಲಿ ಬಸವೇಶ್ವರನ ವಿಷಯವಾಗಿ ಬಳ್ಳೇ ಮನೋಹರವಾಗಿ ಹೀಗೆ ಹೇಳಿದ್ದಾರೆ.

"ವೀರಶೈವ ಮತಪ್ರಸಾರದ ಕಾರ್ಯದಲ್ಲಿ ಬಸವೇಶ್ವರರೇ ಮೊದಲಿಗರೆನ್ನಬಹುದು. ಅಷ್ಟಾವರಣ-ಪಂಚಾಚಾರಗಳೆಂಬ ವಿಶಿಷ್ಟ ತತ್ವಗಳನ್ನು ಬಳಿಕೆಯಲ್ಲಿ ತಂದು, ಅವುಗಳ ಸಾಧನದಿಂದ ವ್ಯಕ್ತಿ ಹಾಗು ವಿಚಾರ-ಸ್ವಾತಂತ್ರ್ಯ, ಸ್ತ್ರೀ-ಪುರುಷರಲ್ಲಿ ಸಮಾನತೆ, ವರ್ಣಾಶ್ರಮ-ಧರ್ಮದ ನಿರಾಕರಣೆ, ಕಾಯಕದ ಮಹತ್ವ, ಪೂರ್ವ-ಕರ್ಮ ಪುನರ್ಜನ್ಮಗಳ ನಿರಸನ, ಜಾತಿ-ಜನನ-ಪ್ರೇತ-ಉಚ್ಛಿಷ್ಟ-ರಜಸ್ಸು ಈ "ಸೂತಕ" ಗಳಿಂದ ಉಂಟಾದ ಅಸ್ಪೃಶ್ಯತೆಯ ನಿವಾರಣೆ ಇವೇ ಮೊದಲಾದ ವಿಶಾಲ-ದೃಷ್ಟಿಯ ಆಚರಣೆಗಳನ್ನು ರೂಢಿಯಲ್ಲಿ ತಂದು, ವೀರಶೈವ ಮತವನ್ನು ವಿಶ್ವಮತವನ್ನಾಗಿಯೇ ಮಾಡಿದರು. ಜ್ಞಾನಯುಕ್ತವಾದ ನಿಷ್ಕಾಮ ಕರ್ಮ, ಶುದ್ಧಾಚರಣೆ, ಶೀಲಸಂಪನ್ನತೆ, ಮೊದಲಾದ ಅತ್ಯುಚ್ಚ ನಡೆವಳಿಕೆಯಿಂದ ಕೂಡಿದ ಬಸವೇಶ್ವರರು ತಮ್ಮ ಸಹಕಾರಿಗಳಾದ ಶಿವಶರಣರಿಗೂ ಕೂಡ ಗುರುಸ್ಥಾನದಲ್ಲಿದ್ದರಾದರೂ ತಾವು ಮಾತ್ರ 'ಭಕ್ತಿ ಭಾಂಡಾರಿ' ಗಳಾಗಿ ಭಕ್ತಿಸ್ಥಳದಲ್ಲಿಯೇ ನಿಂತರು."

ಮತ್ತು ಅವರು ತಮ್ಮ "ಹಿಂದುಸ್ಥಾನದ ಇತಿಹಾಸ" ವೆಂಬ ಗ್ರಂಥದಲ್ಲಿ ಬಸವೇಶ್ವರನ ಚರಿತ್ರೆಯನ್ನು ಬರೆಯುವಾಗ ಆತನು ಮಾಡಿದ ಕನ್ನಡ ಸಾಹಿತ್ಯದ ಸೇವೆಯ ಬಗ್ಗೆ ಹೀಗೆ ಬರೆದಿರುವರು.

"ಮತತತ್ವಗಳು ಸಾಮಾನ್ಯ ಜನತೆಯಲ್ಲಿ ಬೇರೂರಬೇಕಾದರೆ ದೇವ (ಗೀರ್ವಾಣ) ಭಾಷೆಗಿಂತಲೂ ಜನರ ಭಾಷೆಯೇ ತಕ್ಕುದೆಂದು ತಿಳಿದು ಬಸವೇಶ್ವರನು ಕನ್ನಡ ವಚನ ಗ್ರಂಥಗಳಿಗೆ ಪ್ರೋತ್ಸಾಹವಿನ್ನಿತ್ತನು. ಈ ಗ್ರಂಥಗಳಲ್ಲಿ ವೀರಶೈವ ತತ್ವ ಮೊದಲಾದವುಗಳು ಸರಳವಾದ, ಸರಸವಾದ, ಮೃದುಮಧುರವಾದ ಕನ್ನಡ ಗದ್ಯದಲ್ಲಿ ಬರೆಯಲ್ಪಟ್ಟಿದ್ದರಿಂದ ವಚನವೆಂಬ ನೂತನವಾದ, ಅಲೌಕಿಕವಾದ, ಲಲಿತವಾದ ಭಾಷಾಸರಣಿಯೇ ಉದ್ಭವವಾಗಿ ಕರ್ನಾಟಕ ಸಾಹಿತ್ಯಕ್ಕೆ ಅಪೂರ್ವ ಕಳೆಯೇರಲು ಮಾರ್ಗವಾಯಿತು."

ಸುಪ್ರಸಿದ್ಧ ಶ್ರೀಯುತ ಚಂದ್ರಶೇಖರ ಶಾಸ್ತ್ರಿಗಳು ಬಸವೇಶ್ವರನ ಸಂಬಂಧ ತೆಗೆದ ಉದ್ಗಾರವು ಅನೇಕ ಕನ್ನಡ ವೃತ್ತಪತ್ರಿಕೆಗಳಲ್ಲಿ ಹೀಗೆ ಪ್ರಕಟವಾಗಿದೆ.

"ಅಣ್ಣ ಬಸವಣ್ಣನ ಮಹತ್ಕಾರ್ಯಗಳು:— ಯಾವ ಮಹನೀಯನಾದ ಬಸವೇಶನು ವೀರಶೈವ ಸಮಾಜವು ಬಹಳ ಶೋಚನೀಯ ಅವಸ್ಥೆಯಲ್ಲಿದ್ದಾಗ ಭಗವಂತನನುಜ್ಞೆಯಿಂದವತರಿಸಿ, ಅದ್ಭುತ ಧಾರ್ಮಿಕ ಕ್ರಾಂತಿಯನ್ನು ಮಾಡಿಸಿ, ಅಸ್ಪೃಶ್ಯವರಣಗಳಲ್ಲಿ ಚೈತನ್ಯ ಹುಟ್ಟಿಸಿ ಕರ್ನಾಟಕ ದೇಶವನ್ನು ಬಡಿವೆಬ್ಬಿಸಿ ಯಜ್ಞಯಾಗಾದಿಗಳಿಂದ ಆಗತಕ್ಕ ಹಿಂಸೆಯನ್ನು ನಿಲ್ಲಿಸಿ, ಶಿವಾನುಭವ ಗೋಷ್ಠಿಯನ್ನು ಸ್ಥಾಪಿಸಿ, ಗುರುಲಿಂಗ ಜಂಗಮರ ತತ್ವವನ್ನು ಪಸರಿಸಿ ಕರ್ನಾಟಕ ಭಾಷೆಗೆ ಹೊಸ ಸಂಸ್ಕಾರವನ್ನು ಕೊಡಿಸಿ, ದಕ್ಷಿಣ ಹಿಂದುಸ್ಥಾನದ ಲೂಥರನೆನಿಸಿ, ನುಡಿಯಂತೆ ನಡೆಯುತಕ್ಕವರಲ್ಲಿ ಅಗ್ರೇಸರನೆನಿಸಿ ತಾನು ಗುರುವಾಗದೇ ಜಂಗಮನಾಗದೇ ಇದ್ದರೂ ಗುರು ಜಂಗಮರ ಸ್ವರೂಪನಾಗಿ ೮೦೦ ವರ್ಷಗಳಿಂದ ವೀರಶೈವರ ರಕ್ತದಲ್ಲಿ ಬೆರೆದು ಹೋದ ಆ ಮಂತ್ರ ಮೂರ್ತಿಯಾದ ಬಸವೇಶ್ವರನನ್ನು ಸ್ಮರಣೆ ಮಾಡುವದೇ ಈ ದಿನದ (ಬಸವ ಜಯಂತಿಯ ದಿನ) ಹೆಗ್ಗುರಿಯು. ಆತನ ನಿಜತತ್ವಗಳನ್ನು ಅರಿತವನೇ ನಿಜವಾದ ವೀರಶೈವನು. ಈ ಮಹಿಮನ ತತ್ವಗಳು ಜಗತ್ತಿಗೆ ಮಾನ್ಯವಾದವುಗಳೆಂದು ಹೇಳುವದೇ ಬೇಡ."

ಕರ್ನಾಟಕದ ಸುಪ್ರಸಿದ್ಧ ವಿಮರ್ಶಕರೂ ಕವಿಗಳೂ ಕತೆಗಾರರೂ ಆದ ಶ್ರೀಯುತ ಮಾಸ್ತಿ ವೆಂಕಟೇಶ ಅಯ್ಯಂಗಾರ ಎಂ. ಏ. ಇವರು ಬಸವೇಶ್ವರನ ಕೆಲವು ಉತ್ತಮ ವಚನಗಳನ್ನು ಇಂಗ್ಲಿಷ ಭಾಷೆಯಲ್ಲಿ ಭಾಷಾಂತರಿಸಿ, ಬೆಂಗಳೂರ ಮಿಥಿಕ್ ಸೊಸಾಯಿಟಿಯ ತ್ರೈಮಾಸಿಕ ಪತ್ರಿಕೆಯಲ್ಲಿ ಇಂಗ್ಲೀಷದಲ್ಲಿ ಒಂದು ಸುಂದರ ಲೇಖವನ್ನು ಬರೆದಿದ್ದಾರೆ. ಅದರ ಕೆಲವು ಸಂಗತಿಗಳನ್ನು ಕನ್ನಡದಲ್ಲಿ ಕೆಳಗೆ ಕೊಟ್ಟಿದೆ

"ಈ ವಚನಗಳು ಬಸವಣ್ಣನವರ ಸಮೀಪಕ್ಕೆ ನಮ್ಮನ್ನು ಒಯ್ಯುತ್ತವೆ. ಇಂಥ ವಚನಗಳನ್ನು ಮಾಡಿದಂಥ ಆ ಮಹಾತ್ಮರ ವಿಷಯದಲ್ಲಿ, ಮನಸ್ಸಿನಲ್ಲಿ ಪ್ರೀತಿ ಮತ್ತು ಆದರಭಾವಗಳು ಉತ್ಪನ್ನವಾಗುತ್ತವೆ. ಆತನು ಸತ್ಯಶೋಧನೆಗಾಗಿ ತಳಮಳಿಸುವವನಾಗಿ ಅದಕ್ಕೋಸ್ಕರ ಸ್ವಾರ್ಥವನ್ನು ಸಂಪೂರ್ಣ ತ್ಯಜಿಸಿದವನಾಗಿರಬೇಕು. ಮಾನವೀ ಜಾತಿಗೋಸ್ಕರ ಪ್ರೀತಿ ದಯಾ ಭಾವವುಳ್ಳವನಾಗಿರಬೇಕು. ಇಷ್ಟೇ ಅಲ್ಲ, ಇಡೀ ಪ್ರಾಣಿ ಮಾತ್ರಕ್ಕೂ ಕನಿಕರತೆಯನ್ನು ತಾಳಿದವನಾಗಿರಬೇಕು, ಎಂದು ತೋರುತ್ತದೆ. ಈ ಭಾವನೆಗಳೇ ಬಸವಣ್ಣನ ತತ್ವಗಳ ತಳಹದಿಯು. ಯಾವ ವಿಚಾರಗಳು ಜೀಸಸ್ ಕ್ರೈಯಿಸ್ಟನ ಪ್ರಾರ್ಥನೆಗಳಲ್ಲಿ ಕಾಣಬರುತ್ತವೋ ಅಥವಾ ಸೇಂಟ ಅಗಸ್ಟಾಯಿನನ ಆತ್ಮ ನಿವೇದನೆಯಲ್ಲಿ ತೋರುತ್ತವೋ, ನಮ್ಮಾಳ್ವರ್ ಹಿಡಿದು ಪುರಂದರದಾಸರ ವರೆಗಿನ ವೈಷ್ಣವದಾಸರ ಪದ್ಯಗಳಲ್ಲಿ ತುಂಬಿರುತ್ತವೋ ಅವುಗಳೇ ಈ ವಚನಗಳ ಭಾವದಲ್ಲಿ ತುಂಬಿತುಳುಕುತ್ತವೆ."

ವೀರಶೈವ ಸಾಹಿತ್ಯವನ್ನು ಚನ್ನಾಗಿ ಅಭ್ಯಾಸ ಮಾಡಿದವರೂ ಕವಿಗಳೂ ವಿಮರ್ಶಕರೂ ಆದ ಸುಪ್ರಸಿದ್ಧ ಶ್ರೀಮಾನ್ ಎಮ್. ಆರ್. ಶ್ರೀನಿವಾಸಮೂರ್ತಿ ಬಿ. ಏ. ಇವರು ಬಹು ಶ್ರಮಬಟ್ಟು ಬರೆದ "ಭಕ್ತಿ ಭಾಂಡಾರಿ ಬಸವಣ್ಣನವರು" ಎಂಬ ಅತ್ಯುತ್ತಮ ಗ್ರಂಥದ ಕೊನೆಗೆ ಬಸವೇಶ್ವರನ ವಿಷಯವಾಗಿ ತಮ್ಮ ವಿಚಾರಗಳನ್ನು ಹೀಗೆ ವ್ಯಕ್ತ ಮಾಡಿರುವರು.

ಅಭಿಮಾನಶಾಲಿಗಳಾದ ವೀರಶೈವ ಮಹಾಜನಗಳು ಬಸವಣ್ಣನವರನ್ನು ಕೇವಲ ನಂದೀಶ್ವರಾವತಾರವೆಂದು ಭಾವಿಸಲಿ; ಅಭಿಜ್ಞರು ಅವರನ್ನು ಮಾನವರಾಗಿ ಜನಿಸಿ ದೇವತ್ವಕ್ಕೆ ಏರಿದ ಮಹಿಮಾಪುರುಷರೆಂದೇ ಭಾವಿಸಲಿ; ಬಸವಣ್ಣನವರು ಮಾಡಿರುವ ಕಾರ್ಯ

ನಿರ್ವಾಹದಿಂದ ಅವರನ್ನು ನಾವು ಕಾರಣ ಪುರುಷರೆಂದು ಹೇಳಲೇ ಬೇಕು. ಪ್ರಪಂಚದ ಇತಿಹಾಸದಲ್ಲಿ ಮತಸ್ಥಾಪಕರೂ ಮತೋದ್ಧಾರಕರೂ ಯಾವುದೊಂದು ಚಿತ್ಕಳೆಯನ್ನು ಪಡೆದು ಭಗವಂತನ ಸಂಕಲ್ಪಕ್ಕಾಗಿ ಅವತರಿಸಿದರೋ, ಅದೇ ಚಿತ್ಕಳೆಯನ್ನು ಪಡೆದು ಬಸವಣ್ಣನವರೂ ಅವತರಿಸಿದರು. ಮತ ಪ್ರಚಾರಕರಾಗಿ ಅವರ ಸ್ಥಾನವು ಉನ್ನತವಾಗಿದೆ. ತತ್ವಬೋಧಕರಾಗಿ ಅವರ ಸ್ಥಾನವು ಇನ್ನೂ ಉನ್ನತವಾಗಿದೆ. ಭಕ್ತರಾಗಿ ಅವರ ಸ್ಥಾನವು ಅತ್ಯುನ್ನತವಾಗಿದೆ. ಇಂತಹ ಮಹಾತ್ಮರು ಕರ್ನಾಟಕ ದೇಶದಲ್ಲಿ ಅವತರಿಸಿದರು. ಕರ್ನಾಟಕದ ಕೀರ್ತಿಯು ಅವರಿಂದಲೂ ಹೆಚ್ಚಿರುವದು. ಸಮಾಜ ಸುಧಾರಣೆಗಾಗಲಿ, ರಾಷ್ಟ್ರ ಸುಧಾರಣೆಗಾಗಲಿ, ಅವರು ಹಾಕಿರುವ ಮೇಲ್ಪಂಕ್ತಿಯನ್ನು ಇಂದಿಗೂ ನಾವು ಅನುಸರಿಸಬೇಕಾಗಿದೆ. ಅವರ ವಚನಗಳಿಂದ ಅವರ ಮೂರ್ತಿ ಸ್ವರೂಪವನ್ನು ಚಿತ್ರಿಸಿ, ಅವರ ಕಾರ್ಯಕಲಾಪಗಳಿಂದ ಅವರ ಮಹಿಮೆಯನ್ನು ರೂಪಿಸಿ, ಲೋಕದ ಮುಂದೆ ನಿಜವಾದ ಬಸವಣ್ಣನವರನ್ನು ಸ್ಥಾಪಿಸುವದೇ ಅವರಿಗೆ ನಾವು ನ್ಯಾಯವಾಗಿ ಸಲ್ಲಿಸುವ ಭಕ್ತಿಯ ಕಾಣಿಕೆಯಾಗಿರುತ್ತದೆ. ಬಸವಣ್ಣನವರು ವೀರಶೈವರಿಗೆ ಮಾತ್ರ ಸಂಬಂಧಪಟ್ಟವರಲ್ಲ; ಕರ್ನಾಟಕಕ್ಕೆ ಮಾತ್ರ ಸಂಬಂಧಪಟ್ಟವರೂ ಅಲ್ಲ; ಅವರು ಇಡೀ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ ಸಂಬಂಧಪಟ್ಟ ಮಹಾ ಪುರುಷರು."

ಆಧ್ಯಾತ್ಮಿಕ ಸಾಧಕರೂ, ಕರ್ನಾಟಕದ ಉಜ್ವಲ ಸ್ವದೇಶಭಕ್ತರೂ, ಒಳ್ಳೇ ವಿದ್ವಾಂಸರೂ ಆದ ರಂಗನಾಥ ರಾಮಚಂದ್ರ ದಿವಾಕರ, ಎಮ್. ಎ.; ಎಲ್. ಎಲ್. ಬಿ. ಇವರು ವಚನಕಾರರನ್ನು ಬಹು ಆಳವಾಗಿ ಅಭ್ಯಾಸ ಮಾಡಿ, ವೇದಾಗಮಉಪನಿಷತ್ತುಗಳನ್ನೂ ಜಗತ್ತಿನಲ್ಲಿ ಪ್ರಚಲಿತವಿರುವ ಧರ್ಮದ ಪ್ರಸಿದ್ಧ ಗ್ರಂಥಗಳನ್ನೂ ತುಲನಾತ್ಮಕ ದೃಷ್ಟಿಯಿಂದ ನಿರೀಕ್ಷಿಸಿ, ಬಹಳ ಪರಿಶ್ರಮಪಟ್ಟು ರಚಿಸಿದ ''ವಚನಶಾಸ್ತ್ರ ರಹಸ್ಯ'' ವೆಂಬ ತಮ್ಮ ಅತ್ಯುತ್ತಮ ಗ್ರಂಥದ ಎರಡನೆಯ ಭಾಗದ ೨೫೧-೨೫೩ ನೆಯ ಪುಟಗಳಲ್ಲಿ ಬಸವೇಶ್ವರನ ವಿಷಯವಾಗಿ ತಮಗೆ ಹೊಳೆದ ವಿಚಾರಗಳನ್ನು ಹೀಗೆ ಹೇಳಿದ್ದಾರೆ

''ಬಸವನ ಕಾರ್ಯ-ಕ್ಷೇತ್ರವು ಬಹಳೇ ವಿಸ್ತೃತವಿತ್ತು. ಬರಿಯ ಅಧ್ಯಾತ್ಮಿಕ ಮತ್ತು ನೀತಿಯ ತತ್ವಗಳನ್ನು ಬಾಯಿಂದ ಪ್ರತಿಪಾದಿಸಿ, ಉಪದೇಶಿಸಿ ಸುಮ್ಮನಿರದೆ ಅವನು ವೀರಶೈವ ಭಕ್ತಿಮಾರ್ಗವನ್ನು ಚನ್ನಾಗಿ ಪ್ರಸರಿಸಿ ಸಮತೆ, ಬಂಧುಭಾವ, ನೀತಿಗಳೇ ಆಧಾರವಾದ ಒಂದು

ಉಚ್ಚತರದ ಸಮಾಜವನ್ನು ಏರ್ಪಡಿಸಿದನು. ಕುಲ ಮತ್ತು ಉದ್ಯೋಗ ಇವುಗಳ ಬಗ್ಗೆ ಸಮಾಜದಲ್ಲಿ ರೂಢವಿದ್ದ ಕೃತಕ ಉಚ್ಚ ನೀಚ ಭಾವನೆಗಳನ್ನು ತೊಡೆದು ಬಿಟ್ಟನು. ಸ್ತ್ರೀ, ಶೂದ್ರಾದಿಗಳ ಬಗ್ಗೆ ಇದ್ದ ತಿರಸ್ಕಾರ ಭಾವವನ್ನು ಅಳಿಸಿಬಿಟ್ಟು ಎಲ್ಲರಿಗೂ ಸಾಮಾನ್ಯವಾಗಿರುವ ಧರ್ಮದ್ವಾರವನ್ನು ಅವರಿಗೆ ತೆರೆದು ಕೊಟ್ಟನು. ತತ್ವಜ್ಞಾನಕ್ಕಿಂತ ಧರ್ಮಾಚಾರದಲ್ಲಿ, ಧರ್ಮಾಚಾರಕ್ಕಿಂತ ನೀತಿಮಾರ್ಗದ ಪ್ರಸ್ಥಾಪನೆಯಲ್ಲಿ, ನೀತಿಮಾರ್ಗಕ್ಕಿಂತ ಸಮಾಜ ಸುಧಾರಣೆಯಲ್ಲಿ ಬಸವಣ್ಣನು ಹೆಚ್ಚಿನ ಕರ್ತೃತ್ವವನ್ನೂ ಆತ್ಮವಿಶ್ವಾಸವನ್ನೂ ದೂರದೃಷ್ಟಿಯನ್ನೂ ತೋರಿಸಿದನು ಇದು ಅವನ ವ್ಯವಹಾರಿಕ ದೃಷ್ಟಿಯನ್ನೂ ಜ್ಞಾನ, ಭಕ್ತಿ, ಕರ್ಮಗಳ ಸಮ್ಮೇಳನ ಮಾಡುವ ಶೈಲಿಯನ್ನೂ ವ್ಯಕ್ತಗೊಳಿಸುವದು. ಈ ಅವನ ಮಹತ್ಕಾರ್ಯದಲ್ಲಿ ಮಿಕ್ಕ ಶರಣರೆಲ್ಲರೂ ಸಹಾಯಭೂತರಾದರು. ಆದರೆ ಅವನೇ ಇವೆಲ್ಲವುಗಳಿಗೆ ಮೂಲನು, ಮುಖ್ಯನು, ಚಾಲಕನು, ಮಧ್ಯಬಿಂದುವು. ಈ ಮಹಾಮಹಿಮನ ಗುಣಗಳನ್ನು ಅನೇಕ ವಚನಕಾರರು ಬಗೆ ಬಗೆಯಿಂದ ಬಣ್ಣಿಸಿರುವರು. ಅಥವಾ ಅವನ ಸಮಕಾಲೀನರಲ್ಲಿ ಆಗಲಿ ಅವನ ಹಿಂದಿನಿಂದ ಬಂದವರಲ್ಲಿ ಆಗಲಿ, ಅವನನ್ನು ಒಳ್ಳೇ ಶ್ರೇಷ್ಠನೆಂದು ಬಣ್ಣಿಸದೆ ಇದ್ದವರು ಒಬ್ಬರೂ ಇಲ್ಲವೆಂದರೂ ಸಲ್ಲುವದು. ಅವನು ಪರಶಿವನ ಸ್ಥೂಲ ತತ್ವವೆಂದು, ಭಕ್ತಿ ಭಾಂಡಾರಿಯೆಂದು, ಭಕ್ತಿಗೆ ಶೃಂಗಾರವೆಂದು, ಶಿವಾಚಾರ ಚಕ್ರವರ್ತಿಯೆಂದು, ಸರ್ವಾಚಾರ ಸಂಪನ್ನನೆಂದು, ಆರೂಢ ದಾಸೋಹಿಯೆಂದು, ಐವತ್ತೆರಡು ಶರಣ-ಲಕ್ಷಣಗಳುಳ್ಳ ಆದರ್ಶ ಶರಣನೆಂದು ವಿಧ ವಿಧವಾಗಿ ವರ್ಣಿಲ್ಪಟ್ಟಿರುವನು. ಬಸವಣ್ಣನ ಕೀರ್ತಿ ಪ್ರಭಾವಗಳು ಅಂದಿನಿಂದ ಇಂದಿನವರೆಗೆ ಬೆಳೆಯುತ್ತಾ ಬಂದಂತೆ ಇನ್ನಾವ ಶರಣನ ಹೆಸರೂ ಹೆಚ್ಚುತ್ತ ಬಂದಿಲ್ಲ. ಬಸವಣ್ಣನ ಅನುಪಮ ಗುಣಶೀಲಗಳೂ ಅವನ ಅದ್ವಿತೀಯ ಕರ್ತೃತ್ವ ಶಕ್ತಿಯೂ ಇವೇ ಹಾಗೆ ಆಗುವ ಕಾರಣಗಳು. ಅವನಲ್ಲಿಯ ಅತ್ಯುತ್ಕಟ ನಿರ್ಹೇತುಕ ಭಕ್ತಿ, 'ತತ್ವ ಹಿಡಿದವರಿಗೆ ತೊತ್ತಾಗಿ ನಡೆವೆನು, ಶ್ರೀ ಮಹಾದೇವನ ನೆನೆವನ ಪಾದರಕ್ಷೆಯ ಕಾಯ್ದು ಬದುಕುವೆ.' ಎಂಬ ಅವನ ವಿನಯಾತಿಶಯ ಮತ್ತು ತತ್ವನಿಷ್ಠೆ, ಪ್ರತ್ಯಕ್ಷ ಧರ್ಮಾಚರಣೆಯಲ್ಲಿಯ ಮತ್ತು ದಾಸೋಹದಲ್ಲಿಯ ಅವನ ದಕ್ಷತೆ, ಅವನಲ್ಲಿರುವ ನಡೆನುಡಿಗಳ ಮೇಳ, ಕಳ್ಳನು ಹೆಂಡತಿಯ ಒಡವೆಗ

ಳನ್ನು ಉಚ್ಚತೊಡಗಿರಲು, 'ಅವನ ಕೈ ನೊಂದೀತು ಎಲೆ ಚಂಡಾಲ ಗಿತ್ತೀ ಬೇಗ ತೆಗೆದು ಕೊಡು, ಅವನೂ ಕೂಡಲ ಸಂಗಮದೇವನಲ್ಲವೇ ?' ಎಂದು ಹೇಳುವಲ್ಲಿ, ಒಡೆದು ಕಾಣುವ ಅವನ ಅಹಿಂಸಾಸ್ತ್ರೀಯ ವೃತ್ತಿ, ಸರ್ವಾತ್ಮಾ ಪ್ರತೀತಿ ಮತ್ತು ಸೈರಣೆ, 'ಕೂಡಲಸಂಗಯ್ಯಾ ದೇವನುಳ್ಳನ್ನಕ್ಕರ ಬಿಜ್ಜಳನ ಭಾಂಡಾರ ನನಗೇಕಯ್ಯಾ?' ಎನ್ನುವ ಅವನ ನಿಃಸ್ಪೃಹತೆ, 'ನಿಮಗಂಜುವೆನಲ್ಲದೆ ಆನೀ ಬಿಜ್ಜಳನಿಗಂಜುವೆನೆ?' ಎಂಬುವ ಅವನ ಅಭಯ ಮತ್ತು ಪಾಪಭೀರುತ್ವ ಈ ಮುಂತಾದ ಗುಣರಾಶಿಯೆಲ್ಲ ಯಾವನಲ್ಲಿ ಒಟ್ಟುಗೂಡಿತ್ತೋ ಅವನ ಮಹಿಮೆಯು ಅಷ್ಟಿಷ್ಟೆಂದು ವರ್ಣಿಸಲಿಕ್ಕೆ ಬರುವದಿಲ್ಲ. ವಚನ ಲೇಖಕ ಎಂಬ ದೃಷ್ಟಿಯಿಂದ ಸಹ ಬಸವಣ್ಣನು ಬಹಳ ಉಚ್ಚತರಗತಿಯವನಿರುವನು. ಅವನ ವಚನಗಳೆಂದರೆ, ಅವನ ಅಂತರ್ಹೃದಯದಲ್ಲಿಯ ಭಕ್ತಿ, ಆರ್ತಭಾವ, ಉಚ್ಚವಾದ ಧ್ಯೇಯವಾದ, ಪರಮಾತ್ಮನನ್ನು ಸಾಕ್ಷಾತ್ಕರಿಸಬೇಕೆಂಬ ಅವನ ತವಕ, ಆಯಾಪ್ರಸಂಗಗಳಲ್ಲಿ ಅವನಲ್ಲಿ ಎದ್ದ ಶ್ರೇಷ್ಠ ಭಾವಗಳ ಊರ್ಮಿಗಳು, ಇವೆಲ್ಲವುಗಳಿಗೆ ಹಿಡಿದ ಕೈಗನ್ನಡಿಯೆ ಇರುವವು. ಅವನ ಸ್ವಂತ ಭಾವನೇತಿಹಾಸವೂ ಚಾರಿತ್ರ್ಯವೂ ಅವನ ವಚನಗಳಲ್ಲಿ ಎಷ್ಟು ಸ್ಪಷ್ಟವಾಗಿ ಮತ್ತು ನಿರ್ವಂಚಕ ರೀತಿಯಿಂದ ಪ್ರತಿಬಿಂಬಿತವಾಗಿದೆಯೋ ಅಷ್ಟು ಇನ್ನಾವ ವಚನಕಾರರ ಇತಿಹಾಸವೂ ಆಯಾ ವಚನಗಳಲ್ಲಿ ಎದ್ದು ಕಾಣಿಸುವದಿಲ್ಲ.''

ಹೀಗೆಯೇ ನಾವು ಬಸವೇಶ್ವರನ ಮೇಲೆ ಬೆಳೆಯುತ್ತಿರುವ ಅಭಿಪ್ರಾಯಗಳನ್ನು ಬೆಳಿಸುತ್ತಾ ಹೋಗಬಹುದು. ಈ ಎಲ್ಲ ಅಭಿಪ್ರಾಯಗಳಿಂದಲೂ ಬಸವೇಶ್ವರನು ನಿಜವಾಗಿಯೂ ಒಬ್ಬ ಮಹಾತ್ಮನು, ವಿಶಾಲಮನಸ್ಸಿನವನು, ವಿಶಾಲ ಹೃದಯದವನು, ವಿಶ್ವಕುಟುಂಬಿಯು ಎಂದು ಕಂಡು ಬರುವದು. ಇತ್ತೀಚೆಗೆ ಇವನ ವಚನಗಳು ಫ್ರಾನ್ಸದಲ್ಲಿಯೂ ಜಪಾನದಲ್ಲಿಯೂ ಪ್ರಸಾರವಾಗಿ ಅಲ್ಲಿಯವರು ಹೆಚ್ಚಿಗೆ ಅವುಗಳ ಭಾಷಾಂತರಗಳನ್ನು ಬೇಡುತ್ತಾರೆಂದು ವೃತ್ತಪತ್ರಿಕೆಗಳು ತಿಳಿಸುತ್ತವೆ. ಬಸವೇಶ್ವರನ ಕಾಲದ ಶಿವಶರಣರನ್ನು ಹಿಡಿದುಕೊಂಡು ಆಧುನಿಕ ವಿಶಾಲ ಮನಸ್ಸಿನ ವಿಮರ್ಶಕರ ವರೆಗೂ ಎಲ್ಲರೂ ಅವನ ಬಗ್ಗೆ ಒಂದೇ ಬಗೆಯ ಅಭಿಪ್ರಾಯಗಳನ್ನು ಕೊಟ್ಟಿರುವರು. ಅಂದ ಮೇಲೆ ಬಸವೇಶ್ವರನು ಜಗತ್ತಿನ ಮಹಾಪುರುಷರಲ್ಲಿ ಒಬ್ಬನೆಂದು ಹೇಳಲು ಯಾವ ಅಡ್ಡಿಯೂ ಇಲ್ಲ.

# ಬೆಳಕು.

—:o:—

(೧) ಪರ್ವತ ಶ್ರೇಣಿಯಲಿ
ಶಿಖರವನೆ ಏರುತಲಿ,
ಸಾಗರದಲೆಗಳಲಿ
ಸಿಲ್ಕಿ ತೇಲುತಿಹ,
ತೊಲೆಯಂತೆ ತಲೆದೂಗೆ
ಸೃಷ್ಟಿ ಸೌಂದರ್ಯದಲಡ
ಗಿಹೆಯೋ, ಎಂದರಿಸಿದೆನು.
ಇಲ್ಲ! ನೀನಿಲ್ಲ!

(೨) ಮಲೆನಾಡ ಕಾಡಿನಲಿ
ನಿಬಿಡವಾದರಣ್ಯದಲಿ
ಪಕ್ಷಿಗಳ ಲಿಪಿಲಿಪಿಯು!
ಪುಷ್ಪಗಳ ಪರಿಮಳವು!
ಸೃಷ್ಟಿ ಸೌಂದರ್ಯವದಕೆ
ನಿನ್ನ ಚಾತುರ್ಯವದಕೆ
ತಲೆದೂಗಿದೆನು
ಮತ್ತೆ ನೀನಿಲ್ಲ!

(೩) ನೂರಾರು ಶತಮಾನ್ಗಳಿಂ
"ನೀನಿಹೆ"
ಎಂಬ ಕೂಗೊಂದು ಕೂಗುತಿಹ,
ಗುಡಿ ಗೋಪುರಗಳನರಸಿದೆ,
ಶಿಲ್ಪಿ ಚಾತುರ್ಯವಿಹುದಲ್ಲಿ,
ನೀನಿಲ್ಲ.

(೪) ತುಂಗೆಯಾ ದಡದಲ್ಲಿ
ಬಂಡೆ ಮೇಲ್ಕುಳಿತು
ರವಿ ತಾನೆ ಪಶ್ಚಿಮದಿ
ನಿನ್ನನರಸೆ ಪೋಗುತಿರೆ,
ತುಂಗೆಯಾ ಕಳಕಳ ನಾದದಿಂ
ಒಂದಾಗಿ,
"ಜೀವನದ ಯಾತ್ರೆಯಲಿ
ಬೆಳಕೊಂದ ತೋರೆಂದು"
ಎದೆಯಿಂದ ಕೂಗೊಂದು ಬಂತು.

(೫) ವಿಶ್ವವದು ಒಂದಾಗಿ
ಎನ್ನ ಕಣ್ಮುಂದಿರಲು
ಕಣ್ಣುಗಳವು ತಾವೆ
ಎವೆಯಿಕ್ಕದಿರಲು
ಹೊಂಬಣ್ಣ ಹೂಡುತಲಿ
ರವಿ ತಾನೆ ಮರೆಯಾಗೆ
ಪೂರ್ವದಲಿ ಬೆಳಕೊಂದ ಕಂಡೆ
ವಿಶ್ವವನೆ ವ್ಯಾಪಿಸಿತು
ಎನ್ನನೇ ನುಂಗಿತಾ ಬೆಳಕು.

**ಎನ್. ಆರ್. ಗಿರಿಮಾಜಿ**

# ಸ್ಫುಟ ವಿಷಯಗಳು.

## ಈ ಸಂಚಿಕೆಯಲ್ಲಿಯ ಲೇಖಗಳು

**ರೇವಣಸಿದ್ಧ:**– ಇದರಲ್ಲಿಯ ಮೊದಲನೆಯ ಲೇಖವು ರೇವಣ ಸಿದ್ಧೇಶ್ವರನ ವಿಷಯವಾಗಿರುತ್ತದೆ. ಆತನು ಈಗ ವಿಜಾಪುರ ಜಿಲ್ಲೆಯಲ್ಲಿ ಭೀಮಾನದೀ ತಟಾಕದಲ್ಲಿರುವ ತದ್ದೇವಾಡಿ ಎಂಬ ಗ್ರಾಮಕ್ಕೆ ನೆರೆಯಾಗಿರುವ ಸೀಮೆಯಲ್ಲಿದ್ದು ಅಲ್ಲಿ ಮಾಡಿದ ಅನೇಕ ಮಹತ್ಕೃತ್ಯಗಳ ವಿವರಣೆಯು ಇದರಲ್ಲಿ ಬಂದಿರುತ್ತದೆ ಆತನು ಬಸವೇಶ್ವರನಕಿಂತಲೂ ಕೆಲಕಾಲ ಮೊದಲನೆಯವನೆಂದು ನಮಗೆ ತೋರುತ್ತದೆ. ಈ ವಿಷಯವಾಗಿ ನಮ್ಮ ವಾಚಕರಲ್ಲನೇಕರು ಭಿನ್ನಾಭಿಪ್ರಾಯವುಳ್ಳವರಿರಬಹುದು. ಹಾಗಿದ್ದಲ್ಲಿ ಅವರು ಅದನ್ನು ಸಮರ್ಥಿಸಿ ಲೇಖವನ್ನು ಬರೆದು ಅವಶ್ಯವಾಗಿ ನಮ್ಮ ಕಡೆಗೆ ಕಳಿಸಿಕೊಡಬೇಕೆಂದು ವಿನಂತಿ ಇದೆ. ಶಿವಾನುಭವ ಪತ್ರಿಕೆಯು ಯಾವಾಗಲೂ ಸತ್ಯಾನ್ವೇಷಣ ಬುದ್ಧಿಯಿಂದಲೇ ನಡೆಯಿಸಲ್ಪಡುತ್ತ ಬಂದಿದೆ. ವಿರೋಧಾಭಿಪ್ರಾಯವುಳ್ಳ ಲೇಖಗಳಿದ್ದರೂ ಕೂಡ ಅದು ಅವುಗಳಿಗೆ ತನ್ನಲ್ಲಿ ಇಂಬುಗೊಡುತ್ತ ಬಂದಿದೆ.

ನಾವು ಬರೆದ ಈ ಲೇಖದ ಮೇಲಿಂದ ಮಹತ್ವದ ಪ್ರದೇಶಗಳಲ್ಲಿ ಇರುವ ದೇವಾಲಯದ ಸ್ಥಾನಗಳೂ, ಸಮಾಧಿಗಳೂ, ಸ್ಥಾನಿಕ ಐತಿಹ್ಯಗಳೂ ವೀರಶೈವ ಇತಿಹಾಸವನ್ನು ಕಂಡು ಹಿಡಿಯಲು ಎಷ್ಟು ಸಹಾಯಕಾರಿಯಾಗುತ್ತವೆಂಬದು ತೋರಿಬರದೆ ಇರಲಾರದು. ಕರ್ನಾಟಕದಲ್ಲಿ ಇಂಥ ಸ್ಥಾನಗಳಿದ್ದದ್ದು ವಾಚಕರ ದೃಷ್ಟಿಗೆ ಎಲ್ಲಾದರೂ ಬಿದ್ದಿದ್ದರೆ ಅವುಗಳ ಹೆಸರು, ಅವು ಇದ್ದ ಸ್ಥಾನ ಮೊದಲಾದವುಗಳನ್ನು ನಮಗೆ ಅವಶ್ಯವಾಗಿ ತಿಳಿಸಬೇಕೆಂದು ನಮ್ಮ ವಿನಂತಿ ಇದೆ. ಶಿವಶರಣರ ಸ್ಥಾನಗಳು ಉತ್ತರ ಕರ್ನಾಟಕದಲ್ಲಿ ಬಹು ಕಡೆಗೆ ಇವೆ. ಅವುಗಳ ಸಂಬಂಧವಾಗಿ ಶಕ್ಯವಿದ್ದಷ್ಟರ ಮಟ್ಟಿಗೆ ನಿಜಸ್ಥಿತಿಯನ್ನು ಕಂಡು ಹಿಡಿದಲ್ಲಿ ಇತಿಹಾಸ ಸಂಶೋಧನೆಯ ಕಾರ್ಯದಲ್ಲಿ ಬಹು ಸಹಾಯವಾಗುವದು.

**ಬಸವೇಶ್ವರನಿಗೆ ಬೆರಗಾದವರು:**— ಇದನ್ನು ಬರೆದ ಲೇಖಕರು ತಮ್ಮ ಲೇಖದಲ್ಲಿ ಬಸವೇಶ್ವರನ ಬಗ್ಗೆ ಅನೇಕರು ಮಾಡಿದ ಎಲ್ಲ ಬಗೆಯ

ಪ್ರಶಂಸೆಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಬರೆದಿರುತ್ತಾರೆ. ಇವುಗಳಲ್ಲಿ ಪುರಾತನ ಕಾಲದಲ್ಲಿ ಆಗಿ ಹೋದ ಶಿವಶರಣರ ಮಾಡಿದ ಸ್ತುತಿಪರ ಉದ್ಗಾರಗಳೂ ಇರುತ್ತವೆ. ವೀರಶೈವ ವಾಙ್ಮಯದಲ್ಲಿ ವೀರಶೈವೋದ್ಧಾರ ಕಾರ್ಯಮಾಡಿದ ಎಲ್ಲರ ವಿಷಯಕ್ಕೂ ಪೂಜ್ಯಭಾವವು ಯಾವಾಗಲೂ ವಾಸಿಸುತ್ತಿದ್ದದ್ದು ವ್ಯಕ್ತವಾಗುತ್ತದೆ. ಅವರಲ್ಲಿ ಯಾರೂ ಹೆಚ್ಚು ಕುಂದುಗಳನ್ನು ಎಣಿಸಿ ತಮ್ಮ ಸ್ತೋತ್ರಗಳನ್ನು ಮಾಡಿರುವದಿಲ್ಲ. ಈ ಸಂಗತಿಯು ಈ ಲೇಖದಲ್ಲಿ ಚನ್ನಾಗಿ ಗೊತ್ತಾಗುವಂತೆ ಇದೆ.

**ಮಡಿವಾಳ ಮಾಚಿದೇವನ ವಚನಗಳು**:—ಮಡಿವಾಳ ಮಾಚಿದೇವನು ವೀರಶೈವ ಶಿವಶರಣರಲ್ಲಿ ಬಹು ಪ್ರಖ್ಯಾತನಾದವನು. ಅವನ ವಚನಗಳು ಈ ಸಂಚಿಕೆಯಲ್ಲಿ ಮುಗಿಸಲ್ಪಟ್ಟಿರುತ್ತವೆ. ಬಹಳ ದಿವಸಗಳ ಹಿಂದೆಯೇ ಅವನ ವಚನಗಳನ್ನು ನಾವು ಸಂಗ್ರಹಿಸಿದ್ದೆವು ಆದರೆ ಆತನ ಸ್ವತಂತ್ರ ವಚನ ಗ್ರಂಥವು ಎಲ್ಲಾದರೂ ದೊರೆಯಬಹುದೆಂದು ನಾವು ಈ ವರೆಗೆ ನಿರೀಕ್ಷಿಸಿದ್ದೆವು. ಆದರೆ ಅದು ನಮಗೆ ಇನ್ನೂ ದೊರೆಯದ್ದರಿಂದ ಈಗ ನಾವು ಈ ಗ್ರಂಥವನ್ನು ಪ್ರಕಟಿಸಬೇಕಾಯಿತು. ಬಹು ಕಡೆಗೆ ವಚನ ಗ್ರಂಥಗಳು ದೊರೆಯುವದುಂಟು. ಅವುಗಳನ್ನು ಸಂಶೋಧಿಸಿ ನಮ್ಮ ಕಡೆಗೆ ಕಳಿಸಿದ್ದಾದರೆ ಅವರು ನಮ್ಮ ಪ್ರಕಟನಾ ಕಾರ್ಯದಲ್ಲಿ ಬಹಳ ಸಹಾಯ ಮಾಡಿದಂತಾಗುವದು.

ವಚನ ಗ್ರಂಥ ಪ್ರಕಟನಾ ಕಾರ್ಯದಲ್ಲಿ ನಾವು ಮೊದಲು ತೊಡಗಿದಾಗ ಬಹು ಜನರು ತಮ್ಮಲ್ಲಿ ಅಥವಾ, ತಮ್ಮ ಗ್ರಾಮದಲ್ಲಿ ಇರುವ ಹಸ್ತಲಿಖಿತ ಗ್ರಂಥಗಳನ್ನು ತಾವಾಗಿಯೇ ಶೋಧಿಸುವರೆಂತಲೂ ಶೋಧಿಸಿದ ಬಳಿಕ ಅವುಗಳ ಪ್ರಕಟನಾ ಕಾರ್ಯವು ತಡವಿಲ್ಲದೆ ಬಹುಕಡೆಗೆ ಸಾಗಬಹುದೆಂತಲೂ ನಾವು ನಿರೀಕ್ಷಿಸಿದ್ದೆವು. ನಮ್ಮ ಸಮಾಜದಲ್ಲಿ ಬಹು ಕಡೆಗೆ ಮಹತ್ವದ ಮಠಗಳಿರುತ್ತವೆ. ಅವುಗಳ ಅಧಿಕಾರಿಗಳಲ್ಲನೇಕರು ಬಹು ವರ್ಚಸ್ಸುಳ್ಳವರೂ ಇರುವದು ತೋರಿಬರುತ್ತದೆ. ಮುಖ್ಯವಾಗಿ ಇವರು ಈ ಸಂಶೋಧನ ಕಾರ್ಯವನ್ನು ಕೈಕೊಳ್ಳಬಹುದೆಂದು ನಾವು ಭಾವಿಸಿದ್ದೆವು. ಆದರೆ ಈ ನಮ್ಮ ನಿರೀಕ್ಷಣೆಯು ಮಾತ್ರ ವ್ಯರ್ಥವಾಗಿರುತ್ತದೆ. ಮಠಾಧೀಶ್ವರರಲ್ಲಿ ಇಂಥವರು ಕೆಲವರು ಮಾತ್ರ ಅಪವಾದಾತ್ಮಕವಾಗಿರುತ್ತಾರೆ. ಆದರೆ ಇಷ್ಟರಿಂದಲೇ ಈ ಘನತರವಾದ ಪ್ರಕಟನಾಕಾರ್ಯವು ಕೈಗೂಡಲಾರದು. ಈ ಸ್ಥಿತಿಯು ಹೀಗೆಯೇ ಕೆಲವು

ದಿವಸ ಉಳಿದಲ್ಲಿ ವೀರಶೈವ ಸಂಸ್ಕೃತಿಯನ್ನು ತಿಳಿಯಪಡಿಸುವ ಮಹತ್ವದ ಗ್ರಂಥಗಳು ಲೋಪವಾಗದೆ ಇರವು. ಈ ಸ್ಥಿತಿಯಲ್ಲಿ ಸಮಾಜದವರು ಒಂದು ಟ್ರಸ್ಟ ಬೋರ್ಡನ್ನು ಏರ್ಪಡಿಸಿ ಒಂದು ನಿಧಿಯನ್ನು ಕೂಡಿಸುವದು ಅತ್ಯಾವಶ್ಯಕವೆಂದು ನಮಗೆ ತೋರುತ್ತದೆ. ಇಂಥ ಸಂಶೋಧನಾ ಕಾರ್ಯದಲ್ಲಿ ಲಕ್ಷಹಾಕಿದ ಅನೇಕ ಮಹನೀಯರು ನಮ್ಮ ಸಮಾಜದಲ್ಲಿ ಇದ್ದಾರೆ. ಹಾಗೆಯೇ ಅವರ ಮೇಲೆ ಬಹು ಜನರ ವಿಶ್ವಾಸವೂ ಇರುತ್ತದೆ. ಅಂಥವರನ್ನು ಒತ್ತಟ್ಟಿಗೆ ಸೇರಿಸಿ ಅವರ ನಿರೀಕ್ಷಣೆಯಲ್ಲಿ ಈ ಕಾರ್ಯದ ಏರ್ಪಾಡಾಗುವದು ಬಹು ಅವಶ್ಯವೆಂದು ನಮಗೆ ತೋರುತ್ತದೆ.

**ರಗಳೆಗಳು:** — ಈ ಸಂಚಿಕೆಯಲ್ಲಿ ಮಲುಹಣನ ರಗಳೆಯು ಪೂರ್ಣವಾಗಿರುತ್ತದೆ. 'ಮತ್ತು ಭೃಂಗೀಶ್ವರನ ರಗಳೆ' ಎಂಬ ಹೊಸ ರಗಳೆಯು ಪ್ರಾರಂಭವಾಗಿರುತ್ತದೆ. ಮಲುಹಣನ ರಗಳೆಯು ಕೆಲವರಿಗೆ ಬೀಭತ್ಸವೆಂದೆನಿಸಬಹುದು. ಆದರೆ ಅದರಲ್ಲಿ ಹರಿಹರ ಕವಿಯು ತನ್ನ ಕವಿತಾ ಸಾಮರ್ಥ್ಯದ ಪರಮಾವಧಿಯನ್ನು ತೋರಿಸಿರುತ್ತಾನೆ. ಅದು ಅವನ ಅತ್ಯುತ್ತಮ ರಗಳೆಗಳಲ್ಲಿ ಒಂದಾಗಿರುತ್ತದೆ. ಕೆಲವೆಡೆಗಳಲ್ಲಿ ಅವನ ವರ್ಣನೆಗಳು ಹೃದಯಸ್ಪರ್ಶಿಯಾಗಿರುತ್ತವೆ. ಅಲ್ಲದೆ ವಚನ ವಾಙ್ಮಯದಲ್ಲಿ ಕಂಡು ಬರುವ ಮಹತ್ವದ ತತ್ವಗಳನ್ನೂ ಅದರಲ್ಲಿ ಅಲ್ಲಲ್ಲಿ ಕಾಣಬಹುದು.

ಭೃಂಗೀಶ್ವರನ ರಗಳೆಯು ಚಿಕ್ಕದಾಗಿರುತ್ತದೆ. ಅದು ಮುಂದಿನ ಸಂಚಿಕೆಯಲ್ಲಿ ಮುಗಿಯ ಬಹುದು. ಆದರಲ್ಲಿ ನೃತ್ಯದ ವಿಷಯಗಳು ಬಹು ಉತ್ತಮರೀತಿಯಿಂದ ಹೇಳಲ್ಪಟ್ಟಿವೆ. ಕವಿಯು ತನ್ನ ವರ್ಣನಾ ಸಾಮರ್ಥ್ಯವನ್ನು ಅದರಲ್ಲಿ ಬಹು ಚನ್ನಾಗಿ ಹೊರಗೆಡವಿರುತ್ತಾನೆ. ಈ ಕಾಲಕ್ಕೆ ಜನರಲ್ಲಿ ನೃತ್ಯದ ವಿಷಯಕ್ಕೆ ಕುತೂಹಲವು ಹೆಚ್ಚುತ್ತಲಿದೆ. ಆದುದರಿಂದ ನಾವು ಈ ರಗಳೆಯನ್ನು ಪ್ರಸಿದ್ಧಿಸಿದ್ದೇವೆ.

## ವಚನ ಶಾಸ್ತ್ರಸಾರ ಭಾಗ ೪.

ನಾವು 'ವಚನ ಶಾಸ್ತ್ರಸಾರ' ಭಾಗ ೨ ಈ ಗ್ರಂಥವನ್ನು ಈ ವರ್ಷ ಪ್ರಸಿದ್ಧಿಸಿರುತ್ತೇವೆಯಷ್ಟೇ. ಅದು ವೀರಶೈವ ಸಿದ್ಧಾಂತವನ್ನು ನಿರೂಪಿಸತಕ್ಕ ಗ್ರಂಥವಾಗಿರುತ್ತದೆ. ವಚನ ಶಾಸ್ತ್ರಸಾರ ಭಾಗ ೩ ಇದರ ಕೈಬರ

ಹದ ಪ್ರತಿಯು ಈಗ ಸಿದ್ಧವಾಗಿರುತ್ತದೆ. ಇದರಲ್ಲಿ ವೀರಶೈವಾಚಾರಗಳ ತಾತ್ವಿಕ ನಿರೂಪಣೆಯು ಇರುತ್ತದೆ. ಅನುಕೂಲವಾದ ಕಾಲಕ್ಕೆ ಈ ಗ್ರಂಥವು ಅಚ್ಚಿನಿಂದ ಹೊರಬೀಳುವದು.

ಈಗ ನಾವು ೪ ನೇ ಭಾಗದ ಸಿದ್ಧತೆಯಲ್ಲಿ ತೊಡಗಿರುತ್ತೇವೆ. ಇದರಲ್ಲಿ ವೀರಶೈವ ಮತದ ಮತ್ತು ಸಮಾಜದ ಇತಿಹಾಸವು ನಿರೂಪಿಸಲ್ಪಡುವದು. ಈ ಇತಿಹಾಸವು ಯಾನ ಧೋರಣದಿಂದ ಬರೆಯಲ್ಪಡುವದೆಂಬದರ ನಿರ್ದೇಶವು ಈ ವರ್ಷದ ಶಿವಾನುಭವ ಸಂಚಿಕೆಗಳಲ್ಲಿ ಮಾಡಲ್ಪಡುವದು. ಈ ೪ ನೇ ಭಾಗದಲ್ಲಿ ವೀರಶೈವಾಂದೋಲನ ಕಾರ್ಯಗಳ ಇತಿಹಾಸವು ಸಮಗ್ರವಾಗಿ ಪ್ರಸಿದ್ಧಿಸಲ್ಪಡುವದು. ನಾವು ಹೋದ ೧೨ ವರ್ಷಗಳ ವರೆಗೆ ಅನೇಕ ಮುಖವಾಗಿ ಸಂಗ್ರಹಿಸುತ್ತ ಬಂದ ವಿಷಯುಯಗಳನ್ನು ಮುಖ್ಯ ಆಧಾರವಾಗಿಟ್ಟುಕೊಂಡು ಈ ಇತಿಹಾಸವು ರಚಿಸಲ್ಪಡುವದು. ಆದುದರಿಂದ ವಾಚಕರು ಈ ವಿಷಯುದಲ್ಲಿ ಸಕಾಲಕ್ಕೆ ನಮಗೆ ತಮ್ಮ ಅಭಿಪ್ರಾಯಗಳನ್ನು ಅರುಹುತ್ತ ಹೋಗಬೇಕೆಂದು ನಮ್ಮ ನಮ್ರ ವಿನಂತಿ ಅದೆ. ಇದರಿಂದ ನಮ್ಮ ಈ ಕಾರ್ಯದಲ್ಲಿ ಅವರು ಬಹಳ ಸಹಾಯ ಮಾಡಿದಂತಾಗುವದು.

## ಶಿವಾನುಭವ ಪತ್ರಿಕೆ.

ಮೇಲ್ಕಂಡ ಕಾರ್ಯಗಳು ಬೇಗನೆ ಪೂರೈಸಬೇಕೆಂದು ನಾವು ಬಹಳ ಆತುರವುಳ್ಳವರಾಗಿದ್ದೇವೆ. ಆ ವರೆಗೆ ವೀರಶೈವ ಸಮಾಜದವರು ಈ ಶಿವಾನುಭವ ಪತ್ರಿಕೆಯನ್ನು ಎತ್ತಿ ಹಿಡಿಯಬೇಕೆಂದು ನಮ್ಮ ವಿನಂತಿ ಇದೆ. ಈ ಪತ್ರಿಕೆಯು ಇಲ್ಲದಿದ್ದರೆ ವೀರಶೈವ ವಾಙ್ಮಯುವನ್ನು ಹೊರಗೆಡಹುವದೇ ನಮ್ಮಿಂದ ಆಗುತ್ತಿದ್ದಿಲ್ಲ. ಆದರೆ ಇದಕ್ಕೆ ಸಮಾಜದವರಿಂದ ದೊರೆತ ಸಹಾಯುವು ಅತ್ಯಲ್ಪವು. ಇದು ವರೆಗೆ ಈ ಪತ್ರಿಕೆಯು ಹೇಗೆ ಬದುಕಿಕೊಂಡಿರುತ್ತದೋ ಎಂಬುದು ನಮಗೆ ಆಶ್ಚರ್ಯವನ್ನುಂಟು ಮಾಡುತ್ತಿದೆ. ಇದು ಶಿವಶರಣರ ಪ್ರಭಾವವೆಂತಲೇ ಹೇಳಬೇಕು. ಇಷ್ಟು ಮಾತ್ರ ನಾವು ಇಲ್ಲಿ ಹೇಳಿ ಈ ವಿಷಯುವನ್ನು ಇಲ್ಲಿಗೆ ವಿರಮಿಸುತ್ತೇವೆ.

ಕೊಲುವ ಹಿಮನಾತಂಗೆ ಶಿಶಿರೋಪಚಾರವದು
ಒಲಿವ ಬೇಗೆಯು ಬೆಂಕಿಗೊಂಡಲೆವ ಶೀತವದು
ತಾನಾಗೆ ಹಿಮದ ಗೂಡಾರದೊಳಗಿರ್ಪಂತೆ
ನಾನಾ ಹಿಮೋಪಚಾರದ ಹಿಮಗೃಹದಂತೆ
ಬೆಳಗಪ್ಪಿನಿಂ ಶೀತಳಾಲಯದೊಳೊಪ್ಪಿರಲ್
ಬೆಳಗಾಗೆ ಮಲುಹಣಿಯು ಕಣ್ದೆ ಪೊಸತಾಗಿರಲ್

ಕಂಡು ಮಲುಹಣಿಯಿದೇಂ ಹಿಮವೊಟ್ಟಿಲೇಕಿಲ್ಲಿ
ಕಂಡೆನಾನಿರುಳಿರ್ದ ಮಲುಹಣಂ ತಾನಿಲ್ಲಿ
ಅಕಟಕಟ ಮಲುಹಣಂ ಹಿಮದೊಳ್ಕರುಂಟಿದಂ
ಅಕಟಕಟ ಪಾಪಿ ಎನಗೊಲ್ದು ನೆರೆ ಮಗ್ಗಿದಂ
ಪಾಪಿಯಾದೆಂ ಪಾಪಿಯಾದೆನೆಂದೆನುತಲ್ಲಿ
ತಾಪಿಸುತ್ತಂ ಪರಿಚ್ಛೇದಿಸುತ್ತಂತಲ್ಲಿ
ಸತ್ತ ನೋಡ ಮರಣವಿದು ತಪ್ಪದೆನುತ ಬಂದು
ಸುತ್ತುಮುತ್ತಿರ್ದ ಸತಿಯರು ಸಂದಣಿಸಿ ನಿಂದು
ತೆಗೆ ಹಿಮವನೆಂದು ಮರವುಟ್ಟನಿಂ ತೆಗೆಯಿಸಲ್
ಪೊಗೆದು ಕೆಲಬಲಕಿಕ್ಕಿ ಸುತ್ತುಂ ನಿವಾರಿಸಲ್
ಕಪಟವಳಿದೊಳಗೊಪ್ಪುವನುರಾಗವಿರ್ಪಂತೆ
ಯುಪಚಾರವಳಿದು ಸತ್ಯಸ್ನೇಹವಿರ್ಪಂತೆ
ಇರ್ದನಾ ಮಲುಹಣಂ ವಿರಹಕ್ಕೆ ತಂಪಾಗಿ
ಇರ್ದನಾ ಮಲುಹಣಂ ತಾಪಕ್ಕೆ ತೆರಹಾಗಿ
ಇರೆ ಕಂಡು ಮಲುಹಣಿ ಮನಂ ಮರುಗಿ ಬೆರಗಾಗಿ
ಉರಿವರಿವ ವಿರಹದುರವಣೆಗೆ ಕಲ್ಮರನಾಗಿ
ಮಲುಹಣನಳ್ಕರಿಂ ಕರುಣದಿಂದಂ ನೋಡಿ
ಮಲುಹಣಿ ಮನೋದುಃಖದಿಂದೆ ನುಡಿದಳ್ಬಾಡಿ

ಎನ್ನ ಮೇಲಿಕ್ಕುವೀ ಚಿತ್ತದಾತುರತೆಯುಂ
ಪನ್ನಗಾಭರಣನೊಳ್ಮಾಳ್ಪದೆನ್ನೊಲ್ಮೆಯುಂ
ಎಂದ ಮಾತಂ ಕೇಳ್ದು ಬಳಿಕ ನೀನೆನಗಪ್ಪೆ
ಇಂದುಧರನಂ ಬೇಡು ನಿನ್ನತ್ತನಾಂ ಬಪ್ಪೆ
ಎನ್ನ ಹವಣೇ ಕೋಟಿ ಮಲುಹಣಿಯರಾಗರೇ

ಮನಸಿಜಾರಿಯನರಿದು ದುಃಖಮಂ ನೀಗರೇ
ಬೇಡಿಕೊಳ್ಳೀಶ್ವರನೊಳಿನ್ನು ಮಲುಹಣ ಪೋಗು
ನೋಡಬಾರದು ವಿರಹದನುತಾಪಮಂ ನೀಗು

**ಎನೆ ವಿರಹಮಂ ತೆಗೆದು ಹರನ ಮೇಲಿಕ್ಕಿದಂ**
**ತನಿನೇಹಮಂ ಶಿವನ ಮೆಲ್ಲಡಿಗೆ ಸಾರ್ಚಿದಂ**

ನಡೆತಂದನಾ ಹಿಮವನೋಸರಿಸಿ ಮಲುಹಣಂ
ಮೃಡನಲ್ಲಿಗನುತಾಪವೆಯ್ದುತಿರೆ ಮಲುಹಣಂ
ಬರಲಲ್ಲಿ ವಿಜಯೇಶ್ವರನ ರಂಗ ಮಂಟಪಕೆ
ಹರನ ಶಂಕರನ ಶಶಿಧರನ ಶಿವಮಂಟಪಕೆ
ಕತ್ತುರಿಯ ಸಾರವಣೆ ರಂಜಿಸುವ ಭೂಮಿಯಿಂ
ಮುತ್ತು ಮಾಣಿಕದಿನೊಪ್ಪುವ ರಂಗವೋಲೆಯಿಂ
ನಡುವೆ ಕೇಳಿಸುವ ತೂರ್ಯತ್ರಯದ ಲಹರಿಯಿಂ
ಪೊಡೆವಡುವ ಬಲವಪ್ಪ ಕುಣಿವ ಭಕ್ತಾಳಿಯಿಂ
ತನತನಗೆ ಭೋರೆಂಬ ದುಂದುಭಿ ಧ್ವನಿಗಳಿಂ
ತನತನಗೆ ಪೂರಯಿಪ ಶಂಖಸ್ವರಗಳಿಂ
ಅಲ್ಲಲ್ಲಿಯುಚ್ಚರಿಪ ವೇದನಾದಂಗಳಿಂ
ಅಲ್ಲಲ್ಲಿ ಕೇಳಿಸುವ ಶಿವಕೀರ್ತನಂಗಳಿಂ
ತರತರಂಗೊಂಡು ಬರ್ಪಗ್ಗಣಿಯ ಹಾದಿಯಿಂ
ನೆರೆನೆರೆದು ತರುತಿರ್ಪ ಪರಿಮಳದ ವೀಧಿಯಿಂ
ಪಂಚಧಾರಾಶರ್ಕರಾಭಾಜನಂಗಳಿಂ
ಪಂಚಾಮೃತಂ ತುಂಬಿಯೊಪ್ಪುವ ಕೊಡಂಗಳಿಂ
ಸಂದಣಿಪ ಸಂಭ್ರಮವನೆಂತಕ್ಕೆಯೋಸರಿಸಿ
ಇಂದುಧರನಲ್ಲಿಗಾತುರಚಿತ್ತನುರವಣಿಸಿ
ಸಂದಣಿಸಿ ಕುದಿವ ಕರಣಂಗಳಿಂ ನಡುಗುತುಂ
ಬಂದು ಕುಳ್ಳಿರ್ದು ಶಿವನಂ ಹೊಗಳ ತೊಡಗುತಂ

ದೇವ ಶಂಕರ ಭಕ್ತಜನ ಮನೋರಥ ರೂಪ
ದೇವ ಶಶಿಧರ ಶರಣಹೃದಯ ಸದಮಳ ದೀಪ
ಗೌರೀಕಚಪ್ರಚಯ ಪುಷ್ಪಗಂಧಕ್ಕೆಳಸಿ
ಭೋರೆನುತ್ತೆರಗಿ ಮಧುಕರವ್ರಜಮನನುಕರಿಸಿ

ಮೊರೆವ ಗರಳದ ಗರುವ ಕರುಣಿಪುದು ಕರುಣಿಪುದು
ಹೆರೆಯ ಸುಧುರಾಂಶುಮಂಡಿತಮುಕುಟ ಕರುಣಿಪುದು
ಸುರಶಿರೋಮಾಲೆಯ ಮಹಾಮಹಿಮ ಕರುಣಿಪುದು
ಸರಸಿಜಾಸನ ಶಿರಃಕಂಜ ಕರ ಕರುಣಿಪುದು
ಕರುಣಿಪುದು ಕರುಣಾಳು ಶಂಭುಸಿಧಿ ಕರುಣಿಪುದು
ಗಿರಿಜಾಮನೋಹರನೆ ಕರುಣಿಪುದು ಕರುಣಿಪುದು
ಎಂದು ಕುದಿಕುದಿವ ಕರಣಂಗಳೊಳ್ ಬಣ್ಣಿಸಲ್
ಬಂದು ವಿರಹಸ್ತೋತ್ರನೀಶನೊಳ್ ಸಂದಿಸಲ್

ಶಂಕರಂ ಕೇಳ್ದು ಸೈರಿಸಲಾರದೇಳ್ತಂದು
ಭೋಂಕನೆ ಮಹಾಲಿಂಗದಂಗದಿಂದೈತಂದು
ಸುರಿವ ಪೂಮಳೆಯೊಳಗೆ ಪೊಯ್ವ ದುಂದುಭಿಯೊಳಗೆ
ನೆರೆವ ಗಣಕುಲದೊಳಗೆ ಕರೆವ ಕಹಳೆಗಳೊಳಗೆ
ಕಿರುಜಡೆ ಮಹಾಮುಕುಟವಿಂದುಕಳೆ ರಂಜಿಸಲ್
ಕರಿಗೊರಲ್ ಪಂಚಮುಖದಶಭುಜಂ ರಂಜಿಸಲ್
ಮೆಚ್ಚಿದೇಂ ಬೇಡಿಕೊಳ್ಳೆಲವೊ ಮಲುಹಣ ಎನಲ್
ಚೆಚ್ಚರಂ ಮಲುಹಣಿಯ ನೀವುದೆನೆಗೆಂದೆನಲ್
ಕೊಟ್ಟೆನೆಲೆ ಮಗನೆ ಕೊಟ್ಟೆಂ ಮತ್ತೆ ಬೇಡೆನೆಲ್
ನಿಟ್ಟೆ ಪಿರಿದಾಯ್ತು ಮಲುಹಣ ಬೇಡು ಬೇಡೆನಲ್
ದೇವ ಮಲುಹಣಿಯೊಡನೆ ನೂರುಂ ಬರಿಸವಿರ್ದು
ದೇವಲೋಕಕ್ಕೆ ನಿಮ್ಮಡಿಗಳಂ ನೆರೆ ಸಾರ್ದು
ತನು ಸಹಿತಲೀರ್ವರುಂ ಬರ್ಪಂತೆ ಕರುಣಿಪುದು
ಮನವಾರೆ ಸುಖದೊಳಿರ್ಪಂದಮಂ ಕರುಣಿಪುದು
ಎಂದೊಡಭವಂ ಕೊಟ್ಟೆನೆಂದು ಕಾರುಣ್ಯದಿಂ
ಮುಂದಿರ್ದ ಲಿಂಗದೊಳೈಕ್ಯನಾನಂದದಿಂ
ಪುಗಲತ್ತಲಿತ್ತಲೀಶ್ವರಸುಪ್ರಸಾದದಿಂ
ಬಗೆವೆರ್ಚೆ ಮೆಯ್ವೆರ್ಚೆ ಬರುತಿರ್ದನೊಪ್ಪದಿಂ
ಮಲುಹಣಿಯುಮವಳ ತಾಯುಂ ಕೂಡಿ ವೈಯಿಕ್ಕಿ
ಮಲುಹಣಂ ಮುಂದೆ ಬಂದಾನಂದದಿಂದುಕ್ಕಿ
ರಂಗಮಂಟಪದೊಳಗೆ ಹರುಷದಿಂ ಮುಂದಿಟ್ಟು

ಲಿಂಗದ ಸಮುಕ್ಷದೊಳ್ಮಗಳನೊಪ್ಪಿಸಿ ಕೊಟ್ಟು
ಮಗಳುಮಂ ಮಲುಹಣನ ನಗರಿಯೊಳು ಮೆರಿಸುತುಂ
ಸೊಗಯಿಪ ಪ್ರವರಸೇನಂ ಬಂದು ಮೆರಿಸುತುಂ
ಬರೆ ನಿಜ ನಿವಾಸಕ್ಕೆ ಬಂದರಾನಂದದಿಂ
ಪರಮುನಿತ್ರಾಜ್ಞೆಕೆಯ್ಗೂಡಿ ಸಮುಚಿತ್ತದಿಂ

ಕಾಮುಮುಂ ಕ್ರೋಧಮುಂ ಶಂಕರಂಗರ್ಪಿತಂ
ನೇಮುಮುಂ ಪ್ರೇಮುಮುಂ ಶಶಿಧರಗರ್ಪಿತಂ
ಕೂಟಮುಂ ತೃಪ್ತಿಯುಂ ತ್ರಿಣಯನಿಂಗರ್ಪಿತಂ
ನೋಟಮುಂ ಬೇಟಮುಂ ಪುರಹರಂಗರ್ಪಿತಂ
ಕಂಡುದುಂ ಸೋಂಕಿದುಂ ಕಾಮಾರಿಗರ್ಪಿತಂ
ಕೊಂಡುದುಂ ಸವಿದುದುಂ ವಿಷಧರಂಗರ್ಪಿತಂ
ಆಗಿ ನೂರುಂಬರಿಸಭವನಾಜ್ಞೆಯೊಳಿರ್ದು
ನಾಗಭೂಷಣನಿತ್ತ ಭೋಗನಿಕರದೊಳಿರ್ದು
ಭೂಲೋಕದಿರವು ಸಾಲ್ಗೆಂದಿರ್ಬ್ಬರುಂ ಬಂದು
ಬಾಲೇಂದು ಮೌಳಿಯಲ್ಲಿಗೆ ಭರದೊಳೇಳ್ತಂದು
ದೇವ ಮುನ್ನಿತ್ತ ವರಮಂ ಕರುಣಿಪುದು ತಂದೆ
ದೇವಯಿಲ್ಲಿರವೆಮಗೆ ಸಾಲ್ಗುಮಿನ್ನೆಲೆ ತಂದೆ
ಕಾರುಣ್ಯವಾರ್ಧಿ ವಿಜಯೇಶ್ವರನೆ ಕರುಣಿಪುದು
ಮಾರಾರಿ ದುರಿತಾರಿ ಕಾಲಾರಿ ಕರುಣಿಪುದು
ಭಕ್ತಾತ್ರಸಂತುಷ್ಟಮುಕ್ತನೇ ಕರುಣಿಪುದು
ಮುಕ್ತಿದಾಯಕನೇ ಗರಳಗ್ರೀವ ರಕ್ಷಿಪುದು
ಗಗನಚರಪುರದಹನವನವಹ್ನಿ ಕರುಣಿಪುದು
ಸಗುಣನಿರ್ಗುಣತತ್ವನಿತ್ಯನಿಧಿಕರುಣಿಪುದು
ಸತ್ಯನೆ ಸದಾಶಿವನೆ ಶಾಶ್ವತನೆ ಕರುಣಿಪುದು
ನಿತ್ಯನೆ ನಿರಾಶ್ರಯನೆ ನಿರ್ಭಯನೆ ಕರುಣಿಪುದು
ನಿರ್ಮಳನೆ ನಿರುಪಮನೆ ನಿರವಯನೆ ಕರುಣಿಪುದು
ನಿರ್ಮಳನೆ ನಿಷ್ಕಳನೆ ಕರುಣಿಪುದು ಕರುಣಿಪುದು
ಗಜಚರ್ಮದಭವ ಪುಲಿದೊವಲದರಸ ಕರುಣಿಪುದು
ಭುಜಗಾಭರಣ ನಿರಾವರಣನಿಧಿ ಕರುಣಿಪುದು

ಉಗ್ರದೇವೋಗ್ರಗರಳಗ್ರೀವನೆ ಕರುಣಿಸುದು
ನಿಗ್ರಹಾನುಗ್ರಹ ಸಮುಗ್ರಬಲ ಕರುಣಿಸುದು

ಎಂದು ಪೊಗಳುತ್ತ ಪೊಣ್ಮುತ್ತ ಪತ್ತಿರೆ ಬಂದು
ಇಂದುಧರನೊಳ್ಪೊಕ್ಕರಾನಂದದಿಂದಂದು
ಮೇಲೆ ನೆಗೆದುದು ವಿಮಾನಂ ಗಗನವೆಡೆಗೊಳಲ್
ಭೂಲೋಕದೊಳ್ ಪುಷ್ಪವೃಷ್ಟಿ ಸುಖಮುಂ ಕೊಡಲ್
ನೆರೆದ ಕಾಶ್ಮೀರ ದೇಶಂ ನೋಡಿ ಬೆರಗಾಗೆ
ಹರಭಕ್ತರೆಲ್ಲರ್ಗೆ ಸಂತಸಂ ಪಿರಿದಾಗೆ
ಫುಲುಹಣಿಯು ಮಲುಹಣನು ಜಯಜಯಧ್ವನಿಯೊಳಗೆ
ಲಲನೆಯರ ಅನುಮಿಷರ ಚಮರ ಸೀಗುರಿಯೊಳಗೆ
ಬಂದು ಕೈಲಾಸಮುಂ ಪೊಕ್ಕರಾನಂದದಿಂ
ಇಂದುಧರನಂ ಕಂಡು ವೈಯ್ಯಿಕ್ಕಿ ಹರುಷದಿಂ
ಬಂದಿರ್ದ ಸುಖಮಿಥುನಮುಂ ಶಿವಂ ನೆರೆ ನೋಡಿ
ಇಂದುಮುಖಿ ಪಾರ್ವತಿಗೆ ತೋರಿ ಹರುಷಂಗೂಡಿ
ಕಡು ನೇಹದಿಂ ಮಲುಹಣಗೊಲಿದರಿಂತುಂಟೆ
ಬಿಡದುರಿವ ವಿರಹಕ್ಕೆ ಮೆಯ್ಯಾಂತರಿಂತುಂಟೆ
ಹಿಮದೊಳಗೆ ನಿಂದಿರ್ದು ಸೈರಿಸಿದರಿಂತುಂಟೆ
ಹಿಮಗೃಹದೊಳಗಿರ್ಪಂತೆ ನಿಂದಿರ್ದರಿಂತುಂಟೆ
ಎನ್ನಲ್ಲಿ ಬೇಡೆನಲ್ ಬೇಡಿ ಬಂದವರುಂಟೆ
**ತನ್ನ ವಿರಹವನೆನ್ನ ಮೇಲಿಟ್ಟರಿಂತುಂಟೆ**
ಎಂದು ಕೊಂಡಾಡುತುಂ ಗಣಕುಲಕೆ ತೋರುತುಂ
ಮುಂದುವರಿದಾನಂದ ರಸದೊಳೋಲಾಡುತುಂ
ಮಲುಹಣಂಗಲ್ಲಿ ನಲವಿಂದ ಗಣಪದವಿತ್ತು
ಮಲುಹಣಿಗೆ ರುದ್ರಕನ್ನಿಕೆಯರಿಪ್ಪಿರವಿತ್ತು

ಸಕಲ ಗುಣ ನಿಖಿಳಪತಿಯಕಳಂಕನೊಪ್ಪಿದಂ
ಸಕಲಸುರನಿಕರಮಣಿಮುಕುಟಪದನೊಪ್ಪಿದಂ
ಅಸಿತಸಮುಭಸಿತಮಯನಿಶಿತತನು ವೊಪ್ಪಿದಂ
ಕುಸುಮಶರ ಪುರದಹನ ವನವಹ್ನಿಯೊಪ್ಪಿದಂ

ಸುರರ ಖೇಚರರ ಕಿನ್ನರರ ಪತಿಯೊಪ್ಪಿದಂ
ಗರುಡ ಗಂಧರ್ವ ಮುನಿಪರರ ಪತಿಯೊಪ್ಪಿದಂ
ಸುರುಚಿರ ಸುಧಾಕರ ಕಳಾಜೂಟನೊಪ್ಪಿದಂ
ಆರರೆ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

**ಕಂದ॥** ಕರುಣಂ ಮಿಗೆ ಮಲುಹಣನಂ
ವಿರಹಾನಲದಗ್ಧ ಚಿತ್ತನಂ ಮಲುಹಣಿಯೊಳ್ ।
ನೆರಪಿ ನೆರೆ ಮೆರೆದ ಪಂಪಾ ।
ಪುರಪತಿ ಎಮಗೀಗೆ ಭಕ್ತಿ ಸುಖ ಸಂಪದವಂ ॥

---

# ಭೃಂಗೀಶ್ವರನ ರಗಳೆ.

ಕಂದ॥ ಶೃಂಗಾರಾದಿ ಸಮಸ್ತ ರ।
ಸಂಗಳನಭಿನಯಿಸಿ ತೋರೆ ಮಿಗೆ ಮೆಚ್ಚುತ್ತಾ॥
ಲಿಂಗಿಸುತೆ ತನ್ನನಿತ್ತಂ।
ಭೃಂಗೀಶಂಗೆಮ್ಮ ಹಂಪೆಯ ವಿರುಪಾಕ್ಷಂ॥

## ರಗಳೆ.

ಶ್ರೀಕೈಲಾಸ ಸಭಾಮಂದಿರದೊಳ್
ಲೋಕೇಶ್ವರನಿರೆ ಭದ್ರಾಸನದೊಳ್
ಕೆಲಬಲದೊಳ್ ಶೈವಗಣಂ ಬಂದಿರೆ
ಜಲಜಭವಂ ಜಲಶಯನಂ ಬಂದಿರೆ
ಸುರರುಂ ಕಿನ್ನರರುಂ ಸಂಗಡದೊಳ್
ಗರುಡಗಾಂಧರ್ವರ್ವಂಗಡದೊಳ್
ಮುನಿಗಳ್ ಸಿದ್ಧರ್ ವಿದ್ಯಾಧರರುಂ
ಮನುಗಳ್ ಕಿಂಪುರುಷಖೇಚರರುಂ

ವೇದಂ ತರ್ಕಂ ತಾವೊಂದೆಸೆಯೊಳ್
ನಾದಂ ರಾಗಂ ಬೇರೊಂದೆಸೆಯೊಳ್
ರವಿ ಶಶಿಕೋಟಿಗಳಂತೊಂದೆಸೆಯೊಳ್
ಭುವನಾಧಿಕ್ಯಪತಿಗಳೊಂದೆಸೆಯೊಳ್
ಮಕುಟಂಗಳ ಪಂಕ್ತಿಗಳೊಂದೆಸೆಯೊಳ್
ಸಕಲಾನರ್ಘ್ಯದ ಣಿಗಳೊಂದೆಸೆಯೊಳ್
ತರದಿಂ ಸುರನಾರಿಯರೊಂದೆಸೆಯೊಳ್
ನೆರೆದಿರೆ ಕಿನ್ನರಿಯರದೊಂದೆಸೆಯೊಳ್
ಸುರಪನನಲನಂತಕ ನೈರುತಿಗಳ್
ವರುಣನನಿಲ ವಿತ್ತಪ ದಿಕ್ಪತಿಗಳ್
ಬಂದಿರೆ ಚಂದ್ರಾಭರಣನ ಸಭೆಯೊಳ್
ಹೇಂದದ ಕಾಂತಿ ನೆಗೆದವೇಣ್ದೆಸೆಯೊಳ್

ಮೊಳೆತವು ಸುರಸತಿಯರ ತನುವಿಂದಂ
ಬೆಳೆದವು ರನ್ನದ ತೊಡಿಗೆಗಳಿಂದಂ
ದಳವೇರಿದವು ಸಿತಾಂಬರದಿಂದಂ
ತಳಿತವವರ್ಗಳ ಮುಖರಸದಿಂದಂ
ಕವಲ್ವರಿದವು ಕಂಗಳ ಕಡೆಯಿಂದಂ
ತವೆ ಕುಸುಮಿತವಾದವು ನಗೆಯಿಂದಂ
ಇಂತೆಸವಾ ನವರತ್ನಪ್ರಭೆಯೊಳ್
ಸಂತತವೊಪ್ಪುವ ಶರ್ವನ ಸಭೆಯೊಳ್
ಗಡಣದ ಕಿನ್ನರಿಯುರ್ತಾರೈಸಲ್
ಮೃಡನ ಮನಂ ಸುಖದಿಂ ಹಾರೈಸಲ್
ರಾಗದ ರಸದೊಳ್ ಸಭೆಯೀಸಾಡಲ್
ಲಾಗಿನ ಲಹರಿಯೊಳಗೆ ಮುಳುಗಾಡಲ್

ವಹಣಿಯ ತೆರೆಯೊಳ್ ತೇಂಕಾಡುತ್ತಿರೆ
ಬಹು ಸುಗತಿಗಳೊಳಗೋಲಾಡುತ್ತಿರೆ
ತಿರುಪಿನ ಸುಳಿಗಳೊಳಗೆ ಸುಳಿವುತ್ತಿರೆ
ತರದಿಂ ವಹಣಿಗಳೊಳೆ ಮಣಿವುತ್ತಿರೆ
ಕಂಪನದೋಳ್ಪೊಂಪುಳಿವೋಗುತ್ತಿರೆ
ಇಂಪಿನ ಸೋಂಪಿನೊಳಗೆ ಕರಗುತ್ತಿರೆ
ಕಿನ್ನರಿಯರ್ ಶಿವನಂ ಕೇಳಿಸುತಿರೆ
ಪನ್ನಗಭೂಷಂ ತಲೆದೂಗುತ್ತಿರೆ
ಇರಲೊಂದಣಕದ ಜವನಿಕೆ ಮೂಡಲ್
ಸುರಸಭೆ ಕೌತುಕದಿಂದಂ ನೋಡಲ್
ಭೃಂಗೀಶಂ ತಾನಾಗದೆ ಮಾಣಂ
ಹಿಂಗಿಸು ಸಭೆಯಂ ಬಂದಂ ಜಾಣಂ
ತೆರಹಂಗುಡು ಚಕ್ರಿಗೆ ಕಿನ್ನರಪತಿ
ಹೆರೆಸಾರಿಂದ್ರ ತೊಲಗು ವಾಣೀಪತಿ
ಹೋ ಹೋ ಕಳಕಳವೇಕೆಂದೆನುತಂ
ಆಹಾ ಹೊಸ ಪರಿ ಚಿತ್ರೈಸೆನುತಂ
ನಂದೀಶಂ ನುಡಿವುತೆ ಹೆರಸಾರಲ್
ಚಂದದ ರಸವಾದ್ಯಂಗಳ್ ಸೇರಲ್

# ಪ್ರಸ್ತಾವನೆ.

---

ಮಡಿವಾಳ ಮಾಚಿದೇವನ ವಚನಗಳುಳ್ಳ ಗ್ರಂಥವು ನಮಗೆ ಇನ್ನೂ ಉಪಲಬ್ಧವಾಗಿರುವದಿಲ್ಲ. ಆದರೆ ಅವು ಅನೇಕ ವಚನ ಸಂಗ್ರಹ ಗ್ರಂಥಗಳಲ್ಲಿ ಉಪಲಬ್ಧವಿರುತ್ತವೆ. ಅವುಗಳನ್ನು ನಾವು ಆಯ್ದು ಒತ್ತಟ್ಟಿಗೆ ಸೇರಿಸಿ ವಿಷಯಾನುಸಾರವಾಗಿ ಹೊಂದಿಸಿ ಈ ಗ್ರಂಥವನ್ನು ರಚಿಸಿರುತ್ತೇವೆ. ಪುರಾತನ ವಚನಕಾರರ ವಚನಗಳು ಬಹುಶಃ ಇಡಿಯಾಗಿ ಒತ್ತಟ್ಟಿಗೆ ದೊರಕುವದಿಲ್ಲ. ಆದುದರಿಂದ ಅವುಗಳನ್ನು ಮೇಲೆ ಹೇಳಿದಂತೆ ಸಂಗ್ರಹಿಸಿ ಗ್ರಂಥಗಳನ್ನು ರಚಿಸಬೇಕಾಗುತ್ತದೆ.

ಮಡಿವಾಳ ಮಾಚಿದೇವನು ಬಸವನ ಸಮಕಾಲೀನನಾಗಿದ್ದಾನೆ. ಆವನ ಕಾಲಕ್ಕಿದ್ದ ಶಿವಶರಣರಲ್ಲಿ ಅವನು ಬಹು ಪ್ರಸಿದ್ಧನು. ಶಿವಾನುಭವ ಮಂಟಪದ ಚರ್ಚೆಗಳಲ್ಲಿ ಅವನು ಭಾಗವಹಿಸುತ್ತಾ ಇದ್ದದ್ದು ಕಂಡು ಬರುತ್ತದೆ. ಶೂನ್ಯಸಂಪಾದನೆ ಮೊದಲಾದ ವಾದ ವಚನಗಳಲ್ಲಿ ಅವನ ಉಕ್ತಿಗಳು ಹೇರಳವಾಗಿ ದೊರಕುತ್ತವೆ.

ಪುರಾತನ ವಚನಗಳಂತೆಯೇ ಅವನ ವಚನಗಳಲ್ಲಿ ಓಜಸ್ಸು ಇದೆ, ಬಲವು ಇದೆ. ಅವು ಈಚಿನ ವಚನಗಳಂತೆ ಉದ್ದವಾದವುಗಳಲ್ಲ. ಅವುಗಳು ಭಾವಪೂರಿತವೂ ಅರ್ಥ ಬೋಧಕವೂ ಇರುತ್ತವೆ. ಅವನ ವಚನಗಳಲ್ಲಿ ಅಲ್ಲಲ್ಲಿ ಸಂಸ್ಕೃತ ಅವತರಣಗಳೂ ಕಂಡು ಬರುತ್ತವೆ. ಇದರ ಮೇಲಿಂದ ಅವನು ಬಹುಶ್ರುತನೂ ವಿದ್ವಾಂಸನೂ ಆಗಿದ್ದನೆಂದು ತೋರುತ್ತದೆ.

ಮಡಿವಾಳ ಮಾಚಿದೇವನ ಮೂಲ ಗ್ರಾಮವು ವಿಜಾಪುರ ಜಿಲ್ಲಾ ಸಿಂದಗಿ ತಾಲೂಕಿನಲ್ಲಿರುವ ಹಿಪ್ಪರಿಗೆಯು. ಇದು ವಿಜಾಪುರ ಪಟ್ಟಣದ ಪೂರ್ವಕ್ಕೆ ೨೨ ಮೈಲುಗಳ ಮೇಲೆ ಮತ್ತು ಬಾಗೇವಾಡಿಯಿಂದ ಉತ್ತರಕ್ಕೆ ೧೮ ಮೈಲುಗಳ ಮೇಲೆ ಇದೆ. ಇಲ್ಲಿ ಕಲ್ಲಿನಾಥನ ದೇವಾಲಯವೂ ಉಂಟು. ಆದರ ಕಟ್ಟಡವು ಪುರಾತನ ಕಾಲದ್ದು ಇರುತ್ತದೆ. ಅದರಲ್ಲಿ ದೇವಗಿರಿ ಯಾದವರ ಒಂದು ಶಿಲಾಶಾಸನವೂ ಇದೆ. ಮಡಿ

ವಾಳ ಮಾಚಿದೇವನು ತನ್ನ ವಚನಗಳನ್ನು 'ಕಲಿದೇವರದೇವಾ' ಎಂಬ ಮುದ್ರಿಕೆಯನ್ನಿಟ್ಟುಕೊಂಡು ರಚಿಸಿದ್ದಾನೆ. ಈ ಮುದ್ರಿಕೆಯು ಈ ಗ್ರಾಮದಲ್ಲಿರುವ ಈ ಕಲ್ಲಿನಾಥನನ್ನು ಉದ್ದೇಶಿಸಿಯೇ ಇರುತ್ತದೆ.

ಈ ಗ್ರಾಮದಲ್ಲಿ ಮಡಿವಾಳ ಮಾಚಿದೇವನ ಯಾವ ಕುರುಹೂ ಈಗ ಇರುವದಿಲ್ಲ. ಅವನು ಇಲ್ಲಿಯ ಕಲ್ಲಿನಾಥ ಲಿಂಗದಲ್ಲಿಯೇ ಐಕ್ಯ ಹೊಂದಿದ ನೆಂದು ಸ್ಥಳಿಕ ಐತಿಹ್ಯವಿದೆ. ಈ ಗ್ರಾಮದಲ್ಲಿ ಮಡಿವಾಳಪ್ಪನ ಗದ್ದುಗೆ ಮತ್ತು ಮಡಿವಾಳಪ್ಪನ ಮಠ ಎಂದು ಎರಡು ಸ್ಥಾನಗಳಿವೆ. ಇವು ಸುಮಾರು ೧೦೦-೧೫೦ ವರುಷಗಳ ಹಿಂದೆ ಆಗಿ ಹೋದ ಇದೇ ಹೆಸರಿನ ಒಬ್ಬ ಸತ್ಪುರುಷನವು ಇರುತ್ತವೆ. ಆದರೆ ಅವುಗಳಿಗೂ ಮಡಿವಾಳ ಮಾಚಿದೇವನಿಗೂ ಏನೂ ಸಂಬಂಧವಿಲ್ಲ.

ಮಡಿವಾಳ ಮಾಚಿದೇವನ ಉಲ್ಲೇಖಗಳಿದ್ದ ಗ್ರಂಥಗಳು ಅನೇಕ ಇರುತ್ತವೆ. ಬಸವ ಪುರಾಣ, ಸಿಂಗಿ ರಾಜ ಪುರಾಣ, ಚನ್ನಬಸವ ಪುರಾಣ, ಶರಣ ಲೀಲಾಮೃತ, ನಿರಂಜನವಂಶ ರತ್ನಾಕರ, ಕಾಲಜ್ಞಾನದ ವಚನಗಳು, ಭೈರವೇಶ್ವರ ಕಾವ್ಯ ಕಥಾಮಣಿ ಸೂತ್ರ ರತ್ನಾಕರ ಈ ಮೊದಲಾದ ಗ್ರಂಥಗಳಲ್ಲಿ ಅವನ ವಿಷಯವಾಗಿ ಉಲ್ಲೇಖಗಳು ಬಂದಿರುತ್ತವೆ. ಮಡಿವಾಳನ ಸಾಂಗತ್ಯವೆಂತಲೂ ಒಂದು ಕಾವ್ಯವು ಇದೆ. ಅವುಗಳಲ್ಲಿ ಬಂದ ವಿಷಯುಗಳ ಮೇಲಿಂದ ಮಡಿವಾಳ ಮಾಚಿದೇವನು ಬಸವೇಶ್ವರ ಕಾಲಕ್ಕೆ ಆಗಿ ಹೋದ ಶಿವಶರಣರಲ್ಲಿ ಮುಖ್ಯ ಸ್ಥಾನವನ್ನು ವಹಿಸಿದ್ದನೆಂದು ತಿಳಿದು ಬರುತ್ತದೆ.

ಕಲ್ಯಾಣಕ್ಕೆ ಬಸವೇಶ್ವರನು ಹೋದ ಬಳಿಕ ಮಾಚಿದೇವನು ಹಿಪ್ಪರಿಗೆಯಿಂದ ಹೊರಟು ರಾಜಧಾನಿಗೆ ಬಂದನು. ಅವನು ಬರುವ ಮಾರ್ಗದಲ್ಲಿ ಭೀಮಾನದಿಗೆ ಮಹಾಪೂರವು ಬಂದಿರಲು ಅವನು ಅದರಲ್ಲಿಯೇ ಮುಂದುವರಿದನು. ಆಗ ನದಿಯು ಇಬ್ಭಾಗವಾಗಿ ಅವನಿಗೆ ದಾರಿಯನ್ನು ಕೊಟ್ಟಿತಂತೆ. ಮುಂದೆ ಅವನು ಕಲ್ಯಾಣಕ್ಕೆ ಬಂದು ತನ್ನ ಮಡಿವಳನ ಕಾಯಕವನ್ನು ಮಾಡುತ್ತಾ ಇದ್ದನು. ಅವನು ಅಲ್ಲಿಯ ಶಿವಶರಣರ ಬಟ್ಟೆಗಳನ್ನು ತೊಳೆದು ಶುಚಿಯಾಗಿ ಇಟ್ಟು ಅವರಿಗೆ ಒಪ್ಪಿಸುವದೇ ತನ್ನ ಮುಖ್ಯ ಉದ್ಯೋಗವಾಗಿಟ್ಟುಕೊಂಡನು. ಹೀಗೆ ಅವುಗಳನ್ನು ಶರಣರಿಗೆ ತಂದು ಕೊಡುವಲ್ಲಿ ಯಾರೂ ತನ್ನನ್ನು ಮುಟ್ಟ

ಬಾರದು, ಮುಟ್ಟಿದರೆ ಅವರ ಚಂಡನ್ನು ಹಾರಿಸುವೆನೆಂದು ಗಂಟೆಯನ್ನು ಬಾರಿಸುತ್ತ ಬರುವದು ಅವನ ವಾಡಿಕೆಯಾಗಿತ್ತು. ಆದರೆ ಒಬ್ಬನು ಅವನನ್ನು ಬುದ್ಧಿ ಪುರಸ್ಸರವಾಗಿ ಮುಟ್ಟಲು, ಮಾಚಿದೇವನು ಅವನ ಚಂಡನ್ನು ಹಾರಿಸಿದನು. ಬಿಜ್ಜಳನ ಕಡೆಗೆ ಇದರ ದೂರು ಒರಲು ಮಾಚಿ ದೇವನನ್ನು ಹಿಡಿದು ತರಲು ಅಪ್ಪಣೆಯನ್ನು ಕೊಟ್ಟನು. ಆದರೆ ತನ್ನನ್ನು ಹಿಡಿಯಲಿಕ್ಕೆ ಬಂದವರನ್ನೆಲ್ಲ ಅವನು ಕೊಂದು ಹಾಕಿದನು. ಆನೆ ಕಾಲಾಳುಗಳೂ ಕಳಿಸಲ್ಪಟ್ಟವು. ಅವೂ ಕೊಲ್ಲಲ್ಪಟ್ಟವು. ಆಗ ಬಸವೇಶ್ವರನು ಮಡಿವಾಳ ಮಾಚಿದೇವನು ಸಾಮಾನ್ಯ ಪುರುಷನಲ್ಲ. ಅವನ ವ್ರತಕ್ಕೆ ಭಂಗವಾದುದಕ್ಕೆ ಅವನು ಹೀಗೆ ಮಾಡಿದನೆಂದು ಬಿಜ್ಜಳನಿಗೆ ತಿಳಿಹೇಳಲು ಬಿಜ್ಜಳನು ಮಡಿವಾಳ ಮಾಚಿದೇವನಿಗೆ ಶರಣು ಹೋದನು. ಆಗ ಮಾಚಿದೇವನು ಮಡಿದ ಕಾಲಾಳುಗಳೆಲ್ಲರಿಗೂ ಜೀವದಾನ ಕೊಟ್ಟು ಅವರನ್ನು ಎಬ್ಬಿಸಿದನು. ಹೀಗೆ ಅವನ ಬಗ್ಗೆ ಒಂದು ಐತಿಹ್ಯವಿದೆ.

ಮಡಿವಾಳ ಮಾಚಿದೇವನು ಶಿವಶರಣರಲ್ಲಿ ಬಹು ಶೂರನು. ಅವನು ವೀರಭದ್ರನ ಅವತಾರವೆಂತಲೂ ತಿಳಿಯಲ್ಪಟ್ಟಿದ್ದಾನೆ. ಬಿಜ್ಜಳನು ಮಧುವರಸ ಹರಳಯ್ಯನವರ ಹಿಂಸೆಯನ್ನು ಮಾಡಿದ ಬಳಿಕ, ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಕೊಟ್ಟು, ಕಪ್ಪಡಿಯ ಸಂಗಮನಾಥನಲ್ಲಿಗೆ ತೆರಳಿದನು. ಆಗ ಅವನು ತನ್ನ ಸ್ಥಾನದಲ್ಲಿ ಚನ್ನಬಸವೇಶ್ವರನನ್ನು ನಿಯಮಿಸಿದನು. ಆದರೆ ಚನ್ನಬಸವೇಶ್ವರನು ಇನ್ನೂ ಚಿಕ್ಕವನು, ಆದುದರಿಂದ ಅವನಿಗೆ ಸಲಹೆಗಾರನಾಗಿ ಮಡಿವಾಳ ಮಾಚಿದೇವನನ್ನು ಬಸವನು ಗೊತ್ತುಪಡಿಸಿ ತಾನು ಕಪ್ಪಡಿಗೆ ಹೋದನು. ಅಂದಿನಿಂದ ಮಡಿವಾಳ ಮಾಚಿದೇವನೇ ಶಿವಶರಣರಿಗೆ ಮುಖ್ಯಸ್ತನಾಗಿ ಉಳಿದನು.

ಬಿಜ್ಜಳನು ಹರಳಯ್ಯ ಮಧುವರಸರನ್ನು ಕೊಲೆ ಬಡಿಸಿದ್ದಕ್ಕಾಗಿ ಪ್ರತೀಕಾರ ಮಾಡಬೇಕೆಂದು ಶಿವಶರಣರು ನಿರ್ಧರಿಸಿದರು. ಆಗ ಜಗದೇವ ಮತ್ತು ಮಲ್ಲಿ ಬೊಮ್ಮಣ್ಣಗಳೀರ್ವರು ಈ ಕಾರ್ಯದಲ್ಲಿ ಮುಂದುವರಿದು ಬಿಜ್ಜಳನನ್ನು ಘಾತಿಸಿದರು. ಆಗ ಕಲ್ಯಾಣದ ರಾಜಧಾನಿಯಲ್ಲಿ ಉಭಯ ಪಕ್ಷಗಳಲ್ಲಿ ಹೊಡೆದಾಟಗಳು ಪ್ರಾರಂಭವಾದುವು. ಅನೇಕ ಅನಾಹುತಗಳು ಸಂಭವಿಸಿದವು. ಬಿಜ್ಜಳನ ತರುವಾಯ ಪಟ್ಟವೇರಿದ ರಾಯ ಮುರಾರಿಯ ದಂಡಾಳುಗಳು ಚನ್ನಬಸವೇಶ್ವರನ ಅರಮನೆಗೆ

ಮುತ್ತಿಗೆಯನ್ನು ಹಾಕಿದರು. ಆದರೆ ಅವರು ಮಾಚಿದೇವನಿಂದ ಚದು ರಿಸಲ್ಪಟ್ಟರು.

ಈ ಸ್ಥಿತಿಯಲ್ಲಿ ಶಿವಶರಣರು ಕಲ್ಯಾಣ ಪಟ್ಟಣದಲ್ಲಿ ಇರುವದು ಅಶಕ್ಯವಾಯಿತು. ಅವರಲ್ಲಿ ಬಹು ಜನರು ಪಟ್ಟಣವನ್ನು ಬಿಟ್ಟು ಹೋದರು. ಆಗ ಮಡಿವಾಳ ಮಾಚಿದೇವ, ಚನ್ನಬಸವ, ಕಿನ್ನರಿ ಬ್ರಹ್ಮಯ್ಯ, ಕೂಗಿನ ಮಾರಿತಂದೆ ಇವರು ಮುಖ್ಯಸ್ಥರಾಗಿ ೧೨ ಸಾವಿರ ಜನರನ್ನು ಸಿದ್ಧಪಡಿಸಿಕೊಂಡು, ರಾಜಧಾನಿಯಿಂದ ಹೊರಬಿದ್ದರು. ಇವ ರೆಲ್ಲರೂ ಭೀಮಾನದಿಯನ್ನು ದಾಟಿ ಮುಂದುವರಿಯುತ್ತ ಈಗಿನ ತೊರಗಲು ನಾಡನ್ನು ಪ್ರವೇಶಿಸಿದರು. ಆದರೆ ರಾಯಮುರಾರಿಯು ಶಿವಶರಣರ ಸೈನ್ಯವನ್ನು ಅಟ್ಟಿಕೊಂಡು ಬಂದನು. ಆಗ 'ತಲ್ಲೂರು, ಮುರಗೋಡ, ಕಡಕೋಳ, ತಡಕೋಡ, ಮೂಗಬಸವ, ಕಾತರವಳ್ಳಿ ಈ ಸ್ಥಳಗಳಲ್ಲಿ ಕಾಳಗಗಳು ಸಂಭವಿಸಿದವು. ಇವುಗಳಲ್ಲಿ ಶಿವಶರಣರು ಬಹು ಶೂರತನದಿಂದ ಕಾದಾಡಿ ವೈರಿಗಳನ್ನು ಹಿಮ್ಮೆಟ್ಟಿಸುತ್ತ ಬಂದರು. ಯುದ್ಧವಾದ ಈ ಸ್ಥಳಗಳೆಲ್ಲವೂ ಬೆಳಗಾವ ಜಿಲ್ಲೆಯಲ್ಲಿ ಬೈಲಹೊಂಗಲ ಮತ್ತು ಸಂಪಗಾವ ತಾಲೂಕುಗಳಲ್ಲಿ ಮಲಪ್ರಭಾ ನದಿಯ ಸಮೀಪದಲ್ಲಿ ಈಗಲೂ ಇರುತ್ತವೆ.

ಕಾತರವಳ್ಳಿಯಲ್ಲಿ ಸಂಭವಿಸಿದ ಕಾಳಗದ ತರುವಾಯ ಯಾವ ತ್ತರೂ ಅಲ್ಲಿ ಸಭೆ ಸೇರಿದರು. ಆಗ ಎಲ್ಲರೂ ಯೋಚಿಸಿಕೊಂಡು ಮುಂದೆ ಉಳವಿಯ ಘೋರಾರಣ್ಯವನ್ನು ಸೇರಬೇಕೆಂದು ನಿಶ್ಚಯಿಸಿದರು. ಆ ಪ್ರಕಾರ ಚನ್ನಬಸವ, ಕಿನ್ನರಿ ಬ್ರಹ್ಮಯ್ಯ, ಕೂಗಿನ ಮಾರಿತಂದೆಗಳೂ ಉಳಿ ದವರೂ ಅಲ್ಲಿಂದ ತೆರಳಿ ಭಯಂಕರವಾದ ಕಾಡನ್ನು ಪ್ರವೇಶಿಸಿದರು.

ಆದರೆ ಮಡಿವಾಳ ಮಾಚಿದೇವನು ಅವರೊಡನೆ ಹೋಗದೆ ಎಲ್ಲರ ಅಪ್ಪಣೆಯನ್ನು ತೆಗೆದುಕೊಂಡು, ಸ್ವಗ್ರಾಮವಾದ ಹಿಪ್ಪರಿಗಿಗೆ ಮರಳಿ ಬಂದನು. ಅಲ್ಲಿ ಅವನು ತನ್ನ ಗುರುಗಳಾದ ಮಲ್ಲಿಕಾರ್ಜುನರನ್ನು ಕಂಡು ಅವರ ಅಪ್ಪಣೆಯನ್ನು ತೆಗೆದುಕೊಂಡು ಕಲ್ಲಿನಾಥನಲ್ಲಿ ಬೆರೆದು ಹೋದನು.

ಮಡಿವಾಳ ಮಾಚಿದೇವನು ಬಸವೇಶ್ವರನ ತರುವಾಯ ಅತ್ಯದ್ಭು ತವಾದ ಕ್ರಾಂತಿಯನ್ನು ಮಾಡಿದವರಲ್ಲಿ ಪ್ರಮುಖನು. ನಾನು ಮೇಲೆ

ವಿವರಿಸಿದ ಸಂಗತಿಗಳೆಲ್ಲ ಪುರಾಣಗಳಲ್ಲಿ ವಿವರಿಸಿದ ಐತಿಹ್ಯಗಳಾಗಿವೆ. ಆದರೆ ಅವುಗಳಲ್ಲಿ ಅನೇಕ ತಥ್ಯಾಂಶಗಳಿವೆ. ಇವುಗಳನ್ನು ನಾನು ಇಲ್ಲಿ ಚರ್ಚಿಸಲು ಯತ್ನಿಸುವದಿಲ್ಲ. ಆದರೆ ಈ ಕಾಲವು ವೀರಶೈವರ ಇತಿಹಾಸದಲ್ಲಿ ಬಹು ಅದ್ಭುತವಾದುದು. ಆಗ ಅನೇಕ ಹೃದಯದ್ರಾವಕ ಸಂಗತಿಗಳು ಸಂಭವಿಸಿದವು. ಅವುಗಳನ್ನು ನಾನು ಯಥಾವಕಾಶವಾಗಿ ಮುಂದೆ ವಿಸ್ತರಿಸುತ್ತೇನೆ. ಇಷ್ಟು ಮಾತ್ರ ನಾನು ಇಲ್ಲಿ ಹೇಳಿ ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

ವಿಜಾಪುರ
ತಾ. ೧-೨-೧೯೩೯.

**ಫ. ಗು. ಹಳಕಟ್ಟಿ.**
ಸಂಪಾದಕ.

**ವಿವರಣೆ:**— ಕೆಳಗಿನ ವಚನದಲ್ಲಿ ಗುರುವಿನ ಸ್ವರೂಪನ್ನು ಮಡಿವಾಳ ಮಾಚಿದೇವನು ವಿವರಿಸಿದ್ದಾನೆ. ಗುರುವು ಪ್ರಭಾವಿತ ಮೂರ್ತಿಯಾಗಿ ಭಕ್ತನಿಗೆ ಮಹಾಲಿಂಗದ ಅನುಭಾವವ ಮಾಡಿ ಕೊಡುತ್ತಾನೆ. ಅವನಲ್ಲಿ ಸ್ಥಲಗಳನ್ನು ಏರ್ಪಡಿಸುತ್ತಾನೆ ಆಚಾರವು ಗೋಚರವಾಗುವಂತೆ ಮಾಡುತ್ತಾನೆ. ಓಂಕಾರ, ಪ್ರಸಾದದ ವಿಧಗಳು, ಜ್ಞಾನ ಸ್ವರೂಪ, ಇವುಗಳನ್ನು ಅವನಲ್ಲಿ ಹದಗೊಳಿಸುತ್ತಾನೆ ಎಂದು ಹೇಳುತ್ತಾನೆ.

## ವಚನ.

೮೧. ಎಲೆ ಮನವೇ ಕೇಳು ನಾ ನಿನಗೆ ಹೇಳುವೆ. ಅನಂತ ಅನಂತ ಯುಗಂಗಳಲ್ಲಿ ಶಿವನು ಭಾವಸ್ಥಿತಿಯು, ವೇಷಸ್ಥಿತಿಯು ಕಳುಹಿದನು ಲೋಕಕ್ಕೆ. ಈ ಎರಡು ಸ್ಥಿತಿಯಲ್ಲಿ ಪ್ರಭಾವಿತ ಮೂರ್ತಿಯಾಗಿ ಗುರುವೆಂಬ ನಾಮವ ಧರಿಸಿ ಮಹಾಲಿಂಗ ಯೋಗ ಪ್ರಬಂಧವನು, ಅಷ್ಟಾಷಷ್ಟಿ ತೀರ್ಥಂಗಳನು ಶಿವನು ಅನಂತ ಪ್ರಾಣಿಗಳ ಗತಿಗೆ ಸಾಧನವ ಮಾಡಿವನು. ಮಂದಾರ ಗಿರಿಯು ಸ್ಥಲಂಗೊಳಿಸಿದನು. ಚತುರ್ವಿಧ ಸ್ಥಲವ ಮಾಡಿ ಸ್ಥಲಂಗೊಳಿಸಿದನು. ಎಲ್ಲ ಮಂತ್ರಕ್ಕೆ ಆ ಮಂತ್ರ ಕಳೆಯನೀಯಲೆಂದು ಕಪಿಲಸಿದ್ಧ ಮಲ್ಲೇಶ್ವರ ದೇವರ ಸ್ಥಲಂಗೊಳಿಸಿದನು. ಸಿದ್ಧಾಂತ ಸಿಂಹಾಸನದ ಮೇಲೆ ನಾಮಕರಣ ರಾಮನಾಥನಾಗಿ ಗುರುಮರ್ತ್ಯಕ್ಕೆ ಬಂದನು ಕಾಣಾ ಮನವೇ. ಆಚಾರ ಗೋಚರವಾಗಬೇಕೆಂದು, ಆದಿ ನಿರ್ವಯಲಹ ಸ್ವಾಮಿ ತಾನು ಓಂಕಾರ ಶುದ್ಧ ಶಿವನಾಗಿ ಬೆಳಗನುಟ್ಟ ಬಸವಣ್ಣ ಬಂದನು ಕಾಣಾ ಮನವೇ. ಎಲ್ಲ ಪ್ರಾಣಿಗಳ ಜಿಹ್ವೆಯು ಪವಿತ್ರವ ಮಾಡಲೆಂದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ ತೋರಲೆಂದು ಮಹಾಪ್ರಸಾದಿ ಚನ್ನಬಸವಣ್ಣನು ಬಂದ ಕಾಣಾ ಮನವೇ. ಜ್ಞಾನವೇ ವಾಹನವಾಗಿ ತನು ಮನ ಧನದ ಮೇಲೆ ನಡೆದು ಅನಂತ ಮೂರ್ತಿಗಳ ಪಾವನವ ಮಾಡಲೆಂದು ಎಲ್ಲ ಸಂಬಂಧವನು ಕರಸ್ಥಲದಲ್ಲಿ ಹಿಡಿದುಕೊಂಡು ಜಂಗಮ ಪ್ರಭುದೇವರು ಬಂದರು ಕಾಣಾ ಮನವೇ. ಗುರುವು, ಮಹಾಭಕ್ತ, ಅರ್ಪಿತ ಮಾಡಿದ ಪ್ರಸಾದಿ, ಅನುಭಾವದಾಚರಣೆ ಜಂಗಮ, ಇಂತೀ ಚತುರ್ವಿಧ ಸ್ಥಲವ ಎನ್ನ ಪ್ರಾಣನ ಕೊರಳಲ್ಲಿ ಹಾರವಾಗಿಕ್ಕೆ. ನಿಮ್ಮನನನುಮಿಷನಾಗಿ ನೋಡುತ್ತಿರ್ದೆನು ಕಾಣಾ ಕಲಿದೇವರದೇವಾ.

---

**ವಿವರಣೆ:—** ಮೇಲ್ಕಂಡ ವಚನದಿಂದ ಗುರು ಶಿಷ್ಯರ ಸಂಬಂಧವು ಎಷ್ಟು ಗೂಢವಾಗಿರುತ್ತದೆಂಬದನ್ನು ವಾಚಕರು ಅರಿಯಬಹುದಾಗಿದೆ. ಇದನ್ನು ಶಬ್ದಗಳ ಮೂಲಕ ನುಡಿಯುವದು ಅಶಕ್ಯವೆಂದು ವಚನಕಾರರು ಕೆಳಗಿನ ವಚನದಲ್ಲಿ ಹೇಳಿದ್ದಾನೆ.

### ವಚನ.

೮೨. ಗುರು ಶಿಷ್ಯರ ಸಂಬಂಧವನಾರು ಬಲ್ಲರೋ? ನೆರದ ನೆರವಿಗೆ ಹೇಳಲುಂಟೇ? ಈ ಮಾತು ಸ್ತ್ರೀ ಪುರುಷರ ಸ್ನೇಹದ ಕೂಟದ ಮತ್ತೊಬ್ಬರಿಗರುಹಬಾರದು. ಗುರು ಶಿಷ್ಯ ಸಂಬಂಧವನಿನ್ನಾರು ಬಲ್ಲರಯ್ಯಾ ಕಲಿದೇವಯ್ಯಾ?

---

**ವಿವರಣೆ:—** ಗುರು ಶಿಷ್ಯರಲ್ಲಿ ಕೊಡಕೊಳ್ಳುವ ವ್ಯವಹಾರವಿಲ್ಲ. ಅವರ ಗುಣಗಳು ಪರಸ್ಪರರಲ್ಲಿ ಬೆರೆದು ಹೋಗತಕ್ಕದ್ದು. ಆದುದರಿಂದ ಗುರುವು ತನ್ನಂಥವರಲ್ಲದವರಿಗೆ ಲಿಂಗವನ್ನು ಕೊಡಕೂಡದು.

### ವಚನ.

೮೩. ಲಿಂಗವಿಲ್ಲದ ಗುರುವಾಗಬೇಕು. ಲಿಂಗವಿಲ್ಲದ ಶಿಷ್ಯನಾಗಬೇಕು; ಶೃಂಗಾರಕ್ಕೆ ಮರೆಯದ ಭಕ್ತಿಯಾಗಬೇಕು. ಇಂತೀ ಗುರು ಪ್ರಸಾದವಲ್ಲದೆ ವೇಶಿಯ ಪುತ್ರರಂತೆ ಕಂಡ ಕಂಡವರ್ಗೆ ಕಯ್ಯಾನುವ ಮುಟ್ಟಿಯ ಭಂಡರನೇನೆಂಬೆ ಕಲಿದೇವರದೇವಾ?

---

**ವಿವರಣೆ:—** ಗುರುವು ವೀರಶೈವಾಚಾರ ಸಂಪನ್ನನಾಗಿರಬೇಕು. ಅವನು ಇಷ್ಟ ಲಿಂಗವ ಅರಿವನ್ನು ಅರಿತಿರಬೇಕು. ಮತ್ತು ಗೋರವರಂತೆ ಅನ್ಯ ದೈವಗಳ ಪೂಜೆಯನ್ನು ಮಾಡಬಾರದು.

### ವಚನ.

೮೪. ಸತ್ತು ಮಣ್ಣಾಗಿ ಹೋದ ಮಾತಾ ಪಿತೃಗಳು, ತಮ್ಮ ಸಂತಾನವಾಗಿ ಜನಿಸಿ ಬಂದರೆಂದು ಹೆತ್ತು ಹೆಸರಿಟ್ಟು ಕರೆವರಯ್ಯಾ. ಕಾಗೆಯು ಬಾಯ ಕರಗದ ಬಾಯೋಗರವ ಕೊಂಡು, ಅನ್ಯ ದೈವಗಳ

ಪ್ರೋಜಿಸುವ ಗೊರವರ ಕಯ್ಯಲುಪದೇಶವ ಮಾಡಿಕೊಂಡ ಶಿಷ್ಯಂಗೆ ಆ ಉಪದೇಶವ ಕೊಟ್ಟ ಗುರುವಿಂಗೆ ಅವರಿಬ್ಬರಿಗೆಯೂ ಅಜ್ಞಾನ ಭವ ನಾಸ್ತಿಯಾಗದೆ ಭವಸಾಗರದೊಳಗವರಿಬ್ಬರೂ ಆಳುತ್ತ ಮುಳುಗುತ್ತಿಹರು ಕಾಣಾ ಕಲಿದೇವರದೇವಾ.

---

**ವಿವರಣೆ:—** ಗುರುವು ಶಿಷ್ಯನಿಗೆ ದೀಕ್ಷೆಯನ್ನು ಕೊಡುವ ಕಾಲಕ್ಕೆ ಕೆಲ ಭಕ್ತರನ್ನು ಸಾಕ್ಷಿಯಾಗಿಟ್ಟುಕೊಂಡು ಕೊಡುತ್ತಾನೆ. ಅವರ ಅನುಜ್ಞೆಯನ್ನು ಅವನು ಹೊಂದಬೇಕು. ಹೀಗೆ ಗುರುವು ಭಕ್ತರೆಲ್ಲರಲ್ಲಿಯೂ ಸಮಭಾವವನ್ನುಂಟು ಮಾಡುತ್ತಾನೆ.

## ವಚನ.

೮೫. ಹಲವರ ನಡುವೆ ಕುಳ್ಳಿರ್ದ ತನ್ನಗುರುವಿಂಗಾ ಶಿಷ್ಯನು ಸಾಷ್ಟಾಂಗವೆರಗಿ ಶರಣೆಂದು ತನ್ನ ಗುರುವಿನ ಪಾದವ ಹಿಡಿದುಕೊಂಡು ನನಗುಪದೇಶವ ಮಾಡಬೇಕೆಂದು ಬಿನ್ನಹಂ ಮಾಡಿದರೆ ನಾನುಪದೇಶವ ಮಾಡಲಮ್ಮೆನು. ನಿಮ್ಮನುಜ್ಞೆಯಿಂದುಪದೇಶವ ಮಾಡಲೆಂದು ಆ ಹಲವರಿಗೆ ಬಿನ್ನಹಂ ಮಾಡಲಿಕ್ಕೆ ಆ ಹಲವರು ನಿರೂಪ ಕೊಟ್ಟು, ಆ ನಿರೂಪವಿಡಿದು ಉಪದೇಶವ ಮಾಡುವ ಗುರು ಆ ಹಲವರ ಸಮಭಾವವನೀವ ಕಾಣಾ ಕಲಿದೇವರ ದೇವಾ.

---

**ವಿವರಣೆ:—** ಹಿಂದಿನ ವಚನದಲ್ಲಿ ಹೇಳಿದಂತೆ ಗುರುವು ಸಮಭಾವವನ್ನುಂಟು ಮಾಡುವವನಾದರೂ ಅವನು ಹಣವಿನಾಸೆಗೆ ಕಂಡ ಕಂಡವರಿಗೆ ದೀಕ್ಷೆಯನ್ನು ಕೊಡಕೂಡದು.

## ವಚನ.

೮೬. ಹಣವಿನಾಸೆಗೆ ಹದಿನೆಂಟು ಜಾತಿಯ ಭಕ್ತರ ಮಾಡಿ ಲಿಂಗವ ಕೊಟ್ಟು ಲಿಂಗದ್ರೋಹಿಯಾದ. ಪ್ರಸಾದವ ನೀಡಿ ಪ್ರಸಾದ ದ್ರೋಹಿಯಾದ. ಪಂಚಾಕ್ಷರಿಯ ಹೇಳಿ ಪಂಚ ಮಹಾಪಾತಕಕ್ಕೊಳಗಾದ. ಇಂತೀ ಹಂದಿಯ ಕೊಂದು ಬಿನ್ನಾಣದಲ್ಲಿ ಕಡಿ ತಿಂಬ ಇಂತಹ ಕುನ್ನಿಗಳನೇನೆಂಬೆನಯ್ಯಾ ಕಲಿದೇವರ ದೇವಾ ?

---

## ೨ ಲಿಂಗ.

**ವಿವರಣೆ:** – ಮಾಡುವಂಥ ಗುರುವು ಮತ್ತು ಮಾಡಿಸಿಕೊಳ್ಳುವಂಥ ಭಕ್ತನು ಇವೆರಡರ ಚೈತನ್ಯವೇ ಲಿಂಗವು. ಈ ಚೈತನ್ಯವೇ ಸೂಕ್ಷ್ಮ ಶರೀರವನ್ನು ವ್ಯಾಪಿಸಿರುತ್ತದೆ. ಇದೇ ಕರಸ್ಥಲದಲ್ಲಿ ಇಷ್ಟಲಿಂಗನಾಗಿ ಪ್ರಕಟವಾಗುತ್ತದೆ.

### ವಚನ.

೮೭. ಮಾಡುವಾತ ಗುರುವಯ್ಯಾ. ಮಾಡಿಸಿಕೊಂಬಾತ ಭಕ್ತನಯ್ಯಾ. ಮಾಡುವ ಮಾಡಿಸಿಕೊಂಬವೆರಡರ ಚೈತನ್ಯವೇ ಲಿಂಗವಯ್ಯಾ. ಸಂಗನ ಬಸವಣ್ಣನು ಸ್ಥೂಲವ ನಿಃಕರಿಸಿ ಸೂಕ್ಷ್ಮವ ಕರಸ್ಥಲದಲ್ಲಿ ಅನುಕರಿಸಿ ತೋರಿದನು. ಆ ಬಸವಣ್ಣನ ನಿಲವ ನೆನೆದು ಬದುಕಿದೆನು ಕಾಣಾ ಕಲಿದೇವರದೇವಾ.

---

**ವಿವರಣೆ:** — ಇಷ್ಟಲಿಂಗವು ಒಳಗೂ ಹೊರಗೂ ವ್ಯಾಪಿಸಿಕೊಂಡಿರುತ್ತದೆ. ಅದು ಕೇವಲ ಬಾಹ್ಯ ವಸ್ತುವೆಂದು ತಿಳಿಯಬಾರದು. ಅದು ಸರ್ವಾಂಗದಲ್ಲಿಯೂ ವ್ಯಾಪಿಸಿರುತ್ತದೆ. ಅವನ್ನು ಅಗಲುವದು ಶಕ್ಯವಲ್ಲ. ಇಂಥ ಮಹತ್ತರವಾದ ವಸ್ತುವು ಕರಕ್ಕೆ ಬಂದಿರುತ್ತದೆ. ಈ ಪ್ರಕಾರ ವಚನ ಕಾರನು ಇಷ್ಟಲಿಂಗದ ಸ್ವರೂಪನ್ನು ಇಲ್ಲಿ ವರ್ಣಿಸಿದ್ದಾನೆ.

### ವಚನ.

೮೮. ಒಳಗಿದ್ದಾನೆಂಬೆನೆ ? ಹೊರಗೆಲ್ಲಾ ತಾನೇ ನೋಡಾ. ಹೊರಗಿದ್ದಾನೆಂಬೆನೆ ? ಒಳಗೆಹೊರಗೆ ಸರ್ವಾಂಗದಲ್ಲಿ ಸನ್ನಿಹಿತನಾಗಿರ್ದ. ಅಗಲಲಿಲ್ಲದ ಘನವನಗಲಿದೆನೆಂಬ ಮಾತು ಶಿವಶರಣರ ಮನಕ್ಕೆ ಬಹುದೆ ? ತೆರಹಿಲ್ಲದ ಘನವು ಕಲಿದೇವಯ್ಯನು ಕರಸ್ಥಲದೊಳಗೈದಾನೆ ಕಾಣಾ.

---

## ೩ ಜಂಗಮ.

**ವಿವರಣೆ:**— ಜಂಗಮನು ಶಿವಯೋಗಸಂಪನ್ನನಾಗಿರುತ್ತಾನೆ. ಅವನು ಸುಜ್ಞಾನಿಯಾಗಿದ್ದುಕೊಂಡು ಆಚರಿಸಬೇಕು. ಹೀಗೆ ವಚನ ಕಾರನು ಇಲ್ಲಿ ಹೇಳುತ್ತಾನೆ.

### ವಚನ.

೮೯. ಅಯ್ಯಾ ತನ್ನಾದಿ ಮಧ್ಯಾವಸಾನವ ತಿಳಿದು ಭವಿ ಭಕ್ತ ಆಚಾರ ಅನಾಚಾರ, ಯೋಗ್ಯ ಅಯೋಗ್ಯ, ಅರ್ಪಿತ ಅನರ್ಪಿತ, ಸುಸಂಗ ದುಃಸ್ಸಂಗ, ಸುಚಿತ್ತ ಕುಚಿತ್ತ ಸುಬುದ್ಧಿ ಕುಬುದ್ಧಿ, ಅಹಂಕಾರ ನಿರ ಹಂಕಾರ, ಸುಮನ ಕುಮನ, ಸುಜ್ಞಾನ ಅಜ್ಞಾನ, ಸದ್ಭಾವ ದುರ್ಭಾವ, ಪಾಪ ಪುಣ್ಯ, ಧರ್ಮ ಕರ್ಮ, ಸ್ವರ್ಗ ನರಕ ಇಹ ಪರವೆಂಬ ಭೇದಾ ಭೇದವ ತಿಳಿದು ಶೈವ ಮಾರ್ಗದಷ್ಟಾಂಗ ಯೋಗವನುಳಿದು ವೀರಶೈವ ಶಿವಯೋಗ ಸಂಪನ್ನನಾಗಿ ಭಕ್ತಿ ಜ್ಞಾನ ವೈರಾಗ್ಯದಲ್ಲಾಚರಿಸಿ, ಏಕ ಧ್ಯಾನವನುಳಿದು ರಾಜ ಹಂಸನ ಹಾಗೆ ಅಸತ್ಯವನುಳಿದು ಸುಸತ್ಯದ ಲ್ಲಾಚರಿಸುವ ಭಕ್ತ ಜಂಗಮವೇ ದ್ವಿತೀಯ ಶಂಭುವೆಂದು ಅವರಂಗ ಣವ ಕಾಯ್ದು, ಅವರುಟ್ಟುದ ತೊಳೆದು, ಅವರೊಕ್ಕುದ ಕೈಕೊಂಡು ಅವರುಗಳ ಹಾರೈಸಿ ಅವರ ಕಡೆ ಬಾಗಿಲ ಕಾಯ್ದು ಅವರ ತೊತ್ತಿನ ತೊತ್ತಾಗಿ ಒದುಕಿದೆ ಕಾಣಾ ಕಲಿದೇವರದೇವಾ.

---

**ವಿವರಣೆ:** - ಜಂಗಮನು ಚೈತನ್ಯವನ್ನು ಎಲ್ಲರಲ್ಲಿ ತುಂಬು ತ್ತಾನೆ. ಆದುದರಿಂದ ಗುರು ಲಿಂಗ ಜಂಗಮಕ್ಕೆ ಜಂಗಮವೇ ಬೇಕು.

### ವಚನ.

೯೦. ಆದಿಯಲ್ಲಿ ನಿಮ್ಮ ಜಂಗಮವೆಂಬುದನಾರು ಬಲ್ಲರಯ್ಯಾ ಬಸವಣ್ಣನಲ್ಲದೆ? ಎಲ್ಲಿ ಸ್ಥಾವರವಲ್ಲಿ ನೋಡಲಾಗದು. ಮನದಲ್ಲಿ ನೆನೆಯಲಾಗದು. ಲಿಂಗಕ್ಕಾದರೆಯೂ ಜಂಗಮವೇ ಬೇಕು. ಜಂಗ ಮವಿಲ್ಲದೆ ಲಿಂಗ ಉಂಟೇ? ಗುರುವಿಂಗಾದರೂ ಜಂಗಮವೇ ಬೇಕು. ಜಂಗಮವಿಲ್ಲದೆ ಗುರು ಉಂಟೇ? ಆ ಜಂಗಮಕ್ಕಾದರೂ ಜಂಗಮವೇ ಬೇಕು. ಆ ಜಂಗಮವಿದ್ದಲ್ಲಿಯೇ ಗುರು, ಲಿಂಗ, ಜಂಗಮ, ಪಾದೋ

ದಕ, ಪ್ರಸಾದ, ಅನುಭಾವ ಸನ್ನಿಹಿತವಾಗಿಹುದು. ಇಂತೀ ಜಂಗಮವೇ ಪ್ರಾಣಲಿಂಗವೆಂಬುದು ಬಸವಣ್ಣನೆನಗೆ ತೋರಿದನಾಗಿ ಆ ಬಸವಣ್ಣನ ಶ್ರೀಪಾದಕ್ಕೆ ಅಹೋರಾತ್ರಿ ಶರಣೆಂದು ಶುದ್ಧನಾದೆ ಕಾಣಾ ಕಲಿದೇವಯ್ಯಾ.

---

**ವಿವರಣೆ:**— ಜಂಗಮವು ಎಲ್ಲ ವಸ್ತುವಿನಲ್ಲಿಯೂ ಹುದುಗಿಕೊಂಡಿದೆ. ಅದೇ ಲಿಂಗವೆಂದು ಜಂಗಮವನ್ನು ಬಣ್ಣಿಸಿ ವಚನಕಾರನು ಇಲ್ಲಿ ನುಡಿದಿದ್ದಾನೆ.

**ವಚನ.**

೯೧. ಆದಿ ಅನಾದಿಗಳಲ್ಲಿ ಸಾಧ್ಯಾ ಸಾಧ್ಯಂಗಳಿಲ್ಲದಂದು ಸ್ಥೂಲ ಸೂಕ್ಷ್ಮವೆಂಬ ಮೂರ್ತಿಗಳಿಲ್ಲದಂದು ಸಾಕಾರ ನಿರಾಕಾರವೆಂಬ ವಾಕ್ಕು ಹುಟ್ಟದಂದು ಶಂಕರ ಶಶಿಧರ ಈಶ್ವರರೆಂಬ ಗಣಾಧೀಶ್ವರರಿಲ್ಲದಂದು ಉಮೆಯ ಕಲ್ಯಾಣವಿಲ್ಲದಂದು ಶಿವರತಿ ಮಹಾರತಿ ಬಸವಣ್ಣನಿಂದಾಯಿತ್ತು. ಸರ್ವ ವಿಸ್ತೀರ್ಣವ ನಿರಾಕರಿಸಿ ನಿತ್ಯ ಲಿಂಗಾರ್ಚನೆಯ ತೋರಿದ ಬಸವಣ್ಣನು. ಲಿಂಗಾರ್ಚನೆಯಲ್ಲಿ ಪ್ರಸಾದಧ್ಯಾನ, ಜಂಗಮಾರ್ಚನೆಯಲ್ಲಿ ಪ್ರಸಾದ ಭೋಗೋಪಭೋಗವೆಂಬುದನು ಬಸವಣ್ಣ ಬಲ್ಲನು. ಇಂತೀ ಭಕ್ತಿಯ ಕುಳಸ್ಥಲವನರಿಯದೆ ಎಲ್ಲರೂ ಎಂತಂತೆ ಎಂದರು. ಬಲವಲ್ಲಿ ಬಂದರು. ಇದ ನೀಕರಿಸಿ ಜಂಗಮವೇ ಲಿಂಗವೆಂದು ಸಂಗ ಸಾಹಿತ್ಯವಾದ ಬಸವಣ್ಣ. ಆ ಬಸವಣ್ಣನಿಂದ ನಿತ್ಯನಯ್ಯ ಕಲಿದೇವರದೇವ.

---

**ವಿವರಣೆ:**— ಹಿಂದಿನ ವಚನಗಳಲ್ಲಿ ವಚನಕಾರನು ಗುರು, ಲಿಂಗ, ಜಂಗಮಗಳ ವಿವರಣೆಯನ್ನು ಪೃಥಕ್ಕಾಗಿ ಮಾಡಿ ಮುಂದಿನ ವಚನಗಳಲ್ಲಿ ಅವನು ಅವುಗಳಲ್ಲಿರುವ ಸಂಬಂಧವನ್ನು ತೋರಿಸಿದ್ದಾನೆ. ಜಂಗಮದಲ್ಲಿ ಭಕ್ತಿ-ಜ್ಞಾನ-ವೈರಾಗ್ಯಗಳು ನೆಲೆಗೊಂಡಿರುತ್ತವೆ. ಅವನು ತನ್ನಲ್ಲಿ ಎಲ್ಲ ಸಕೀಲಗಳನ್ನನುಸರಿಸಿ ವರ್ತಿಸುತ್ತಾನೆ. ಇದರಿಂದ ಅವನ ಮನ, ಭಾವ, ಕರಣಗಳು ಗುರು-ಲಿಂಗ-ಜಂಗಮವೇ ಆಗಿರುತ್ತವೆ. ಎಂದರೆ ಮನದಲ್ಲಿ ಗುರುವು, ಭಾವದಲ್ಲಿ ಲಿಂಗವು, ಕರಣಂಗಳಲ್ಲಿ ಜಂಗಮವು ತುಂಬಿಕೊಂಡಿರುತ್ತವೆ. ಹೀಗೆ ತುಂಬಿದ ಕೂಡಲೆ ಲಿಂಗದ ಕಳೆಯು ತನು ಪ್ರಾಣ ಸರ್ವಾಂಗದಲ್ಲಿಯೂ ಆವರಿಸುತ್ತದೆ. ಹೀಗೆ

ಗುರು-ಲಿಂಗ ಜಂಗಮದ ಮಹತ್ವವಿದ್ದು ಇದನ್ನು ಅಲಕ್ಷಿಸಿದ್ದಾದರೆ ವ್ಯರ್ಥ ತೊಳಲಾಟವು ಮಾತ್ರ ಜರಗುವದೆಂದು ವಚನಕಾರನು ನುಡಿಯುತ್ತಾನೆ.

### ವಚನ.

೯೨. ಆದಿ ಅನಾದಿಯಿಂದತ್ತತ್ತ ಮೀರಿ ತೋರುವ ಪರಾತ್ಪರ ವಸ್ತುವೇ ತನ್ನ ಚಿದ್ವಿಲಾಸದಿಂದ ತಾನೇ ಜಗತ್ಪಾವನ ಮೂರ್ತಿಯಾಗಿ ತನ್ನ ಅಂತರಂಗ ಬಹಿರಂಗದಲ್ಲಿ ಭಕ್ತಿ ಜ್ಞಾನ-ವೈರಾಗ್ಯ ಷಟ್‌ಸ್ಥಲಮಾರ್ಗವಿಡಿದು ಭಕ್ತಿಪ್ರಿಯರಾಗಿ ತಮ್ಮ ತಮ್ಮ ಅಂತರಂಗದೊಳಗೆ ಷಡ್ವಿಧ ಸಕೀಲು ೩೬, ೪೮, ೫೬, ೬೪, ೯೬, ೧೦೮, ೨೧೬ ಈ ಮೊದಲಾದ ಸಮಸ್ತ ಸಕೀಲಂಗಳನೊಳಕೊಂಡು ಬೆಳಗುವ ಗುರು-ಲಿಂಗ-ಜಂಗಮವ ಕಂಗಳು ಮನ-ಭಾವ ಕರಣಂಗಳು ತನು-ಪ್ರಾಣ ಸರ್ವಾಂಗ ತುಂಬಿ ಅರ್ಚಿಸಲರಿಯದೆ ಹಲವನರಸಿ ತೊಳಲುವರ ಕಂಡು ಬೆರಗಾದೆ ನೋಡಾ ಕಲಿದೇವರ ದೇವಾ.

---

**ವಿವರಣೆ:**— ಮುಂದಿನ ವಚನದಲ್ಲಿ ವಚನಕಾರನು ಗುರ-ಲಿಂಗ ಜಂಗಮದ ಸ್ವರೂಪನ್ನು ಹೇಳುತ್ತಾನೆ. ಇವುಗಳನ್ನು ಭಿನ್ನವಿಟ್ಟು ನುಡಿಯ ಕೂಡದು. ಅವುಗಳೆಲ್ಲವೂ ಒಂದೇಯಾಗಿರುತ್ತವೆ. ಅವು ಒಂದನ್ನೊಂದು ಬಿಟ್ಟು ವ್ಯವಹರಿಸುವದಿಲ್ಲ. ಅವು ಕೂಡಿ ವರ್ತಿಸಿದಾಗಳೇ ಕ್ರಿಯೆಯುಂಟಾಗುತ್ತದೆ ಕೂಡಿಸುವ ಈ ಕ್ರಿಯೆಯು ಗುರು-ಲಿಂಗ-ಜಂಗಮದಿಂದಲೇ ಜರಗುತ್ತದೆ ಈ ಕೂಡುವಿಕೆಯು ಮನುಷ್ಯನಿಗೆ ಪೂರ್ಣತೆಯನ್ನು ತರುತ್ತದೆ.

### ವಚನ

೯೩. ಶರಣು ಶರಣಾರ್ಥಿ. ಎನ್ನ ಬಿನ್ನಪವನವಧರಿಸಯ್ಯಾ. ಬಸವಣ್ಣನೇ ಗುರುರೂಪಾಗಿ ಮರ್ತ್ಯಕ್ಕೆ ಬಂದನು. ಪ್ರಭುವೇ ನೀವು ಜಂಗಮ ರೂಪಾಗಿ ಮರ್ತ್ಯಕ್ಕೆ ಬಂದಿರಿ. ಭಕ್ತಿಯ ಬೆಳವಿಂಗೆ ಬಸವಣ್ಣನೇ ಕಾರಣಿಕನಾದ. ಅರುಹಿನ ಬೆಳವಿಂಗೆ ಚನ್ನಬಸವಣ್ಣನೇ ಕಾರಣಿಕನಾದ. ಈ ಇಬ್ಬರನೊಳಗೊಂಬ ಮಹಾಗಣಕ್ಕೆ ಪ್ರಭುವೇ ನೀವು ಕಾರಣಿಕರಾದಿರಿ. ಇಂತೀ ಗುರು-ಲಿಂಗ-ಜಂಗಮ ಒಂದೇ ಅಲ್ಲದೆ ಭಿನ್ನವುಂಟೇ ಪ್ರಭುವೆ? ಬಸವಣ್ಣ ಚನ್ನಬಸವಣ್ಣನ ಬಿನ್ನಪವ ಮೀರದೆ ಬಿಜಯಂಗೈಯ್ಯುವುದಯ್ಯ ಕಲಿದೇವರ ದೇವಾ.

---

## ೪. ಪಾದೋದಕ.

**ವಿವರಣೆ:—** ಪಾದೋದಕವೆಂದರೆ ಕೇವಲ ಬಾಹ್ಯ ಸ್ಪರ್ಶನದಿಂದ ಆದ ನೀರು ಮಾತ್ರವಲ್ಲ ಅದರಲ್ಲಿ ಗರ್ಭಿತಾರ್ಥವಿದೆ. ಅದು ಗುರು ಲಿಂಗ ಜಂಗಮವು ತನ್ನಲ್ಲಿ ಉಂಟಾಗಿರುವ ಒಂದು ಕುರುಹಾಗಿರುತ್ತದೆ. ಇಂಥ ಪಾದೋದಕದ ಗ್ರಹಣದಲ್ಲಿ ಸಾಮರಸ್ಯ ಭಾವವು ಬಹು ದಟ್ಟ ವಾಗಿ ಭಕ್ತನಲ್ಲಿ ಒಡಮೂಡುತ್ತದೆ ಹೀಗಾದಲ್ಲಿ ಭಕ್ತನಲ್ಲಿ ಗುರುಲಿಂಗ ಜಂಗಮಗಳು ನೆಲೆಯೂರುವವು. ಆಗ ಅವನಲ್ಲಿ ಪರಮಾನಂದವು ಉತ್ಪನ್ನವಾಗುತ್ತವೆ. ಇದು ಪ್ರವಾಹ ರೂಪಾಗಿ ಭಕ್ತನ ಸರ್ವಾಂಗದಲ್ಲಿ ತುಂಬಿ ತುಳುಕುತ್ತದೆ. ಇಂಥ ಈ ಪಾದೋದಕವು ಪರಮಾಮೃತವು. ವಚನಕಾರರು ಈ ಬಗೆಯ ಶಬ್ದಗಳಿಂದ ಪಾದೋದಕವನ್ನು ಯಾವಾ ಗಲೂ ವರ್ಣಿಸುವದುಂಟು.

### ವಚನ.

೯೪. ತಾನು ಗುರುಲಿಂಗ ಜಂಗಮದ ಪಾದಕ್ಕೆರಗಿ ಲೀಯ್ಯವಾದ ಬಳಿಕ ಇದು ಚಿನ್ನ ನೋಡಯ್ಯ! ಗುರುಲಿಂಗ ಜಂಗಮದ ಪಾದವೇ ತನ್ನ ಸರ್ವಾಂಗದೊಳಗೆ ಅಚ್ಚೊತ್ತಿದಂತಾಗೆ, ಅಲ್ಲಿಯೇ ಪಾದಾರ್ಚನೆ, ಅಲ್ಲಿಯೇ ಪಾದೋದಕ ಸೇವನೆ, ಬೇರೆ ಪೃಥಕ್ಕಿಲ್ಲವಯ್ಯ! ಅದೆಂತೆಂ ದೊಡೆ, ಪರಮ ಜ್ಞಾನ ಲಿಂಗ ಜಂಗಮದ ಸಂಬಂಧ ಸಮರತಿಯ ಸೋಂಕಿನಲ್ಲಿ ಪರಮಾನಂದ ಜಲವೇ ಪ್ರವಾಹವಾಗಿ, ಸರ್ವಾಂಗದಲ್ಲಿ ಪುಳಕವಾಗಿ ಹರಿವುತ್ತಿರಲು, ಆ ಪರಮ ಸುಖ ಸೇವನೆಯ ಮಾಡು ವಲ್ಲಿ ಪಾದೋದಕ ಸೇವನೆ ಎಂದೆನಿಸಿತ್ತಯ್ಯ. ಈ ಪರಮಾಮೃತ ತೃಪ್ತಿ ಬಸವಣ್ಣಂಗಾಯಿತ್ತು ಆ ಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಬದುಕಿವೆನಯ್ಯ ಕಲಿದೇವರದೇವಾ.

## ೫. ಪ್ರಸಾದ.

**ವಿವರಣೆ:—** ಪ್ರಸಾದವೆಂದರೆ ಕೇವಲ ಭೋಜನಕ್ಕೋಸ್ಕರ ಇಟ್ಟ ಆಹಾರ ವಸ್ತುವಲ್ಲ. ಅದರಲ್ಲಿಯೂ ಗರ್ಭಿತಾರ್ಥವಿದೆ. ಅದರಲ್ಲಿ ಶುದ್ಧ ಸಿದ್ಧ ಪ್ರಸಿದ್ಧ ಎಂಬ ಮೂರು ಭೇದಗಳಿವೆ. ಅವು ಅನುಕ್ರಮವಾಗಿ ತನು ಮನ ಚೈತನ್ಯ ಇವುಗಳನ್ನು ಆವರಿಸುತ್ತವೆ. ಹೀಗೆ ಆವರಿಸಿದಲ್ಲಿ ಮಹವು ಶರೀರದಲ್ಲಿ ಉದಯಿಸುತ್ತದೆ. ಈ ಮಹವು ಶಿವಾಚಾರ, ನಿಜಸ್ಥಾನ, ಬ್ರಹ್ಮರಂಧ್ರ, ಅನುಭಾವ ಇವುಗಳನ್ನು ವ್ಯಾಪಿಸುತ್ತದೆ. ಪ್ರಸಾದದಿಂದ ಇಂತಹ ಘನತರ ವಸ್ತುವು ಭಕ್ತನಿಗೆ ದೊರೆಕೊಳ್ಳುತ್ತದೆ. ಪ್ರಸಾದಿಯು ಭೋಗ್ಯ ವಸ್ತುಗಳನ್ನು ಈ ಪ್ರಕಾರ ಭೋಗಿಸಬೇಕು.

### ವಚನ.

೯೫. ಗುರು ಸ್ವಾಯತವಾಯಿತ್ತು. ಎಂಟು ಭಾವ ಸ್ವಾಯತವಾಯಿತ್ತು. ಹದಿನಾರು ತೆರದ ಭಕ್ತಿ ಸ್ವಾಯತವಾಯಿತ್ತು. ಅಷ್ಟವಿಧಾರ್ಚನೆ ಸ್ವಾಯತವಾಯಿತ್ತು. ತ್ರಿವಿಧದರಿವು ಸ್ವಾಯತವಾಯಿತ್ತು. ಮಹಾಲಿಂಗದ ನಿಲವು ಮಹಾ ಜಂಗಮದ ನಿಜವು ಸ್ವಾಯತವಾಯಿತ್ತು. ಶುದ್ಧ ಪ್ರಸಾದದ ತನು ಸ್ವಾಯತವಾಯಿತ್ತು. ಸಿದ್ಧಪ್ರಸಾದ ಚೈತನ್ಯ ಸ್ವಾಯತವಾಯಿತ್ತು. ಪ್ರಸಿದ್ಧ ಪ್ರಸಾದ ಮನ ಸ್ವಾಯತವಾಯಿತ್ತು. ವಾಮ ಭಾಗದಲ್ಲಿ ಮಹವು ಉದಯವಾಯಿತ್ತು. ಶಿವಾಚಾರದಲ್ಲಿ ಸಿರವಯ ಉದಯವಾಯಿತ್ತು. ನಿಜಸ್ಥಾನದಲ್ಲಿ ನಿಂದಿತ್ತು. ಕ್ಷೀರಸ್ಥಾನದಲ್ಲಿ ಸಾರಾಯವಾಯಿತ್ತು. ಅನುಭಾವದಲ್ಲಿ ಘನಾಗಮವೆನಿಸಿತ್ತು. ಸ್ವಾನುಭವದಲ್ಲಿ ನಿಮ್ಮ ಬಸವಣ್ಣಂಗೆ ಶರಣೆಂದಿತ್ತು. ನೆಮ್ಮುಗೆವಿಡಿದು ನಿಮ್ಮ ಬಸವಣ್ಣನ ಪ್ರಸಾದವ ಕೊಂಡಿತ್ತು. ನಿಮ್ಮ ಬಸವಣ್ಣನ ಪ್ರಸಾದದಿಂದ ಇಂತಹ ಘನವು ಸ್ವಾಯತವಾಯಿತ್ತು. ಬಸವಣ್ಣನಿಂದ ನೀವಾಧಿರಾಗಿ ಕಲಿದೇವ ನಿಮ್ಮ ಶರಣಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.

---

**ವಿವರಣೆ: —** ಗುರುಲಿಂಗ ಜಂಗಮಗಳ ಮೂಲಕ ಅನುಕ್ರಮವಾಗಿ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಗಳು ಶರೀರದಲ್ಲಿ ನೆಲೆಗೊಳ್ಳುತ್ತವೆ.

### ವಚನ.

೯೬. ಎನ್ನ ಚಿನ್ನಾದವಮಯವ ಗುರುವೆಂದೆನಿಸಿದ ಬಸವಣ್ಣ. ಎನ್ನ ಚಿದ್ಬಿಂದುವಿನ ಇರವು ಲಿಂಗವೆಂದೆನಿಸಿದ ಬಸವಣ್ಣ. ಎನ್ನ

ಚಿತ್ಕಳೆಯು ಇರವು ಜಂಗಮವೆಂದೆನಿಸಿದ ಬಸವಣ್ಣ. ಗುರುವಿನಲ್ಲಿ ಶುದ್ಧಪ್ರಸಾದ ಲಿಂಗದಲ್ಲಿ ಸಿದ್ಧಪ್ರಸಾದ ಜಂಗಮದಲ್ಲಿ ಪ್ರಸಿದ್ಧಪ್ರಸಾದ ಇಂತೀ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದದಲ್ಲಿ ಎನ್ನ ಊಣಕಲಸಿದ ಕಲಿ ದೇವಾ ನಿಮ್ಮ ಶರಣ ಸಂಗನ ಬಸವಣ್ಣನು.

---

**ವಿವರಣೆಃ—** ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಗಳಿಂದ ಅನುಕ್ರಮವಾಗಿ ತನು, ಮನು, ಭಾವಗಳು ಶುದ್ಧವಾಗುತ್ತವೆ.

**ವಚನ.**

೯೭. ಎನ್ನ ತನು ಶುದ್ಧವಾಯಿತ್ತು ಬಸವಣ್ಣನ ಶುದ್ಧಪ್ರಸಾದವ ಕೊಂಡೆನಾಗಿ. ಎನ್ನ ಮನ ಶುದ್ಧವಾಯಿತ್ತು ಬಸವಣ್ಣನ ಸಿದ್ಧ ಪ್ರಸಾದವ ಕೊಂಡೆನಾಗಿ. ಎನ್ನ ಭಾವ ಶುದ್ಧವಾಯಿತ್ತು ಬಸವಣ್ಣನ ಪ್ರಸಿದ್ಧ ಪ್ರಸಾದವ ಕೊಂಡೆನಾಗಿ. ಇಂತೀ ಎನ್ನ ತನು ಮನ ಭಾವಂಗಳು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದದಲ್ಲಿ ಶುದ್ಧವಾದವು ಕಾಣಾ ಕಲಿ ದೇವಾ. ನಿಮ್ಮ ಶರಣ ಬಸವಣ್ಣ ಇಂತಹ ಘನ ಮಹಿಮ ನೋಡಯ್ಯ.

---

**ವಿವರಣೆಃ—** ಇಲ್ಲಿ ಲಿಂಗ ಜಂಗಮ ಪ್ರಸಾದಗಳ ಪರಿಣಾಮಗಳನ್ನು ವಚನಕಾರನು ಹೇಳುತ್ತಾನೆ. ಮನುಷ್ಯನಿಗೆ ಸ್ಥೂಲ ಲಿಂಗವು ಬೇಕು. ಇದರಿಂದ ಅಷ್ಟವಿಧಾರ್ಚನೆಗಳನ್ನು ಮಾಡುವದು ಶಕ್ಯವಾಗುತ್ತದೆ. ಹಾಗೆಯೇ ಜಂಗಮವು ಬೇಕು ಇದರಿಂದ ತನು ಮನಗಳು ಶುದ್ಧವಾಗುವವು. ಹಾಗೆಯೇ ಜ್ಞಾನದಲ್ಲಿ ಲಿಂಗವನ್ನು ನಲೆಗೊಳಿಸಿ ವ್ಯವಹರಿಸಬೇಕು. ಇದರಿಂದ ದುರ್ವ್ಯಾಪಾರಗಳು ಅಡಗುವವು. ಹೀಗೆ ಆಚರಿಸಿದಲ್ಲಿ ಲಿಂಗವು ವ್ಯಾಪಿಸಿಕೊಳ್ಳುತ್ತದೆ.

**ವಚನ.**

೯೮. ಅಯ್ಯ ಎನ್ನ ಅಷ್ಟವಿಧಾರ್ಚನೆ ಶುದ್ಧವಾಯಿತ್ತಯ್ಯ ನೀವು ಮೂರ್ತಿ-ಲಿಂಗವಾದ ಕಾರಣ. ಅಯ್ಯ ಎನ್ನ ತನು-ಮನ ಶುದ್ಧವಾದವಯ್ಯ ನೀವು ಜಂಗಮ-ಲಿಂಗವಾದ ಕಾರಣ. ಅಯ್ಯ ಎನ್ನಾಪ್ಯಾಯನ ಶುದ್ಧವಾಯಿತ್ತಯ್ಯ ನಿಮ್ಮ ಪ್ರಸಾದವ ಕೊಂಡೆನಾಗಿ. ಅಯ್ಯ ಎನ್ನ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳೆಲ್ಲ ಶುದ್ಧವಾದವಯ್ಯ ನೀವು ಜ್ಞಾನ-ಲಿಂಗವಾದ ಕಾರಣ. ಇಂತೀ ಎನ್ನ ಸರ್ವಾಂಗದಲ್ಲಿ ಸನ್ನಿಹಿತವಾದೆಯಲ್ಲಾ ಕಲಿದೇವರ ದೇವಾ.

---

## ೬ ವಿಭೂತಿ.

**ವಿವರಣೆಃ—** ಇಲ್ಲಿ ವಚನಕಾರನು ಭಸಿತದ ಮಹತ್ವವನ್ನು ವರ್ಣಿಸುತ್ತಾನೆ.

### ವಚನ.

೯೯. ಧರಿಸಿ ಭೋ ಧರಿಸಿ ಭೋ ಮರ್ತ್ಯರೆಲ್ಲರು ಮರೆಯದೆ ಶ್ರೀಮಹಾ ಭಸಿತವ. ಲೆಕ್ಕವಿಲ್ಲದ ತೀರ್ಥಂಗಳ ಮಿಂದ ಫಲಕ್ಕಿಂತಲೂ ಕೋಟಿ ಮಡಿ ವೆಗ್ಗಳ. ಧರಿಸಿ ಭೋ ದರಿಸಿ ಭೋ ಮರ್ತ್ಯರೆಲ್ಲರು ಮರೆಯದೆ ಶ್ರೀಮಹಾ ಭಸಿತವ. ಲೆಕ್ಕವಿಲ್ಲದ ಯಜ್ಞಂಗಳ ಮಾಡಿದ ಫಲಕ್ಕಿಂತ ಕೋಟಿ ಮಡಿ ವೆಗ್ಗಳ. ಅದೆಂತೆಂದಡೆ, ಭೀಮಾಗಮದಲ್ಲಿ "ಸರ್ವ ತೀರ್ಥೇಷು ಯತ್ಪುಣ್ಯಂ, ಸರ್ವ ಯಜ್ಞೇಷು ಯತ್ಫಲಂ ತತ್ಫಲಂ ಕೋಟಿ ಗುಣಿತಂ ಭಸ್ಮಸ್ನಾನಂ ನ ಸಂಶಯಃ" ಎಂದುದಾಗಿ ಧರಿಸಿ ಭೋ ಧರಿಸಿ ಭೋ ಮರ್ತ್ಯರೆಲ್ಲರು ಮರೆಯದೆ ಶ್ರೀಮಹಾ ಭಸಿತವ. ನಮ್ಮ ಕಲಿದೇವರ ನಿಜ ಚರಣವ ಕಾಂಬುದಕ್ಕೆ ಶ್ರೀ ಮಹಾಭಸಿತವೇ ವಶ್ಯ ಕಾಣಿ ಭೋ.

---

## ೭. ಮಂತ್ರ, ೮. ರುದ್ರಾಕ್ಷಿ.

**ವಿವರಣೆ:—** ಈ ಎರಡು ವಿಷಯಗಳನ್ನು ವಚನಕಾರನು ಬಹು ಸಂಕ್ಷಿಪ್ತವಾಗಿ ಕೆಳಗೆ ಹೇಳಿದ್ದಾನೆ. ಅವು ಇಲ್ಲಿ ಉಲ್ಲೇಖ ಮಾತ್ರವಾಗಿವೆ. ಬಹು ಜನ ವಚನಕಾರರು ಇವು ಗೂಢ ವಿಷಯಗಳೆಂದು ತಿಳಿದು ಅವು ಗಳ ನೆಲೆ ಕಲೆಗಳನ್ನು ಸವಿಸ್ತಾರವಾಗಿ ವಿವರಿಸುವದಿಲ್ಲ.

೧೦೦. ಅಯ್ಯಾ ನಿತ್ಯ ನಿಃಕಳಂಕ ಸತ್ಯ ಸದಾಚಾರ ಭಕ್ತ ಜಂಗಮದ ಆಚರಣೆಯ ಸಂಬಂಧವ ಒಳಗು ಹೊರಗು ಎನ್ನದೆ ಸಾಕಾರ ನಿರಾಕಾರವಾದ ಒಂದೇ ವಸ್ತುವೆಂದು ತಿಳಿದು, ಚಿದಂಗಕ್ಕೆ ಇಷ್ಟಲಿಂಗಕ್ಕೆ ಚಿದ್ವಿಭೂತಿ ಚಿದ್ರುದ್ರಾಕ್ಷಿ ಸದ್ಭಕ್ತಿಯ ಸಂಬಂಧಿಸಿ, ಚಿತ್ಪ್ರಾಣಕ್ಕೆ ಪಾದೋದಕ ಶಿವಮಂತ್ರ ಸಮ್ಯಜ್ಞಾನವ ಸಂಬಂಧಿಸಿ, ಭಕ್ತ ಧವಳಾಂಬರ ಧಾರಕನಾಗಿ, ಜಂಗಮ ಶಿವಲಾಂಛನ ಧಾರಕನಾಗಿ, ಪರದೈವ ಪರಪಾಕ ಪರವಸ್ತ್ರ ಪರಬೋಧೆ ಪರದ್ರವ್ಯ ಪರಸ್ತ್ರೀ ಪರಜಪ ಪರನಿಂದೆ ಅತಿಯಾಶೆ ಕಾಂಕ್ಷೆ ಮಲತ್ರಯದಲ್ಲಿ ಮೋಹಿಸದೆ ಮಥನದಲ್ಲಿ ಕೂಡದೆ ಭವಿಮಾರ್ಗ ಸಂಗವ ಬಳಿಸಿದ ಶಿಷ್ಯ ಪುತ್ರ ಸ್ತ್ರೀ ಬಂಧು ಬಳಗ ಒಡ ಹುಟ್ಟಿದವರು ಪಿತ ಮಾತೆ ಗುರುವೆಂದು ಒಡಗೂಡಿ ಬಳಿಸಿದ ಭಕ್ತ ಜಂಗಮ ಸ್ಥಲಕ್ಕೆ ಸಲ್ಲ ಕಾಣಾ ಕಲಿದೇವರದೇವಾ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

---

ರಾ॥ ಸಾ॥ **ಫ. ಗು. ಹಳಕಟ್ಟಿ**ಯವರು ರಚಿಸಿದ **ಈ ಹೊಸ** ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

---

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "**ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ**" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ




ಸಂಪುಟ ೧೩ ]          ಮಾರ್ಚ ೧೯೩೯.          [ ಸಂಚಿಕೆ ೬

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೩] ಮಾರ್ಚ ೧೯೩೯ [ಸಂಚಿಕೆ ೬


## ಬಸವಣ್ಣನವರಿಗಿಂತ ಪೂರ್ವದ ಕಾಲ.


(ಲೇಖಕ:—ರಾ|| ಸಾ|| ಫ. ಗು. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ವಿಜಾಪುರ)


### ರೇವಣಸಿದ್ಧೇಶ್ವರ

ಶಿವಾನುಭವ ಪತ್ರಿಕೆಯ ಹಿಂದಿನ ೫ನೇ ಸಂಪುಟದಲ್ಲಿ ರೇವಣ ಸಿದ್ಧೇಶ್ವರನು ತರ್ದೇವಾಡಿ ಅಥವಾ ತದ್ವೇವಾಡಿ ಸೀಮೆಯಲ್ಲಿ ಬಂದು ವಾಸಿಸಿದ್ದನ್ನೂ ಅಲ್ಲಿ ಅವನು ಜರಿಗಿಸಿದ ಅನೇಕ ಕಾರ್ಯಗಳನ್ನೂ ನಾವು ವಿವೇಚಿಸಿದ್ದೇವೆ. ಆಗ ಬಸವೇಶ್ವರನು ಇನ್ನೂ ಉದಯಕ್ಕೆ ಬಂದಿದ್ದಿಲ್ಲ. ಬಿಜ್ಜಳನು ಮಾತ್ರ ಚಾಳುಕ್ಯರ ಮಾಂಡಲಿಕನಾಗಿ ಈ ಭಾಗದಲ್ಲಿ ರಾಜ್ಯವಾಳುತ್ತಿದ್ದನು. ಈ ಭಾಗವು 'ತರ್ದೇವಾಡಿ ಒಂದು ಸಾವಿರದ ನಾಡು' ಎಂದು ಕರೆಯಲ್ಪಡುತ್ತಿತ್ತು. ವಿಜಾಪುರ ಜಿಲ್ಲೆಯಲ್ಲಿ ಭೀಮಾ ತೀರದಲ್ಲಿರುವ ತದ್ದೇವಾಡಿಯೇ ಇದಕ್ಕೆ ರಾಜಧಾನೀ ಪಟ್ಟಣವು. ಇದಕ್ಕೆ ಸಮೀಪವಾಗಿರುವ ಮಂಗಳವಾಡವು ಆಗ ಒಂದು ಮಹತ್ವದ ಪಟ್ಟಣವಾಗಿದ್ದದರಿಂದ ಇಲ್ಲಿಯೂ ಕೂಡ ಬಿಜ್ಜಳನು ವಾಸ ಮಾಡಿ ರಾಜ್ಯ ಕಾರಭಾರ ನಡಿಸುತ್ತಿದ್ದನು. ಈ ಮೊದಲಾದ ಸಂಗತಿಗಳನ್ನು ನಾವು ಹಿಂದಿನ ಲೇಖದಲ್ಲಿ ವಿವರಿಸಿದ್ದೇವೆ.

### ಕಲಚೂರ್ಯರು.

ಬಿಜ್ಜಳನು ಕಲಚೂರ್ಯ ವಂಶದವನಾಗಿದ್ದನು. ಈ ವಂಶದವರು ಕರ್ನಾಟಕಸ್ಥರಾಗಿರದೆ ಉತ್ತರ ಹಿಂದುಸ್ತಾನದಲ್ಲಿ ಕಾಲಿಂಜರ (ಕನೋಜ) ವಲ್ಲಿ ಮೊದಲು ರಾಜ್ಯವಾಳುತ್ತಿದ್ದರು. ಹರಿಹರ ಗ್ರಾಮದಲ್ಲಿ ಬಿಜ್ಜಳನ

ಉಲ್ಲೇಖವಿದ್ದ ಒಂದು ಸುದೀರ್ಘವಾದ ಶಿಲಾಶಾಸನವಿದೆ. ಇದರಲ್ಲಿ ಆತನ ವಂಶದವರ ಸವಿಸ್ತಾರ ವರ್ಣನೆಯು ಇದೆ (ಎಪಿಗ್ರಾಫಿಕಾ ಕರ್ನಾಟಕಾ--ಚಿತ್ರದುರ್ಗ ಪುಟ ೧೩೮). ಇದರಲ್ಲಿ ಆತನ ಬಿರುದು ಇರುವದೇನಂದರೆಃ – "ಸ್ವಸ್ತಿಸಮಸ್ತ ಭುವನಾಶ್ರಯಂ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ **ಕಾಳಾಂಜರ ಪುರವರಾಧೀಶ್ವರಂ** ಸುವರ್ಣ ವೃಷಭಧ್ವಜ ಡಮರುಗತೂರ್ಯ ನಿರ್ಘೋಷಣ ಕದನ ಪ್ರಚಂಡ ಸುಭಟರಾದಿತ್ಯ ಕಲಿಗಳಂಕುಶ ಛಲದಂಕ ರಾಮ ಶ್ರೀಮತು ಕಳಚೂರ್ಯ ಭುಜಬಳ ಚಕ್ರವರ್ತಿ ನಿಶ್ಶಂಕ ಮಲ್ಲ" ಎಂದು ಇದೆ. ಈ ಬಿರುದು ಬಿಜ್ಜಳನ ಎಲ್ಲ ಶಿಲಾಶಾಸನಗಳಲ್ಲಿಯೂ ಇರುತ್ತದೆ. ಇದರಿಂದ ಕಲಚೂರ್ಯರು ಉತ್ತರದಲ್ಲಿ ಕಾಲಿಂಜರದಲ್ಲಿ ಆಳುತ್ತಿದ್ದ ಹಾಗೆ ತಿಳಿದುಬರುತ್ತಿದೆ.

ಈ ಕಲಚೂರ್ಯ ವಂಶದಲ್ಲಿ ರಾಜ ಮತ್ತು ಬಿಜ್ಜಳ ಎಂಬೀರ್ವರು ಸಹೋದರರು ಜನಿಸಿದರು. ಇವರೇ ಕರ್ನಾಟಕಕ್ಕೆ ಮೊದಲು ಬಂದಿರಬಹುದು. ಇವರಲ್ಲಿ ರಾಜನಿಗೆ ಅಮ್ಮುಗಿ, ಶಂಖವರ್ಮ, ಕನ್ನರ, ಜೋಗಮ ಎಂಬ ನಾಲ್ವರು ಮಕ್ಕಳಿದ್ದರು. ಇವರಲ್ಲಿ ಮೊದಲನೆಯವನಾದ ಅಮ್ಮುಗಿಯೂ ಅವನ ತರುವಾಯ ಜೋಗಮನೂ ರಾಜ್ಯ ಕಾರಭಾರದಲ್ಲಿ ಉಚ್ಚಸ್ಥಾನವನ್ನು ಹೊಂದಿದರು. ಜೋಗಮನ ಮಗನು ಪೆರ್ಮಾಡಿಯು. ಈ ಪೆರ್ಮಾಡಿಯ ಮಗನೇ ಬಿಜ್ಜಳನು. ಈ ಎಲ್ಲ ಸಂಗತಿಗಳು ಈ ಹರಿಹರ ಶಿಲಾಶಾಸನದಲ್ಲಿ ಹೇಳಲ್ಪಟ್ಟಿವೆ.

ಕರ್ನಾಟಕ ದೇಶದಲ್ಲಿ ಪ್ರಸಿದ್ಧ ರಾಜರು ಬಹು ಕಾಲದಿಂದಲೂ ಆಳುತ್ತ ಬಂದಿದ್ದರಿಂದ ಅವರ ಕೀರ್ತಿಯನ್ನು ಕೇಳಿ ಕಾಶ್ಮೀರ, ಮಧ್ಯ ಹಿಂದುಸ್ತಾನ ಈ ಮೊದಲಾದ ಭಾಗಗಳಿಂದ ಕಾಲಕಾಲಕ್ಕೆ ಅನೇಕರು ಅವರ ಆಶ್ರಯವನ್ನು ಅಪೇಕ್ಷಿಸಿ ಇಲ್ಲಿಗೆ ಬಂದು ವಾಸಮಾಡುತ್ತಿದ್ದರೆಂದು ತೋರುತ್ತದೆ. ಅಂಥವರಲ್ಲಿ ಈ ಕಲಚೂರ್ಯರೂ ಒಬ್ಬರಾಗಿದ್ದರು. ಅವರು ಇಲ್ಲಿಗೆ ಬಂದ ಬಳಿಕ ಚಾಳುಕ್ಯರ ರಾಜ್ಯದಲ್ಲಿ ಶ್ರೇಷ್ಠ ಸ್ಥಾನಗಳು ಅವರಿಗೆ ಕೊಡಲ್ಪಟ್ಟಿದ್ದವು.

## ಬಿಜ್ಜಳನು.

ಬಿಜ್ಜಳನ ತಂದೆಯಾದ ಪೆರ್ಮಾಡಿಯು ತರ್ದವಾಡಿ ಸೀಮೆಯಲ್ಲಿ ೧೧೩೮ರ ಸುಮಾರಿನಲ್ಲಿ ಚಾಲುಕ್ಯರ ಮಾಂಡಲಿಕನಾಗಿ ರಾಜ್ಯವಾಳು

ತ್ತಿದ್ದನು. ಅವನ ತರುವಾಯ ಅವನ ಮಗನಾದ ಬಿಜ್ಜಳನು ಅದೇ ಸ್ಥಾನದಲ್ಲಿ ೧೧೫೧ರ ಸುಮಾರಿನಲ್ಲಿ ಮಂಡಳಾಧಿಪತಿಯಾದನು. ಆಗ ಕಲ್ಯಾಣ ಪಟ್ಟಣದಲ್ಲಿ ಚಾಲುಕ್ಯರ ನೂರ್ಮಡಿ ತೈಲಪನು ಸಾರ್ವಭೌಮನಾಗಿ ರಾಜ್ಯವಾಳುತ್ತಿದ್ದನು. ಆದರೆ ಅವನು ಬಹು ದುರ್ಬಲನಾದ್ದರಿಂದ ಬಿಜ್ಜಳನು ತನ್ನ ವರ್ಚಸ್ಸನ್ನು ರಾಜ್ಯದಲ್ಲಿ ಬೆಳೆಸುತ್ತ ಬೆಳೆಸುತ್ತ ೧೧೫೫ರ ಸುಮಾರಕ್ಕೆ ಸರ್ವಾಧಿಪತ್ಯವನ್ನು ಹೊಂದಿದನು. ಮುಂದೆ ೧೧೬೨ರ ಸುಮಾರಿಕ್ಕೆ ರಾಜನನ್ನು ಸಹ ತಳ್ಳಿ ತಾನೇ ಸಿಂಹಾಸನಾರೂಢನಾದನು. ಈ ಎಲ್ಲ ಸಂಗತಿಗಳು ಇತಿಹಾಸದಿಂದ ಸಿದ್ಧವಾಗಿರುತ್ತವೆ.

## ತದ್ದೇವಾಡಿಯಲ್ಲಿ ರೇವಣಸಿದ್ಧೇಶ್ವರನು.

ಹೀಗೆ ಬಿಜ್ಜಳನು ತದ್ದೇವಾಡಿ ಸೀಮೆಯಲ್ಲಿ ಮಹಾಮಂಡಲೇಶ್ವರನಾಗಿದ್ದಾಗ ರೇವಣಸಿದ್ಧೇಶ್ವರನು ಅಲ್ಲಿಯೇ ಬಹುಕಾಲ ವಾಸಿಸಿದನೆಂಬುದನ್ನು ಕುರಿತು ನಾವು ಹಿಂದಿನ ಸಂಚಿಕೆಯಲ್ಲಿ ಸವಿಸ್ತಾರವಾಗಿ ವಿವೇಚಿಸಿದ್ದೇವೆ. ಈ ಕಾಲದಲ್ಲಿ ಅವನು ಧರ್ಮಬೋಧೆ ಮಾಡುತ್ತ ಜನರಲ್ಲಿ ಧರ್ಮಜಾಗ್ರತಿಯ ಕಾರ್ಯವನ್ನು ಮಾಡುತ್ತ ಇದ್ದನೆಂಬುದು ಅವನ ಚರಿತ್ರೆಯಿಂದ ಕಂಡು ಬರುತ್ತದೆ. ಈ ಕಾರ್ಯವನ್ನು ಮಾಡುತ್ತಿದ್ದುದರಿಂದಲೇ ಅವನ ಹೆಸರಿನ ದೇವಾಲಯಗಳು ಈ ಭಾಗದಲ್ಲಿ ಕಟ್ಟಲ್ಪಟ್ಟವು. ಅವನು ಇದ್ದ ಪ್ರದೇಶಗಳು ಪುಣ್ಯಕ್ಷೇತ್ರಗಳೆಂದು ಭಾವಿಸಲ್ಪಟ್ಟವು. ಅಲ್ಲಿ ಈಗಲೂ ಕೂಡ ದೊಡ್ಡ ದೊಡ್ಡ ಜಾತ್ರೆಗಳು ಆಗುತ್ತಾ ಇವೆ.

## ರೇವಣಸಿದ್ಧೇಶ್ವರನ ಧರ್ಮ-ಜಾಗ್ರತಿಯ ಕಾರ್ಯಗಳು.

ರೇವಣಸಿದ್ಧೇಶ್ವರನ ಸ್ಥಾನಗಳು ಅನೇಕ ಕಡೆಗೆ ಇವೆ. ಅವುಗಳ ಮೇಲಿಂದ ಅವನು ಎಲ್ಲೆಲ್ಲಿ ಧರ್ಮಜಾಗ್ರತಿಯ ಕಾರ್ಯಗಳನ್ನು ಮಾಡಿದನೆಂಬುದನ್ನು ಕಂಡು ಹಿಡಿಯಬಹುದಾಗಿದೆ. ಪಶ್ಚಿಮಕ್ಕೆ ಕೊಲ್ಲಾಪುರ, ಉತ್ತರಕ್ಕೆ ಸೊಲ್ಲಾಪುರ, ಮತ್ತು ಬೆಳಗಾವಿ ಜಿಲ್ಲೆಯಲ್ಲಿ ಬೆಲ್ಲದ ಬಾಗೇವಾಡಿ ಈ ಪ್ರದೇಶಗಳಲ್ಲಿ ಈಗಲೂ ಇವನ ಹೆಸರಿನ ಪುಣ್ಯಸ್ಥಾನಗಳಿವೆ. ಈ ಬಾಗೇವಾಡಿ ಕ್ಷೇತ್ರವನ್ನು ಕುರಿತು ವೇ. ಮೂ. ಶಿವಮೂರ್ತಿ ಶಾಸ್ತ್ರಿಗಳು ಶಿವಾನುಭವ ಸಂಚಿಕೆ ೭ ೪-೬-೨೬ಗ ಇದರಲ್ಲಿ ಬರೆದಿದ್ದಾರೆ. ದಕ್ಷಿಣದಲ್ಲಿ ಬನವಾಸಿ ಬಳ್ಳಿಗಾವಿ ಪ್ರದೇಶಗಳಲ್ಲಿಯೂ ಅವನ ಐತಿಹ್ಯಗಳಿವೆ. ಕೋಲಾರ ಜಿಲ್ಲಾ ಕೈವಾರ ಪೇಟೆಯ ಸಮೀಪದಲ್ಲಿಯೂ

ಅವನ ಸ್ಥಾನವು ಒಂದು ಇರುತ್ತದೆ. ಇದರ ವಿವರಣೆಯು 'ಶಿವಾನುಭವ ಸಂಚಿಕೆ' ೪-೭-೩೦೭ ಇದರಲ್ಲಿ ಬಂದಿರುತ್ತದೆ ಈ ಕ್ಷೇತ್ರಗಳಿದ್ದ ಸ್ಥಾನಗಳ ಮೇಲಿಂದ ರೇವಣಸಿದ್ಧೇಶ್ವರನು ಯಾವ ಯಾವ ಪ್ರದೇಶಗಳಲ್ಲಿ ಚಟುವಟಿಕೆಗಳನ್ನು ನಡಿಸಿನೆಂಬುದನ್ನು ನಾವು ಕಂಡು ಹಿಡಿಯಬಹುದಾಗಿದೆ. ಈ ಕಾರ್ಯಗಳನ್ನು ಅವನು ಕಲ್ಯಾಣದಲ್ಲಿ ಬಿಜ್ಜಳನು ಸಿಂಹಾಸನವನ್ನೇರುವ ಪೂರ್ವದಲ್ಲಿಯೇ ಮಾಡಿರಲಿಕ್ಕೆ ಬೇಕು. ಅವನು ಸಿಂಹಾಸನವನ್ನೇರಿದ ಬಳಿಕ ಬಸವೇಶ್ವರನ ಉಲ್ಲೇಖಗಳು ಬರುತ್ತವೆ, ರೇವಣಸಿದ್ಧೇಶ್ವರನವು ಬರುವದಿಲ್ಲ. ಇದರ ಮೇಲಿಂದ ಬಿಜ್ಜಳನು ಚಾಲುಕ್ಯರ ಮಹಾಮಂಡಲೇಶ್ವರ ಅಂದರೆ ಸುಬೇದಾರನಾಗಿ ರಾಜ್ಯವಾಳುತ್ತಿರುವ ಕಾಲಕ್ಕೆಯೇ ರೇವಣಸಿದ್ಧೇಶ್ವರನು ಧಾರ್ಮಿಕ ಚಟುವಟಿಕೆಗಳನ್ನು ದೇಶದಲ್ಲಿ ನಡಿಸುತ್ತ ಬಂದನೆಂಬ ಅನುಮಾನವು ಉಂಟಾಗುತ್ತದೆ.

## ರೇವಣಸಿದ್ಧನು ರಾಜಕೀಯ ಪುರುಷನು.

ಆದರೆ ರೇವಣಸಿದ್ಧೇಶ್ವರನು ಕೇವಲ ಧಾರ್ಮಿಕ ಪುರುಷನಾಗಿರಲಿಲ್ಲ. ಅವನು ಶೂರ ಪುರುಷನೂ ಆಗಿದ್ದನು. ಇದು ಅವನ ಚರಿತ್ರೆಯಿಂದ ತಿಳಿದುಬರುತ್ತದೆ. ಅವನು ಲೌಕಿಕವನ್ನು ಪೂರ್ಣವಾಗಿ ತ್ಯಜಿಸಿ ಏಕಾಂತವಾಸಿಯಾಗಿ ಒಂದು ಕಡೆಗೆ ಧ್ಯಾನಮಾಡುತ್ತ ಕಾಲಕಳೆಯುವವನಾಗಿರಲಿಲ್ಲ. ಹೇಗೆ ಬಸವೇಶ್ವರನು ರಾಜಕೀಯ ಪುರುಷನಾಗಿ ಧರ್ಮವೃದ್ಧಿಯ ಕಾರ್ಯಗಳನ್ನು ಮಾಡಿದನೋ, ಹಾಗೆಯೇ ರೇವಣಸಿದ್ಧೇಶ್ವರನು ವರ್ತಿಸಿದನು. ಇದರಿಂದ ಆಗ ಅವನು ಬಹಳ ಪ್ರಬಲ ಪುರುಷನಾದನು. ಆದ್ದರಿಂದ ಬಿಜ್ಜಳನು ಅವನ ಒಲುಮೆಯನ್ನು ಸಂಪಾದಿಸಲು ಪ್ರಯತ್ನಿಸುತ್ತ ಇದ್ದನು. ಇದು ಅವನ ಚರಿತ್ರೆಯನ್ನು ಸೂಕ್ಷ್ಮರೀತಿಯಿಂದ ನಿರೀಕ್ಷಿಸಿದಲ್ಲಿ ನಿದರ್ಶನಕ್ಕೆ ಬರುತ್ತದೆ.

## ರೇವಣಸಿದ್ಧನು ಶೂರ ಪುರುಷನು.

ರೇವಣಸಿದ್ಧನು ಮೊದಲು ಚೋಳಮಂಡಲದಲ್ಲಿ ವಾಸಮಾಡಿದನು. ಅಲ್ಲಿ ರಾಜನ ಆಸ್ಥಾನದಲ್ಲಿದ್ದುಕೊಂಡು ಪ್ರಸಿದ್ಧಿಗೆ ಬಂದನು. ಮತ್ತು ಅರಸನ ಕುವರಿಯೊಡನೆ ಅವನ ಲಗ್ನವಾಯಿತು. ಆ ಮೇಲೆ ಅವನು ಮಾಸ್ಯನೂರಿಗೆ ಬಂದು ಅಲ್ಲಿ ತಿಗುಣಿಗಳ ಸ್ವರೂಪವನ್ನು ಹೊಂದಿದ್ದ ರಾಕ್ಷಸಮಿಥುನಗಳನ್ನು ಸುಟ್ಟು ಬಿಡಲು ಅವು ಉಕ್ಕಿನ ಗುಂಡುಗಳಾ

ದವು. ಅವುಗಳಿಂದ ಅವನು ಒಂದು ಕಠಾರಿಯನ್ನು ಮಾಡಿಸುತ್ತಾನೆ. ರೇವಣಸಿದ್ಧೇಶ್ವರನು ಒಬ್ಬ ಶೂರ ಪುರುಷನಾದ್ದರಿಂದಲೇ ಅವನು ಹೀಗೆ ಮಾಡಿರಲಿಕ್ಕೆ ಬೇಕು. ಈ ಕಠಾರಿಯಲ್ಲಿ ಜಗತ್ತನ್ನು ಸಂಹಾರಮಾಡುವ ಶಕ್ತಿಯು ಇದ್ದುದರಿಂದ ಅದನ್ನು ಅವನು ಮಡುವಿನಲ್ಲಿ ಹಾಕಿ ಬಿಟ್ಟನೆಂದು ಹರಿಹರ ಕವಿಯು ಹೇಳುತ್ತಾನೆ. ಮುಂದೆ ಅವನು ಬನವಾಸಿಗೆ ಹೋಗಿ ಅಲ್ಲಿಯ ಅರಸನಿಗೂ ಒಂದು ಕಠಾರಿಯನ್ನು ಕೊಡುತ್ತಾನೆ. ತರುವಾಯ ಬಿಜ್ಜಳನು ಮಾಸನೂರು ಮಡುವಿನಲ್ಲಿ ಹಾಕಿದ ಕಠಾರಿಯ ವೃತ್ತಾಂತವನ್ನು ಕೇಳಿ, ಅವನು ಅದನ್ನು ಒಂದು ಉಪಾಯದಿಂದ ದೊರಕಿಸಿಕೊಳ್ಳುತ್ತಾನೆ. ಇದರಲ್ಲಿ ರೇವಣಸಿದ್ಧೇಶ್ವರನೇ ಅವನಿಗೆ ಅನುಗ್ರಹಿಸುತ್ತಾನೆ. ಈ ಎಲ್ಲ ಸಂಗತಿಗಳು ಏನನ್ನು ಸೂಚಿಸುತ್ತವೆಂಬವನ್ನು ವಾಚಕರು ತರ್ಕಿಸಬೇಕು. ಇವುಗಳಿಂದ ರೇವಣಸಿದ್ಧೇಶ್ವರನು ಒಬ್ಬ ವೀರ ಪುರುಷನಾಗಿರಬೇಕು. ಮತ್ತು ಅವನ ಸಹಾಯವನ್ನು ಆಗಿನ ರಾಜ್ಯಾಧಿಪತಿಗಳು ಸಹ ಅಪೇಕ್ಷಿಸುತ್ತಿರಬೇಕು ಎಂಬ ಅನುಮಾನಗಳು ಹೊರಡುತ್ತವೆ.

ಈಗಿನ ಬಾಳೇಹಳ್ಳಿ ಸಿಂಹಾಸನವು ರೇವಣಸಿದ್ಧೇಶ್ವರನದಾಗಿರುತ್ತದೆ. ಈ ಸಿಂಹಾಸನಕ್ಕೆ ಈಗಲೂ "ವೀರ ಸಿಂಹಾಸನ" ವೆಂಬ ಹೆಸರು ಇದೆ. ರೇವಣಸಿದ್ಧೇಶ್ವರನು ವೀರಪುರುಷನಾದ್ದರಿಂದಲೇ ಈ ಹೆಸರು ಇದಕ್ಕೆ ಬಂದಿರಬೇಕು.

## ಬಿಜ್ಜಳನಿಗೆ ರೇವಣಸಿದ್ಧೇಶ್ವರನ ಸಹಾಯ

ರೇವಣಸಿದ್ಧೇಶ್ವರನಿದ್ದ ಕಾಲವನ್ನು ನಾವು ವಿವೇಚಿಸುದು ಅವಶ್ಯವು. ಬಿಜ್ಜಳನು ಆಗ ಸ್ವತಂತ್ರನಾಗಲು ಪ್ರಯತ್ನಿಸುತ್ತಿದ್ದನು. ಮತ್ತು ಚಾಲುಕ್ಯರ ರಾಜ್ಯವನ್ನು ಅವನು ಆಕ್ರಮಿಸುವ ಕಾರ್ಯದಲ್ಲಿ ತೊಡಗಿದ್ದನು. ಇದು ಇತಿಹಾಸದಿಂದ ಸ್ಪಷ್ಟವಾಗಿರುತ್ತದೆ. ಆದರೆ ಅವನು ಇದ್ದ ಸ್ಥಳದಲ್ಲಿಯೇ ಅಂದರೆ ತದ್ದೇವಾಡಿ ಪ್ರದೇಶದಲ್ಲಿಯೇ ರೇವಣಸಿದ್ಧೇಶ್ವರನು ಪ್ರಬಲಪುರುಷನಾಗಿ ವಾಸವಾಗಿದ್ದನು. ಜನತೆಯ ಬೆಂಬಲವುಳ್ಳ ಮತ್ತು ಶೂರನಾದ ಈತನ ಸಹಾಯವನ್ನು ಬಿಜ್ಜಳನು ಅಪೇಕ್ಷಿಸುತ್ತಿರಲಿಕ್ಕೆಬೇಕು. ಮತ್ತು ಇದರಲ್ಲಿ ರೇವಣಸಿದ್ಧೇಶ್ವರನು ಅವನಿಗೆ ಸಹಾಯ ಮಾಡಿರಲಿಕ್ಕೆ ಬೇಕೆಂದು ತೋರುತ್ತದೆ. ಹೀಗಿಲ್ಲದಿದ್ದರೆ ಅವನು ತನ್ನ ಪ್ರಚಂಡ

ಆಯುಧವನ್ನು ಬಿಜ್ಜಳನಿಗೆ ಕೊಡುತ್ತಿದ್ದಿಲ್ಲ. ಮತ್ತು ಅವನ ರಾಜ್ಯದಲ್ಲಿ ಅವನು ಬಹಳ ದಿವಸ ವಾಸಮಾಡುತ್ತಿದ್ದಿಲ್ಲ.

## ಬಿಜ್ಜಳನ ಮಗಳೊಡನೆ ಲಗ್ನ.

ಮುಂದೆ ಬಿಜ್ಜಳನು ಅವನಿಗೆ ತನ್ನ ಮಗಳನ್ನು ಸಹ ಕೊಟ್ಟು ಲಗ್ನ ಮಾಡುವನು. ಈ ಸಂಗತಿಯು ಏನು ತೋರಿಸುತ್ತದೆ? ಬಿಜ್ಜಳನ ಆಕ್ರಮಣ ಕಾರ್ಯದಲ್ಲಿ ಈ ಆಪ್ತತ್ವದ ಮೂಲಕ ರೇವಣಸಿದ್ಧೇಶನು ಅವನಿಗೆ ಸಹಾಯ ಮಾಡಿರಲಿಕ್ಕೆಬೇಕು.

ಮೇಲ್ಕಂಡ ಮತ್ತು ಹಿಂದಿನ ಎಲ್ಲ ಸಂಗತಿಗಳನ್ನು ನಾವು ಒಟ್ಟಾರೆ ವಿಚಾರಮಾಡಿನೋಡಲಾಗಿ ಬಿಜ್ಜಳನು ಚಾಲುಕ್ಯರ ರಾಜ್ಯವನ್ನು ಆಕ್ರಮಣ ಮಾಡುವ ಸಮಯದಲ್ಲಿ ರೇವಣಸಿದ್ಧೇಶ್ವರನು ಅವನಿಗೆ ಸಹಾಯ ಮಾಡಿರಲಿಕ್ಕೇಬೇಕೆಂಬ ಅನುಮಾನವು ಹೊರಡುತ್ತದೆ.

ಈ ಕಾಲದಲ್ಲಿ ರೇವಣಸಿದ್ಧೇಶ್ವರನು ಒಬ್ಬ ಮಹತ್ವದ ಧಾರ್ಮಿಕ ಪುರುಷನಾಗಿದ್ದನು. ಆದ್ದರಿಂದ ಉತ್ತರ ಕರ್ನಾಟಕ ಭಾಗದಲ್ಲಿ ಬಹುಜನರು ಅವನ ಅನುಯಾಯಿಗಳಾಗಿರಲಿಕ್ಕೆಬೇಕು. ವೀರಶೈವ ಸಮಾಜವು ಪೇರ್ಮಾಡಿ ರಾಯನ ಕಾಲದಿಂದಲೂ ಪ್ರಬಲವಾಗುತ್ತ ನಡೆದಿತ್ತು. ಆಗ ಅನೇಕ ಶಿವಶರಣರು ಈ ನಾಡಿನಲ್ಲಿ ಉದ್ಭವಿಸಿದರು. (ಶಿವಾನುಭವ ಈ ವರ್ಷದ ೩ನೇ ಸಂಚಿಕೆ ನೋಡಿರಿ.) ಅವರ ಪ್ರಭಾವದಿಂದ ವೀರಶೈವರ ಸಂಖ್ಯೆಯು ಇಲ್ಲಿ ಹೆಚ್ಚುತ್ತಿರಲಿಕ್ಕೆಬೇಕು. ಈ ಸ್ಥಿತಿಯು ಪ್ರಾಪ್ತವಾದ್ದರಿಂದ ಬಿಜ್ಜಳನು ತನ್ನ ಕಾರ್ಯದಲ್ಲಿ ವೀರಶೈವರ ಸಹಾಯವನ್ನು ಅಪೇಕ್ಷಿಸುವದು ಸಹಜವಾದದ್ದು. ಅವರನ್ನು ತನ್ನ ಕಡೆಗೆ ಎಳೆದುಕೊಳ್ಳಲು ಅವರ ಮುಖ್ಯಸ್ಥನಾದ ರೇವಣಸಿದ್ಧೇಶ್ವರನಿಗೆ ಆಶ್ರಯವನ್ನಿತ್ತು ಅವನಿಗೆ ತನ್ನ ಮಗಳನ್ನು ಸಹ ಕೊಟ್ಟು ಲಗ್ನ ಮಾಡಿದನು. ಇದರಿಂದ ಅವನು ತನ್ನ ರಾಜಕಾರಣದಲ್ಲಿ ಅವನಿಂದ ಸಹಾಯವನ್ನು ಹೊಂದಿರಲಿಕ್ಕೆಬೇಕೆಂದು ತೋರುತ್ತದೆ.

## ರೇವಣಸಿದ್ಧೇಶ್ವರನಿಗೆ ಚಾಲುಕ್ಯರ ಸಂಬಂಧ

ರೇವಣಸಿದ್ಧೇಶ್ವರನ ಚರಿತ್ರೆಯನ್ನು ನಾವು ಪರೀಕ್ಷಿಸಿದಲ್ಲಿ ಅವನು ಬಹು ಕಡೆಗೆ ಪ್ರವಾಸ ಮಾಡಿ ಅನೇಕ ರಾಜರ ಸಂಬಂಧವನ್ನು ಉಂಟು

ಮಾಡಿಕೊಂಡಿದ್ದು ಕಂಡುಬರುತ್ತದೆ. ಅವನು ಮೊದಲು ಕಂಚೀ ಪಟ್ಟಣದಲ್ಲಿ ಚೋಳರಾಜನೊಡನಿದ್ದನು. ಮುಂದೆ ಕದಂಬರ ರಾಜಧಾನಿಯಾದ ಜಯಂತೀ ಪಟ್ಟಣಕ್ಕೆ ಹೋಗಿ ಅಲ್ಲಿಯು ರಾಜನಿಂದ ಮನ್ನಣೆ ಹೊಂದಿದನು. ಮುಂದೆ ಶಿಲಾಹಾರರ ರಾಜ್ಯವಾದ ಕೊಲ್ಹಾಪುರದಲ್ಲಿಯೂ ಇದ್ದನು. ಹೀಗಿದ್ದರೂ ಕೂಡ ಅವನು ತನಗೆ ಸಮೀಪವಾಗಿದ್ದ ಕಲ್ಯಾಣಪಟ್ಟಣಕ್ಕೆ ಹೋಗಿ ಅಲ್ಲಿ ಚಾಳುಕ್ಯ ಗಾಜನನ್ನು ಕಂಡದ್ದು ಮಾತ್ರ ಅವನ ಚರಿತ್ರೆಯಿಂದ ತಿಳಿದುಬರುವದಿಲ್ಲ. ಕಲ್ಯಾಣವು ಆ ಕಾಲಕ್ಕೆ ಹಿಂದುಸ್ತಾನದಲ್ಲಿ ಬಹು ಪ್ರಸಿದ್ಧವಾದ ರಾಜಧಾನೀ ಪಟ್ಟಣವು. ಅಲ್ಲಿ ಬಹುದೂರದ ದೇಶಗಳಿಂದ ಜನರು ಬಂದು ರಾಜರಿಂದ ಮನ್ನಣೆಯನ್ನು ಹೊಂದುತ್ತಿದ್ದರು. ಇಂಥ ಕಲ್ಯಾಣ ಪಟ್ಟಣದಲ್ಲಿ ಅವನು ಬಂದು ಚಾಲುಕ್ಯರಾಜನೊಡನೆ ತನ್ನ ಸಂಬಂಧವನ್ನು ಏಕೆ ಬೆಳಿಸಬಾರದೆಂಬುದು ವಿಚಾರಾರ್ಹವಾದ ಸಂಗತಿಯಾಗಿದೆ. ಇದಕ್ಕೆ ವಿಶೇಷ ಕಾರಣವಿದೆ. ಚಾಳುಕ್ಯ ರಾಜನು ಅವನಿಗೆ ವಿರೋಧಿಯಾಗಿರಲಿಕ್ಕೆಬೇಕು. ಅದಕ್ಕೋಸ್ಕರವೇ ಅವನು ಕಲ್ಯಾಣ ಪಟ್ಟಣಕ್ಕೆ ಹೋಗಿರಲಿಕ್ಕಿಲ್ಲ. ಬಿಜ್ಜಳನು ಚಾಳುಕ್ಯ ತೈಲಪನನ್ನು ಪದಚ್ಯುತಮಾಡುವ ಕಾರ್ಯದಲ್ಲಿ ತೊಡಗಿದ್ದು ಇಂಥವನೊಡನೆ ರೇವಣಸಿದ್ಧೇಶ್ವರನು ಸಹಕಾರ ಮಾಡುತ್ತಿದ್ದನು. ಇಷ್ಟೇ ಅಲ್ಲ, ಅವನೊಡನೆ ಆಪ್ತಸಂಬಂಧವನ್ನು ಬೆಳಿಸಿಕೊಂಡಿದ್ದನು. ಆದ್ದರಿಂದ ಚಾಳುಕ್ಯ ರಾಜನು ಅವನೊಡನೆ ಹಗೆತನದಿಂದಿರಲಿಕ್ಕೆಬೇಕು. ಈ ಕಾರಣಕ್ಕೋಸ್ಕರವೇ ಅವನು ಕಲ್ಯಾಣ ಪಟ್ಟಣಕ್ಕೆ ಹೋಗಿರುವದಿಲ್ಲ. ಮತ್ತು ಅವನ ಕುರುಹುಗಳು ಅಥವಾ ಸ್ಥಾನಗಳು ಅಲ್ಲಿ ಯಾವವೂ ದೃಷ್ಟಿಗೆ ಬೀಳುವದಿಲ್ಲ. ಮತ್ತು ಅವು ಇದ್ದಹಾಗೆ ಅವನ ಚರಿತ್ರೆಯಲ್ಲಿಯೂ ಹೇಳಲ್ಪಟ್ಟಿಲ್ಲ. ಈ ಎಲ್ಲ ಸಂಗತಿಗಳಿಂದ ರೇವಣಸಿದ್ಧೇಶ್ವರನು ಚಾಳುಕ್ಯ ರಾಜನ ವಿರುದ್ಧ ಬಿಜ್ಜಳನಿಗೆ ಸಹಾಯ ಮಾಡಿರಲಿಕ್ಕೆಬೇಕೆಂದು ತೋರುತ್ತದೆ.

## ಕಲ್ಯಾಣದಲ್ಲಿ ರೇವಣಸಿದ್ಧೇಶ್ವರನ ವಾಸ

ಆದರೆ ಅವನು ಒಮ್ಮೆ ಮಾತ್ರ ಕಲ್ಲಿಶೆಟ್ಟಿ ಎಂಬವನಲ್ಲಿಗೆ ಹೋಗಿ ಕಲ್ಯಾಣದಲ್ಲಿ ವಾಸಮಾಡಿದನೆಂದು ಅವನ ಚರಿತ್ರೆಯಿಂದ ತಿಳಿಯುತ್ತದೆ. ಆದರೆ ಆಗ ಅವನು ಅಲ್ಲಿ ತಾನಾರೆಂಬುದನ್ನು ತಿಳಿಯಗೊಡದೆ ಗುಪ್ತನಾಗಿದ್ದುಕೊಂಡಿದ್ದನು. ಅವನು ಹೀಗೆ ಏಕೆ ವರ್ತಿಸಿದನು?

ಅವನು ಚೋಳರಾಜರು, ಕದಂಬರು, ಶಿಲಾಹಾರರು, ಇವರ ರಾಜಧಾನಿಗಳಲ್ಲಿದ್ದಾಗ್ಗೆ ಅವನು ಹೀಗೆ ಗುಪ್ತವಾಗಿ ವಾಸಮಾಡಲಿಲ್ಲ. ಅಲ್ಲಿ ಅವನು ಬಹಿರಂಗವಾಗಿ ಅನೇಕ ಮಹತ್ವಗಳನ್ನು ಮಾಡಿತೋರಿಸಿದನು. ಹಾಗೆಯೇ ಅವನು ಚಾಲುಕ್ಯನ ರಾಜಧಾನಿಯಲ್ಲಿ ಏಕೆ ವರ್ತಿಸಬಾರದು? ಚಾಲುಕ್ಯನು ಅವನಿಗೆ ಹಗೆಯಾದ್ದರಿಂದಲೇ ಅವನು ಹೀಗೆ ಕಲ್ಯಾಣದಲ್ಲಿ ಗುಪ್ತವಾಗಿ ವಾಸಮಾಡಿರಲಿಕ್ಕಬೇಕು.

ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಅನೇಕ ಅದ್ಭುತ ಸಂಗತಿಗಳು ಹೇಳಲ್ಪಡುತ್ತಿವೆ. ಆದರೆ ಅವುಗಳನ್ನೆಲ್ಲ ನಾವು ಗ್ರಹಿಸದೆ, ಯಾವ ಸಂಗತಿಗಳು ಈಗಿನ ಪ್ರತ್ಯಕ್ಷ ಕುರುಹುಗಳ ಮೂಲಕ ಹೆಚ್ಚು ಸಂಭವನೀಯವೆಂದು ತೋರುತ್ತವೆಯೋ ಅಂಥವುಗಳನ್ನೇ ನಾವು ಗ್ರಹಿಸುವದು ಅವಶ್ಯವದೆ. ಅವುಗಳ ಮೇಲಿಂದಲೇ ನಾವು ರೇವಣಸಿದ್ಧೇಶ್ವರನು ಯಾವ ಯಾವ ಕೃತ್ಯಗಳನ್ನು ಮಾಡಿದನೆಂಬುದನ್ನು ಊಹಿಸಬೇಕು. ಹಾಗೂ ನಿಶ್ಚಿತವಾದ ಐತಿಹಾಸಿಕ ಸಂಗತಿಗಳನ್ನೂ ನಾವು ನೋಡಬೇಕು. ಈ ತತ್ವಗಳ ಮೇಲಿಂದ ನೋಡಲಾಗಿ ಮೇಲೆ ಹೇಳಿದ ಸಂಗತಿಗಳು ನಿಷ್ಪನ್ನವಾಗುತ್ತಿವೆ.

ರೇವಣಸಿದ್ಧೇಶ್ವರನ ಚರಿತ್ರೆಗಳಲ್ಲಿ ಅನೇಕ ಸಂಗತಿಗಳು ವರ್ಣಿಸಲ್ಪಟ್ಟಿವೆ. ಆದರೆ ಅವುಗಳೆಲ್ಲ ನಿಜವೆಂದು ನಂಬಲರ್ಹವಾದುವಲ್ಲ. ಒಂದು ಕಾಲದಲ್ಲಿ ವೀರಶೈವರೂ ಜೈನರೂ ವಿರೋಧಿಗಳಾದ್ದರಿಂದ ಅವರು ತಮ್ಮ ಪುರಾಣಗಳಲ್ಲಿ ಪರಸ್ಪರರನ್ನು ದೂಷಿಸಿ ಬರೆದಿರುತ್ತಾರೆ. ಉದಾಹರಣಾರ್ಥವಾಗಿ ಶಿವಶರಣರು ಜಾರರೂ ಚೋರರೂ ಕ್ರೂರರೂ ಆಗಿದ್ದರೆಂದು ಜೈನರ ಪುರಾಣಗಳಲ್ಲಿ ಹೇಳಲ್ಪಡುತ್ತಿದೆ. ಆದರೆ ಅವರು ಹಾಗೆ ನಡೆದರೆಂದು ಹೇಳಲಿಕ್ಕೆ ಬರಲಾರದು.

ಯಾಕಂದರೆ ಅವರು ರಚಿಸಿದ ವಚನ ಗ್ರಂಥಗಳೆಲ್ಲವೂ ಸದ್ವರ್ತನೆ ಸದಾಚಾರಕ್ಕೆ ಅತ್ಯಂತ ಮಹತ್ವ ಕೊಟ್ಟಿರುತ್ತವೆ. ಹಾಗೆಯೇ ಹಿಂದುಗಡೆ ವೀರಶೈವರು ಬಿಜ್ಜಳನಿಗೆ ವಿರೋಧಿಗಳಾದ್ದರಿಂದ ಅವರೂ ಕೂಡ ತಮ್ಮ ಗ್ರಂಥಗಳಲ್ಲಿ ಬಿಜ್ಜಳನು ವೀರಶೈವರಿಗೆ ಪೀಡಿಸುವವನೂ ಕ್ರೂರನೂ ಆಗಿದ್ದನೆಂದು ಬರೆದಿರುತ್ತಾರೆ. ಉದಾಹರಣಾರ್ಥವಾಗಿ ಮಾಸನೂರು ಮಡುವಿನಲ್ಲಿದ್ದ ರೇವಣಸಿದ್ಧೇಶ್ವರನ ಕಠಾರಿಯ ವಿಷಯವನ್ನು ತೆಗೆದುಕೊಳ್ಳುವಾ. ಇದನ್ನು ಹೊರಗೆ ತೆಗೆಯಲು ೧೨೦೦ ಜನ

ಬಾಲಿಕೆಯರ ಬಲಿಕೊಡಲು ಅವನು ಮುಂದಾದನೆಂದು ಪುರಾಣಗಳು ಹೇಳುತ್ತಿವೆ. ಇದು ನಿಜವಾಗಿ ಅಸಂಭವವದೆ ಹೀಗೆ ಬಿಜ್ಜಳನು ವರ್ತಿಸಿದ್ದರೆ ಜನರಲ್ಲಿ ಅತ್ಯಂತ ಕ್ಷೋಭೆಯುತ್ಪನ್ನವಾಗುತ್ತಿತ್ತು. ಮತ್ತು ಅವನ ಕಾರ್ಯದಲ್ಲಿ ಜನರ ಬೆಂಬಲವು ದೊರೆಯುವದೂ ಅಸಂಭವವಾಗುತ್ತಿತ್ತು. ಆದ್ದರಿಂದ ಇಂಥ ವೃತ್ತಾಂತಗಳ ಮೇಲಿಂದ ನಾವು ಯಾವ ಅನುಮಾನವನ್ನೂ ತೆಗೆಯಲಿಕ್ಕೆ ಬರಲಾರದು.

## ಬಿಜ್ಜಳನಲ್ಲಿ ವೀರಶೈವಾಧಿಕಾರಿಗಳು.

ಬಿಜ್ಜಳನು ಚಾಳುಕ್ಯ ಸಿಂಹಾಸನವನ್ನು ಕೈವಶಮಾಡುವಲ್ಲಿ ಅವನಿಗೆ ವೀರಶೈವರು ಸಹಾಯಕರಾಗಿದ್ದರೆನ್ನಲಿಕ್ಕೆ ಇನ್ನೂ ಕೆಲವು ಪ್ರಮಾಣಗಳು ದೊರೆಯುತ್ತಿವೆ. ಅವನ ಮತ್ತು ಅವನ ತಂದೆಯ ಕಾಲದಲ್ಲಿ ಬಹು ಜನ ವೀರಶೈವರು ಅವರ ರಾಜ್ಯದಲ್ಲಿ ಅಧಿಕಾರ ಸ್ಥಾನಗಳಲ್ಲಿ ನೇಮಿಸಲ್ಪಟ್ಟಿದ್ದು ಈ ಪ್ರಮಾಣಗಳಲ್ಲಿ ಬಹು ಮಹತ್ವದ್ದಾಗಿದೆ. ಕೊಂಡಗುಳಿಯ ಕೇಶಿರಾಜ, ಜೊಮ್ಮಯ್ಯ, ಸೊಡ್ಡಳ ಬಾಚರಸ, ಮಧುವರಸ, ಸಿದ್ಧಣ್ಣಮಂತ್ರಿ, ಬಲದೇವ ಮಂತ್ರಿ, ಈ ಮೊದಲಾದವರು ಬಿಜ್ಜಳನ ಆಳಿಕೆಯಲ್ಲಿ ಉಚ್ಚ ಸ್ಥಾನಗಳನ್ನು ಹೊಂದಿದವರಾಗಿದ್ದರು. ಇವರಲ್ಲಿ ಕೆಲವರು ಮೊದಲು ಅಧಿಕಾರ ಸ್ಥಾನಗಳಲ್ಲಿ ಪ್ರವೇಶವನ್ನು ಹೊಂದಿ ಮುಂದೆ ಬಸವೇಶ್ವರನ ಕಾಲದಲ್ಲಿಯೂ ಕೂಡ ಅವರು ಉನ್ನತ ಸ್ಥಾನಗಳಲ್ಲಿ ಇದ್ದುದು ತಿಳಿದುಬರುತ್ತದೆ. ವೀರಶೈವರು ಬಿಜ್ಜಳನಿಗೆ ಸಹಾಯ ಮಾಡುತ್ತಿದ್ದದರಿಂದಲೇ ಅವನು ಅವರನ್ನು ಹೀಗೆ ಉಚ್ಚ ಸ್ಥಾನಗಳಲ್ಲಿ ನೇಮಿಸುತ್ತಿರಲಿಕ್ಕೆ ಬೇಕು. ಮೇಲ್ಕಂಡವರಲ್ಲದೆ ಇನ್ನೂ ಅನೇಕರು ಅಧಿಕಾರಿಗಳಾಗಿ ನೇಮಿಸಲ್ಪಟ್ಟಿರಬಹುದು. ಆದರೆ ಅವರ ಹೆಸರುಗಳು ನಮಗೆ ಇನ್ನೂ ಗೊತ್ತಾಗಿರುವದಿಲ್ಲ. ಆದರೆ ಈಗ ದೊರೆತ ಈ ಹೆಸರುಗಳನ್ನು ನಾವು ನೋಡಿದರೆ, ಅವರಲ್ಲಿ ನಾಲ್ವರು ಮಂತ್ರಿಗಳಾಗಿದ್ದರು ಉಳಿದ ಇಬ್ಬರಲ್ಲಿ ಒಬ್ಬನು ಗಜಸೇನೆಯ ಮೇಲೆ, ಇನ್ನೊಬ್ಬನು ಕಾಲಾಳುಗಳ ಮೇಲೆ ದಂಡಾಧಿಪತಿಗಳಾಗಿದ್ದರು. ಇಂಥ ಶ್ರೇಷ್ಠ ಸ್ಥಾನಗಳ ಮೇಲೆ ಬಿಜ್ಜಳನು ವೀರಶೈವರನ್ನು ನೇಮಿಸಬೇಕಾದರೆ ತನ್ನ ರಾಜಕಾರಣದಲ್ಲಿ ಅವರ ಸಹಾಯವನ್ನು ಅವನು ಹೊಂದಿರಲಿಕ್ಕೇಬೇಕು.

## ಸಿದ್ಧಣ್ಣ ಮಂತ್ರಿ

ಇವರಲ್ಲಿ ಸಿದ್ಧಣ್ಣಮಂತ್ರಿಯ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳುವದು ಅವಶ್ಯವದೆ. ಅವನು ಕಾಲ್ಪನಿಕ ಪುರುಷನಾಗಿದ್ದಿಲ್ಲವೆಂದು

ತೋರುತ್ತದೆ. ಅವನು ಬಸವೇಶ್ವರನಕಿಂತಲೂ ಮೊದಲು ಬಿಜ್ಜಳನಲ್ಲಿ ಮಂತ್ರಿಯಾಗಿದ್ದನು. ಅವನ ಮಗಳೇ ಬಸವೇಶ್ವರನ ಹೆಂಡತಿಯಾದ ನೀಲಾಂಬಿಕೆಯು. ಸಿದ್ಧಣ್ಣಮಂತ್ರಿಯು ಸಾಯುವ ಪೂರ್ವದಲ್ಲಿ ಅವನು ಬಿಜ್ಜಳನ ಕೈಯಲ್ಲಿ ತನ್ನ ಮಗಳನ್ನು ಕೊಟ್ಟು ಆಕೆಯನ್ನು ನಿನ್ನ ತಂಗಿ ಎಂದು ಭಾವಿಸಿ ಜೋಕೆ ಮಾಡು ಎಂದು ಹೇಳಿ ಮರಣ ಹೊಂದಿದನು. ಈ ಸಂಗತಿಯು ವೀರಶೈವ ಗ್ರಂಥಗಳಲ್ಲಿ ಬಹುಕಡೆಗೆ ಬಂದಿದೆ. ಬಿಜ್ಜಳನು ತಾನು ವಚನ ಕೊಟ್ಟಂತೆ ಆಕೆಯನ್ನು ತನ್ನ ಅರಮನೆಯಲ್ಲಿ ಇಟ್ಟುಕೊಂಡು ಸಂರಕ್ಷಿಸುತ್ತ ಬಂದನು. ಮತ್ತು ಬಸವೇಶ್ವರನು ಮಂತ್ರಿಯಾದ ಬಳಿಕ ಅವನಿಗೆ ಆಕೆಯನ್ನು ಕೊಟ್ಟು ಮದುವೆ ಮಾಡಿದನು. ಇದರ ಮೇಲಿಂದ ಬಿಜ್ಜಳನು ಸಿದ್ಧಣ್ಣಮಂತ್ರಿಯ ಮೇಲೆ ಎಷ್ಟು ವಿಶ್ವಾಸವುಳ್ಳವನಾಗಿದ್ದನೆಂಬುದು ಕಂಡುಬರುತ್ತದೆ. ಈ ಸ್ಥಿತಿ ಯುಂಟಾಗಬೇಕಾದರೆ ಬಿಜ್ಜಳನ ರಾಜಕಾರಣದಲ್ಲಿ ಸಿದ್ಧಣ್ಣಮಂತ್ರಿಯು ಅವನಿಗೆ ಸಹಾಯ ಮಾಡಿರಲಿಕ್ಕೇಬೇಕೆಂಬ ಅನುಮಾನವು ಹೊರಡುತ್ತಿದೆ.

## ಬಲದೇವ ಮಂತ್ರಿ.

ಬಲದೇವನು ಬಿಜ್ಜಳನಿಗೆ ಇನ್ನೊಬ್ಬ ಮಂತ್ರಿಯಾಗಿದ್ದನು. ಈತನು ಬಸವೇಶ್ವರನಿಗೆ ಸೋದರ ಮಾವನು. ವೀರಶೈವರ ಒಂದು ಗ್ರಂಥದಲ್ಲಿ (ಶಿವಕಥಾ ಸಾಗರ) ಸಿದ್ಧಣ್ಣಮಂತ್ರಿಗೆ ಬಲದೇವನು ಅಣ್ಣನಾಗಿದ್ದನೆಂದು ಹೇಳಲ್ಪಟ್ಟಿದೆ. ಇವನ ಮಗಳು ಬಸವನ ಇನ್ನೊಬ್ಬ ಹೆಂಡತಿಯಾದ ಗಂಗಾಂಬಿಕೆಯು. ಇವನಿಗೆ ಬಿಜ್ಜಳನು ಶ್ರೇಷ್ಠಸ್ಥಾನದಲ್ಲಿ ನೇಮಿಸಿಕೊಳ್ಳ ಬೇಕಾದರೆ, ಅವನೂ ಅವನಿಗೆ ಸಹಾಯ ಮಾಡಿರಲಿಕ್ಕೆಬೇಕು.

ಈ ಎಲ್ಲ ಸಂಗತಿಗಳ ಮೇಲಿಂದ ಬಸವಣ್ಣನಕಿಂತಲೂ ಮೊದಲು ಕೆಲವು ವೀರಶೈವ ಮಂತ್ರಿಗಳು ಬಿಜ್ಜಳನಿಗೆ ಇದ್ದರು. ಅವರು ಬಿಜ್ಜಳನು ರಾಜ್ಯಾರೋಹಣ ಮಾಡಿದ ಬಳಿಕ ಸಹ ಅದೇ ಸ್ಥಾನದಲ್ಲಿದ್ದರು. ಆದ್ದ ರಿಂದ ಚಾಲುಕ್ಯ ರಾಜನನ್ನು ಪದಚ್ಯುತ ಮಾಡುವ ಕಾರ್ಯದಲ್ಲಿ ಅವ ರೆಲ್ಲರು ಬಿಜ್ಜಳನಿಗೆ ಸಹಾಯ ಮಾಡಿರಲಿಕ್ಕೇಬೇಕು.

## ಚಾಲುಕ್ಯ ರಾಜ್ಯಕ್ರಾಂತಿ ಮತ್ತು ಅದರಲ್ಲಿ ವೀರಶೈವರ ಅಂಗ

ಚಾಲುಕ್ಯರ ರಾಜ್ಯವನ್ನು ಬಿಜ್ಜಳನು ಕೈವಶಮಾಡಿಕೊಳ್ಳುವ ಕಾಲ ದಲ್ಲಿ ಒಂದು ರಾಜ್ಯಕ್ರಾಂತಿಯು ಉಂಟಾದಂತೆ ತೋರುತ್ತದೆ. ಯುದ್ಧ

ಗಳೂ ಕೂಡ ಆಗ ಸಂಭವಿಸಿರಬಹುದು. ಇಂಥ ಕಠಿಣ ಪ್ರಸಂಗದಲ್ಲಿ ವೀರಶೈವರು ಬಿಜ್ಜಳನಿಗೆ ಸಹಾಯ ಮಾಡಿದರು. ಆರಂಭದಲ್ಲಿ ರೇವಣಸಿದ್ಧೇಶ್ವರನು ಇದರಲ್ಲಿ ಮುಖ್ಯ ಭಾಗವನ್ನು ವಹಿಸಿದನೆಂದು ತೋರುತ್ತದೆ. ಇದರ ಮೂಲಕ ಅವನಿಗೂ ರೇವಣಸಿದ್ಧೇಶ್ವರನಿಗೂ ಸ್ನೇಹ ಸಂಬಂಧವು ವಿಶೇಷವಾಗಿ ಬೆಳೆಯಿತು. ಬಿಜ್ಜಳನು ಅವನಿಗೆ ತನ್ನ ಮಗಳನ್ನು ಸಹ ಕೊಟ್ಟು ಮದುವೆ ಮಾಡಿದನು. ಮುಂದೆ ಅನೇಕರು ಬಿಜ್ಜಳನ ಆಡಳಿತೆಯಲ್ಲಿ ಶ್ರೇಷ್ಠ ಪದವಿಗಳನ್ನು ಸಂಪಾದಿಸಿದರು. ಈ ಪ್ರಕಾರ ವೀರಶೈವರು ಬಿಜ್ಜಳನಿಗೆ ಸಹಾಯಮಾಡಿದ್ದರಿಂದ ಅವರು ಚಾಳುಕ್ಯ ರಾಜನಿಂದ ಹಿಂಸೆಯನ್ನು ಸಹ ಹೊಂದಿರಬಹುದೆಂದು ತೋರುತ್ತದೆ. ಇವೆಲ್ಲ ಸಂಗತಿಗಳು ಕೇವಲ ಕಾಲ್ಪನಿಕವೆಂದು ವಾಚಕರು ತಿಳಿಯಬಾರದು. ಬಸವೇಶ್ವರನ ಅನೇಕ ವಚನಗಳಲ್ಲಿ ಇವುಗಳಿಗೆ ಆಧಾರಗಳು ದೊರಕುತ್ತಿವೆ.

## ಬಸವೇಶ್ವರನ ವಚನಗಳಲ್ಲಿ ಚಾಲುಕ್ಯ ರಾಜ್ಯಕ್ರಾಂತಿಯ ಬಗ್ಗೆ ಉಲ್ಲೇಖಗಳು.

ಬಸವೇಶ್ವರನ ವಚನಗಳಲ್ಲಿ ಈ ಹಿಂದಿನ ಇತಿಹಾಸವನ್ನು ಸೂಚಿಸುವಂಥವು ಕೆಲವು ಇರುತ್ತವೆ. ಅವುಗಳ ಮೇಲಿಂದ ಅವನು ಮಂತ್ರಿಯಾಗುವ ಪೂರ್ವದಲ್ಲಿ ಅನೇಕ ಶಿವಶರಣರು ನಾಡಿನಲ್ಲಿ ಉದ್ಭವಿಸಿದರು ಮತ್ತು ವಿರೋಧಿಗಳಿಂದ ಅವರು ಅನೇಕ ಹಿಂಸೆಯನ್ನು ಹೊಂದಿದರೆಂಬದು ಕಂಡು ಬರುತ್ತದೆ.

ಹೀಗೆ ನಾವು ಊಹಿಸದೆ ಹೋದರೆ ಆ ವಚನಗಳಿಗೆ ಸರಿಯಾದ ಅರ್ಥವೇ ಆಗುವದಿಲ್ಲ. ಉದಾಹರಣಾರ್ಥವಾಗಿ ಕೆಳಗಿನ ವಚನಗಳನ್ನು ನೋಡಬೇಕು.

"ಇರಿಸಿಕ್ಕೊಂಡು ಭಕ್ತರಾದರೆಮ್ಮವರು. ತರಿಸಿಕ್ಕೊಂಡು ಭಕ್ತರಾದರೆಮ್ಮವರು. ಜರಿಸಿಕ್ಕೊಂಡು ಭಕ್ತರಾದರೆಮ್ಮವರು. ಕೊರಿಸಿಕ್ಕೊಂಡು ಭಕ್ತರಾದರೆಮ್ಮವರು. ಕೂಡಲಸಂಗನ ಶರಣರಿಗೆ ಮುನಿಸಿ ತಾಳಿ ಎನ್ನ ಭಕ್ತಿ ಅರೆಯಾಯಿತ್ತು." (ಪುಟ ೩೮ ಬಸವೇಶ್ವರನ ವಚನಗಳು)

ಇದರಲ್ಲಿ ಬಸವೇಶ್ವರನು ತನ್ನಿಂದ ಮೊದಲು ದೇಶದಲ್ಲಿ ಉತ್ಪನ್ನರಾದ ಶಿವಶರಣರನ್ನು ಉಲ್ಲೇಖಿಸಿದ್ದಾನೆಂಬದು ಸ್ಪಷ್ಟವು ಅವನು

ಮಂತ್ರಿಯಾದ ಬಳಿಕ ಹೀಗೆ ಶಿವಭಕ್ತರಿಗೆ ಹಿಂಸೆಯುಂಟಾಗುವ ಸಂಭವವು ಬಹು ಕಡಿಮೆ. ಆದುದರಿಂದ ಈ ವಚನದಲ್ಲಿ ಹೇಳಲ್ಪಟ್ಟವರು ಅವನಕಿಂತ ಮೊದಲಿನವರೇ ಇರಲಿಕ್ಕೆಬೇಕು. ಯಾವಾಗ್ಗೆ ಬಿಜ್ಜಳ ಮತ್ತು ಚಾಲುಕ್ಯ ಇವರಲ್ಲಿ ಕಲಹಗಳು ಉತ್ಪನ್ನವಾದವೋ ಆಗ್ಗೆ ವೀರಶೈವರು ಬಿಜ್ಜಳನ ಪಕ್ಷವನ್ನು ವಹಿಸಿದ್ದರಿಂದ ಅವರು ಇದಿರಾಳಿಗಳಿಂದ ಹಿಂಸಿಸಲ್ಪಟ್ಟಿರಬೇಕು. ಇಂಥವರನ್ನು ಬಸವೇಶ್ವರನು ಈ ವಚನದಲ್ಲಿ ಹೊಗಳುತ್ತಿದ್ದಾನೆ.

ಬಸವೇಶ್ವರನು ಇನ್ನೊಂದು ವಚನದಲ್ಲಿ ಹೇಳುವದೇನೆಂದರೆ—

"ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು. ಕಲ್ಯಾಣ ಹಾಳಾಯಿತ್ತು ನೋಡಾ. ಒಬ್ಬ ಜಂಗಮದ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು, ಕೂಡಲ ಸಂಗಮದೇವ, ನಿಮ್ಮ ಕವಳಿಕೆಗೆ".

ಬಸವೇಶ್ವರನು ಈ ವಚನವನ್ನು ಆರಿಗೆ ಸಂಬಂಧಿಸಿ ನುಡಿದಿದ್ದಾನೆಂಬುದು ಈಗಳೂ ಗೂಢ ವಿಷಯವಾಗಿರುತ್ತದೆ. ಕೆಲವರು ಬಸವನು ಕಳಚೂರ್ಯರ ಹೆಸರನ್ನು ಬರೆಯದೆ ಚಾಳುಕ್ಯರಾಯ ಎಂಬುದಾಗಿ ತಪ್ಪು ಬರೆದಿದ್ದಾನೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದರಲ್ಲಿ ಯಾವ ತಪ್ಪೂ ಇರುವದಿಲ್ಲ. ಬಿಜ್ಜಳನು ಕಲ್ಯಾಣದಲ್ಲಿ ರಾಜ್ಯಾರೋಹಣ ಮಾಡುವ ಪೂರ್ವದಲ್ಲಿ ಉಂಟಾದ ಕ್ರಾಂತಿಯನ್ನು ಬಸವೇಶ್ವರನು ಇಲ್ಲಿ ಉಲ್ಲೇಖಿಸಿದ್ದಾನೆ. ಬಿಜ್ಜಳನೊಡನೆ ಆದ ಹೋರಾಟದಲ್ಲಿ ದೇಶದಲ್ಲಿ ಒಂದು ದೊಡ್ಡ ಕ್ರಾಂತಿಯುಂಟಾಯಿತು. ಆಗ ಬಹುಶಃ ಕಲ್ಯಾಣಕ್ಕೆ ಬಿಜ್ಜಳನಿಂದ ಮುತ್ತಿಗೆಯು ಬಿದ್ದಿರಬೇಕು ಮತ್ತು ಪಟ್ಟಣವು ಹಾಳಾಗಿರಬೇಕು. ಮುಂದೆ ಚಾಳುಕ್ಯ ನೂರ್ಮಡಿ ತೈಲಪನ ಆಳಿಕೆಯು ನಷ್ಟವಾಗಲು ಕಲಚೂರ್ಯರ ಆಳಿಕೆಯು ಪ್ರಾರಂಭವಾಯಿತು. ಈ ಐತಿಹಾಸಿಕ ಸಂಗತಿಗಳನ್ನು ಬಸವೇಶ್ವರನು ಈ ವಚನದಲ್ಲಿ ಹೇಳುತ್ತಿದ್ದಾನೆ. ಈ ಪ್ರಕಾರ ನಾವು ಭಾವಿಸಿದರೆ ಈ ವಚನಕ್ಕೆ ಯೋಗ್ಯ ಅರ್ಥವಾಗುತ್ತದೆ.

ಮೇಲ್ಕಂಡ ವಚನದಲ್ಲಿ ಬಸವೇಶ್ವರನು "ಕವಳಿಕೆಗೆ" ಎಂಬ ಶಬ್ದವನ್ನು ಉಪಯೋಗಿಸಿದ್ದಾನೆ. ಇದರಲ್ಲಿ ಅವನು ಚಾಲುಕ್ಯರಾಜ

ಸಿಂದ ವೀರಶೈವರಿಗೆ ಉಂಟಾದ ಹಿಂಸೆಗಳನ್ನು ಉಲ್ಲೇಖಿಸುತ್ತಿದ್ದಾನೆ. ಅಲ್ಲದೆ ಅವನು "ಒಬ್ಬ ಜಂಗಮನ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು" ಎಂದು ಇಲ್ಲಿ ಹೇಳುತ್ತಾನೆ. ಈ ಜಂಗಮನು ಆರು ಎಂಬುದನ್ನು ಊಹಿಸಲು ಸದ್ಯ ಸ್ಥಿತಿಯಲ್ಲಿ ಸಾಧ್ಯವಿಲ್ಲ. ಆದರೆ ಆ ಜಂಗಮನ ಪಕ್ಷವನ್ನು ಬಿಜ್ಜಳನು ವಹಿಸಿ ಚಾಳುಕ್ಯರಾಯನನ್ನು ವಿರೋಧಿಸಿದನೆಂಬ ಅಭಿಪ್ರಾಯವು ಇದರಲ್ಲಿ ಧ್ವನಿತವಾಗಿದೆ. ಆ ಜಂಗಮನು ಈ ಕಾಲದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ರೇಣಸಿದ್ಧೇಶ್ವರನು ಇರಬಹುದೋ ಹೇಗೆ ಎಂಬ ಪ್ರಶ್ನೆಯನ್ನು ನಾನು ವಾಚಕರ ಇದಿರಿಗೆ ಇಟ್ಟು, ಈ ಲೇಖವನ್ನು ಸದ್ಯಕ್ಕೆ ಮುಗಿಸುತ್ತೇನೆ.

---

# ಮಾದೇವಿಗೆ.

'ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು' ಎಂಬಂತೆ.



ವಿಜಯನೊಂದಲಿ ನಮ್ಮ ಶರಣೆ-ಶ್ರೀ ಮಹದೇವಿ ।
ಸುಜನ ಸಂಕುಳ ಭಾವಿ ಸಾರ ಸದ್ಗುಣ ಜೀವಿ ॥ಪ॥

ಕವಿಗಳೊಲಿಯುವ ತೆರದಿ ಕವನ ಕಟ್ಟಿದ ಮಾತೆ ।
ಭುವನ ಜನಗಳ ಮನವ ಸೂರೆಗೊಂಡಿಹ ಮಾತೆ ॥
ಅವನಿಪತಿ ಕೌಶಿಕನ ಭೋಗಕೆಳೆಸದ ಖ್ಯಾತೆ ।
ಜವನ ಬಾಯಲಿ ಮಣ್ಣನೆರಚಿ ಬಾಳಿದ ಮಾತೆ ॥೧॥

ವೇದಶಾಸ್ತ್ರದ ಬಣಗು ನುಡಿಯ ಮೆಚ್ಚದ ತರುಣಿ
ವಾದವಿಲ್ಲದ ಪರಮ ಬೋಧೆಗೈದಿದ ಶರಣೆ ॥
ಸ್ವಾದದಿಂದೊಡೆವೆರೆದ ವಚನ ರಚಿಸಿದ ಕರುಣೆ ।
ಸಾದರದಿ ನೀರೆಯರ ಪೊರೆದ ಪಾವನ ಚರಣೆ ॥೨॥

ವಿರತಿ ಬಾವುಟನೆತ್ತಿ ಧರೆ ಸುತ್ತಿದ ತಾಯೆ ।
ಶರಣ ವೃಂದವ ಸೇರಿ ಚಕಿತ ಗೊಳಿಸಿದ ತಾಯೆ ॥
ಕೊರತೆಯಿಲ್ಲದ ಸತ್ಯ ಸುಖವ ಪಡೆದಿಹ ತಾಯೆ ।
ಶರಣು ಬಂದೆವು ನಿನ್ನನೊಲಿದು ಸೊಗವೆಮಗೀಯೆ ॥೩॥

ಅಬಲೆ ಜನಗಳ ಮನದಿ ಸ್ಥೈರ್ಯ ತುಂಬಿದ ವೀರೆ ।
ಸಬಲ ಪುರುಷರ ಎದೆಯ ಎರಡು ಮಾಡಿದ ಶೂರೆ ॥
ಅಬಲ ಜನರೆದೆಗೊಳವ ತೊಳಗಿ ಬೆಳಗಿದ ತಾರೆ ।
ಅಭಯವಿತ್ತೆಮ್ಮ ಪೊರೆಯಲ್ ಬೇಗ ಮೊಗದೋರೆ ॥೪॥

ವಸುಧೆಯೊಳು ಶೋಭಿಸುವ ಚಲುವ ಕನ್ನಡ ಚನ್ನೆ ।
ಕುಶಲರಹುದೆಂದೊರೆವ ಸರ್ವ ಗುಣ ಸಂಪನ್ನೆ ॥
ಬಸವನಲ್ಲಮ ಚನ್ನಬಸವರೊಲುಮೆಯ ಕನ್ನೆ ।
ಎಸೆವ ಶ್ರೀಗಿರಿ ಮಲ್ಲಿಕಾರ್ಜುನನ ಮನದನ್ನೆ ॥೫॥

— ಶ್ರೀ ಚಂದ್ರಶೇಖರದೇವರು, ಅಡ್ನೂರು

# ನಿಡುಮಾಮಿಡಿ ಮಠದ ಇತಿಹಾಸ.

(ಲೇಖಾಂಕಃ— ೯.)

(ಲೇಖಕ:— ಎಂ. ಜಿ. ನಂಜುಂಡಾರಾಧ್ಯ 'ವಿಶಾರದ' ಸಿದ್ಧಗಂಗಾ ಗುರುಕುಲ)

ಹಿಂದಿನ ಲೇಖನದಲ್ಲಿ ಈ ಪೀಠಾಧೀಶ್ವರರಾದ ಶ್ರೀ ಕರಿಬಸವ ಸ್ವಾಮಿಗಳು ಸು. ೧೬೫೫ರಲ್ಲಿ ದೇಶ ಸಂಚಾರದಲ್ಲಿರುವಾಗ್ಗೆ 'ಹಂಡೆ ಹನುಮುದ್ರಾಯನ' ನನ್ನು ಅನಂತಪುರದಲ್ಲಿರಿಸಿದಂತೆ ಹೇಳಲಾಗಿದೆ. ಅದಕ್ಕೆ ಪೋಷಕವಾದ ಒಂದೆರಡು ಚಾರಿತ್ರಕ ವಿಚಾರಗಳನ್ನು ಇಲ್ಲಿ ಹೇಳುವುದು ಅನಿವಾರ್ಯವಾಗಿದೆ.

ವಿಜಯನಗರ ಸಾಮ್ರಾಜ್ಯದ ಕಡೆಯ ಅರಸನಾದ ಅರೆವೀಡು ಮನೆತನದ ಗೋಪಾಲನ ದತ್ತಕ ಪುತ್ರನಾದ ಆರ್ವಡಿ ಶ್ರೀ ರಂಗರಾಯನು (೧೬೪೨-೧೬೮೧) ಶತೃಗಳಿಂದ ಪರಾಜಿತನಾಗಿ ಅನಂತ ಕಷ್ಟಗಳಿಗೀಡಾದನು. ಶ್ರೀ ರಂಗರಾಯನು ಬುಕ್ಕ ಪಟ್ಟಣಕ್ಕೆ ಬಂದು ಅಲ್ಲಿಗಧಿಪತಿಯಾದ ಮಲಕಪ್ಪ ನಾಯಕನ ಸಹಾಯದಿಂದ ಮಹಮ್ಮದೀಯರನ್ನು ಎದುರಿಸಿ ಸೋಲಿಸಿದನು. ಮಲಕಪ್ಪನು ಅಲ್ಲಿಂದ ಹಿಂತಿರುಗಿದ ನಂತರ ವಿಜಯನಗರದ ಪ್ರತಾಪಸೂರ್ಯನು ಅಸ್ತಾದ್ರಿಯ ಮಡಲನ್ನು ಹೊಕ್ಕು ನಿಸ್ತೇಜನಾಗುತ್ತಿದ್ದನಾದುದರಿಂದ ಶ್ರೀ ರಂಗರಾಯನು ಪುನಃ ಮಹಮ್ಮದೀಯರ ವಿಪುಲ ಸೈನ್ಯದೊಡನೆ ಕಾದಿ ಪರಾಜಿತನಾದನು. ಮಲಕಪ್ಪನು ಈ ಸಮಾಚಾರವನ್ನು ತಿಳಿದು ಬಹಳವಾಗಿ ದುಃಖಿಸಿದನು. ಮಲಕಪ್ಪನು ನಿಸ್ಸಹಾಯನಾಗಿ ಮಹಮ್ಮದೀಯರ ಅಧೀನನಾಗಬೇಕಾಯಿತು. ಆದರೂ ನವಾಬನು ಮಲಕಪ್ಪನ ವಿಶ್ವಾಸಕ್ಕೆ ಮೆಚ್ಚಿ ಆತನಿಗೆ ಬುಕ್ಕ ಪಟ್ಟಣ ಅನಂತಪುರ ಈ ಎರಡನ್ನೂ ಕೊಟ್ಟು 'ಪಾದುಷಾಹಾ ವಜೀರಾ' ಎಂಬ ಬಿರುದನ್ನು ಸಹ ಕೊಟ್ಟನು.

ಮಲಕಪ್ಪನು ಹಂಡೇ ವಂಶಕ್ಕೆ ಸೇರಿದವನು. ಹಂಡೇ ಹನುಮದ್ರಾಯನ ಮೊಮ್ಮಗನು. ಈತನ ಪಟ್ಟ ಮಹಿಷಿಯಾದ ಸಿದ್ಧರಾಮಮ್ಮನಿಗೆ ದೇವಪ್ಪ, ಚಿಕ್ಕರಾಮಪ್ಪ, ಲಿಂಗಪ್ಪ, ಹಂಸನಾಯಕರೆಂಬ ನಾಲ್ವರು ಪುತ್ರರು ಜನಿಸಿದರು. ಇತ್ಯಾದಿ ವಿಷಯಗಳು ಅನಂತಪುರದ ಚರಿತ್ರೆಯಲ್ಲಿ ಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ. ಇವುಗಳನ್ನು ವಿಚಾರ

ಮಾಡಿ ನೋಡಿದಲ್ಲಿ ಇವರಲ್ಲಿ ವೀರಶೈವ ಸಂಸ್ಕಾರವು ಸಂಪೂರ್ಣವಾಗಿದ್ದಿತೆಂಬುದು ನಿರ್ವಿವಾದವಾಗಿದೆ. ಅಲ್ಲದೆ ಪುಲ್ಲಕವಿಯು ಸು. ೧೬೫೦ರ ಸುಮಾರಿನಲ್ಲಿ ಹಂಡೆಹನುಮದ್ರಾಯನ ವಿಷಯದಲ್ಲಿ ಹೇಳಿರುವ ವಿಚಾರಗಳು ಚಾರಿತ್ರಾಂಶಕ್ಕೆ ಸಮಂಜಸವಾಗಿವೆಯೆಂಬುದು ಉಚಿತವಾಗಿಯೇ ಇದೆ. ಅಲ್ಲದೆ ಇದೇ ಅನಂತಪುರದಲ್ಲಿ ಮುಂದೆ ಪ್ರಸನ್ನಪ್ಪ, ಮತ್ತು ಈತನ ತಮ್ಮನಾದ ಪವಾಡಪ್ಪ ಮುಂತಾದವರು ಈ ಪೀಠದ ಶಿಷ್ಯರಾಗಿದ್ದರೆಂಬುದು ಇದನ್ನು ಮತ್ತಷ್ಟು ಸಮರ್ಥಿಸುತ್ತದೆ. ಪುಲ್ಲಕವಿಯು ಹೇಳಿರುವ 'ಹನುಮದ್ರಾಯನಿಗೂ ಅಲ್ಲಿಯ ನವಾಬರಿಗೂ ವಿಶೇಷ ಮೈತ್ರಿಯಿತ್ತೆಂಬ ವಿಷಯವು ಆವರಿಗೆ ಮಲಕಪ್ಪನಿಗಿದ್ದ ವಿಶ್ವಾಸಕ್ಕೆ ನಿದರ್ಶಕವಾಗಿದೆ.

## ಪಂಚಮಾಶ್ವಾಸ

## ಮರಿ ಕರಿಬಸವ ಸ್ವಾಮಿಗಳು.

(ಸು. ೧೬೮೦)

ಕಂ॥ ಮರಿಕರಿಬಸವ ಗುರುಂಡುನು
ಕರುಣಾಲಯುಡಗುಚು ಶಿಷ್ಯಗಣಮು-ಲರೆಲ್ಲನ್ ।
ಪುರಹರಮತ ಸಿದ್ಧಾಂತಮು
ಸುರುಚಿರ ಮುಗ ಬೋಧ ಚೇಶಿ ಸುಖಮುಗನುಂಡೆನ್ ॥

ಹೀಗೆ ಮರಿಕರಿಬಸವ ದೇಶಿಕೇಂದ್ರ ಶಿವಾಚಾರ್ಯರು ಹೊಸಕೆರೆಯ ಮಠದಲ್ಲಿ ಭಕ್ತವೃಂದಕ್ಕೆ ವೀರಶೈವ ಮತತತ್ವಗಳನ್ನು ಬೋಧಿಸುತ್ತ ಶಿವಯೋಗ ನಿರತರಾಗಿದ್ದು ಲೋಕೋದ್ಧಾರಾರ್ಥವಾಗಿ ದೇಶಸಂಚಾರ ಹೊರಟು ಸುಬ್ರಹ್ಮಣ್ಯ ಕ್ಷೇತ್ರಕ್ಕೆ ದಯಮಾಡಿಸಿದರು. ಆ ದೇವಾಲಯದಲ್ಲಿ ಒಂದೆಡೆ ಶಿವಾರ್ಚನೆಯನ್ನು ಮಾಡುತ್ತಿದ್ದರು. ಆಗ ಶ್ರೀ ಸುಬ್ರಹ್ಮಣ್ಯ ಸ್ವಾಮಿಯು ಸಾಕ್ಷಾತ್ಕಾರವಾಗುತ್ತದೆ. ಸ್ವಾಮಿಯ ಮೂರ್ತಿಯನ್ನು ಕವಿಯು ಈ ರೀತಿ ವರ್ಣಿಸುತ್ತಾನೆ.

ಸೀ॥ ವಲಿಗಟ್ಟರಾಚೂಲಿ ವರಟ್ಟರೆಲ್ಲು ಲೋಯಭಿವೃದ್ಧಿ ಜೆಂದಿನ ಯರ್ಭ ಕುಂಡು । ಆರ್ಗ್ಗುರುತಲ್ಲುಲಕನುಕೂಲ ಮುಗಸ್ತನ್ಯ ಪಾನಂಬು ಜೇಶಿನ ಬಾಲಕುಂಡು । ಚಂಡರಾಕ್ಷಸ ಕೋಟಿ ಖಂಡನಂಬೊನರಿಂಚು ನಾಕ ಸೈನ್ಯಂಬುಲ ನಾಯಕುಂಡು । ಕ್ರೌಂಚಾದ್ರಿ ವ್ರಕ್ಕಲು ಗಾವಿಂಚಿ ಮಿಂಚಿನ ಬಾಹು ವಿಕ್ರಮು । ಹೈನಸಾಹಸುಂಡು ।

ಶ್ರೀಯವರು ಪಾದುಕೆಗಳೊಡನೆ ದೇವಾಲಯ ಪ್ರವೇಶಮಾಡುವಲ್ಲಿ ಅರ್ಚಕರು ಅವರನ್ನು ದ್ವಾರದಲ್ಲಿ ತಡೆಯುತ್ತಾರೆ. ಅದೇ ಸಮಯದಲ್ಲಿ ದೇವರ ಅಭಿಷೇಕಕ್ಕೆ ಅಗ್ರೋದಕವನ್ನು ತರುತ್ತಿದ್ದ ಆನೆಯು ಮೃತಿಯನ್ನು ಹೊಂದುತ್ತದೆ. ಇದರಿಂದ ಶ್ರೀಯವರ ಪ್ರಭಾವವನ್ನು ಅರಿತ ಅಲ್ಲಿಯ ಅಧಿಕಾರಿಗಳು ಶ್ರೀಯವರಲ್ಲಿ ಶರಣಾಗತರಾಗುತ್ತಾರೆ. ಆನೆಯು ಅವರ ಅನುಗ್ರಹದಿಂದ ಜೀವಂತವಾಗಲು ಸರ್ವರೂ ಆಶ್ಚರ್ಯ ಚಕಿತರಾಗಿ ಶ್ರೀಯವರನ್ನು ಅತ್ಯಂತವೈಭವದಿಂದ ಸ್ವಾಗತಿಸಿ ಉತ್ಸವಾದಿಗಳನ್ನು ಮಾಡುತ್ತಾರೆ. ಈ ವಿಷಯವು ಆಗಿನ ಮೈಸೂರರಸರಿಗೆ ತಿಳಿದು ಅವರು ತಮ್ಮ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣಕ್ಕೆ ಶ್ರೀಯವರನ್ನು ಸಕಲಬಿರುದಾವಳಿಗಳೊಂದಿಗೆ ಬರಮಾಡಿಕೊಂಡು ಅತ್ಯಂತ ವಿಜೃಂಭಣೆಯಿಂದ ಉತ್ಸವವನ್ನುಮಾಡಿಸುತ್ತಾರೆ. ರಾಜನ ಹೆಸರನ್ನು ಕವಿಯು ಸೂಚಿಸಿಲ್ಲ. ಬಹುಶಃ ೧೬೭೨--೧೭೦೪ರ ವರೆಗಿದ್ದ ಚಿಕ್ಕದೇವರಾಜ ಒಡೆಯರಿಂದ ಆಹ್ವಾನಿತರಾಗಿದ್ದರೆಂದು ಊಹಿಸಬಹುದಾಗಿದೆ.

ಶ್ರೀರಂಗಪಟ್ಟಣದಲ್ಲಿ ಕೆಲ ವೈಷ್ಣವರು ಶ್ರೀಯವರಲ್ಲಿ ಮತಸಿದ್ಧಾಂತದ ವಿಚಾರವಾಗಿ ವಾಕ್ಯಾರ್ಥವನ್ನು ಹೂಡುತ್ತಾರೆ. ಶ್ರೀಯವರ ಅನುಪಮ ಪಾಂಡಿತ್ಯ ಹಾಗು ಯೋಗಶಕ್ತಿಯಿಂದ ವೈಷ್ಣವ ಪಂಡಿತರು ಪರಾಜಿತರಾಗುತ್ತಾರೆ.

ಸೀ॥ ವೈಷ್ಣವೋತ್ತಮುಲಾಡು ವಾಕ್ಯಂಬು ಲಾಲಿಂಚಿ ಗುರುಡು ಮೀವಾಕ್ಯಮುಲ್ ಗೂಡದಿಚಟ। ಹರುನಕುಭಕ್ತುಡೈ ಹರಿಸಹಸ್ರಾಬ್ಜಮುಲ್ ನಿತ್ಯಂಬುಗೊಸಿತೆಚ್ಚಿನೇಮುಮುಗನು । ನರ್ಚಿಂಚುಚುಂಡಗಾ ನಂದೊಕ ಪುಷ್ಪಂಬುತಕ್ಕುವಾಯನಟಂಚು ದಂತಿವರದು । ಚೊಕನೇತ್ರಮುನುದೀಸಿ ಯೊಪ್ಪುಗಾಪೂಜಿಂಪ ಶಿವುಡುಸಂತೋಷಿಂಚಿ ಶ್ರೀಶ್ರೀಮುಗನು ।

ಸೀ॥ ರಕ್ಕಸುಲನುದ್ರುಂಚು ಚಕ್ರವೊನೀಗೆ ।
ನನುಚು ಶಾಸ್ತ್ರಂಬುಲುನ್ನವಿವಿನುಡಟಂಚು ॥
ಕೊನ್ನಿದೃಷ್ಟಾಂತರಂಬುಲಾ ಗುರುಡುಚೆಪ್ಪಿ ।

ಹೀಗೆ ಶಿವಾಧಿಕ್ಯದ ಮುಂತಾದ ವಿಚಾರಗಳನ್ನು ಶಾಸ್ತ್ರೀಯವಾಗಿ ವಾದಿಸುತ್ತಾರೆ. ಅಲ್ಲಿಗೂ ತೃಪ್ತರಾಗದ ಅವರನ್ನು ಒಂದು ಗೊಡ್ಡಾದ ಆಕಳನ್ನು ಕಂಡು ಹಾಲುಕರೆಯುವಂತೆ ಹೇಳುತ್ತಾರೆ. ಆದರೆ ಶ್ರೀಯವರ ಪ್ರಭಾವದಿಂದ ಆಕಳು ಯಥೇಚ್ಛವಾಗಿ ಕ್ಷೀರವನ್ನು ಕೊಡುತ್ತದೆ. ಆಗ ಅವರು ಕ್ಷಮೆಬೇಡುತ್ತಾರೆ.

ಅನಂತರ ರಾಜನು ಶ್ರೀಯವರನ್ನು ಅರ್ಚಿಸಿ ಅವರಿಂದ ಅನೇಕ ತಾತ್ವಿಕ ವಿಚಾರಗಳನ್ನರಿತು ಭಕ್ತಿಯಿಂದ ಬೀಳ್ಕೊಡುತ್ತಾನೆ. ಅಲ್ಲಿಂದ ಸ್ವಾಮಿಗಳು ಗುಯಲೂರು ಮಠಕ್ಕೆ ಬಿಜಯಂಗೈದು ಅಲ್ಲಿ ಕೆಲವುಕಾಲ ಶಿವಯೋಗದಲ್ಲಿದ್ದು ಅನಂತರ ಪಂಡಿತಾರಾಧ್ಯ ವಂಶಜನಾದ ಓರ್ವ ಬಾಲಕನಿಗೆ ಅನುಗ್ರಹ ಅಧಿಕಾರಮುದ್ರೆಗಳನ್ನಿತ್ತು ಅಲ್ಲಿಯೇ ಶಿವೈಕ್ಯರಾಗುತ್ತಾರೆ.

ಸೀ॥ ಕೊನ್ನಿವರ್ಷಂಬು ಲಾಗುಯಲೂರು ಮಠಮುಲೋ ಶಿವ
ಯೋಗಭರಿತ ವೈಭವಮುಸಂದು ಆನಂದಮುಗ ಪಂಡಿತಾರಾಧ್ಯಸಂ
ಭವ ಬಾಲುನಿಂರಪ್ಪಿಂಚಿ ಭವ್ಯಮುಗನು । ಹಸ್ತಮಸ್ತಕಮುಂಟಿ ಆರ್ಯ
ಸಂಮತ ಮುಗಪಟ್ಟಾಭಿಷೇಕಂಬು ದಿಟ್ಟಮುಗನುಂ ಚೇಸಿ ಮಾಚೇಶ್ವರ
ದೇಶಿಕ ಸ್ವಾಮುನಿ ಅಭಿಧಾನಮೊಸಂಗಿ ಅಮಿತನ್ಯೈನ ।
ಅನರೆ ಮಾಚೇಶ್ವರಸ್ವಾಮಿಯೆಂದು ಕರೆಯಲ್ಪಡುತ್ತಾರೆ.

## ಶ್ರೀ ಮಾಚೇಶ್ವರ ದೇಶಿಕೇಂದ್ರ ಶಿವಾಚಾರ್ಯರು.

( ಸು. ೧೭೦೦ )

ಇವರು ತಪೋನಿಷ್ಠರೂ ಶಾಂತಮೂರ್ತಿಗಳೂ ಭೂತದಯಾಪರರೂ ಆಗಿದ್ದರೆಂದು ತಿಳಿದು ಬರುತ್ತದೆ. ಗುಯಲೂರಿನಲ್ಲಿ ಅನುಷ್ಠಾನಪರರಾಗಿದ್ದಾಗ್ಗೆ ಒಂದುದಿನ ರಾತ್ರೆ ಕೆಲವರು ಚೋರರು ಮಠದ ತೆಂಗಿನ ತೋಟಕ್ಕೆ ನುಗ್ಗಿ ತೆಂಗಿನಕಾಯಿಗಳನ್ನು ಕಿತ್ತು ಸಾಗಿಸುತ್ತಿದ್ದರು. ಆಗ ತೋಟದ ಕಾವಲುಗಾರರು ಅವರನ್ನು ಹಿಡಿದು ಶ್ರೀಯವರಲ್ಲಿಗೆ ಎಳೆದುಕೊಂಡು ಬಂದರು. ಆಗ ಅವರು ತಮಗೆ ಜೀವನ ನಡೆಯುವದೇ ದುಸ್ತರವೆಂದೂ ದಾರಿದ್ರ್ಯದ ನಿಮಿತ್ತ ಹೀಗೆ ಮಾಡಬೇಕಾಯಿತೆಂದೂ ಬಿನ್ನೈಸಿಕೊಳ್ಳುತ್ತಾರೆ. ಶ್ರೀಯವರು ಕನಿಕರಪಟ್ಟು

ಅವರಿಗೆಲ್ಲಾ ಯಥೇಚ್ಛವಾಗಿ ಅನ್ನವಸ್ತ್ರಗಳನಿತ್ತು ಮುಂದೆ ಇಂತೆಸಗದಂತೆ ಆಜ್ಞೆ ಮಾಡುತ್ತಾರೆ. ಆದರೆ ದುರ್ಮಾರ್ಗಿಗಳಾದ ಆ ಚೋರರು ಮರುದಿನವೂ ಅಲ್ಲಿಗೆ ಕದಿಯಲು ಬರುತ್ತಾರೆ. ಅಷ್ಟರಲ್ಲಿ ಕಣ್ಣುಕಾಣದೆ ಪರಿತಪಿಸುತ್ತಿರುವಲ್ಲಿ ತೋಟದ ಕಾವಲುಗಾರರಿಂದ ಹಿಡಿಯಲ್ಪಟ್ಟು ಮತ್ತೆ ಶ್ರೀಯವರಲ್ಲಿಗೆ ಬಂದು ತಮ್ಮ ಕೃತ್ಯಕ್ಕಾಗಿ ಸಂಪೂರ್ಣ ಪಶ್ಚಾತ್ತಾಪಪಟ್ಟು ಅಭಯ ಭಿಕ್ಷೆಯನ್ನು ಬೇಡುತ್ತಾರೆ. ಆಗಲೂ ಸಹ ಗುರುದೇವನು ಅನುಕಂಪವನ್ನು ತೋರಿಸಿ ಮತ್ತೆ ಅವರಿಗೆ ಕಣ್ಣು ಬರುವಂತೆ ಅನುಗ್ರಹಿಸಿ ಕಳುಹಿಸುತ್ತಾರೆ. ಆಗ ಅವರು ಆನಂದ ಭರಿತರಾಗಿ ಧರ್ಮಗುರುಗಳೆಂದು ಶ್ರೀಯವರ ಪ್ರಭಾವವನ್ನು ಕೊಂಡಾಡುತ್ತಾರೆ. ಇಂದಿಗೂ ಗುಳೂರಿನಲ್ಲಿ 'ಧರ್ಮದ ಗುರುಗಳ ಗದ್ದಿಗೆ' ಇರುತ್ತದೆ.

ಒಂದುದಿನ ಸ್ವಾಮಿಯವರು ತೋಟದಲ್ಲಿ ದುಷ್ಟರಿಂದ ಹಿಂಸಿಸಿ ಸಾಯಿಸಿದ್ದ ಸರ್ಪವನ್ನು ಬದುಕಿಸುತ್ತಾರೆ. ಹೀಗಿರುವಲ್ಲಿ ಒಮ್ಮೆ ಮಹಾರಾಷ್ಟ್ರ ದೇಶದ ಕೆಲವು ದರೋಡೆಕಾರರು ಮಠದಲ್ಲಿ ಯಥೇಷ್ಟ ದ್ರವ್ಯವಿದೆಯೆಂಬ ಸಮಾಚಾರವನ್ನು ಕೇಳಿ ಮಠವನ್ನು ಲೂಟಿ ಮಾಡಲುದ್ಯುಕ್ತರಾಗಿ ಸೈನ್ಯದೊಡನೆ ಬಂದು ಮುತ್ತಿಗೆಯನ್ನು ಹಾಕಿದರು. ಆಗ ಶ್ರೀಯವರು ಶಿಷ್ಯರ ಮುಖೇನ ಈ ವೃತ್ತವನ್ನು ಆಲಿಸಿ ಶ್ರೀವೀರಭದ್ರನ ಧ್ಯಾನವನ್ನು ಮಾಡತೊಡಗಿದರು. ಸ್ವಲ್ಪ ಹೊತ್ತಿನಲ್ಲಿಯೇ ದರೋಡೆಕಾರರ ಸೈನಿಕರು ಹೊಟ್ಟೆಬೇನೆ ಮುಂತಾದ ವ್ಯಾಧಿಗಳಿಂದ ಪೀಡಿತರಾಗಿ ಸ್ವಾಮಿಗಳ ಶರಣುಹೊಂದಿ ಅಪರಾಧ ಕ್ಷಮೆಯನ್ನು ಬೇಡುತ್ತಾರೆ.

ಸೀ॥ "ರಕ್ಷಿಂಚು ಮಲೆನಂಚು ರಮ್ಯ ವೈನಟುವಂಟಿ ತುರಗಮುಲ್ ಛತ್ರಚಾಮರಮುಲೊಸಗಿ ಪ್ರಾರ್ಥಿಂಚಗಾಕೃಪಾಪಾರೀಣುದಾನಂದ ಹೃದಯುಡೈವಾರಲು ಕೋದವಿನಟ್ಟಿ। ಯಾಪವಲ್ ತೊಲಗು ಸಂಚಾಶೀರ್ವಚನ ಮಿಚ್ಚಿಶಲವೊಸಂಗೆ।"

ಅವರ ಅಪರಾಧವನ್ನು ಕ್ಷಮಿಸಿ ಆಶೀರ್ವದಿಸುತ್ತಾರೆ. ಇದರಿಂದ ಸಂತುಷ್ಟರಾದ ಅವರು ಛತ್ರಚಾಮರಾದಿ ಬಿರುದಾಂಕನಗಳಿತ್ತು ಕಾಣಿಕೆಗೊಟ್ಟು ಹಿಂದಿರುಗುತ್ತಾರೆ. ಶ್ರೀಯವರ ಪ್ರಭಾವವು ಎಲ್ಲೆಲ್ಲೂ ಪ್ರಖ್ಯಾತವಾಗುತ್ತದೆ.

ಈ ಸಮಯದಲ್ಲಿ ಹಂಡೆ' ವಂಶಕ್ಕೆ ಸೇರಿದ ಅನಂತಪುರಾಧೀಶ್ವರನಾದ ಪನಾಡಪ್ಪರಾಜನಿಗೆ ಕುಷ್ಠರೋಗವು ಪ್ರಾಪ್ತವಾಗಿದ್ದು ಯಾವ ಔಷಧೋಪಚಾರದಿಂದಲೂ ವಾಸಿಯಾಗಿರಲಿಲ್ಲ. ಆತನು ಕರ್ಣಾಕರ್ಣಿಕೆಯಿಂದ ಮಾಚೀಶ್ವರಸ್ವಾಮಿಗಳ ಮಹಿಮಾತಿಶಯವನ್ನು ಕೇಳಿ ವಿಶೇಷ ಭಕ್ತಿಯಿಂದ ತನ್ನನುದ್ಧರಿಸಬೇಕೆಂದು ಶ್ರೀಯವರಲ್ಲಿ ಬಿನ್ನೈಸಿಕೊಳ್ಳುತ್ತಾನೆ. ಆತನ ಪ್ರಾರ್ಥನೆಯಂತೆ ಮಹಾಸ್ವಾಮಿಯವರು ಅನಂತಪುರಕ್ಕೆ ಬಿಜಯಂಗೈದು ಅರಮನೆಯಲ್ಲಿ ಶಿವಾರ್ಚನೆಯನ್ನು ತೀರಿಸಿಕೊಂಡು ರಾಜನಿಗೆ ಅನುಗ್ರಹಿಸುತ್ತಾರೆ. ಇವರು ಗೃಹಪ್ರವೇಶ ಮಾಡಿದೊಡನೆಯೇ ಆತನ ಶರೀರದಲ್ಲಿ ಒಂದು ವಿಲಕ್ಷಣ ಪರಿವರ್ತನೆಯೇ ಉಂಟಾಗುತ್ತದೆ. ಪರುಷಸೋಂಕಿದ ಲೋಹದಂತೆ ಪರಿಶುದ್ಧನಾಗುತ್ತಾನೆ. ಅಂದಿನಿಂದ ರಾಜನು

ಸೀ॥ ಮಾಚೇಶ್ವರಸ್ವಾಮಿ ಮಜ್ಜನಂ ಬೊನರಿಂಚು ಸಲಿಲಂಬು ಗೊನಿಕಾನು ಸ್ನಾನಮಾಡಿ । ವಿಮಲಾತ್ಮುಡಿಚ್ಚಿನ ವಿಭೂತಿ ಧಾರಿಯಿಂಚಿ ನಿತ್ಯಕೃತ್ಯಂಬು ಗುರುವುಲ ನೇಮಮುಗನು । ಕೊಲ್ಚುಚು ನುಂಡಗ ಕುಷ್ಠರೋಗಮುಬಾಶಿ ವಜ್ರಕಾಯಂ ಬೈನವಾಗಿ ಚ

ಅರಸನು ಪ್ರತಿದಿನವೂ ಶ್ರೀಯವರು ನಿಂತ ಉಪಕಲ್ಲೆ ಮಜ್ಜನಂಗೈದು ಅವರಿತ್ತ ಭಸಿತವನೆ ಧರಿಸಿ ಗುರುಪ್ರಸಾದವಂ ಸ್ವೀಕರಿಸುತ್ತಿರುವಲ್ಲಿ ಆತನ ವ್ಯಾಧಿಯು ವಾಸಿಯಾಗಿ ರಾಜನು ವಜ್ರದೇಹಿಯಾದುದು ಸರ್ವರನ್ನು ಆಶ್ಚರ್ಯಗೊಳಿಸಿತು. ಅರಸನ ಆನಂದಕ್ಕೆ ಪಾರವೇ ಇಲ್ಲದಾಯಿತು. ಆತನು ಅನೇಕ ಬಿರುದಾವಲಿಗಳನ್ನು ಅರ್ಪಿಸಿ ಮಹಾವೈಭವದೊಂದಿಗೆ ಸ್ವಾಮಿಯನ್ನು ಪೂಜಿಸಿ ಅಲ್ಲಿಯೇ ಮಠಮಾನ್ಯಗಳನ್ನಿತ್ತು ಸನ್ಮಾನಿಸಿದನು. ಶ್ರೀಯವರು ಅಲ್ಲಿಂದ 'ಧರ್ಮಾವರ'ಕ್ಕೆ ದಯಮಾಡಿಸಿದರು. ಆಗ ಅಲ್ಲಿಗೆ ಅಧಿಪತಿಯಾದ 'ಕೋನೇಟಿನಾಯಕ'ನು ಶ್ರೀಯವರನ್ನು ಸ್ವಾಗತಿಸಿ ಅರ್ಘ್ಯಪಾದ್ಯಾದಿಗಳಿಂದ ಪೂಜೆಗೈದು ಉತ್ಸವಾದಿಗಳನ್ನು ಮಾಡಿಸಿದನು. ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿಕೊಟ್ಟು ಮಾನ್ಯ, ಮರ್ಯಾದೆಗಳನ್ನು ಕೊಟ್ಟನು. ಈ ಸ್ಥಳಗಳಲ್ಲಿ ಇಂದಿಗೂ ಆ ಮಠಗಳು ಈ ಪೀಠದ ಅಧಿಕಾರಕ್ಕೆ ಒಳಪಟ್ಟಿರುತ್ತವೆ.

ಸೀ॥ ಪಂಡಿತಾರಾಧ್ಯ ವಂಶಸಂಭವುನಿಬಿಲಿಚಿ ।
ಹಸ್ತಮಸ್ತಕ ಸಂಯೋಗ ಮಾಚರಿಂಚಿ ॥
ವಾಸಿಮೀರಂಗಮುಂ ಕ್ರಮುಪದೇಶಮಿಚ್ಚಿ ।
ಘನತರೈಕ್ಯಂಗ ಪಟ್ಟಂಬುಗಟ್ಟಿಮರಿಯು ॥

ಸೀ॥ ಕರಿಬಸವದೇಶಿಕ ಸ್ವಾಮಿಗಾಂಟಂಚು ।
ನಾಮಧೇಯಂಬುನಿಯಮಿಂಚಿ ಪ್ರೇಮತೋಡ ॥
ನಕುಲಿತಂಬೈನ ಬಿರುದುಲರ್ಪಿಂಚಿಗುರುಡು ।
ಶಿಷ್ಯುಲಂದ ರುಚೂಡಂಗ ಶಿವುನಿಜೇರೆ ॥

ಈ ರೀತಿಯಾಗಿ ಸ್ವಾಮಿಯವರು ಸದ್ವಂಶೀಯನಾದ ವಟುವಿಗೆ ಪಟ್ಟಾಭಿಷೇಕವಂಮಾಡಿ ಕರಿಬಸವದೇಶಿಕನೆಂದು ಅಭಿಧಾನವಂಗೈದು ಶಿವಸಾಯುಜ್ಯವನ್ನೈದಿದರು.

(ಕ್ರಮಶಃ)

---

# ಭಾವ ಚಿಂತಾರತ್ನದ ವಿಮರ್ಶೆ

ಬ:— ಶ್ರೀಚಂದ್ರಶೇಖರದೇವರು, ಅಡ್ನೂರು.

---

ಒಂಬತ್ತನೇ ಶತಮಾನದಿಂದ ೧೯ನೇ ಶತಮಾನದ ವರೆಗೂ ಹರಿದು ಬಂದ ಕರ್ನಾಟಕ ಕಾವ್ಯಪ್ರಪಂಚದಲ್ಲಿ ಎರಡು ಮುಖ್ಯವಾದ ಭೇದಗಳು. ಒಂದು ವಸ್ತುಕ; ಇನ್ನೊಂದು ವರ್ಣಕ. ಮೊದಲನೆಯದು ಪರತಂತ್ರ; ಎರಡನೆಯದು ಸ್ವತಂತ್ರ. ಪ್ರಾಚೀನ ಜೈನ ಕವಿಗಳು ತಮ್ಮ ವಸ್ತುಕಗಳಿಂದ ಕನ್ನಡ ಕಾವ್ಯದೇವಿಯನ್ನು ಸೃಜಿಸಿದ್ದರೆ ವೀರಶೈವ—ಬ್ರಾಹ್ಮಣ ಕವಿಗಳು ತಮ್ಮ ವರ್ಣಕಗಳಿಂದ ಅವಳನ್ನು ಬಳಸಿದ್ದಾರೆ; ಬೆಳಗಿಸಿದ್ದಾರೆ.

ವರ್ಣಕ ಕಾವ್ಯಗಳ ಆದ್ಯಪ್ರವರ್ತಕನಾದ ಉಭಯಕವಿ ಕಮಲರವಿ ರಾಘವಾಂಕನಿಂದೀಚಿನ ಕವಿಗಳು ವಿಶೇಷವಾಗಿ ವರ್ಣಕ ಕಾವ್ಯದೀಪಗಳನ್ನೇ ಹತ್ತಿಸಿದರು. ಇವು ಹಿಂದಿನ ವಸ್ತುಕಗಳ ಕುಡಿಯನ್ನಳಿಸಿ. ತಮ್ಮ ಹಿತವಾದ ಮಿತವಾದ ಪ್ರಕಾಶದಿಂದ ರಸಿಕರನ್ನು ತಮ್ಮತ್ತ ಸೆಳೆದವು. ಬಿಕ್ಕಟ್ಟಾದ ವಸ್ತುಕಗಳನ್ನು ಸಹಜವಾಗಿ ಕೈಬಿಟ್ಟು ಹೃದಯಾಲ್ಹಾದಕಗಳಾದ ವರ್ಣಕಗಳನ್ನೇ ಎಲ್ಲರೂ ಹಾಡಿ ಹರಿಸಿದರು. ಈ ವರ್ಣಕವೆಂಬ ರಾಘವಾಂಕನ ಅಂಕುರವು ಅವನಿಂದಿತ್ತತ್ತ ಹೆಚ್ಚುಹೆಚ್ಚಾಗಿ ಬೆಳೆದು ಹೆಮ್ಮರವಾಯಿತು. ಈ ಹೆಮ್ಮರವು ಪಲ್ಲವಿಸಿ ತನ್ನೆಳಲನ್ನೆರಚುವದಲ್ಲದೆ ಹೂತು ಕಂಪನೂ ಬೀರಿತು. ಮಿಡಿಗಾಯಿ ಹೋಳ್ಗಾಯಿಗಳೂ ಆದವು. ಆದರೆ ಪರಿಪೂರ್ಣ ಪಕ್ವವಾಗಿ ಕೈಗೆ ಸಿಕ್ಕ ಹಣ್ಣುಗಳು ಕೆಲವು ಮಾತ್ರ. ಅವುಗಳಲ್ಲಿ ಸ್ಥೂಲವಾಗಿ ರಾಘವಾಂಕ, ಭೀಮ, ಚಾಮರಸ, ವಿರೂಪಾಕ್ಷಪಂಡಿತ, ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದ ಮಹಾಕವಿಗಳ ಕೃತಿಗಳು. ಇವುಗಳಲ್ಲಿ ಬಸವಪೌರಾಣದ ಮಲ್ಲಣಾರ್ಯನ ಕೃತಿಯಾದ 'ಭಾವಚಿಂತಾರತ್ನವೂ' ಸೇರಲು ತಕ್ಕುದು. ಸುಂದರವಾದ ಸಣ್ಣದಾದ ಈತನ ಈ ಕೃತಿಯೇ, ಮುಂದಿನ ಷಡಕ್ಷರಿಯ ವಿಶಾಲವಾದ, ಉನ್ನತವಾದ, ಗಹನವಾದ, ನವರಸಭರಿತವಾದ "ರಾಜಶೇಖರ ವಿಳಾಸ"ಕ್ಕೆ ಪುಷ್ಟಿಗೊಟ್ಟ ಮಹಾ

ಮಾತ್ರ; ಮರುಜೀವಣಿ. ನಾಡಿನಲ್ಲೆಲ್ಲಾ ಕೀರ್ತಿವೆತ್ತ ರಾಜಶೇಖರಕ್ಕೆ ಮೂಲವಾದ ಈ "ಭಾವಚಿಂತಾರತ್ನ"ದ ನೆಲೆಬೆಲೆಗಳು ಎಂತಹವೆಂಬು ದನ್ನು ಬೇರೆ ಒರೆಯಬೇಕಾಗಿಲ್ಲ.

## ಕವಿಚರಿತ್ರೆ, ಕವಿಕೃತಿ, ಕವಿಕಾಲ.

ಕವಿಯ ನಿಜವಾದ ಹೆಸರು ಮಲ್ಲಣಾರ್ಯ. ಉಪಾಧಿ ಸಹಿತ ವಾಗಿ ಹೇಳುವದಾದರೆ ಬಸವ ಪೌರಾಣದ ಮಲ್ಲಣಾರ್ಯ. ಹೀಗಿದ್ದರೂ ಗುಬ್ಬಿಯ ಮಲ್ಲಣಾರ್ಯನೆಂದೇ ಬಳಿಕೆಯಲ್ಲಿ ಬಂದುಬಿಟ್ಟಿದೆ. ಗಣ ಭಾಷ್ಯರತ್ನಮಾಲೆಯೆಂಬ ಗ್ರಂಥವನ್ನೂ ಪಾತುಲಾಗಮಕ್ಕೆ ಟೀಕೆಯನ್ನೂ ಬರೆದ ಗುಬ್ಬಿಯ ಮಲ್ಲಣಾರ್ಯನು ಈ ಕವಿಯ ಪಿತಾಮಹ. ಈತನ ಹೆಸರನ್ನೇ ಈ ಕವಿಗಿಟ್ಟುದರಿಂದ ಈತನನ್ನೂ ಜನರು ಹಾಗೆಯೇ ಕರೆ ಯುವ ರೂಢಿಯು ಬಂದಿರಬೇಕು. ತನ್ನ ಹೆಸರಿನ ಅಜ್ಜನೂ ಕವಿ. ತಾನೂ ಕವಿ. ಇಬ್ಬರೂ ಒಂದೇ ಹೆಸರಿನವರಾದರೆ ಮುಂದಿನ ವಿಮ ರ್ಶಕರಿಗೆ ತೊಂದರೆಯಾದೀತೆಂದು ಭಾವಿಸಿಯೋ ಏನೋ ಎಂಬಂತೆ ಕವಿಯೇ ತನ್ನ ಹೆಸರಿಗೆ "ಬಸವಪೌರಾಣದ" ಎಂಬ ವಿಶೇಷಣವನ್ನು ಕೊಟ್ಟು ಈ ಪದ್ಯದಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ.

"ತರುಣಗುರು ಭಕ್ತಾಖ್ಯ ಗರ್ಭಾಬ್ಧಿಚಂದ್ರಮಂ ।
ವರಬಸವ ಪೌರಾಣದುರುಮಲ್ಲಣಾರ್ಯನಘ ।
ಹರಸಿದ್ಧಮಲ್ಲೇಶ ಗುರುಚರಣ ಸುರಕುಜಂ ಹೃದ್ಭೂಮಿಯೊಳ್
ಮೊರೆಯಲು ॥

ಈ ಕವಿಯು ಮೂವತ್ತಾರು ವರುಷ ತಪ್ಪದೇ ಬಸವ ಪುರಾಣ ವನ್ನೇ ಹೇಳಿದ್ದರಿಂದ ಈತನಿಗೆ ಈ ಹೆಸರು ಬಂದಿದೆ ಎಂದು ಬಲ್ಲ ವರು ಹೇಳುತ್ತಾರೆ. ಇದು ನಿಜವೆಂದೇ ಹೇಳಬೇಕು. ಅವರವರ ಕಾಯಕ ಬಲದಿಂದ ಅವರವರಿಗೆ ಆ ಆ ಹೆಸರುಗಳು ಬರುವುದು ಲೋಕರೂಢಿ ಯಿರುವದಲ್ಲದೆ ಸಾಹಿತ್ಯಪ್ರಪಂಚದಲ್ಲಿಯೂ ನಾವು ಬೇಕಾದಷ್ಟು ಕಾಣ ಬಹುದು. ಉದಾಹರಣೆಗಾಗಿ—ನುಲಿಯಚಂದಯ್ಯ, ಆಯ್ದಕ್ಕಿ ಮಾರಯ್ಯ ಅಭಿನವಪಂಪ, ಕುಮಾರವಾಲ್ಮೀಕಿ ಮೊದಲಾದವು. ಇದಲ್ಲದೆ ಈತನ ಶಿಷ್ಯನಾದ ಚೇರಮಾಂಕನು "ಬಸವೇಶ್ವರ ಪುರಾಣಾರ್ಥಭೋಗಿ" ಎಂದು ಈತನನ್ನೇ ಕುರಿತು ಹೇಳಿದ ಮಾತು ಇದಕ್ಕೆ ಉಪಷ್ಟಂಭಕವಾಗಿದೆ.

ಈ ಬಸವಪುರಾಣದ ಮಲ್ಲಣಾರ್ಯಕವಿಯ ಸ್ಥಳ ತುಮಕೂರು ಜಿಲ್ಹೆಯಲ್ಲಿರುವ ಗುಬ್ಬಿ. ಪ್ರಾಚೀನ ಕಾಲದಲ್ಲಿ ಈ ಊರಿಗೆ 'ಅಮರಗೊಂಡ' ವೆಂಬ ಹೆಸರಿತ್ತೆಂದು ಪ್ರಾಚೀನಗ್ರಂಥ, ಶಾಸನಗಳಿಂದ ತಿಳಿದು ಬರುತ್ತವೆ. ಇದಕ್ಕೆ 'ಗುಬ್ಬಿ' ಎಂದು ಹೆಸರು ಬರಲು ಈ ಕವಿಯ ಅಜ್ಜನಾದ ಗುಬ್ಬಿಯ ಮಲ್ಲಣಾರ್ಯನೇ ಕಾರಣ. ‡ ಬಸವಪುರಾಣದ ಮಲ್ಲಣಾರ್ಯಕವಿಯ ತಂದೆ ಗುರುಭಕ್ತ; ತಾಯಿ ಸಪ್ಪೆಯಮ್ಮ. ಈತನ ಗುರು ಶಿವಗಂಗೆ ಮೇಲಣ ಗವಿಯ ವೀರಸಿಂಹಾಸನಾಧೀಶ್ವರ ಶಾಂತನಂಜೇಶ್ವರನು. ಈತನಿಗೆ ಕನ್ನಡ-ಸಂಸ್ಕೃತಗಳೆರಡರಲ್ಲಿಯೂ ಅಪ್ರತಿಮವಾದ ವೈದುಷ್ಯ. ತಮಿಳಜ್ಞಾನವೂ ಈತನಿಗಿದ್ದಿತೆಂದು ವ್ಯಕ್ತವಾಗುತ್ತದೆ. ಈತನಿಗೆ ಚೇರಮಾಂಕನೆಂಬ ಒಬ್ಬ ಶಿಷ್ಯನಿದ್ದನು ಆತನೂ ಒಳ್ಳೇರಸಿಕ; ನಿಪುಣ. ಆತನೇ ತನ್ನ ಕಾವ್ಯದಲ್ಲಿ ತನ್ನನ್ನು "ನವರಸಭಾವಲಕ್ಷಣಾಲಂಕಾರನಿಪುಣ"ನೆಂದು ಹೇಳಿಕೊಂಡಿದ್ದಾನೆ. ಇಂತಹ ರಸಿಕನಾದ ಚೇರಮಾಂಕನ ಗುರುವಾದ ಮಲ್ಲಣಾರ್ಯರ ಕವಿತ್ವಶಕ್ತಿಯನ್ನೂ ಬುದ್ಧಿಮತ್ತೆಯನ್ನೂ ಅಳತೆಗೋಲಿನಿಂದ ಅಳೆಯಲು ಸಾಧ್ಯವೇ? ಚೇರಮಾಂಕನು ಈತನನ್ನು "ಸಂಸ್ಕೃತ ಕರ್ನಾಟಕ ಕವಿತಾವಿಶಾರದನೆಂದೂ" "ವೇದಾಂತ ಸಿದ್ಧಾಂತ ಲಕ್ಷಣ ವೈದ್ಯಭರಿತ ಸಾಮುದ್ರಿಕ ಜ್ಯೋತಿಷಾಲಂಕಾರ ಸರಸಗೀತಂ ವಾದ್ಯ ಶಕುನ ಸವ್ಯಾಕರಣ ಸೂಪರತಿ ಶಾಸ್ತ್ರದೊಳಗೆ ಪರಿಣತನೆನಿಪ್ಪ ಸತ್ಕವಿ ಮಲ್ಲಣಾರ್ಯಗುರುವರ"ನೆಂದೂ ವರ್ಣಿಸಿದ್ದಾನೆ. ಈ ಕವಿಯು "ಭಾವಚಿಂತಾರತ್ನ" ಕಾವ್ಯವಲ್ಲದೆ "ವೀರಶೈವಾಮೃತ" ಮಹಾಕಾವ್ಯವನ್ನೂ ಬರೆದಿದ್ದಾನೆ. ಮತ್ತು "ಪುರಾತನರಗಳೆ" ಯೊಂದನ್ನು ಬರೆದಿರುವನೆಂದು ಕವಿಚರಿತೆಯಿಂದ ತಿಳಿದು ಬರುತ್ತದೆ. ಆದರಿದು ಇನ್ನೂ ದೊರೆತಿರುವದಿಲ್ಲ. ಈ ಕವಿಯು ಪ್ರೌಢದೇವರಾಯನ ಕಾಲದವನಾದುದರಿಂದ ಸು. ೧೪೮೫ ರಿಂದ ೧೫೫೦ ರ ವರೆಗೆ ಜೀವಿಸಿರಬಹುದೆಂದು ಹೇಳಬಹುದಾಗಿದೆ. ಈತನನ್ನು ಚೇರಮ, ಸಿದ್ಧನಂಜೇಶ, ಷಡಕ್ಷರ ಮೊದಲಾದ ಮಹಾಮಹಾಕವಿಗಳು ತುತಿಸಿದ್ದಾರೆ.

---

‡ ಈ ಕಾರಣವನ್ನು ಕಾಣಬಯಸುವವರು ಶರಣಸಾಹಿತ್ಯದ ಸಂ॥ ೯ ರಲ್ಲಿ ಸಂಪಾದಕರೇ ಬರೆದ "ಅಮರಗುಂಡದ ಮಹಾಕವಿಗಳು" ಎಂಬ ಲೇಖವನ್ನು ನೋಡಬೇಕು.

## ಕಾವ್ಯಮೂಲ, ಕಾವ್ಯಕಾಲ

ಭಾವಚಿಂತಾರತ್ನದ ಕಥಾವಸ್ತುವು ತಮಿಳಿನಿಂದ ತೆಗೆದುಕೊಂಡುದು. ತಮಿಳಿನಲ್ಲಿ ಶ್ರೇಷ್ಠಕವಿಯಾದ "ತಿರುಜ್ಞಾನಿ ಸಂಬಂಧೀಶನು ಜಿನಮತವಿದಾರಣಂಗೈದು ಹದಿನಾರು ಸಾಸಿರ ತಿರುಪಾಟುಗಳನ್ನು ರಚಿಸಿ ತನ್ನ ಶಿಷ್ಯನಾದ ಕುಲಚ್ಚರಿಯುಗೆ ಪ್ರಣವ ಪಂಚಾಕ್ಷರಿಯ ಮಹಿಮೆಯುಂ ತಿಳುಪೆ ಸತ್ಯೇಂದ್ರಚೋಳಭೂಪನ ಕಥೆಯುಂ ದ್ರಾವಿಡದೊಳೊರೆದುದಂ ಕನ್ನಡದಿ ಪೇಳ್ದೆನು" ಎಂದು ಕವಿಯೇ ಹೇಳಿದ್ದಾನೆ. ಕಾವ್ಯಕಾಲವನ್ನೂ "ಬಾಣಗುಣವಾರ್ಧಿವಿಧು ಸಂದ ಶಕ (೧೪೩೫) ವರ್ಷದಿಂ" ಅಂದರೆ ಕ್ರಿ. ಶ. ೧೫೧೩ ರಲ್ಲಿ ಶ್ರೀಮುಖ ಸಂವತ್ಸರದ ಕಾರ್ತಿಕ ಮಾಸದ ಶುದ್ಧ ಸಪ್ತಮಿಯ ಶುಕ್ರವಾರ ಶ್ರವಣ ನಕ್ಷತ್ರದಲ್ಲಿ ಈ ಕಾವ್ಯವನ್ನು ನಿರೂಪಿಸಿದೆನೆಂದು ಸ್ಪಷ್ಟವಾಗಿ ತಿಳಿಸುತ್ತಾನೆ. ಇದು ಈತನು ಜ್ಯೋತಿಷ್ಯದಲ್ಲಿ ಪಂಡಿತನಿದ್ದನೆಂದು ಹೇಳುವ ಚೇರಮಾಂಕನ ಮಾತಿಗೆ ಬಲಕೊಡುತ್ತಿದೆ.

## ಕಾವ್ಯನಾಮ; ಕಾವ್ಯಕನುಮತಿ.

ಕವಿಯು ಸತ್ಯೇಂದ್ರಚೋಳನ ಕಥೆಯನ್ನು ಕಥಿಸಲು ಹೊರಟಿದ್ದರೂ ಕಾವ್ಯಕ್ಕೆ ಕಥಾನಾಯಕನ ಹೆಸರನ್ನೇ ಇನ್ನಿತರ ಕವಿಗಳಂತೆ ಇಟ್ಟಿಲ್ಲ. ಅದಕ್ಕೆ ಕಾರಣವನ್ನು ಆತನೇ ಹೀಗೆ ಹೇಳಿದ್ದಾನೆ:

"ಕೃತಿಯು ಪಲ್ಲವಿ ತೊಡಗಿ ಪೂರ್ಣಮಪ್ಪನ್ನಮೀ ।
ಕೃತಿಯೊಳುತ್ಪ್ರೇಕ್ಷೆಯಿಲ್ಲುದುದೊಂದು ಪದವಿಲ್ಲ ।
ಕೃತಿಗಿದು ನಿಮಿತ್ತದಿಂ 'ಭಾವಚಿಂತಾರತ್ನ' ವೆಂಬ
ಪೆಸರೀ ಕಾವ್ಯಕೆ ॥"

ಈ ಕಾವ್ಯವನ್ನು ಮತಿವಂತನೂ ಯತಿರಾಜನೂ ಆದ ನಾಗವಲ್ಲಿಯ ಶಿವಪೂಜೆಯೂರ್ಯನ ಅನುಮತಿಯಿಂದ ಬರೆದು ಅಮರಗುಂಡ ಮಲ್ಲೇಶ್ವರನಿಗೆ ಕವಿಯು ಅರ್ಪಿಸಿದ್ದಾನೆ. ಇವೆಲ್ಲವೂ ಈತನ ಕಾವ್ಯ ಬಂಧುರತೆಯ ಕುರುಹುಗಳು.

## ಕವಿಯ ಕೆಚ್ಚು; ಕಾವ್ಯದ ಮೆಚ್ಚು.

ಕನ್ನಡ ಕವಿಗಳು ತಮ್ಮ ಕಾವ್ಯವನ್ನು ಕಟ್ಟಲು ಆರಂಭಿಸಿದಾಗ ಮೊದಲು ತಮ್ಮ ಕಾವ್ಯದೋಷಗಳಿದ್ದರೆ ತಿದ್ದಲು ಅಧಿಕಾರಿಗಳನ್ನು

ಆಯುವದು ಕ್ರಮಪ್ರಾಪ್ತವಾದ ರೂಢಿಯಾಗಿದೆ. ಮಹಾಕವಿ ಕಾಳಿದಾಸನು "ತಂ ಸಂತಃ ಶ್ರೋತುಮರ್ಹಂತಿ ಸದಸದ್ವ್ಯಕ್ತಿ ಹೇತವಃ ಎಂಬ ಪದ್ಯಮುಖದಿಂದ ತನ್ನ ರಘುವಂಶ ಕಾವ್ಯವನ್ನು ತಿದ್ದುವ ಅಧಿಕಾರಿಗಳನ್ನು ಆರಿಸಿದ್ದಾನೆ. ಹಾಗೆ ಮಲ್ಲಣಾರ್ಯನೂ ತನ್ನ ಕಾವ್ಯ ದೋಷಗಳನ್ನು ಎಣಿಸಬೇಕಾದರೆ ಇಂತಹ ಅಧಿಕಾರಿಗಳಿಂದಲೇ ಸಾಧ್ಯವೆಂದು ಹೇಳುತ್ತಾನೆ.

"ಕಳೆದಲಂಕಾರ ಚಿತ್ರಾರ್ಥರಸಭಾವವೆ- ।
ಗ್ಗಳಿಸೆ ತಿದ್ದುವುದು ಶಿವಭಕ್ತರೆಂದೆನಿಪ ಕವಿ- ।
ಗಳು ದುರ್ಜನವ್ರಾತಘೂಕರವಿಗಳು ಶಿವನ ಕಿವಿವಾಯ್ಗೆ
ನೆರೆಸವಿಗಳು ॥"

ತಿದ್ದುವವವರು ಕೇವಲ ಶಾಬ್ದಿಕರಿರದೆ ಹಾರ್ದಿಕರೂ ಆಗಿರಬೇಕು ಎಂದು 'ಶಿವನ ಕಿವಿವಾಯ್ಗೆ ನೆರೆಸವಿಗಳು" ಎಂಬ ವಾಕ್ಯದಿಂದ ಹೇಳುವದಲ್ಲದೆ "ದುರ್ಜನವ್ರಾತಘೂಕ ರವಿಗಳೂ" ಆಗಿರಬೇಕೆಂದು ಒಳ್ಳೇ ಬಲ್ಪಿನಿಂದ ಬಿತ್ತರಿಸುತ್ತಾನೆ. ಯಾರು ಶಿವಕವಿಗಳೋ ಅವರಿಂದ ಸಾಧ್ಯವಲ್ಲದೆ ನರಕವಿಗಳಿಂದ ಶಕ್ಯವಿಲ್ಲ. ಇಲ್ಲವಾದರೆ ಈ ವಿಪರೀತ್ಕ್ರೆಡೆಯಾಗುತ್ತದೆಂದು ಈ ಪದ್ಯದಿಂದ ತೋರಿಸಿದ್ದಾನೆ.

"ರಸಜೀವ ಚಿತ್ರಾರ್ಥ ನಿರ್ದೋಷ ನೆಲೆಯಾದ ।
ಹೊಸರನ್ನಮಂ ವೇಗಡಂಗಳಂ ಕಳೆದು ಸೇ- ।
ರಿಸೆ ಹಾರದಲ್ಲಿ ಛಿದ್ರಂಗಂಡೆವೆಂಬೊಲಿಂತೀ ಕಾವ್ಯರತ್ನದಲ್ಲಿ ॥
ಒಸೆದು ತೋರುವ ಲಕ್ಷಣೋಕ್ತಿಯರಿಯದ ಕುಜನ ।
ವಿಸರವುರೆ ಮೂಳ್ಪ ತಪ್ಪಂ ಕಂಡೆವೆಂದು ಗ- ।
ರ್ವಿಸುವರೇಕದೆ ಗುಣಕೆ ಕಾರಣಂ ಹೃದಯಭೂಷಣವೆಂದು
ನೆರೆನೋಡದೆ ॥

ಈ ಕಾವ್ಯರತ್ನದಲ್ಲಿ ಯಾವ ದೋಷಕ್ಕೂ ಎಡೆಯಿಲ್ಲ. ರಸ, ಜೀವ, ಭಾವ, ಚಿತ್ರಾರ್ಥ ಮೊದಲಾದ ಕಾವ್ಯಗುಣಗಳಿಗೆ ಕೊರತೆಯಿಲ್ಲ. ಹೀಗಾಗಿಯೂ ಒಂದುವೇಳೆ ದುರ್ಜನರು ಮೆಚ್ಚದಿದ್ದರೆ ಅದು ನನ್ನ ತಪ್ಪಲ್ಲ; ಕಾವ್ಯಕ್ಕೂ ಕುಂದಿಲ್ಲ. ಆದರೂ ದೋಷವನ್ನು ಎಣಿಸಹೊರಟರೆ ಹೊಸ ರನ್ನವನ್ನು ಹಾರದಲ್ಲಿ ಪವಣಿಸಲು ತೂತು ತೆಗೆದುದೇ

ದೋಷವೆಂದೆಣಿಸಿದ ಮನುಜನ ಪಾಡಾಗುವದು ಎಂಬಂಶದಲ್ಲಿ ತನ್ನ ಕಾವ್ಯರತ್ನದ ಹಿರಿಮೆಯನ್ನು ವ್ಯಕ್ತಪಡಿಸಿದ್ದಾನೆ. ಇಲ್ಲಿ ನೋಡಿ!

"ಅಮಮ ಚಂದ್ರನ ಕಂಡು ವಾರ್ಧಿ ವೈವರ್ಣ್ಯಗುಂ।
ಹಿಮಕಾಂತ ಕರಗುಗುಮದೇಕೆ ಗಾಂಭೀರ್ಯ ಹೃ-।
ದ್ವಿಮಲಂಗಳಪ್ಪುದರಿನಂತೆನ್ನ ಕಬ್ಬದಿಂದಲ್ತಿ ಸಜ್ಜನರಿಗಕ್ಕುಂ॥
ಕುಮತಿ ದುರ್ಜನರು ಪರಿಣಮಿಸದಿರಲೇನಾಯ್ತು।
ಕಮಲಾರಿ ಪೂರ್ಣತೆಯೊಳೊಗೆಯೆ ಕಾಣುತವೆ ಕ-।
ರ್ದಮ ಜಲದ ಬೆಂಚೆ ಕಗ್ಗಲ್ಲುಗಳು ಪೆರ್ಚಿಕರಗದೊಡೆ
ಸಸಿಗದು ಹಾನಿಯೇ?

ಕವಿಯು ತನ್ನ ಕಾವ್ಯವು ಹುಣ್ಣಿಮೆಯ ಚಂದ್ರನಂತೆ ಪರಿಪೂರ್ಣ ಕಲೆಗಳಿಂದೊಡಗೂಡಿದೆಯೆಂದು ಹೇಳುತ್ತಾನೆ. ಆದರೂ ಆ ಪೂರ್ಣ ಚಂದ್ರಮನನ್ನು ನೋಡಿ ಆನಂದಪಡಬೇಕಾದರೂ ಒಂದು ಯೋಗ್ಯತೆ ಬೇಕು; ಒಂದು ವಿಶಿಷ್ಟ ಗುಣವಿರಬೇಕು. ತಣ್ಣದಿರನನ್ನು ನೋಡಿ ವೈವರ್ಣ್ಯವ ನದೀಕಾಂತ, ಹಿಮಕಾಂತಗಳಲ್ಲಿ ಕ್ರಮವಾಗಿ ಗಾಂಭೀರ್ಯ ನೈರ್ಮಲ್ಯ ಗುಣಗಳು ನೆಲೆಯಾಗಿವೆ. ಆ ಗುಣವಿಲ್ಲದ ಬೆಂಚೆ, ಕಗ್ಗಲ್ಲುಗಳು ಅದೆಂದಿಗೂ ಉಕ್ಕವು, ಕರಗವು. ಹೀಗಾದರೂ ಸಸಿಗೆ ಯಾವ ಹಾನಿಯಿಲ್ಲ. ಹಾಗೆ ನನ್ನ ಕಾವ್ಯದಿಂದ ದುರ್ಜನರು ಪರಿಣಮಿಸದಿರುವುದು ಸಹಜ. ಅವರಲ್ಲಿ ಆ ಭೋಕ್ತೃತ್ವಶಕ್ತಿಯೇ ಇರಲಾರದು. ಆದರೆ ಸಜ್ಜನರು ಪರಿಣಮಿಸಿ ಸಂತಸದಿ ಓಲಾಡುವರು; ಲೋಲಾಡುವರು. ಎಂಬುದಾಗಿ ತನ್ನ ಕಾವ್ಯಕಲಾಪೂರ್ಣತೆಯನ್ನು ಒಳ್ಳೇ ಕುಶಲತೆಯಿಂದ ನಮ್ಮ ಕಣ್ಮುಂದೆ ತಂದಿರಿಸುತ್ತಾನೆ.

## ಕವಿಯ ಪಾಂಡಿತ್ಯ, ಛಂದಸ್ಸು.

ಕವಿ ಮಲ್ಲಣಾರ್ಯರಿಗೆ ಹರಿಹರ ರಾಘವಾಂಕರಂತೆ ಯಾವ ಬಿರುದು ಬಾವಲಿಗಳಿಲ್ಲ. ಸಾಹಿತ್ಯ ಪ್ರಪಂಚದಲ್ಲಿ ಅವರಷ್ಟು ಅಗ್ರತೆಯೂ ಲಬ್ಧವಾಗಿಲ್ಲ. ಆದರೂ ಪಾಂಡಿತ್ಯದಲ್ಲಿ ಅವರಿಗೆ ಯಾವ ವಿಧದಲ್ಲಿಯೂ ಕಡಿಮೆಯವನಲ್ಲ. ಚಿಕ್ಕದಾದರೂ ತನ್ನ 'ಭಾವಚಿಂತಾರತ್ನ' ಕೃತಿಯಲ್ಲಿ ತಕ್ಕ ಪ್ರತಿಭಾ ಸಂಪತ್ತಿಯನ್ನು ತೋರ್ಪಡಿಸಿದ್ದಾನೆ. ವೀರಶೈವಾಮೃತ ಮಹಾಪುರಾಣದಿಂದ ತನ್ನ ಅಪಾರವಾದ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾನೆ. ಈತನ ಈ ಭಾವಚಿಂತಾರತ್ನ ರೂಪ ಕಾವ್ಯ

ಪ್ರಬಂಧವು ಒಳ್ಳೇ ಪ್ರೌಢವಾಗಿದೆ. ಹಳೆಗನ್ನಡ ಶಬ್ದಗಳನ್ನೇ ವಿಶೇಷ ವಾಗಿ ಬಳಸುವದರಿಂದ ಈತನ ಈ ಕಾವ್ಯವು ಒಳ್ಳೇ ಸುಂದರವಾಗಿದೆ. ಈತನ ಕಾವ್ಯದಲ್ಲಿ ಸಂಸ್ಕೃತ ಸರಸ್ವತಿಯು ಹೆಚ್ಚಾಗಿ ಸುಳಿದಿಲ್ಲ. ವರ್ಣಕ ಕಾವ್ಯಗಳಲ್ಲಿ ಒಳ್ಳೇ ಪ್ರೌಢ ಕಾವ್ಯವೆಂದರೆ ಈತನ ಭಾವಚಿಂತಾರತ್ನ ವೆಂದೇ ಹೇಳಬೇಕು. ವರ್ಣಕ ಕಾವ್ಯ ಪ್ರಪಂಚದಲ್ಲಿದ್ದ ಪ್ರೌಢಕಾವ್ಯದ ಕೊರತೆಯನ್ನು ಈ ಕವಿಯು ತಂದು ತುಂಬಿದ್ದಾನೆಂದು ಹೇಳಬಹುದು. ಚಂಪೂ ಕಾವ್ಯಗಳಂತೆ ವರ್ಣಕ ಕಾವ್ಯಗಳಲ್ಲಿ ಪ್ರೌಢ ಪ್ರಬಂಧವಿ ಲ್ಲೆಂಬ ಅಪವಾದವನ್ನು ತೆಗೆದುಹಾಕಲು ಯತ್ನಿಸಿದ್ದಾನೆ; ತೆಗೆದುಹಾಕಿ ದ್ದಾನೆ. ಇಂತಹ ಕವಿಗಳು ಇಂತಹ ಪ್ರೌಢ ಕಾವ್ಯಗಳನ್ನು ರಚಿಸದಿ ದ್ದಲ್ಲಿ ಆ ಶಬ್ದಗಳಿಗೆ ಇನ್ನೆಲ್ಲಿ ಸ್ಥಾನ? "ಕೃತಿಯು ಪಲ್ಲವಿ ತೊಡಗಿ ಪೂರ್ಣಮಪ್ಪನ್ನಮೀ ಕೃತಿಯೊಳುತ್ಪ್ರೇಕ್ಷೆಯಿಲ್ಲುದೊಂದು ಪದವಿಲ್ಲ" ಎಂದು ಅವನೇ ತನ್ನ ಕಾವ್ಯದ ಘನತೆಯನ್ನು ಬಿತ್ತರಿಸಿದ್ದಾನೆ. ಅಲಂ ಕಾರಗಳನ್ನು ಹೆಚ್ಚು ತುಂಬಿದ್ದರೂ ಉದ್ದೇಶ ಪೂರ್ವಕವಾಗಿ ಕಷ್ಟದಿಂದ ಎಲ್ಲಿಯೂ ಜೋಡಿಸುವುದಿಲ್ಲ. ಅದು ಆತನ ನೈಸರ್ಗಿಕ ಗುಣವಾಗಿದೆ. ಶಬ್ದಾಲಂಕಾರಗಳನ್ನೂ ಬಲು ಜಾಣ್ಮೆಯಿಂದ ಬಳಸುತ್ತಾನೆ. ವೃತ್ಯನು ಪ್ರಾಸ, ಯಮಕಪ್ರಾಸಗಳನ್ನು ಇಡುವದರಲ್ಲಿ ಈತನದು ಎತ್ತಿದ ಕೈ.

'ಪರಮ ಸುಖವಾಸನಂ ವರಕಾಳಿದಾಸನಂ ।
ಕರದಾನಿ ಜಾಣನಂ ಶರಣನಹ ಬಾಣನಂ ।
ನಿರುಪಮ ವಿಚಾರನಂ ಗರುವ ಮಾಯೂರನಂ
ಪದ್ಮರಸನಂ ಸರಸನಂ ॥
ಹರಿಹರ ಕವೀಶನಂ ಗುರುಭಕ್ತಿಕೋಶನಂ ।
......... ... ...

ಇದಕ್ಕೆ ಇದೊಂದೇ ಉದಾಹರಣೆ ಸಾಕು. ಒಟ್ಟಿನಲ್ಲಿ ಈ ಕವಿಯು ಅಲಂಕಾರ ಸೌಂದರ್ಯ, ಅರ್ಥಗಾಂಭೀರ್ಯ, ಭಾವಮನೋಹರತೆ, ಪದಲಾಲಿತ್ಯ, ಸಂಧಿಬಂಧಗಳನ್ನು ಉಪಯೋಗಿಸುವದರಲ್ಲಿ ಮಾಘ ಕವಿ ಯನ್ನು ಸರಿಗಟ್ಟುತ್ತಾನೆ.

ಈತನು ತನ್ನ ಕಾವ್ಯಕ್ಕೆ ಉಪಯೋಗಿಸಿಕೊಂಡ ಛಂದಸ್ಸು ವಾರ್ಧಿಕ ಷಟ್ಪದಿ. ಇದು ಕೊನೆಯ ಷಟ್ಪದಿ. ಇದರಲ್ಲಿ ಮಾತ್ರಾಧಿಕ್ಯವಿರುವು ದರಿಂದ ಹೆಚ್ಚು ವಿಷಯಗಳನ್ನು ತುಂಬಲು ಅನುಕೂಲ. ಮತ್ತು ಷಟ್ಪದಿ ಕಾವ್ಯದ ಆದಿಪ್ರವರ್ತಕನಾದ ರಾಘವಾಂಕ ಕವಿಯು ಇದೇ

ಷಟ್ಪದಿಯಲ್ಲಿಯೇ ತನ್ನ ಕಾವ್ಯಗಳನ್ನು ವಿಶೇಷವಾಗಿ ಬರೆದಿರುವುದರಿಂದ ಈ ಕವಿಯೂ ಅದನ್ನೇ ಗ್ರಹಿಸಿರಬೇಕು. ಅಥವಾ ಮಿಗಿಲಾದ ಕತೆಯನ್ನು ಸಣ್ಣ ಕೃತಿಯಲ್ಲಿ ಅಡಗಿಸಬೇಕೆಂಬುದೇ ಈ ಕವಿಯ ಆಶಯವಿದ್ದಿರಬೇಕು. ಈ ವಾರ್ಧಿಕ ಷಟ್ಪದಿಯ ಓಟವು ಓದುಗರಿಗೆ ಭಾಮಿನಿ ಷಟ್ಪದಿಯಂತೆ ಸರಳವಾಗಿ ಓಡದಿದ್ದರೂ ಪ್ರತಿಭಾವಂತ ಕವಿಗಳಿಗೆ ಬಳಸಲು ತಕ್ಕುದಾಗಿದೆ; ತೆಕ್ಕೆಗೆ ನಿಲುಕುವಂತಹದಾಗಿದೆ. ಕವಿಯಾದರೂ ಇದರಲ್ಲಿ ತನ್ನ ತಕ್ಕ ವೈದುಷ್ಯವನ್ನೂ ಮಿಕ್ಕ ಪ್ರತಿಭಾ ಸಂಪತ್ತಿಯನ್ನೂ ಪ್ರಕಟಿಸಿದ್ದಾನೆ. ಏಳು ಸಾವಿರಕ್ಕಿಂತಲೂ ಹೆಚ್ಚು ಪದ್ಯಗಳುಳ್ಳ ವೀರಶೈವಾಮೃತ ಮಹಾ ಪುರಾಣವನ್ನೂ ಇದೇ ವಾರ್ಧಿಕದಲ್ಲಿಯೇ ಬರೆದು ತನ್ನ ಅಸಾಧಾರಣ ಕಾವ್ಯ ಶಕ್ತಿಯನ್ನೂ ಅಪ್ರತಿಮವಾದ ಪ್ರತಿಭೆಯನ್ನೂ ಮತ್ತು ವಾರ್ಧಿಕದಲ್ಲಿರುವ ತನ್ನ ಒಲುಮೆಯನ್ನೂ ಪ್ರಕಟಿಸಿದ್ದಾನೆ. ಉದ್ದಾಮ ಕವಿಯಾದ ಈತನಿಗೆ ಇದು ತಕ್ಕುದೇ ಎಂದು ಹೇಳಬೇಕು.

## ಕಾವ್ಯದ ಮಾಟ, ಕಥೆಯ ಓಟ.

ಈ ಕಾವ್ಯದಲ್ಲಿ ಒಟ್ಟು ೯ ಸಂಧಿಗಳೂ ಸೂಚನಾಪದ್ಯಸೇರಿ ೩೬೮ ಪದ್ಯಗಳೂ ಇವೆ. ಚಿಕ್ಕ ಕಾವ್ಯ. ಅದರಲ್ಲಿಯೂ ಪ್ರತಿಯೊಂದು ಸಂಧಿಯ ಮೊದಲಿಗೂ ಮಂಗಲವನ್ನು ಮಾಡದೆ ಕವಿಯು ಮುಂದಕ್ಕೆ ಸಾಗುವದಿಲ್ಲ. ಹಾಗಿದ್ದರೂ ಸಾಕು ಮಂಗಳ ಎಂದು ಬೇಸತ್ತು ತಲೆ ಜಾಡಿಸುವಂತಹ ಪ್ರಸಕ್ತಿಯನ್ನು ತಂದಿರುವದಿಲ್ಲ. ಕವಿಯು ಎಲ್ಲ ಮಂಗಳಗಳನ್ನೂ ಒಳ್ಳೇ ಜಾಣ್ಮೆಯಿಂದ ಕಟ್ಟಿದ್ದಾನೆ. ಪ್ರತಿಯೊಂದು ಮಂಗಲದಲ್ಲಿಯೂ ಕೆಲವು ಸಂಸ್ಕೃತ ನಾಟಕಕಾರರಂತೆ ಚಿತ್ರವಿಚಿತ್ರವಾಗಿ ವ್ಯಂಗ್ಯವನ್ನು ಬಳಸುತ್ತಾನೆ. ಯಾವುದೇ ಮಂಗಳವನ್ನು ಓದುವಾಗ ಕವಿಯು ಇನ್ನೊಂದು ಮಂಗಳವನ್ನೇಕೆ ಕಟ್ಟಲಿಲ್ಲ ಎಂದು ಆಶೆ ಹುಟ್ಟುತ್ತದೆ. ಉದಾಹರಣೆಗಾಗಿ:—

“ ಗಿರಿಜೆಯಮೊಗಂ ನೀಲ ಕುಟ್ಟಿಮದೊಳಂ ಪೊಳೆಯೆ।
ಸರಸಿಯೊಳ್ ಮೆರೆವ ತಾವರೆಯೆಂದು ಕೈ ನೀಡೆ।
ಶಿರವೆತ್ತಿ ಸಿಂಹಾಸ್ಯಗಣವರನ ಕಂಡೋಡಿವರ್ಪ ತಮ್ಮನ ನವಿಲಿಗೆ॥
ಉರುಗನಳ್ಕುತೆ ಸರಿಯೆ ಕಟ್ಟಳಿದು ಪೊಡೆಯೊಡೆದು।

ಸುರಿಯುಲುಂಡಲಿಗೆ ಬಂದಪ್ಪಿ ಹೊಟ್ಟೆಯ ಕಟ್ಟಿ ।
ಕರಿಮುಖನ ಮುದ್ದು ಬೇಡಲ್ಕೆ ಸುಂಡಲ ನೀಡೆ ನಗುವ
ಶಿವ ರಕ್ಷಿಸೆಮ್ಮ ॥

ಭಾವಚಿಂತಾರತ್ನದ ಕತೆಯ ಗಮನವು ಗಂಭೀರವಾಗಿದೆ. ಗಂಭೀರವಾದರೂ ಗಜಗಮನವಲ್ಲ. ಉಪಕಥೆಗಳನ್ನಾಗಲಿ ಉದ್ಯಾನ ವರ್ಣನೆಗಳನ್ನಾಗಲಿ ಬಹಳ ಮಿತವಾಗಿ ವರ್ಣಿಸಿ ಮುಗಿಸುತ್ತಾನೆ. ಮೂರನೇ ಸಂಧಿಯಲ್ಲಿ ಪರಮಾತ್ಮನ ಪಂಚವಿಂಶತಿ ಪದ್ಯಗಳಲ್ಲಿಯೇ ಪೂರೈಸಿದ್ದಾನೆ. ಇದು ಇವನ ಉಪಕತೆಗಳ ಮಿತ ವರ್ಣನೆಯ ಹೆಗ್ಗುರುತು. ಹೀಗೆಯೇ ಅಲ್ಲಲ್ಲಿ ಬರುವ ಆ ಆ ವರ್ಣನೆಗಳನ್ನು ಬಹಳ ಮಿತವಾಗಿ-ಹಿತವಾಗಿ ಬಣ್ಣಿಸುತ್ತ ಕತೆಯನ್ನು ಓಡಿಸಿಗೊಂಡು ಹೋಗುತ್ತಾನೆ. ಧಾರ್ಮಿಕ ವಿಚಾರಗಳಿಗೂ ಹೆಚ್ಚಿಗೆ ಅವಕಾಶವನ್ನು ಕೊಟ್ಟಿರುವುದಿಲ್ಲ. ನಾಲ್ಕನೇ ಸಂಧಿಯಲ್ಲಿ ಸತ್ಯೇಂದ್ರ ಚೋಳನ ಶಿವಪೂಜೆಯನ್ನು ವರ್ಣಿಸುವಾಗ ಹೆಚ್ಚಿಗೆ ವಿಸ್ತರಿಸದೆ ೩-೪ ಪದ್ಯಗಳಲ್ಲಿಯೇ ಮುಗಿಸಿದ್ದಾನೆ. ಒಂದೊಂದು ಪದ್ಯದಲ್ಲಿ ನಾಲ್ಕಾರು ಪದ್ಯಗಳಿಂದ ಹೇಳಿದರೂ ತೀರದಂತಹ ಅಪಾರವಾದ ಸಿದ್ಧಾಂತವನ್ನು ತುಂಬಿದ್ದಾನೆ

''ಚಾರುಸದ್ಯೋಜಾತ ವಾಮದೇವಂ ಮಹಾ ।
ಘೋರ ತತ್ಪುರುಷೇಶಾನದಿಂ ಧರೆಜಲವನಲವನಿಲ ।
ತಾರಾಧ್ವಮವರಿಂ ನಿವೃತ್ತಿ ಪ್ರತಿಷ್ಠಿ ವಿದ್ಯಾತಿ ಶಾಂತ್ಯಾತಿಕೆ ॥
ಕಾರಣದಿ ಕಪಿಲಾಸಿ ತಾರುಣಾಮಲ ಚಿತ್ರ ।
ಸಾರನಂದಾ ಭದ್ರೆ ಸುಮನೆ ಸುಸಿಲೆಯು ಸುರಭಿ ।
ಯೀರಮ್ಯಪಶುವಿಂ ವಿಭೂತಿ ಭಸಿತಂ ಭಸ್ಮವಾಕ್ಷ್ಯಾತಿ
ರಕ್ಷೆಯೆಂದು ॥

ಇದೊಂದು ಪದ್ಯದಲ್ಲಿಯೇ ಭಸ್ಮದ ಸ್ಥಾನ, ಕಲೆ, ಮಂತ್ರ, ವರ್ಣ, ವಸ್ತು, ಭೇದ ಮುಂತಾದ ಸರ್ವವನ್ನೂ ಏಕೀಕರಿಸಿದ ಕೌಶಲ್ಯವು ಈತನದೆ. ಉಳಿದ ಕವಿಗಳು ವಿಶೇಷವಾಗಿ ಉಳಿದ ವರ್ಣನೆಗಳಿಗೆ ಹೆಚ್ಚಾಗಿ ತಮ್ಮ ಕಾವ್ಯಗಳಲ್ಲಿ ಸ್ಥಾನಕೊಟ್ಟಂತೆ ಈತನು ಕೊಡುವುದಿಲ್ಲ. ಇದರಿಂದ ಈತನಿಗೆ ತನ್ನ ಉದ್ದೇಶವೇನು? ಉಪಕಥೆಗಳಿಗೆ, ಊರ ಕೇರಿಗಳ ವರ್ಣನೆಗೆ ಕೊಡಬೇಕಾದ ವೈಶಿಷ್ಟ್ಯವೆಷ್ಟು?

ಕೊಟ್ಟರೆ ಓದುಗರಿಗೆ ರುಚಿಸಬಹುದೇ? ಎಂಬುದನ್ನರಿತು ಕಾವ್ಯವನ್ನು ಬರೆದಿರುವನೆಂದು ತಿಳಿದು ಬರುತ್ತದೆ. ಕಾವ್ಯವನ್ನು ದೊಡ್ಡದಾದ ಹೊತ್ತಿಗೆಯನ್ನು ಮಾಡಬೇಕು; ಅದರಿಂದ ದೊಡ್ಡ ಪಂಡಿತನೆನಿಸಿಕೊಳ್ಳಬೇಕು; ಕಥೆಗೆ ಇಲ್ಲದ ಮೆರಗನ್ನು ತಂದು ತುಂಬಿ ವಿಸ್ತರಿಸಬೇಕು ಎಂಬ ಹಂಬಲಗಳು ಈ ಕವಿಗಿಲ್ಲವೆಂದು ಹೇಳಬಹುದು. ಈತನು ವಿವರಿಸಿ ವರ್ಣಿಸಬೇಕಾದ ಎಷ್ಟೋ ವಿಷಯಗಳನ್ನು ಸಂಕ್ಷೇಪಿಸಿ ಮೂಲ ಕಾವ್ಯಕ್ಕೆ ಸರಿಹೋಗುವಂತೆಯೂ ಓದುಗರ ಸ್ಫೂರ್ತಿಯು ಸ್ಫುರಿಸುವಂತೆಯೂ ಕಾವ್ಯವನ್ನು ನಿರ್ಮಿಸಿದ್ದಾನೆ. ಇದರಿಂದ ಕಥಾವಸ್ತುಗಳಲ್ಲಿ ಒಂದು ಅಚ್ಚುಕಟ್ಟು, ವರ್ಣನೆಯಲ್ಲಿ ಒಂದು ಮೆರಗು, ಕಥೆಯ ಓಟದಲ್ಲಿ ಒಂದು ಬೆಡಗು ಬಂದಿದೆ. ಈತನ ಕಾವ್ಯಕನ್ನಿಕೆಯ ಮಂದಗಮನವನ್ನೂ ಅಂದರೂಪವನ್ನೂ ಕಂಡು ಕಂಡು ಮೈಮರೆಯುತ್ತೇವೆ. ಕಥೆಯ ಅವಿಚ್ಛಿನ್ನಧಾರಾಂಬುಧಿಯಲ್ಲಿಯೇ ಮುಳುಗುತ್ತೇವೆ. ಓದುತ್ತ ಬಾಹ್ಯವನ್ನು ಮರೆತು ತಲ್ಲೀನವಾಗುವಂತೆ ಕವಿಯು ಒಳ್ಳೇ ಜಾಣತನದಿಂದ ತನ್ನ ಕಾವ್ಯವನ್ನು ಹೆಣೆದಿದ್ದಾನೆ.

(ಮುಂದೆ)

# ಜೈನ ಧರ್ಮ.

(ಲೇಖಕ:— ವೀರಪ್ಪ ಯಗಟಿ ಬಿ. ಏ. ಎಲ್. ಎಲ್. ಬಿ. ಹಾವೇರಿ)

**ಟೀಪು:**— ವೀರಶೈವ ಸಂಸ್ಕೃತಿ ಸಂಶೋಧನ ಕಾರ್ಯದಲ್ಲಿ ಕರ್ನಾಟಕದಲ್ಲಿ ಪ್ರಖ್ಯಾತಿ ಹೊಂದಿದ ಇತರ ಮತಗಳ ಸಾಮಾನ್ಯಜ್ಞಾನವಿರುವದು ಅವಶ್ಯವೆಂದು ಭಾವಿಸಿ ಈ ವಿಷಯಕ್ಕೆ ಪತ್ರಿಕೆಯಲ್ಲಿ ಸ್ಥಾನ ಕೊಟ್ಟಿದೆ. — ಸಂಪಾದಕ.

ಭರತಖಂಡದಲ್ಲಿ ಜೈನ ಧರ್ಮವು ವೀರಶೈವ ಧರ್ಮದಂತೆ ಒಂದು ವಿಶಿಷ್ಟ ಧರ್ಮವಾಗಿದೆ. ಇವೆರಡು ಧರ್ಮಗಳಲ್ಲಿ ಅಹಿಂಸೆ, ಆತ್ಮ, ನಿರ್ವಾಣ ಮುಂತಾದ ಕಲ್ಪನೆಗಳಲ್ಲಿ ಕೆಲವಂಶದಲ್ಲಿ ಸಾಮ್ಯವಿದ್ದರೂ ವೈಷಮ್ಯಗಳು ಅಷ್ಟೇ ಅಂಶದಲ್ಲಿ ಕಂಡುಬರುವವು. ವೀರಶೈವವು ಜಗತ್ತಿನ ಸೃಷ್ಟಿಗೆ ಕಾರಣವಾದ ಚೈತನ್ಯ ರೂಪವಾದ ಮೂಲವಸ್ತುವಿದೆ ಯೆಂದು ನಂಬುತ್ತದೆ. ಆದರೆ ಜೈನರು ಜಗತ್ತು ಜಡ ಪ್ರಕೃತಿಯಿಂದ ಉದ್ಭವವಾಗುತ್ತದೆಂದು ನಂಬುತ್ತಾರೆ. ಪ್ರಕೃತಿಯಲ್ಲಿ ಆತ್ಮವಿದೆಯೆಂತಲೂ ಹೀಗೆ ಅನೇಕ ಆತ್ಮಗಳಿರುವವೆಂತಲೂ ಜೈನರು ಹೇಳುತ್ತಾರೆ. ಆದರೆ ಮುಂದೆ ಆತ್ಮಗಳು ಮುಕ್ತವಾಗಿ ಅವುಗಳು ಒಂದೆಡೆಯಲ್ಲಿ ಏಕೀಭವಿಸುವವೆಂಬದನ್ನು ಹೇಳುವದಿಲ್ಲ. ಇದರಲ್ಲಿ ದೈವ ಪದ್ಧತಿಯು ನಾಸ್ತಿಕ ರೂಪವಾಗಿದೆ. ಯಾಕಂದರೆ ದೇವರಿಗೆ ಸೃಷ್ಟಿ ಕ್ರಿಯೆಯಿದೆಯೆಂದು ಜೈನ ಧರ್ಮವು ಒಪ್ಪುವದಿಲ್ಲ.

ಜೈನರು ಜಿನನ ಅನುಯಾಯಿಗಳು. ಕೊನೆಯ ತೀರ್ಥಂಕರನಾದ ವರ್ಧಮಾನ ಮಹಾವೀರನಿಗೆ ಈ ಜಿನ ಎಂಬ ಹೆಸರು ಕೊಡಲ್ಪಟ್ಟಿದೆ. ಇಂದ್ರಿಯಗಳನ್ನು ವಶಪಡಿಸಿಕೊಂಡು ಸಿದ್ಧರಾದವರಿಗೆಲ್ಲರಿಗೂ ಈ ಹೆಸರು ಸಾಮಾನ್ಯವಾಗಿ ಅನ್ವಯಿಸುತ್ತದೆ. ಬೌದ್ಧ ಧರ್ಮದಂತೆಯೇ ಇದು ಮುಖ್ಯವಾಗಿ ನೈತಿಕ ಧರ್ಮವಾಗಿದೆ. ಆದರೆ ತತ್ವದೃಷ್ಟಿಯಿಂದ ಬೌದ್ಧ ಧರ್ಮಕ್ಕೂ ಇದಕ್ಕೂ ಬಹಳ ಅಂತರವಿದೆ. ವರ್ಧಮಾನನು ಬುದ್ಧನಕಿಂತಲೂ ಹಿರಿಯನು. ಆದರೆ ಬುದ್ಧನ ಸಮಕಾಲಿಗನು. ಇವನು ಮಗಧ ದೇಶದ ಅಂದರೆ ಈಗಿನ ಬಿಹಾರದ ಕ್ಷತ್ರಿಯ ರಾಜನ ಎರಡನೆಯ ಮಗನು. ಈತನು ಕ್ರಿ. ಪೂ. ೫೯೯ರಲ್ಲಿ

ಹುಟ್ಟಿ ಕ್ರಿ. ಪೂ ೫೨೭ರಲ್ಲಿ ಮರಣಹೊಂದಿದನು. ಈತನು ೩೦ನೆಯ ವಯಸ್ಸಿನಲ್ಲಿ ಸನ್ಯಾಸಿಯಾಗಿ ೧೨ ವರ್ಷಗಳ ವರೆಗೆ ತಪೋನಿಷ್ಠನಾಗಿದ್ದನು. ಆಮೇಲೆ ಅವನಿಗ ಜಿನ, ಮಹಾವೀರ ಮುಂತಾದ ಹೆಸರುಗಳುಂಟಾದವು. ಆತನು ತನ್ನ ಹಿಂದೆ ಆಗಿಹೋದ ೨೩ ತೀರ್ಥಂಕರರ ತತ್ವಗಳನ್ನು ಬೋಧಿಸಲುಪಕ್ರಮಿಸಿದನು. ಅನೇಕ ಶತಮಾನಗಳ ಹಿಂದೆ ಇದ್ದ ಋಷಭನಿಂದ ತಮ್ಮ ಧರ್ಮವು ಸ್ಥಾಪಿತವಾಯಿತೆಂದು ಜೈನರ ನಂಬಿಗೆಯಿದೆ. ಮೊದಲನೆಯ ತೀರ್ಥಂಕರನಾದ ಋಷಭದೇವನನ್ನು ಕ್ರಿ. ಪೂ. ೧ನೆಯ ಶತಮಾನದಲ್ಲಿ ಪೂಜಿಸುವ ಜನರಿದ್ದರೆಂಬುವದಕ್ಕೆ ಆಧಾರಗಳುಂಟು. ಜೈನಧರ್ಮವು ವರ್ಧಮಾನ ಅಥವಾ ಪಾರ್ಶ್ವನಾಥರಿಗಿಂತ ಪೂರ್ವದಲ್ಲಿತ್ತೆಂಬದು ನಿಸ್ಸಂದೇಹವಾಗಿದೆ. ಯಜುರ್ವೇದದಲ್ಲಿ ಋಷಭ, ಅಜಿತನಾಥ, ಅರಿಷ್ಟನೇಮಿ ಈ ಮೂವರ ಹೆಸರುಗಳು ನಿರ್ದಿಷ್ಟವಾಗಿವೆ. ಋಷಭನಿಂದ ಜೈನಧರ್ಮವು ಸ್ಥಾಪನೆಯಾಯಿತೆಂಬ ಸಂಗತಿಯನ್ನು ಭಾಗವತ ಪುರಾಣವು ಹೇಳುತ್ತದೆ.

ವರ್ಧಮಾನನ ಅನುಯಾಯಿಗಳು ಮುಖ್ಯವಾಗಿ ಕ್ಷತ್ರಿಯರೇ ಆಗಿದ್ದರು. ಈತನು ದಿಗಂಬರ ಪಂಥಿಯು. ವಸ್ತ್ರ ಧರಿಸುವದು ಅವಶ್ಯವೆಂದು ಹೇಳುವ ಪಂಥವೂ ಉಂಟಾಯಿತು. ಆದ್ದರಿಂದ ಕ್ರಿ. ಶ. ೮೦ ರ ಸುಮಾರಕ್ಕೆ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಪಂಥಗಳು ಪ್ರಕಟವಾದವು. ದಿಗಂಬರರು ಸಿದ್ಧಪುರುಷನು ಅನ್ನವಸ್ತ್ರ, ಸೊತ್ತುಗಳಿಲ್ಲದವನೆಂತಲೂ ಸೊತ್ತುಗಳಿದ್ದವನಿಗೆ ಮೋಕ್ಷವೇ ಲಭಿಸದೆಂತಲೂ ಹೇಳುತ್ತಾರೆ. ಕ್ರಿ. ಪೂ. ೪ನೇ ಶತಮಾನದಲ್ಲಿ ಪಾಟಲಿಪುತ್ರದಲ್ಲಿ ಧರ್ಮಸಭೆಯು ನಡೆದು ೪೪ ಧರ್ಮಗ್ರಂಥಗಳನ್ನು ಮಾನ್ಯಮಾಡಲಾಯಿತು. ಇವು ಅರ್ಧಮಾಗಧಿ ಭಾಷೆಯಲ್ಲಿದ್ದವು. ಸಂಸ್ಕೃತವು ಕ್ರಿಸ್ತಶಕ ಪ್ರಾರಂಭವಾದ ನಂತರ ಜೈನರ ಅಭಿರುಚಿಗೆ ಪ್ರಾಪ್ತವಾಯಿತು.

ಜೈನರು ಬೌದ್ಧರಂತೆಯೇ ಚಿನ್ಮಯವಾದ ಮೂಲವಸ್ತುವಿನ ಅಸ್ತಿತ್ವವನ್ನು ನಂಬುವದಿಲ್ಲ. ದೇವಾಂಶರಾದ ಸಾಧುಗಳನ್ನು ಪೂಜಿಸುತ್ತಾರೆ, ಬ್ರಹ್ಮಚಾರಿಗಳಾದ ಬೋಧಕರನ್ನು ಪೋಷಿಸುತ್ತಾರೆ. ಮತ್ತು ಯಾವ ಕಾರಣದಿಂದಲೂ ಪ್ರಾಣಹಿಂಸೆ ಮಾಡುವದು ಪಾಪಕರವೆಂದು ತಿಳಿಯುತ್ತಾರೆ. ವೇದಗಳನ್ನು ಮಾನ್ಯಮಾಡುವದಿಲ್ಲ. ಬಹುತೇಕವಾಗಿ ಪ್ರತಿಯೊಂದು ವಸ್ತುವಿನಲ್ಲಿ ಆತ್ಮವಿರುವದೆಂದು ಜೈನರು ನಂಬುವದ

೧ಂದ ಜೈನ ಧರ್ಮವು ಬೌದ್ಧ ಧರ್ಮಕ್ಕಿಂತ ಪುರಾತನವಾದುದೆಂದು ಕೊಲಿಬ್ರೂಕ್ ಎಂಬವರು ಹೇಳುತ್ತಾರೆ. ಜೈನರ ಜ್ಞಾನ ಮತ್ತು ಆತ್ಮದ ಸಿದ್ಧಾಂತಗಳು ಬೌದ್ಧರ ಸಿದ್ಧಾಂತಗಳಿಗಿಂತ ತೀರ ಭಿನ್ನವಾಗಿರುವದರಿಂದ ಜೈನ ಬೌದ್ಧ ಧರ್ಮಗಳು ಒಂದಕ್ಕೊಂದು ಸಂಬಂಧವಿಲ್ಲದವುಗಳಾಗಿವೆ. ಜೈನ ಮತ್ತು ಸಾಂಖ್ಯ ತತ್ವಗಳಲ್ಲಿ ಕೆಲವು ಸಾಮ್ಯವಿದೆ. ಇವೆರಡೂ ಪ್ರಕೃತಿಯು ಅವಿನಾಶಿಯಾದದ್ದೆಂತಲೂ ಜಗತ್ತು ಶಾಶ್ವತವಾದದ್ದೆಂತಲೂ ನಂಬುತ್ತವೆ. ಸಾಂಖ್ಯ ಶಾಸ್ತ್ರವು ಜಗತ್ತು ಮತ್ತು ಜೀವಗಳು ಪುರುಷ ಮತ್ತು ಪ್ರಕೃತಿಯಿಂದ ಉತ್ಪತ್ತಿಯಾಗುವವೆಂದು ಹೇಳುತ್ತದೆ. ಆದರೆ ಜೈನ ಶಾಸ್ತ್ರವು ಅವು ಮೂಲ ಪ್ರಕೃತಿಯಿಂದ ಉತ್ಪತ್ತಿಯಾಗುವವೆಂದು ಹೇಳುತ್ತದೆ. ಜೈನ ಶಾಸ್ತ್ರದಲ್ಲಿ ಆತ್ಮವು ಕ್ರಿಯಾವಿಶಿಷ್ಟವಾಗಿದೆ. ಸಾಂಖ್ಯವಲ್ಲಿ ಆತ್ಮವು ಕ್ರಿಯಾರಹಿತವಾಗಿದೆ. ಯಾವ ದೇವರ ತೃಪ್ತಿಗಾಗಿ ಯಜ್ಞಗಳು ಮಾಡಲ್ಪಡುವವೋ ಅಂತಹ ದೇವರೇ ಇರುವದಿಲ್ಲವೆಂದು ಜೈನರು ಹೇಳುವರು. ಮನುಷ್ಯನ ಕಷ್ಟನಷ್ಟಗಳಿಗೆ ದೇವರು ಹೊಣೆಗಾರನಲ್ಲ. ತಪಸ್ಸಿನಿಂದ ಕಷ್ಟಗಳನ್ನು ನೀಗಬಹುದು. ನಾವು ಪರಿಪೂರ್ಣರಾದಾಗ ಪುನರ್ಜನ್ಮದಿಂದ ನಮಗೆ ಬಿಡುಗಡೆಯಾಗುವದು. ಜೈನರು ತಮ್ಮ ಸಿದ್ಧಾಂತವನ್ನು ತರ್ಕ ಮತ್ತು ಅನುಭವಗಳಿಂದ ಸಿದ್ಧಮಾಡುತ್ತಾರೆ.

ಜೈನರು ಐದು ವಿಧವಾದ ಜ್ಞಾನವಿದೆಯೆಂದು ಹೇಳುತ್ತಾರೆ. (೧) ಮತಿ (೨) ಶ್ರುತಿ (೩) ಅವಧಿ (೪) ಮನಃಪರ್ಯಾಯ (೫) ಕೇವಲ. ಮತಿಯೆಂದರೆ ಇಂದ್ರಿಯಕ್ಕೆ ಗೋಚರವಾದ ಜ್ಞಾನವು. ಶ್ರುತಿಯು ಸೊನ್ನೆ, ಗುರುತು, ಅಥವಾ ಶಬ್ದಗಳಿಂದ ಉದಯವಾಗುವದು. ಇದು ವರ್ಣನೆಯಿಂದ ಜ್ಞಾನವನ್ನುಂಟು ಮಾಡುವದು. ಅವಧಿಯು ವಸ್ತುಗಳ ಜ್ಞಾನವನ್ನು ದೂರಸ್ಥಳದಿಂದ ಮತ್ತು ದೀರ್ಘಕಾಲದಿಂದ ಸಹ ಅಪರೋಕ್ಷವಾಗಿ ಕೊಡತಕ್ಕದ್ದಾಗಿದೆ. ಮನಃಪರ್ಯಾಯವು ಎರಡನೆಯವರ ವಿಚಾರಗಳನ್ನು ತಿಳಿದುಕೊಳ್ಳುವ ಶಕ್ತಿಯು. ಕೇವಲ ಅಥವಾ ಪೂರ್ಣಜ್ಞಾನದಲ್ಲಿ ಎಲ್ಲ ವಸ್ತುಗಳೂ ಅವುಗಳ ಬದಲಾವಣೆಗಳೂ ಸಮಾವೇಶವಾಗುವವು. ಕೇವಲ ಜ್ಞಾನವು ದೇಶ, ಕಾಲಗಳಿಂದ ಅಭಾಧಿತವಾಗಿದೆ. ಈ ಜ್ಞಾನವು ಇಂದ್ರಿಯಗಳ ಸಹಾಯವಿಲ್ಲದೆ ಉತ್ಪನ್ನವಾಗುವದು. ಮತ್ತು ಶುದ್ಧಾತ್ಮವುಳ್ಳವರಿಗೇನೇ ಈ ಜ್ಞಾನವು ಲಭಿ

ಸುವದು. ಮೊದಲಿನ ಮೂರು ಜ್ಞಾನಗಳು ಕೊರತೆಗಳುಳ್ಳವು. ಕಡೆಯ ಎರಡು ಜ್ಞಾನಗಳು ಪರಿಪೂರ್ಣವಾಗಿದೆ.

ಜ್ಞಾನದ ಸತ್ಯವು ವ್ಯವಹಾರದ ಉಪಯುಕ್ತತೆಯಲ್ಲಿದೆ. ಒಳ್ಳೇದನ್ನು ದೊರಕಿಸುವದಕ್ಕೆ ಮತ್ತು ಕೆಟ್ಟದ್ದನ್ನು ತಪ್ಪಿಸುವದಕ್ಕೆ ಯಾವದು ನಮಗೆ ಸಹಾಯವಾಗುವದೋ ಅದೇ ಸತ್ಯಜ್ಞಾನವು. ಸತ್ಯವಾದ ಜ್ಞಾನವು ವಸ್ತುಗಳ ನಿಜವಾದ ಸ್ವರೂಪವನ್ನು ತೋರಿಸುತ್ತದೆ. ಅಸತ್ಯವಾದ ಜ್ಞಾನವು ಮಿಥ್ಯವಾದ ವಸ್ತುಗಳನ್ನು ತೋರಿಸುತ್ತದೆ. ನಾವು ಹಗ್ಗವನ್ನು ಹಾವೆಂದು ಭಾವಿಸಿದಾಗ ಇಲ್ಲದ ವಸ್ತುವಾದ ಹಾವನ್ನು ಕಲ್ಪಿಸುವದರಲ್ಲಿ ನಮ್ಮ ತಪ್ಪು ಕಂಡುಬರುವದು. ಅಸತ್ಯ ಜ್ಞಾನವು ವಿರೋಧಾಭಾಸಕ್ಕೆ ಆಸ್ಪದವಾಗಿದೆ. ಜ್ಞಾನವು ಸ್ವಯಂ ಪ್ರಕಾಶವಾದಾಗ (ಪ್ರತ್ಯಕ್ಷವೆಂದೂ) ಮತ್ತೊಂದು ವಿಧವಾದ ಜ್ಞಾನದ ಸಹಾಯದಿಂದ ಪ್ರಕಟವಾದಾಗ (ಪರೋಕ್ಷವೆಂದೂ) ಕರೆಯಲ್ಪಡುವದು. ಮತಿ ಮತ್ತು ಶ್ರುತಿಗಳು ಪರೋಕ್ಷವಾಗಿವೆ. ಉಳಿದವುಗಳು ಪ್ರತ್ಯಕ್ಷವಾಗಿವೆ. ಮತಿಯು ಇಂದ್ರಿಯ ಮನಸುಗಳಿಂದ ಹುಟ್ಟುವದರಿಂದ ಅದು ಪರೋಕ್ಷವಾಗಿದೆ. ವಿಷಯಜ್ಞಾನವು ಅಥವಾ ದರ್ಶನವು ನಾಲ್ಕು ವಿಧವಾಗಿದೆ. (೧) ನೋಟದಿಂದಾಗುವ ದರ್ಶನ (೨) ನೋಟದ ಇಂದ್ರಿಯದಿಂದಾಗದ ದರ್ಶನ (೩) ಅವಧಿಯ ಮುಖಾಂತರ ಆಗುವ ದರ್ಶನ (೪) ಕೇವಲದ ಮುಖಾಂತರ ಆಗುವ ದರ್ಶನ. ಇದು ಎಲ್ಲ ಸತ್ಯವನ್ನು ಗ್ರಹಿಸುವಂತಹದು.

ಚೇತನವು ಜೀವದ ಮುಖ್ಯ ಸತ್ವವು. ದರ್ಶನ ಮತ್ತು ಜ್ಞಾನಗಳು ಚೇತನದ ಎರಡು ಸ್ವರೂಪಗಳಾಗಿವೆ. ವಸ್ತುಗಳ ವೈಶಿಷ್ಟ್ಯವನ್ನು ಬಿಟ್ಟು ಸಾಮಾನ್ಯ ಗುಣಗಳನ್ನು ತಿಳಿದುಕೊಳ್ಳುವದು ದರ್ಶನವು ಜೀವಚೈತನ್ಯವು ಯಾವಾಗಲೂ ಕ್ರಿಯಾವಿಶಿಷ್ಟವಾಗಿದೆ. ಅದು ತನ್ನ ಮತ್ತು ವಸ್ತುಗಳ ಸ್ವರೂಪಗಳನ್ನು ಪ್ರಕಟಿಸುವದು. ಒಂದು ವಸ್ತುವನ್ನು ಅರಿದಾಗ ಆತ್ಮವು ತನ್ನನ್ನು ಏಕಕಾಲದಲ್ಲಿ ಅರಿತುಕೊಳ್ಳುವದು. ಜ್ಞಾನಿಯು, ಜ್ಞೇಯ (ಜ್ಞಾನದ ವಿಷಯ) ಮತ್ತು ಜ್ಞಾನಗಳು ಒಂದಕ್ಕೊಂದು ಸಂಬಂಧವುಳ್ಳವುಗಳಾಗಿವೆ. ಜ್ಞಾನವಿಲ್ಲದ ಜೀವಗಳಿಲ್ಲ. ಆತ್ಮವಿಲ್ಲದೆ ಜ್ಞಾನವಿರುವದು ಶಕ್ಯವಿಲ್ಲ. ಆತ್ಮವು ಪೂರ್ಣ

ಸ್ಥಿತಿಯಲ್ಲಿರುವಾಗ ಶುದ್ಧ ಜ್ಞಾನ ಪತ್ತು ದರ್ಶನಗಳ ಸ್ವರೂಪವಾಗಿರುವದು. ಪೂರ್ಣಜ್ಞಾನವು ಸಂಶಯ, ವಿಮೋಹ, ಮತ್ತು ವಿಭ್ರಮ ರಹಿತವಾಗಿರುವದು. ಆತ್ಮದಲ್ಲಿಯೇ ಎಲ್ಲ ಜ್ಞಾನವಿದೆ. ಆವರಣಗಳು ತೆರೆದಾಗ ಜ್ಞಾನವು ಪ್ರಕಟವಾಗುವದು. ಜ್ಞಾನಪ್ರಕಾಶಕ್ಕೆ ಕ್ರೋಧ, ಮೋಹಗಳು ಪ್ರತಿಬಂಧಕವಾಗಿವೆ. ಕ್ರೋಧ ಮೋಹಗಳು ಆತ್ಮವನ್ನು ಪ್ರಪಂಚದ ವಿಷಯದಲ್ಲಿ ತಳ್ಳುವವು. ಆತ್ಮಕ್ಕೆ ಪ್ರಕೃತಿಯು ಅಡ್ಡಬಂದಾಗ ಆತ್ಮವು ಭೂತ, ಭವಿಷ್ಯ, ವರ್ತಮಾನಗಳ ಪೂರ್ಣಜ್ಞಾನವನ್ನು ಹೊಂದುವದು. ಆತ್ಮಗಳು ಬುದ್ಧಿಯುಕ್ತವಾದ ವಸ್ತುಗಳು. ಪ್ರಕೃತಿಯೊಡನೆ ಆತ್ಮಗಳ ಹೆಚ್ಚುಕಡಿಮೆ ಸಂಬಂಧದ ಮೂಲಕ ಆತ್ಮಗಳಲ್ಲಿ ಹೆಚ್ಚುಕಡಿಮೆ ಬುದ್ಧಿಪ್ರಮಾಣವು ಕಂಡುಬರುತ್ತದೆ. ಜ್ಞಾನವು ಎರಡು ವಿಧವಾಗಿದೆ. (೧) ಪ್ರಮಾಣ ಅಂದರೆ ವಸ್ತುವು ಸ್ವಾಭಾವಿಕವಾಗಿರುವ ಜ್ಞಾನವು (೨) ನಯ—ವಸ್ತುವು ಇನ್ನೊಂದು ವಸ್ತುವಿನ ಸಂಬಂಧದಲ್ಲಿರುವ ಜ್ಞಾನವು. ಒಂದು ದೃಷ್ಟಿಯಿಂದ ನಿಜವಿರುವದು ಮತ್ತೊಂದು ದೃಷ್ಟಿಯಿಂದ ನಿಜವಿರದೆ ಇರಬಹುದು. ಸೂರ್ಯನು ಭೂಮಿಯ ಸುತ್ತಲೂ ತಿರುಗುವನೆಂಬದು ಒಂದು ಅಭಿಪ್ರಾಯದ ಪ್ರಕಾರ ನಿಜವಿದ್ದರೆ ಭೂಮಿಯು ಸೂರ್ಯನ ಸುತ್ತಲೂ ತಿರುಗುವದೆಂಬದು ಮತ್ತೊಂದು ಅಭಿಪ್ರಾಯದ ಪ್ರಕಾರ ನಿಜವಿರಬಹುದು. ಸತ್ಯವು ಸಂಬಂಧಾತ್ಮಕವೆಂದು (*Relative*) ಜೈನ ಧರ್ಮದ ಹೇಳಿಕೆಯು.

(ಮುಂದೆ)

---

# ಸಂಗೀತದಲ್ಲಿ ಶಿವಶರಣರ ವಚನಗಳು.

(ಲೇ:— ಶ್ರೀ. ಪರಪ್ಪ ಪಾಟೀಲ ಸಂಗೀತ ಶಿಕ್ಷಕರು ಶ್ರೀ ಸಿದ್ಧೇಶ್ವರ
ಹೈಸ್ಕೂಲು ವಿಜಾಪುರ.)

(ಸಂಪುಟ ೧೩, ಸಂಚಿಕೆ ೪, ಪುಟ ೧೫೫ ರಿಂದ ಮುಂದೆ ಸಾಗಿದ್ದು.)

---

೪೪

ರಾಗಃ— ಭೀಮ ಪಲಾಸ ತಾಲಃ— ಏಕತಾಲ

(ಮೋಹನ ಶ್ಯಾಮ ಶೋಭನಾ...ಎಂಬಂತೆ)

ಆಡಿದರೇನು ಹಾಡಿದರೇನು ।
ಓದಿದರೇನು ತ್ರಿವಿಧದಾಸೋಹವಿಲ್ಲದನ್ನಕ್ಕ ॥ಪಲ್ಲ॥

ಆಡದೇ ನವಿಲು ಹಾಡದೇ ತಂತಿ ।
ಓದದೇ ಗಿಣಿ ।
ಭಕ್ತಿಯಿಲ್ಲದವರ ನೊಲ್ಲ ।
ಕೂಡಲಸಂಗಮದೇವ ॥೧॥

[ಬಸವಣ್ಣ]

೪೫

ರಾಗಃ— ಮುಲ್ತಾನಿ ತಾಲಃ— ತ್ರಿತಾಲ
(ಹಮಸೇ ತುಮರಾರ ಕರೋಂಗಿರೆ...ಎಂಬಂತೆ)

ಎನ್ನ ಮಾಯದ ಮದವ ಮುರಿಯಯ್ಯ ।
ಎನ್ನ ಕಾಯದ ಕಳವಳವ ಕೆಡಿಸಯ್ಯ ।
ಎನ್ನ ಜೀವದ ಜಂಜಡವ ಬಿಡಿಸಯ್ಯ ॥ಪಲ್ಲ॥

ಎನ್ನ ದೇವ । ಚೆನ್ನಮಲ್ಲಿಕಾರ್ಜುನಯ್ಯ ।
ಎನ್ನ ಸುತ್ತಿದ ಮಾಯಾ ಪ್ರಪಂಚವ ।
ಬಿಡಿಸಾ ನಿಮ್ಮ ಧರ್ಮ ॥೧॥

[ಅಕ್ಕಮಹಾದೇವಿ]

೪೬

ರಾಗಃ— ಮಿಶ್ರಪಹಾಡಿ ತಾಲಃ— ಕವಾಲಿ

(ಹಾಸತ ನಾಚತ ಜಾವು... ಎಂಬಂತೆ)

ತನು ಬತ್ತಲೆ ಇದ್ದರೇನಯ್ಯ ।
ಮನ ಶುಚಿಯಾಗದನ್ನಕ್ಕರ ॥ಪ॥

ಮಂಡೆ ಬೋಳಾದಡೇನು ।
ಭಾವ ಬಯಲಾಗದನ್ನಕ್ಕರ ॥
ಭಸ್ಮವ-ಹೂಸಿದಡೇನು-ಕರಣಾದಿ
ಗುಣಂಗಳನೊತ್ತಿ ।
ಗುಣಂಗಳನೊತ್ತಿ ಮೆಟ್ಟಿ ಸುಡದನ್ನಕ್ಕರ ॥
ಇಂತು ಆಶೆಯ-ವೇಷದ ಭಾಷೆಗೆ ।
ಗುಹೇಶ್ವರ ಸಾಕ್ಷಿಯಾಗಿ-ಛೀ ಎಂಬೆನು ।
ಕಾಣಾ ಸಂಗನಬಸವಣ್ಣ ॥೧॥

[ಬಾಹೂರ ಬೊಮ್ಮಣ್ಣ]

೪೭

ರಾಗಃ— ಕೇದಾರ ತಾಲಃ— ತ್ರಿತಾಲ

(ಮಾರಹರಾತಾ... ಎಂಬಂತೆ)

ನಿಷ್ಠೆಯುಳ್ಳಾತಂಗೆ । ನಿತ್ಯನೇಮದ ಹಂಗೇಕೆ ।
ಸತ್ಯವುಳ್ಳಾತಂಗೆ । ತತ್ವ ವಿಚಾರದ ಹಂಗೇಕೆ ॥ಪಲ್ಲ॥

ಮನ ಶುದ್ಧವುಳ್ಳಾತಂಗೆ । ಮಂತ್ರದ ಹಂಗೇಕೆ ।
ಅರಿವುಳ್ಳಾತಂಗೆ । ಅಗ್ಗವಣಿಯ ಹಂಗೇಕೆ ॥೧॥

ಭಾವ ಶುದ್ಧವುಳ್ಳಾತಂಗೆ । ಹೂವಿನ ಹಂಗೇಕೆ ।
ಕೂಡಲ ಚನ್ನಸಂಗಯ್ಯ ನಿಮ್ಮನರಿದಾತಂಗೆ ನಿಮ್ಮ
ಹಂಗೇಕೆ ॥೨॥

[ಚನ್ನಬಸವಣ್ಣ]

೪೮

ರಾಗಃ — ಸೊಹನಿ ತಾಲಃ — ತ್ರಿತಾಲ

(ಸಾವರೊ ಚರಾವತ... ಎಂಬಂತೆ)

ಮುಗಿಲ ಮರೆಯ ಸೂರ್ಯನಂತೆ ।
ನೆಲದ ಮರೆಯ ನಿಧಾನದಂತೆ ।
ಒರೆಯ ಮರೆಯ ಅಲಗಿನಂತೆ ॥ಪಲ್ಲ॥

ಹಣ್ಣಿನೊಳಗಣ ರಸದಂತೆ ।
ಶರಣ ಶರೀರವ ಮರೆಗೊಂಡು ॥೧॥

ಪರಮಪಾವನ ಮೂರ್ತಿ ಪರಾಪರ ತಾನು ।
ತಾನಾಗಿರ್ದುದನೇನೆಂಬೆನಯ್ಯ ॥೨॥

ಮಹಾಲಿಂಗ ಗುರು ಶಿವ ।
ಸಿದ್ಧೇಶ್ವರ ಪ್ರಭುವೇ ॥೩॥

[ತೋಂಟದ ಸಿದ್ಧಲಿಂಗ]

೪೯

ರಾಗಃ — ಬಿಹಾಗ ತಾಲಃ — ತ್ರಿತಾಲ

ಹುತ್ತದ ಮೇಲಣ । ರಜ್ಜು ಮುಟ್ಟಿದರೆ ।
ಸಾವರು ಶಂಕಿತ । ರಾದವರು ॥ಪಲ್ಲ॥

ಸರ್ಪ ದಷ್ಟವಾದರೆಯೂ ।
ಸಾಯರು ನಿಶ್ಶಂಕಿತರಾದವರು ॥೧॥

ಕೂಡಲಸಂಗಮದೇವ ಶಂಕಿತಂಗೆ ।
ಪ್ರಸಾದ ಸಿಂಗಿಕಾಳಕೂಟ ವಿಷವು ॥೨॥

[ಬಸವಣ್ಣ]

೫೦

ರಾಗಃ— ಮಿಶ್ರಪಹಾಡಿ  ತಾಲಃ— ಕಪಿ

ಹರನೀವ । ಕಾಲಕ್ಕೆ ಸಿರಿಯು । ಬೆನ್ನಲಿ ಬಕ್ಕು ।
ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯ
ನೆರೆಯದ ವಸ್ತು ನೆರೆವುದು ನೋಡಯ್ಯ ॥ಪಲ್ಲ॥

ಅರಸು ಪರಿವಾರ ಕೈವಾರ ನೋಡಯ್ಯ ।
ಪರಮ ನಿರಂಜನನು ಮರೆವ ಕಾಲಕ್ಕೆ ।
ತುಂಬಿದ ಹರವಿಯು । ಕಲ್ಲು ಕೊಂಡಂತೆ ।
ಕೂಡಲ । ಸಂಗಮದೇವಾ ॥೧॥

[ಬಸವಣ್ಣ]

೫೧

ರಾಗಃ— ಭೈರವಿ  ತಾಲಃ— ದಾದರಾ

(ರಚ್ಯಾ ಪ್ರಭುತೂನೆ ಎಂಬಂತೆ)

ಚಕೋರಂಗೆ ಚಂದ್ರಮನ । ಬೆಳಗಿನ ಚಿಂತೆ ।
ಅಂಬುಜಕ್ಕೆ ಭಾನುವಿನ । ಉದಯದ ಚಿಂತೆ ॥ಪಲ್ಲ॥

ಭ್ರಮರಂಗೆ ಪರಿಮಳದ । ಬಂಡುಂಬ ಚಿಂತೆ ।
ಎನಗೆ ನಮ್ಮ ಕೂಡಲಸಂಗಮ । ದೇವರ ನೆನೆವ ಚಿಂತೆ ॥೧॥

[ಬಸವಣ್ಣ]

ಸಂಗೀತರಸಂ ರಂಗಂಬೊಕ್ಕುದು
ಸಂಗಡಿಸಿದ ಕಡು ಸೊಗಸಂ ಮಿಕ್ಕುದು
ಆಡದ ಮುನ್ನಡ್ಡೈಸಲ್ತೊಡಗಿತು
ನೋಡದ ಮುನ್ನವೆ ಸೊಗಯಿಸತೊಡಗಿತು
ನೋಡುವವರ ಮನಮುಂ ಜವನಿಕೆಯೊಳ್
ನಾಡೆ ಜಗಳವಾಡುತ್ತಿರೆ ಸಭೆಯೊಳ್

ದಿಧಿಕಾರವನಃಗುಳಲ್ಮೃದ್ದಳೆಗಳ್
ಸುಧೆಯಂ ಸೂಸುತ್ತಿರಲಾವುಜಗಳ್
ಸುಗತಿಯನುಗುಳುತ್ತಿರೆ ಕಹಳೆಗಳುಂ
ಸೊಗಸಂ ಸೊಂಪಿಸುತಿರೆ ಕರಡೆಗಳುಂ
ಕೈಸಾಳಂ ಸನ್ನೆಯೊಳೊತ್ತುತ್ತಿರೆ
ದೇಸಾಳಂ ನುಡಿಯೊಳೆ ಬೆಳೆವುತ್ತಿರೆ
ತಾಳಂ ನರ್ತನಮಂ ಕರೆವುತ್ತಿರೆ
ಮೇಳವಣೆಗೆ ಶಬ್ದಂ ಕೂಡುತ್ತಿರೆ
ಬಿಂಕದ ಕಾಳಾಸಂ ತುಳ್ಕಾಡಲ್
ಭೊಂಕನೆ ಮುಂದಣ ಜವನಿಕೆಯೋಡಲ್

ಹೊಗೆ ತಗ್ಗಿದ ಹುತಹವನಂತಿರ್ದಂ
ಮುಗಿಲೋಸರಿಸಿದ ರವಿಯಂತಿರ್ದಂ
ಛಾಯೆಯುಡಂಗಿದ ಜ್ಯೋತಿಯೊಲಿರ್ದಂ
ಮಾಯೆಯುಡಂಗಿದ ಹರನಂತಿರ್ದಂ
ಇರಲೊಪ್ಪಿತು ಭೃಂಗಿಯ ಶೃಂಗಾರಂ
ಸಿರಮಧ್ಯದ ಲಿಂಗದ ವಿಸ್ತಾರಂ
ಭಾಳಂ ತೀವಿದ ಭಸಿತದ ತಿಳಕಂ
ತಾಳಕ್ಕೊಲೆದಾಡುವ ಕೈಚಳಕಂ
ಫಣಿಕುಂಡಲ ಮುತ್ತಿನ ಹಾರಂಗಳ್
ಮಣಿಖಚಿತದ ರತ್ನದ ಮುದ್ರಿಕೆಗಳ್
ಕೆಯ್ಯೂರಂ ಹೊಸ ವಜ್ರದ ಕಂಕಣ
ಒಯ್ಯಾರಂ ಮಿಗೆ ಗೆಜ್ಜೆಯ ಚಲ್ಲಣ
ವೆಸೆಯಲ್ ಸರ್ವಾಂಗದ ಹೊಸ ಭಸಿತಂ

ಮಸಗಲ್ ಕಾಲ್ಗೊಡರು ಝುಣ ಝುಣಿತಂ
ಕೆಯ್ಯೊಳಗೊಪ್ಪಲ್ ನರ್ತನ ದಂಡಂ
ಮೆಯ್ಯೊಳ್ ಹೊಳೆಯಲ್ ಗತಿಗಳ ತಂಡಂ
ಮೊಳೆಯಲ್ ಸರ್ವಾಂಗದೊಳೆ ಸುಗತಿಗಳ್
ಬೆಳೆಯಲ್ ತ್ರಿಭಂಗಿಗೊಂಡಾಕೃತಿಗಳ್
ಮುಂದುವರಿಯೆ ಮೆಚ್ಚುಗಳೋಲಗದೊಳ್
ಸಂದಣಿಸಲ್ಕಾಕುಂಗಳ್ಮುಖದೊಳ್
ಕಡೆಗಂಗಳ ಕೊನೆಯೊಳ್ಮೈಳ್ಸಿಸಲ್
ನಿಡುವುರ್ವಿನ ತುದಿಯೊಳ್ಮೈಳ್ಸಿಸಲ್
ಕರತಳದಿಂ ಬಹು ಗತಿಗಳ ಸೂಸುತೆ
ಚರಣತಳದಿ ಹೊಸ ತಾಳಂಗುಟ್ಟುತೆ
ತಡವಿ ತಡವಿಯಾಡುತೆ ಹಿಮೆ ಟ್ಟುತೆ
ಕಡು ಸೊಗಸಂ ಕಾಳಾಸದಿ ತೋರುತೆ
ನಡೆದು ನಡೆದು ಲಾಗಿನಲೋಲಾಡುತೆ
ತಡೆದು ತಡೆದು ತೂಗುತೆ ಲೋಲಾಡುತೆ
ಸಿರಿದುಂ ನೆಗೆದಾಕಾಶದಿ ನಿಲುತಂ
ತರಹರಿಸುತೆ ಪಂಜರದೊಳ್ತಿರುತಂ
ಥಾಳದೊಳುಂ ಮುತ್ತಂ ಬಳುಕುತ್ತಂ
ತಾಳವನವಯುವದೊಳ್ ಪಿಡಿಪುತ್ತಂ

ಆಡಿತೆ ಗತಿ ನಿಂದುದೆ ಕಾಳಾಸಂ
ನೋಡಿತೆ ಸೊಗಸಿರ್ದುದುವೆ ವಿಳಾಸಂ
ಶಾನಾಗಿರೆ ರಸಮಯನಾಗಾಡುತೆ
ನಾನಾ ವಿಧ ಬಹು ಗತಿಗಳ್ ತೋರುತೆ
ಭಾಪಾವುಜೆ ಮದ್ದಳೆರೇ ಯೆನುತಂ
ಭಾಪುರೆ ಕಹಳೆ ಸುದೇಶಿಯೆನುತ್ತಂ
ದೇವುರೆ ಹೊಸತುಗ್ಗಡಣೆಯೆನುತ್ತಂ
ರಾವುರೆ ತಾಳದ ಗತಿಯೆಂದೆನುತಂ
ಅವಧಾರುರೆ ಮೇಳವಣೆಯೆಂದೆನುತಂ
ಅವಧಾರಭವನೆ ಕರುಣೆಯೆಂದೆನುತಂ

ನೆಗೆದು ತಿರುಗಿ ಕೆಯ್ಯುಗ್ರಿ ನಿಲುತ್ತಂ
ಬಗೆಯುದೆ ತಲೆಯಿಂ ನಡೆದಾಡುತ್ತಂ
ಬರೆಯಿಂದಂ ಹರಿದಾಡಿ ನಿಲುತ್ತಂ
ಬೆರಲೂರಿಯೆ ತಿರ್ರನೆ ತಿರುಗುತ್ತಂ
ಕೆಯ್ಯೊಳ್ಕಾಲೊಗೆದಂತಾಡುತ್ತಂ
ಮೆಯ್ಯೆಲ್ಲಂ ಮುಖನಾದಂತಿರುತಂ
ಕೆಲದೊಳ್ ಬಲದೊಳ್ ಸುತ್ತೀಕ್ಷೆಸೆಯೊಳ್
ನೆಲನೊಳ್ಮುಗಿಲೊಳಗಂ ಜಡೆಯೊಳ್
ಹೊಸ ಕರಣಂಗಳನೀಡಾಡುತ್ತಿರೆ
ಶಶಿಧರನೊಲವಿಂ ತಲೆದೂಗುತ್ತಿರೆ
ಹೆಸರಿಡಬಾರದ ಗತಿಗಳನಾಡುತೆ
ಹೊಸ ಹೊಸ ಪರಿಗಳ ರೀತಿಯನಾಳುತೆ
ಮನದೊಳೆ ದೇಹವನಡಗಿಸಿಯಾಡುತೆ
ಮನವೇ ತನುವಾದಂತಿರಲಾಡುತೆ
ಗತಿಗೆ ಮನಂ ಹೊಸ ತನುವಾದಂತಿರೆ
ಗತಿಗೆ ತನುವಿನವಯವವಾದಂತಿರೆ
ಸಮ ವಿಷಮಂಗಳ ಪರಿಗಳನಾಡುತೆ
ಕ್ರಮದಿಂ ನವರಸಗತಿಗಳನಾಡುತೆ
ಧಾರುಣಿಯಂದದೆ ತಿರದಿಂದಾಡುತೆ
ವಾರಿಯ ವೋಲ್ ನಿರ್ಮಳನಾಗಾಡುತೆ
ಅನಲನ ವೋಲುಜ್ವಲನಾಗಾಡುತೆ
ಅನಿಲನ ವೋಲ್ ಸುತ್ತಂ ಸುಳಿದಾಡುತೆ
ಗಗನದ ವೋಲ್ತನ್ಮಯನಾಗಾಡುತೆ
ಮೃಗಧರನಂತಿರೆ ಹೊಸ ಕಳೆಯೇರುತೆ
ದಿನಕರನಂತಿರೆ ದೆಸೆಯಂ ಬೆಳಗುತೆ
ಎಸಿಸುಂ ಜೀವನ ವೊಲ್ ಚೇತರಿಸುತೆ
ಎಳವಿಸಿಲಂತಿರೆ ಬಣ್ಣ ದೋರುತೆ
ಬೆಳ್ದಿಂಗಳ ವೋಲ್ತಂಪಂ ಬೀರುತೆ
ಕೋಗಿಲೆಯಂತಿರೆ ಸರಗೈದಾಡುತೆ
ರಾಗದಿ ಗಿಳಿಯಂತಿರೆ ನುಡಿದಾಡುತೆ

ಅಳಿಯಂತಿರೆ ಝೇಂಕಾರದೊಳಾಡುತೆ
ಕಳಹಂಸೆಯು ವೊಲ್ಮೆಲ್ಲನೆ ನಡೆಯುತೆ
ಎಳೆಲತೆಯಂದದಿ ತೂಗಾಡುತ್ತಂ
ಎಳೆಮಿಂಚಿನ ವೊಲ್ ಹೊಳೆದಾಡುತ್ತಂ
ಮುಗಿಲಂತಿರೆ ಮೊಳಗುತೆ ಬಂದಾಡುತೆ
ಮಿಗೆ ಚಾದಗೆಯಂತಿರೆ ನಲಿದಾಡುತೆ
ನವಿಲಂತಿರೆ ಸವಿದನಿಗೊಟ್ಟಾಡುತೆ
ನವ ಪ್ರೇರಣೆಯಿಂ ಶಬ್ದಂದೋರುತೆ
ನಲವಿಂ ಕಾಲೊಳ್ಕಟ್ಟಿದ ಗೆಜ್ಜೆಗ
ಳುಲಿಯುಲ್ಗತಿಗಳನುಗುಳುವ ಹೆಜ್ಜೆಗ
ಳೆಳವಡೆ ಪದಗತಿಯಂ ಬಾರಿಸುತಂ
ಸೆಳೆವುತೆ ಹಿಮ್ಮೆಟ್ಟುತೆ ನಿಂದಿರುತಂ
ಪದತಳದೊಳೆ ತಟಗಿರ್ರೆಂದೆನುತಂ
ಮೃದುಗತಿಯೊಳ್ ಘುಲಘುಲಕೆಂದೆನುತಂ
ಚರಣತಳದೊಳುಗ್ಘಡಿಸುವ ತೆರದಿಂ
ನೆರೆದ ಸುಗತಿ ಕಾಲ್ಗೆರಗಿದ ತೆರದಿಂ
ಗತಿ ಪುಳಕಿತವಾಗಿರೆ ಹೆಜ್ಜೆಗಳಿಂ
ದತಿ ಚಲ್ವಿನ ಶಬ್ದದ ಹೆಜ್ಜೆಗಳಿಂ
ಬಾರಿಸುತಂ ಕಿವಿಗಿನಿದಂ ತೋರುತೆ
ಹಾರೈಸಲ್ ಬಹು ರೂಪಂದೋರುತೆ

ದಕ್ಷನ ಮುಖಮಂ ಕೆಡಿಸಿದ ಪರಿಯಂ
ತ್ರ್ಯಕ್ಷಂ ತ್ರಿಪುರವನುರುಪಿದ ಪರಿಯಂ
ಕಾಮನನಭವಂ ನೋಡಿದ ಪರಿಯಂ
ಪ್ರೇಮದಿ ರತಿ ಮಿಗೆ ಶೋಕಿಪ ಪರಿಯಂ
ಗಿರಿಜೆ ತಪಸ್ಸಿನೊಳಗಿರ್ದ ಪರಿಗಳಂ
ಕರುಣದೊಳೀಶಂ ಬಂದ ಪರಿಗಳಂ
ಪ್ರೇತಪತಿಯನಂದುರುಪಿದ ಪರಿಯಂ
ಶ್ವೇತಂಗೊದವಿದ ಕರುಣದ ಪರಿಯಂ
ಉಪಮನ್ಯು ತಪಂಬಟ್ಟ ಪರಿಗಳಂ

ಕಪರ್ದಿ ಪಾಲ್ಗಡಲಿತ್ತ ಪರಿಗಳಂ
ಪುಲಿಯು ತೊವಲನುಗಿದುಟ್ಟ ಪರಿಗಳಂ
ಕಲಿ ಗಜಚರ್ಮವ ತೊಟ್ಟ ಪರಿಗಳಂ
ತಡೆಯುದೆ ಕಡಲಂ ಕಡೆದ ಪರಿಗಳಂ
ಕಡೆಯಲ್ ಹೊಸ ಬಿಸುವುಗುಳ್ದ ಪರಿಗಳಂ
ಸುರಸಂತತಿ ಬಿಗುತೋರ್ಽಡಿದ ಪರಿಯುಂ
ಕೊರಳೊಳ್ಗರಳವ ಧರಿಸಿದ ಪರಿಯುಂ
ಭಾವರಸದ ಲಹರಿಯುನಾಡುತ್ತಿರೆ
ದೇವಂ ಮನದೊಳ್ಮಿಗೆ ಹಿಗ್ಗುತ್ತಿರೆ

ನಂಬಿಗೆ ಕುಂಟಣಿಯಾದ ಪರಿಗಳಂ
ನಿಂಬಿಗೆ ಸೂರೆಯನಿತ್ತ ಪರಿಗಳಂ
ಭೋಗಣ್ಣನೊಡನೆ ಪೋದ ಪರಿಗಳಂ
ರಾಗದಿ ಪುರದೊಳ್ನಿಂದ ಪರಿಗಳಂ
ಕಣ್ಣಪ್ಪಂ ಕಣ್ಣಿತ್ತ ಪರಿಗಳಂ
ಬಣ್ಣಿಸೆ ಶರ್ವಂ ಮೆರೆದ ಪರಿಗಳಂ
ಕಲ್ಲಂ ಕೊಂಡವನಿಟ್ಟ ಪರಿಗಳಂ
ನಿಲ್ಲದೆ ವರವಂ ಕೊಟ್ಟ ಪರಿಗಳಂ
ಬೇಡಂ ಬೇಂಟೆಯನಾಡಿದ ಪರಿಯುಂ
ರೂಢೀಶಂ ದಿಟ ಮಾಡಿದ ಪರಿಯುಂ
ಓಹಿಲನಂ ಕೊಂಡೊಯ್ದಾ ಪರಿಯುಂ
ನೇಹದೊಳುದ್ಭಟನೈದಿದ ಪರಿಯುಂ
ಅಲ್ಲಯ್ಯನ ಕೈಯೊಕ್ಕ ಪರಿಗಳಂ
ಬಲ್ಲಾಳನ ಮನವರಿದ ಪರಿಗಳಂ
ಏಕಾಂತದ ರಾಮಯ್ಯನ ಪರಿಯುಂ
ಲೋಕಾಂತವದಂ ಮಾಡಿದ ಪರಿಯುಂ
ಬಸವಣ್ಣಂ ವಿಷವುಂಡ ಪರಿಗಳಂ
ವಿಷವುಂ ಪ್ರಸಾದವಾದ ಪರಿಗಳಂ
ಕನ್ನೆಯುಳುತೆ ಹಾಲೆರೆದ ಪರಿಗಳಂ
ಬಿನ್ನಣದಿಂ ತಾನುಂಡ ಪರಿಗಳಂ

ಚೆನ್ನನ ಮನೆಯೊಳು ಸಲಿಸಿದ ಪರಿಯಂ
ಮನ್ನಿಸಿ ಚೋಳಂಗೊಲಿದಿಹ ಪರಿಯುಂ
ಚೀಲಾಳನನರಿದಿತ್ತ ಪರಿಗಳಂ
ಸೋಲದೆ ಮಗನಂ ಕರೆದ ಪರಿಗಳಂ
ಕಕ್ಕನ ಕಂಕರಿಗಾಡಿದ ಪರಿಯುಂ
ಚಿಕ್ಕನನಭವಂ ಕಾಡಿದ ಪರಿಯುಂ
ದಾಸನನಭವಂ ಕಾಡಿದ ಪರಿಯುಂ
ಕೇಶವರಾಜಂಗಂಜಿದ ಪರಿಯುಂ
ಗುಂಡನ ಮುಂದಾಡಿದ ಪರಿಯ ಗಳಂ
ಚಂಡೇಶ್ವರನಂ ಮೆರೆದ ಪರಿಗಳಂ
ಹಂಪೆಯೊಳಗೆ ನೆಲಸಿದ ಪರಿಯುಗಳಂ
ಹಂಪೆಯ ಹರಿಹರಗೊಲಿದ ಪರಿಗಳಂ †
ಇವು ಮೊದಲಾಗಿರೆ ಶಂಕರನೊಲವಿಂ
ಸವಿದಾಡಿದ ಸುಖಲೀಲೆಯೊಳೊಲವಿಂ
ಬಹು ರೂಪುಗಳಿಂ ಬಂದಾಡುತ್ತಂ
ಬಹಳ ರಸಂಗಳೊಳೋಲಾಡುತ್ತಂ

ಆಡುತ್ತಾಡುತ್ತೆಡಿಸಿ ನಿಲುತಿರೆ
ನೋಡುವ ಸಭೆ ಮಿಗೆ ಘೋಳನೆ ನಗುತಿರೆ
ಸಭೆಯು ಮೆಯ್ಯ ಜೊಮ್ಮಲ್ಲಂ ಹಾರಲ್
ಅಭಿನವ ಮುಖದೊಳ್ ನಸುನಗೆ ದೋರಲ್
ಪ್ರಹಸನ ರಸಮಂ ತೊಡಗಿದನಾಗಳ್
ಸಹಸದ ನಗೆಗಳ್ಮೂಡಲ್ಮೊಗದೊಳ್
ಕೊಡಗಿಯಾಟವನೇರಿಸಿಕೊಂಡಂ
ನೋಡಿ ನಗುತ್ತಿರೆ ದೇವರ ತಂಡಂ
ತಲೆಯೊಳ್ಸುತ್ತಿದ ಕವಡಿಕೆ ದಂಡೆಗ
ಳೊಲವಿಂ ಪಲ್ಗಳ ಏಡಿಸಿದ ಕವಡೆಗ
ಳ್ಕಣ್ಣೊಂದರೊಳಿಕ್ಕಿದ ಬೆಗ್ಗವಡಿಕೆ

ಪಾಠಾಂತರ—
ಹಂಪೆಯು ಹರಿಗಂಗೊಲಿದಾಪರಿಯುಂ

ಕಣ್ಣಂ ಮೆಳ್ಳಿಸಿ ನೆತ್ತಿಯ ಚೆಂಡಿಕೆ
ಹಲುಗಿರಿಯುತೆ ಪುರ್ಬಂ ನೆಗೆಪುತ್ತಂ
ಬಲುಗಿವಿಯಂ ಮಂಡಿಸಿ ಮಣಿವುತ್ತಂ
ಬಾಯಂ ತೆರೆವುತೆ ಬರಿದೆ ನಗುತ್ತಂ
ಆ ಯೆಂದೀಶನನೇಡಿಸಿ ನಿಲುತಂ
ಕೊಂಕಿ ನಡೆದು ಕೆಯ್ಯಂ ಮುರುಕಿಸುತಂ
ಟೊಂಕಮನುರುಗಿಸಿ ಹಿಂದೇಡಿಸುತಂ
ಮೊಳಕೈ ಮುಂಗೈಗಳನಾಡಿಸುತಂ
ಮೊಳಕಾಲಿಕ್ಕುತ್ತೆರಗುತೆ ನಿಲುತಂ
ಕಾಲುಂ ಕೆಯ್ಯುಂ ಚೆಂಗೊಂಡಾಗಿರೆ
ಮೇಲುಂ ತಳವುಂ ಕೆಲವುಂ ಡೊಂಕಿರೆ
ಕುಳ್ಳಿರ್ದೇಳುತ್ತಂ ಬೀಳುತ್ತಂ
ಅಳ್ಳೆಯನೆರಡು ಕರದಿ ಬೆರಟುತ್ತಂ
ಮೆಳ್ಳಿಸಿ ನೋಡುತೆ ಪುರ್ಬಂ ಕೆತ್ತುತೆ
ಘೊಳ್ಳನೆ ಸಭೆ ನಗೆ ಸಲ್ಲಂ ಕಿರಿವುತೆ
ಅಡ್ಡಂ ತಿಗಟಂ ವಿಸಟಂ ಬರುತಂ
ಗುಡ್ಡಿಸಿ ಮುಗಿಲುದ್ದಕೆ ನೆಗೆವುತ್ತ
ಅಣಕಂ ಮೆರೆವುತೆ ಸುಯ್ಯಿಕ್ಕುತ್ತಂ
ತ್ರಿಣಯನ ನೋಡುತೆ ಗಹಗಹಿಸುತ್ತಂ
ಮೂಗಿನ ತುದಿಯಂ ಮೆಳ್ಳಿಸಿ ನೋಡುತೆ
ತೂಗಿ ತೊನೆದು ಸ್ಪೃಚಪ್ಪಳೆಗುಟ್ಟುತೆ
ತುದಿಗಾಲೊಳು ನಿಲುತಂದೊಲೆದಾಡುತೆ
ಬೆಮರಿದರಂತಿರೆ ಬೆಚ್ಚುತ್ತೋಡುತೆ
ನಿಂದಿರುತೊಂದೇ ಮಡುಹಾಡಿಸುತಂ
ಮಂದಿಯ ನೇಡಿಸುತವ್ವಳಿಸುತ್ತಂ
ಮುಡುಹುಗಳಂ ಕೊರಳೊಳು ಪತ್ತಿಸುತಂ
ಕಡವಾಯೊಳೆ ತುಟಿಗಳ ಜೋಲಿಸುತಂ
ಒಂದೇ ಧ್ಯಾನಿಸಿ ಬೆರಗಾಗುತ್ತಂ
ಮರದಂತೇನಕ್ಕೆಯನರಸುತ್ತಂ
ಹೊಟ್ಟೆಯನಾಡಿಸುತಂ ಹೊಂಗಿಸುತಂ

ನಿಟ್ಟೊಡಲಾಗುತ್ತಂ ನಿಂದಿರುತಂ
ಕೊಂಕಿದ ದೇಹಮನುರುಗಿಸಿ ನಡೆವುತೆ
ಬಂಕಿದ ಮುಖದೊಳ್ ಬಾಯ್ದೆರೆದುಲಿವುತೆ
ತೋಳಂ ಬೀಸುತೆ ತೂಗಾಡುತ್ತಂ
ನೀಳಂ ಮಾಡಿಯೆ ಮೊಗದಿರುಹುತ್ತಂ
ದಿಟ್ಟಿಸಿ ನೋಡುತ್ತಂ ಜಿಗಿಲುತ್ತಂ
ನೆಟ್ಟಂದದಿ ನಿಂದಿರ್ದು ನಗುತ್ತಂ
ತುಟಿ ಮಿಡುಕುತ್ತಿರೆ ಹಲು ಹರಿಗುಟ್ಟುತೆ
ಕಟಿಯಲುಗುತ್ತಿರೆಯಡ್ಡಂ ಮೆಟ್ಟುತೆ
ಕುಂಟನ ವೋಲ್ಕೊಂಕಾಡಿ ನಿಲುತ್ತಂ
ತುಂಟನ ವೋಲ್ಬೆಚ್ಚಡಿಗಳನಿಡುತಂ
ಹೆಳವನ ವೋಲ್ಮೊಳಕಾಲಿಕ್ಕುತ್ತಂ
ಗಳೆಯಂದದೆ ಸ್ವೈರಂಗಾಗುತ್ತಂ
ಎದ್ದೆದ್ದೆತ್ತಿದ ವೋಲ್ ನಿಲ್ಲುತ್ತಂ
ಬಿದ್ದುಂ ಬಿಲ್ಲಂದದೆ ಬೆರೆಯುತ್ತಂ
ಮೂಗಂ ಪತ್ತಿಸಿ ಕೊಡಕೆಯನಾಡಿಸಿ
ಮೋಗಂ ಮೆಳ್ಳಿಸಿ ಕೊರಲಂ ತೂಗಿಸಿ
ತಲೆಯು ನಿವಾಳಿಸಿ ಕರವಂ ಬಾರಿಸಿ
ಸಿಲವಂ ಕೊಂಕಿಸಿ ಬೆರಲಂ ಬಂಕಿಸಿ
ಸುರಪನನೇಡಿಸುತಂ ರೋಡಿಸುತಂ
ಶರಣರ ಚರಣವ ಪಿಡಿದಾಡುತ್ತಂ
ದೇವನನುರುಗಿಸಿ ನೋಡಿ ನಗುತ್ತಂ
ದೇವಸಭೆಯನೊಲಿದಲ್ಲಾಡಿಸುತಂ
ನಗೆಗಳನೆಲ್ಲರ ಮೊಗದೊಳ್ಚೆಲ್ಲುತೆ
ಬಗೆಗಳ ನಗೆಯಂ ಹೊರವಂಟಾಡುತೆ
ನೋಡುವವರ ನಗೆ ಗೂಡಾಗಿಸುತಂ
ನೋಡುವರವಯುವವಂ ನಗಿಸುತ್ತಂ
ಬಂದಾಡುತ್ತಿರೆ ಹರನೋಲಗದೊಳ್
ಹೆಂದದ ನಗೆಗಳ್ ಮುಸಗಲ್ಕಾಗಳ್

ಹೊಸ ಭಕ್ತಿಯು ಕರುವಿನ ಪೊಲವಂತಿರೆ
ಶಶಿಧರನಚ್ಚರಿಯೊಳ್ಮರೆವುತ್ತಿರೆ
ಹರಕೀರ್ತಿಯನೆ ಕೊಂಡಾಡುತ್ತಿರೆ
ವರ ಮೂರ್ತಿಯನೆ ಕಣ್ಣೊಳಗಿಟ್ಟಿರೆ
ಮೈಸೋಂಕಂ ತನ್ನೊಳ್ ತೆಗೆವುತ್ತಿರೆ
ಕೈ ಶಿವಪೂಜೆಗೆ ಲವಲವಿಸುತ್ತಿರೆ
ತನ್ನ ಮರೆವುತೆ ಪರವಶನಾಗಲ್
ಭಿನ್ನಂದೋರದ ಸಮಸುಖಿಯಾಗಲ್
ಹರ ಸಾತ್ವಿಕ ಭಕ್ತಿಯು ರಸದೋರಲ್
ಕರುಣ ರಸಂ ಹರನೊಳ್ ಕೈಮೀರಲ್

ಹಿಡಿದೆತ್ತಿದ ಭೃಂಗೀಶನನೀಶಂ
ಅಡಿಗಡಿಗಪ್ಪಿದನಾ ಗಿರಿಜೇಶಂ
ಆಲಿಂಗಿಸಿ ಮೆಯ್ಯಂ ತಡಹುತ್ತಂ
ಸಾಲದಿದೆನ್ನಂ ಕೊಟ್ಟೆನೆನುತ್ತಂ
ಹಂಪೆಯ ವಿರುಪಂ ಕರುಣಂ ಮಾಡಲ್
ಸೊಂಪಿಂ ಹೊಗಳಲ್ ಸುರಸಭೆ ನೋಡಲ್
ದೇವ ಶರಣಸಂಕುಳಪರಿಪಾಲಕ
ದೇವ ಶರಣ ಮುಗುದಾಜನ ಲೋಲಕ
ದೇವ ಸಕಲವರ ವಿದ್ಯಾವಲ್ಲಭ
ದೇವ ಅನೇಕ ಶ್ರುತಿತತಿ ದುರ್ಲಭ
ದೇವ ನತಾಖಂಡಲ ಸುರಮಂಡಲ
ದೇವ ವಿರಾಜಿತ ಫಣಿಪತಿಕುಂಡಲ
ಎಂದು ಪೊಗಳುತಿರೆ ಸಂತಸದಿಂದಂ
ಇಂದುಧರಂ ಹಿಗ್ಗುತೆ ನಲವಿಂದಂ
ವರವಂ ಕುಡಲೆಂದನುಗೈವುತ್ತಂ
ಸುರಸಂತತಿಗಭಯವನೀವುತ್ತಂ
ಪರಿಪರಿಯುಳ್ಕರೊಳೋಲಾಡಿಸುತಂ
ಶರಣತತಿಗೆ ಭಕ್ತಿಯನೀವುತ್ತಂ
ಭೃಂಗೀಶನನಡಿಗಡಿಗಪ್ಪುತ್ತಂ

ಹಿಂಗದೆ ನೇಹದಿ ಸಲೆ ಮೆಚ್ಚುತ್ತಂ
ಹರಿಬೊಮ್ಮರ ವರ ಗುರು ವೊಪ್ಪಿರ್ದಂ
ಶರಣಜನದ ಸುರತರು ವೊಪ್ಪಿರ್ದಂ
ಭಕ್ತರ ಪರುಷದ ಕಣಿಯೊಪ್ಪಿರ್ದಂ
ಭಕ್ತರ ಚಿಂತಾಮಣಿಯೊಪ್ಪಿರ್ದಂ
ಭಕ್ತರ ಮತಿಯುನ್ನತಿಯೊಪ್ಪಿರ್ದಂ
ಭಕ್ತರ ಕಣ್ಣಿಂಗತಿಯೊಪ್ಪಿರ್ದಂ
ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ
ಹಂಪೆಯ ವಿರುಪಂ ತಾನೊಪ್ಪಿರ್ದಂ

**ಕಂದ||** ಪರಮೋತ್ಸಾಹದಿ ಭೃಂಗೀ ।
ಶ್ವರನಂ ಕೊಂಡಾಡಿ ನೋಡಿ ನಲಮೇರುವ ರಂ
ಕರನೊಲ್ದು ಭಕ್ತಿಸುಖಮಂ ।
ಕರುಣಿಸುತಿರ್ಕೆಮಗೆ ಹಂಪೆಯ ವಿರೂಪಾಕ್ಷಂ ॥

---

# ಲಿಂಗಾರ್ಚನೆಯ ರಗಳೆಯು.

ಕಂದ॥ ಇಂದುಧರ ನಿಮ್ಮ ಚರಣ।
ದ್ವಂದವನನವರತವರ್ಚಿಸುತ್ತಿಹ ಸುಖಮಂ॥
ತಂಪೆ ಭವಭವದೊಳೀವುದು।
ಕಂದರ್ಪ ಮದಾರಿ ಹಂಪೆಯ ವಿರೂಪಾಕ್ಷಾ॥

## ಲಲಿತ ರಗಳೆ.

ಶ್ರೀಗುರುವೆ ಹಂಪೆಯ ವಿರೂಪಾಕ್ಷ ಕೇಳಯ್ಯ
ನಾಗಭೂಷಣ ನಿಮ್ಮ ವೇಳೆಯಾಳಾನಯ್ಯ
ಸಲುಗೆಯಿಂ ಬಿನ್ನಪಂಗೈಯ್ದಪೆಂ ನಾನಯ್ಯ
ಒಲವಿಂದಲೆನಗೆ ವಿರೂಪಾಕ್ಷ ಕರುಣಿಪುದಯ್ಯ
ಧರೆಯೊಳಗೆ ನಿಮ್ಮ ತೊತ್ತೆಂದು ಸಲಹುವುದಯ್ಯ
ಪರಮ ಭಕ್ತರ ಪದಕ್ಕೆನ್ನ ಸಲಿಸುವುದಯ್ಯ

ಆಗಲದೆ ನಿರಂತರಂ ನಿಮ್ಮನರ್ಚಿಸುವುದಂ
ಮಿಗೆ ಮೆಚ್ಚಿ ಮನವುಕ್ಕಿ ಬಂದು ಪುಳುಕಿಸುವುದಂ
ತುಂಗಭದ್ರಾನದಿಯ ಸಲಿಲಮಂ ಮೊಗೆತಂದು
ಲಿಂಗ ನಿಮಗಾನೆ ಮನವಾರೆ ಮಜ್ಜನಕೆರೆದು
ಮಗಮಗಿಪ ಚಂದನವನುದ್ವರ್ತನಂ ಮಾಡಿ
ಅಗರು ಕರ್ದಮಂಗಳಂ ನಿಮ್ಮ ಮೆಯ್ಯೊಳ್ತೀಡಿ
ಅರೆವಿರಿದ ಸುರಗಿ ಸುರಹೊನ್ನೆ ಸಂಪಿಗೆಗಳಂ
ಪರಿಮಳಂಗಳನೀವ ದುಂಡ ಮಲ್ಲಿಗೆಯರಲ್ಗಳಂ
ತನಿಗಂಪನೀವ ಮಲ್ಲಿಗೆ ಮೊಲ್ಲೆಜಾಜಿಯಂ
ಪುನವೊಸೆದು ಕುಯ್ತಂದ ಪರಿಮಳದ ಪಾದ್ರಿಯಂ
ಕಂಪಿಸುವ ಕೈಗಳಿಂ ಪೂಮಾಲೆಗಳನೆತ್ತಿ
ಸೆಂಪೆಸೆಯೆ ಶಿವ ನಿಮ್ಮ ಸಿರಿ ಮುಕುಟದೊಳ್ಸುತ್ತಿ
ಕಮನೀಯವೆನಿಪ ಗುಗ್ಗುಳದ ಧೂಪವನೆತ್ತಿ

ರಮಣೀಯವೆನಿಪ ಪೊಳೆವಾರತಿಗಳನೆತ್ತಿ
ಸಂತೋಷದಿಂದ ಮಾಣಿಕದ ಪರಿಯಾಣನುಂ
ಮುಂತಿರಿಸಿ ನಲವಿಂದೆ ಬೆಳಗಿದಡ್ಡಣವುಮಂ
ಚಂದ್ರಿಕೆಗಳಂ ಕಡಿದು ಕಂಡಣಿಸಿದಂತಿಪ್ಪ
ಸಾಂದ್ರ ಧವಳತಮೆನಿಪ್ಪೋಗರವಸಿಂಬಪ್ಪ
ದಿವ್ಯಾನ್ನವಮೃತಾನ್ನ ದೇವಾನ್ನವಂ ಬಡಿಸಿ
ನವ್ಯ ಸೌರಭ ಶಾಕಪಾಕಂಗಳಂ ಬಡಿಸಿ
ಹರುಷದಿಂ ಮನವುಕ್ಕಿ ಕರಗಳಂ ಮುಗಿಮುಗಿದ
ಹರನೆ ಕೈಕೊಳ್ಳೆಂದು ಭಕ್ತಿಯಿಂದಗಿದಗಿದು

ಚನ್ನಯ್ಯನಿಕ್ಕಿದಂಬಲಿಯಿದಾರೈಸಯ್ಯಾ
ಕನ್ನೆ ನಿಮಗೆರೆದ ಹಾಲೆಂದು ಹಾರೈಸಯ್ಯಾ
ಚೋಳಿಯಕ್ಕನ ಬಾಯ ತುತ್ತೆಂದು ಕೊಳ್ಳಯ್ಯ
ಚೋಳ ನಿಮಗಿತ್ತನ್ನವೆಂದು ಕೈಕೊಳ್ಳಯ್ಯ
ಕಣ್ಣಪ್ಪನಣುಗನೆಂದೆನಗೆ ಕರುಣಿಪುದಯ್ಯ
ಉಣ್ಣದಿರಬಾರದೆಂಬುದನರಿದೆನುಣ್ಣಯ್ಯ
ಇಳೆಯಾಂಡಗುಡಿಮಾರನ ವರಸುತ ನಾನಯ್ಯ
ಚಳಿಸಿ ದೇವಾನ್ನವಿಕ್ಕಿದರ ಮಗ ನಾನಯ್ಯ
ಒಕ್ಕಲಿಗ ಮುದ್ದಯ್ಯನಕ್ಕರಿನ ಸುತನಯ್ಯ
ಚಿಕ್ಕನುಣ್ಣದೊಡೆ ನಿಮ್ಮಣುಗಸುತ ನಾನಯ್ಯ
ಎಂದು ಭಕ್ತಿಯ ಮನದೊಳಾನೆ ನಿಮಗುಣಲಿತ್ತ
ಸಂದ ಶರಣರ ವರ ನಿಧಾನ ನಿಮಗುಣಲಿತ್ತು

ಪನ್ನೀರಲಗ್ಗಣಿಯ ತಂದು ಹಸ್ತಕ್ಕೆರೆದು
ಪನ್ನಗಾಧರಗೆ ಕೈಘಟ್ಟಿಯಂ ಕೊಟ್ಟೆರೆದು
ಕರ್ಪೂರ ವೀಳೆಯವನೊಸೆದಳ್ತಿಯಿಂ ಕೊಟ್ಟು
ಸರ್ಪಭೂಷಣ ನಿಮ್ಮ ಚರಣಕ್ಕೆ ಪೊಡೆಮಟ್ಟು
ಪೊರೆಸಾರ್ದು ನಿಮ್ಮ ಪೂಜೆಯುನಳ್ಕರಿಂ ನೋಡಿ
ಕರಿಕಂಠ ಶರಣೆಂದು ಸದ್ಭಕ್ತಿಯಂ ಬೇಡಿ
ಮನವುಕ್ಕಿ ಸೊಗಳಲುದ್ಯುತನಾಗಿ ನಿಂದಿರ್ದು

ತಸ್ನೇಹವೊತ್ತರಿಸಿ ನಿಮ್ಮ ಹತ್ತಿರೆ ಸಾರ್ದು
ದೇವ ಮಮ ಹೃತ್ಕಮಲ ಮಂಡಿತ ವಿರೂಪಾಕ್ಷ
ದೇವ ಪ್ರಮಥ ನಿಚಯ ಪರಿವೃತ ವಿರೂಪಾಕ್ಷ
ದೇವ ನೃಕರೋಟಿಮಾಲಾಧರ ವಿರೂಪಾಕ್ಷ
ದೇವ ಕೋಟ್ಯರ್ಕ ತೇಜೋಮಯ ವಿರೂಪಾಕ್ಷ
ದೇವ ಗಂಗಾಮಕುಟರಂಜಿತ ವಿರೂಪಾಕ್ಷ
ದೇವ ಭೃಂಗೀಶನಾಂಟ್ಯಪ್ರಿಯ ವಿರೂಪಾಕ್ಷ
ದೇವ ಹರಹರ ಮನ್ಮನೋಹರ ವಿರೂಪಾಕ್ಷ
ದೇವ ಶಿವಶಿವ ಸದಾಶಿವ ಶಿವ ವಿರೂಪಾಕ್ಷ

ಎಂದಿಂತು ಪೊಗಳ್ದು ತಣಿವೈಯ್ದದೇ ಬಾಯ್ವಿಟ್ಟು
ನಿಂದೊಮ್ಮೆ ಹಾಡಿ ನೋಡುವೆನೆಂದು ಮನವಿಟ್ಟು
ಲಲಿತ ಬಂಗಾಳದಿಂದೊಲಿದು ನಿಮ್ಮಂ ಪಾಡಿ
ಮಲಹರಿ ವರಾಳಿಯಿಂದೊಲಿದು ನಿಮ್ಮಂ ಹಾಡಿ
ದೇಶಿ ಗುರ್ಜರಿಗಳಿಂದೀಶ ನಿಮ್ಮಂ ಹಾಡಿ
ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ
ಬತ್ತೀಸ ರಾಗದಿಂ ಕರ್ತು ನಿಮ್ಮಂ ಹಾಡಿ
ಚಿತ್ತದೊಡೆಯನೆ ಮತ್ತೆ ಮತ್ತೆ ನಿಮ್ಮಂ ಹಾಡಿ

ಚನ್ನಯ್ಯನಂ ಹಾಡಿ ಹೊನ್ನಯ್ಯನಂ ಹಾಡಿ
ಕಿನ್ನರಿಯ ಬೊಮ್ಮತಂದೆಯನೊಪ್ಪದಿಂ ಹಾಡಿ
ಕಕ್ಕಯ್ಯನಂ ಹಾಡಿ ಚಿಕ್ಕಯ್ಯನಂ ಹಾಡಿ
ಅಕ್ಕರಿಂ ನಿಜಲಿಂಗ ಚಿಕ್ಕಯ್ಯನಂ ಹಾಡಿ
ಒಂಕಯ್ಯನಂ ಪಾಡಿ ಬಂಕಯ್ಯನಂ ಹಾಡಿ
ಲೆಂಕಮಂಚಣ್ಣನಂ ಕಲಕೇತನಂ ಪಾಡಿ
ಬಸವರಾಜನ ಮಳೆಯರಾಜನೋಹಿಲಯ್ಯನಂ
ಮುಸುಟೆಯ ಚೌಡರಾಯನನುದ್ಭಟಯ್ಯನಂ
ಕೇಶಿರಾಜನ ದುಗ್ಗಳವ್ವೆ ದಾಸಿಮಯ್ಯನಂ
ಭಾಷೆಗೀಶನ ತಂದ ಮಿಸುಪಾದಿಮಯ್ಯನಂ
ಸಿದ್ಧರಾಮನನಲ್ಲಮನ ಮಲುಹಣಯ್ಯನಂ

ರುದ್ರ ಪಶುಪತಿ ಹಲಾಯುಧ ಮಯೂರಯ್ಯನಂ
ಸಾಮವೇದಿಗಳಿಗೊಪ್ಪುವ ಶ್ವಪಚದೇವರಂ
ಕಾಮಿತವನೀವ ಸಿರಿಯಾಳಚಂಗಳೆಯರಂ
ನಂಬಿಯಣ್ಣನ ನಿಂಬಿಯಕ್ಕ ಸತ್ಯಕ್ಕನಂ
ಕೆಂಭಾವಿಯೊಳ್ಮೆರದ ಭಂಗಭೋಗಣ್ಣನಂ
ಕೊಂಡಗುಳಿಯ ಕೇಶಿರಾಜ ತೆಲುಗೇಶನಂ
ಪಂಡಿತಾರಾಧ್ಯನಿಂಡೆಯ ಶಾಂತಿಮಯ್ಯನಂ
ಚೋಳ ಚೇರಮ ಗೊಲ್ಲಳನ ಬಿಬ್ಬಿಬಾಚನಂ
ಕೊಳೂರು ಕೊಡಗೂಸು ಮಹದೇವಿಯಕ್ಕನಂ
ಕಾಳಿದಾಸನ ಕಣ್ಣಪ್ಪನ ಚೆನ್ನಬಸವನಂ
ನೋಳಿಗೆಯ ಮಾರಿತಂದೆಯ ಮಾದಿರಾಜನಂ
ಅಮ್ಮವ್ವೆ ರೆಮ್ಮವ್ವೆ ಕದಿರ ರೆಬ್ಬವ್ವೆಯುಂ
ನಿರ್ಮಳ ಜ್ಞಾನಿ ಕಮಳವ್ವೆ ಬಾಚವ್ವೆಯುಂ
ಗುರುಭಕ್ತ ಜಗದೇವ ಮೊಲ್ಲೆ ಬೊಮ್ಮಣ್ಣನಂ
ಪರದೈವ ರಹಿತ ಶಂಕರದಾಸಿಮಯ್ಯನಂ
ನಚ್ಚಿನರುವತ್ತುಮೂವರನಸಂಖ್ಯಾತರಂ
ಅಚ್ಚರಿಯೊಳೆಸವ ಭಕ್ತಾಂಗನೆಯರೆಲ್ಲರಂ
ಭಕ್ತಿಯಿಂ ಪಾಡಲ್ಕೊಸೆದು ಮೆಚ್ಚಾಗಿ
ಯುಕ್ತಿಯಿಂ ಮೀರಿಸರಸಂ ನಿಮ್ಮನಚ್ಚಾಗಿ
ಹೊಸ ರೀತಿ ರಾಗದಿಂ ದೆಸೆದೆಸೆಗಳಂ ಬೀರೆ
ಪಸರಿಸುವ ತಾಳದಿಂ ಸುಗತಿ ನರ್ತನವೇರೆ

ಇಂತು ಮಹಲಿಂಗಮಂ ಕಣ್ಗಳೊಳಗೊತ್ತುತ್ತಂ
ಮುಂತೆ ಹಾ ಹಾ ಯೆಂದು ವಿಷಯಕ್ಕೆಯುಳ್ಕುತಂ
ಭೃಂಗಿಯ ಪದಂಗಳಂ ನೆನೆನೆನೆದು ನೆನೆನೆನೆದು
ಭೃಂಗಿಯಿಂ ಕೋಡಗಾಟವನಾಡಿ ತೊನೆತೊನೆದು
ಗತಿ ವಾದ್ಯ ಗತಿಗಳಿಂ ಕುಣಿಕುಣಿದು ಕುಣಿಕುಣಿದು
ಅತಿಶಯ ಸುಬೋಧೆಯಿಂ ಭಕ್ತಿಗೆ ಮನಂದಣಿದು
ಏನುವಂ ತಾನರಿಯದಾನಂದದಿಂ ನಿಂದು
ಮೌನವೇ ಗತಿ ಮತಿಯದಾಗಿ ನೆರೆ ಸಲೆಸಂದು

ಪೊಗಳ್ವಕ್ಕರಂ ನಲಿದು ನಾಲಿಗೆಯ ಮೇಲಿರಲ್
ಬಗೆಯ ಭಾವಂ ಬಲಿದು ಮನವನೆಡೆಗೊಂಡಿರಲ್
ಏನೆನ್ನ ಶಂಭುವೆ ಸದಾಶಿವ ಮಹಾದೇವ
ಏನೆನ್ನ ಕಾರುಣ್ಯಸಿಂಧುವೆ ಮಹಾದೇವ
ಏನೆನ್ನ ನಚ್ಚಿನಧಿದೈವವೆ ಮಹಾದೇವ
ಏನೆನ್ನ ಮಚ್ಚಿನ ಮಹಾಸುಧೆ ಮಹಾದೇವ
ಏನೆನ್ನನೊಲಿದು ಪೊರೆವಾಳ್ದನೆ ವಿರೂಪಾಕ್ಷ
ಏನೆನ್ನನೊಲಿವ ಕುಲದೈವವೆ ವಿರೂಪಾಕ್ಷ
ಎಂದೀ ತೆರದಿ ನಿಮ್ಮನಪ್ಪಿ ಸುಖವಡೆವುದಂ
ತಂದೆ ಕರುಣಿಪುದಯ್ಯ ಸದ್ಭಕ್ತನಪ್ಪುದಂ

ಆವ ಜಾತಿಗಳೊಳಗೆ ಹುಟ್ಟಿಸಿದಡೆಲೆ ದೇವ
ನೀವಲ್ಲದರಿಯದಂತಿರಿಸೆನ್ನನೆಲೆ ದೇವ
ಇಳಿಕೆಯ್ಯದೀ ಸುಖವನೆನಗೆ ಕರುಣಿಪುದಯ್ಯ
ಬಳಿವಳಿಯ ತೊಳ್ತಿಂದು ಬಡಿದು ಕಲಿಸುವುದಯ್ಯ
ಬೇರೊಂದನೊಲಿವನಲ್ಲೆಂಬುದನರಿವುದಯ್ಯ
ಸಾರಿ ಮೊರೆಯಿಟ್ಟೆನೆನ್ನಂ ದಯದಿ ನೋಡಯ್ಯ
ಆವ ತೆರದಿಂದಾದೊಡಂ ಗುರು ವಿರೂಪಾಕ್ಷ
ದೇವ ಕರುಣಿಪುದಯ್ಯ ಹಂಪೆಯ ವಿರೂಪಾಕ್ಷ
ಆಳಿನಪಮಾನವಾಳ್ದಂಗಯ್ಯ ಕಾಯಯ್ಯ
ಜಾಳಿಸಿದ ಪಾಪಾತ್ಮವಿದನಿನ್ನು ನೀಗಯ್ಯ
ಮಾಡುವವನುಂ ನೀನೆ ನೋಡುವವನುಂ ನೀನೆ
ಬೇಡುವವನುಂ ನೀನೆ ನುಡಿಸುವವನುಂ ನೀನೆ
ಈಕ್ಷಿಸು ವಿರೂಪಾಕ್ಷ ಶಿಕ್ಷಿಸು ವಿರುಪಾಕ್ಷ
ರಕ್ಷಿಸು ವಿರೂಪಾಕ್ಷ ರಕ್ಷಿಸು ವಿರೂಪಾಕ್ಷ
ಭಯಹರ ವಿರೂಪಾಕ್ಷ ದಯೆಗೈ ವಿರೂಪಾಕ್ಷ
ಜಯಜಯ ವಿರೂಪಾಕ್ಷ ಜಯಜಯ ವಿರೂಪಾಕ್ಷ
ಜಯ ಜಯ ನಮಸ್ತೇ ಜಯ ಜಯ ನಮಸ್ತೇ
ಜಯ ಜಯ ನಮಸ್ತೇ ಜಯ ಜಯ ನಮಸ್ತೇ

ಕಂ॥ ಕೇಳಯ್ಯ ವಿರೂಪಾಕ್ಷ ಕೃ।
ಪಾಳುವೆ ನಿಮ್ಮಡಿಯ ತೊತ್ತ ತೊತ್ತಿನ ಭೃತ್ಯಂ
ಗಾಳಿನಾಳಾಳಿ ನಾಳಾ।
ಕೇಳುಂ ಭವದಲ್ಲಿ ಹಂಪೆಯ ವಿರೂಪಾಕ್ಷಂ॥

---

# ಹಾವಿನಹಾಳ ಕಲ್ಲಿದೇವನ

## ವಚನಗಳು.

---

## ಪರಮಾತ್ಮನ ಸ್ವರೂಪು.

### ವಚನಗಳು.

೧. ರೂಪ ನಿರೂಪ ವಿಚಾರಿಸುವರು. ಸಾಕಾರ ನಿರಾಕಾರವ ವ್ಯವಹರಿಸುವರು. ಅರಿವು ಮರವೆಯು ಕುರುಹಿಡುವರು. ಮನ ಘನವ ಸಂಬಂಧಿಸುವರು. ಒಂದೆಂಬೆನೆ? ನಾಮುಗಳೆರಡಾಗಿವೆ. ಎರಡೆಂದರೆ ಮೂರ್ತಿ ಒಂದೇ. ಒಂದೆರಡೆಂಬುದು ತನ್ನಿಂದಾಯಿತ್ತಾಗಿ ತಾನೇ ಮಹಾಲಿಂಗ ಕಲ್ಲೇಶ್ವರಾ.

೨. ಹುಟ್ಟುವಂದು ನಿಮ್ಮ ಮೋಹವಿಲ್ಲ. ಹೊಂದುವಂದು ನಿಮ್ಮ ನೋಹವಿಲ್ಲ, ಕಂಡಯ್ಯಾ. ನಿಮ್ಮ ಮೋಹದವನಿಗೆ ಹುಟ್ಟುಂಟೇ ಅಯ್ಯಾ? ನಿಮ್ಮ ಮೋಹದ ಮುಖದಲ್ಲಿ ಹುಟ್ಟಲುಂಟೇ ಅಯ್ಯಾ? ಸಂಗ ಸಂಯೋಗದ ಉನ್ಮಾಸಯು ಭೂತ ನಿಮ್ಮ ಮುಖದಲ್ಲಿ ಜನನ ಮರಣ ಉಂಟೇ? ಮಹಾಲಿಂಗಕಲ್ಲೇಶ್ವರಾ?

### ವಿವರಣೆ

ಪರಮಾತ್ಮನು ಒಂದು ನಿಶ್ಚಿತ ಸ್ಥಾನದಲ್ಲಿ ವಾಸಮಾಡುತ್ತಾನೆಂದು ವೀರಶೈವರು ತಿಳಿಯುವದಿಲ್ಲ. ಅಥವಾ ಇಂಥದೊಂದು ಆಕಾರವೂ ಅವನಿಗೆ ಇರುತ್ತದೆಂದು ಭಾವಿಸುವದಿಲ್ಲ. ಅವನು ಜಗತ್ತಿನಲ್ಲೆಲ್ಲ ವ್ಯಾಪಿಸಿಕೊಂಡಿರುತ್ತಾನೆ ಮತ್ತು ಅವನಿಗೆ ಆಕಾರವೂ ಇಲ್ಲ, ನಿರಾಕಾರವೂ ಇಲ್ಲವೆಂದು ಅವರು ಭಾವಿಸುತ್ತಾರೆ. ವಾಡಿಕೆಯಾಗಿ ಜನರು ದೇವನು ಮತ್ತು ತಾವು ಈ ಉಭಯತರು ಭಿನ್ನವಸ್ತುಗಳೆಂದು ಭಾವಿಸಿ ಆಚರಿಸುವದುಂಟು. ಮತ್ತು ಹಾಗೆ ತಿಳಿಯುವದೂ ಉಂಟು. ಇದು ರೂಪುಳ್ಳದು, ಇದು ರೂಪುರಹಿತವು, ಇದು ಸಾಕಾ

ರವು, ಇದು ನಿರಾಕಾರವು ಎಂದು ಅವರು ಅನ್ನುತ್ತಾರೆ. ಆದರೆ ಇದು ಅಜ್ಞಾನವು. ಅಲ್ಲದೆ ಇಂತಿಂತಹ ಆಚರಣೆಯನ್ನು ಮಾಡಿ ಮನಸ್ಸನ್ನು ಪರಮಾತ್ಮನಲ್ಲಿ ಲೀನಮಾಡಬೇಕೆಂತಲೂ ನುಡಿಯುತ್ತಾರೆ. ಆದರೆ ಪರಮಾತ್ಮನು ಇಂಥ ಕಲ್ಪನೆಗಳಿಗೆ ಹೊರಗಾಗಿರುತ್ತಾನೆ. ದೇವರು ನಿಜವಾಗಿ ಒಬ್ಬನೇ ಇದ್ದಾನೆ. ಆದರೆ ವ್ಯವಹಾರದಲ್ಲಿ ಮಾತ್ರ ಅವನಿಗೆ ಅನೇಕ ಹೆಸರುಗಳನ್ನಿಟ್ಟು ನಾವು ಕರೆಯುತ್ತೇವೆ. ಮತ್ತು ನಾನಾವಿಧವಾಗಿ ಪೂಜಿಸುತ್ತೇವೆ. ಆದರೆ ಪರಮಾತ್ಮನು ನಾವು ಭಾವಿಸುವಂತೆ ಅನೇಕವಾಗಿಲ್ಲ. ಆತನು ಒಬ್ಬನೇ ಇದ್ದಾನೆ. ಅವನಲ್ಲಿ ಒಂದು, ಎರಡು ಎಂದು ಭಾವಿಸುವದಕ್ಕೆ ನಾವೇ ಮೂಲಕಾರಣವು. ಆದರೆ ಅವನು ಏಕಮೇವನಾಗಿದ್ದು ವಿಶ್ವವ್ಯಾಪಿಯೂ ಆಗಿರುತ್ತಾನೆ. ಅವನು ಎಲ್ಲರಲ್ಲಿಯೂ ಇದ್ದಾನೆ. ಇದನ್ನು ಕಾಣುವದೇ ಮೋಕ್ಷವು. ಈ ತೆರದ ವಿಚಾರಗಳು ವೀರಶೈವ ಧರ್ಮದಲ್ಲಿವೆ. ಹಿಂದೂ ಧರ್ಮದಲ್ಲಿಯೂ ಉಂಟು. ವಚನಕಾರರು ಇವುಗಳನ್ನೇ ಗ್ರಹಿಸಿ ತಮ್ಮ ವಚನಗಳಲ್ಲಿ ಪ್ರತಿಪಾದಿಸುತ್ತಾರೆ. ಈ ಭಾವವನ್ನು ಹಾವಿನಹಾಳ ಕಲ್ಲಿದೇವನು ತನ್ನ ಮೊದಲನೇ ವಚನದಲ್ಲಿ ನುಡಿದಿದ್ದಾನೆ. (೧)

ಪರಮಾತ್ಮನ ಬಗ್ಗೆ ಮೋಹ ಎಂದರೆ ಪ್ರೀತಿ ಅಥವಾ ಭಕ್ತಿಯು ಇದ್ದವನಲ್ಲಿ ಜನನಮರಣಗಳೆಂಬುವಿಲ್ಲ. ಜನನಮರಣಗಳು ಭವಸಂಬಂಧವಾಗಿರುತ್ತವೆ. ಈ ಭವವನ್ನು ದೂರಮಾಡುವದೇ ಮನುಷ್ಯನ ಗುರಿಯಾಗಿರತಕ್ಕದ್ದು. ಇದನ್ನು ದೂರ ಮಾಡಲು ಶಕ್ತವಿರುವ ಮೋಹವನ್ನು ಉಂಟುಮಾಡಿಕೊಳ್ಳುವದು ಮನುಷ್ಯನ ಕರ್ತವ್ಯವಾಗಿದೆ. ಆದರೆ ಇದು ತಾನಾಗಿ ತನ್ನಲ್ಲಿ ಒಡಮೂಡಲಾರದು. ಮನುಷ್ಯನು ಜನನವಾದೊಡನೆ ಇದು ಅವನಲ್ಲಿ ಉಂಟಾಗುವದಿಲ್ಲ. ಅಥವಾ ಮುಂದೆ ಅವನು ಪೃಥ್ವಿಯಲ್ಲಿ ಬಾಳುತ್ತ ಬೀಳುತ್ತ ಸತ್ತುಹೋಗುವಾಗಲಾದರೂ ಇದು ಉಂಟಾಗುವದೇ? ಆಗಲೂ ಉಂಟಾಗಲಾರದು. ಇಂಥ ಮಹತ್ತರವಾದ ಮೋಹವುಳ್ಳವನಿಗೆ ಜನನ ಮರಣಗಳ ಭಯವಿಲ್ಲ. ಮೋಹವೆಂದರೆ ಪರಮಾತ್ಮನೊಡನೆ ಇರುವದು, ಸಂಯೋಗ ಹೊಂದುವದು ಮತ್ತು ಆನಂದಿಸುವದು. ವಚನಕಾರನು ಭಕ್ತಿಯ ಸ್ವರೂಪವನ್ನು ಈ ಪ್ರಕಾರ ವರ್ಣಿಸುತ್ತಾನೆ (೨).

---

# ಅನುಭಾವದ ಅವಶ್ಯಕತೆ.

## ವಚನಗಳು

೩. ಹರವಸದ ಹಸಿವರಿಯದೆಂದಿಪ್ಪೆನೋ ? ಪರನು ಸುಖವೆಂದಪ್ಪುದೋ ಅಯ್ಯ ಎನಗೆ ? ಉರವಣೆಯ ಸುಖದ ಸೋಂಕಿನಲ್ಲಿ ಪರಿಣಾಮವೆಂದಪ್ಪುದೋ ಅಯ್ಯ ? ಎನಗೆ ಮಹಾಲಿಂಗ ಕಲ್ಲೇಶ್ವರಯ್ಯನ ಶರಣರನುಭಾವವ ಹಾರಿಕೊಂಡೆಂದಿಪ್ಪೆನೋ ಅಯ್ಯ ?

೪. ಉದಕದ ತಂಪುವ ತಾವರೆಯಲ್ಲದೆ ಹೊರಗಣ ಕೊರಡೆತ್ತಬಲ್ಲುದೋ ? ಹೂವಿನ ಪರಿಮಳವ ತುಂಬಿಯಲ್ಲದೆ ಹೊರಗಣ ನೊಣನೆತ್ತ ಬಲ್ಲುದೋ ? ಕ್ಷೀರದ ರುಚಿಯ ಹಂಸೆಯಲ್ಲದೆ ಕೆಲದಲ್ಲಿದ್ದ ಬಕನೆತ್ತ ಬಲ್ಲುದೋ ? ಮಾವಿನ ಹಣ್ಣಿನ ರುಚಿಯನರಗಿಳಿಗಳು ಬಲ್ಲವಲ್ಲದೆ ಹೊರಗಣ ಕೋಳಿಗಳೆತ್ತ ಬಲ್ಲವೋ ? ಮಾಟದ ರುಚಿಯನು ನಾಲಿಗೆಯಲ್ಲದೆ ಕಲಿಸುವ ಕೈ ತಾನೆತ್ತ ಬಲ್ಲುದೋ ? ಚಂದ್ರಸೂರ್ಯರಂತರಾಂತರವ ಖೇಚರರು ಬಲ್ಲರಲ್ಲದೆ ಗಗನದೊಳಗಾಡುವ ಹದ್ದುಗಳು ತಾವೆತ್ತ ಬಲ್ಲವೋ ? ಎಲೆ ಮಹಾಲಿಂಗ ಕಲ್ಲೇಶ್ವರ ನಿಮ್ಮ ನಿತ್ಯ ನಿಜೈಕ್ಯರ ನಿಲವನು ಮಹಾನುಭಾವಿಗಳು ಬಲ್ಲರಲ್ಲದೆ ಲೋಕದ ಜಡಜೀವಿಗಳೆನಿಸುವ ಮಾನವರೆತ್ತ ಬಲ್ಲರೋ ?

೫. ಶಿವವಚನ ಗುರುವಚನವ ಪುರಾತನರ ವಚನವ ಕೇಳಿ ಬದುಕಿರಯ್ಯಾ ! ಕೇಳಿದರೆ ಕೃತಾರ್ಥರಪ್ಪಿರಿ. ತನು ಕರಗಿ, ಭಾವ ಬೆಚ್ಚಿ, ಶರಣರಲ್ಲಿ ಅನುಭಾವವ ಕೇಳಿದರೆ ಅದೇ ಮುಕ್ತಿ ನೋಡಿರೋ. ಇಂತಲ್ಲದೆ ಮನ ವ್ಯಾಕುಳವಾದ ಗೀತಗಳಂ ಮನಮುಟ್ಟಿ ಕೇಳಿದಡೆ, ಉಪದೇಶವೆಂತು ಸಲುವುದಯ್ಯಾ? ಮಹಾಲಿಂಗಕಲ್ಲೇಶ್ವರಾ ಗುರುವಚನ ಪರಾಙ್ಮುಖರಿಗೆ ಎಂದೆಂದು ಭವ ಹಿಂಗದು ನೋಡಾ !

೬. ಬರಿಯ ಜ್ಞಾನಿಗಳಾದವರು ಅಂಗದ ಬಲದಲ್ಲಿ ನುಡಿವರು ಲಿಂಗಾನುಭಾವಿಗಳು ಲಿಂಗದ ಬಲದಲ್ಲಿ ನುಡಿವರು. ಸದ್ಭಕ್ತರ ವಚನಂಗಳು ಲಿಂಗದ ನುಡಿಗಳು. ಬರು ಜ್ಞಾನಿಯ ನುಡಿಗಳು ಗಾಳಿಯ ಶಬ್ದಂಗಳು. ಮತಿಗೆಟ್ಟ ಅವಗತಿಯಲ್ಲಿ ಕಾಲೂರಿ ಆಯತಗೆಟ್ಟ ನಾಯ ನಡೆಯ ನಡೆವರು ಅನುಭಾವಿಗಳಪ್ಪರೇ ? ಅಲ್ಲಲ್ಲ. ಅದೆಂತೆಂದಡೆ

ಸುಜ್ಞಾನಿಗಳಾದರೆ ಕಾಮವೇ ಪ್ರಾಣವಾಗಿಹರೇ? ಅನ್ನವೇ ಜೀವವಾಗಿಹರೇ? ವರುಣನ ಹೊದಿಕೆಯನೆ ಹೊದೆದು ಚಂದ್ರಮನ ತೆರೆಯ ಲೊರಗಿ, ಪರದಾರಕ್ಕೆ ಕೆಯ್ಯ ನೀಡುವರೇ ಶರಣರಾದರೆ? ಇಂತಪ್ಪರಲ್ಲವಯ್ಯ ನಮ್ಮ ಶರಣರುಗಳು. ಇವರುಗಳು ಪಾತಕಿಗಳು, ಆಶೆಯ ಸಮುದ್ರರು, ಅಂಗ ಶೃಂಗಾರಿಗಳು, ಭವಭಾರಿಗಳು. ಇವರೆಂತು ಸರಿಯಪ್ಪರಯ್ಯಾ ನಮ್ಮ ಲಿಂಗಾನುಭಾವಿಗಳಿಗೆ? ಸರ್ವಾಂಗ ಲಿಂಗವಾಗಿದ್ದ ಮಹಾನುಭಾವಿಗಳ ನಿಲವನು ಮಹಾಲಿಂಗ ಕಲ್ಲೇಶ್ವರ ತಾ ಬಲ್ಲನಲ್ಲದೆ ಕೂತಜ್ಞಾನಿಗಳೆತ್ತ ಬಲ್ಲರು?

## ವಿವರಣೆ

ಸಂಸಾರ ಜೀವಿಗಳು ಪರಮಾತ್ಮನ ಸುಖವನ್ನರಿಯರು. ತಾವಾರೆಂಬುದು ಅವರಿಗೆ ತಿಳಿಯದು. ಆದರೆ ಶಾಶ್ವತ ಸುಖವು ಏತರಿಂದ ಎಂಬುದನ್ನು ಅವರು ತಿಳಿಯಬೇಕು. ಮತ್ತು ಅದನ್ನು ಯಾವಾಗ ಹೊಂದುವೆವೋ ಎಂಬುದನ್ನು ಅವರು ಕಾಂಕ್ಷಿಸುತ್ತಿರಬೇಕು. ಮನುಷ್ಯನಿಗೆ ಉತ್ಕಟೇಚ್ಛೆ ಇದ್ದರೆ ಮಾತ್ರ ಅವನು ಕಾರ್ಯದಲ್ಲಿ ತತ್ಪರನಾಗುವನು. ಆದರೆ ಕಾರ್ಯವು ಸರಿಯಾದ ಮಾರ್ಗದಲ್ಲಿ ನಡೆಯಬೇಕಾದರೆ, ಶರಣರ ಅನುಭಾವವು ಬೇಕು. ಇವರು ತಿಳಿದು ಆಚರಿಸುವವರು. ಆದ್ದರಿಂದ ಅವರ ಬೋಧೆಯು ಅವಶ್ಯವಿರುತ್ತದೆ. (೩)

ಆದರೆ ಈ ಬೋಧೆಯು ಎಲ್ಲರಿಗೂ ಅಳವಡದು. ಯಾರಿಗೆ ಯೋಗ್ಯತೆಯು ಇದೆಯೋ ಅವರೇ ಅದನ್ನು ಗ್ರಹಿಸಲು ಶಕ್ತರು. ನೀರಿನ ತಂಪನ್ನು ತಾವರೆಯು ಬಲ್ಲದು. ಅದು ಕೊರಡಿಗೆ ತಿಳಿಯದು. ಪರಿಮಳವನ್ನು ತುಂಬಿ ಬಲ್ಲದು. ಆದರೆ ನೊಣವು ತಿಳಿಯಲಾರದು. ಕ್ಷೀರದ ರುಚಿಯನ್ನು ಹಂಸೆಯು ಬಲ್ಲದು. ಆದರೆ ಬಕಪಕ್ಷಿಗೆ ಅದು ತಿಳಿಯದು. ಹಣ್ಣಿನ ರುಚಿಯನ್ನು ಗಿಳಿಯು ಬಲ್ಲದು. ಅದು ಕೋಳಿಗಳಿಗೆ ತಿಳಿಯದು. ಅಡಿಗೆಯ ರುಚಿಯನ್ನು ನಾಲಿಗೆ ಬಲ್ಲುದು. ಕೈಗೆ ಅದು ತಿಳಿಯದು. ಚಂದ್ರಸೂರ್ಯರ ನಿಜಸ್ಥಿತಿಯನ್ನು ದೇವತೆಗಳು ಬಲ್ಲರು. ಆದರೆ ಹದ್ದುಗಳು ತಿಳಿಯಲಾರವು. ಹಾಗೆಯೇ ಲಿಂಗಾಂಗ ಸಾಮರಸ್ಯದ ಸುಖವನ್ನು ಮಹಾನುಭಾವಿಗಳು ಬಲ್ಲರಲ್ಲದೆ ಸಂಸಾರದ ಜಂಜಡದಲ್ಲಿರುವವರಿಗೆ ಗೊತ್ತಾಗದು. (೪)

ಶಿವಾನುಭಾವವನ್ನು ತಿಳಿಯುವದು ವಚನಶಾಸ್ತ್ರದಿಂದ ಸಾಧ್ಯವೇ ಹೊರ್ತು, ಇತರ ಗೀತಗಳಿಂದ ಸಾಧ್ಯವಲ್ಲ. ಆದರೆ ವಚನಶಾಸ್ತ್ರವನ್ನು ತನುಕರಗಿ ಮನಕರಗಿ ಭಾವ ಅಚ್ಚೊತ್ತಿ ಕೇಳತಕ್ಕದ್ದು ಮತ್ತು ಅದ ರಂತೆ ನಡೆಯತಕ್ಕದ್ದು. ಅಂದರೆ ಭವವು ದೂರಾಗುವದು. (೫)

ವಚನಗಳನ್ನು ಕೇಳಿ ಕೇಳಿ ಹಾಗೆ ನಡೆಯದವರು ಕೇವಲ ಬಾಹ್ಯ ದಲ್ಲಿ ಆಚರಿಸುವಂಥವರು. ಅವರು ಲಿಂಗಾನುಭಾವಿಗಳಲ್ಲ. ಅವರು ಹಿಂದಿನದನ್ನೂ ಅರಿಯರು. ಮುಂದಿನದನ್ನೂ ಅರಿಯರು. ಶಿವ ಶರಣರ ವಚನಗಳು ಲಿಂಗದಿಂದ ಬಂದ ನುಡಿಗಳಿರುತ್ತವೆ. ಇತರ ಅಜ್ಞಾನಿಗಳು ನುಡಿಯುವ ಮಾತುಗಳು ಗಾಳಿಯ ಶಬ್ದಗಳಂತಿರುತ್ತವೆ. ಅವುಗಳಲ್ಲಿ ಹುರುಳಿಲ್ಲ. ಅವರು ದುರ್ವ್ಯಸನ ದುರ್ವ್ಯಾಪಾರಗಳಲ್ಲಿ ತೊಡಗಿ ಕಷ್ಟಪಡುತ್ತಾರೆ. ಅವರು ಪಾತಕಿಗಳು. ಅವರ ಶಬ್ದಗಳನ್ನು ನಂಬದೆ ಶಿವಶರಣರ ವಾಕ್ಯದಂತೆ ನಡೆದರೆ, ಮನುಷ್ಯನು ಶ್ರೇಷ್ಠ ಸ್ಥಿತಿಯನ್ನು ಹೊಂದುತ್ತಾನೆ. (೬)

---

# ಭಕ್ತಸ್ಥಲ

## ವಚನಗಳು

೭. ಎತ್ತೆತ್ತ ನೋಡಿದತ್ತತ್ತ ನಿಮ್ಮನೆ ಕಾಂಬೆ. ಎದ್ದು ನೋಡಿ ನಿಮ್ಮನೆ ಕಾಂಬೆ. ನಿದ್ರೆಗೆಯ್ದು ನಿಮ್ಮನೆ ಕಾಂಬೆ. ಅಹೋರಾತ್ರಿಯಲ್ಲಿ ನಿಮ್ಮ ಧ್ಯಾನದಲ್ಲಿರಿಸು ಮಹಾಲಿಂಗ ಕಲ್ಲೇಶ್ವರಾ.

೮. ಬಾರೆ ಏಕಯ್ಯ ನಿಮ್ಮ ಬರವ ಹಾಡುತ್ತಿದೆನೆ. ಸಾರೆ ಏಕಯ್ಯ ನಿಮ್ಮ ಸರವ ಹಾರುತ್ತಿದೆನೆ. ತೋರೆ ಏಕಯ್ಯ ನಿಮ್ಮ ಲಿಂಗರೂಪ ನಿಜಜ್ಞಾನವ ? ಪೂಜೆಗೊಂಬಾಗಲಲ್ಲದೆ ಎನ್ನ ಮನಕ್ಕೆ ಬರಲಾಗದೇ ? ಮಹಾಲಿಂಗ ಕಲ್ಲೇಶ್ವರಾ ಕರುಣವಿಲ್ಲವೇ ತಂದೆ ?

೯. ಮುನಿಸ ಮುನಿದಡೆ ಶ್ರೀ ಗಂಧದ ಮುರುಡಿನಂತಿರಬೇಕವ್ವಾ. ತೇದಡೆ ಚಂದನದ ಸೀತಳದ ಹಾಗೆಯಾಗಬೇಕವ್ವಾ. ಹೆಣಗುವಲ್ಲಿ ಮೈ ಹಿಡಿದು ಹೆಣಗುತ್ತಿರಬೇಕವ್ವಾ. ಮಹಾಲಿಂಗ ಕಲ್ಲೇಶ್ವರನ ನೆರೆವ ಭರದಿಂ ನೊಂದು ಉದಕ ಮೇಲ್ವಾಯ್ದ ಹಾಗೆ ಇರಬೇಕವ್ವಾ.

೧೦. ಹಸಿಯ ಕಪಾಲದಲ್ಲಿ ಉಂಬನೆಂಬರು. ಅದು ಹುಸಿಯೋ ? ಸದ್ಭಕ್ತನ ಮುಖದಲ್ಲಿ ಉಂಬನಾಗಿ. ಅಸ್ತಿಗಳ ತೊಟ್ಟಹನೆಂಬರು. ಅದು ಹುಸಿಯೋ ? ಸದ್ಭಕ್ತ ದೇಹಿಕ ದೇವನಾಗಿ. ಚರ್ಮವ ಹೊದ್ದಿಹನೆಂಬರು. ಅದು ಹುಸಿಯೋ ? ಸದ್ಭಕ್ತನ ದೇಹದಲ್ಲಿ ಸದಾ ಸನ್ನಿತನಾಗಿಪ್ಪನಾಗಿ. ಅದೆಂತೆಂದೊಡೆ, ಬ್ರಹ್ಮಾಂಡ ಪುರಾಣದಲ್ಲಿ ॥ಶ್ಲೋ॥ ನೈವೇದ್ಯಂ ಪುರತೋ ನ್ಯಸ್ತಂ ದರ್ಶನಾತ್ಸ್ವೀಕೃತಂ ಮಯಾ । ರಸಾನ್ಭಕ್ತಸ್ಯ ಜಿಹ್ವಾಗ್ರಾದಶ್ನಾಮಿ ಕಮಲೋದ್ಭವ, ॥ಮತ್ತಂ॥ ವಾತುಳ ತಂತ್ರೆ ॥ಶ್ಲೋ॥ "ಯಾವಸ್ನಿರ್ವಹತೆ ಯಸ್ತು ಯಾವಜ್ಜೀವಂ ಪ್ರತಿಜ್ಞಯಾ । ಮನುಷ್ಯ ಚರ್ಮಣಾ ಬದ್ಧಸ್ಸ ರುದ್ರೋ ನಾತ್ರ ಸಂಶಯಃ" ಎಂದುದಾಗಿ ಮಹಾಲಿಂಗ ಕಲ್ಲೇಶ್ವರದೇವಾ ನಿಮ್ಮ ಸುಳುಹು ಪರಕಾಯ ಪ್ರವೇಶವಾಗಿಹುದು.

೧೧. ಹಗಲು ಹಸಿವೆಗೆ ಕುದಿದು, ಇರುಳು ನಿದ್ರೆಗೆ ಕುದಿದು, ಉಳಿದಾದ ಹೊತ್ತೆಲ್ಲ ಅಶನ ವ್ಯಸನಕ್ಕೆ ಕುದಿದು, ಅಯ್ಯ ನಿಮ್ಮನರಿಯದ ಪಾಪಿ ನಾನಯ್ಯ. ಅಯ್ಯ ನಿಮ್ಮನರಿಯದ ಕರ್ಮಿ ನಾನಯ್ಯ.

ಮಹಾಲಿಂಗ ಕಲ್ಲೇಶ್ವರಾ ಅಸಗ ನೀರಡಿಸಿ ಸತ್ತ ಶಿರನಂತಾಯಿತ್ತೆನ್ನ ಯುಕ್ತಿ.

೧೨. ಕರ್ತು ಭೃತ್ಯನ ಪಾಶಕ್ಕೆ ಐದಿದಲ್ಲಿ, ಆತನ ಭಕ್ತಿಯನರಿದ, ತಾನೊಡಗೂಡಿದಲ್ಲಿ ಆತ ಕೊಟ್ಟುದ ತಾ ಮುಟ್ಟದೆ, ಆತನಲ್ಲಿ ದುರ್ವಾಕ್ಯ ದುಶ್ಚರಿತ ಪಗುಡಿ ಪರಿಹಾಸಕಂಗಳ ಬೀರದೆ, ಆತನ ಚಿತ್ತ ನೋವಂತೆ ಮತ್ತಾವ ಬಂಧನದ ಕಟ್ಟನಿಕ್ಕದೆ, ಆತ ತನ್ನ ತಾ ಅರಿದು ಮಾಡಿದಲ್ಲಿ, ಅದು ತನಗೆ ಮುನ್ನಿನ ಸೊಕ್ಕೆಂಬುದನರಿದು ಗನ್ನ ಗತಕಿನಿಂ, ಬಿನ್ನಾಣದಿಂದೊಂದುವಂ ಮುಟ್ಟದೆ, ಆ ಪ್ರಸನ್ನವಪ್ಪ ವಸ್ತು ಮಹಾಮಹಿಮ ಕಲ್ಲೇಶ್ವರ ಲಿಂಗವು ತಾನಾದ ಶರಣ.

೧೩. ಮನ ಮನವೇಕಾರ್ಥವಾಗದವರಲ್ಲಿ, ತನುಗುಣನಾಸ್ತಿಯಾಗದವರಲ್ಲಿ, ಬುದ್ಧಿಗೆ ಬುದ್ಧಿ ಓರಣವಾಗದವರಲ್ಲಿ ಭಾವಕ್ಕೆ ಭಾವ ತಾರ್ಕಣೆಯಾಗದವರಲ್ಲಿ ಶೀಲಕ್ಕೆ ಶೀಲ ಸಮಾನವಿಲ್ಲದವರಲ್ಲಿ ಅವರೊಡನೆ ಕುಳ್ಳಿರಲಾಗದು. ಸಮಗಡಣದಲ್ಲಿ ಮಾತಾಡಲಾಗದು. ಅದೇಕೆಂದೊಡೆ 'ಸಂಸರ್ಗತೋಃ ದೋಷಗುಣಾ ಭವಂತಿ' ಎಂದುದಾಗಿ, ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಸದ್ಭಕ್ತಿಯ ನರಿಯದವರ ಸಂಗದಿಂದ ಕೈಲಾಸಕ್ಕೆ ದೂರವಾಗಿಪ್ಪರಯ್ಯ.

೧೪. ನಿಮ್ಮ ನೆನೆವ ಮನಕ್ಕೆ ಜ್ಞಾನ ಸಿದ್ಧಿ ಎಂತಪ್ಪುದೆಂದರಿಯೆನಯ್ಯ. ಕರ್ಮದೊಳಗಣ ಬಯಲ ಮೋಹವೆನ್ನ ಬೆನ್ನ ಬಿಡದು. ಅನ್ಯ ವಿಷಯ ಭಿನ್ನ ರುಚಿಯಲೆನ್ನ ಮನವು ಹಾವುವ ಪ್ರಾಣವನ್ನಕ್ಕರ, ನಿಮ್ಮ ನೆನೆದಿಹೆನೆಂಬ ಮನದ ಕಲಿತನವ ನೋಡಾ ಮಹಾಲಿಂಗ ಕಲ್ಲೇಶ್ವರಾ

೧೫. ಅಂದಂದಿನ ದಿನಕ್ಕೆ ಬಂದ ದಂದುಗಕ್ಕೆ ಮನ ನಾಚದ ಪರಿಯ ನೋಡಾ. ಕಂದದೀ ಮನವು ಕುಂದದೀ ಮನವು. ಲಿಂಗದೇವನ ಒಲವು ಎಯ್ದದೆಂದು ಮರುಗುವ ಪರಿಯ ನೋಡಾ. ಮಹಾಲಿಂಗ ಕಲ್ಲೇಶ್ವರಯ್ಯ ಈ ಬೆಂದ ಮನವು ಹೇಸದ ಪರಿಯ ನೋಡಾ.

೧೬. ಆಗಮಾಚಾರವಲ್ಲದೆ ಶಿವಭಕ್ತರಲ್ಲೆಂಬ ಭ್ರಮಿತರೆಲ್ಲರು ನೀವು ಕೇಳಿರೋ! ಮುಕ್ಕುಳಿಸಿದ ನೀರ ಮಜ್ಜನಕ್ಕೆರೆವುದು ಇದು ಆವಾಗಮಾಚಾರ? ಸರುವ ಕಟ್ಟ ಪತ್ರೆಯ ಹರಿದು ಹಾಕುವುದಿದಾವ ಮಂತ್ರದೊಳಗು? ಸರ್ರನೆ ಹರಿತಂದು ಬಿರ್ರನೆ ಕಲ್ಲಿಲಿಡುವುದಿದಾವ ಪೂಜೆಯೊಳಗು? ಬಹು ಬುದ್ಧಿ ಬೇಡ. ಶರಣೆಂದು ಶುದ್ಧ

ರಪ್ಪುದು ಮಹಾಲಿಂಗ ಕಲ್ಲೇಶ್ವರನು ತನ್ನ ಭಕ್ತರ ನಿಲವ ತಾನೇ ಬಲ್ಲನು.

೧೭. ಪರಮ ಪದವಿಯು ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ. ಪರಮ ಪದವಿಯು ನಿಮ್ಮೆದೆಯಲ್ಲಿ ಇರಿದುಕೊಳ್ಳಿ. ಎನಗೆ ನಿಮ್ಮ ತೊತ್ತುಸೇವೆಯೇ ಸಾಕು. ಮಹಾಲಿಂಗ ಕಲ್ಲೇಶ್ವರದೇವಾ, ಪರಮ ಪದವಿಯು ನಿಮ್ಮ ಎದೆಯಲ್ಲಿ ಇರಿದುಕೊಳ್ಳಿ.

---

## ವಿವರಣೆ

ಭಕ್ತಸ್ಥಲದಲ್ಲಿಯುವನು ಪರಮಾತ್ಮನಲ್ಲಿ ವಿಶ್ವಾಸವುಳ್ಳವನಾಗಿರಬೇಕು. ಅವನನ್ನೇ ಸದಾ ಧ್ಯಾನಿಸುತ್ತಿರಬೇಕು. ಅವನು ಸದಾಚಾರಿಯೂ ಸುಶೀಲನೂ ಆಗಿ ನಡಿಯಬೇಕು. ಭಕ್ತಸ್ಥಲವು ಷಟ್‌ಸ್ಥಲಗಳನ್ನು ಅನುಸರಿಸಿ ನಡೆಯುವವನಿಗೆ ತಳಹದಿಯಾಗಿರುತ್ತದೆ.

ಪರಮಾತ್ಮನೊಡನೆ ಹೇಗೆ ಭಕ್ತನಿರಬೇಕೆಂಬುದನ್ನು ವಚನಕಾರನು ೭ನೆಯ ವಚನದಲ್ಲಿ ಬಹು ಸುಂದರವಾಗಿ ವರ್ಣಿಸಿದ್ದಾನೆ. ಅವನು ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗಿರಬೇಕು. ಆಗ ಜಗತ್ತಿನ ವಸ್ತುಗಳಲ್ಲೆಲ್ಲ ಪರಮಾತ್ಮನೇ ಗೋಚರನಾಗುತ್ತಾನೆ. ಜಗತ್ತಿನಲ್ಲಿ ಸೃಷ್ಟಿ ಸೌಂದರ್ಯವು ತುಂಬಿಕೊಂಡಿರುತ್ತದೆ. ಅದು ಪರಮಾತ್ಮನ ಪ್ರಕಾಶವೇ ಎಂಬ ಭಾವನೆಯು ಉಂಟಾಗುತ್ತದೆ ಜಗತ್ತಿನ ವ್ಯಾಪಾರಗಳು ಪರಮಾತ್ಮನ ಪ್ರೇರಣೆಯಿಂದ ನಡೆಯುತ್ತಿದೆಂಬುದರ ಇದರ ಅರಿವು ಭಕ್ತನಲ್ಲಿ ಉಂಟಾಗಿ ಅವುಗಳಲ್ಲ ಪರಮಾತ್ಮನ ಚಲನೆಯೇ ಎಲ್ಲಿ ಅವನಿಗೆ ತೋರಹತ್ತುತ್ತದೆ. ಇದರಿಂದ ಅವನು ತನ್ನ ಆಚರಣೆಯಲ್ಲಿ ಯಾವಾಗಲೂ ಪ್ರೇಮಪೂರಿತನಾಗಿ ವರ್ತಿಸುತ್ತಾನೆ. ಇದಕ್ಕೆ ಪರಮಾತ್ಮನಲ್ಲಿ ನೆಲೆಗೊಂಡ ಭಕ್ತಿರಸವೇ ಕಾರಣವಾಗಿರುತ್ತದೆ. (೭)

ಆದರೆ ಈ ವೃತ್ತಿಯಲ್ಲಿ ಅಹಂಭಾವವಿರಕೂಡದು. ಯತ್ಕಿಂಚಿತ್ತಾದರೂ ಇರಕೂಡದು. ಎಲ್ಲವೂ ಪರಮಾತ್ಮನ ಕರುಣದಿಂದಲೇ ಘಟಿಸುತ್ತದೆಂದು ತಿಳಿದು ವರ್ತಿಸಬೇಕು. ಈ ಕರುಣವನ್ನೇ ಪರಮಾತ್ಮನಲ್ಲಿ ಯಾವಾಗಲೂ ಅವನು ಬೇಡಿಕೊಳ್ಳುತ್ತಿರಬೇಕು. ಈ ಬೇಡಿಕೆಯ ಸ್ವರೂಪವು ಯಾವವಿಧವಾಗಿರುತ್ತದೆಂಬದನ್ನು ವಚನಕಾರನು ೮ನೇ ವಚನದಲ್ಲಿ ವರ್ಣಿಸಿದ್ದಾನೆ. (೮)

# ನಿಡುಮಾಮಿಡಿ ಮಠದ ಇತಿಹಾಸ.

**ವಾಚಕರಿಗೆ ಸೂಚನೆ:**— ಈ ಲೇಖದ ಪುಟ ೨೦೬ ಇದರ ಅಂತ್ಯ ಓಳಿಯ ತರುವಾಯ ಕೆಳಗೆ ಕಾಣಿಸಿದ ಓಳಿಗಳು ಕಂಪೋಜ ಕಾಲದಲ್ಲಿ ತಪ್ಪಿ ಉಳಿದಿರುತ್ತವೆ. ಇವುಗಳನ್ನು ಅದರ ಮುಂದೆ ಸೇರಿಸಿ ಓದತಕ್ಕದ್ದು. ಅವು ಯಾವವೆಂದರೆ:—

ಗೀ॥ ಭಕ್ತರಕ್ಷಣ ಶೀಲುಂಡು ಶಕ್ತಿಧರುಡು ।
ಕಂದಿ ಗಾಂಭೀರ್ಯುಂಡಲ ಕೇಕಿ ಸೈಂಧವುಂಡು ॥
ಬಾಹುಲೇಯಾಹ್ವಯುಂಬುನ ಬರಗುವಾಡು ।
ವಾರ್ತಕೊಕ್ಕಿನ ಶರದಭ್ರಕೀರ್ತಿಘನುಡು ॥

ಕಂ॥ ಅಂಚಿಕಮುಗ ಕೌಪೀನಮು
ಕಾಂಚನಮಯ ಯಜ್ಞೋಪವೀತ ಕಾಂತುಲವರುಸನ್ ।
ಮಿಂಚಿನ ಕಾಯಮು ರೂಪಂ
ಬೆಂಚಗವಶ ಮುಗುನೆ ಕುಂಡಲೀಂದ್ರುನ ಕೈನನ್ ॥

ವರ್ಣನೆಯು ಮನೋಹರವಾಗಿದೆ.

ಬ್ರಹ್ಮಚಾರಿಯ ವೇಷದಲ್ಲಿದ್ದ ಸುಬ್ರಹ್ಮಣ್ಯ (ಷಣ್ಮುಖ) ಸ್ವಾಮಿಯನ್ನು ದರ್ಶಿಸಿ ಸ್ವಲ್ಪ ಕಾಲ ವೀರಶೈವ ಮತದ ರಹಸ್ಯಗಳನ್ನು ತರ್ಕಿಸುತ್ತಾರೆ. ಸ್ವಾಮಿಯು ಅಂತರ್ಹಿತನಾದ ಮೇಲೆ ಶ್ರೀಯವರು ಪುಲಕಿತಗಾತ್ರರಾಗಿ ಅಲ್ಲಿಂದ ಮುಂದೆ ನಂಜನಗೂಡು ಕ್ಷೇತ್ರಕ್ಕೆ ದಯಮಾಡಿಸುತ್ತಾರೆ.

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

ರಾ॥ ಸಾ॥ **ಫ. ಗು. ಹಳಕಟ್ಟಿ**ಯವರು ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ

ಇವರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾಧಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ.** ೪—೮—೦

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

ಇವನ್ನು ವಿಜಾಪುರದಲ್ಲಿ **ರಾ॥ ಸಾ॥** ಫ. ಗು. ಹಳಕಟ್ಟಿ ಇವರು **ತಮ್ಮ "ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೯೩೦ (ಅ) ದ ನೆಯಲ್ಲಿ ಪ್ರಸಿದ್ಧಿಸಿದರು.

R. N. B. 2554

ಶ್ರೀ




ಸಂಪುಟ ೧೩ ] ಎಪ್ರೇಲ ೧೯೩೯. [ ಸಂಚಿಕೆ ೭

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೩] ಎಪ್ರಿಲ್ ೧೯೩೯ [ಸಂಚಿಕೆ ೭


## ಬಸವರಾಜದೇವ.


ಪ್ರೊ. ಎಸ್. ಎಸ್. ಮಾಳವಾಡ, ಎಮ್. ಎ. ಪ್ರೊಫೆಸರ ಕರ್ನಾಟಕ ಕಾಲೇಜ
ಧಾರವಾಡ.


(ಮುಂದುವರಿದುದು.)

ಬಸವರಾಜನು ಜನ್ಮದುರಾಶೆಯನ್ನು ನೀಗಿ ಕರ್ಮದ ಸಂಕೋಲಿಯನ್ನು ತೆಗೆದುಹಾಕಿ ಶ್ರೀ ಸಂಗಮೇಶ್ವರ ಪೂಜಾರಸಮಗ್ನ ಚಿತ್ತನಾಗಿದ್ದನು. ಹೀಗೆ ಆತನು ಕಪ್ಪಡಿ ಸಂಗಮದಲ್ಲಿದ್ದ ಭಕ್ತಿಯಿಂದ ಯಾವಾಗಲೂ ಶಶಿಧರನನ್ನು ಪೂಜಿಸುವದಕ್ಕಾಗಿ ಪ್ರಭಾತ ಸಮಯಕ್ಕೆ ಮೊದಲೇ ಏಳುತ್ತಿದ್ದನು. ಎದ್ದು ಭಸ್ಮವನ್ನು ಧರಿಸಿ ಸಂಗನಿಗೆ ಸಾಷ್ಟಾಂಗ ನಮಸ್ಕಾರಮಾಡಿ ತೀರ್ಥವನ್ನು ತರಲು ಕರಂಡಕದೊಡನೆ ಹೊರಗೆ ಹೊರಡುತ್ತಿದ್ದನು. ದೂರದಲ್ಲಿ ಪೂದೋಂಟವೊಂದನ್ನು ಕಂಡು ಕುಣಿಕುಣಿದು ಸಂತಸದಿಂದ ಎಂಟುಮುಡಿ ಹಿಗ್ಗಿ ಮೈಯುಬ್ಬಿ ಪೂವಿನ ಕರಂಡಿಗೆಯನ್ನು ಕೆಳಗೆ ಇಳಿಸಿ ಹೂವನ್ನು ಎತ್ತಲು ಪ್ರಾರಂಭಿಸುತ್ತಿದ್ದನು. ಅಳಿಯು ಎರಗದ, ಅನಿಲನು ಅಲುಗದ, ರವಿಕಿರಣವು ಪುಗದ, ಸುಳಿಗೊಂಡು, ದಳವೇರಿ, ಹಸುರು ಅಳಿದು, ಬೆಳಪು ಉಳಿದ ಸೊಗಸಾದ ಮೀಸಲ ಮೊಗ್ಗಿಯನ್ನು ಆತನು ಸಂಗಮೇಶನಿಗೆಂದು ಆರಿಸುತ್ತಿದ್ದನು. ಇರವಂತಿಗೆಯ ಮೊರೆವ ಬಿರಿಮುಗುಳ್ಗಳನ್ನು ತೆಗೆದುಕೊಂಡು, ಸೊಂಪಿನಿಂದ ಕಂಪಿಡುವ ಸಂಪಗೆಗಳನ್ನು ಆರಿಸಿಕೊಂಡು, ಹೊಂಪೆಸೆವ ಹೊಂಗೇದಗೆಯ ಹೂಗಳನ್ನು ಎತ್ತಿಕೊಂಡು, ಮಲ್ಲಿಗೆಯ ಅರಳುಮೊಗ್ಗೆ, ಜಾಜಿ ಪಾಟಲ

ಪುಷ್ಪಗಳನ್ನು ಸಡಗರದಿಂದ ಸಂಗನಿಗೆಂದು ಸಂಗ್ರಹಿಸಿದನು. ಆದ ರಂತೆ ಮರುಗದ ಪತ್ರಿ, ಸುರಹೊನ್ನೆ, ಕಮಲ, ಸೇವಂತಿಗೆಗಳನ್ನು ಆಯ್ದು ಕೊಂಡು ನದಿಗೆ ಬರುತ್ತಿದ್ದನು. ಅಲ್ಲಿ ಸೋದಿಸಿದ ಶೀತೋದಕಗಳನ್ನು ತುಂಬಿ ಸ್ವಚ್ಛವಾದ ಬಟ್ಟೆಯಿಂದ ಕೊಡವನ್ನು ಮುಚ್ಚಿಕೊಂಡು ಉತ್ತ ಮೋತ್ತಮ ಭಕ್ತಿಯುಕ್ತನಾದ ಬಸವಣ್ಣನು ಅತ್ತಿತ್ತ ಚಲಿಸದೆ ಇಹ ಪರದ ಪುಣ್ಯ ಪುರುಷನಂತೆ ನಡೆದು ಬರುತ್ತಿದ್ದನು.

ಹೀಗೆ ಬಂದ ಮೇಲೆ ಶಿವದೇವಾಲಯವನ್ನು ಪ್ರವೇಶಿಸಿ ನಲಿನಲಿದು ನೇಹವು ಅಂಕುರಿಸುತಿರಲು ಸಂಗಮೇಶ್ವರನ ಹತ್ತಿರ ಪುಷ್ಪ ತೀರ್ಥಗ ಳನ್ನಿಳುಹಿದನು. ಹಾಗೂ ದೇವ, ತಡವಾಗಿ ಬಂದೆ, ಕ್ಷಮಿಸಯ್ಯ. ದೇವ, ಕೋಪಿಸದಿರು. ಎನ್ನಯ್ಯ, ಎನ್ನರಸ, ಎನ್ನಬಂಧುವೇ ಎನ್ನುತ್ತ, ನನ್ನ ಕಣ್ಣೇ ಗತಿಯೇ ಮತಿಯೇ ಕರುಣಿಸು ಎಂದು ಪ್ರಾರ್ಥಿಸುತ್ತ ಕಸ್ತೂರಿ, ಸಂಪಗೆ, ಶ್ರೀಕಂಧಗಳ ಸುವಾಸನೆಯಿಂದ ಕೂಡಿದ ಸುಂದರ ವಾದ ಸಂಪಿಗೆ ಇರವಂತಿಗೆಗಳಿಂದ ಕೂಡಿದ ಪವಿತ್ರವಾದ ಶೀತೋದ ಕವನ್ನು ಪೊಂಗಳಸದಲ್ಲಿ ತುಂಬಿ, ಕಣ್ಣಳಲಿ ಅತಿಶಯದ ಆನಂದಾಶ್ರು ಗಳು ಸುರಿಯುತ್ತಿರಲು ಸಂಗಮೇಶ್ವರನನ್ನು ಸ್ತುತಿಸುತ್ತ ಮಜ್ಜನಕ್ಕೆರೆ ಯಹತ್ತಿದನು. ತನ್ನ ಇಷ್ಟ ದೇವನನ್ನು ಮುಂಡಾಡುತ್ತ ಹಣೆಯಲ್ಲಿ ಅಚ್ಚೊತ್ತುತ್ತ ಚಂದ್ರಚೂಡನನ್ನು ಸಿರಿಗಂಧದಿಂದ ಅಲಂಕರಿಸಿದನು. ಸುಗಂಧಯುಕ್ತವಾದ ಅನೇಕ ಪುಷ್ಪಗಳಿಂದ ಅಲಂಕಾರ ಮಾಡುತ್ತ ದಣಿಯದೆ ಪೂಜೆ ಮಾಡುತ್ತ ಪೂಜಾ ಸಂಭ್ರಮದಲ್ಲಿ ಕ್ರಮವನ್ನು ಮರೆತು ಅತಿಯಾದ ಸಲಿಗೆಯನ್ನು ತೋರಹತ್ತಿದನು. ತನ್ನ ಕಣ್ಣುಗಳಲ್ಲಿ ಶಿವ ಪೂಜೆಯು ಬರೆಯಲ್ಪಟ್ಟಿದೆಯೋ ಏನೋ ಅನ್ನುವಂತೆ ನೋಡುತ್ತಿದ್ದನು. ತನ್ನ ಚಿತ್ತದೊಳು ಪೂಜೆಯು ಅಚ್ಚೊತ್ತಿದಂತೆ, ತನ್ನ ಚಿತ್ತದಲ್ಲಿಯೇ ಪೂಜೆ ಹುಟ್ಟಿ ಬಂದಂತೆ ನೋಡುತ್ತಿದ್ದನು. ಭಯಭಕ್ತಿಯಿಂದ ಪೂಜೆಯು ಮೆರೆಯುವಂತೆ ಪೂಜೆ ಮಾಡುತ್ತಿದ್ದನು. ಧೂಪದ ಪರಿಮಳವನ್ನು ಈಯುತ್ತ ರನ್ನದಡ್ಡಣಿಗೆಗಳ ಮೇಲೆ ಹೊಳೆಯುತ್ತಿರುವ ಹೊನ್ನ ಪರಿಯಾಣದೊಳಗೆ ಅಮೃತಾನ್ನವನ್ನೂ, ನವಘೃತ ಶಾಕಪಾಕಗಳನ್ನೂ ನವಮಧುರ ರಸವು ಹೊರಸೂಸುತ್ತಿರುವ ಪಕ್ವಾನ್ನಗಳನ್ನೂ ಬಡಿಸಿ ನಡುವೆ ಪರದೆ ಹಿಡಿದು ದೇವನಿಗೆ ಅರ್ಪಿಸಿದನು. ಹಾಗೂ ಭೀತಿ ಯಿಂದ, ಭಕ್ತಿಯಿಂದ ದೇವನಿಗೆ "ದೇವ, ಚಿನ್ನನ ನಿಧಿಯೆ, ಚೋಳನ

ಸುಧೆಯೆ, ಆರೋಗಿಪ್ಪೆ, ಉಮಾರ್ಧಾಂಗ ಸಂಗಮದೇವ, ಎನ್ನ ಸುಖನಿಧಿಯೆ ಗುಣನಿಧಿಯೆ" ಎಂದು ಬೇಡಹತ್ತಿದನು. ನೆರೆಯಲ್ಲಿಯೇ ಕಹಳಾರವವು ಹೊರಹೊಮ್ಮುತ್ತಿತ್ತು. ಭೇರಿ, ಶಂಖಗಳು ಮೊಳಗುತ್ತಿದ್ದವು. ಬಸವಣ್ಣನು ದೇವನಿಗೆ ಭಕ್ತಿಯಿಂದ ಶೀತಲೋದಕವನ್ನೋ, ಶ್ರೀಗಂಧವನ್ನೋ, ಸುವಾಸನೆಯ ಕರ್ಪುರದ ವೀಳೆಯನ್ನೋ ಕೊಟ್ಟನು. ಮಂಗಳಾರುತಿಯನ್ನು ಮಾಡಿದನು; ಚಾಮರ ಬೀಸಿದನು; ಆ ಮೇಲೆ ಶಿವನಿಗೆ ಕನ್ನಡಿದೋರಿದನು; ನಿಂತು ಕೈಮುಗಿದನು. ಕಣ್ಣುಗಳು ಆನಂದಾಶ್ರುಗಳಿಂದ ತುಂಬಿದವು. ಮೆಯ್ಯಲ್ಲಿ ರೋಮಾಂಚಗಳುಂಟಾದವು. ಸಂಗಮದೇವನನ್ನು ಬಗೆಬಗೆಯಾಗಿ ಬಣ್ಣಿಸುತ್ತ "ಎನ್ನ ಕಣ್ಣೊಳಗೆ ಪರಿದಾಡು, ಎನ್ನ ಮನದೊಳಗೆ ಪರಿದಾಡು" ಎಂದು ಬೇಡಿಕೊಂಡನು. ಹೀಗೆ ಸ್ತುತಿಗೆಯ್ಯುತ್ತ ಸ್ನೇಹರಸದೋಳ್ ಕೂಡಿ, ಇಂದುಧರನಲ್ಲಿ ಸಲಿಗೆಯ ಭಕ್ತಿಯನ್ನು ತೋರಿ, ತೊದಳ್ನಾತುಗಳನ್ನು ಆಡುತ್ತ, ಆನಂದದಿಂದ ಉಬ್ಬುತ್ತ, ಉತ್ಸಾಹದಿಂದ ನಗೆಯುತ್ತ, ಪುಟಿಯುತ್ತ, ಕ್ರಮವನ್ನು ಮರೆತು, ಸ್ಮರಣೆಯಿಂದ ಹಿಗ್ಗುತ್ತ ಭವವನ್ನು ಹಿಂಗಹತ್ತಿದನು. ಹಾಗೂ ಬೆದರುತ, ಬಿಕ್ಕುತ, ತೇಗುತ, ತೂಗುತ, ಸುಳಿದು ಸುಖಿಯಾಗುತ್ತ ನಮಿಸುತ, ಕಂಪಿಸುತ, ಹೊಗಳಹತ್ತಿದನು. ಕಂಪಿಸುತ್ತಿರಲು ಮನವು ಅಕ್ಕರಿಂದ ಕರಗಿತು. ಸಾತ್ತ್ವಿಕ ರಸವು ತುಂಬಿರಲು ತನುವು ಜೊಂಪಿಸುತ ಹೊಯ್ದಾಡಹತ್ತಿತು. ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ, ತಣಿತಣಿದು ಆಡುತ್ತ, ಪೊಗಳುತ್ತ ನೋಡುತ್ತ ಶಿವಾನಂದ ರಸದ ಹೊನಲೊಳಗೆ ಈಸಾಡಹತ್ತಿದನು. ಚಿತ್ತದಲ್ಲಿ ಸಂಗನನ್ನು ನೆನೆಯುತ್ತ ತನ್ನನ್ನು ತಾನೇ ಮರೆತನು. ಆ ಮೇಲೆ ಚೇತರಿಸಿಕೊಂಡು ಕಣ್ದೆರೆದು ಕುಳಿತು ಪಾದೋದಕ ಪ್ರಸಾದಗಳನ್ನು ಸ್ವೀಕರಿಸಿದನು.

ಬಸವನ ಭಕ್ತಿಯು ಗಳಿಗೆ ಗಳಿಗೆಗೂ ಬೆಳೆದು ಅನುದಿನವೂ ನೇಹವು ಇಮ್ಮಡಿಯಾಗಿ ನೂರುಮಡಿಯಾಗಿ ಹೆಚ್ಚಿತು. ಆತನು ನಡೆವಲ್ಲಿ, ನುಡಿವಲ್ಲಿ, ಉಡುವಲ್ಲಿ, ಉಂಬಲ್ಲಿ, ಕೊಡುವಲ್ಲಿ, ಕೊಂಬಲ್ಲಿ, ತೊಡೆವಲ್ಲಿ, ಪೊದೆವಲ್ಲಿ ಸಂಗ ಶರಣೆಂದೆನುತಿದ್ದನು. ಸಂಗನಾಮಗಳನು ಪುರಜನಕೆ ಕಲಿಸುತ್ತಿದ್ದನು. ಸಂಗನಾಮದಲ್ಲಿಯೇ ನಿಷ್ಠೆಯನ್ನು ಹಿಡಿದನು. ಸಂಗನ ಸಮ್ಮುಖದಲ್ಲಿ ಆನಂದ ಹೊಂದುತ್ತಿದ್ದನು. ಕೊಂಚ ತಳುವಿ

ವರೆ ವ್ಯಥೆಪಡುತ್ತಿದ್ದನು. ತೀರ್ಥವನ್ನು ಕೊಡುವಾಗ, ಹೂವನ್ನಿಡುವಾಗ ಸಂಗನ ಮೂರುತಿಯು ಮರೆಯಾದರೆ ನೊಂದುಕೊಳ್ಳುತ್ತಿದ್ದನು. ಹೀಗೆ ಬಸವನು ಶಿವನ ಪೂಜೆಯಲ್ಲಿ ನಿರತನಾಗಿರುವಾಗ "ಶಿವಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ ಭವಪೂಜೆ ಬಲಿದು ಪುರುಷಾಕಾರವಾದಂತೆ" ಶೋಭಿಸುತ್ತಿದ್ದನು. ಆತನು "ಲಿಂಗ ಜಂಗಮವೋ ಮೇಣ್ ಜಂಗಮವೇ ಲಿಂಗವೋ ಲಿಂಗ ಜಂಗಮವೆಂದು ಇಳೆಯೊಳಗೆ ವಿಭೇದವೋ" ಎಂಬಂತೆ ಬಸವರಾಜನು ಮೆಚ್ಚಿ ಪೂಜಿಸುತ್ತಿದ್ದನು.

ಸಂಗನು ಬಸವನೋ, ಬಸವನೇ ಸಂಗನೋ, ತಾವಿಬ್ಬರು ಒಬ್ಬರಂತೆ ಒಬ್ಬರೇ ಎಂಬ ಅಭೇದಭಾವದಲ್ಲಿದ್ದು ಬಸವಣ್ಣನು ವಾಡಿಕೆಯಂತೆ ಒಂದುದಿನ ಪೂಜೆಮಾಡಿ ಪ್ರಸಾದ ಸ್ವೀಕರಿಸಿ ಧ್ಯಾನ ಮುದ್ರಾ ನಿದ್ರೆಯಲ್ಲಿರುವಾಗ ಒಂದು ಕನಸ್ಸನ್ನು ಕಂಡನು. ಬೆಳೆದು ಕವಲಾಗಿ, ವಿಶಾಲವಾಗಿ ಹಬ್ಬಿದ ಹವಳಗಳ ಸಮೂಹದಂತೆ ಬೆನ್ನಮೇಲೆ ಇಳಿದು ಬಂದ ಕೆಂಜೆಡೆಗಳು, ಸುತ್ತಿದ ಜಟಾಬಂಧವೆಂಬ ಸುರನದಿಯ ತಡಿಯೊಳಗಿರ್ದ ಕಮಲಗಡ್ಡೆಯಂತಿರುವ ಚಂದ್ರಕಳೆ, ವಿದ್ಯುಲ್ಲತೆಯನ್ನು ಗರ್ಭೀಕೊಂಡಿರಿಸಿರುವ ಶರತ್ಕಾಲದ ಮೋಡಗಳ ಸಂಭ್ರಮದಂತಿರುವ ಭಸಿತದಿಂದ ತುಂಬಿದ ಬಿಸುಗಣ್ಣಿನಿಂದ ಶೋಭಿಸುವ ಹಣೆಯು, ಸಿಂಗಾರದ ತವರುಮನೆಯಂತಿರುವ ಮುಖಮಂಡಲ, ನಯವನ್ನು ಸೂಸುವ ನಾಗಕುಂಡಲ, ಹರನನ್ನು ಕೂಡಲು ಬಂದ ಯಮುನೆಯು ಗಂಗೆಗೆ ಸೋತು ಇಳಿದುಬಂದಂತಿದ್ದ ಕೊರಳ ಕಪ್ಪು, ಕಲ್ಪವೃಕ್ಷದ ಶಾಖೆಗಳಂತಿರುವ ದಶಭುಜಗಳ ಸಮೂಹ, ವೇದಗಳು ತನ್ನನ್ನು ಕಾಣದಂತೆ ಸುತ್ತಿದ ಮಾಯಾಪಟಲವೆಂಬಂತಿರುವ ಗಜ ಚರ್ಮ, ಎಳವಿಸಿಲ ಬೆಳಗನ್ನು ಬಾಲ ಸೂರ್ಯನಿಗೆ ಎರವಲಾಗಿ ಕೊಡುವಂತಿರುವ ಶುಭ್ರ ಕಾಂತಿಯುಕ್ತವಾದ ಪುಲಿದೊಗಲು ಇವುಗಳಿಂದ ಶೋಭಿಸುವ ಪಶುಪತಿಯು ಕನಸಿನಲ್ಲಿ ಬಸವನ ಮನದಲ್ಲಿ ಮೂರ್ತಿಗೊಂಡು ಬಸವನಿಗೆ ಹೀಗೆ ಹೇಳಹತ್ತಿದನು.---
ಎಲೆ ಮಗನೆ ಬಸವಣ್ಣ, ನಿನ್ನನ್ನು ಈ ಭೂಲೋಕದಲ್ಲಿ ಮೆರೆಯುವಂತೆ ಮಾಡುವೆವು. ನೀನು ಬಿಜ್ಜಳರಾಯನಿರುವ ಮಂಗಳವಾಡಕ್ಕೆ ಹೋಗು. ಈ ಮಾತುಗಳನ್ನು ಕೇಳುತ್ತಿರುವಾಗಲೆ ನಿದ್ರೆ ತಿಳಿದು, ಕನಸು ಅಳಿದು, ಅರಿವು ತಿಳಿದು, ಕಣ್ಣು ತೆರೆದು, ಕೆಲಬಲವಂ ನೋಡಿ ಬೆಚ್ಚಿ ಭ್ರಾಂತನಾಗಿ ಅನುತಾಪವೇರಿ, ವಿರಹವು ಹೊಮ್ಮಿ, ಕಣ್ಗೆಟ್ಟು, ಅಗಲಲಾರದೆ

ರಂಗಮಂಟಪದಲ್ಲಿಯ ಕಂಭಕ್ಕೆ ಹಾಯ್ದು— ದೇವದೇವ ಸಂಗ, ಕೆಟ್ಟೆಂ ಕೆಟ್ಟೆಂ. ಒಮ್ಮೆಲೆ ಹೀಗೆ 'ಕಣ್ ನೋಡದೆ ಹುಣ್ಣ ನೋಡದೆ' ಹೋಗೆನ್ನ ಬೇಕೇ? ಗಗನದಿಂದ ಬೀಳುವವನಿಗೆ ಆಧಾರವಾಗಿ ನಡುವೆ ತಪ್ಪುವರೆ? ಕಾಡುಕಿಚ್ಚಿನಿಂದ ಬೇಯುವವನಿಗೆ ತಂಪಿನ ಸೋನೆಯು ಮಳೆಯಾಗುತ್ತ ಬಿಡುವರೆ? ನಡುಗಡಲಲ್ಲಿ ಮುಳುಗುವವನಿಗೆ ತೆಪ್ಪವಾಗುತ್ತ ಹಿಂದೆ ಸರಿಯಬೇಕೆ? ನರಲೋಕದಲ್ಲಿ ನನ್ನನ್ನು ಉದ್ಧರಿಸಲೆಂದು ಬಂದ ಗುರುವೇ, ಪರಮಬಂಧುವೇ, ಪ್ರಾಣವೇ, ಬೆಳದಿಂಗಳೇ ಆಮೇಲೆ ಈ ಕಿಚ್ಚೇಕೆ? ಅಮೃತವೇಕೆ ಆಮೇಲೆ ವಿಷವೇಕೆ? ಬೆಳಗೇಕೆ ಈ ಕತ್ತಲೆಯೇಕೆ ಸೀನೇಕೆ ಈ ನುಡಿಯೇಕೆ? ಹೊದ್ದಿದರಂ ಹೋಗೆಂದು ಹೇಳಬೇಕೆ ಸಮೀಪ ಬಂದವರನ್ನು ದೂರ ಸರಿಸಬೇಕೆ? ನಂಬಿದವರ ಗೋಣು ಕೊಯ್ಯುವರೇ ಶಿಶುವ ಇರಿವರೆ? ಪಶುವ ಕೊಲುವರೇ? ಎನ್ನಂ ಬಿಡುವರೆ? ಕರುಣಿ ಕರುಣಿ, ನಿನ್ನ ಅರ್ಚಿಸಿದುದಕ್ಕೆ ಇದೇ ಫಲವೇ? ಇನ್ನೇನು ಮಾಡಲಿ, ಎಂದು ಆಕ್ರೋಶ ಮಾಡಿ ಮುಂಬಂದು ಸಂಗನನ್ನು ಅಪ್ಪಿಕೊಂಡು ಅತ್ತು ಹಲುಬಿ ಗೋಳಿಟ್ಟು ಮೊರೆಯಿಟ್ಟು ಮೂರ್ಛೆ ಹೋದನು. ಆ ಮೇಲೆ ಹೇಗೋ ಮೂರ್ಛೆ ತಿಳಿದು ಎದ್ದು ಮನವಲ್ಲದ ಮನದಿಂದ ಅಗ್ಘವಣಿ, ಹೂಗಳನ್ನು ತಂದು ಪೂಜೆಮಾಡಿ, ನೈವೇದ್ಯಕೊಟ್ಟು ಮೋಹದ ಮುನಿಸು ಮನದಲ್ಲಿ ತುಂಬಿ, ಪ್ರಣಯಕಲಹವು ಬಲಿದು ಪ್ರಸಾದವನು ಕೈಕೊಳ್ಳದೆ ಪಶುಪತಿಯ ಪಾದದ ಕೆಳಗೆ ಬಿದ್ದುಬಿಟ್ಟನು. ರಾತ್ರಿಯಲ್ಲಿ ಶಿವನು ಭಕ್ತನ ಇಂವನ್ನು ನೋಡಿ ಕೊರಗಿ, ಭಕ್ತಿಯ ಭರಕ್ಕೆ ಕಾತುರಗೊಂಡು ಅಗಲಲಾರದ ಮಗನನ್ನು ಕನಸಿನಲ್ಲಿ ಕಂಡು—ಎಲೆ ಮಗನೆ, ಎಲೆ ಕಂದ, ಎಲೆ ಬಸವ ನಿನ್ನನಗಲಿ ನಾನಿರಲಾರೆ. ನಿನಗಿನಿತು ವ್ಯಥೆಯೇಕೆ? ನಿನ್ನೊಡನೆ ನಾನು ಬಿಡದೆ ಬರುವೆ. ನಾಳೆ ಮಧ್ಯಾಹ್ನ ಶುದ್ಧಾಂಗನಾಗಿ ನಂದಿಕೇಶ್ವರನ ಮುಂದೆನ್ನ ನೆನೆವುತ್ತ ಕೂತಿರು. ವೃಷಭನ ಮುಖಾಂತರ ನಾವೆ ಬರುವೆವು. ಆತನೆ ನಿನಗೆ ಸದ್ಗುರುವು. ಆ ಮೇಲೆ ನಮ್ಮನ್ನು ಪೂಜಿಸುತ್ತ ಭಕ್ತರ ಬಂಧುವಾಗಿ, ಶರಣರ ಪರುಷದ ಕಣಿಯಾಗಿ, ನಿತ್ಯ ಸುಖಿಯಾಗಿ ಪರಸಮಯದ ಗರ್ವವನ್ನು ನಿಲಿಸಿ, ಭಕ್ತರನ್ನು ಗೆಲಿಸಿ ಪವಾಡಗಳನ್ನು ತೋರಿ ಲೌಕಿಕ ಧರ್ಮವನ್ನು ಮೀರಿ ಕಡುನಿಷ್ಠೆಯನ್ನು ಹೇರಿ ಪರಮ ಸುಖದಿಂದ ಇರಬೇಕು ಎಂಬುದಾಗಿ ಆದೇಶಗೆಯ್ದು ಅದೃಶ್ಯನಾದನು. ಬಸವನು ನಿದ್ದೆ ತಿಳಿದು ಏಳಲು ಹರನ ಕರುಣೋದಯದಂತೆ ಅರುಣೋದಯವಾಯಿತು. ಆಗ ಉತ್ಸಾಹದಿಂದ

ಸಂತಸದಿಂದ ಹರನ ಕರುಣೆಯನ್ನು ಸ್ಮರಿಸಿ ಭಕ್ತಿಭರದ ಆವೇಶದಿಂದ ಭೋಂಕನೆ ಎದ್ದು ಸಂಗಂಗೆ ಪೊಡಮಟ್ಟು ಧವಳ ವಸ್ತ್ರವನುಟ್ಟು ಭಸ್ಮವನ್ನು ಧರಿಸಿ, ರುದ್ರಾಕ್ಷೆಗಳನ್ನು ಹಾಕಿಕೊಂಡು ಸಂಗಮೇಶ್ವರನಿಗೆ ಮಜ್ಜನ ಪೂಜೆ ಆರೋಗಣೆಗಳನ್ನು ನಡೆಸಿದನು. ಹಾಗೂ ರಂಗಮಂಟಪದಲ್ಲಿದ್ದ ನಂದಿಕೇಶ್ವರನಿಗೆ ನಮಸ್ಕಾರ ಮಾಡಿ ಕೂತನು. ಸಂಗಮೇಶ್ವರ ಧ್ಯಾನದಲ್ಲಿ ಬಸವನು ಕೂತಿರುವಾಗ ಶಿವನ ಸೂಚನೆಯಂತೆ ನಂದಿಯ ದಿವ್ಯ ಮುಖದಿಂದ ಲಿಂಗವು ಹೊರಬರಹತ್ತಿತು. ಆಗ ಬಸವನು ಸ್ನೇಹರಸಭರಿತನಾಗಿ ಕೈಯನ್ನು ಮುಂದೆ ಚಾಚಿದನು. ವೃಷಭರಾಜನು ಶಿವನ ಅಣತಿಯಂತೆ ಬಸವಣ್ಣನ ಹಸ್ತದಲ್ಲಿ ಲಿಂಗವನ್ನು ಇಟ್ಟನು. ಬಹುವಿಧದ ವಾದ್ಯಗಳು ಮೊಳಗುತ್ತಿರಲು ಪುಷ್ಪವೃಷ್ಟಿಯಾಗುತ್ತಿರಲು ವೃಷಭರಾಜನು ಮುಖಮಂಡಲವನ್ನು ಬಸವನ ಮಸ್ತಕದೊಳಿಟ್ಟು ಪಂಚಾಕ್ಷರಿಯ ರಹಸ್ಯವನ್ನು ತಿಳಿಸಿ, ಅಭಿಷೇಕ ನಡೆಯಿಸಿ ಸತ್ಯೋಪದೇಶವನ್ನು ಮಾಡಿ ನೇಹದಿಂದ ನೋಡಿ ಕಾರುಣ್ಯವನ್ನು ನೀಡಿ ಮೊದಲಿನಂತೆ ಶಿವಲಿಂಗದಲ್ಲಿ ಲೀನನಾದನು. ಬಸವದೇವನು ಸದ್ಗುರೂಪದೇಶ, ಶಿವಲಿಂಗಗಳನ್ನು ಪಡೆದು ಹರುಷದಿಂದ ಪುಳಕಿತಶರೀರನಾದನು. ರಂಗಮಂಟಪವು ವಿವಾಹಮಂಟಪದಂತೆ ಶೋಭೆಯನ್ನು ಪಡೆಯಿತು ಸಂಗನೇ ಪತಿಯಾಗಿ ಬಸವನೇ ಸತಿಯಾಗಿ ಪಂಚಾಕ್ಷರಿಯೆ ಗತಿಯಾಗಿ ಸದ್ಭಕ್ತಿಯೆ ಮತಿಯಾಗಿ ಬಸವಣ್ಣನು ಕಪ್ಪಡಿಯ ಸಂಗಮದಲ್ಲಿರುತ್ತಿದ್ದನು.

ಗುರುವಾದ ಸಂಗಮೇಶ್ವರನು "ಬಸವನೆ ನಿನ್ನ ಮನೋರಥವು ಪೂರೈಸಿತು. ನಿನ್ನನ್ನು ನಾವು ಅಗಲುವದಿಲ್ಲ. ಈ ಭೂಮಿಯಲ್ಲಿ ನೀನು ಮೆರೆಯುವಂತೆ ಮಾಡುವೆವು. ಬಿಜ್ಜಳನ ರಾಜಧಾನಿಗೆ ಹೋಗು. ಅಲ್ಲಿ ಜಂಗಮಸೇವೆಯನ್ನು ಮಾಡುತ್ತ ಬಿಜ್ಜಳನಿಂದ ಮನ್ನಣೆಯನ್ನು ಪಡೆಯುತ್ತ ಇರು" ಎಂಬುದಾಗಿ ಆಜ್ಞಾಪಿಸಿದನು. ಬಸವನು ಇದನ್ನು ಕೇಳಿ ವಿರಹ ಚಿಂತೆಯನ್ನು ತಾಳಿದನು. ಮತ್ತೆ ಮತ್ತೆ ಸಂಗಮನು ಹೋಗೆಂದು ಹೇಳುತ್ತಾನೆ. ಇಲ್ಲಿದ್ದು ಪೂಜಿಸಲು ಅವಕಾಶ ಕೊಡುವದಿಲ್ಲ. ಆದರೆ ನಾನು ಹೋಗಿ ನೋಡುವೆನು. ಮಂಗಳವಾಡದಲ್ಲಿ ಶಿವಶರಣರ ಸೇವೆ ನಡೆಯುವಂತೆ ಶಿವಭಕ್ತಿ ಹಬ್ಬುವಂತೆ ಉಪಾಯ ಮಾಡುವೆ. ನನಗೆ ಅಕ್ಷರಜ್ಞಾನವಿದೆ. ಅದನ್ನು ಮಾರಿ ಕಾರ್ಯ ಸಾಧಿಸುವೆ. ಶಿವಶರಣರ ಸೇವೆ ಮಾಡಿ ಅವರ ಕರುಣೆಯನ್ನು ಪಡೆಯುವೆ ಎಂದು ನಿಶ್ಚಯ ಮಾಡಿ

ದನು. ಅನುಕೂಲ ವೇಷವನ್ನು ಧರಿಸಿ ಸಂಗನಿಗೆ ಹೇಳಲೆಂದು ಬಂದು ಕಣ್ಣೀರು ಸುರಿಯುತ್ತಿರಲು, ಸೆರೆಬಿಗಿದು, ಬಿಕ್ಕುತ್ತ, ಹೊರಳುತ್ತ, ಅಳುತ್ತ ಅಗಲಲಾರದೆ ಆಕ್ರೋಶಮಾಡುತ್ತ ಎದ್ದುನಿಂತು 'ಹೋಗಿಬಂದಪೆನಯ್ಯಾ ತಂದೆ. ನಿನ್ನ ನಂಬಿ ಹೋಗುವೆ ನಿನ್ನನ್ನು ಅಗಲುವದು ಕಠಿಣ. ದೇವ ಕರುಣಿಸು' ಎಂಬುದಾಗಿ ಹಲುಬಹತ್ತಿದನು. ಸಂಗಮೇಶನು ಮುಂದಿದ್ದ ಬಸವನನ್ನು ಕಂಡು ಮರುಗಿ ಬಂದು ಅಪ್ಪಿ ಕಣ್ಣೀರ ತೊಡೆದು 'ಬೇಡೆನ್ನ ಕಂದ ನಿನ್ನೊಡನೆ ಬಪ್ಪೆಂ. ಬಸವ ನೋಡು ನಿನ್ನಾಣೆ ನಿನ್ನೊಡನೆ ಬಪ್ಪೆಂ. ಬಸವ ನಿನ್ನನ್ನು ಅಗಲಿ ಇರುವೆನೇ ಬಸವ ಕಂದ. ನೋಡು ನಿನ್ನಾಣೆ ನಿನ್ನೊಡನೆ ಬರುವೆ. ನಿನ್ನ ಹಿಂದುಗೊಂಡೇ ಬರುವೆ. ನೀನು ನೆನೆಯಲು ಮುಂದಿರುವೆ. ಕರೆದರೆ 'ಓ' ಎನ್ನುವೆ. ನೀನು ನಿಲ್ಲುವಲ್ಲಿ ನಿಲ್ಲುವೆ. ಬಂದಲ್ಲಿ ಬರುವೆ. ನಡೆಯಯ್ಯ ಮಗನೆ ಬಸವಣ್ಣ. ಪೊಡವಿಗೆ ಅಧಿಪತಿಯಾಗಿ ಬಾಳು" ಎಂದು ಕರುಣಿಸಿದನು. ಈ ಮಾತುಗಳು ಬಸವನಿಗೆ ಧೈರ್ಯವನ್ನು ಕೊಡಲು ಆತನು ಹೊರಟನು. ಸಂಗಮನ ಕರುಣವು ತನಗೆ ಬೆಂಬಲವಾಗಿರಲು ಆತನ ಧ್ಯಾನವೇ ತನಗೆ ಜೊತೆಯಾಗಿರಲು ಸಂಗನ ನೆನಹಿನಿಂದ ಹಿಗ್ಗುತ್ತ ನಡೆಯುವ ಆಯಾಸವನ್ನು ಮರೆಯುತ್ತ ಶಿವನೆ ಶರಣೆನ್ನುತ್ತ ಮಂಗಳವಾಡಕ್ಕೆ ತಲಪಿದನು ಪಟ್ಟಣದ ಕೇರಿಕೇರಿಗಳಲ್ಲಿ ನಡೆಯುತ್ತ ಜನಸಮುದಾಯದ ಮಧ್ಯದಲ್ಲಿ ಮುಂದರಿಯುತ್ತ ಬಿಜ್ಜಳರಾಯನ ಅರಮನೆಗೆ ಬಂದನು.

ಬಸವನು ಬಿಜ್ಜಳರಾಯನ ಅರಮನೆಯಲ್ಲಿ ರಾಜಪುತ್ರ ಸಮೂಹವನ್ನೂ ಆನೆ-ಕುದುರೆಗಳ ಗುಂಪನ್ನೂ ವೀರಭಟರ ತೇಜವನ್ನೂ ಭಾವರಸಪೂರಿತ ಕವೀಂದ್ರರನ್ನೂ ನುಣ್ಬಣಿಯ ನೇವುರದ ಸತಿಯರನ್ನೂ ಕಾಣುತ್ತ ಆ ಸ್ಥಾನಕ್ಕೆ ಬಂದನು. ಅಲ್ಲಿ ಕರಣ ಶಾಲೆಗೆ ಬಂದು ಗಣಕರ ಸಮುದಾಯವನ್ನೂ ಲಂಚವನ್ನು ಕೊಡುವ ಮಂತ್ರಿಗಳನ್ನೂ ಲೆಕ್ಕಕ್ಕಾಗಿ ಬಂದ ರಾಜಪುತ್ರರನ್ನೂ ಬೆದರಿಸುವ ಆಳುಗಳನ್ನೂ ನೋಡುತ್ತ ಬಸವಣ್ಣನು ಬೆರಗಾದನು. ಇತ್ತ ಲೆಕ್ಕದ ಸಂಭ್ರಮವು ನಡೆಯಿತು. ಲೆಕ್ಕವನ್ನು ನೋಡುವದಕ್ಕಾಗಿ ಭಂಡಾರಿಯು ಅಲ್ಲಿಗೆ ಬಂದನು. ಶಿವಭಕ್ತನೂ ಕಮ್ಮೆ ಕುಲಪತಿಯೂ ಆದ ಸಿದ್ಧದಂಡಾಧಿಪನು ಕುಳಿತು ಲೆಕ್ಕವನ್ನು ಕೇಳುತ್ತಿರಲು, ಆಯದೊಳು ಬೀಯವನ್ನು ಕಳೆದು ನಿಲವು ಐದುಕೋಟಿಯ ಮೇಲೆ ಐದು ಲಕ್ಷವೆಂದು ತಪ್ಪು

ಲೆಕ್ಕವನ್ನು ಗಣಕರು ಹೇಳಿದರು. ಬಸವರಾಜನು ಆ ತಪ್ಪನ್ನು ದೂರಿನಿಂದಲೇ ಅರಿತನು. ಆದರೆ ಭಂಡಾರಿಗನು ಆ ತಪ್ಪನ್ನು ಗಮನಿಸಲಿಲ್ಲ. ಆಗ ಬಸವನು ಭಕ್ತನ ಒಡವೆ ಕೆಡಬಾರದೆಂದು ಸಿದ್ಧದಂಡಾಧಿಪನಿಗೆ, ಲೆಕ್ಕವು ತಪ್ಪಾಗಿದೆ ಎಂದು ಹೇಳಿದನು. ಗಣಕರು ಸರಿಯಾಗಿದೆ ಎಂದು ಹೇಳಿದರು. ಮತ್ತೊಮ್ಮೆ ಲೆಕ್ಕ ನೋಡುವಂತೆ ಬಸವನು ಹೇಳಲು ಲೆಕ್ಕವು ತಪ್ಪಾಗಿರುವುದು ತಿಳಿದು ಬಂದಿತು. ಆಗ ಭಂಡಾರಿಗನು ಗಣಕರು ಬಸವನನ್ನು ಕೊಂಡಾಡಿ, ಕೌತುಕದೊಳೋಲಾಡಿ 'ಇದು ನಿಜವಾದ ಲೆಕ್ಕವು, ಇದು ಹರನ ಕಾರಣ್ಯವು, ಇವನು ಕಾರಣಿಕನು.' ಎಂದು ಬಸವನನ್ನು ಹೊಗಳಿದರು. ಸಿದ್ಧದಂಡಾಧಿಪನು ಆತನನ್ನು ಬಿಜ್ಜಳನ ಕಡೆಗೆ ಕರೆದುಕೊಂಡು ಹೋಗಿ 'ದೇವ ಲೆಕ್ಕದಲ್ಲಿ ಇವನ ಸರಿ ಯಾರೂ ಇಲ್ಲ. ಈತನು ಮತಿಯುಳ್ಳ ಕೋವಿದನು. ಈತನು ಉನ್ನತ ಜ್ಞಾನಯುತನು, ಗಣಕ ವಿಖ್ಯಾತನು. ಆದ್ದರಿಂದ ಈತನನ್ನು ಭಂಡಾರಕ್ಕೆ ಬರಿಸುವೆನು' ಎಂದು ಹೇಳಿ ವರುಷಕ್ಕೆ ನೂರೊಂದು ಹೊನ್ನು ವೇತನ ಮಾಡಿ ಆತನನ್ನು ಗಣಕನನ್ನಾಗಿ ನೇಮಿಸಿಕೊಂಡನು. ಆ ಮೇಲೆ ತನ್ನ ಮನೆಗೆ ಕರೆದುಕೊಂಡು ಹೋದನು. ಕುಲಗೋತ್ರಗಳು ಒಂದು ಎಂದು ತಿಳಿದಾಗ ಹೆಚ್ಚಿ, ಹಿಗ್ಗಿ ತನಗೆ ಎಲ್ಲ ಪದವಿಗಳು ಸಾಧ್ಯವಾದುವೆಂದು ಆನಂದಪಟ್ಟು 'ಪತಿ, ಪಿತ, ಸುತ, ಗತಿ, ಮತಿ, ಮಹಾಭಕ್ತಿ, ಎಲ್ಲವೂ ನೀನೇ ನನಗೆ' ಬಸವಣ್ಣ ಎಂದು ಹೇಳುತ್ತ ಹರುಷರಸದಲ್ಲಿ ಓಲಾಡಿದನು. ತನ್ನ ಧನಧಾನ್ಯಕ್ಕೆ, ತನ್ನ ಸಂಪತ್ತಿಗೆ ಬಸವನೇ ಪತಿಯೆಂದು ಗತಿಯೆಂದು ಭಾವಿಸಿದನು. ಬಿಜ್ಜಳ ಅರಸನ ಅರಮನೆಗೆ ಬಸವನೇ ಭೂಷಣನೆಂದು ನಂಬಿದನು. ರತ್ನರಾಶಿಗಳು, ನೂತನವಸ್ತು, ಬೆಲೆಯುಳ್ಳ ಬಟ್ಟೆಗಳು, ಬಂಗಾರ ಇವೆಲ್ಲವು ಬಸವನಿಗೆಂದನು. ಸರ್ವಾಯಕ್ಕೆ ಸರ್ವ ವ್ಯಯಕ್ಕೆ ಚೋಳ ದೇಶದ ಹೊನ್ನರಾಶಿ, ಗೌಳದೇಶದ ಭೂಷಣಗಳು, ಬಂಗಾಳ ಲಾಳದೇಶದ ಪಾವುಡಗಳು, ವಂಗ, ಕಳಿಂಗ ದೇಶದ ಮಹಾನಿಧಿಗಳೆಲ್ಲಕ್ಕೂ ಬಸವನೇ ಅಧಿಪತಿಯೆಂದು ಭಾವಿಸಿದನು. ಈ ಎಲ್ಲ ಸಂಪತ್ತನ್ನು ನೋಡಿದ ಬಸವಣ್ಣನಲ್ಲಿ, ಇಷ್ಟೊಂದು ಸಂಪತ್ತನ್ನು ಶಿವಭಕ್ತರಿಗೆ ಸಲ್ಲಿಸದಿದ್ದರೆ ಇದು ವ್ಯರ್ಥವಾಗುವದಲ್ಲ, ಎಂಬ ಭಾವನೆ ಬಂದಿತು. ಹಾಗೂ ತನ್ನ ಮನದಿಚ್ಛೆಯನ್ನು ಸಾಧಿಸಲು ತನಗೆ ಸಹಾಯಮಾಡಬೇಕೆಂದು ಈಶ್ವರನನ್ನು ಪ್ರಾರ್ಥಿಸಿದನು.

ಹೀಗಿರುತ್ತಿರಲು ಸಿದ್ಧದಂಡಧಿಪನಿಗೆ ರೋಗವು ಬಂದು ಹತ್ತೆಂಟು ದಿನಗಳಲ್ಲಿ ಕೈಲಾಸವಾಸಿಯಾದನು. ಆಗ ಬಸವನು ಬಿಜ್ಜಳನ ಆಸ್ಥಾನಕ್ಕೆ ಬಂದು ಸಿದ್ಧದಂಡಾಧಿಪನು ಅಪುತ್ರಿಕನಾಗಿ ಮೃತಿ ಹೊಂದಿದ ಸಂಗತಿಯನ್ನು ನಿವೇದಿಸಿದನು. ಆಗ ಮುಂದಿನ ವ್ಯವಸ್ಥೆ ಹೇಗೆ ನಡೆಯಬೇಕೆಂಬ ಬಗೆಗೆ ವಿಚಾರ ಬರಲು ಬಿಜ್ಜಳನು ಬಸವನಿಗೆ 'ಸರ್ವ ಭಾಂಡಾರವು ನಿನಗೆ, ಭೂಮಿಯು ಸಂಪತ್ತೆಲ್ಲ ನಿನಗೆ, ಎನ್ನ ರಾಜ್ಯದ ಶಿಕ್ಷೆ ರಕ್ಷೆ ನಿನ್ನದು ಬಸವ, ಎನ್ನ ತೇಜೋಭಿಮಾನ ನಿನ್ನವೆಲೆ ಬಸವ, ನಿನ್ನಂತೆ ಇನ್ನುಂಟೆ ಭಂಡಾರಿ ಬಸವಣ್ಣಾ. ಕೋಶಕ್ಕೆ ಪಟ್ಟಣಕ್ಕೆ ಸಿದ್ಧದಂಡಧಿಪನ ಆಳು, ಕುದುರೆ, ಪರಿವಾರ, ಸಂಪತ್ತು, ಇವುಗಳಿಗೆಲ್ಲ ನೀನೇ ಒಡೆಯನು.' ಎಂದು ಸಭಾಸ್ಥಾನದಲ್ಲಿ ಹೇಳಿದನು. ಸಭಿಕರೆಲ್ಲ ಹೊಗಳಿದರು. ಆಗ ಬಿಜ್ಜಳನು ಪಟ್ಟಾವಳಿಯಲ್ಲಿ ಉಡುಗೊರೆಯನ್ನು ಕೊಟ್ಟು ಪಟ್ಟದಾನೆಯ ಮೇಲೆ ಕುಳ್ಳಿರಿಸಿ, ಭೂಷಣಗಳನ್ನು ತೊಡಿಸಿ, ಎರಡೂ ಪಕ್ಕದಲ್ಲಿ ಬೆಳ್ಗೊಡೆಗಳನ್ನಿಟ್ಟು ಮುಂದೆ ವಾದ್ಯಗಳು ಧ್ವನಿಗೆಯ್ಯುತ್ತಿರಲು ವಂದಿಗಳು, ಗಾಯಕರು, ಮಂಗಳವ ಪಾಡುತ್ತಿರಲು ಪುರದ ಕೇರಿಗಳಲ್ಲಿ, ರಾಜವೀಧಿಗಳಲ್ಲಿ, ಸಂಭ್ರಮದ ಮೆರವಣಿಗೆ ನಡೆಸಿದನು. ನಂತರ ಬಸವನು ಆನಂದದಿಂದ ತನ್ನ ಮನವನ್ನು ಪ್ರವೇಶಿಸಿ ಪರಮ ಸುಖದಿಂದಿದ್ದು ಹರ ಭಕ್ತರನ್ನು ಕರೆಯಿಸುತ್ತ ಅವರ ಸೇವೆಯನ್ನು ಮಾಡಹತ್ತಿದನು. ಶರಣಚರಣಾಲಿಂಗನಾಸಕ್ತನೂ ಹರಭಕ್ತಕುಲಕಲ್ಪತರುರೂಪನೂ ಆದ ಬಸವಣ್ಣದಂಡನಾಥನು ಸಕಲ ಸಂಪದದಿಂದ ಶೋಭಿಸುತ್ತಿದ್ದನು.

(ಮುಂದುವರಿಯುವದು.)

---

# ರೇವಣಸಿದ್ಧೇಶ್ವರನು ವೀರಶೈವನೇ ?

ಬರೆದವರು:— ಎಂ. ಎಸ್. ಶಿವಪ್ಪ, ಬೆಂಗಳೂರು ಸಿಟಿ.

ಅನೇಕ ಪುರಾತನರ ಹಾಗೂ ಶಿವಶರಣರ ರಗಳೆಗಳನ್ನು ಬರದಿರುವ ಹರಿಹರನು ರೇವಣಸಿದ್ಧೇಶ್ವರನ ರಗಳೆಯನ್ನೂ ಸಹ ಬರೆದಿರುವನಷ್ಟೆ. ಸದರಿ ರಗಳೆಯನ್ನು ವಿಜಾಪುರದ ಶ್ರೀ ಪಿ. ಜಿ. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಅವರು ಪರಿಶೋಧಿಸಿ ಅಚ್ಚುಹಾಕಿ ಪ್ರಸಿದ್ಧಿಸಿರುವುದು ಸರ್ವರಿಗೂ ತಿಳಿದ ವಾತಷ್ಟೆ. ಆ ರೇವಣಸಿದ್ಧೇಶ್ವರ ರಗಳೆಯಲ್ಲಿ ವರ್ಣಿತನಾಗಿರುವ "ರೇವಣಸಿದ್ಧೇಶ್ವರ" ನನ್ನೇ ಕುರಿತು ಈ ಲೇಖವು ಮುಂದರಿಯುವುದಾಗಿದೆ

ಆ ರಗಳೆಯಲ್ಲಿ ರೇಣುಕನು ಭೂಲೋಕದಲ್ಲಿ ಜನಿಸುವುದಕ್ಕೆ ಕೊಟ್ಟಿರುವ ಕಾರಣವೇನಂದರೆ:—ರಜತಗಿರಿಯಲ್ಲಿ ಒಂದಾನೊಂದು ದಿನ ಚಂದ್ರಶೇಖರನ ಸಭೆ ನೆರೆದಿರಲು ಬಾಯ ತಾಂಬೂಲ ಪ್ರಸಾದವ ಕೊಡಲು ರೇಣುಕನನ್ನು ಶಂಭುವು ಸನ್ನೆಯಿಂದ ಕರೆಯಲು ರೇಣುಕನು ದಾರುಕನನ್ನು ದಾಟಿಕೊಂಡು ಬಂದನೆಂದೂ ಆದರಿಂದ ಮೃಡನು ಕೋಪಗೊಂಡು ರೇಣುಕನನ್ನು ನೀನು ಧಾರುಣಿಯೊಳಗೆ ಜಡಜನ್ಮವೆತ್ತೆಂದು ಆಜ್ಞಾಪಿಸಿದನು.

ಇದರಿಂದ ರೇಣುಕನು ಭೂಲೋಕದಲ್ಲಿ ಜನಿಸುವುದು ತಾನು ಮಾಡಿದ ಸಿಸ್ತಿನ ತಪ್ಪಿಗಾಗಿಯೇ ಹೊರತು ಮತ್ತಾವ ಕಾರಣವೂ ಕಾಣುವದಿಲ್ಲ. ಮುಂದೆ ಅದರಂತೆ ರೇಣುಕನು ಭೂಲೋಕದಲಿ ಕೊಲ್ಲಿಪಾಕಿ ಎಂಬ ಕ್ಷೇತ್ರದ ಸೋಮನಾಥ ಲಿಂಗಮುಖದಿಂದ ಜನಿಸಿದನೆಂದೂ ಜನಿಸಿದಾಗ ಈ ಮುಂದೆ ಕಾಣುವ ರೀತಿಯಲ್ಲಿದ್ದನೆಂದೂ ಹರಿಹರನು ವರ್ಣಿಸಿದ್ದಾನೆ.

ನಿಷ್ಠೆಮಿಗೆ ಸಿದ್ಧರೇವಣನಾಮದಿಂ ನೋಡ
ಅದೆ ಕಂಥೆಯುದೆ ವದನವದೆ ವಜ್ರಕುಂಡಲಂ
ಅದೆ ವಕ್ತ್ರವದೆ ಹಸ್ತವದೆ ಪಿಡಿದ ಲಾಕುಳಂ
ಅದೆ ಕೋವಣಂ ನೋಡೆನುತ್ತ ಮಿರಲಾದಿಸಿದಂ

ಮೇಲ್ಕಂಡ ವರ್ಣನೆಯಲ್ಲಿ ಕರ್ನಾಟಕದಲ್ಲಿ ಪ್ರಸಿದ್ಧವಾಗಿದ್ದ ಲಕುಲೀಶ, ಕಾಳಾಮುಖ, ಪಾಶುಪತ ಮತಗಳ ಚಿನ್ಹೆಗಳ ವರ್ಣನೆ ಕಾಣುತ್ತದಲ್ಲದೆ, ವೀರಶೈವ ಮತದ ಚಿನ್ಹೆಗಳು ಕಾಣುವದಿಲ್ಲ. ಅಲ್ಲಿಂದ ಮುಂದೆ ಹೊರಟು ಅಗಸ್ತ್ಯನನ್ನು ಕಂಡು ಸೇತುರಾಮೇಶ್ವರಕ್ಕೆ ಹೋಗಿ ರಾಮನಾಥನ ದರ್ಶನ ಸ್ತೋತ್ರಮಾಡಿ ಮುಂದೆ ದಕ್ಷಿಣ ದೇಶದ ಶಿವ ಕ್ಷೇತ್ರಗಳನ್ನು ತಿರುಗುತ್ತಾ ಪೊನ್ನಾಂಬಲ (ಚಿದಂಬರ) ಕ್ಕೆ ಹೋಗಿ ನಟೇಶ್ವರನ ದರ್ಶನ ಮಾಡಿ ಕಾಂಚೀಪುರದ ಏಕಾಂಬರನಾಥನ ದರ್ಶನ ಪೂಜಾದಿಗಳನ್ನು ತೀರಿಸಿಕೊಂಡು ದೇವಾಲಯದೊಳು ಮರುಳನಂತೆ ಇದ್ದನು. (ಸ್ಥಾವರ ಪ್ರತಿಷ್ಠಾದಿಲಿಂಗಗಳ ಪೂಜೆಯು ವೀರಶೈವ ತತ್ವವು ನಿಷೇಧಿಸಿದೆ.) ಆ ಪ್ರದೇಶದಲ್ಲಿ ವೈಷ್ಣವ ಮತಾನುಯಾಯಿಯಾದ ಓರ್ವ ಚೋಳರಾಜನು ಎಲ್ಲ ಕಡೆಗೂ ವಿಷ್ಣು ಪ್ರತಿಮೆಗಳನ್ನು ಸ್ಥಾಪಿಸುತ್ತಾ ಕಾಂಚೀಪುರದ ವರದರಾಜ ಸ್ವಾಮಿಯು ಬಂದು ನೋಡುವಾಗ್ಗೆ ಪ್ರತಿಮೆಯು ಅಲ್ಲಾಡುತ್ತಿತ್ತೆಂದೂ ಆಗ ಚಲನೆಯನ್ನು ನಿಲ್ಲಿಸಲು ಯಾರ್ಯಾರಿಗೆ ಬೇಡಿಕೊಂಡರೂ ಯಾರಿಂದಲೂ ಸಾಧ್ಯವಾಗದಿರಲು ಚೋಳನು ಏಕಾಂಬ್ರನಾಥ ಸ್ವಾಮಿಯ ಗುಡಿಗೆ ಬಂದು ವಿಶೇಷ ಪೂಜೆ ಪುನಸ್ಕಾರಗಳನ್ನು ಮಾಡಿ ಸ್ವಾಮಿಯಲ್ಲಿ ಅರಿಕೆಮಾಡಿಕೊಂಡನೆಂತಲೂ ಸ್ವಾಮಿಯು ಚೋಳನ ಸ್ವಪ್ನದಲ್ಲಿ ಕಂಡು ಹೀಗೆ ಈ ದೇವಾಲಯದ ಒಂದು ಭಾಗದಲ್ಲಿ ಓರ್ವ ಪಿಣ್ಣಾಂಕ ದೇವನೆಂಬ ಹೆಸರಿನವನಿದ್ದಾನೆ, ಅವನನ್ನು ಆಶ್ರಯಿಸಿದರೆ ನಿನ್ನ ಮನೋಬಯಕೆಯು ಈಡೇರುವುದೆಂದು ಆಶೀರ್ವದಿಸಿದನೆಂದೂ ಮಾರನೇ ಬೆಳಿಗ್ಗೆ ಚೋಳರಾಜನು ಅದರಂತೆ ಹುಡುಕಿಸಿ ಪಿಣ್ಣಾಂಕದೇವ (ರೇವಣಸಿದ್ಧ) ನ ಬಳಿಗೆ ಬಂದು ಬಿನ್ನೈಸಿಕೊಂಡು ವರದರಾಜ ಸ್ವಾಮಿಯ ದೇವಾಲಯಕ್ಕೆ ಕರೆದುಕೊಂಡು ಹೋದಾಗ್ಗೆ ರೇವಣಸಿದ್ಧನ ವರ್ಣನೆಯನ್ನು ಹರಿಹರನು ಹೀಗೆ ವರ್ಣಿಸಿದ್ದಾನೆ:—

ಕರ್ತುಚೋಳಂ ಕೈಗೊಡುತ್ತ ಬರಲೊಪ್ಪಿದಂ ಸೋಮಧರ ಮಹಿಮನ ಸಮಾನ ಶೈವಾರ್ಚಕಂ ಸಾಮರ್ಥ್ಯಂ ಕಂದಾವ್ರಲಿನಿಳಿಯ ಪಾಲಕಂ ಲಾಕುಳದ ಲಾಕ್ಷಣಿಕನಮ್ಮಮ್ಮ ಬರುತಿರ್ದನಾಕಸ್ಮಿಕಂ ಮರುಳನಂತೆ ನಡೆತರುತಿರ್ದ. ಇಂತು ವಿಷ್ಣುಗೃಹದ ಕಾಣ್ಕೆಗೊಲವಿಂ ಬಂದು.

ಈ ವರ್ಣನೆಯಿಂದ ರೇವಣಸಿದ್ಧನು ಶೈವಪ್ರಭೇದವಾದ ಲಕುಲೀಶ" ಮತಾನುಯಾಯಿಯೆಂದು ಸ್ಪಷ್ಟವಾಗುತ್ತದೆ.

ಅಲ್ಲಿಂದ ಉತ್ತರಭಾಗದ ಮಾಸನೂರ ಶಿವದೇವಾಲಯಕ್ಕೆ ಬಂದಾಗಿದ್ದ ರೇವಣಸಿದ್ಧನ ವರ್ಣನೆಯನ್ನು ಹರಿಹರನು ದ್ವಿತೀಯ ಸ್ಥಲದಲ್ಲಿ ಗದ್ಯರೂಪವಾಗಿ ಹೀಗೆ ವರ್ಣಿಸಿದ್ದಾನೆ:—

ಇಂತು ದಕ್ಷಿಣ ದೇಶವಂ ಪೊಕ್ಕು ಚೋಳಂಗೆ ಪ್ರತ್ಯಕ್ಷವಂ ತೋರಿ ಕಂಥೆಯ ಕಮನೀಯರೂಪಂ ವಜ್ರಕುಂಡಲದ ವಜ್ರಧರ ಲಾಕುಳದ ಲೋಕೈಕಬಂಧು ಮೆಟ್ಟಿದ ಪಾವುಗೆಯ ಕಟ್ಟಧಿಕಂ ಕೌಪಣದ ಭಾವಕಂ ಅಂಗಜರಿಪುವೆನಿಸಿರ್ದ ರೇವಣಸಿದ್ಧಂ ಸಿದ್ಧಕುಲಚಕ್ರವರ್ತಿ ತಿರುಗಿ ಬಂದುತ್ತರ ದಿಶಾಭಾಗದ ಮಾಸನೂರ ಪೊರಗಿಪ್ಪ ಶಿವಾಲಯದೊಳಗವತರಿಸಿ ಸಂಧ್ಯಾ ಸಮಯದೊಳ್.

ಈ ಮೇಲ್ಕಂಡ ವರ್ಣನೆಯಲ್ಲಿಯೂ ಲಕುಲೀಶ ಮತದ ಚಿನ್ಹೆಯ ವರ್ಣನೆಯೇ ಬಂದಿದೆ.

ಅನಂತರ ಆ ದೇವಾಲಯದ ಎದುರಿನ ಮರದಲ್ಲಿ ತಿಗುಣೆಯ ರೂಪವಾಗಿ ವಾಸವಾಗಿದ್ದ ಯಕ್ಷದಂಪತಿಗಳನ್ನು ಸಂಹರಿಸಿ ಎರಡು ಕಠಾರಿಗಳನ್ನು ಮಾಡಿಸಿಕೊಂಡು ಒಂದನ್ನು ಮಾಸನೂರ ಮಾಡುವಿನಲ್ಲಿ ಇಟ್ಟು ಮತ್ತೊಂದನ್ನು ತೆಗೆದುಕೊಂಡು ಜಯಂತಿ ರಾಜಧಾನಿಗೆ ಹೋಗಿ ವಿಕ್ರಮಾದಿತ್ಯನಿಗೆ ಆ ಕಠಾರಿಯಂ ಆಶೀರ್ವದಿಸಿ ಮುಂದೆ ಕಲ್ಯಾಣಕ್ಕೆ ಹೋಗಿ ಗಾಣದ ಕಲ್ಲಿಶೆಟ್ಟಿಯ ಮನೆಯಲ್ಲಿದ್ದು ಅವನಿಗೆ ತನನಿಧಿಯ ಕೊಟ್ಟು ಒಂದು ದಿನ ಗಾಣದ ಕೊಟ್ಟಿಗೆಯಲ್ಲಿ ಸಿರಿಮಂಚದ ಮೇಲೆ ಕುಳಿತು ದಿವ್ಯಾಂಗನೆಯರಿಂದ ಕಾಲನ್ನೊತ್ತಿಸಿಕೊಳ್ಳುತ್ತಿದ್ದಾಗ ಕಲ್ಲಿಶೆಟ್ಟಿಯು ಬಂದು ನೋಡುತ್ತಾನೆ. ಇನ್ನು ಇಲ್ಲಿರುವದು ಸರಿಯಲ್ಲವೆಂದು ರೇವಣಸಿದ್ಧನು ಮುಂದೆ ಮುಂಗಳವಾಡಕ್ಕೆ ಪ್ರಯಾಣಬೆಳಸುತ್ತಾನೆ.

ಮಾಸನೂರಲ್ಲಿ ಮಾಡಿದ ಕಾರ್ಯವು ರೇವಣಸಿದ್ಧನ ಮಹಿಮೆಯನ್ನು ತೋರ್ಪಡಿಸುವದಾಗಿದೆ. ಜಯಂತಿಯಲ್ಲಿ ವಿಕ್ರಮಾದಿತ್ಯನಿಗೆ ಕಠಾರಿಯನ್ನು ಕೊಟ್ಟುದು ರಾಜನ ದಾಕ್ಷಿಣ್ಯವನ್ನು ಸಂಪಾದಿಸುವುದಾಗಿದೆ. ಕಲ್ಯಾಣದಲ್ಲಿ ಗಾಣದ ಕಲ್ಲಿಶೆಟ್ಟಿಗೆ ತನನಿಧಿಯ ಕೊಟ್ಟುದು ಅದೂ ಸಹ ತನ್ನ ಮಹಿಮೆಯನ್ನು ತೋರ್ಪಡಿಸುವದಾಗಿದೆ. ಇದಾವುದರಲ್ಲಿಯೂ ವೀರಶೈವ ಮತಪ್ರಚಾರ ಕಾರ್ಯವು ಕಾಣುವುದಿಲ್ಲ. ಮುಂಗಳವಾಡಕ್ಕೆ ಬಂದು ಧನದಲ್ಲಿ ಬಡವೆ ರೂಪು ಗುಣದೊಳ್ ಸಿರಿಯಂ

ತಿರ್ದ (ಮಾಯಿದೇವಿ) ಎಂಬ ಸೂಳೆಯ ಮನೆಯಲ್ಲಿ ಕಂಬಿಯ ಮೇಲೆ ನೀರು ಹೊತ್ತುಕೊಂಡು ಕಾಲಕಳೆಯುತ್ತಿರಲು ಅತ್ತ ಲಂಕಾಧಿಪತಿಯಾದ ರಾವಣೇಶ್ವರನು ೯ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸುವೆನೆಂದು ಪ್ರತಿಜ್ಞೆಮಾಡಿದ್ದು ತನ್ನ ಮರಣಾಂತ್ಯದೊಳಗಾಗಿ ೬ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸಿ ಉಳಿದ ೩ ಕೋಟಿ ಶಿವಲಿಂಗಗಳನ್ನು ನೀನು ಪ್ರತಿಷ್ಠಿಸು ಎಂದು ತಮ್ಮನಾದ ವಿಭೀಷಣನಿಗೆ ಆಜ್ಞಾಪಿಸಿ ತಾನು ಪ್ರಾಣವನ್ನು ನೀಗುತ್ತಾನೆ.

ವಿಭೀಷಣನು ೩ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಲು ದಿಕ್ಕುಗಾಣದೆ ಲಂಕೆಯ ಅಧಿದೇವತೆಯಾದ ಮತ್ಸ್ಯಕೇಶ್ವರ ದೇವಾಲಯಕ್ಕೆ ಪೋಗಿ ಆರಾಧಿಸಿರುವಲ್ಲಿ ದೇವರು ಕರುಣಿಸಿ ಉತ್ತರ ಭಾಗದ ದೇಶದಲ್ಲಿ ಒಬ್ಬ ಮಹಾತ್ಮನಿರುವನೆಂತಲೂ, ಅವನನ್ನು ಆಶ್ರಯಿಸಿದರೆ ನಿನ್ನ ಇಷ್ಟಾರ್ಥವು ಸಿದ್ಧಿಸುವುದೆಂತಲೂ, ಅವನಿರುವ ಭಾಗದಲ್ಲಿ ಮಳೆ ಬೆಳೆಗಳು ಸಮೃದ್ಧಿಯಾಗಿದ್ದು ದೇಶವು ಸುಭಿಕ್ಷವಾಗಿರುವುದೆಂತಲೂ, ಅವನು ಈ ರೂಪುಗಳುಳ್ಳವನೆಂತಲೂ ಗುರುತುಗಳನ್ನು ಹೇಳಿ ಕಳುಹಿಸುತ್ತಾನೆ. (ರೇವಣಸಿದ್ಧೇಶ್ವರನ ಗುರುತಿನ ವರ್ಣನೆ. ಹರಿಹರನಿಂದ ಉತ್ತರ ದಿಶಾಭಾಗದೊಳಗೆನ್ನ ಮಗನಧಿಕತರ ಪಾರಮಾರ್ಥನಪ್ಪ ರೇವಣಸಿದ್ಧನಿರ್ದಪನಾತಂಗೆ **ಕುಂಡಲಂ ಕಂಥೆಲಾಕುಳಂ** ಮೆಟ್ಟಿದಾವುಗೆಯ ನೆಟ್ಟನೆಯ ಕುರುಪದಲ್ಲಿದೆಯುಂ...... ...ವಿಭೀಷಣನು ಎಲ್ಲ ದೇಶಗಳನ್ನು ಸುತ್ತಿ ಮಂಗಳವಾಡಕ್ಕೆ ಬರುತ್ತಾನೆ. ದೇವನರುಹಿದ ಕುರುಹುಗಳನ್ನು ಜ್ಞಾಪಿಸಿಕೊಂಡು ಸರಿದೋರಲು ಇದೇ ಅದೆಂದು ಆ ಊರ ಕೆರೆಯ ವಟವೃಕ್ಷದ ತಳದಲ್ಲಿ ವೇಷಮಂ ಮರಸಿ ಕುಳಿತಿರಲು ರೇವಣಸಿದ್ಧಂ ಕೆರೆಗೆ ನೀರಿಗಾಗಿ ಕೊಡಗಳಂ ಪಿಡಿದು ಬರಲು ಗುರುತಿಸಿ ಮಾತನಾಡಿ ಬಂದ ಕಾರ್ಯವನರುಪಿ ಅವನ ಹಿಂದೆಯೇ ಹೋಗುತ್ತಾನೆ. ಆ ರಾತ್ರಿ ಅಲ್ಲಿದ್ದು ಮಾಯಾದೇವಿಗೆ ರೇವಣಸಿದ್ಧನ ಮಹಿಮೆಯನರುಹಿ ಪ್ರಯಾಣ ಸಿದ್ಧರಾಗುತ್ತಾರೆ. ಮಾಯಿದೇವಿಯೂ ಮಹಿಮೆಯ ತಿಳಿಯದೆ ಕೆಲಸ ಮಾಡಿಸಿಕೊಂಡ ತಪ್ಪಿಗಾಗಿ ಕರುಣಿಸಬೇಕೆಂದು ಬಿನ್ನೈಸಿಕೊಳ್ಳುತ್ತಾಳೆ. ಆಗ ರೇವಣಸಿದ್ಧನು ೨ ತಟ್ಟೆಗಳಲ್ಲಿ ವಿಭೂತಿಯಂ ತರಿಸಿ ೧ ತಟ್ಟೆಯ ವಿಭೂತಿಯನ್ನು ಶಿವಲಿಂಗ ಮಾಡಿ ಮತ್ತೊಂದು ತಟ್ಟೆಯ ವಿಭೂತಿಯನ್ನು ಹೊನ್ನಿನ ರಾಶಿಯನ್ನಾಗಿ ಮಾಡಿ ಈ ಹೊನ್ನಂ ತೆಗೆದುಕೊಂಡು ಈ ಶಿವ

ಲಿಂಗವನ್ನು ಆರಾಧಿಸೆಂದು ಆಶೀರ್ವದಿಸಿ ಪ್ರಯಾಣ ಬೆಳಸುತ್ತಾನೆ. ಹರಿಹರನ ವರ್ಣನೆ:—

ಮಾಯಿದೇವಿ ಕಂಡು ಘನದೋಳ್ಪಿದ್ದು ನಿಷ್ಕ್ರ ನಿಲವನರಿಯದೆ ಬೆಸಗಯ್ಸಿಕೊಂಡ ಕರ್ಮಜೀವಿಗೆ ಸರ್ವಾಪರಾಧಿಗೆ ಕರುಣಿಪುದೆನೆ ಕೃಪೆಯಿಂ ನೋಡಿ ವಿಭೂತಿಯಿನೆರಡೆಡೆಯೊಳಿರಿಸಿ ಒಂದಂ ಮುಟ್ಟೆ ಶಿವಲಿಂಗವಾಗೆ ಮತ್ತೊಂದಂ ಮುಟ್ಟೆ ಹೊನ್ನ ರಾಶಿಯಾಗೆ ಈ ಹೊನ್ನಂ ಕೊಂಡೀ ಶಿವಲಿಂಗವನಾರಾಧಿಸುತಿರ್ಪುದೆಂದು ………

ಈ ಮೇಲ್ಕಂಡ ವರ್ಣನೆಯಿಂದ ರೇವಣಸಿದ್ಧನು "ಶೈವ ಧರ್ಮ" ಪ್ರಚಾರಕನೆಂದು ಸ್ಪಷ್ಟವಾಗುತ್ತದೆ.

ಮುಂದೆ ವಿಭೀಷಣನೊಡಗೂಡಿ ಲಂಕೆಗೆ ಹೊರಟು ಮತ್ಸ್ಯಕೇಶ್ವರ ದೇವಾಲಯದಲ್ಲಿ ತಂಗಿ ವಿಭೀಷಣನ ಇಷ್ಟಾನುಸಾರದಂತೆ ೩ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸಿ ಮುಂದೆ ಪ್ರಯಾಣ ಬೆಳಸುತ್ತಾನೆ.

ಈ ಮೇಲ್ಕಂಡ ಕಾರ್ಯದಿಂದಂತೂ ರೇವಣಶಿದ್ಧನು "ಶೈವ"ನೆಂಬುದು ಸಿದ್ಧವಾಗುತ್ತದೆ. ಅವನು ೩ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸದೆ ೩ ಕೋಟಿ ಜನರಿಗೆ ಲಿಂಗಧಾರಣೆಯನ್ನು ಮಾಡಿದ್ದರೆ "ವೀರಶೈವ ಮತ" ಪ್ರಚಾರಕನೆಂದು ಹೇಳಬಹುದಿತ್ತು.

## ಹರಿಹರನ ರೇವಣಸಿದ್ಧರಗಳೆಯ ತೃತೀಯ ಸ್ಥಲ.

ವೃತ್ತ:—

ಪದೆದು ಪಶುನ್ನದೀತಟದ ತಾವರೆ ಪೂಗಳನೆತ್ತಿ ಪಾರಿಜಾತದ ಕುಸುಮಂಗಳಂ ತಿರಿದು ಕಾಶಿಯೊಳೊಪ್ಪುವ ವಿಶ್ವನಾಥನಂ॥ ಸದಮಳ ಹೇಮಕೂಟಪತಿಯಂ ಶ್ರೀಪರ್ವತ ಮಲ್ಲಿನಾಥನಂ। ಪದವಿನೊಳಷ್ಟಷಷ್ಟಿ ಶಿವಲಿಂಗವನರ್ಚಿಸುತಿರ್ದನಳ್ಕರಿಂ॥

ಈ ಮೇಲ್ಕಂಡ ವೃತ್ತದಿಂದಲೂ ರೇವಣಸಿದ್ಧನು "ಶೈವ"ನೆಂದು ಸಿದ್ಧವಾಗುತ್ತಿದೆ.

ಮುಂದೆ ಮಂಗಳವಾಡಕ್ಕೆ ಹೋಗಿ ಬಿಜ್ಜಳನ ಅರಮನೆಯಲ್ಲಿ ನಿಂತಿರಲು ಬಿಜ್ಜಳನು ಕುದಿಯುವ ಪಾಯಸವನ್ನು ನೀಡಲು ಅದನ್ನು ಕಂಭಕ್ಕೆ ಒರಸಲು ಅರಮನೆಯಲ್ಲವೂ ದಹಿಸಿತೆಂದೂ ಅನಂತರ ಬಿಜ್ಜಳನು ಶರಣಾಗತನಾಗಿ ಮರೆಹೊಕ್ಕನಂತರ ಆಶೀರ್ವದಿಸಿ ಮುಂದಕ್ಕೆ ತೆರಳುತ್ತಾನೆ.

ಅಲ್ಲಿಂದ ಕೊಲ್ಲಾಪುರಕ್ಕೆ ಹೋಗುತ್ತಾನೆ. ಕೊಲ್ಲಾಪುರದ ಗೋರಕನಾಥನ ಅರಮನೆಗೆ ಹೋಗಿ ಬೇಡಲು ಆತನು ಧಿಃಕ್ಕರಿಸಲು ಆತನ ಹೆಂಡತಿ ಹಿರಿಯ ಲಕ್ಕಾದೇವಿ ಬುದ್ಧಿಯು ಪೇಳಲು ಕೇಳದೆ ಚಿಕ್ಕ ಲಕ್ಕಾದೇವಿ ಹೊಸ ಕಠಾರಿಯಂ ತಂದು ಪಾಣಿಪಾತ್ರೆಗೆ ಇಕ್ಕಿದಳು ರೇವಣಸಿದ್ಧನು ಬಿಸುಗಣ್ಣಿಂದ ನೋಡಲು ಕಠಾರಿ ಕರಗಿ ಗೋರಕನಾಥನನ್ನು ಹಿಂಸಿಸಿತೆಂತಲೂ, ಮುಂದೆ ಗೋರಕನನ್ನು ಉಳಿಸಲು ಹಿರಿಯ ಲಕ್ಕಾದೇವಿ ಲಕ್ಷ್ಮೀದೇವಿಯಂ ಪ್ರಾರ್ಥಿಸಿ ಕರದುಕೊಂಡು ರೇವಣಸಿದ್ಧನಲ್ಲಿಗೆ ಬಂದು ಅಪರಾಧವನರುಹಿ ಗೋರಕನನ್ನು ರಕ್ಷಿಸಿದ ನಂತರ ಮುಂದೆ ವಾರಣಾಸಿಗೆ ಬರುತ್ತಾನೆ.

ಇತ್ತ ಮಂಗಳವಾಡದಲ್ಲಿ ಬಿಜ್ಜಳನ ಸಭೆಯೊಳಗೆ ಮಾಸನೂರ ಮುಡುವಿನಲ್ಲಿರುವ ಕಠಾರಿಯನ್ನು ತೆಗೆಯುವ ಪ್ರಯತ್ನ ನಡೆಯುತ್ತಿ. ಇದನ್ನು ಕೇಳಿ ಕಪ್ಪರನೆಂಬ ಓರ್ವ ಕುಟಿಲಯೋಗಿ ಬಂದು ನಾನು ತೆಗೆಯುತ್ತೇನೆ. ಆದರೆ ಅದಕ್ಕೆ ೧೨ ಸಾವಿರ ಕನ್ಯೆಯರನ್ನು ಬಲಿ ಕೊಡಬೇಕೆಂದು ಹೇಳುತ್ತಾನೆ. ಅದಕ್ಕೆ ರಾಜನು ಒಪ್ಪಿ ಕನ್ಯೆಯರನ್ನು ಕೂಡಿ ಹಾಕುತ್ತಾನೆ. ೧೨ ಸಾವಿರಕ್ಕೆ ಒಬ್ಬೇ ಒಬ್ಬಳು ಕಡಿಮೆ ಆಗುತ್ತಾಳೆ. ಆಗ ಹಿಂದೆ ರೇವಣಸಿದ್ಧನು ವಾಸವಾಗಿದ್ದ ಮಾಯಿದೇವಿಗೆ ಓರ್ವ ರೇವಣದೇವಿ ಎಂಬ ಮಗಳಿರುತ್ತಾಳೆ. ಅವಳನ್ನು ಕರದೊಯ್ಯಲು ಬರುತ್ತಾರೆ. ಆಗ ಮಾಯಿದೇವಿಯು ದೇವರನ್ನು ಸ್ತುತಿಸಿ ರೇವಣಸಿದ್ಧನನ್ನು ನೆನಿಸುತ್ತಾಳೆ. ನಿನಗೆ ಬಸುರಾದ ಮಗಳನ್ನು ಸುರಗಿಗೆ ಕೊಡಬೇಕೇ ಎಂದು ಹಂಬಲಿಸುತ್ತಾಳೆ. ಇದು ವಾರಣಾಸಿಯಲ್ಲಿರುವ ರೇವಣಸಿದ್ಧನಿಗೆ ಅರುವಾಗಿ ಅಲ್ಲಿಂದ ಹೊರಟು ಬರುತ್ತಾನೆ. ಬಂಟವನೇ ಮಾಯಿದೇವಿಗೆ ಕಾಣಿಸಿಕೊಳ್ಳುತ್ತಾನೆ. ವೃತ್ತಾಂತವೆಲ್ಲವನ್ನೂ ಅರುಹುತ್ತಾಳೆ. ನಿನ್ನ ಮಗಳೊಬ್ಬಳನ್ನೇ ಏಕೆ, ಎಲ್ಲರನ್ನೂ ಬಿಡಿಸುತ್ತೇನೆಂದು ಸಂತೈಸಿ ರಾಜನಲ್ಲಿಗೆ ಹೋಗುತ್ತಾನೆ. ರಾಜನಿಂದ ಎಲ್ಲ ಮನ್ನಣೆಯನ್ನು ಹೊಂದಿ ಕಠಾರಿಯನ್ನು ನಾನು ತೆಗೆದುಕೊಡುತ್ತೇನೆಂದು ಹೇಳಿ ಎಲ್ಲ ಕನ್ಯೆಯರನ್ನು ಬಿಡಿಸುತ್ತಾನೆ. ಕಠಾರಿಯನ್ನು ತೆಗೆದು ಬೇರೇ ಕಡೆ ಇಡುತ್ತಾನೆ. ರಾಜನ ಇಚ್ಛೆಯಂತೆ ರೇವಣಸಿದ್ಧನು ರಾಜಕುಮಾರಿಯನ್ನು ಲಗ್ನವಾಗಿ ಎಲ್ಲ ಬಳುವಳಿಯನ್ನು ಹೊಂದಿ ಸುಖದಿಂದಿದ್ದನು.

ಮೇಲ್ಕಂಡ ಮಹಿಮೆಯನ್ನು ತೋರಿಸಿದ ಕಾಲದಲ್ಲಿ ರೇವಣಸಿದ್ಧನು "ವೀರಶೈವ"ನಾಗಿದ್ದರೆ ಈ ಎಲ್ಲ ಕನ್ಯೆಯರನ್ನೂ, ಕರ್ಪರಯೋಗಿಯನ್ನೂ

ರಾಜರನ್ನೂ ವೀರಶೈವರಾಗುವಂತೆ ಪಣಹೂಡಬಹುದಿತ್ತು? ಆದರೆ ಅವನು ಹಾಗೆ ಮಾಡದೆ ಕ್ಕೇವಲ ರಾಜಪುತ್ರಿಯನ್ನು ಲಗ್ನವಾಗಿ ಸುಖದಿಂದಿದ್ದನು. ಮುಂದೆ ಕೆಲಕಾಲ ಮಂಗಳವಾಡದಲ್ಲಿದ್ದು ಅಲ್ಲಿಂದ ದಕ್ಷಿಣ ದೇಶ ಸಂಚಾರಕ್ಕೆ ಹೊರಟು ಚೋಳದೇಶಕ್ಕೆ ಹೋಗಿ ರಾಜೇಂದ್ರ ಚೋಳನರಮನೆಗೆ ಹೋಗಿ ಚೋಳರಾಜಕುಮಾರಿಯನ್ನು ವಿವಾಹವಾಗಿ ಆ ದೇಶದ ಶಿವಾಲಯಗಳನ್ನು ಸುತ್ತಿಬಂದು ಚೋಳ ರಾಜನು ಕೊಟ್ಟ ಮರ್ಯಾದೆಗಳನ್ನು ಸ್ವೀಕರಿಸಿ ಮುಂದೆ ಚೇರ ಮಲೆಯಾಳ ಗೌಳ ಗುರ್ಜ್ಜರ ನೇಪಾಳ ದೇಶಂಗಳಿಗೆ ಹೋಗಿ ಅಲ್ಲಿಯ ರಾಜಪುತ್ರಿಯರನ್ನು ವಿವಾಹ ವಾಗಿ ಅಲ್ಲಲ್ಲಿ ಕೆರೆ ದೇವಸ್ಥಾನ ಛತ್ರಗಳನ್ನು ಕಟ್ಟಿಸುತ್ತ ಬೇಡಿದವರಿಗೆ ಬೇಡಿದ ವರಗಳನ್ನು ಅನುಗ್ರಹಿಸುತ್ತ ಪುನಃ ಮಂಗಳವಾಡಕ್ಕೆ ಬರುತ್ತಿದ್ದನು.

## ರಗಳೆಯು ಚತುರ್ಥಸ್ಥಲ

ಗದ್ಯ:— ಚೋಳನ ಕುಮಾರಿಯು ವಿವಾಹವಾಗೆ ಚೋಳಮಹಾ ರಾಜನಿಂ ಪೊಡಮಡಿಸಿಕೊಳುತ್ತಂ ಶಿವಭಕ್ತರಿಂ ವಂದಿಸಿಕೊಳುತ್ತಂ ಆ ದೇಶದ ಪಲವು ಶಿವಪುರಂಗಳಂ ನೋಡುತ್ತಂ ತಿರುಗಿ ಪೊರಮಟ್ಟು ಚೋಳಂ ಕೊಟ್ಟ ಬಳುವಳಿಯ ಚತುರಂಗ ಬಲವೆರಸಿ ತಿರಿಗಿ ಚೇರ ಮಲಯಾಳ ಗೌಳ ಗುರ್ಜ್ಜರ ನೇಪಾಳ ಮೊದಲಾದ ದೇಶಂಗಳಂ ಪೊಕ್ಕಲ್ಲಲ್ಲಿಯ ರಾಜಪುತ್ರಿಯರಂ ಪರಿಣಯಮಾಗಿ ಮನಃಪೂರ್ವಕದಿಂ ಸ್ವೀಕರಿಸಿ ತಟಾಕಂಗಳಂ ಕಟ್ಟಿಸುತ್ತಂ ಶಿವಪುರಂಗಳಂ ಮಾಡಿಸುತ್ತಂ ಛತ್ರಂಗಳಂ ನಿರ್ಮಿಸುತ್ತಂ ಕುರುಡರ್ಗೆ ಕಣ್ಗಳಂ ಹೆಳವರ್ಗೆ ಕಾಲ್ಗಳಂ ಬಂಜೆಯರ್ಗೆ ಮಕ್ಕಳಂ ಕೆಟ್ಟರಸು ಮಕ್ಕಳ್ಗೆ ರಾಜ್ಯಮಂ ಕಂಡಕಂಡ ಬಡವರ್ಗೆ ಸಂಪದಂಗಳಂ ನೀವುತ್ತಿಂತಿವು ಮೊದಲಾದ ಪುಣ್ಯ ಲೀಲೆಗಳನಲಂಕರಿಸುತ್ತೆ ಜಗದ್ಧಿತಾರ್ಥ ಮೂರ್ತಿ ಮಂಗಳವಾಡಕ್ಕೆ ಮರಳಿ ಬಸವರ್ಗಳ್ ಮಂಗಳವಾಡಕ್ಕೆ ಬಂದು ಬಿಜ್ಜಳನರಮನೆಯಲ್ಲಿರುತ್ತಿರುವಲ್ಲಿ ಒಂದಾನೊಂದು ದಿನ ಹಾಗೆಯೇ ಗಾಳಿಸಂಚಾರಕ್ಕೆ ಹೋಗಿದ್ದು ಆ ಊರ ಹೊರಗಡೆ ಒಂದು ಕೆರೆಯನ್ನು ಕಟ್ಟಿಸಬೇಕೆಂಬ ಯೋಚನೆ ಹೊಳೆಯಿತು. ಅಲ್ಲಿ ಅಕ್ಕಪಕ್ಕದಲ್ಲಿದ್ದ ಕಲ್ಲುಗಳನ್ನು ಮುಟ್ಟಲು ಅವೆಲ್ಲವೂ ಹೊನ್ನಿನ ರಾಸಿಯಾದುವು. ತಾನೇ ಗುದ್ದಲಿಯನ್ನು ಹಿಡಿದು ಭೂಮಿಯನ್ನು ಅಗಿಯಲು ಪ್ರಾರಂಭಿಸಿದ್ದನ್ನು ಕಂಡು ಪತ್ನಿಯರೆಲ್ಲರೂ ಮಣ್ಣನ್ನು

ಎತ್ತಿಹಾಕಲು ಮೊದಲುಮಾಡಿದರು. ಮಣ್ಣನ್ನು ಎತ್ತುತ್ತಿರುವಲ್ಲಿ ಚೋಳ ದೇಶದ ರಾಜಕುಮಾರಿಯು ಗರ್ಭವತಿಯಾದ್ದರಿಂದ ತನ್ನಿಂದ್ದ ಮಣ್ಣನ್ನು ಎತ್ತುವದು ಶಕ್ಯವಿಲ್ಲ. ನಾನು ರಾಜಕುಮಾರಿಯೂ, ನಿನ್ನ ಪತ್ನಿಯೂ ಆಗಿದ್ದು ಗರ್ಭವತಿಯಾಗಿರುವಲ್ಲೀ ಮಣ್ಣನ್ನು ಎತ್ತುವುದೇ ಎಂದು ಪ್ರಶ್ನಿಸಲು ಆಗ ರೇವಣಸಿದ್ಧನು ಹಾಗಾದರೆ ನನ್ನಿಂದ ನಿಂತಿರುವ ಗರ್ಭವನ್ನು ಕೊಟ್ಟು ನಿನ್ನ ತಂದೆಯ ಮನೆಗೆ ಹೊರಟು ಹೋಗೆಂದು ಆಜ್ಞಾಪಿಸುತ್ತಾನೆ. ಆಗ ರಾಜಕುಮಾರಿಯು ತನ್ನಿಂದ ಕೆಲಸಮಾಡಲು ಶಕ್ಯವಿಲ್ಲದ್ದರಿಂದ ಗರ್ಭವನ್ನು ತೆಗೆದುಕೊಳ್ಳಿ ಎಂದು ಹೇಳುತ್ತಾಳೆ. ಆಕೆಯ ಗರ್ಭದ ಮೇಲೆ ಕೈಯಾಡಿಸಿ ೩ ತಿಂಗಳ ಶಿಸು ಗರ್ಭವನ್ನು ತೆಗೆದುಕೊಂಡು ಆ ಊರ ಕೆರೆ ಏರಿಯ ಒಂದು ಭಾಗದಲ್ಲಿ ಹೂತಿಟ್ಟು ರಾಜಕುಮಾರಿಯನ್ನು ತಂದೆಯ ಮನೆಗೆ ಕಳುಹಿಸಿ ಕೆರೆಯ ಕಾಮಗಾರಿಯನ್ನು ಮುಗಿಸುವಾಗ್ಗೆ ೬ ತಿಂಗಳಾಗಿತ್ತು. ಆಗ ಭೂಮಿಯಲ್ಲಿ ಹೂತಿಟ್ಟ ಶಿಶುವಿಗೆ ೯ ತಿಂಗಳಾಗಿದೆಯೆಂಬುದನ್ನರಿತು ಪುತ್ರೋತ್ಸವಕ್ಕನುವಾದ ವಾದ್ಯ ವೈಭವದಿಂದ ಬಂದು ಮುಚ್ಚಳವನ್ನು ತೆಗೆದು ಶಿಶುವನ್ನು ಎತ್ತಿಕೊಂಡು ಮುದ್ದಾಡಿ ತಾಯಿಗರ್ಭದ ನೋವನ್ನರಿಯದ ಕಾರಣ ರುದ್ರಮುನಿದೇವನೆಂಬ ನಾಮಕರಣವ ಮಾಡಿ ಅರಮನೆಗೆ ಬಂದು ತಮ್ಮರಸಿಯ ಕೈಗೆ ಕೊಟ್ಟು ಸಲಹುತ್ತಿದ್ದರು.

ಈ ಮೇಲ್ಕಂಡ ವಿಷಯಗಳಿಂದ ರೇವಣಸಿದ್ಧನು "ಶೈವ ಧರ್ಮಾನುಯಾಯಿ"ಯೆಂಬುದು ನಿರ್ವಿವಾದವಾಗಿದೆ.

ಹೇಗಂದರೆ:—

ಅನೇಕ ಕುಮಾರಿಯರನ್ನು ಲಗ್ನವಾಗುವುದು ಕೆರೆ ದೇವಸ್ಥಾನ ಛತ್ರಮೊದಲಾದವುಗಳನ್ನು ಕಟ್ಟಿಸುವುದು ಸ್ಥಾವರ ಮೂರ್ತಿಗಳನ್ನು ಪೂಜಿಸುವುದು ಇವೆಲ್ಲವೂ ಶೈವ ಧರ್ಮ ಪದ್ಧತಿಯಾಗಿದೆ. ಮುಂದೆ ರುದ್ರಮುನಿದೇವನಿಗೆ ೮ನೇ ವರುಷವು ಪ್ರಾಪ್ತವಾಗಲು ರೇವಣಸಿದ್ಧೇಶ್ವರನೇ ಮಗನಿಗೆ **ಶೈವೋಪದೇಶವನ್ನು** ಕೊಟ್ಟಿದ್ದು ಕಂಡು ಬರುತ್ತಿದೆ.

## ಹರಿಹರನ ವರ್ಣನೆ:—

ಬಾಲಚಂದ್ರನಂ ಗಗನಾಂಗನೆ ಸಲಹುವಂತೆ ತರುಣ ತರುಣಿಯುಂ ಪೂರ್ವ ದಿಶಾಂಗನೆ ಬೆಳೆಯಿಸುವಂತೆ ಸಾಗಿಸುತ್ತಿರಲೆಂಟನೆಯ ವರುಷ ಮೋಳ್ ಮಗನಂ ನೋಡಿ ಮಿಗೆ ಸಂತಸಂ ಬಟ್ಟು **ಶೈವೋಪದೇ**

ಶಿವಂ ತಾನೆ ಕರುಣಿಸಿ ಕೃಪೆಯಿಂ ನಿರೀಕ್ಷಿಸಿ ರುದ್ರಮುನಿದೇವರ್ಗೆ ಪರಮ ಸ್ವರೂಪ ಜ್ಞಾನ ಬೋಧೆಯಂ ಬೆಸಸುತ್ತಂ ಶಿವಯೋಗ ಸಂಪನ್ನನೆನಿಪ ರೇವಣಸಿದ್ಧ ಮಂಗಳವಾಡದೊಳಿರ್ದನಂತುಮಲ್ಲದೆಯುಂ

ತನ್ನ ಮಗನಾದ ರುದ್ರಮುನಿ ದೇವರಿಗೆ ಶೈವೋಪದೇಶವನ್ನು ಕೊಟ್ಟಿರುವುದನ್ನು ನೋಡಿದಲ್ಲಿ ರೇವಣಸಿದ್ಧನು ಶೈವಧರ್ಮಾನುಯಾಯಿಯೆಂಬುದು ಕನ್ನಡಿಯಲ್ಲಿ ಕಂಡಂತೆ ಸ್ಪಷ್ಟ ತಿಳಿಯುತ್ತಿದೆ. ವೀರಶೈವನಾಗಿದ್ದರೆ ಲಿಂಗಧಾರಣ ದೀಕ್ಷಾ ಕೊಡಬೇಕಿತ್ತು ? ವೀರಶೈವನಲ್ಲದ್ದರಿಂದಲೇ ಕೊಡಲಿಲ್ಲ. ( ಇದನ್ನು ವಾಚಕರು ಗಮನಿಸಬೇಕು. ) ಮುಂದೆ ರಗಳೆಯ ಪಂಚಮ ಸ್ಥಲ.

ವೃತ್ತಃ— ನಯದಿಂದಂ ಪ್ರಿಯದಿಂದೆ ರುದ್ರಮುನಿ ದೇವಂಗಳ್ಕರಿಂ ಶೈವದೀಕ್ಷೆಯ ನಿತ್ತಾನತವ್ಮಂದ ಮೋಕ್ಷದನೂನೈಶ್ವರ್ಯ ಸಂಯುಕ್ತನ। ದ್ವಯಸಿದ್ಧಂ ಶಿವಭಾವ ಸಿದ್ಧನವನೀಶಂ ಪೂಜ್ಯ ಸಿದ್ಧಂ ರೇವಣ ಶಿವಂ ಸಂದಿರ್ದನಾ ಸ್ಥಾನದೊಳ್.

ಇದರಲ್ಲಿಯೂ "ಶೈವದೀಕ್ಷೆಯ ಮಾತೇ ಬಂದಿದೆ.

ಮುಂದೆ ಪರಿವಾರ ಸಹಿತನಾಗಿ ಅನೇಕ ದೇಶಗಳನ್ನು ಸುತ್ತುತ್ತಾ ಇರುವಲ್ಲಿ ಹಾವಿನಹಾಳೆಂಬ ಅಗ್ರಹಾರದಲ್ಲಿ ಕಲ್ಲಯ್ಯನೆಂಬ ಓರ್ವ ಭಕ್ತನು ಆ ಊರ ಕಲಿದೇವರಲ್ಲಿ ತುಂಬಾ ಭಕ್ತಿಯುಳ್ಳವನಾಗಿರುತ್ತಾನೆ. ಆಗ ಆ ಊರಿಗೆ ರೇವಣಸಿದ್ಧನು ಬಂದನೆಂಬ ವಾರ್ತೆಯನ್ನು ಕೇಳಿ ಬಂದು ರೇವಣಸಿದ್ಧನನ್ನು ಆಶ್ರಯಿಸುತ್ತಾನೆ. ಆದರೆ ರೇವಣಸಿದ್ಧನು ರುದ್ರಮುನಿದೇವರಿಂದ ಶೈವದೀಕ್ಷೆಯನ್ನು ಕೊಡಿಸಿ ಕಳಿಸುತ್ತಾರೆ. ಅದನ್ನು ಹರಿಹರನ ವಾಣಿಯಿಂದಲೇ ಕೇಳಿರಿಃ—

ಎಳ್ದು ಕೈ ಮುಗಿದಿರ್ದ ಕಲ್ಲಯ್ಯನಂ ಕಂಡು ತಾಳ್ದು ಕಾರುಣ್ಯಮಂ ಭಕ್ತಿಗೆ ಮನಂಗಂಡು ರುದ್ರಮುನಿದೇವನಿಂ ಕರುಣಮಂ ಮಾಡಿಸುತೆ ರುದ್ರನಣುಗಂ ಶೈವದೀಕ್ಷೆಯಂ ನೀಡಿಸುತೆ ಕಲ್ಲಯ್ಯನಂ ತತ್ಪುರಕೆ ಕರುಣಿಸಿ ಕಳುಪಿ ಎಲ್ಲ ತೆರದಿಂದೆ ಭವ ಬಂಧನಂಗಳ ಸ್ಸಿಳಿಪಿ.

ಯಾವುದನ್ನೇ ನೋಡಲಿ ಎಲ್ಲ ಕಡೆಯಲ್ಲಿಯೂ "ಶೈವಧರ್ಮ" ಪ್ರಚಾರವು ಕಂಡು ಬರುತ್ತೇವಿನಃ ವೀರಶೈವ ಧರ್ಮ ಪ್ರಚಾರವು ಕಾಣುವುದಿಲ್ಲ.

ಅಲ್ಲಿಂದ ಮುಂದೆ ಭೂಲೋಕದಲ್ಲಿ ತನ್ನ ಕಾರ್ಯವು ಪೂರೈಸಿತೆಂದು ಯೋಚಿಸುತ್ತಾ ಬರುತ್ತಿರುವಲ್ಲಿ ಸೊನ್ನಲಿಗೆ ( ಸೋಲಾಪುರ ) ಸಿಗುವುದು. ಅಲ್ಲಿ ರೇವಣಸಿದ್ಧನು ಆನೆಯಿಂದಿಳಿದು ಹೊನ್ನಾವಿಗೆಗಳನ್ನು ಕಳೆದು ಊರನ್ನು ಪ್ರವೇಶಿಸುವುದನ್ನು ಆ ಊರರಸಿ ಚಾಮಲದೇವಿಯು ಕಂಡು ಇದೇನೀ ಹೊಸಪದ್ಧತಿ ಎಂದು ಕೇಳಲು ಆಗ ರೇವಣಸಿದ್ಧನು ಇಲ್ಲಿ ಶಿವಲಿಂಗವಾಗುವುದು(ದೇವಾಲಯ)ಘನಮಹಿಮೆಯುಳ್ಳ ಶಿವಭೋಗವಾಗುವುದು. ಇಲ್ಲಿಯ ಮರಡಿಯ ಮುದ್ದುಗೌಡನ ಅರ್ಧಾಂಗಿನಿಯಾದ ಸುಗ್ಗವ್ವೆ ಎಂಬ ಕಾರಣಿಕೆಯಲ್ಲಿ ಕಾರಣಿಕಸಿದ್ಧನು ಉದಯಿಸುವನು ಎಂದು ಹೇಳಿ ನಡೆದುಕೊಂಡು ಮುದ್ದುಗೌಡನ ಮನೆಗೆ ಬಂದು ಭಿಕ್ಷೆಯ ತೆಗೆದುಕೊಂಡು ಸುಗ್ಗ ಗೌಡಿಯ ತುಂಬಿದ ಹೊಟ್ಟೆಯನ್ನು ನೋಡಿ ಮುಟ್ಟಿ ಭಸಿತವನ್ನು ಸವರಿ ಸೇನೆಯುಂ ರುದ್ರಮುನಿಯುಂ ನೋಡಿ ಚಾಮಲದೇವಿಗೆ ಹೇಳಿ ಮುಂದೆ ಕೊಲ್ಲಿಪಾಕಿ ಕ್ಷೇತ್ರಕ್ಕೆ ಗಗನಮಾರ್ಗದಿಂದ ಹೊರಟನು.

ಮೇಲೆ ಹೇಳಿದ ಕಾರಣಿಕ ಪುರುಷನು ವಚನಕಾರನಾದ ಸಿದ್ಧರಾಮೇಶ್ವರನೆಂಬುದು ನಿರ್ವಿವಾದವಾಗಿದೆ.

ಮುದ್ದುಗೌಡ ಸುಗ್ಗವ್ವೆಯರ ಮಗನಾದ ಸಿದ್ಧರಾಮನು ಸೊನ್ನಲಿಗೆಯಲ್ಲಿ ಕೆರೆ ದೇವಸ್ಥಾನಗಳನ್ನು ಕಟ್ಟಿಸುತ್ತಿರುವಲ್ಲಿ ಅಲ್ಲಮಪ್ರಭುದೇವರು ಬಂದು ನೋಡಿ ಅವನು ಮಾಡಿಸುತ್ತಿರುವ ಕಾರ್ಯಗಳನ್ನು ಜರಿದು ತತ್ವದಲ್ಲಿ ಸೋಲಿಸಿ ಮುಂದೆ ಕಲ್ಯಾಣಕ್ಕೆ ಕರೆದುಕೊಂಡು ಹೋಗಿ ಚನ್ನಬಸವೇಶ್ವರನಿಂದ **ಲಿಂಗದೀಕ್ಷೆ** ಕೊಡಿಸಿದ್ದು ಎಲ್ಲ ಗ್ರಂಥಗಳಿಂದ ತಿಳಿದ ಮಾತಾಗಿದೆ. ಸಿದ್ಧರಾಮನೇ ಶೈವಧರ್ಮ ಪದ್ಧತಿಯಂತೆ ಕೆರೆ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದು ಆನಂತರ **ಲಿಂಗದೀಕ್ಷೆ**ಯನ್ನು ಕೈಗೊಂಡಿರುವಲ್ಲಿ ಇನ್ನು ಅವನ ತಂದೆತಾಯಿಗಳಾದ ಮುದ್ದುಗೌಡ ಸುಗ್ಗವ್ವೆಯರು **ಶೈವ**ರೆಂಬುದು ನಿರ್ವಿವಾದ ಮಾತಾಗಿದೆ.

ಮುದ್ದುಗೌಡ ಸುಗ್ಗವ್ವೆಯರ ಮನೆಗೆ ರೇವಣಸಿದ್ಧನು ಹೋಗಿದ್ದೂ ಕೂಡ ಅವರು ಶೈವರಾಗೇ ಉಳಿದಿದ್ದರಿಂದ ಮೇಲೆ ರೇವಣಸಿದ್ಧನು ಪ್ರಚಾರ ಮಾಡಿದ್ದು **ಶೈವಧರ್ಮವನ್ನೋ? ವೀರಶೈವ ಧರ್ಮವನ್ನೋ?** ವಾಚಕರೇ ನಿರ್ಧರಿಸಬೇಕು. ರೇವಸಿದ್ಧೇಶ್ವರನಂತೂ **ಶೈವ**ನೆಂಬುದು ಹಿಂದಿನ ಅನೇಕ ಉದಾಹರಣೆಗಳಿಂದ ಸಿದ್ಧಾಂತವಾಗಿದೆಯಷ್ಟೆ.

---

# ಭಾವ ಚಿಂತಾರತ್ನದ ವಿಮರ್ಶೆ.

ಬಾ— ಚಂದ್ರಶೇಖರದೇವರು ಅಡ್ನೂರು.

(ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು.)

## ವರ್ಣನೆಯ ವಿಶೇಷಾಂಶಗಳು

ಭಾವಚಿಂತಾರತ್ನಕಾವ್ಯದಲ್ಲಿ ಬಣ್ಣನೆಗಳು ಬಹು ಸ್ವಲ್ಪ; ಬಹಳ ಸಂಕ್ಷಿಪ್ತ; ಅತಿಭಾವಗರ್ಭಿತ. ರಜತಾದ್ರಿಯಲ್ಲಿರುವ ಮುನಿಗಳು ಮನ್ಮಥನನ್ನು ಹೇಗೆ ಜರೆದು ಜಯಿಸಿದ್ದರೆಂಬುದನ್ನು ಒಂದೇ ಒಂದು ಪದ್ಯದಲ್ಲಿ ಎಷ್ಟೊಂದು ಸ್ವಾರಸ್ಯವಾಗಿ ಹೇಳಿರುವನು ನೋಡಿ—

ಪೂವಿಲ್ಲಗಡ ತನಗೆ ಕುಸುಮಶರನೆಂಬ ಪೆಸ ।
ರಾವ ಕಾರಣವಾದುದಳಿವೆದೆಯನಾಗಿ ಲೊ ।
ಕಾವಳಿಯ ಗೆಲ್ದ ಬಗೆಯೆಂತು ಪೆಣ್ಮಕ್ಕಳಂಕೊಂದು ಕೂಗಿಡುವ ತನಗೆ ॥
ಕಾವನೆಂದೆಂಬ ಪೆಸರೇ ಮೆಯ್ಯರಿಯಬಾರ ।
ದಾವಿಗಡನ ವಿಚಾರದಿಂ ಲಜ್ಜೆಗೆಟ್ಟಿಪಂ ।
ಗಾವಳ್ಕಿವೆಂದು ಮಾರನ ಜರೆದು ತಪವಿರ್ದರಲ್ಲಿ ವರ ಸನ್ಮುನಿಗಳು ॥

ಈ ಪದ್ಯದಲ್ಲಿ ಕವಿಯು ೧ ಪೂವಿಲ್ಲ, ೨ ಅಳಿವೆದೆಯ, ೩ ಕಾವ ಎಂಬೀ ಪದಗಳಲ್ಲಿ ಪ್ರಯೋಗಿಸಿದ ವಿರೋಧಾಭಾಸಗಳು ವಿಶೇಷ ಗಮನಾರ್ಹವಾದವುಗಳು; ಅತ್ಯಂತ ರಮಣೀಯವಾದವುಗಳು.
ಕಾವ್ಯ ಕಾವೇರಿಯ ಪ್ರವಾಹವನ್ನು ನೋಡಿ—

ಸೂರಿಜನ ಹರ್ಷವಿಸ್ತಾರಿ ಸುಖಸಂಕಥಾ ।
ಕಾರಿ ಬರನೆರ್ದಗಂ ಕರಾರಿ ಬೆಳಸಿರಿಯ ಭರ ।
ಭಾರಿಕುಶ್ರಮಸಂಘವೈರಿ ಜಲಚರ ಸದಾಧಾರಿ ಕಟಲಾರಿ ಶಿವನ ।
ನಾರಿ ಗಂಗಾಂಬಾವತಾರಿ ದುರ್ದೋಷಸಂ ।
ಹಾರಿಯೆಂದೊದರುವತಿಭೇರಿ ಯಾರ್ಭಟವೀಚಿ ।
ಧಾರಿ ಬಹುಮಾರ್ಗಪ್ರಚಾರಿಯಾನಾಡಕಾವೇರಿ ಭೋರ್ಗರೆದೆಸೆದುದು ॥

ಇದನ್ನು ಓದುವಾಗ ಕೇಳುವವರಿಗೆ ನಿಜವಾಗಿಯೂ ನದಿಯೇ ಹರಿಯುತ್ತಿದೆಯೇ? ಎನ್ನುವಂತಿದೆ. ನದಿಯ ಓಟದಲ್ಲಿ ಒಂದೇ ವಿಧವಾದ ಧ್ವನಿಯನ್ನು ಕೇಳುವಂತೆ ಈತನ ಈ ಕಾವ್ಯಕಾವೇರಿಯಲ್ಲಿಯೂ ಕಾರಿ, ತಾರಿ, ಭಾರಿ, ಧಾರಿ ಎಂದು ಮುಂತಾಗಿ ಒಂದೇ ವಿಧದಾರ್ಭಟವು ಎಡೆಯಾಡುತ್ತಿದೆ. ಈ ಶಬ್ದಾಲಂಕಾರವು ಈ ಸರಿದ್ವರ್ಣನೆಗೆ ಹೆಚ್ಚು ಕಳೆಯನ್ನು ಕೊಟ್ಟಿದೆ.

ಬಲಿದುನಿಂತ ಬೇಸಿಗೆಯ ಬಿಸಿಲನ್ನು ಕವಿಯಿಂತು ಬಣ್ಣಿಸಿದ್ದಾನೆ.—

ಸ್ಫಟಿಕವೆಂದೆಂಬ ಕಂದದಿನೊಗೆದು ನಾಡೆ ಛಿಣಿ।
ಛಿಟಿಲೆಂಬ ಕಿಡಿಗಳೇ ಮೊಳೆಗಳಾಸೂರ್ಯನು।
ತ್ಕಟದ ಕಿರಣಂಗಳೇ ವಲ್ಲಿಯಗ್ರದ ಭಾಸ್ಕರನೆ ಫಳಂ ಪಕ್ವಮಾಗಿ॥
ಪುಟವೇರಿಯುಕ್ಕುತುಂ ಬ್ರಹ್ಮಾಂಡವೆಂದೆಂಬ।
ಘಟದೊಳು ರಸಂ ತೀವಿತೆನೆ ಮರೀಚಿಯ ಜಲಂ।
ಪಟುವಾಗಲಾಗಿ ಬೇಸಗೆ ಬೆಳೆದು ಪಣ್ತುದೆಲೆ ದೇವಚಿತ್ರೈಸೆಂದನು॥

ಬೇಗೆಯ ಉಗ್ರತೆಯನ್ನು ಈ ಪದಪ್ರಯೋಗದಲ್ಲಿ ಕಾಣಬಹುದು. ಆದರೆ ಬೆವರು ಬರಲಿಲ್ಲವಲ್ಲ ಎಂದು ಯಾರೂ ಶಂಕಿಸಲಾಗದು. ಇಲ್ಲಿ ಉಪಯೋಗಿಸಿದ ರೂಪಕವು ಎಷ್ಟು ಸಮರ್ಪಕವಾಗಿದೆ ನೋಡಿ! ಅದರೊಡನೆ ಶಬ್ದಜೋಡಣೆಯ ಜಾಣ್ಮೆಯನ್ನೂ ಕಾಣಲು ಮರೆಯಬೇಡಿ!

ಮಂತ್ರಲಕ್ಷ-ಮಿತವಚನರ ಸ್ವಯಂವರ ಮಂಟಪಕ್ಕೆ ಆಗಮಿಸಿದ ಸ್ತ್ರೀಯರ ಸೌಂದರ್ಯ್ಯವನ್ನು ಕವಿ ಈ ಒಂದು ಪದ್ಯದಲ್ಲಿ ಹೀಗೆ ಚಿತ್ತರಿಸಿದ್ದಾನೆ.

"ನೀಲಕುಂತಳದ ನವಭೂಷಾರುಣಪ್ರಭೆಯ।
ಲೋಲಸೂತ್ರದ ಕನಕಪುತ್ಥಳಿಯ ತೆರದ ವರ।
ಬಾಲೆಯರು ವಿದ್ರುಮಾಧರದ ಗೋಮೇಧಾಗ್ರಯೆರು ವಜ್ರಮಾಣಿಕ್ಯದ॥
ಹೋಲುವೆಯ ದಂತಪಂಕ್ತಿಯ ಪಚ್ಚಪಸಿವರೆಯ--।
ದಾಲಲಿತರತಿಯೆನಿಪ ಮೌಕ್ತಿಕಚ್ಛವಿಯೆಸೆವ।
ಕಾಲುಗುರ್ಗದಿರ್ವೆಣ್ಗಳೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದ

ಕೇಶಕಾಂತಿ, ಚಿನ್ನದೊಡವು, ವಿದ್ರುಮಾಧರ ಪ್ರಭೆ, ವಜ್ರಮಾಣಿಕ್ಯಗಳಿಗೂ-ದಂತ ಪಂಕ್ತಿಗೂ ಇರುವ ಪೋಲುಮೆ, ಕಾಗುರ್ಗ-ಮೌಕ್ತಿಕಗಳಿಗಿರುವ ಛವಿಯ ಸಾಮ್ಯ, ರತ್ನಹಾರಗಳಿಗೂ ಸ್ತ್ರೀರತ್ನಗಳಿಗೂ ಇರುವ ಸಾದೃಶ್ಯ ಇವುಗಳನ್ನು ಎಷ್ಟು ಸೊಗಸಾಗಿ ಸುಂದರವಾಗಿ ಚಿತ್ರಿಸಿದ್ದಾನೆ.

ಹಾಗೆಯೇ ಶರತ್ಕಾಲದ ಶಶಿವರ್ಣನೆಯನ್ನೊಂದು ಕೇಳಿ!

ಕಾಲರಜಕಂ ಮಲಿನ ದಿವಸಾಂಬರವನಾವಿ- ।
ಶಾಲ ಸಾತಿಯ ಮಳೆಯೊಳೊಗೆದು ದಕ್ಷಂಗೀಯ ।
ಲಾಲೋಕಿಸುತ್ತೈದೆ ಬೆಳಿಗಳಂ ಸಲಹಿದಳಿಯಂಗೆ ಧವಲಾಂಬರವನು ॥

ಮೂಲ ವೈರಂ ಪೋಗೆ ದೀವಳಿಗೆಯೊಳು ಕರೆದು ।
ಮೇಲಪಂ ಪೊದಿಸಿ ಪರಸುತ್ತಕ್ಷತೆಯ ನಿಟ್ಟ ।
ವೋಲೊಪ್ಪಿದಂ ಶರನ್ಮೇಘದೊಳ್ ಚಂದ್ರಮಂ ತಾರಕಾನೀಕದಿಂದ

ಅಹ! ಎಂತಹ ಸಮರ್ಪಕವಾದ— ಸಹಜವಾದ ರೂಪಕ ವರ್ಣನೆಯಿದು. ಮಿಳ್ತು ಮಡಿವಳನಾದುದು, ಮಳೆಗಾಲದಿಂದ ಕೊಳೆಯಾದ ದಿವಸಗಳೇ ಅಂಬರವಾದುದು, ಅದರ ಕೊಳೆಯನ್ನು ಸಾತಿಯಲ್ಲಿ ಕಳೆದುದು, ಶರದಧಿಪನಾದ ದಕ್ಷಂಗೆ ಅದನ್ನು ಅರ್ಪಿಸಿದುದು, ಆತನದನ್ನು ತನ್ನಳಿಯನಾದ ತನ್ನ ಬೆಳೆಯನ್ನು ಸಲುಹಿದ ಚಂದಿರನಿಗೆ ಕೊಟ್ಟುದು, ಹೊದಿಸಿ ತಾರಕಾಕ್ಷತೆಯನಿಕ್ಕಿದುದು ಎಷ್ಟು ಹೃದಯಂಗಮವಾಗಿದೆ; ಎಂತಹ ಶೈಲಿ, ಎಂತಹ ಸೊಬಗು. ಹೀಗೆ ಒಂದೆರಡಲ್ಲ. ಈತನ ಷಡ್ರುತುಗಳ ವರ್ಣನೆಗಳೆಲ್ಲ ಇದೇ ಬಗೆಯವು; ಇದೇ ಸೊಗಸಿನವು. ಅವನ್ನೆಲ್ಲ ಕಾವ್ಯವನ್ನೋದಿಯೇ ತಣಿಯಬೇಕು.

ನಮ್ಮೀ ಆರ್ಯಾವರ್ತಕ್ಕೆ ಭಾರತ ವರ್ಷವೆಂದು ಬಂದ ಹೆಸರನ್ನೂ ಇದರ ಆಕೃತಿಯ ನಕ್ಷೆಯನ್ನೂ ಕವಿಯು ನಮ್ಮ ಕಣ್ಮುಂದೆ ಹೀಗೆ ಇರಿಸಿದ್ದಾನೆ.

"ಉತ್ತಾನ ಪಾದನೆನಿಸುವ ರಾಜರುಷಿ ಮೊದಲು ।
ಪೆತ್ತ ಭರತಂಗೆ ಹಿಮವಂತದಿತ್ತಣ ಧರೆಯ ।
ನಿತ್ತ ಕತದಿಂದೆ ಭಾರತವರ್ಷವೆನಿಸಿತದರಾಕಾರ ವೆಂತೆಂದೊಡೆ ॥

ಚಿತ್ತರಿಪೆಸಿನಕುಲದ ನೃಶನೆಂಬ ಕಾವಂಗೆ।
ತೆತ್ತು ಮನಮಂ ಭೂಮಿರತಿ ಪುರುಷ ಧನುವನ।
ಚಿಟ್ಟುತ್ತಿಕೊಂಡಳೋ ತನ್ನ ಪೇರುರದೊಳಿನೆ "ಬಿಗಿದ ಬಿಲ್ಲಂತೆ"
ಮೆರೆದಿರ್ದುದು॥

ಭಾರತ ವರ್ಷದಾಕಾರವು 'ಬಿಗಿದ ಬಿಲ್ಲಂತೆ' ಇದೆಯೆಂದು ಸೀಮೆಯ ಸ್ವರೂಪವನ್ನು ಎಷ್ಟು ಸುಗಮವಾಗಿ ಸುರಮ್ಯವಾಗಿ ಹೇಳಿ ಜ್ಞಾನಮಾಡಿಕೊಟ್ಟಿದ್ದಾನೆ. ಇವೆರಡೇ ಶಬ್ದಗಳಲ್ಲಿ ಇಡೀ ಹಿಂದುಸ್ಥಾನದ ನಕ್ಷೆಯನ್ನು ಚಿತ್ರಿಸಿದ ಕವಿಯೀತ. ಇದು ಈತನಿಗಿರುವ ಐತಿಹಾಸಿಕ ಜ್ಞಾನದ ಕುರುಹು. ಇಷ್ಟೇ ಅಲ್ಲ.

**ಈ ಮಲ್ಲಣಾರ್ಯ ಕವಿಯು—**

"ವೇದಾಂತ ಸಿದ್ಧಾಂತ ಲಕ್ಷಣವೈದ್ಯಭರತ ಸಾಮುದ್ರಿಕ ಜ್ಯೋತಿಷಾಲಂಕಾರ ಸರಸಗೀತಂ। ವಾದ್ಯಶಕುನ ಸದ್ವ್ಯಾಕರಣ ಸೂಪರತಿ ಶಾಸ್ತ್ರದೊಳಗೆ ಪರಿಣತಂ"

ಎಂದು ಚೇರಮಾಂಕನ ಹೇಳಿಕೆ. ಇದು ಈತನ ಬರೀಗುರುವಾತ್ಸಲ್ಯವೇ? ಅಥವಾ ಇದರಲ್ಲಿ ಏನಾದರೂ ಸತ್ಯಾಂಶವಿದೆಯೇ? ಎಂಬ ಪ್ರಶ್ನೆಯು ಮುಂದೆ ಬಂದು ನಿಲ್ಲುತ್ತಿದೆ. ಆ ಪ್ರಶ್ನೆಯು ಆತನ ಕಾವ್ಯವನ್ನು ಓದಿದ ಮೇಲೆ ನಿಲ್ಲಲಾರದು. ಅಷ್ಟೇ ಅಲ್ಲ, ಇದ್ದೇ ತೀರಬೇಕು ಎಂದು ನಿಶ್ಚಯದ ಎಲ್ಲೆಯು ಮೇಲೆ ಬಂದು ನಿಲ್ಲುತ್ತೇವೆ. ಅವಗಾಹನೆಗಾಗಿ ಇಲ್ಲಿ ಕೆಲವು ಪದ್ಯಗಳನ್ನು ಮಾತ್ರ ಎತ್ತಿ ತೋರಿಸುತ್ತೇನೆ.

ವೇದಾಂತ ಸಿದ್ಧಾಂತಕ್ಕೆ—

ಪರುಷಣಂಗೈದು ದೀಕ್ಷಾರ್ಥಿಗಳನಲ್ಲಿ ಚಿ।
ತ್ತರಣಿ ವಿಸ್ಫುರಿಪೆ ಹಸ್ತಾಬ್ಜ ವಿಕಸನವಾಗೆ।
ಪರತರಬ್ರಹ್ಮಪುರುಷನ ಪೆತ್ತು ಸದ್ಭಕ್ತಿ ಭಾರತಿಯನಲ್ಲಿ ಪಡೆದು॥

ಎಂಬೀ ಅರ್ಥೋಕ್ತಿಯೇ ಸಾಕು.

ವೈದ್ಯವಿದ್ಯೆಗೆ—

"ಹರಿಯುನಭವಂಗೆ ವಂದನೆಗೆಯಿಸಿ ಶಿಖಿಯುನಂ।
ಬರದಲ್ಲಿ ಕಟ್ಟಿಯೂರ್ಧ್ವಾಕ್ಷಿಗಳ ಪಡೆದು ಸಿ-।
ಷ್ಮರವಕ್ರಮಂದತೀವ್ರದ ದುರ್ಗುಣಗಳ ವೈಷ್ಣವ-ವಿಪ್ರ-ಜೈನರೆಂಬ॥

ವರವಾತ ಪಿತ್ತದುಶ್ಲೇಷ್ಮವುಂ ಕಿಡಿಸಿ ಶಂ- ।
ಕರಲೆಂಕಮುಂಚಣ್ಣ ಶ್ರೀಪತೀಶ್ವರದೇವ ।
ನುರುಮಲ್ಲಿಕಾರ್ಜುನಂ ಪಂಡಿತತ್ರಯವಾದರೆಮ್ಮ ಭವರೋಗಗಳಿಗೆ॥

ಜ್ಯೋತಿಷಕ್ಕೆ—

"ಬಾಣಗುಣವಾರ್ಧಿವಿಧು ಸಂದ ಶಕವರ್ಷದಿಂ ।
ಮೇಣಮಲ ವತ್ಸರಂ ಶ್ರೀಮುಖಂ ಕಾರ್ತಿಕ ಧು- ।
ರೀಣವಹ ಶುದ್ಧ ಸಪ್ತಮಿ ಶುಕ್ರವಾರವಾ ಶ್ರವಣ ನಕ್ಷತ್ರದಲ್ಲಿ ॥

ಅಲಂಕಾರಗಳಿಗೂ, ಸರಸಗೀತಕ್ಕೂ ಇತನ ಈ ಇಡೀ ಕಾವ್ಯವೇ ಸಾಕ್ಷಿ. ಇಲ್ಲಿ ಸರಸಗೀತವೆಂದರೆ ಸರಳಶೈಲಿಯೆಂದಲ್ಲ. ತಡೆಯಿಲ್ಲದೆ ಉಪಯೋಗಿಸಿದ ಪದಪ್ರಯೋಗ; ಅಂದವಾದ ಪದವೈತ್ರಿ; ಕವಿಸಹಜವಾದವಾಣಿ.

ವ್ಯಾಕರಣಕ್ಕೆ—

"ಕ್ಷಳರಳಕುಳಾಕ್ಷರ ಸಮಸ ತದ್ಧಿತ ಸಂಧಿ ।
ಗಳನಪಭ್ರಂಶಾಖ್ಯೆಯಾಖ್ಯಾತ ಭೇದಗಳ ।
ತಿಳಿದು ಯತಿಭಂಗಾರ್ಥಶೂನ್ಯ ಪುನರುಕ್ತ್ಯರ್ಥಸೇಯ ನೀರಸಮು ಖ್ಯವಾ ॥
ಕಳೆದಲಂಕಾರ ಚಿತ್ರಾರ್ಥ ರಸಭಾವವೆ- ।
ಗ್ಗಳಿಸೆ ತಿದ್ದುವುದು ಶಿವಭಕ್ತರೆಂದೆನಿಪ ಕವಿ- ।
ಗಳು ॥

ಎಂದು ತನ್ನ ವ್ಯಾಕರಣದ ವೈದುಷ್ಯವನ್ನು ತೋರಿದ್ದಾನೆ.

ಇಲ್ಲಿ ತೋರಿದವುಗಳು ದಿಗ್ದರ್ಶನಮಾತ್ರ. ಈ ವಿಷಯಗಳಲ್ಲಿ ಈ ಕವಿಗೆ ಪಾಂಡಿತ್ಯವಿತ್ತೆಂದು ಇನ್ನೂ ಚನ್ನಾಗಿ ತಿಳಿಯಬೇಕಾದರೂ ಮತ್ತು ಉಳಿದ ವಿಷಯಗಳಿಗೂ ವೀರಶೈವಾಮೃತ ಮಹಾಪುರಾಣವನ್ನು ಓದಿ ಮನಗಾಣಬಹುದು.

## ವ್ಯಕ್ತಿ ಶಕ್ತಿ

ವ್ಯಕ್ತಿಗಳ ಶಕ್ತಿಗಳನ್ನು (ಪಾತ್ರಪೋಷಣೆಯನ್ನು) ಪರ್ಯಾಯ ದಿಂದ ಚಿತ್ರಿಸುವುದರಲ್ಲಿ ಈ ಕವಿಯು ಇನ್ನುಳಿದ ಉತ್ತಮ ಕವಿಗಳಿಗಿಂತಲೂ ಯಾವ ವಿಧದಲ್ಲಿಯೂ ಕಡಿಮೆಯುನಲ್ಲ. ಚೋಳರಾಜನು ಸಾರ್ವ

ಭೌಮನಿದ್ದನು; ಅಸಹಾಯ ಶೂರನಿದ್ದನು ಎಂಬುದನ್ನು ಈ ಪದ್ಯದಿಂದ ಪ್ರಕಟಿಸಿದ್ದಾನೆ.

"ಕರಕಮಲವಂ ಮುಗಿದು ಜೀಯ ನೀವಿರ್ದವಂ- ।
ದಿರವಲಾ ಕಾಶಿಯಾ ತೀರ್ಥವೈತರ್ಪುದಿಂ- ।
ದರರೆ! ಭಾಗೀರಥಿಗೆ ಧರ್ಮವತಿಗೇಳ್ನೂರು ಗಾವುದದೊಳೆಡೆ ಗುಂದದೆ ॥
ವರಮುಕುಟವರ್ಧನರ ನಿಲಿಸಲೋರೋರ್ವರ್ಗೆ ।
ಪರಮ ಜಲಮಂ ಕನಕ ಘಟದೊಳೆಯ್ದಿಸಲು ಶಂ- ।
ಕರನ ಪೂಜೆಯನೆಸಗಿದಂ ರಾಯನೆನಲುಳಿದ ಪಡೆಯಸಿನ್ನಾರೆಣಿಸರು ॥

ಇದು ರಾಜನ ಕ್ಷಾತ್ರಶಕ್ತಿ.

ಇವನ ಮಂತ್ರಿಯು —

"ಸಲೆ ನಿರ್ಜರಾಧೀಶ ವೃದ್ಧಶ್ರವಂಗೆಯೊ- ।
ಪ್ಪಲು ಜೀವನಾಗಿ ಚಿತ್ರ ಶಿಖಂಡಿಜಂ ಮಂತ್ರಿ ।
ತಿಲಕಂ ಗಡಾ ಹಾಸ್ಯಮಲ್ತೆಯಂತಲ್ಲ ಮಿಸುನಿಯ ಕೆಲಸದೊಳಗೆ ರನ್ನಂ ॥
ಚಿಲುಪಾಲೊಳೆಸೆವ ತವರಾಜ ಪನಿಸೀರೊಳೊಡ ।
ಗಲಸಿರ್ದ ಶಿರಪಚ್ಚೆ ಶಿವತತ್ವದೊಳು ಕೂರ್ತು ।
ನೆಲಸಿದಾ ಪ್ರಣವಮಂತರಸಂಗೆ ಪತಿವೋಹಿಯೆನಿಪ ಮಂತ್ರೀಶನೆಸೆದಂ ॥

ರಾಜನಿಗೆ ತಕ್ಕ ಮಂತ್ರಿ; ಈತನದು ಹೆಸರಿಗೆ ಅನುರೂಪವಾದ ರಾಜಭಕ್ತಿ; ದೇವೇಂದ್ರನ ಮಂತ್ರಿ ಚಿತ್ರಶಿಖಂಡಿಜನನ್ನೂ ಸಹ ಮೀರುವ ಬುದ್ಧಿಶಕ್ತಿ.

ರಾಜಪುತ್ರನಾದ ಮಂತ್ರಲಕ್ಷ್ಕನು ಮರಣಶಾಸನಕ್ಕೆ ನಿಬದ್ಧನಾಗಿ ಅಪ್ಪಣೆಗಾಗಿ ತಾಯಿಯ ಬಳಿಗೆ ಬಂದು ನಮಸ್ಕರಿಸಿ ನಡೆದ ವೃತ್ತಾಂತವನ್ನು ಬೆಸಗೊಳ್ಳಲು

"ನುಡಿದ ಕುವರನ ತೆಗೆದು ತಕ್ಕೈಸಿ ಕೇಳೆನ್ನ ।
ಕಡವರಮೆ ಚಿಂತೆಯೆನಗೇಕೆ ಯೆನ್ನಾಣ್ಮನು-- ।
ಗ್ಗಡದ ಸತ್ಯವ ಕುರಿತು ಭಕ್ತಂಗೆ ನಿನ್ನ ತಲೆಗುಡುವೆಡೆಯೊಳೆನ ಚಿತ್ತಂ ॥

ಪಡೆದ ಕಂದನನಾಪ್ತರೊಡನೆ ತವರೂರ ತಾ
ಯೆಡೆಗಟ್ಟುವಂದವ್ವೆ ಪೆತ್ತಬ್ಬೆ ಪಾರ್ವತಿಯು ।
ತೊಡೆಯೇರಿ ಮುದ್ದುಗುಡು ಪೋಗೆಂದು ಬೀಳ್ಕೊಡುವ ಮಾತೆ
ಯೇಂ ಕೃತಕೃತ್ಯಳೋ ॥

ಹಾ! ಎಷ್ಟು ದೊಡ್ಡ ಭಾವ ಆ ತಾಯಿಯದು; ಎಂತಹ ಸಂಭಕ್ತಿ ಆ ಅಮೃತವತಿಯದು; ತನ್ನ ಪಾತಿವ್ರತ್ಯಧರ್ಮಾಗ್ನಿಯಲ್ಲಿ ಸ್ತ್ರೀಸಾಮಾನ್ಯವಾದ ತನ್ನ ಪುತ್ರಪ್ರೇಮವನ್ನೂ ಹವನಮಾಡಿದ ಆ ತಾಯಿಯೇ ಧನ್ಯಳು. 'ಪೆತ್ತಬ್ಬೆ ಪಾರ್ವತಿಯ ತೊಡೆಯೇರಿ ಮುದ್ದುಗುಡು' ಎಂದು ಹರುಷದಿಂದ ಹರಿಸಿದ ಅವಳ ಆ ಆಧ್ಯಾತ್ಮಿಕ ಶಕ್ತಿಗೆ ಶರಣು

ಸತ್ಯೇಂದ್ರನಿಂದ ಶಾಸಿತನಾದ ಸಂದಾಯಿಯು ಅಲಗಿನಿಂದ ಮಂತ್ರ ಲಕ್ಷಕನ ಕೊರಳಿಗೆ—

"ಹರಹರ! ಮಹಾದೇವ! ಹೊಡೆಯೆ ಕಂಧರ ಮುರಿದು ।
ಶಿರವಂಬರಕ್ಕೆ ಪುಟನೆಗೆಯೆ ಕುಂಡಲಿಯ ಸಿರಿ ।
ಯುರುಗನ ಫಣಾಮಣಿಪ್ರಭೆಯೊ ಹೃದ್ದೀಪ ಪ್ರಕಾಶವೋ ಎನ
ಲಟ್ಟಿಯಿಂ ॥
ಸ್ಫುರಿಸಿ ರಕ್ತದ ಧಾರೆ ಪೊಣ್ಮೆ ಭೃತ್ಯಂ ಪಾಮ ।
ಕರಮನೊಡ್ಡಲ್ಕಲ್ಲಿ ಮಂಡಿಸದೆ ಮಸ್ತಕಂ ।
ಭರದಿಂ ನಮಶ್ಶಿವಾಯೆಂದು ಪಂಚಾಕ್ಷರಿಯನಡಿಗಡಿಗೆ ಬಿಡದೊ
ದರಿತು ॥

ಮಂತ್ರಲಕ್ಷನ ಮಂತ್ರಶಕ್ತಿಯಿದು ಎಂತಹ ಅಪಾರವಾದುದು. ತುಂಡರಿಸಿದ ಆತನ ಚಂಡು ಭೃತ್ಯನ ಹಸ್ತದಲ್ಲಿ ಮಂಡಿಸಿ ಪಂಚಾಕ್ಷರಿಯ ಪಠಿಸಬೇಕಾದರೆ ಆತನು ಎಷ್ಟೊಂದು ಅಭ್ಯಾಸವನ್ನು ಮಾಡಿರಬೇಕು. ಆತನ ಅಸುವೇ ಮಂತ್ರಮಯವಾಗಿರಬೇಕಲ್ಲವೇ? ಅದಾಗಬೇಕಾದರೆ ಸಾಮಾನ್ಯವೇ? ಸಾಧಾರಣವಾಗಿ ಒಂದು ಶೊಂದರೆ ಬಂದೊದಗಿದಲ್ಲಿ ಅಯ್ಯೋ, ಹಾ! ಎಂದು ಆಕ್ರೋಶಗಳೇಳುವವೇ ಹೊರತು ಶಿವ, ಶಿವ ಎಂದು ಅನ್ನುವದಿಲ್ಲ. ಚಂಡ ಮುಂಡದಿಂದ ಹೊರಗಾದರೂ ಮಂತ್ರ ಪಠನವನ್ನು ಬಿಡದ ಆತನ ಆ ಶಕ್ತಿಯು ಅಪಾರವಾದುದಲ್ಲವೇ? ಇದೇನೆ ವೀರಶೈವ ಸಂಸ್ಕೃತಿಯ ಸಾರ ಸೊಬಗು. ಹೀಗೆಯೇ ಕವಿಯು ವ್ಯಕ್ತಿಗತ ಶಕ್ತಿಗಳನ್ನು ಸ್ವಲ್ಪ ಮಾತುಗಳಲ್ಲಿಯೇ ಸ್ಪಷ್ಟವಾಗಿ ಚಿತ್ರಿಸುತ್ತಾನೆ.

## ಸಂಸ್ಕೃತಿಯ ಸೊಗಸು

ಚೆಲ್ಲೆಗಂಗಳ ಮಿನುಗುವರಳೆಲೆಯ ಮಾಂಗಾಯ್ಗ।
ಉಲ್ಲಾಸದಿಂ ಮಿರುಗುವೆಳನಗೆಯ ಮೊಳೆವಲ್ಲ।
ಗಲ್ಲದೆಡೆಯೊಳಗೊಸರ್ವ ಲಾಲಾಜಲಾಮೃತದೊಳಬ್ಬೆಂಬ ಸುತನ
ತೊದಲ ॥

ಸೊಲ್ಲನಾಲಿಸಿ ನೋಡಿ ತೆಗೆದು ಮೂರ್ಧ್ನಿಘ್ರಾಣ।
ದಲ್ಲಿ ತಳ್ಕೈಸಿ ಬಾಯೊಳು ಬಾಯನಿಟ್ಟಪ್ಪ।
ರಲ್ಲಿ ಮುಂಡಾಡುವೆಂ ಪಾಡುವೆಂ ಮುದ್ದುಗಳ ಬೇಡುವೆನೆನುತ್ತ
ನಲಿದು ॥

ಸ್ತ್ರೀಸಹಜವಾದ ಪುತ್ರಪ್ರೇಮವನ್ನೂ ವಾತ್ಸಲ್ಯವನ್ನೂ ತವಕವನ್ನೂ ಬಲು ಚನ್ನಾಗಿ--ಸಹಜವಾಗಿ ಚಿತ್ರಿಸಿದ್ದಾನೆ. ಅಮೃತವತಿಯು ಮನೆಗೆ ಬಂದಿರುವ ಗುರುಗಳಿಂದ ಪುತ್ರನನ್ನು ಪಡೆಯಬೇಕು; ಮುದ್ದಿಟ್ಟು ಮುಂಡಾಡಬೇಕು; ಎಂದು ಮನದಲ್ಲಿಯೇ ನೆನಸಿ ತವಕಿಸುವಳು. ಆದರದನ್ನು ಹೇರರಿಗೆ ಹೇಳಲು--ಹೊರಗೆ ಹಾಕಲು ಅವಳಿಗೆ ಧೈರ್ಯಸಾಲದು; ಮರ್ಯಾದೆಯಾಗದು. ಕೊನೆಗೆ ಹೇಗೋ ಗುರುವಿನ ಸನ್ನಿಧಿಗೆ ಬಂದು ಶಿರಬಾಗಿ ಕರಮುಗಿದು ತನ್ನತನದ ಗೌರವಕ್ಕೆ ತಕ್ಕಂತೆ "ಜೀಯ ಚೋಳ ಕುಲಕಮಲ! ಚಾಗಿ ಕುವರನನಿತ್ತು ರಕ್ಷಿಸು" ಎಂದು ಬಿನ್ನಯಿಸಿಕೊಳ್ಳುತ್ತಾಳೆ. ಕವಿಯು ಇಲ್ಲಿ ಅವಳ ನಿಜವಾದ ಸಂಸ್ಕೃತಿಯನ್ನು ಎತ್ತಿ ಹಿಡಿದಿದ್ದಾನೆ. ಮಕ್ಕಳಾಗದಿದ್ದರೆ ಚಾಪಲ್ಯದಿಂದ ವಾತ್ಸಲ್ಯದಿಂದ ಹಲವು ದೇವರಿಗೆ ಹಲವು ಹರಿಕೆಗಳನ್ನು ಹೊರುವದನ್ನೂ ಪರಿತಪಿಸುವದನ್ನೂ ಸಾಮಾನ್ಯ ಸ್ತ್ರೀಯರು ಮಾಡುವದುಂಟು. ಆದರೆ ಮಲ್ಲಣಾರ್ಯನ ಅಮೃತವತಿಯು ಆ ಹರಿಕೆ ಆ ಸಂತಾಪಗಳಿಗೆ ಸಿಕ್ಕುಬಿದ್ದಿಲ್ಲ. ಗುರುಸನ್ನಿಧಾನದಲ್ಲಿ ಒಳ್ಳೇ ನಿಯತೇಂದ್ರಳಾಗಿ ಬಲುಜಾಣ್ಮೆಯಿಂದ ವರ್ತಿಸಿದ್ದಾಳೆ. ಇದುವೇ ನಿಜವಾದ ಸಂಸ್ಕೃತಿಯ ಸೊಗಸು. ಇದಿಲ್ಲದೆ ಸಾಂಸಾರಿಕ ಸಲಕರಣೆಯ ಎಳೆತ ಸೆಳೆತಗಳಿಗೆ ಬಿದ್ದು ಇಂದ್ರಿಯ ವೃತ್ತಿಗೆ ವಶವಾಗಿ ಜೀವನದ ಒಂದು ನಿರ್ದಿಷ್ಟವಾದ ಗೊತ್ತುಗುರಿಯಿಲ್ಲದೆ, ಆತ್ಮಗೌರವದ ಸ್ಮರಣೆಯಿಲ್ಲದೆ ತೊಳಲಿ ಬಳಲುವದು ನಿಜವಾದ ಮನುಷ್ಯತ್ವದ ಲಕ್ಷಣವಲ್ಲ. ಅದು ಪಶು ಸಾಮಾನ್ಯವಾದ ವೃತ್ತಿ. ಸಾಂಸಾರಿಕ

ಏಳು ಬೀಳುಗಳಿಗೆ ಹಿಗ್ಗಿ ಕುಗ್ಗದೆ ಮನೋಬಲದಿಂದ ಅಭೀಷ್ಟಗಳನ್ನು ಕೈಗೂಡಿಸಿಕೊಂಡು ಒಂದು ನಿರ್ದಿಷ್ಟವಾದ ಗುರಿಯನ್ನಿಟ್ಟುಕೊಂಡು ಸಾಗುವದೇ ಮಾನವನ ಸಂಸ್ಕೃತಿ. ಈ ಸಂಸ್ಕೃತಿಯುಳ್ಳವಳು ಈ ಅಮೃತ ವತಿ. ಕುಶಲನಾದ ಕವಿಯಾದರೂ ಉಳಿದ ಕವಿಗಳಂತೆ ಅವಳನ್ನು ಹೆಚ್ಚಿನ ಹುಚ್ಚು ವ್ಯಾಮೋಹಕ್ಕೆ ಹಚ್ಚಿ ಇಲ್ಲದ ಸಲ್ಲದ ಆಲಾಪ ವಿಲಾಪ ಗಳಿಗೆ ಗುರಿಮಾಡದೆ ಅವಳ ಮನಸ್ಸಿನ ಒಳ್ಳೇ ಬೆಳವಣಿಗೆಯ ಸುಸಂ ಸ್ಕೃತಿಯನ್ನೇ ತೋರ್ಪಡಿಸಿದ್ದಾನೆ; ಬೀಳು ಬಾಳಿನಿಂದ ಬೇರ್ಪಡಿಸಿದ್ದಾನೆ.

## ಭಾವದ ಬೆಳಸು.

ಅಮೃತವತಿಯ ಹೊಟ್ಟೆಯಲ್ಲಿ ಮಂತ್ರಲಕ್ಷಕನು ಹುಟ್ಟಿದ ಪರಿ—

"ಮಿಗೆ ಶಾರದಾಭ್ರದಿಂ ಚಂದ್ರಮಂ ರೋಹಣದ ।
ನಗದಿಂದ ಚೆಲ್ವ ರನ್ನಂ ಕಾಮಧೇನುವಿಂ ।
ಸೊಗಯಿಸುವ ಪಾಲ್ಮಿರುಪ ತಾಮ್ರಪರ್ಣಿಯಿ ಸಿಂಪಿನಿಂ ಮುತ್ತು ಪೂರ್ವಾದ್ರಿಯಿಂ ॥
ಝಗಝಗಿಪ ಬಾಲಾರ್ಕನುದಯಿಸಿದನೆಂದೆಂಬ ।
ಬಗೆಬೇಡ ಸತ್ಪ್ರಣವದಿಂ ಮೂಲಮಂತ್ರ ತಾ ।
ನೊಗೆದಂದದಿಂದುದಯವಾದನಾ ವನಿತೆಯುದರದಿ ನಮಳ ಸುಕು ಮಾರನು ॥

ಅಮೃವತಿಯಲ್ಲಿ ಹುಟ್ಟಿದ ಅಣುಗನು ಅಮರನಾಗುವದರಿಂದ ಅಳಿವ ಚಂದ್ರ-ಸೂರ್ಯರ ರನ್ನ-ಚಿನ್ನಗಳ ಜನನವು ಆತನಿಗೆ ಎಷ್ಟುಮಾತ್ರಕ್ಕೂ ಸರಿಯಾಗಲಾರವು. ಸತ್ಪ್ರಣವದಿಂದುದಯಿಸುವ ಮೂಲಮಂತ್ರವೇ ಆತನಿಗೆ ಸಲುವ ಉಪಮಾನ, ಅದರಿಂದಲೇ ಮಂತ್ರಲಕ್ಷನೆಂಬ ಆತನ ಹೆಸರೂ ಸಾರ್ಥಕ ಎಂದು ಒಳ್ಳೇ ಭಾವಭರಿತವಾಗಿ ಚಿತ್ರಿಸಿದ್ದಾನೆ.

(ಮುಂದುವರಿಯುವದು.)

---

# ಜೈನ ಧರ್ಮ

( ಲೇಖಕರು — ವೀರಪ್ಪ ಯುಗಟಿ ಬಿ. ಎ ಎಲ್. ಎಲ್ ಬಿ. ಹಾವೇರಿ. )

---

[ ಹಿಂದಿನ ಸಂಚಿಕೆಯಿಂದ ಮುಂದರಿದುದು. ]

ನಯುಗಳು ಅನೇಕ ವಿಧವಾಗಿ ವಿಭಾಗಿಸಲ್ಪಟ್ಟಿವೆ. ಒಂದು ಪದ್ಧತಿಯ ಪ್ರಕಾರ ನಯುಗಳು ಏಳು ವಿಧವಾಗಿವೆ. ಅದರಲ್ಲಿ ನಾಲ್ಕು ವಸ್ತುಗಳಿಗೆ ಅಥವಾ ಅರ್ಥಕ್ಕೆ ಸಂಬಂಧಿಸಿವೆ. ಮೂರು ಶಬ್ದಗಳಿಗೆ ಸಂಬಂಧಿಸಿವೆ. ಇವೇ ಪೂರ್ಣವಾದವುಗಳೆಂದು ಗ್ರಹಿಸಿದಾಗ ಆಭಾಸವನ್ನುಂಟುಮಾಡುವವು. ಅರ್ಥನಯುಗಳು ಯಾವವೆಂದರೆ (೧) ನೈಗಮನಯಃ-- ಒಬ್ಬನು ಬೆಂಕಿ. ನೀರು, ಪಾತ್ರೆ ಮುಂತಾದವುಗಳನ್ನಿಟ್ಟುಕೊಂಡು ಕೆಲಸ ಮಾಡುತ್ತಿದ್ದರೆ ಅವನು ಅಡಿಗೆ ಮಾಡುತ್ತಾನೆಂದು ತಿಳಿಯುತ್ತೇವೆ. ಇದು ಕಾರ್ಯದ ಸಾಮಾನ್ಯ ಉದ್ದೇಶವನ್ನು ಹೇಳುವದು ಇದರಲ್ಲಿ ಸಾಮಾನ್ಯ ಮತ್ತು ವಿಶೇಷ ಗುಣಗಳು ಅಡಕವಾಗಿವೆಯೆಂದು ಸಿದ್ಧಸೇನನ ಭಿನ್ನಾಭಿಪ್ರಾಯವೂ ಉಂಟು. (೧) ಸಂಗ್ರಹನಯಃ— ಇದು ಸಾಮಾನ್ಯ ಗುಣಗಳಿಗೆ ಪ್ರಾಧಾನ್ಯ ಕೊಡುತ್ತದೆ. (೩) ವ್ಯವಹಾರನಯುವು ಅನುಭವವನ್ನು ಆಶ್ರಯಿಸಿದೆ ಇದು ವಸ್ತುಗಳು ಸಂಪೂರ್ಣವಾಗಿ ಗೊತ್ತಾದರೂ ವಸ್ತುಗಳ ವಿಶೇಷ ಗುಣಗಳು ನಮ್ಮ ಚಿತವನ್ನು ಆಕರ್ಷಿಸುವವೆಂದು ಹೇಳುತ್ತದೆ (೪) ರಿಜುಸೂತ್ರನಯುವು ವಸ್ತುವು ಕ್ಷಣಿಕವಾದದ್ದೆಂದು ಹೇಳುತ್ತದೆ. (೫) ಶಬ್ದನಯುವು ಹೆಸರಿನಿಂದ ವಸ್ತುವಿನ ಜ್ಞಾನವಾಗುತ್ತದೆಂದು ಹೇಳುತ್ತದೆ. 'ಮೇಜು' ಎಂದಾಗ ಮೇಜಿನ ಆಕೃತಿಯು ನೆನಪಿಗೆ ಬರುವದು. (೬) ಸಮಾಭಿರೂಢ ನಯುವು ಮೂಲ ಧಾತುಗಳ ಆಧಾರದ ಮೇಲೆ ಶಬ್ದಗಳನ್ನು ವಿಂಗಡಿಸುತ್ತದೆ. (೭) ಏವಂಭೂತನಯಃ--ವಸ್ತುವಿನ ಅನೇಕ ಸ್ವರೂಪಗಳಲ್ಲಿ ಅದರ ಮೂಲ ಧಾತುವಿನಿಂದ ಹೊರಟ ಒಂದೇ ಅರ್ಥ ಅಥವಾ ಸ್ವರೂಪವನ್ನು ಗ್ರಹಿಸಬೇಕು. ನಯುಗಳು ದ್ರವ್ಯಾರ್ಥಿಕ ಅಂದರೆ ವಸ್ತುವಿನ ಶಾಶ್ವತ ಗುಣಗಳನ್ನು ಗ್ರಹಿಸುವ ಮತ್ತು ಪರ್ಯಾಯಾರ್ಥಿಕ ಅಂದರೆ ವಸ್ತುವಿನ ನಶ್ವರವಾದ ಗುಣಗಳನ್ನು ಗ್ರಹಿಸುವ ನಯುಗಳೆಂದು ಮತ್ತೆ ಎರಡು ವಿಧವಾಗಿ ಭೇದ ಮಾಡಲ್ಪಟ್ಟಿವೆ.

ನಯ ನಿಶ್ಚಯುವೆಂದು ಮತ್ತೊಂದು ಭೇದವಿದೆ. ಅಂದರೆ ನಿಜವಾದ ಮತ್ತು ಪೂರ್ಣವಾದ ಗ್ರಹಿಕೆಯು. ಇದು ಪುನಃ ಶುದ್ಧ ನಿಶ್ಚಯ ಮತ್ತು ಅಶುದ್ಧ ನಿಶ್ಚಯವೆಂದು ಎರಡು ವಿಧವಾಗಿದೆ. ಶುದ್ಧ ನಿಶ್ಚಯವು ಸತ್ಯವು ಕೇವಲ ಪರಿಪೂರ್ಣವಾದದ್ದೆಂತಲೂ ಅಶುದ್ಧ ನಿಶ್ಚಯವು ಸತ್ಯವು ಪರಿಪೂರ್ಣವಿಲ್ಲದ್ದೆಂತಲೂ ಹೇಳುವವು.

ಇವೆಲ್ಲ ನಯುಗಳ ಉಪಯೋಗವು ಸ್ಯಾದ್ವಾದದಿಂದ ಮಾಡಲ್ಪಟ್ಟದೆ. ಸ್ಯಾದ್ವಾದವು ಎಲ್ಲ ಜ್ಞಾನವು ಸಂಭವನೀಯುವಾದದ್ದೆಂದು ಹೇಳುತ್ತದೆ. ಯಾವದೊಂದು ವಸ್ತುವಿನ ವಿಷಯುದಲ್ಲಿ ಏನೊಂದು ನಿಶ್ಚಿತವಾಗಿ ಹೇಳ ಬರುವಂತಿಲ್ಲ. ಯಾವದೊಂದು ವಸ್ತುವಿನ ಅಥವಾ ಅದರ ಗುಣಗಳ ವಿಷಯುದಲ್ಲಿ ಒಂದು ದೃಷ್ಟಿಯಿಂದ ಏಳು ವಿಧವಾಗಿ ಹೇಳಲು ಬರುವ ದೆಂದು ಸ್ಯಾದ್ವಾದ ಅಥವಾ ಸಪ್ತಭಂಗಿಯು ಹೇಳುತ್ತದೆ. ಒಂದು ವಸ್ತುವು ಅಥವಾ ಅದರ ಗುಣವು ಇರುತ್ತದೆ. (೧) ಸ್ಯಾದಸ್ತಿಃ—ಪ್ರಕೃತಿ, ದೇಶ, ಕಾಲ, ಸ್ವಭಾವದ ಮೂಲಕ ಒಂದು ವಸ್ತುವಿರುತ್ತದೆ. ಮಡಿಕೆಯು ಮಣ್ಣಿನದು, ಸಣ್ಣದು, ದುಂಡಾದದ್ದು, ಈಗ ನನ್ನ ಕೋಣೆಯಲ್ಲಿದೆ. (೨) ಸ್ಯಾದ್ನಾಸ್ತಿಃ– ಇರುವದಿಲ್ಲ. ಮತ್ತೊಂದು ವಸ್ತುವಿನ ಪ್ರಕೃತಿ, ದೇಶ, ಕಾಲ, ಸ್ವಭಾವದ ಮೂಲಕ ಒಂದು ವಸ್ತುವಿರುವದಿಲ್ಲ. ಧಾತುವಿನಿಂದ ಮಾಡಿದ ಮಡಿಕೆಯು ಬೇರೆ ದೇಶ, ಕಾಲಗಳಲ್ಲಿರುವದಿಲ್ಲ. (೩) ಸ್ಯಾದಸ್ತಿ ನಾಸ್ತಿಃ—ಇರುತ್ತದೆ ಮತ್ತು ಇರುವದಿಲ್ಲ. ಒಂದು ವಸ್ತುವಿನ ಮತ್ತು ಮತ್ತೊಂದು ವಸ್ತುವಿನ ಸಂಬಂಧವಾಗಿ ಒಂದು ವಸ್ತು ಇರುತ್ತದೆ. ಮತ್ತು ಇರುವದಿಲ್ಲವೆಂದು ಹೇಳಬಹುದು. ಒಂದು ಅರ್ಥದಲ್ಲಿ ಮಡಿಕೆಯು ಇರುತ್ತದೆ ಮತ್ತೊಂದು ಅರ್ಥದಲ್ಲಿ ಇರುವದಿಲ್ಲ. (೪) ಸ್ಯಾದವ್ಯಕ್ತಃ-- ಹೇಳಲು ಬರಲಾರದು. ಒಂದು ಮಡಿಕೆಯಲ್ಲಿ ಅದರ ಗುಣಗಳ ಇರುವಿಕೆಯೂ ಮತ್ತೊಂದರ ಗುಣಗಳ ಅಭಾವವೂ ಇದ್ದಾಗ್ಯೂ ನಾವು ಅವುಗಳನ್ನು ಹೇಳಲು ಶಕ್ಯವಿಲ್ಲ. (೫) ಸ್ಯಾದಸ್ತಿಅವ್ಯಕ್ತಃ--ವಸ್ತುವು ಇದ್ದಾಗ್ಯೂ ಅದು ಅವರ್ಣನೀಯವು. ಒಂದು ವಸ್ತುವಿನ ದೃಷ್ಟಿಯಿಂದ ಮತ್ತು ಅದೇ ಕಾಲಕ್ಕೆ ಅದರ ಮತ್ತು ಮತ್ತೊಂದು ಅವ್ಯಕ್ತ ವಸ್ತುವಿನ ದೃಷ್ಟಿಯಿಂದ ಒಂದು ವಸ್ತುವು ಇದ್ದಾಗ್ಯೂ ಅದು ಅವರ್ಣನೀಯವಾಗಿದೆ. (೬) ಸ್ಯಾದ್ನಾಸ್ತಿಅವ್ಯಕ್ತಃ—ಇರುವದಿಲ್ಲ ಮತ್ತು ಅವರ್ಣನೀಯವು. ಅವ್ಯಕ್ತ ವಸ್ತುವಿನ ದೃಷ್ಟಿಯಿಂದ ಮತ್ತು ಅದೇಕಾಲಕ್ಕೆ ಒಂದು ವಸ್ತುವಿನ ಮತ್ತು

ಅವ್ಯಕ್ತ ವಸ್ತುವಿನ ಸಮೂಹಿಕ ದೃಷ್ಟಿಯಿಂದ ವಸ್ತುವು ಇರುವದಿಲ್ಲ. ಮತ್ತು ಅವರ್ಣನೀಯವಾಗಿದೆ. (೭) ಸ್ಯಾದಸ್ತಿನಾಸ್ತಿಅವಕ್ತಃ- ಇರುತ್ತದೆ, ಇರುವದಿಲ್ಲ ಮತ್ತು ಅವರ್ಣನೀಯವು. ಒಂದು ವಸ್ತುವಿನ ಮತ್ತು ಅವ್ಯಕ್ತ ವಸ್ತುವಿನ ದೃಷ್ಟಿಯಿಂದ ಮತ್ತು ಅದೇ ಕಾಲಕ್ಕೆ ವಸ್ತುವಿನ ಮತ್ತು ಅವ್ಯಕ್ತ ವಸ್ತುವಿನ ಸಮೂಹಿಕ ದೃಷ್ಟಿಯಿಂದ ಒಂದು ವಸ್ತುವಿರುತ್ತದೆ, ಇರುವದಿಲ್ಲ ಮತ್ತು ಅವರ್ಣನೀಯವಾಗಿದೆ. ಇದರಲ್ಲಿ ನಾವು ಒಂದು ವಸ್ತುವಿನಲ್ಲಿ ಯಾವ ಗುಣಗಳುಂಟೆಂಬದನ್ನೂ, ಯಾವ ಗುಣಗಳಿಲ್ಲೆಂಬದನ್ನೂ ಮತ್ತು ಅದು ಅವರ್ಣನೀಯವಾದದ್ದೆಂದೂ ಹೇಳುತ್ತೇವೆ. ಊಹಾವಸ್ತುವಾದ "ಆಕಾಶಪುಷ್ಪ"ವೆಂಬಲ್ಲಿಯೂ ಕೆಲವೊಂದು ಸತ್ಯವಿದೆ. ಏನಂದರೆ ಆಕಾಶವು ನಿಜವಾದದ್ದು, ಪುಷ್ಪವು ನಿಜವಾದದ್ದು, ಆದರೆ ಅವೆರಡರ ಕೂಡುವಿಕೆಯಿಂದಾದ ಶಬ್ದವು ಅಸತ್ಯವಾದದ್ದು ಮೂಲ ವಸ್ತುವು ವಿಚಾರಕ್ಕೆ ನಿಲುಕದ್ದೂ ಅವರ್ಣನೀಯವೂ ಆಗಿದೆ. ವಿಚಾರಕ್ಕೆ ಆಸ್ಪದವಾದ ಎಲ್ಲ ವಸ್ತುಗಳು ಒಂದು ಅರ್ಥದಲ್ಲಿ ಇರುತ್ತವೆ. ಮತ್ತೊಂದು ಅರ್ಥದಲ್ಲಿ ಇರುವದಿಲ್ಲ.

ಪರಸ್ಪರ ವಿರೋಧವಾದ ಗುಣಗಳು ಒಂದೇ ವಸ್ತುವಿನಲ್ಲಿರುವದು ಅಸಂಭವವೆಂದು ಸಪ್ತಭಂಗಿ ತತ್ವವನ್ನು ಶಂಕರ-ರಾಮಾನುಜರು ಖಂಡಿಸಿದ್ದಾರೆ ಅಸ್ತಿತ್ವ ನಾಸ್ತಿತ್ವಗಳು ಹಗಲು ರಾತ್ರಿಗಳಂತೆ ಒಂದೇಕಾಲದಲ್ಲಿ ಒಂದೇ ವಸ್ತುವಿನಲ್ಲಿರಲಾರವೆಂದು ರಾಮಾನುಜನು ಹೇಳುತ್ತಾನೆ. ಜೈನರು ಒಂದು ವಸ್ತುವಿನಲ್ಲಿ ಒಂದೇ ಕಾಲದಲ್ಲಿ ಮತ್ತು ಒಂದೇ ಅರ್ಥದಲ್ಲಿ ಪರಸ್ಪರವಿರೋಧವಾದ ಗುಣಗಳು ಇರುವವೆಂದು ಹೇಳವೆ ಪ್ರತಿಯೊಂದು ವಸ್ತುವು ಮಿಶ್ರಗುಣಗಳಿಂವ ಕೂಡಿದ್ದು ವಿವಿಧತೆಯಲ್ಲಿ ಐಕ್ಯವನ್ನು ವ್ಯಕ್ತಪಡಿಸುತ್ತದೆಂದು ಹೇಳುತ್ತಾರೆ. ನಿಜವಸ್ತುವು ತನ್ನಲ್ಲಿ ಭೇದಗಳನ್ನು ಸಮನ್ವಯ ಮಾಡಿಕೊಳ್ಳುತ್ತದೆ. ಸಪ್ತಭಂಗಿತತ್ವವು ಅನೇಕಾಂತವಾದದ ತಾರ್ಕಿಕ ಪರಿಣಾಮವಾಗಿದೆ. ನಿಜವಸ್ತುವು ಅನೇಕ ಸ್ವರೂಪವಾಗಿದ್ದು ಒಂದೇ ವಸ್ತುವು ಎಲ್ಲ ದೇಶಕಾಲಗಳಲ್ಲಿರುವದಾಗಿ ಹೇಳಲು ಬರುವದಿಲ್ಲ.

ಜೈನರ ತರ್ಕಪದ್ಧತಿ--ವಸ್ತುಗಳು ಸಮಷ್ಟಿ ಅಥವಾ ಜಾತಿಸ್ವರೂಪದಲ್ಲಿ ಒಂದೇ ಆಗಿವೆಯೆಂತಲೂ ವ್ಯಕ್ತಿರೂಪದಿಂದ ಅನೇಕವಾಗಿ

ವೆಯೆಂತಲೂ ಜೈನರು ಒಪ್ಪುತ್ತಾರೆ. ಅನೇಕ ನಿಜವಾದ ವಸ್ತುಗಳುಂಟೆಂಬದು ಸಂಬಂಧಾತ್ಮಕವಾದ ಸತ್ಯವಾಗಿದೆ. ಆತ್ಮವು ಮತ್ತು ವಸ್ತುವು ವ್ಯಕ್ತಿಯ ಮನಸ್ಸು ಮತ್ತು ಸತ್ಯವಸ್ತುವು ಬೇರೆಬೇರೆಯಾಗಿದ್ದರೆ ಜ್ಞಾನವುಂಟಾಗುವದು ಶಕ್ಯವೇ ಇಲ್ಲ. ಆತ್ಮ ಮತ್ತು ವಸ್ತುಗಳು ಅನೇಕತ್ವದಲ್ಲಿ ಏಕತ್ವವಾಗಿಯೂ, ಏಕತ್ವದಲ್ಲಿ ಅನೇಕತ್ವವಾಗಿಯೂ ಇವೆ. ನಾವು ಪೂರ್ಣಜ್ಞಾನವನ್ನು ಸಂಪಾದಿಸಿದಾಗ ಆತ್ಮ ಮತ್ತು ವಸ್ತುಗಳ ಭೇದವು ಇಲ್ಲದಂತಾಗುವದು. ವೀರಶೈವದ ಷಟ್‌ಸ್ಥಲಗಳಲ್ಲಿ ಕಡೆಯದ್ದಾದ ಐಕ್ಯಸ್ಥಲದಲ್ಲಿ ಈ ಅಭೇದವು ಅಡಕವಾಗಿದೆ. ಜೈನರ ತರ್ಕದ ಪ್ರಕಾರ ವಿಚಾರವು ಸಂಬಂಧಾತ್ಮಕ ಸತ್ಯದಲ್ಲಿ ಮಗ್ನವಾಗಿದೆಯೇ ಹೊರತು ನಿಜವಸ್ತುವಿನಲ್ಲಿ ಮಗ್ನವಾಗಿಲ್ಲ. ನಿಜವಸ್ತುವು ವಿಚಾರಕ್ಕೆ ಅಗಮ್ಯವಾಗಿರುವದಾದರೆ ಅದನ್ನು ತಿಳಿಯುವಂತಹ ಮತ್ತಾವ ಶಕ್ತಿಯುಂಟು? ಕೇವಲ ಅಥವಾ ಸಂಪೂರ್ಣಜ್ಞಾನವು ಅದನ್ನು ತಿಳಿಯಬಲ್ಲದು. ಆತ್ಮದ ಪರೆಯು ಬಿಚ್ಚಿಹೋದಾಗ ಅಂದರೆ ಸಂಪೂರ್ಣ ಜ್ಞಾನೋದಯವಾದಾಗ ಆತ್ಮ ಮತ್ತು ವಸ್ತುಗಳ ನಡುವೆ ಭೇದವಿಲ್ಲದಾಗುವದು. ಆದ್ದರಿಂದ ಜೈನರು ತಾರ್ಕಿಕರೀತಿಯಿಂದ ಅನೇಕತ್ವವಾದವನ್ನು ಪುರಸ್ಕರಿಸಲಾರದು.

ಜೈನರ ಮಾನಸಶಾಸ್ತ್ರ—ಇವರು ಮನಸ್ಸು ಶರೀರಗಳಲ್ಲಿ ಭೇದವನ್ನು ಕಲ್ಪಿಸುತ್ತಾರೆ. ಐದು ಇಂದ್ರಿಯಗಳಲ್ಲಿ ದ್ರವ್ಯೇಂದ್ರಿಯ, ಭಾವೇಂದ್ರಿಯಗಳೆಂಬ ಭೇದವನ್ನು ಮಾಡಿದ್ದಾರೆ. ಕಣ್ಣು ಮತ್ತು ಅದರ ವಿಷಯಗಳಿಗೆ ಸಾಮಾನ್ಯವಾದ ವಸ್ತುವು ಬಣ್ಣವಾಗಿದೆ. ಇಂದ್ರಿಯಗಳು ಜೀವದ ಬಹಿರಂಗದ ಸಾಧನೆಗಳಾಗಿರುವದರಿಂದ, ಎಲ್ಲ ವಸ್ತುಗಳಿಂದ ಸುಖವನ್ನುಂಟುಮಾಡುವ ಸಲಕರಣಗಳು ಆತ್ಮದಲ್ಲಿಯೇ ಇವೆ. ಸ್ಪರ್ಶೇಂದ್ರಿಯವು ಶೀತೋಷ್ಣ, ಒರಟು, ಮೃದು, ಭಾರ, ಹಗುರು ಮುಂತಾದ್ದನ್ನು ಗ್ರಹಿಸುತ್ತದೆ. ಬಣ್ಣವು ಕಪ್ಪು, ನೀಲ, ಹಳದಿ, ಬಿಳಿದು, ಕೆಂಪು ಎಂಬ ಐದು ಭೇದಗಳನ್ನು ಕಲ್ಪಿಸುವದು. ಶಬ್ದವು ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಧ ಎಂದು ಏಳು ವಿಧವು. ವಸ್ತುಗಳು ಇಂದ್ರಿಯಗಳಿಗೆ ತಗಲಿದಾಗ ಇಂದ್ರಿಯಜ್ಞಾನವಾಗುವದು. ಮನುಷ್ಯನು ಜ್ಞಾನಿಯೂ, ಭೋಕ್ತೃವೂ, ಕರ್ತೃವೂ ಆಗಿದ್ದಾನೆ. ಜೀವ ಮತ್ತು ಪುದ್ಗಲಗಳ ಸಂಬಂಧವೆಂದರೆ ಆತ್ಮ ಮತ್ತು

ವಸ್ತುಗಳ ಸಂಬಂಧವೆಂಬವು. ಪ್ರತಿಯೊಂದು ಜೀವವು ದೇಹಾತ್ಮಗಳ ಮಿಶ್ರಣ ಅಥವಾ ರಚನೆಯಾಗಿದೆ. ಆತ್ಮವು ಚೇತನೆಯುಳ್ಳದ್ದು, ದೇಹವು ಚೇತನೆಯಿಲ್ಲದ್ದು. ಜೀವದೇಹಗಳಲ್ಲಿ ಪರಸ್ಪರ ಸಂಬಂಧವಿಂದೆ ಸ್ವತಂತ್ರವಾಗಿವೆಯೆಂದು ಜೈನಧರ್ಮವು ಗ್ರಹಿಸುತ್ತದೆ. ದೇಹವು ಕರ್ಮಮಾರ್ಗದಿಂದ ಸ್ವತಂತ್ರವಾಗಿ ಬದಲಾವಣೆಹೊಂದುವಂತೆ ಜೀವವು ಸಹ ಸ್ವತಂತ್ರ ವಿಚಾರದಿಂದ ಬದಲಾವಣೆ ಹೊಂದುತ್ತದೆ. ನಾವು ಕರ್ಮಫಲವನ್ನೇಕೆ ಅನುಭವಿಸಬೇಕೆಂದು ಕೇಳಿದಾಗ ಜೈನರು ಜಗತ್ತಿನಲ್ಲಿ ಕರ್ಮಶರೀರಕ್ಕೂ ಜೀವಕ್ಕೂ ಆಕಸ್ಮಿಕವಾದ ಕೂಡುವಿಕೆಯುಂಟಾಗುವದರಂದ ಕರ್ಮಫಲಭೋಗವುಂಟಾಗುವದೆಂದು ಹೇಳುತ್ತಾರೆ. ಪಂಚಸ್ತಿಕಾಯಸಮಯಸಾರದ ಟೀಕಾಕಾರನು ಕಾಜಿನ ಸೀಸೆಯಲ್ಲಿ ಕಪ್ಪು ಮಸಿಯನ್ನು ಹಾಕಿದಾಗ ಸೀಸೆಯು ಕಪ್ಪಾಗಿ ಕಾಣುವಂತೆ ದೇಹಸಂಬಂಧವಾದಾಗ ಜೀವವು ಫಲಭೋಗವನ್ನನುಭವಿಸಿದಂತೆ ಕಾಣುವದೆಂದು ಹೇಳುತ್ತಾರೆ.

ಆತ್ಮವು ಶರೀರಕ್ಕಿಂತ ಸಣ್ಣದಿರಲಾರದು. ಹಾಗಿದ್ದರೆ ಅದು ಶರೀರದ ಬಾಧೆಗಳನ್ನು ತಿಳಿಯಲಾರದು. ಅದು ಗರ್ಭದಲ್ಲಿ ಉದಯವಾದಾಗ ಸಣ್ಣ ಆಕೃತಿಯುದಿದ್ದು ಕ್ರಮೇಣ ಶರೀರ ಬೆಳವಣಿಗೆಯ ಸಂಗಡ ಬೆಳೆಯುತ್ತ ಹೋಗುವದು. ಶರೀರದ ಅವಸಾನಕಾಲಕ್ಕೆ ಅದು ಬೀಜರೂಪವನ್ನು ತಾಳಿ ಮುಂದಿನ ಜನ್ಮದ ಉತ್ಪತ್ತಿಗೆ ಕಾರಣವಾಗುದು. ಅದರ ಸ್ವರೂಪವು ಉಳಿದ ಸೃಷ್ಟಿಯ ವಸ್ತುಗಳಂತಿರದೆ ಸಹಜವಾದದ್ದೂ ಅವಿಭಾಜ್ಯವಾದದ್ದೂ ಇದೆ. ಮಾಣಿಕವು ಹಾಲಿನ ಬಟ್ಟಲಿನಲ್ಲಿರುವಾಗ ಹಾಲಿನ ಬಣ್ಣವನ್ನು ಹೇಗೆ ಕೆಂಪು ಮಾಡುವದೋ ಹಾಗೆ ಜೀವವು ಶರೀರದಲ್ಲಿರುವಾಗ ತನ್ನ ಪ್ರಕಾಶವನ್ನು ಅಥವಾ ಬುದ್ಧಿಯನ್ನು ಶರೀರಕ್ಕೆಲ್ಲ ಪಸರಿಸುವದು. ಆತ್ಮಗಳು ಅನೇಕವಾಗಿಯೂ ಮಧ್ಯಮ ಆಕೃತಿಯುಳ್ಳವೂ ಇದ್ದು ಜಗತ್ತಿನಲ್ಲಿ ಅನೇಕ ಸ್ಥಳಾಂಶಗಳನ್ನು ಆಕ್ರಮಿಸಿವೆ. ಆತ್ಮವು ಶರೀರವಷ್ಟೇ ಆಕೃತಿಯುಳ್ಳದ್ದೆಂಬದನ್ನು ಶಂಕರಾಚಾರ್ಯನು ಖಂಡಿಸಿರುವನು. ಆತ್ಮವು ಶರೀರದಲ್ಲಿ ಸಂಕುಚಿತವಾಗಿರುವದಾದರೆ ಆತ್ಮವು ಶರೀರದಹಾಗೆಯೇ ಅಶಾಶ್ವತವಾಗಿರಬೇಕಾಗುವದಲ್ಲದೆ ಅದಕ್ಕೆ ಕೊನೆಯ ಬಿಡುಗಡೆ ಅಥವಾ ಮೋಕ್ಷವೇ ಇಲ್ಲದಾಗುವದು.

ಜೈನತತ್ವ— ಮನುಷ್ಯನ ಸ್ವಾತಂತ್ರ್ಯದಲ್ಲಿ ನೀತಿಯು ಮುಖ್ಯವಾ ದದ್ದು. ದೇವರಿಂದ ಜಗತ್ತು ಸೃಷ್ಟಿಯಾಯಿತು ಅಥವಾ ಪ್ರಕೃತಿಯಿಂದ ಬೆಳೆಯಿತೆಂಬ ಸಿದ್ಧಾಂತಗಳು ದುಃಖದ ಉತ್ಪತ್ತಿ ಅಥವಾ ದುಃಖದ ನಿವೃತ್ತಿಗಳ ಕಾರಣಗಳನ್ನು ಹೇಳಲಾರವು. ಕ್ರಿಯಾರಹಿತವಾದ ಆತ್ಮದ ತಳಹದಿಯ ಮೂಲಕ ನೈತಿಕ ಬೆಲೆಯೇ ಇಲ್ಲದಾಗುವದು. ಜಗತ್ತಿನಲ್ಲಿ ಜರುಗುವ ಕಾರ್ಯಗಳು ಪ್ರಕೃತಿಯ ಯಾಂತ್ರಿಕ ಸಂಘಟನೆ ಮತ್ತು ವಿಘಟನೆಗಳ ಪರಿಣಾಮಗಳೆಂದು ತಿಳಿಯುತ್ತದಾದರೆ ಆತ್ಮದ ಸ್ವಾತಂತ್ರ್ಯವನ್ನೇ ಅಲ್ಲಗಳೆದು ನೈತಿಕ ಹೊಣೆಯನ್ನು ಇಲ್ಲವಹಾಗೆ ಮಾಡಿದಂತಾಗುವದು. ವೀರಶೈವತತ್ವವು ಆತ್ಮದ ಕ್ರಿಯಾ ಸ್ವಾತಂತ್ರ್ಯವನ್ನು ಪ್ರತಿಪಾದಿಸಿ ಜ್ಞಾನ, ಕ್ರಿಯಾ, ಭಕ್ತಿಗಳ ಸಮನ್ವಯದಿಂದ ಮುಂದೆ ಸಾಗಿ ಮುಕ್ತಿಗೋಸುಗ ಮೂಲಪುರುಷನಾದ ಪರಮಾತ್ಮನನ್ನು ಹೆಗ್ಗುರಿಯಾಗಿಟ್ಟುಕೊಳ್ಳುವದು. ದೇವರು ಜಗತ್ತನ್ನು ಸೃಷ್ಟಿಸಿದರೂ ಆತ್ಮಗಳಿಗೆ ಕ್ರಿಯಾಸ್ವಾತಂತ್ರ್ಯವನ್ನು ಕೊಟ್ಟಿರುವದರಿಂದ ಆತ್ಮಗಳು ತಮ್ಮ ಕ್ರಿಯೆಗಳಿಂದ ಸುಖದುಃಖಗಳನ್ನು ಕಲ್ಪಿಸಿಕೊಳ್ಳುವವು. ಆತ್ಮಗಳು ಶ್ರೇಯಸ್ಸನ್ನು ಹೊಂದಬೇಕಾದರೆ ನೀತಿಮಾರ್ಗವನ್ನು ಹಿಡಿಯಬೇಕಾಗುವದು. ಹೀಗೆ ನೀತಿಮಾರ್ಗವನ್ನು ಲಭಿಸಿಕೊಳ್ಳುವದಾದರೆ ಆತ್ಮಗಳು ತಮ್ಮ ಧ್ಯೇಯಪುರುಷನಾದ ಪರಮಾತ್ಮನ ಕರುಣೆಯನ್ನು ಹೊಂದಬೇಕಾಗುವದು. ಇದಕ್ಕಾಗಿಯೇ ವೀರಶೈವ ಶರಣರು ನೈತಿಕ ಆಚರಣೆಯ ಮೇಲೆ ಮಹತ್ವವನ್ನು ಕೊಟ್ಟಿರುವರು. ಜಗತ್ತಿನಲ್ಲಿ ಪ್ರತಿಯೊಂದು ವಸ್ತುವು ಕ್ರಿಯಾಸ್ವಾತಂತ್ರ್ಯದಿಂದ ವರ್ತಿಸಿದರೂ ಅವುಗಳ ಕ್ರಿಯೆಗಳಿಗನುಸಾರವಾದ ಫಲವನ್ನು ಕೊಡುವವನು ಮತ್ತು ಅವುಗಳಿಗೆ ಸದ್ಗತಿ ಅಥವಾ ದುರ್ಗತಿಯನ್ನುಂಟುಮಾಡುವವನು ಮೂಲಪುರುಷನಾದ ಪರಮಾತ್ಮನೆಂದು ವೀರಶೈವವು ಹೇಳುತ್ತದೆ. ಮೂಲಪುರುಷನು ಶಾಶ್ವತವಾದವನೆಂದು ವೀರಶೈವವು ಹೇಳುತ್ತದೆ. ಜೈನರು ಮೂಲವಸ್ತುವು ಶಾಶ್ವತವೆಂದು ಹೇಳುವದಿಲ್ಲ. ಪರವಸ್ತುವಿನ ಗೊಡೆವೆಗೇ ಅವರು ಹೋಗದೆ ಇಹದಲ್ಲಿ ಅನುಭವಕ್ಕೆ ಗೋಚರವಾದ ಮೂಲವಸ್ತು ಅಥವಾ ದ್ರವ್ಯವನ್ನು ನಂಬುತ್ತಾರೆ. ಜಗತ್ತಿನಲ್ಲಿಯ ವಸ್ತುಗಳು ಬದಲಾವಣೆ ಹೊಂದುತ್ತವೆ. ವಸ್ತುವಿನಲ್ಲಿಯ ಕೆಲವು ಗುಣಗಳು ಸಾಮಾನ್ಯವಾಗಿರುವದರಿಂದ ಹೊಸ ಮತ್ತು ಹಳೆ ಗುಣಗಳು ಒಂದೇ ವಸ್ತುವಿನ ಸ್ವರೂ

ಪವೆಂದು ಹೇಳಬೇಕಾಗುವದು. ಸತ್ಯವಸ್ತುವು ಭೇದದಲ್ಲಿ ಅಭೇದವಾಗಿದೆ. ಅಂದರೆ ಅನೇಕತ್ವದಲ್ಲಿ ಏಕತ್ವನಾಗಿಪ. ದ್ರವ್ಯವು ಮತ್ತು ಗುಣಗಳು ಅಭಿನ್ನವಾಗಿವೆ. ದ್ರವ್ಯವು ಒಂದೇ ಆಗಿದ್ದು ಅನೇಕ ರೂಪಗಳಿಂದ ಕಾಣಿಸುವದು. ದ್ರವ್ಯಕ್ಕೆ ಸೃಷ್ಟಿ, ಲಯ, ಮತ್ತು ಆತಂಕವಾಡುವ ಮೂರು ಗುಣಗಳುಂಟು.

ಗುಣಗಳು ದ್ರವ್ಯಗಳನ್ನು ಬಿಟ್ಟಿರಲಾರವು. ಮುಖ್ಯ ಗುಣಗಳಾವವೆಂದರೆ (೧) ಅಸ್ತಿತ್ವ (೨) ಭೋಗಶಕ್ತಿ (೩) ಇರುವಿಕೆಯನ್ನು ಸೂಚಿಸುವ ಗುಣ (೪) ಜ್ಞಾನಶಕ್ತಿ (೫)ವಿಶೇಷಗುಣ (೬) ಯಾವದೊಂದು ರೂಪವನ್ನು ಹೊಂದುವ ಗುಣ. ಈ ಗುಣಗಳು ದ್ರವ್ಯಗಳಿಗೆ ಸಾಮಾನ್ಯವಾಗಿವೆ. ಗುಣಗಳು ದ್ರವ್ಯವನ್ನು ಬಿಟ್ಟಿರದಂತೆ ದ್ರವ್ಯವು ಗುಣವನ್ನು ಬಿಟ್ಟಿರುವದಿಲ್ಲ. ದ್ರವ್ಯ ಗುಣಗಳ ವಿಭೇದವನ್ನು ಮಾಡುವ ನೈಯ್ಯಾಯಿಕರ ಸಿದ್ಧಾಂತವನ್ನು ಜೈನರು ಖಂಡಿಸಿದ್ದಾರೆ. ದ್ರವ್ಯವು ಗುಣಗಳಿಂದ ಬೇರೆಯಾಗಿದ್ದರೆ ದ್ರವ್ಯದ ಅಗತ್ಯವೇ ಇರುತ್ತಿರಲಿಲ್ಲ. ಬಂಗಾರವು ಅದರ ಗುಣಗಳಾದ ಮೃದುತ್ವ, ಮತ್ತು ಹಳದಿ ಬಣ್ಣಗಳಿಂದ ಬದಲಾಗಲಾರದು. ಆದರೆ ಅದರ ರೂಪ ಅಥವಾ ಪರ್ಯಾಯವು ಬದಲಾವಣೆ ಹೊಂದುವದು. ಅದು ಅನೇಕ ಆಭರಣಗಳಾಗಿ ಕಾಣಬಲ್ಲದು. ಪರ್ಯಾಯಗಳು ಎರಡು ವಿಧವಾಗಿವೆ (೧) ಒಂದು ದ್ರವ್ಯದ ಮುಖ್ಯ ಗುಣಗಳ ಬದಲಾವಣೆ. ಕೆಸರಿನಿಂದ ಕೂಡಿದ ನೀರು ಯಾವಾಗಲೂ ಕೆಸರಿನಿಂದ ನೀರು ಬೇರತಿರಲಾರದು. ಜೀವ ಅಜೀವಗಳೆಂಬ ನಿರಂತರವಾದ, ಪ್ರತ್ಯೇಕವಾದ ಮತ್ತು ಉತ್ಪತ್ತಿರಹಿತವಾದ ಎರಡು ವಸ್ತುಗಳಿಂದ ಜಗತ್ತು ನಡೆದಿದೆ. ಜೀವವು ಭೋಗಿಸುವದು. ಅಜೀವ ಅಥವಾ ಜಡವು ಭೋಗಿಸಲ್ಪಡುವ ವಸ್ತುವು. ಜೀವಕ್ಕೆ ಚೇತನವುಂಟು. ಅಜೀವಕ್ಕೆ ಚೇತನವಿಲ್ಲ ಆದರೆ ಸ್ಪರ್ಶಿಸಲ್ಪಡಲು, ರುಚಿನೋಡಲ್ಪಡಲು, ನೋಡಲ್ಪಡಲು, ವಾಸನೆ ತೆಗೆದುಕೊಳ್ಳಲ್ಪಡಲು ಬರುವಂತಿದೆ. ಸುಖದುಃಖಗಳನ್ನು ಅನುಭೋಗಿಸುವದು ಜೀವವಾಗಿದೆ. ಆತ್ಮಗಳು ಶಾಶ್ವತವಾಗಿವೆ. ಅಜೀವವು ಎರಡು ವರ್ಗಗಳಾಗಿವೆ. (೧) ರೂಪವಿರಹಿತವಾದವು-ಹೇಗೆಂದರೆ ಧರ್ಮ, ಅಧರ್ಮ, ದೇಶ, ಕಾಲ, ಮತ್ತು (೨) ರೂಪವುಳ್ಳವು-ಪ್ರಕೃತಿ ಅಥವಾ ಪುದ್ಗಲ.

(ಮುಂದೆ ಸಾಗುವದು.)

# ವೀರಶೈವ ಚರಿತ್ರೆಯಲ್ಲಿ ರೇವಣಸಿದ್ಧ ಬಸವಾದಿಗಳಿಗೆ ಸ್ಥಾನವಿದೆಯೋ?

(ರಾ. ಸಾ. ಪಿ. ಜಿ. ಹಳಕಟ್ಟಿ ವಿಜಾಪುರ)

ರೇವಣಸಿದ್ಧೇಶ್ವರನ ಲಾಕುಳ ಎಂದರೆ ಲಿಕುಲೀಶನೆಂದು ಹರಿಹರನು ಅವನ ವಿಷಯವಾಗಿ ತನ್ನ ರಗಳೆಯಲ್ಲಿ, ಹಿಂದಿನ ಒಂದು ಲೇಖದಲ್ಲಿ ಹೇಳಿದಂತೆ ಬರೆದಿರುವದು ನಿಜವು. ಬಸವನ ಪೂರ್ವದಲ್ಲಿ ಕರ್ನಾಟಕದಲ್ಲಿ ಪಾಶುಪತರು, ಕಾಳಾಮುಖರು, ಲಕುಲೀಶರು, ಕಾಪಾಲಿಕರು, ಶಾಕ್ತರು ಈ ಮೊದಲಾದ ಪ್ರಭೇದಗಳಿದ್ದವು. ಆದರೆ ಅವು ಹಿಂದುಗಡೆ ಸಂಖ್ಯೆಯಲ್ಲಿ ಕಡಿಮೆಯಾಗುತ್ತ ಬಸವೇಶ್ವರನ ತರುವಾಯ ಕೆಲವು ಕಾಲದ ಮೇಲೆ ನಂದಿಹೋದವು. ಕಾಳಾಮುಖರ ಶಿಲಾಶಾಸನಗಳು ೧೨ನೇ ಶತಮಾನದ ಅಂತ್ಯದ ವರೆಗೂ ಉಪಲಬ್ಧವಿವೆ. ಅಲ್ಲದೆ ದಕ್ಷಿಣ ದೇಶದಲ್ಲಿ ಚೋಳಮಂಡಲದಲ್ಲಿ ಒಂದು ಉಚ್ಚತರದ ಶೈವ ಮಾರ್ಗವು ಪ್ರಚಾರದಲ್ಲಿತ್ತು. ಅದರಲ್ಲಿ ಅನೇಕ ಮಹತ್ತರ ಪಂಡಿತರೂ ಧರ್ಮಸುಧಾರಕರೂ ಆಗಿಹೋದರು. ಆರಂಭದಲ್ಲಿ ಶಿವಶರಣರಲ್ಲಿ ಬಹುಜನರು ಈ ಅನೇಕ ಪ್ರಭೇದಗಳಲ್ಲಾವುದಾದರೊಂದನ್ನು ಹೊಂದಿಕೊಂಡಿರಬಹುದು. ಆ ಪ್ರಕಾರ ರೇವಣಸಿದ್ಧನು ಲಕುಲೀಶ ಪಂಥವನ್ನು ಹೊಂದಿದ್ದನೆಂದು ಹರಿಹರನು ಇಲ್ಲಿ ಹೇಳುತ್ತಾನೆ. ಹಾಗೆಯೇ ಬಸವೇಶ್ವರನಾದರೂ ಆರಂಭದಲ್ಲಿ ವೀರಶೈವರಲ್ಲದ ಮನೆತನದಲ್ಲಿ ಹುಟ್ಟಿದವನಾದರೂ ಹಿಂದುಗಡೆ ವೀರಶೈವ ಮತವನ್ನು ಹೊಂದಿ ಅದನ್ನೇ ಪ್ರಚುರಪಡಿಸಿದನು.

ರೇವಣಸಿದ್ಧನು ಲಾಗುಳನಾದರೂ ಹಿಂದುಗಡೆ ತನ್ನ ಮಗನಾದ ರುದ್ರಮುನಿಯ ಹಸ್ತದಿಂದ ಹಾವಿನಹಾಳ ಕಲ್ಲಿದೇವನಿಗೆ ಶೈವೋಪದೇಶ ಮಾಡಿಸಿದನೆಂದು ತಿಳಿಯುತ್ತಿದೆ. ಈ ಶೈವೋಪದೇಶವಾವುದು ಎಂಬುದನ್ನು ಶೋಧಿಸುವದು ಅವಶ್ಯವಾಗಿದೆ. ಈ ಕಾಲದಲ್ಲಿ ವೀರಶೈವರಿಗೆ 'ವೀರಶೈವ' ಎಂಬ ಅಭಿಧಾನವು ರೂಢವಾಗಿತ್ತೋ ಹೇಗೆ ಎಂಬುದನ್ನು ಗೊತ್ತುಪಡಿಸುವದು ಅಗತ್ಯವಾಗಿದೆ. ಹೀಗೆ ಅವರು ಕರೆಯಲ್ಪಡದೆ 'ಶೈವ' ಎಂದು ಮಾತ್ರ ಕರೆಯಲ್ಪಡುತ್ತಿದ್ದರೆಂಬುದಕ್ಕೆ ಸಬಲ ಕಾರಣಗಳಿವೆ. ಈ ವಿಷಯವಾಗಿ ಬೇರೊಂದು ಲೇಖವು ಈ ಸಂಚಿಕೆಯಲ್ಲಿ ಪ್ರಸಿದ್ಧಿಲ್ಪಟ್ಟಿದೆ. ಈ ವಿಷಯವು ಸಿದ್ಧವಾದರೆ ರೇವಣಸಿದ್ಧನು ವೀರಶೈವನೆಂದೇ ತಿಳಿಯಬೇಕಾಗುವದು.

ಶೈವೋಪದೇಶ ಹೊಂದಿದ ಹಾವಿನಹಾಳ ಕಲ್ಲಿದೇವನ ರಗಳೆಯು ಈಗ ಪ್ರಸಿದ್ಧವಾಗಿದೆ. (ಹರಿಹರನ ರಗಳೆ ಭಾಗ ೬ ನೋಡಿರಿ.) ಅಲ್ಲದೆ ಆತನ ವಚನಗಳೂ ದೊರೆಯುತ್ತಿವೆ. ನನಗೆ ಉಪಲಬ್ಧವಾದವುಗಳನ್ನು ನಾನು ಈ ಪತ್ರಿಕೆಯ ಹೋದ ಸಂಚಿಕೆಯಿಂದ ಪ್ರಸಿದ್ಧಿಸುತ್ತ ಇದ್ದೇನೆ. ಬಸವನ ಪೂರ್ವದ ಕಾಲವನ್ನು ಅಭ್ಯಾಸಮಾಡ ಬಯಸುವವರು ಇವು ಗಳನ್ನು ಚನ್ನಾಗಿ ಲಕ್ಷಿಸಬೇಕು. ಈ ಕಲ್ಲಯ್ಯನು ಮುಂದೆ ಸಿದ್ಧರಾಮನ ಬಳಿಗೆ ಹೋಗಿ ಅವನ ಸನ್ನಿಧಿಯಲ್ಲಿಯೇ ಕಾಲವಾದನು. ಅವನ ಸಮಾಧಿಯು ಸೊಲ್ಲಾಪುರದಲ್ಲಿ ಸಿದ್ಧರಾಮನ ಸಮಾಧಿಯ ಬಳಿಯಲ್ಲಿಯೇ ಈಗಲೂ ಇದೆ.

ಸಿದ್ಧರಾಮನಾದರೂ ಮೊದಲು ವೀರಶೈವನಾಗಿರಲಿಲ್ಲ. ಅವನು ಹಿಂದುಗಡೆ ವೀರಶೈವೋಪದೇಶವನ್ನು ಹೊಂದಿದನು. ಅಲ್ಲಮಪ್ರಭುವಿನ ಸ್ಥಿತಿಯಾದರೂ ಹೀಗೆಯೇ ಇದೆ. ಅವನು ಮೊದಲು ವೀರಶೈವನಾಗಿರಲಿಲ್ಲ. ಹಿಂದುಗಡೆ ಅನುಮಿಷನಿಂದ ಲಿಂಗಧಾರಣಹೊಂದಿದನು.

ರೇವಣಸಿದ್ಧನು ಹರಿಹರನು ಹೇಳುವಂತೆ ಆರಂಭದಲ್ಲಿ ಲಾಕುಳನೆಂದು ತಿಳಿದರೂ ಕೂಡ ಮುಂದೆ ಬಸವಾಲ್ಲಮರಂತೆ ಲಿಂಗಧಾರಣ ಮಾರ್ಗವನ್ನು ಅನುಸರಿಸಿ ಅದನ್ನು ಪ್ರಚಾರಪಡಿಸಿರಲಿಕ್ಕೆಬೇಕು. ರೇವಣಸಿದ್ಧನ ಮತ್ತು ಅವನ ಮಗ ರುದ್ರಮುನಿಗಳ ಚರಿತ್ರೆಗಳು, ರುದ್ರಮುನಿಯು ಚನ್ನಬಸವೇಶ್ವರನು ಉಳಿವಿಗೆ ಹೋಗುವ ಕಾಲದಲ್ಲಿ ಮಾಡಿದ ಸಹಾಯ, ರೇವಣಸಿದ್ಧನಿಗೂ ಸಿದ್ಧರಾಮನಿಗೂ ಇರುವ ಸಂಬಂಧ ಇವುಗಳನ್ನೆಲ್ಲ ನಾವು ಒಟ್ಟಾರೆ ಪರಿಶೀಲಿಸಿದರೆ ಇವರೆಲ್ಲರೂ ತಮ್ಮ ಪೂರ್ವ ವಯಸ್ಸಿನಲ್ಲಿ ಈ ಸಂಕ್ರಾಮಿಕ ಯುಗದಲ್ಲಿ ಯಾವ ತರದ ಶೈವ ಮಾರ್ಗವನ್ನು ಅವಲಂಬಿಸಿದರೂ ಕೂಡ ಹಿಂದುಗಡೆ ವೀರಶೈವ ಪರಂಪರೆಗೆ ಹೊಂದಿದವರಾಗಿ ಅದನ್ನು ಹೆಚ್ಚಳಕ್ಕೆ ತಂದರೆಂಬದು ಗೊತ್ತಾಗುತ್ತದೆ. ಆದುದರಿಂದ ವೀರಶೈವ ಇತಿಹಾಸದಲ್ಲಿ ಅವರಿಗೆ ಸ್ಥಾನವನ್ನು ನಾವು ಕೊಡಲೇಬೇಕು. ಈ ದೃಷ್ಟಿಯಿಂದಲೇ ನಾವು ಇವರ ಚರಿತ್ರೆಗಳನ್ನು ಪರ್ಯಾಲೋಚಿಸುವದು ಅವಶ್ಯವದೆ.

ವಚನ ವಾಙ್ಮಯದಲ್ಲಿ ಕಾಣಬರುವ ವೀರಶೈವದ ಸ್ವರೂಪು ಏಕ ಕಾಲದಲ್ಲಿ ಅದಕ್ಕೆ ಉಂಟಾಗಿರಲಿಕ್ಕಿಲ್ಲ. ಅನೇಕ ಮಾರ್ಗಗಳ ಪ್ರಭಾವದಿಂದ ಅದು ಉಚ್ಚ ಸ್ವರೂಪನ್ನು ಹೊಂದಿರುತ್ತದೆ. ವೀರಶೈವ ಗ್ರಂಥಕಾರರು ಅದು ಶಿವಮತದ ಸಾರವೆಂದು ಹೇಳಿದ್ದಾರೆ. ಹೀಗೆ

ಅದನ್ನು ಭಾವಿಸುವದು ಯುಕ್ತವಾಗಿರುತ್ತದೆ. ಅದರ ತತ್ವಗಳಲ್ಲಿ ಎಲ್ಲ ಶೈವ ಮತಗಳಲ್ಲಿರುವ ಮಹತ್ವದ ತತ್ವಗಳು ಅಡಕವಾಗಿರುತ್ತವೆ. ಅಷ್ಟೇ ಅಲ್ಲ, ಸಾಂಖ್ಯ, ಯೋಗ, ವೇದಾಂತ ಮಾರ್ಗಗಳ ವಿಶಿಷ್ಟತೆಗಳೂ ಅದರಲ್ಲಿ ಕಂಡು ಬರುತ್ತವೆ. ಈ ಕಾರಣದಿಂದಲೇ ಜೈನ, ಬೌದ್ಧ, ವೇದಾಂತ, ಲಕುಲೀಶ ಮೊದಲಾದ ಪ್ರಭೇದಗಳನ್ನು ತನ್ನಲ್ಲಿ ಒಳಕೊಳ್ಳುವಷ್ಟು ಸಾಮರ್ಥ್ಯವನ್ನು ಅದು ತಾಳಿತು. ಅದರ ಈ ಕಾರ್ಯವು ಬಸವನ ಕಾಲದಲ್ಲಷ್ಟೇ ಅಲ್ಲ, ಅವನಕಿಂತ ಮೊದಲು ಸಹ ಪ್ರಾರಂಭವಾಗಿತ್ತು. ಮತ್ತು ಅವನ ತರುವಾಯದಲ್ಲಿಯೂ ಅದರ ಪ್ರಸಾರವು ನಡೆದಿತ್ತೆಂದು ತೋರುತ್ತದ.

ಶಂಕರದಾಸಿಮಯ್ಯ, ದೇವರದಾಸಿಮಯ್ಯರ ಕಾಲದಿಂದಲೂ ವೀರ ಶೈವ ತತ್ವಗಳು ಪ್ರಚುರಹೊಂದುತ್ತಬಂದಿವೆ. ಅವು ಅವರಕಿಂತಲೂ ಪೂರ್ವದಲ್ಲಿ ಪ್ರಚಲಿತವಿರಬಹುದು. ಆದರೆ ಇದು ಇನ್ನೂ ಸಂಶೋಧಿಸ ಲ್ಪಟ್ಟಿಲ್ಲ. ಆದರೆ ಇವರ ತರುವಾಯ ಮಾತ್ರ ರೇವಣಸಿದ್ಧ ಬಸವ ಅಲ್ಲಮ ಮೊದಲಾದ ಅಸಂಖ್ಯ ಮಹಾನುಭಾವರು ಉತ್ಪನ್ನರಾಗಿ ಅವರು ವೀರಶೈವ ಧರ್ಮವನ್ನು ವಿಸ್ತರಿಸಿದರು. ಇದರಿಂದ ಪೂರ್ವದ ಶೈವಪಂಥ ಗಳು ಅಡಗಿಹೋದವು. ಮತ್ತು ಜೈನ ಬೌದ್ಧರೂ ಕರ್ನಾಟಕದಲ್ಲಿ ಅತ್ಯಲ್ಪವಾಗಿ ಉಳಿದರು. ಈ ಸಾಂಕ್ರಾಮಿಕಕಾಲದಲ್ಲಿ ಧಾರ್ಮಿಕ ಬದ ಲಾವಣೆಗಳನ್ನು ವ್ಯಕ್ತಿಗಳು ಹೊಂದುವದು ಸ್ವಾಭಾವಿಕವಾಗಿದೆ. ಆಪ್ರ ಕಾರ ರೇವಣಸಿದ್ಧ, ಹಾವಿನಹಾಳಕಲ್ಲಯ್ಯ, ಸಿದ್ಧರಾಮ, ಅಲ್ಲಮ, ಬಸವ ಮೊದಲಾದವರಲ್ಲ ಧಾರ್ಮಿಕ ಸ್ಥಿತ್ಯಂತರಗಳು ಉಂಟಾಗಿರುತ್ತವೆ. ಇಷ್ಟ ರಿಂದಲೇ ಇವರು ವೀರಶೈವ ಸಮಾಜದವರಲ್ಲ, ಅವರು ವೀರಶೈವರಿಗ ಬಾಹ್ಯರು ಎಂದು ಭಾವಿಸಿ ಅವರನ್ನು ಅಲ್ಲಗಳೆದು ವೀರಶೈವ ಧಾರ್ಮಿಕ ಸಾಮಾಜಿಕ ಚರಿತ್ರೆಯನ್ನು ಬರೆಯುವದು ಯುಕ್ತವಾಗಲಾರದು.

ಈಚೆಗೆ ವೀರಶೈವ ಸಮಾಜದಲ್ಲಿ ಹಲವರು ರೇವಣಸಿದ್ಧನು ವೀರ ಶೈವನಲ್ಲ ಮತ್ತು ಬೇರೆ ಕೆಲವರು ಅಲ್ಲಮ ಬಸವಾದಿಗಳು ವೀರಶೈವ ಧರ್ಮಕ್ಕೆ ಬಾಹಿರರಾಗಿ ವರ್ತಿಸಿದರು ಎಂದು ವಿವಾದಿಸುವದುಂಟು. ಆದರೆ ಅವರು ಮೇಲಿನ ಸಂಗತಿಗಳನ್ನು ಲಕ್ಷಿಸುವದು ಅವಶ್ಯವೆಂದು ನನಗೆ ತೋರುತ್ತದೆ.

# ವೀರಶೈವರ ಪೂರ್ವದ ಹೆಸರು ಆವುದು ?

( ಲೇಖಕರು:—ರಾ. ಸಾ. ಪಿ. ಜಿ. ಹಳಕಟ್ಟಿ, ವಿಜಾಪೂರ. )

ವೀರಶೈವ ಸಮಾಜೇತಿಹಾಸ ಸಂಶೋಧನ ಕಾರ್ಯವು ಎಷ್ಟು ಮಹತ್ವದ್ದೆಂಬುದು ಈಗ ಎಲ್ಲರೂ ಅರಿತ ಸಂಗತಿಯಾಗಿದೆ. ವೀರಶೈವ ಸಮಾಜಕ್ಕೆ ಒಂದು ಮಹತ್ತರ ಇತಿಹಾಸವದೆ. ಮತ್ತು ಹೋದ ಸಾವಿರ ವರುಷಗಳಲ್ಲಿ ಕರ್ನಾಟಕ ದೇಶದಲ್ಲಿ ಉಂಟಾಗುತ್ತಬಂದ ರಾಜಕೀಯ ಮತ್ತು ಸಾಮಾಜಿಕ ಕ್ರಾಂತಿಗಳಲ್ಲಿ ಮಹತ್ವದ ಭಾಗವನ್ನು ಅದು ವಹಿಸಿರುತ್ತದೆ.

ಕರ್ನಾಟಕ ಇತಿಹಾಸದಲ್ಲಿ ಬಸವೇಶ್ವರನಿದ್ದ ಕಾಲವು ಬಹು ಮಹತ್ವವಾದುದೆಂಬುದು ನಿರ್ವಿವಾದವು ಈ ಕಾಲದಲ್ಲಿ ಪ್ರತಿಯೊಂದು ಸಮಾಜದಲ್ಲಿ ವಾಙ್ಮಯ ಪ್ರಯತ್ನಗಳುಂಟಾದವು ಮತ್ತು ಅಸಂಖ್ಯ ಶಿಲಾಶಾಸನಗಳೂ ಲಿಖಿಸಲ್ಪಟ್ಟವು. ಆದರೆ ಅವುಗಳಲ್ಲಿ ವೀರಶೈವ ಎಂಬ ಹೆಸರು ಮಾತ್ರ ಬಹು ಕ್ವಚಿತ್ತಾಗಿ ದೊರೆಯುತ್ತಿದೆ. ಇದು ಇಲ್ಲವೆಂದರೂ ಸಲ್ಲುವದು. ಇದು ಬಹು ಜನರಿಗೆ ವಿಸ್ಮಯವನ್ನುಂಟುಮಾಡುತ್ತಲಿದೆ. ಇದರ ನಿಜಸ್ಥಿತಿಯನ್ನು ಪರಿಶೋಧಿಸುವದು ಬಹು ಅಗತ್ಯವಾಗಿರುತ್ತದೆ.

ಈಗ ವೀರಶೈವರಿಗೆ ಲಿಂಗಾಯತ, ವೀರಶೈವ, ಲಿಂಗವಂತ ಎಂಬ ಹೆಸರುಗಳು ರೂಢಿಯಲ್ಲಿವೆ. ಇವುಗಳಲ್ಲಿ ವೀರಶೈವ ಮತ್ತು ಲಿಂಗಾಯತ ಈ ಶಬ್ದಗಳು ೧೧, ೧೨ ನೇ ಶತಮಾನಗಳಲ್ಲಿ ರೂಢವಾಗಿದ್ದಿಲ್ಲೆಂದು ನನಗೆ ತೋರುತ್ತದೆ. ಹಾಗಿಲ್ಲದಿದ್ದರೆ ಆವ ಹೆಸರಿನಿಂದ ವೀರಶೈವರು ಆಗ ಕರೆಯಲ್ಪಡುತ್ತಿದ್ದರೆಂಬುದನ್ನು ನಾವು ಪ್ರಕೃತ ಸಂಶೋಧಿಸತಕ್ಕ ವಿಷಯವಾಗಿದೆ.

ಈ ಕಾರ್ಯದಲ್ಲಿ ನಾವು ಶಿಲಾಶಾಸನಗಳನ್ನು ಮೊದಲು ಅವಲೋಕಿಸಬೇಕು. ಮತ್ತು ಆ ಕಾಲಕ್ಕಿನ ವಾಙ್ಮಯದಲ್ಲಿ ಬರುವ ಅವರ ಹೆಸರುಗಳನ್ನೂ ನಾವು ನೋಡಬೇಕು. ಅಂದರೆ ಈ ವಿಷಯದ ನಿಜತ್ವವನ್ನು ಕಂಡಹಿಡಿಯಲು ಶಕ್ಯವಾಗುತ್ತದೆ. ಅಲ್ಲದೆ ಅಭಿಧಾನಗಳು ಬಹುತರ

ಅರ್ಥ ಬೋಧಕವಾಗಿರುತ್ತವೆ. ಅವುಗಳ ಸಹಾಯದಿಂದ ಸಮಾಜದ ಮುಖ್ಯ ವೈಲಕ್ಷಣ್ಯಗಳನ್ನು ಸಹ ಕಂಡುಹಿಡಿಯಬಹುದು.

ಆದರೆ ಇವುಗಳಲ್ಲಿ ಶಿಲಾಶಾಸನಗಳಲ್ಲಿ ತೋರಿಬರುವ ಸಂಗತಿಗಳನ್ನು ಮೊದಲು ಪರಿಶೀಲಿಸುವದು ಬಹು ಅವಶ್ಯವಿರುತ್ತದೆ. ಗ್ರಂಥಾಂತರಗಳಲ್ಲಿ ಆವ ವಿಷಯಗಳು ರೂಢವಾಗಿದ್ದವೆಂಬುದನ್ನು ನಿರ್ಧರಿಸಲು ಇವು ಬಹು ಸಹಾಯಕಾರಿಗಳು. ಆದುದರಿಂದ ವೀರಶೈವರಿಗೆ ಸಂಬಂಧಿಸಿರುವ ಮತ್ತು ಪೂರ್ಣವಾಗಿ ಸಂಶೋಧಿಸಲ್ಪಟ್ಟಿರುವ ಮೂಲ ಶಾಸನಗಳಲ್ಲಿ ಕಂಡುಬರುವ ವಿಷಯಗಳನ್ನು ನಾನು ಇಲ್ಲಿ ಉಲ್ಲೇಖಿಸುತ್ತೇನೆ.

## ಏಕಾಂತ ರಾಮಯ್ಯನ ಶಿಲಾಶಾಸನ

**ಈ** ಶಿಲಾಶಾಸನದ ಸವಿಸ್ತಾರವಾದ ವಿವರಣೆಯು ಶಿವಾನುಭವ ಪತ್ರಿಕೆ ಸಂಪುಟ ೩ ಸಂಚಿಕೆ ೧೨ ಪುಟ ೮ ಇದರಲ್ಲಿ ಪ್ರಸಿದ್ಧವಾಗಿರುತ್ತದೆ. ಅದನ್ನು ವಾಚಕರು ನೋಡಬೇಕು. ಏಕಾಂತದ ರಾಮಯ್ಯನು ಶಿವಶರಣರಲ್ಲಿ ಬಹು ಪ್ರಸಿದ್ಧನಾಗಿದ್ದಾನೆ. ಅವನನ್ನು ಎಲ್ಲ ವೀರಶೈವಗ್ರಂಥಕಾರರು ತಮ್ಮ ಕವನಗಳಲ್ಲಿ ಸ್ತುತಿಸಿದ್ದಾರೆ—ಅವನ ವಚನವೂ ಒಂದಿದ್ದು ಅವರ ಮುದ್ರಿಕೆಯು "ಏಕಾಂತ ರಾಮೇಶ್ವರ ಲಿಂಗ" ಎಂದಿರುತ್ತದೆ. ಆದರೆ ಅದು ನನಗೆ ಉಪಲಬ್ಧವಾಗಿರುವದಿಲ್ಲ. **ಈತನು** ಮೊದಲು ಆಳಂದೆ ಎಂಬ ಗ್ರಾಮದವನು. ಇದು ನಿಜಾಮ ಇಲಾಖೆ ಕಲಬುರ್ಗಿ ಜಿಲ್ಲೆಯಲ್ಲಿರುತ್ತದೆ. ಈ ಶಿಲಾಶಾಸನದಲ್ಲಿ ಹೇಳಿರುವದೇನಂದರೆ ಕುಂತಳ ದೇಶದಲ್ಲಿ ಜೈನ ಬೌದ್ಧ ಸಮಯಗಳು ಉತ್ಕಟವಾಗಲು ಮಹೇಶ್ವರನು ಶಿವಮತವನ್ನು ಉದ್ಧಾರಗೊಳಿಸಲು ವೀರಭದ್ರನನ್ನು ಭೂಲೋಕಕ್ಕೆ ಕಳಿಸಿದನು. ಅವನು ಆಳಂದ ಗ್ರಾಮದಲ್ಲಿ ರಾಮಯ್ಯನೆಂಬ ಹೆಸರಿನಿಂದ ಜನಿಸಿದನು. ರಾಮಯ್ಯನು ದೊಡ್ಡವನಾಗಿ **ಶಿವಯೋಗ ಯುಕ್ತ**ನಾಗಿ ವಿವಿಧ ಕ್ಷೇತ್ರಗಳನ್ನು ಸಂದರ್ಶಿಸುತ್ತ ಅಬ್ಬಲೂರು ಎಂಬ ಗ್ರಾಮಕ್ಕೆ ಬಂದನು. ಇದು ಧಾರವಾಡ ಜಿಲ್ಲೆ ಹಿರೇಕೆರೂರ ತಾಲೂಕಿನಲ್ಲಿ ಇದೆ. ಅಲ್ಲಿಯ ಬ್ರಹ್ಮೇಶ್ವರ ದೇವಾಲಯಕ್ಕೆ ಬಂದಿರಲು ಜೈನರು ಅವನನ್ನು ವಿರೋಧಿಸಲು, ಅವನು ಅವರೊಡನೆ ಪಂಥವನ್ನು ಕಟ್ಟಿ ತನ್ನ ಶಿರವನ್ನು ಅರಿದು ಮರಳಿ ಪಡೆಯುವನು. ಮುಂದೆ ಅವನು ಜೈನಬಸದಿಗಳನ್ನು ಕಿತ್ತುಹಾಕಿ ಜೈನರು ವೀರಮಾಹೇಶ್ವರನ ಭಕ್ತರಾಗುವಂತೆ ಮಾಡಿದನು. ಬಿಜ್ಜಳರಾಯನೆಡೆಗೆ

ಅವರು ದೂರುಹೋಗಲು ಅವನು ಕಡೆಗೆ ಏಕಾಂತ ರಾಮಯ್ಯನನ್ನೇ ಮನ್ನಿಸಿ ಕಳಿಸಿದನು. ಇಷ್ಟೇ ಅಲ್ಲ, ರಾಯನು ವೀರಸೋಮನಾಥದೇವರ ನೈವೇದ್ಯವೊದಲಾದವುಗಳಿಗೆ ಬನವಾಸಿಪ್ರಾಂತದಲ್ಲಿರುವ ಗೋಕಾವೆ ಎಂಬ ಗ್ರಾಮವನ್ನು ದಾನನಾಗಿ ಕೊಟ್ಟನು. ಮುಂದೆ ಚಾಲುಕ್ಯವಂಶದ ತ್ರಿಭುವನಮಲ್ಲ ಸೋಮೇಶ್ವರನೂ ಏಕಾಂತದ ರಾಮಯ್ಯನನ್ನು ಆದರಿಸಿ ಅವನಿಗೆ ಅಬ್ಬಲೂರು ಗ್ರಾಮದ ಸುಂಕ ದಂಡಗಳನ್ನು ಧಾರಾಪೂರ್ವಕವಾಗಿ ದಾನಕೊಟ್ಟನು. ಮುಂದೆ ಕದಂಬ ವಂಶದ ಕಾಮದೇವನು ಮಾಲವಳ್ಳಿ ಎಂಬ ಗ್ರಾಮವನ್ನು ರಾಮಯ್ಯನ ಪಾದವನ್ನು ತೊಳೆದು ಸೋಮನಾಥ ದೇವರಿಗೆ ಕೊಟ್ಟನು. ಈ ಭಾಗದಲ್ಲಿ ಮಾಂಡಲಿಕನಾಗಿ ಆಳುತ್ತಿದ್ದ ಅತ್ಯಂತ ಪ್ರಸಿದ್ಧನಾದ ಕೇಶವ ಚಮೂಪನು ಶಿಲಾಶಾಸನವನ್ನು ತಿದ್ದಿ ಸರಣನೆಂಬವನ ಕಡೆಯಿಂದ ಬರೆಯಿಸಿದನು. ಆಮೇಲೆ ಕದಂಬ ವಂಶದ ಮಲ್ಲಿದೇವರಾಯನು ನಗರ ಖಂಡೆಯಲ್ಲಿಯ ಒಂದು ಗ್ರಾಮವನ್ನು ದೇವಾಲಯಕ್ಕೆ ದಾನವನ್ನಿತ್ತನು. ಏಕಾಂತರಾಮಯ್ಯನ ವಿವರಣೆಗಳು ಬಸವಪುರಾಣದ ೪೯ನೇ ಮತ್ತು ೫೨ನೇ ಸಂಧಿಗಳಲ್ಲಿಯೂ ಹರಿಹರನ ರಗಳೆ ( ಹರಿಹರನ ರಗಳೆ ಭಾಗ ೬ ಇದನ್ನು ನೋಡಿರಿ ) ಯಲ್ಲಿಯೂ ವಿಸ್ತರಿಸಲ್ಪಟ್ಟಿವೆ.

ಇವುಗಳ ಮೇಲಿಂದ ಏಕಾಂತದ ರಾಮಯ್ಯನು ಬಿಜ್ಜಳನ ಕಾಲದಲ್ಲಿದ್ದನಲ್ಲದೆ ೧೧೮೨ ರಿಂದ ೧೨೧೧ ವರೆಗೆ ಆಳಿದ ಮಂಡಲೇಶ್ವರ ಕಾಮದೇವ ಇವನ ಕಾಲದಲ್ಲಿಯೂ ಜೀವಿಸಿದ್ದುದು ತಿಳಿದು ಬರುತ್ತದೆ. ಶಿಲಾಶಾಸನದ ಕಾಲವು ೧೨೦೦ ಇರುತ್ತದೆಂದು ಡಾ॥ ಫ್ಲೀಟರವರಿಂದ ಊಹಿಸಲ್ಪಟ್ಟಿದೆ. ಇವುಗಳ ಮೇಲಿಂದ ಏಕಾಂತದ ರಾಮಯ್ಯನು ವೀರಶೈವಧರ್ಮವು ಅತ್ಯಂತ ಉನ್ನತ ಸ್ಥಿತಿಯಲ್ಲಿ ಇದ್ದಾಗ್ಗೆ ಅಂದರೆ ಬಸವೇಶ್ವರನ ಕಾಲದಲ್ಲಿಯೂ ಅವನ ತರುವಾಯದಲ್ಲಿಯೂ ಜೀವಿಸಿದ್ದನೆಂಬದು ಸ್ಪಷ್ಟವಾಗುತ್ತದೆ. ಈ ಶಿಲಾಶಾಸನದಲ್ಲಿ ಏಕಾಂತದ ರಾಮಯ್ಯನು ಹೇಗೆ ಕರೆಯಲ್ಪಟ್ಟಿದ್ದಾನೆಂಬುದನ್ನು ನಾವು ವಿವೇಚಿಸುವದು ಬಹು ಮಹತ್ವದ್ದಾಗಿದೆ.

ಏಕಾಂತದ ರಾಮಯ್ಯನ ಮೂಲಹೆಸರು ರಾಮಯ್ಯನೆಂದಿದು, ಅವನು

ಅರ್ಥ ಬೋಧಕವಾಗಿರುತ್ತವೆ. ಅವುಗಳ ಸಹಾಯದಿಂದ ಸಮಾಜದ ಮುಖ್ಯ ವೈಲಕ್ಷಣ್ಯಗಳನ್ನು ಸಹ ಕಂಡುಹಿಡಿಯಬಹುದು.

ಆದರೆ ಇವುಗಳಲ್ಲಿ ಶಿಲಾಶಾಸನಗಳಲ್ಲಿ ತೋರಿಬರುವ ಸಂಗತಿಗಳನ್ನು ಮೊದಲು ವಿವೇಚಿಸುವದು ಬಹು ಅವಶ್ಯವಿರುತ್ತದೆ. ಗ್ರಾಮಾಂತರಗಳಲ್ಲಿ ಆವ ವಿಷಯಗಳು ರೂಢವಾಗಿದ್ದವೆಂಬುದನ್ನು ನಿರ್ಧರಿಸಲು ಇವು ಬಹು ಸಹಾಯಕಾರಿಗಳು. ಆದುದರಿಂದ ವೀರಶೈವರಿಗೆ ಸಂಬಂಧಿಸಿರುವ ಮತ್ತು ಪೂರ್ಣವಾಗಿ ಸಂಶೋಧಿಸಲ್ಪಟ್ಟಿರುವ ಮೂಲ ಶಾಸನಗಳಲ್ಲಿ ಕಂಡುಬರುವ ವಿಷಯಗಳನ್ನು ನಾನು ಇಲ್ಲಿ ಉಲ್ಲೇಖಿಸುತ್ತೇನೆ.

## ಏಕಾಂತ ರಾಮಯ್ಯನ ಶಿಲಾಶಾಸನ

ಈ ಶಿಲಾಶಾಸನದ ಸವಿಸ್ತಾರವಾದ ವಿವರಣೆಯು ಶಿವಾನುಭವ ಪತ್ರಿಕೆ ಸಂಪುಟ ೩ ಸಂಚಿಕೆ ೧೨ ಪುಟ ೮ ಇದರಲ್ಲಿ ಪ್ರಸಿದ್ಧವಾಗಿರುತ್ತದೆ. ಅದನ್ನು ವಾಚಕರು ನೋಡಬೇಕು. ಏಕಾಂತದ ರಾಮಯ್ಯನು ಶಿವಶರಣರಲ್ಲಿ ಬಹು ಪ್ರಸಿದ್ಧನಾಗಿದ್ದಾನೆ. ಅವನನ್ನು ಎಲ್ಲ ವೀರಶೈವಗ್ರಂಥಕಾರರು ತಮ್ಮ ಕವನಗಳಲ್ಲಿ ಸ್ತುತಿಸಿದ್ದಾರೆ—ಅವನ ವಚನವೂ ಒಂದಿದ್ದು ಅವರ ಮುದ್ರಿಕೆಯು "ಏಕಾಂತ ರಾಮೇಶ್ವರ ಲಿಂಗ" ಎಂದಿರುತ್ತದೆ. ಆದರೆ ಅದು ನನಗೆ ಉಪಲಬ್ಧವಾಗಿರುವದಿಲ್ಲ. ಈತನು ಮೊದಲು ಆಳಂದೆ ಎಂಬ ಗ್ರಾಮದವನು. ಇದು ನಿಜಾಮ ಇಲಾಖೆ ಕಲಬುರ್ಗಿ ಜಿಲ್ಲೆಯಲ್ಲಿರುತ್ತದೆ. ಈ ಶಿಲಾಶಾಸನದಲ್ಲಿ ಹೇಳಿರುವದೇನಂದರೆ ಕುಂತಳ ದೇಶದಲ್ಲಿ ಜೈನ ಬೌದ್ಧ ಸಮಯಗಳು ಉತ್ಕಟವಾಗಲು ಮಹೇಶ್ವರನು ಶಿವಮತವನ್ನು ಉದ್ಧಾರಗೊಳಿಸಲು ವೀರಭದ್ರನನ್ನು ಭೂಲೋಕಕ್ಕೆ ಕಳಿಸಿದನು. ಅವನು ಆಳಂದ ಗ್ರಾಮದಲ್ಲಿ ರಾಮಯ್ಯನೆಂಬ ಹೆಸರಿನಿಂದ ಜನಿಸಿದನು. ರಾಮಯ್ಯನು ದೊಡ್ಡವನಾಗಿ **ಶಿವಯೋಗ ಯುಕ್ತ**ನಾಗಿ ವಿವಿಧ ಕ್ಷೇತ್ರಗಳನ್ನು ಸಂದರ್ಶಿಸುತ್ತ ಅಬ್ಬಲೂರು ಎಂಬ ಗ್ರಾಮಕ್ಕೆ ಬಂದನು. ಇದು ಧಾರವಾಡ ಜಿಲ್ಲೆ ಹಿರೇಕೆರೂರ ತಾಲೂಕಿನಲ್ಲಿ ಇದೆ. ಅಲ್ಲಿಯ ಬ್ರಹ್ಮೇಶ್ವರ ದೇವಾಲಯಕ್ಕೆ ಬಂದಿರಲು ಜೈನರು ಅವನನ್ನು ವಿರೋಧಿಸಲು, ಅವನು ಅವರೊಡನೆ ಪಂಥವನ್ನು ಕಟ್ಟಿ ತನ್ನ ಶಿರವನ್ನು ಅರಿದು ಮರಳಿ ಪಡೆಯುವನು. ಮುಂದೆ ಅವನು ಜೈನಬಸದಿಗಳನ್ನು ಕಿತ್ತುಹಾಕಿ ಜೈನರು ವೀರಮಾಹೇಶ್ವರನ ಭಕ್ತರಾಗುವಂತೆ ಮಾಡಿದನು. ಬಿಜ್ಜಳರಾಯನೆಡೆಗೆ

ಅವರು ದೂರುಹೋಗಲು ಅವನು ಕಡೆಗೆ ಏಕಾಂತ ರಾಮಯ್ಯನನ್ನೇ ಮನ್ನಿಸಿ ಕಳಿಸಿದನು. ಇಷ್ಟೇಅಲ್ಲ, ರಾಯನು ವೀರಸೋಮನಾಥದೇವರ ನೈವೇದ್ಯವೊದಲಾದವುಗಳಿಗೆ ಬನವಾಸೆಪ್ರಾಂತದಲ್ಲಿರುವ ಗೋಕಾವೆ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟನು. ಮುಂದೆ ಚಾಲುಕ್ಯವಂಶದ ತ್ರಿಭುವನಮಲ್ಲ ಸೋಮೇಶ್ವರನೂ ಏಕಾಂತದ ರಾಮಯ್ಯನನ್ನು ಆದ ರಿಸಿ ಅವನಿಗೆ ಅಬ್ಬಲೂರು ಗ್ರಾಮದ ಸುಂಕ ದಂಡಗಳನ್ನು ಧಾರಾ ಪೂರ್ವಕವಾಗಿ ದಾನಕೊಟ್ಟನು. ಮುಂದೆ ಕದಂಬ ವಂಶದ ಕಾಮದೇವನು ಮಾಲವಳ್ಳಿ ಎಂಬ ಗ್ರಾಮವನ್ನು ರಾಮಯ್ಯನ ಪಾದವನ್ನು ತೊಳೆದು ಸೋಮನಾಥ ದೇವರಿಗೆ ಕೊಟ್ಟನು. ಈ ಭಾಗದಲ್ಲಿ ಮಾಂಡಲಿಕನಾಗಿ ಆಳುತ್ತಿದ್ದ ಅತ್ಯಂತ ಪ್ರಸಿದ್ಧನಾದ ಕೇಶವ ಚಮೂಪನು ಶಿಲಾಶಾಸ ನವನ್ನು ತಿದ್ದಿ ಸರಣನೆಂಬವನ ಕಡೆಯಿಂದ ಬರೆಯಿಸಿದನು. ಆಮೇಲೆ ಕದಂಬ ವಂಶದ ಮಲ್ಲಿದೇವರಾಯನು ನಗರಖಂಡೆಯಲ್ಲಿಯ ಒಂದು ಗ್ರಾಮವನ್ನು ದೇವಾಲಯಕ್ಕೆ ದಾನವನ್ನಿತ್ತನು. ಏಕಾಂತರಾಮಯ್ಯನ ವಿವರಣೆಗಳು ಬಸವಪುರಾಣದ ೪೯ನೇ ಮತ್ತು ೫೨ನೇ ಸಂಧಿಗಳಲ್ಲಿಯೂ ಹರಿಹರನ ರಗಳೆ ( ಹರಿಹರನ ರಗಳೆ ಭಾಗ ೬ ಇದನ್ನು ನೋಡಿರಿ ) ಯಲ್ಲಿಯೂ ವಿಸ್ತರಿಸಲ್ಪಟ್ಟಿವೆ.

ಇವುಗಳ ಮೇಲಿಂದ ಏಕಾಂತದ ರಾಮಯ್ಯನು ಬಿಜ್ಜಳನ ಕಾಲ ದಲ್ಲಿದ್ದನಲ್ಲದೆ ೧೧೮೨ ರಿಂದ ೧೨೦೧ ವರೆಗೆ ಆಳಿದ ಮಂಡಲೇಶ್ವರ ಕಾಮದೇವ ಇವನ ಕಾಲದಲ್ಲಿಯೂ ಜೀವಿಸಿದ್ದುದು ತಿಳಿದು ಬರುತ್ತದೆ. ಶಿಲಾಶಾಸನದ ಕಾಲವು ೧೨೦೦ ಇರುತ್ತದೆಂದು ಡಾ॥ ಫ್ಲೀಟರವರಿಂದ ಊಹಿಸಲ್ಪಟ್ಟಿದೆ. ಇವುಗಳ ಮೇಲಿಂದ ಏಕಾಂತದ ರಾಮಯ್ಯನು ವೀರ ಶೈವಧರ್ಮವು ಅತ್ಯಂತ ಉನ್ನತ ಸ್ಥಿತಿಯಲ್ಲಿ ಇದ್ದಾಗ್ಗೆ ಅಂದರೆ ಬಸವೇ ಶ್ವರನ ಕಾಲದಲ್ಲಿಯೂ ಅವನ ತರುವಾಯದಲ್ಲಿಯೂ ಜೀವಿಸಿದ್ದನೆಂಬುದು ಸ್ಪಷ್ಟವಾಗುತ್ತದೆ. ಈ ಶಿಲಾಶಾಸನದಲ್ಲಿ ಏಕಾಂತದ ರಾಮಯ್ಯನು ಹೇಗೆ ಕರೆಯಲ್ಪಟ್ಟಿದ್ದಾನೆಂಬುದನ್ನು ನಾವು ವಿವೇಚಿಸುವದು ಬಹು ಮಹತ್ವದ್ದಾಗಿದೆ.

ಏಕಾಂತದ ರಾಮಯ್ಯನ ಮೂಲಹೆಸರು ರಾಮಯ್ಯನೆಂದಿದು, ಅವನು

ಕಂ॥ ಏಕಾಗ್ರ ಭಕ್ತಿಯೋಗಾದಿ। ನೇಕಾಕಿಯನಲ್ಕೆ ಸಂದು ಶಿವನಂ ಸಿರಿದ ॥ ಪ್ಪೇಕಾಂತ ದೊಳಾರಾಧಿಸಿ । ಏಕಾಂತದ ರಾಮನೆಂಬ ಪೆಸರಂ ಪಡೆದಂ ॥

ಈ ಪ್ರಕಾರ ತನ್ನ ಭಕ್ತಿಯನ್ನು ಆರಿಗೂ ಅರುಹಿಗೊಳ್ಳದೆ ಚರಿಸುತ್ತಿದ್ದದರಿಂದ ಏಕಾಂತದರಾಮನೆಂಬ ಹೆಸರನ್ನು ಪಡೆದನು. ಮುಂದೆ ಅವನು ಶಿವಯೋಗಯುಕ್ತನೆಂದು ಹೇಳಲ್ಪಟ್ಟಿದ್ದಾನೆ. ಇದು ನಮ್ಮ ಪ್ರಾಂತದಲ್ಲಿ ವೀರಶೈವರಿಗೆ ಸಂಬಂಧಿಸಿದ ವಿಶಿಷ್ಟಯೋಗವಾಗಿದೆ. ಇತರ ಯೋಗಗಳಿಗೆ ಅದು ಅನ್ವಯಿಸುವದಿಲ್ಲ.

ಮುಂದೆ ಬಿಜ್ಜಳರಾಯನನ್ನು ಉಲ್ಲೇಖಿಸುವಲ್ಲಿ ೫೮ನೇ ಓಳಿಯಲ್ಲಿ ಹೇಳಿರುವದೇನಂದರೆ--'ಶ್ರೀಮತ್ ಬಿಜ್ಜಣದೇವಂ ರಾಮಯ್ಯಂಗಳು ಮಾಡಿದ ಪರಮ ಸಾಹಸಕಂ ನಿರತಿಶಯಮಪ್ಪ ಮಾಹೇಶ್ವರ ಭಕ್ತಿಗಂ ಮೆಚ್ಚಿ' ಇತ್ಯಾದಿ. ಇದರಲ್ಲಿ ಏಕಾಂತದ ರಾಮಯ್ಯನು ಮಾಹೇಶ್ವರ ಭಕ್ತಿಯುಳ್ಳವನೆಂದು ವರ್ಣಿಸಲ್ಪಟ್ಟಿದ್ದಾನೆ. ಷಟ್‌ಸ್ಥಲದಲ್ಲಿ ಎಂದೆಂದಿಗೂ ಚಲಿಸದಂಥ ಭಕ್ತಿಯ ಆಚರಣೆಯುಳ್ಳವನಿಗೆ ಮಹೇಶ್ವರನೆಂಬ ವಿಶೇಷಾರ್ಥವುಳ್ಳ ಅಭಿಧಾನವು ಇರುತ್ತದೆ.

ಮುಂದೆ ೬೦ನೇ ಓಳಿಯಲ್ಲಿ "ಶಿವಸಮಯ ಪ್ರಾಕಾರನೆನಿಸಿ ಸಲೆ ನೆಗಳ್ದ ಏಕಾಂತದ ರಾಮ' ಎಂದು ಇವನು ಹೇಳಲ್ಪಟ್ಟಿದ್ದಾನೆ. ಶಿವಸಮಯವೆಂದು ಇಲ್ಲಿ ಹೇಳಲ್ಪಟ್ಟಿದ್ದು ಈ ಶಬ್ದದಿಂದ ಆಗಿನ ವೀರಶೈವಸಮಾಜವು ಸಂಬೋಧಿಸಲ್ಪಟ್ಟಿದೆ. ಇದು ಬಸವನ ನಂತರದ ಕಾಲವು. ಆಗ ವೀರಶೈವ ಸಮಾಜವು ಈ ಪ್ರಾಂತದಲ್ಲೆಲ್ಲ ವಿಸ್ತಾರವನ್ನು ಹೊಂದಿರಲಿಕ್ಕೆ ಬೇಕು. ಅದು ಶಿವಸಮಯವೆಂದು ಇಲ್ಲಿ ಹೇಳಲ್ಪಟ್ಟಿದೆ.

೭೦ನೇ ಓಳಿಯಲ್ಲಿ 'ಒಂದು ದಿವಸಂ ಧರ್ಮಗೋಷ್ಠಿಯೊಳಿರ್ದು ಪುರಾತನ ನೂತನರಪ್ಪ ಶಿವಭಕ್ತರ ಗುಣಸ್ತವನಂ ಮಾಡುತ್ತಿನಿರ್ದೇಕಾಂತ ರಾಮಯ್ಯಂಗಳ್ ಅಬ್ಬಲೂರಲ್ಲಿದ್ದಲ್ಲಿ ಜೈನರೆಲ್ಲಂ ನೆರೆದು ಬಂದು ಮಹಾ ವಿವಾದಂಮಾಡಿ' ಎಂದು ಹೇಳಲ್ಪಟ್ಟಿದೆ. ಇಲ್ಲಿ ಏಕಾಂತದ ರಾಮಯ್ಯನು ಪುರಾತನರನ್ನು ಎಂದರೆ ತಮಿಳುದೇಶದಲ್ಲಿ ಪ್ರಸಿದ್ಧರಾದ ೬೩ ಜನ ಪುರಾತನರನ್ನು, ನೂತನ ಶಿವಭಕ್ತರನ್ನು ಎಂದರೆ ಬಸವನ ಕಾಲದಲ್ಲಿ ಉತ್ಪನ್ನರಾದವರನ್ನು ಸ್ತುತಿಸುತ್ತಿದ್ದನೆಂದು ಇಲ್ಲಿ ಹೇಳಿರುವದು ಸ್ಪಷ್ಟವು. ಈ ನೂತನ ಶಿವಭಕ್ತರಲ್ಲಿ ಬಹುಜನರು ವಚನಕಾರರೂ ಇದ್ದಾರೆ.

ಈ ಶಿಲಾಶಾಸನದಲ್ಲಿ ಎಲ್ಲಿಯೂ 'ವೀರಶೈವ' ಎಂಬ ಶಬ್ದವು ಬಂದಿಲ್ಲ ಲಕ್ಷಿಸತಕ್ಕ ವಿಷಯವು ಇದಾಗಿದೆ. ವೀರಶೈವರಿಗೆ ಸಂಬಂಧ ಪಟ್ಟ ಅನೇಕ ವಿಚಾರಗಳು ಮತ್ತು ಹೆಸರುಗಳು ಈ ಶಿಲಾಲೇಖದಲ್ಲಿ ಬಂದಿರುತ್ತವೆ. ಉದಾ:-ಶಿವಯೋಗ, ಮಾಹೇಶ್ವರ, ಶಿವಭಕ್ತ, ಶಿವಾಗಮ, ಶಿವಸಮಯ ಇವುಗಳು ಬಂದಿರುತ್ತವೆ. ಆದರೆ 'ವೀರಶೈವ' ಈ ಹೆಸರು ಬಸವೇಶ್ವರನ ಕಾಲದಲ್ಲಿ ಈಗಿನಂತೆ ಹೆಚ್ಚಾಗಿ ಪ್ರಚಾರವಾಗಿದ್ದರೆ ಈ ಹೆಸರು ಈ ಶಿಲಾಲೇಖದಲ್ಲಿ ಏಕೆ ಬರಬಾರದು? ಶಿವಸಮಯದವರು, ಶಿವಭಕ್ತರು, ಭಕ್ತರು, ಎಂಬ ಸಾಮಾನ್ಯ ಹೆಸರುಗಳಿಂದಲೇ ವೀರಶೈವರು ಇಲ್ಲಿ ಕರೆಯಲ್ಪಟ್ಟಿದ್ದಾರೆ. ಇದರಿಂದ 'ವೀರಶೈವ' ಈ ಹೆಸರು ಆಗ ಇದ್ದಿಲ್ಲೆಂದು ನನಗೆ ತೋರುತ್ತದೆ. ಇನ್ನುಮೇಲೆ ಇನ್ನೊಂದು ಶಿಲಾಶಾಸನವನ್ನು ತೆಗೆದುಕೊಂಡು ಇದೇ ವಿಷಯವನ್ನು ವಿವೇಚಿಸುವಾ.

## ಅಮುಗಿದೇವನ ಶಿಲಾಶಾಸನ

ಈತನ ಶಿಲಾಶಾಸನದ ವಿವರಣೆಯು ಶಿವಾನುಭವ ಸಂಪುಟ ೯-೬-೪೦೧ ಇದರಲ್ಲಿ ಬಂದಿದೆ. ಅಮುಗಿದೇವನಾರೆಂಬುದರ ಬಗ್ಗೆ ನಾವು ಮಾಡಿದ ಒಂದಾನೊಂದು ಊಹೆಯು ತಪ್ಪಿರಬೇಕೆಂದು ನಮಗೆ ತೋರಿದ್ದರಿಂದ ಆ ಬಗ್ಗೆ ಶಿವಾನುಭವ ಸಂಪುಟ ೧೦. ಸಂಚಿಕೆ ೫ ಪುಟ ೪೧೪ ಇದರಲ್ಲಿ ನಾವು ಪುನಃ ಚರ್ಚಿಸಿದ್ದೇವೆ. ಅಮುಗಿದೇವನೆಂಬ ಹೆಸರಿನ ಒಬ್ಬ ಪ್ರಸಿದ್ಧ ಶಿವಶರಣನಿದ್ದು ಅವನ ವೃತ್ತಾಂತವೂ ಗ್ರಂಥಾಂತರಗಳಲ್ಲಿ ದೊರೆಯುತ್ತಿದೆ. ಅವನ ರಗಳೆಯೂ ಒಂದುಂಟು. ಮತ್ತು ಅವನ ಕೆಲವು ವಚನಗಳೂ ನಮಗೆ ಉಪಲಬ್ಧವಿವೆ. ಆದುದರಿಂದ ಶಿಲಾಲೇಖದ ಅಮುಗಿದೇವನು ಅಮಾಕಸಿದ್ಧನೆಂಬ ಕುರುಂಬ ಜಾತಿಯವನಿರದೆ, ಈ ಹೆಸರಿನ ಶಿವಶರಣನು ಇರಬೇಕೆಂದು ನಾವು ಈ ಎರಡನೇ ಲೇಖದಲ್ಲಿ ಕಾಣಿಸಿದ್ದೇವೆ.

ಈ ಶಿಲಾ ಶಾಸನವು ೧೨೦೦ನೇ ಇಸ್ವಿಯಲ್ಲಿಯದು. ಇದು ಸೊಲ್ಲಾಪುರ ತಾಲೂಕಿನಲ್ಲಿ ಭೀಮಾನದಿಯ ದಂಡೆಯ ಮೇಲಿರುವ ಪುಳುಜ ಎಂಬ ಗ್ರಾಮದಲ್ಲಿಯದು. ತದ್ದೇವಾಡಿಯು ಇದರಿಂದ ೨೫ ಮೈಲು ದೂರದಲ್ಲಿದೆ. ಈ ಭಾಗವು ರೇವಣಸಿದ್ಧೇಶ್ವರನು ವಾಸಿಸಿದ ನಾಡು. ಇಂಥಲ್ಲಿ ಬಸವೇಶ್ವರನ ತರುವಾಯ ಸ್ವಲ್ಪಕಾಲದಲ್ಲಿ ಹುಟ್ಟಿದ ಶಿಲಾ ಶಾಸನವು ಇದಾ

ಗಿದೆ. ಇದರಲ್ಲಿ ಶಿವಶರಣರು ಯಾವ ಹೆಸರಿನಿಂದ ಉಲ್ಲೇಖಿಸಲ್ಪಟ್ಟಿದ್ದಾರೆಂಬುದನ್ನು ನಾವು ಯೋಚಿಸಬೇಕಾಗಿರುತ್ತದೆ.

ಈ ಶಿಲಾಶಾಸನದ ೫ನೇ ಓಳಿಯಲ್ಲಿ ಅಮುಗಿದೇವನನ್ನು ವರ್ಣಿಸುವ ಸಂಸ್ಕೃತ ಗದ್ಯವಿದೆ. ಆದರಲ್ಲಿ ಅವನು ಹೇಳಲ್ಪಟ್ಟಿರುವದೇನಂದರೆ— ಮುನಿವತ್ ಪೂಜಿತೋ ಯತಿಃ ಶಿವಾಚಾರೈಕ ನಿರತೋ ಲಿಂಗೈಕ್ಯೋ ಲಿಂಗವೇದಕಃ। ಏತಚ್ಚಿತ್ರ ಗುಣೈರ್ಯುಕ್ತೋ ಅಮ್ಮಿದೇವೋ ಮಹಾಯತಿಃ॥ ಇದರಲ್ಲಿ ಅಮುಗಿದೇವನು, ಮುನಿಯು, ಯತಿಯು, ಶಿವಾಚಾರವುಳ್ಳವನು, ಲಿಂಗೈಕ್ಯನು, ಲಿಂಗವೇದಕನು ಎಂದು ವರ್ಣಿಸಲ್ಪಟ್ಟಿದ್ದಾನೆ.

ಮುಂದೆ ೮ನೇ ಓಳಿಯಲ್ಲಿ ಅವನು 'ಮಾಹೇಶ್ವರಗಣ ಕುಲಾನ್ವಯ ದಿವಾಕರ' ಎಂತಲೂ, ೯ನೇ ಓಳಿಯಲ್ಲಿ 'ಸಿದ್ಧಕುಲಾನ್ವಯಾರ್ಣವ' ಎಂತಲೂ ಹೇಳಲ್ಪಟ್ಟಿದ್ದಾನೆ.

ಮುಂದೆ ೧೪ನೇ ಓಳಿಯಲ್ಲಿ 'ಭಕ್ತಜನ ಚಿಂತಾಮಣಿ' ಎಂತಲೂ ೧೫ನೇ ಓಳಿಯಲ್ಲಿ 'ಶ್ರೀ ಸಿದ್ಧಸೋಮನಾಥದೇವ ಶ್ರೀ ಪಾದಪಂಕಜ ಭ್ರಮರ ಲಿಂಗೈಕದೇಹಿ' ಎಂತಲೂ, ೧೬ನೇ ಓಳಿಯಲ್ಲಿ 'ಶರಣಸಂತಾನ' ಎಂತಲೂ ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ವರ್ಣಿಸಲ್ಪಟ್ಟ 'ಅಮುಗಿದೇವರಸರ್ಗೆ' ಪೂರ್ಣಜಿ (ಪುಳುಜ) ಯ ಮಹಾಜನಂಗಳು ಧಾರಾಪೂರ್ವಕವಾಗಿ ಸೋಮನಾಥ ದೇವರಿಗೆ ಕೆಲ ಭೂಮಿಯನ್ನು ಕೊಟ್ಟಿದ್ದರ ಉಲ್ಲೇಖವಿದೆ. ಈ ಮಹಾಜನಂಗಳಲ್ಲಿ ಬ್ರಾಹ್ಮಣ ಮೊದಲಾದ ಸಮಾಜಗಳ ಉಲ್ಲೇಖಗಳಿವೆ.

ಈ ಶಾಸನದಲ್ಲಿಅಮುಗಿದೇವನು ವೀರಶೈವರಿಗೆ ಸಂಬಂಧಿಸಿದ ವಿಶಿಷ್ಟ ಶಬ್ದಗಳಿಂದ ಅಂದರೆ ಲಿಂಗೈಕ್ಯ, ಲಿಂಗವೇದಕ ಇವುಗಳಿಂದ ವರ್ಣಿಸಲ್ಪಟ್ಟಿದ್ದಾನೆ. ಮಾಹೇಶ್ವರನೆಂತಲೂ ಶರಣಸಂತಾನ ಎಂತಲೂ ಹೇಳಲ್ಪಟ್ಟದ್ದಾನೆ. ಈ ಶಬ್ದಗಳು ವೀರಶೈವರಿಗೆ ಅನ್ವಯಿಸುತ್ತವೆ. 'ಸಿದ್ಧಕುಲಾನ್ವಯಾರ್ಣವ' ನೆಂತಲೂ ಹೇಳಲ್ಪಟ್ಟಿದ್ದಾನೆ. ರೇವಣಸಿದ್ಧ, ಸಿದ್ಧರಾಮ, ಎಂದು ಸಿದ್ಧ ಶಬ್ದದೊಡನೆ ಕೂಡಿದ ನಾಮಧೇಯಗಳು ಈ ಕಾಲಕ್ಕೆ ವಿಶಿಷ್ಟ ಗುಣಗಳುಳ್ಳವರಿಗೆ ಉಪಯೋಗಿಸಲ್ಪಟ್ಟ ಹಾಗೆ ತೋರಿಬರುತ್ತದೆ. ಅವನು ಶಿವಾಚಾರವುಳ್ಳವನೆಂತಲೂ ಹೇಳಲ್ಪಟ್ಟಿದ್ದಾನೆ. ಮುನಿಯೂ

ಯತಿಯೂ ಎಂತಲೂ ವಿವರಿಸಲ್ಪಟ್ಟಿದ್ದಾನೆ. ಆದರೆ ಆತನು ವೀರಶೈವ ನೆಂಬ ಹೆಸರಿನಿಂದ ಕರೆಯಲ್ಪಟ್ಟಿಲ್ಲ. ಪುಳುಜ ಗ್ರಾಮದಲ್ಲಿಯ ಮಹಾ ಜನರನ್ನು ಉಲ್ಲೇಖಿಸುವಲ್ಲಿ "ಸಮಸ್ತ ವಿಜ್ಞಾತಾನೇಕವೇದ ವೇದಾಂಗ ತತ್ವಜ್ಞಾನವರ್ಮರ್ತದ ಜ್ವಾಳಾ ಮಂಡಿತ ಪುಂಡರೀಕಾಕ್ಷ ಬ್ರಹ್ಮ ಲಕ್ಷ್ಮೀ ಲಕ್ಷಿತ ವಿಶಾಳ ವಕ್ಷಸ್ಥಳ ಹಂಸಯುವತಿ ವಿರಾಜಿತರ್ ಮನೋನ್ನು ತರುಂ ಯಜನ ಯಾಜನಾಧ್ಯಾಯನಾಧ್ಯಾಪನ ದಾನ ಪ್ರತಿಗ್ರಹ ಷಟ್ ಕರ್ಮ ನಿರತರುಂ ಅಷ್ಟಾದಶ ಸ್ಮೃತಿ ಪುರಾಣ ಕಾವ್ಯ ನಾಟಕ ಭಂಗೀ ಭಾಷಣ ಕವಿ ಗಮಕಿ ವಾದಿ ವಾಗ್ಮಿ ಹೃದಯಾಕೃಷ್ಟ ಮಂತ್ರಾಕ್ಷರರುಂ ಪ್ರತಿಪನ್ನ ಶಿಲಾಕ್ಷರರುಮಪ್ಪ ಶ್ರೀಮತು ದಕ್ಷಿಣ ವಾರಣಾಸೀ ಸರ್ವನಮಸ್ಯ ದುತ್ತಮದಗ್ರಹಾರಂ ಪೂರ್ಣಜೆಯಶೇಷ ಮಹಾಜನಂಗಳು" ಎಂದು ಈ ಪಟ್ಟಣಿಗರು ವರ್ಣಿಸಲ್ಪಟ್ಟಿದ್ದಾರೆ. ಇದರಲ್ಲಿ ವೀರಶೈವ ಈ ಹೆಸರು ಬರಬೇಕಾಗಿತ್ತು. ಆದರೆ ಅದು ಇಲ್ಲಿ ಬಂದಿರುವದಿಲ್ಲ.

ಅಮುಗಿದೇವನ ಪೂರ್ಣ ವೃತ್ತಾಂತವು ಶಿವಾನುಭವ ಪತ್ರಿಕೆಯಲ್ಲಿ ನಾನು ಮೇಲೆ ವಿವರಿಸಿದ ಸಂಚಿಕೆಗಳಲ್ಲಿ ಬಂದಿದೆ. ಅವನು ವಚನ ಕಾರರಲ್ಲಿ ಪ್ರಮುಖನಾಗಿದ್ದಾನೆ. ಶಿವಾನುಭವ ಮಂಟಪದ ವಿವಾದಗ ಳಲ್ಲಿ ಅವನ ಹೆಸರು ಮೇಲಿಂದಮೇಲೆ ಬರುತ್ತದೆ. ಅಲ್ಲದೆ ಬಸ ವನ ಸಮಕಾಲೀನನು. ಶಿಲಾಶಾಸನವು ೧೨೦೦ ಇಸ್ವಿಯಲ್ಲಿಯದು. ವೀರಶೈವರು ನಿರ್ವಿವಾದವಾಗಿ ಹೆಚ್ಚಾಗಿದ್ದ ಕಾಲವಿದು. ಶಿಲಾಶಾಸನ ದಲ್ಲಿ ವೀರಶೈವ ಸಿದ್ಧಾಂತದಲ್ಲಿ ಬರುವ ವಿಶೇಷಾರ್ಥವುಳ್ಳ ಅನೇಕ ಶಬ್ದ ಗಳೂ ಬಂದಿರುತ್ತವೆ. ಈ ಬಗೆಯ ಶಿಲಾಶಾಸನದಲ್ಲಿ 'ವೀರಶೈವ' ಈ ಹೆಸರು ಬಂದಿರುವದಿಲ್ಲೆಂಬುದನ್ನು ನಾವು ಲಕ್ಷಿಸಬೇಕು.

ವೀರಶೈವರು ಆ ಕಾಲಕ್ಕೆ ಭಕ್ತರು ಶಿವಾಚಾರವುಳ್ಳವರು, ಮಹೇ ಶ್ವರರು, ಶರಣರು, ಲಿಂಗೈಕ್ಯರು, ಲಿಂಗವೇದಕರು, ಶಿವಯೋಗಿಗಳು, ಶಿವಸಮಯದವರು, ಶಿವಭಕ್ತರು ಎಂದು ಸಾಮಾನ್ಯ ಶಬ್ದಗಳಿಂದ ಕರೆ ಯಲ್ಪಡುತ್ತಿದ್ದರೆಂಬ ಅನುಮಾನವು ಉಂಟಾಗುತ್ತದೆ. ಅವರಲ್ಲಿ ವಿಶೇಷ ಜ್ಞಾನವುಳ್ಳವರಿಗೆ ಶಿವಯೋಗಿಗಳು, ಮಾಹೇಶ್ವರರು, ಸಿದ್ಧರು, ಶರಣರು, ಯತಿಗಳು, ಮುನಿಗಳು ಎಂಬ ಹೆಸರುಗಳು ಇದ್ದವೆಂದು ತೋರುತ್ತದೆ.

ಪೂರ್ವದ ಶಿಲಾಶಾಸನಗಳಲ್ಲಿ 'ವೀರಶೈವ' ಎಂಬ ಶಬ್ದವು ಉಪ ಲಭ್ಧವಾಗುವದಿಲ್ಲ. ನನಗಂತೂ ಸಿಕ್ಕಿರುವದಿಲ್ಲ. ಯಾರಿಗಾದರೂ ಸಿಕ್ಕಿದ್ದರೆ

ಅವಶ್ಯವಾಗಿ ತಿಳಿಸಬೇಕು. ಅದೇ ಮೇರೆಗೆ 'ಲಿಂಗಾಯತ' ಈ ಶಬ್ದವೂ ಇರುವದಿಲ್ಲ. ಈ ಸಂಗತಿಯನ್ನು ನಾವು ಲಕ್ಷಿಸದಿದ್ದರೆ ಪುರಾತನ ಶಿಲಾ ಸಂಶೋಧನೆಯಲ್ಲಿ ವೀರಶೈವರ ಇತಿಹಾಸವನ್ನು ಕಂಡುಹಿಡಿಯುವಲ್ಲಿ ನಾವು ತಪ್ಪು ದಾರಿಯನ್ನು ಹಿಡಿಯುವ ಸಂಭವವದೆ. ಇಷ್ಟೇ ಅಲ್ಲ, ವೀರಶೈವರು ಈ ಕಾಲದಲ್ಲಿ ಇದ್ದರೇ ಹೇಗೆ ಎಂಬ ವಿಷಯದಲ್ಲಿಯೂ ಶಂಕೆಗಳು ಉತ್ಪನ್ನವಾಗುತ್ತವೆ. ಆದುದರಿಂದ ವೀರಶೈವ ಸಂಸ್ಕೃತಿ ಸಂಶೋಧಕರು ನಾನು ವಿವರಿಸಿದ ಮೇಲಿನ ಸಂಗತಿಯನ್ನು ಅವಶ್ಯವಾಗಿ ಲಕ್ಷಿಸಬೇಕೆಂದು ನನ್ನ ಸೂಚನೆ ಇದೆ.

೧೧ನೇ, ೧೨ನೇ, ೧೩ನೇ ಶತಮಾನಗಳಲ್ಲಿ ವೀರಶೈವರು ಬರೀ 'ಶೈವರು' ಎಂದು ಕರೆಯಲ್ಪಡುತ್ತಿದ್ದರೆಂದು ನಿರ್ಣಯವಾದರೆ, ವೀರಶೈವ ಸಂಶೋಧನ ಕ್ಷೇತ್ರವು ಹೆಚ್ಚಿಗೆ ವಿಸ್ತೃತವಾಗುತ್ತದೆ. ಶೈವ, ವೀರಶೈವ ಈ ಎರಡು ಬೇರೆ ಬೇರೆ ಪಂಗಡಗಳಿರುತ್ತವೆಂಬ ತಿಳುವಳಿಕೆಯು ಈಗ ಇದೆ. ಆದರೆ ಶಿಲಾಶಾಸನಗಳಿಂದ ಇದು ತಪ್ಪೆಂದು ಗೊತ್ತಾದರೆ, ಕರ್ನಾಟಕ ಶೈವರು ಮತ್ತು ವೀರಶೈವರು ಇವೆರಡರಲ್ಲಿ ಅಭಿನ್ನತೆಯು ಸಿದ್ಧವಾಗುತ್ತದೆ. ಈ ಪೂರ್ವ ಕಾಲದಲ್ಲಿ ಅನೇಕ ಮಾಂಡಲಿಕರೂ, ರಾಜರೂ, ಕವಿಗಳೂ, ಸಾಧುಗಳೂ, ಶೈವರಿದ್ದರೆಂಬ ವರ್ಣನೆಗಳು ಆಗಿಂದಾಗ್ಗೆ ಬರುತ್ತವೆ. ಆದರೆ ಮೇಲ್ಕಂಡ ವಿಧಾನದ ಮೂಲಕ ಇವರೆಲ್ಲರೂ ವೀರಶೈವರಿರಬೇಕೆಂಬ ಅನುಮಾನವು ಉಂಟಾಗುತ್ತದೆ. ಆದ್ದರಿಂದ ಈ ವಿಷಯದ ಮಹತ್ವವು ಎಷ್ಟಿದೆಂಬದು ವಾಚಕರಿಗೆ ಗೋಚರವಾಗದೆ ಇರದು.

ಈ ದೃಷ್ಟಿಯಿಂದ ಬೇರೆ ಕೆಲ ಶಿಲಾಶಾಸನಗಳ ವಿವೇಚನೆಯು ಮುಂದಿನ ಸಂಚಿಕೆಯಲ್ಲಿ ಮುಂದುವರಿಸಲ್ಪಡುವದು.

---

# ಪ್ರಾರ್ಥನೆಯು ರಗಳೆ.

ಕಂ॥ ದೇವ ಹರ ದೇವ ಪುರಹರ।
ದೇವ ಸದಾ ವರದ ದೇವ ಚಂದ್ರಾಭರಣಾ॥
ದೇವ ಪತಿ ಎನಗೆ ಕರುಣಿಸು।
ದೇವ ಕೃಪಾ ಬಹುಳ ಹಂಪೆಯ ವಿರೂಪಾಕ್ಷಾ॥

## ಮಂದಾನಿಲ ರಗಳೆ.

ದೇವ ಶ್ರೀ ಪಂಪಾಪುರದಧಿಪತಿ
ದೇವ ಸದಾನತ ಸಂಕುಳ ಸದ್ಗತಿ
ದೇವಾ ಭಾಸುರ ಪಿಂಗ ಜಟಾಧರ
ದೇವ ತರಂಗ ಲಸದ್ಗಂಗಾಧರ
ದೇವ ಮಹೇಶ ಸುಧಾಕರಶೇಖರ
ದೇವ ಕಿರೀಟಾಲಂಕೃತ ಶುಭಕರ
ದೇವ ಮಧುವ್ರಜ ಸಮ ನೀಲಾಳಕ
ದೇವ ಭವಾನೀ ಸಮ ಸುಖ ಪಾಲಕ
ದೇವ ದಿವಾಕರ ಶಶಿ ಶಿಖಿ ಲೋಚನ
ದೇವ ನತ ವ್ರಜ ಮಾಯಾ ಮೋಚನ
ದೇವ ಭುಜಂಗಾರಾಜಿತ ಕುಂಡಲ
ದೇವ ಸಮುನ್ನತ ಘನ ಭುಜ ಮಂಡಲ
ದೇವ ಜಗತ್ಪಾವನ ಪಂಚಾನನ
ದೇವ ಹರಿಸ್ತುತ ನತ ಚತುರಾನನ
ದೇವ ಗಜಾಜಿನ ಮಂಡಿತ ವಿಗ್ರಹ
ದೇವ ಪ್ರಮಥ ನಿಕಾಯಾನುಗ್ರಹ
ದೇವಾ ನಿಶಿತಾಯುಧ ಸಂಚಯ ಧರ
ದೇವ ಸರೋಜೋದ್ಭವ ಶಿರಧರ ಕರ
ದೇವ ಸುರವ್ರಜ ಮಸ್ತಕ ಭೂಷಣ
ದೇವ ಶರಣ ಸಂಕುಳದಘ ಶೋಷಣ

ದೇವ ಫಣಾಧರ ವಳಯ ವಿಮಂಡಿತ
ದೇವಾನತ ಜನ ಸಂತತ ಸದ್ಗತಿ
ದೇವಾ ಹರಿ ಬ್ರೊಮ್ಮಾರ್ಚಿತ ಪದತಳ
ದೇವ ಯಶೋಧವಳಿತ ದಿಕ್ಸಂಕುಳ
ದೇವಾ ಪರಿವೃತ ಸುರಭೂರುಹ ಜಯ
ದೇವಾ ಅಪಾಯ ರಹಿತ ಜ್ಯೋತಿರ್ಮಯ
ದೇವಾ ಸಜ್ಜನ ಭವ ಭಯ ಭಂಜನ
ದೇವ ನಿರಂತರ ನಿತ್ಯ ನಿರಂಜನ
ದೇವ ಪುರತ್ರಯ ವನ ದಾವಾನಲ
ದೇವ ಜಲಂಧರ ಮೇಘ ಮಹಾಬಲ
ದೇವ ರತೀಶ ಮದಾಂಧ ದಿವಾಕರ
ದೇವ ಕೃತಾಂತ ಕಳೇವರ ಸಂಹರ
ದೇವ ಮೃಡಾಣೀ ದೇಹಾರ್ಧಪ್ರದ
ದೇವ ಸುಪರ್ಣಧ್ವಜ ಚಕ್ರಪ್ರದ
ದೇವ ವಿಶಾಲ ವೃಷೇಂದ್ರ ಸುಖಾಸನ
ದೇವಾ ದಕ್ಷ ವಿಯಾಗ ವಿನಾಶನ

ದೇವಾ ಅನೇಕ ಶೃತಿ ತತಿ ದುರ್ಲಭ
ದೇವ ಪುರಂದರ ಸಂಕುಳ ವಲ್ಲಭ
ದೇವ ಮಹಾ ಸಂಪತ್ ಪರಿಶೋಭಿತ
ದೇವ ವಿಶೇಷ ಜ್ಞಾನ ವಿಭೂಷಿತ
ದೇವಾ ಮುಕ್ತಿ ನಿಕಾಯ ವಿರಾಜಿತ
ದೇವಾ ಶಕ್ತಿತ್ರಯ ಸಂಸೇವಿತ
ದೇವ ವಿಶುದ್ಧ ಷಡಧ್ವ ನಿಕೇತನ
ದೇವ ಸದಾ ಶರ್ವಾಣೀ ಚೇತನ
ದೇವಾ ನಿರುಪಮ ನಿರ್ಮಳ ನಿಷ್ಕಳ
ದೇವ ಸದಾವರಣಪ್ರಭು ನಿಶ್ಚಳ
ದೇವಾ ತುಂಬುರ ವರ ನಾದಪ್ರಿಯ
ದೇವಾ ನಾರದ ವರ ವೀಣೋದಯ
ದೇವಾ ನಾದಪ್ರಿಯ ಸಂಭಾವನ

ಜೇವಾ ಭಕ್ತಪ್ರಕರ ಮಹಾ ಘನ
ದೇವ ವಿವಸ್ವತ ಕೋಟಿ ಸಮಪ್ರಭ
ದೇವಾ ಕೋಟ್ಯಾನಲ ತೇಜಪ್ರಭ
ದೇವ ಜರಾಮಯ ಪಾಶ ವಿವರ್ಜಿತ
ದೇವ ಪ್ರಳಯ ಸಮಯ ಘನ ಗರ್ಜಿತ
ದೇವ ಸುಹೃಜ್ಜನ ಹೃದಯ ಸದಾ ಗತಿ
ದೇವ ಧರಿತ್ರೀ ಧರ ಹರಿ ಸಂಗತಿ
ದೇವ ನಿರಂತರ ದೇವ ವಿಪೂತನ

ದೇವ ಮಹೇಶ್ವರ
ದೇವ ಮದೀಶ್ವರ
ದೇವ ಮಹಾಚಲ
ದೇವ ಮಹಾಬಲ
ದೇವ ಮಹಾನಭ
ದೇವ ಮಹಾಪ್ರಭ
ದೇವ ಮಹಾಶಶಿ
ದೇವ ಮಹಾರಸಿ
ದೇವ ಮಹಾಭವ
ದೇವ ಮಹಾಶಿವ
ದೇವ ಮಹಾಗುಣಿ
ದೇವ ಮಹಾಮಣಿ
ದೇವ ಮಹಾಜಪ
ದೇವ ಮಹಾತಪ

ಕಂ॥ ಶರಣು ಸುರತರುವೆ ಶರಣಾಂ ।
ಬುರುಹ ದಿವಾಕರನೆ ಶರಣು ಕರುಣಾಕರನೆ ॥
ಶರಣು ಶರಣೆನುತಲಿದ್ದೆನೆ ।
ಕರುಣಿಸು ಸದ್ಭಕ್ತಿ ಯೆನಗೆ ಶ್ರೀ ವಿರುಪಾಕ್ಷಾ ॥

# ಹಂಪೆಯ ರಗಳೆ



## ಸ್ರಗ್ಧರಾ ವೃತ್ತ

ನಿತ್ಯ ಶ್ರೀಕಂಠಾಭರಣ ಕಿರಣಸಂಘಾತ ಸಂಭೂತನೂತ್ನಾ
ದಿವ್ಯ ಪ್ರಾತುಂಗ ಗಂಗಾಧರ ಪುರಹರ ಭಾಳಾಕ್ಷ ಚಂಚದ್ಭವಾನೀ
ಪ್ರತ್ಯಕ್ಷಸ್ವಾಮಿ ಕಾಮಾಂತಕ ನಿಖಿಳ ಮಖಾಧಾರ ವಿಸ್ತಾರ ಭಕ್ತ
ಗತ್ಯಂತ ಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

### ಉತ್ಸಾಹ ರಗಳೆ.

ಸಕಲ ರತ್ನನಿಕರಖಚಿತ ಮಕುಟಧರನೆ ಹಂಪೆಯರಸ
ಪ್ರಕಟ ಮಕುಟ ಜಟಾಜೂಟಮಂಡಿತ ಮಹಿಮ ಹಂಪೆಯರಸ
ಸುಕರವೆನಿಪನರ್ಥಿಪಳಕ ಪಟಲ ನಿಟಿಲ ಹಂಪೆಯರಸ
ಸಕಲಲೋಕ ಭರಿತ ನಿರುತ ಸರ್ವಜೀವ ಹಂಪೆಯರಸ
ಮಂಡಿತ ಪ್ರಚಂಡ ಕಿರಣಗಂಡಯುಗಳ ಹಂಪೆಯರಸ
ತಂಡದಿಂದ ದೆಸೆಗೆ ಮಿಸುಪ ಸುಖದ ಮುಖವೆ ಹಂಪೆಯರಸ
ಪುರವನುರುಪಿ ಧರೆಗೆ ಪರಮ ಹರುಷವಿತ್ತೆ ಹಂಪೆಯರಸ
ಶರಣಜನಕ್ಕೆ ಹರಣವಾಗಿ ಕರುಣಿಸಿರ್ಪೆ ಹಂಪೆಯರಸ
ಕೇಳ್ವುದೆನ್ನ ಚೆನ್ನ ಬಿನ್ನಪವನುಮಾಧಿನಾಥ
ತಾಳ್ವುದಿಪನು ಮುದ್ದುಮಾಡಿ ಭಾವಭರಿತ ಭಕ್ತಿಯೂಥ

ಸಕಲ ಕಾಮ ನಿಕರದಿಂದ ವಿಕಳನಾಗುತಿರ್ದೆನಯ್ಯ
ಸುಕರವೆನಿಪ ಭಕುತಿಯರಿಯದಖಿಳ ವಿಷಯಿಯಾದೆನಯ್ಯ
ಕೋಪ ತಾಪ ಲೇಪದಿಂದೆ ತಾಪಿಸುತ್ತಮಿರ್ದೆನಯ್ಯ
ಪಾಪ ಲಾಭ ಲೋಭದಿಂದೆ ಕೋಪಿಸುತ್ತಮಿರ್ದೆನಯ್ಯ
ಮೋಹ ಮದ ಸಮೂಹದಿಂದೆ ದಾಹಿಸುತ್ತಮಿರ್ದೆನಯ್ಯ
ದೇಹದಿಚ್ಛೆ ಮೆಚ್ಚಿ ಹೆಚ್ಚಿ ಮಚ್ಚರಕ್ಕೆ ಮೇಳಿಯಾದೆನಯ್ಯ
ನಾದಮೂರ್ತಿ ಪುಣ್ಯಕೀರ್ತಿ ಕಾಯ್ದುಕೊಳ್ಳೊ ಹಂಪೆಯರಸ
ವೇದಪಕ್ಷ ವಿಮಲವಕ್ಷ ರಕ್ಷಿಸೆನ್ನ ಹಂಪೆಯರಸ

ಆಸೆಯುಲಗು ನಚ್ಚಿ ಮೆಚ್ಚಿ ಮನವ ನುಚ್ಚು ಮಾಡಿತಯ್ಯ
ಗಾಸಿಯಾಗಿ ನೊಂದು ಬೆಂದು ಬರಿದೆ ಬಳಲುತಿರ್ದೆನಯ್ಯ
ಮನ ಧನಂ ಸುತರ್ಕುಲಂ ಛಲಂ ಬಲಂಗಳೆಂಬಿವೆಲ್ಲ
ಜನನಿ ಜನಕರಬಲೆ ಯೌವ್ವನಂ ಶರೀರಮೆಂಬಿವೆಲ್ಲ
ಮಿಂಚು ಮಂಜು ಕನಸು ಕರಕವೆಂಬ ತೆರನನರಿದುದಿಲ್ಲ
ಸಂಚಲಂ ಮರೀಚಿಕಾಜಲಂಗಳೆಂದು ಕಂಡುದಿಲ್ಲ
ಗಗನ ಕುಸುಮವಂಬುಲಿಪಿಯನಿತ್ಯವೆಂದು ಬಗೆದುದಿಲ್ಲ
ಮುಗಿಲ ನೆಳಲುವಿಂದ್ರಚಾಪವಚಿರವೆಂದು ಕಂಡುದಿಲ್ಲ
ನಿತ್ಯವೆಂದು ನಿರುತವೆಂದು ಹತ್ತೆ ಸಾರುತಿರ್ದೆನಯ್ಯ
ಸತ್ಯವರಿಯದತ್ತಲಿತ್ತ ಸುತ್ತಿ ಬಳಲುತಿರ್ದೆನಯ್ಯ
ಅರಿಯದರಿಸಿ ಮರೆದು ಮರುಗಿ ಕುರುಹುಗೆಟ್ಟೆನೆನ್ನ ಗುರುವೆ
ತೆರಹುಗಾಣದರುಹುಗುಂದಿ ಮರಹುಗೊಂಡೆನೆನ್ನ ಗುರುವೆ

ಮಾಯೆಯಂ ಸಡಿಲ್ಚಿ ಕಳೆದು ಕಾಯಿ ತಂದೆ ಹಂಪೆಯರಸ
ಜೀಯ ನಿತ್ಯ ಕಾಯಿ ದೇವರಾಯ ನೋಡು ಹಂಪೆಯರಸ
ವಿಷಯವೆಂಬ ಕೇಸರಿನೊಳ್ಸಿಲ್ಕ ಪಶುವನೆನ್ನ ರಕ್ಷಿಸಯ್ಯ
ಪಶುಪತಿ ಶಿವಾ ಭವಾ ಭವಾನಿಯರಸ ಕರುಣಿಸಯ್ಯ
ಶ್ರುತಿಗಳರಸಿ ಮತಿಗಳರಸಿ ಯತಿಗಳರಸಿ ಕಾಣದಭವ
ನತ ಜನಕ್ಕೆ ಮುಂದೆ ಬಂದು ನಿಂದು ತೋರ್ಪೆ ಕರುಣಿ ವಿಭವ
ಏಕೆ ತಂದೆ ಎನ್ನನೊಮ್ಮೆ ನೋಡಲೊಲ್ಲೆ ಹಂಪೆಯರಸ
ನಾಕಲೋಕಪತಿಗೆ ಪತಿ ಪಿನಾಕ ಪಾಣಿ ಹಂಪೆಯರಸ

ತಾಯ ಗರ್ಭದೊಳಗೆ ತಗ್ಗಿ ಕುಗ್ಗಿ ಮಗ್ಗುಲೊಳಗೆ ಮಗ್ಗಿ
ಹೇಯವೆನ್ನದುದರ ರಸವನುಂಡು ಕರುಳ ಬಲೆಯೊಳೊಗ್ಗಿ
ಮಲದ ಮೂತ್ರ ಕುಲದ ನಡುವೆ ಕಲಸಿ ನೆಲಸಿ ತೊಲಗದಿರ್ದು
ಕೆಲ ಬಲಂಗಳರಿಯದಧಮ ಕೂಪದಲ್ಲಿ ತಾಪಿಸಿರ್ದು
ಸೆಡೆದೆ ನುಡಿದೆನಾರೆನೊಲ್ಲೆನಳ್ಕಿದೇಂ ಸಮರ್ಥ ಗುರುವೆ
ತಡೆಯದೆನ್ನನಚ್ಚ ಭಕುತಿ ಸುಖದೊಳಿರಿಸು ಪರಮ ಗುರುವೆ
ದೇವ ನತವಿತಾನ ವಿವರ ಜಲಧಿ ಚಂದ್ರ ಕರುಣಿಸಯ್ಯಾ

ದೇವ ಭಕ್ತ ನಿಕರ ವಿಕಸಿತ ಪ್ರಮೋದ ಕರುಣಿಸಯ್ಯ
ಕಮಲಜಾಂಡ ಫಲ ಸಮೂಹ ವಿಮಲ ವೃಕ್ಷ ಹಂಪೆಯರಸ
ಸಮುದಿತ ಪ್ರತಾನ ಭರಿತ ಚಿತ್ರಕಾಶ ಹಂಪೆಯರಸ
ಸುರಸಮಾಜರಾಜ ರಾಜರಾಜಮೌಲಿ ಹಂಪೆಯರಸ
ಗಿರಿಸುತಾ ಲತಾ ವಿತಾನ ಕಲ್ಪ ಭೂಜ ಹಂಪೆಯರಸ
ಈಶವಿಗತದೋಷ ಪುಣ್ಯ ವೇಷ ಕರುಣಿ ಕರುಣಿಸಯ್ಯ
ಪಾಶರಹಿತ ಮುಕ್ತಿವಿಹಿತ ಭಕ್ತಿಸಹಿತ ಕರುಣಿಸಯ್ಯ

ಕಳಿದು ಮುಳಿದು ಸುಳಿದು ಹೊಳೆದು ಕಾಡಲೇಕೆ ಹಂಪೆಯರಸ
ತಿಳಿದು ಬೆಳಪ ಭಕುತಿಯಿತ್ತು ಸುಖವನೀಯೊ ಹಂಪೆಯರಸ
ಬಾಲನೊರಲುತಿರ್ದೊಡೇಕೆ ಕೇಳಲೊಲ್ಲೆ ಹಂಪೆಯರಸ
ಕಾಲಕಾಲ ವಿಮಲಶೀಲ ಭಕುತಿಲೋಲ ಹಂಪೆಯರಸ
ಕಣ್ಗೆ ಕಣ್ಣೆ ಮನಕೆ ಮನವೆ ಗುಣಕೆ ಗುಣವೆ ಹಂಪೆಯರಸ
ಪಣ್ಗೆ ಪಣ್ಣೆ ರಸಕೆ ರಸನೆ ಸವಿಗೆ ಸವಿಯೆ ಹಂಪೆಯರಸ
ಕುಲಕೆ ಕುಲವೆ ಛಲಕೆ ಛಲವೆ ಬಲಕೆ ಬಲವೆ ಹಂಪೆಯರಸ
ನೆಲಕೆ ನೆಲವೆ ಜಲಕೆ ಜಲವೆ ಶಿಖಿಗೆ ಶಿಖಿಯೆ ಹಂಪೆಯರಸ
ಅಸುವಿಗಸುವೆ ಅಣುವಿಗಣುವೆ ಯಾತ್ಮಕಾತ್ಮ ಹಂಪೆಯರಸ
ಶಶಿಗೆ ಶಶಿಯೆ ರವಿಗೆ ರವಿಯೆ ನಭಕೆ ನಭನೆ ಹಂಪೆಯರಸ
ನುಡಿಯದಿರ್ದು ನೋಡದಿರ್ದೊಡೆಂತು ಬರ್ದುಕುವೆಂ ತ್ರಿಶೂಲಿ
ನುಡಿಸಿ ನೋಡಿ ಬದುಕಿಸೆನ್ನನಕ್ಕರಿಂ ಕಪಾಲ ಮಾಲಿ
ನೋಡಿ ನೋಡದಿರ್ಪರುಂಟೆ ಕೂಡಿ ಕೂಡದಿರ್ಪರುಂಟೆ
ಮಾಡಿ ಮಾಡದಿರ್ಪರುಂಟೆ ಬೇಡಿ ಬೇಡದಿರ್ಪರುಂಟೆ
ಭಕುತಿ ಸುಖವನೀಯದಿಹುದಿದಾವ ಹೆಂಪು ಹಂಪೆಯರಸ
ಯುಕುತಿ ಏಕೆ ಶಿಶುವಿನೊಡನೆ ಪಶುವಿನೊಡನೆ ಹಂಪೆಯರಸ

ಎನಗೆ ತಂದೆ ತಾಯಿ ಬಂಧುಬಳಗವಚಲ ಭಕ್ತಿ ನೀನೆ
ಎನಗೆ ಸುಗತಿ ಸುಮತಿ ಸೊಂಪು ಬಿಣ್ಪು ನುಣ್ಪು ತಣ್ಪು ನೀನೆ
ತನುವಿನೊಳಗೆ ತೆರಹುಗೊಡದೆ ತೀವಿ ನಿಲ್ಲು ಹಂಪೆಯರಸ
ಮನದ ಕಣ್ಗಳೊಳಗೆ ಸುಳಿದು ಸುಖವನೀಯೊ ಹಂಪೆಯರಸ

ಎನ್ನ ಚಿತ್ತದೊಳಗೆ ತಿಳಿದು ತೊಳಗಿ ಬೆಳಗು ಹಂಪೆಯರಸ
ಎನ್ನ ಭಾವದೊಳಗೆ ಕರುಣವೆರಸಿ ಬೆರಿಸು ಹಂಪೆಯರಸ
ಭವಭವಂಗಳೊಳಗೆ ತಿರುಗಿ ಬಂದು ಸವೆದೆ ಹಂಪೆಯರಸ
ನವನವಾದಿ ಜನನದಿಂದೆ ನವೆದು ನವೆಸೆ ಹಂಪೆಯರಸ
ಹುಟ್ಟಿ ನವೆದು ನಡುವೆ ಮತ್ತೆ ಹುಟ್ಟಿ ಸವೆದು ನವೆದೆನಯ್ಯ
ಹುಟ್ಟಿದಂತೆ ಭವವನೈದಿ ಮಾರುವೋದೆ ಕರುಣಿಸಯ್ಯ
ಪರಮಪುರುಷ ಲಸಿತ ಹರುಷ ಪುಣ್ಯ ಪುರುಷ ಹಂಪೆಯರಸ
ಗರಳಧರನೆ ದುರಿತಹರನೆ ಶರಣವರನೆ ಹಂಪೆಯರಸ

ಅಖಿಳ ಗುರುವೆ ಹಂಪೆಯರಸ
ನಿಖಿಳ ಗುರುವೆ ಹಂಪೆಯರಸ
ದಾನನಿಧಿಯೆ ಹಂಪೆಯರಸ
ಮಾನನಿಧಿಯೆ ಹಂಪೆಯರಸ
ವೇದದೂರ ಹಂಪೆಯರಸ
ನಾದಸಾರ ಹಂಪೆಯರಸ

ದೇವರಮ್ಯ ಭಾವಗಮ್ಯ
ಸಹಜ ನಿತ್ಯ ಬಹಳ ಸತ್ಯ
ಭೃತ್ಯ ಸುಲಭ ಸತ್ಯ ಶರಭ
ಪರಶುಧರನೆ ಕರುಣಿಹರನೆ
ನೋಡು ಶಿವನೆ ನೋಡು ಭವನೆ
ಬಾರ ದೇವ ಸಾರ ಹೃದಯ
ಮಂಗಳಾಬ್ಧಿ ತುಂಗಲಬ್ಧಿ
ವಿಷಮನೇತ್ರ ಲಸಿತಗಾತ್ರ
ಲಿಂಗಮೂರ್ತಿ ಜಂಗಮೂರ್ತಿ

ಎನ್ನ ಗುರುವೆ ತಂದೆ ಈಶ
ಲಾಲಿಸಯ್ಯ ಪಾಲಿಸಯ್ಯಾ
ಏವೆನೀಶ ಕಾವುದೀಶ
ಆಗಳಾಗ ಈಗಳೀಗ

ಅತುಳ ಕಾಯ ನತ ನಿಕಾಯ
ದೇವ ಗುರುವೆ ದೇವ ವರವೆ
ದೇವ ಗತಿಯೆ ದೇವ ಮತಿಯೆ
ದೇವ ಪತಿಯೆ ಹಂಪೆಯರಸ
ಜಯತು ಜಯತು ಹಂಪೆಯರಸ

---

ಭಕ್ತನ ಕ್ರಿಯೆಗಳು ಪರಮಾತ್ಮನೊಡನೆ ಸಾಮರಸ್ಯವನ್ನು ಹೊಂದಿರುತ್ತವೆ. ಭಕ್ತನು ತಾನು ಬೇರೆ, ಪರಮಾತ್ಮನು ಬೇರೆ ಎಂಬ ಭಾವನೆಯಿಂದ ವರ್ತಿಸುವದಿಲ್ಲ. ಇಂಥ ವರ್ತನೆಯಿಂದ ಪರಮಾತ್ಮನ ಗುಣಗಳು ಅವನಲ್ಲಿ ಪ್ರಕಟವಾಗುತ್ತವೆ. ಗಂಧದ ಕೊರಡನ್ನು ತೆಯ್ದರೆ ಹೇಗೆ ಗಂಧವು ಹೆಚ್ಚೆಚ್ಚು ಹೊರಡುತ್ತಿದೆಯೋ ಹಾಗೆಯೇ ಅವನು ತನ್ನ ಕ್ರಿಯೆಗಳ ಮೂಲಕ ಪರಮಾತ್ಮನ ಗುಣಗಳನ್ನು ತನ್ನಲ್ಲಿ ಹೆಚ್ಚೆಚ್ಚು ಪ್ರಕಟಪಡಿಸುತ್ತಾ ಹೋಗುತ್ತಾನೆ. (೯)

ಹೀಗೆ ಪರಮಾತ್ಮನ ಗುಣಗಳು ಹೊರಹೊಮ್ಮಹತ್ತಲು ಭಕ್ತನ ದೇಹವೇ ಪರಮಾತ್ಮನದಾಗುತ್ತದೆ. ಇದರಿಂದ ಪರಮಾತ್ಮನು ಭಕ್ತದೇಹಿಕದೇವನೆಂದು ಅವನನ್ನು ವರ್ಣಿಸುವದುಂಟು. ಪರಮಾತ್ಮನು ಉಣ್ಣುವದೂ, ಇರುವದೂ, ಉಡುವದೂ ಭಕ್ತನಲ್ಲಿಯೇ. (೧೦)

ಆದರೆ ಭಕ್ತನು ಅತ್ಯಂತ ಪರಿಶುದ್ಧನಾಗಿ ವರ್ತಿಸುವದರಿಂದಲೇ ಮೇಲಿನ ವೃತ್ತಿಯು ಭಕ್ತನಲ್ಲಿ ಸಾಧ್ಯವಾಗುತ್ತಿದೆ. ಆದರೆ ಮನುಷ್ಯನು ವಾಡಿಕೆಯಾಗಿ ಹೀಗೆ ವರ್ತಿಸುವದಿಲ್ಲ. ಅವನು ತನ್ನ ಹೊಟ್ಟೆಯ ಉಪಜೀವನಕ್ಕೋಸ್ಕರ ಯಾವಾಗಲೂ ತೊಳಲಾಡುತ್ತಾನೆ. ವ್ಯಸನದಲ್ಲಿರುತ್ತಾನೆ. ಇಂಥವನು ಪರಮಾತ್ಮನನ್ನು ಕಾಣಲಾರನು. ಪರಮಾತ್ಮನು ಇಂಥವನೊಡನೆ ಇದ್ದರೂ ಕೂಡ ಆಗಸನು ನೀರಡಿಸಿದಂತೆ ಅವನು ಪರಮಾತ್ಮನಿಗೆ ಹೊರತಾಗಿ ಕಂಗೆಡುತ್ತ ಬಾಳುತ್ತಾನೆ. (೧೧)

ಭಕ್ತನಲ್ಲಿ ಪರಮಾತ್ಮನ ಗುಣಗಳು ತಲೆದೋರಲು ಅವನಿಗೆ ಗುರುವಿನ ಅಗತ್ಯವು ಇರುತ್ತದೆ. ಈ ಗುರುವು ಅವನೊಡನೆ ಪ್ರೀತಿಯಿಂದ ಇದ್ದು ಅವನಲ್ಲಿ ಗುಣಗಳು ಪ್ರಕಟವಾಗುವ ಹದವನ್ನು ಅರಿತು ಅವನನ್ನು ಯೋಗ ಮಾರ್ಗದಲ್ಲಿ ಒಯ್ಯುತ್ತಾನೆ. (೧೨)

ಭಕ್ತನ ಗುಣಗಳು ಗುರುವಿನಿಂದಲ್ಲದೆ ತನ್ನ ಜೋಡಿಗರೊಡನೆ ವರ್ತಿಸುವದರಿಂದಲೂ ಅವು ಹೊರಹೊಮ್ಮುತ್ತದೆ. ಆದುದರಿಂದ ಯಾರ ಗುಣಗಳು ತನ್ನೊಡನೆ ಹೊಂದಿಕೆಯಾಗಿರುತ್ತವೆಯೋ ಅಂಥವರೊಡನೆ ಭಕ್ತನು ಬೆರೆದು ವರ್ತಿಸಬೇಕು. ಒಡನಾಡಿಗಳಲ್ಲಿ ದುರ್ಗುಣಗಳು ವಾಸವಾಗಿರಬಾರದು. ಅವರು ಸದ್ಬುದ್ಧಿ ಸದ್ಭಾವವುಳ್ಳವರಾಗಿರಬೇಕು. ಇದರಿಂದ ಅವರ ಸದ್ಗುಣಗಳು ಅವನಲ್ಲಿ ಬರುವವು. ದುರ್ಗುಣಿಗ

ಳೊಡನೆ ಇದ್ದರೆ ಅವರ ದುಷ್ಟ ಗುಣಗಳು ಅವನಲ್ಲಿ ಬರುವವು. ಇದರಿಂದ ಅವನು ಮೋಕ್ಷಕ್ಕೆ ದೂರವಾಗುವನು. (೧೩)

ಆದರೆ ಜನರು ಅನೇಕ ವಿಷಯಗಳಿಗೆಳಸಿ ಮೋಹಪರವಶರಾಗಿ ವರ್ತಿಸುತ್ತಾರೆ. ಅವರ ಮನಸ್ಸು ಪರಮಾತ್ಮನ ಕಡೆಗೆ ಎಳೆಯುವದಿಲ್ಲ. ಇಂಥವರ ಭಕ್ತಿಯು ಕೇವಲ ಬಯಲ ಮೋಹವು. (೧೪)

ಜನರು ಪರಮಾತ್ಮನು ತಮಗೆ ಒಲಿಯುವದಿಲ್ಲೆಂದು ಮರುಗುತ್ತಾರೆ. ಆದರೆ ಇದರ ದೋಷವು ಅವರ ಕಡೆಗೆಯೇ ಇರುತ್ತದೆ. ಪರಮಾತ್ಮನನ್ನು ಒಲಿಸುವದು ಅವರ ಕೈಯ್ಯಾಧೀನವಾಗಿರುತ್ತದೆ. ಅವರ ಮನಸ್ಸು ಪರಿಶುದ್ಧವಾಗಿದ್ದರೆ, ಪರಮಾತ್ಮನು ಅವರೊಡನೆಯೇ ಇರುತ್ತಾನೆ. (೧೫)

ಇದಕ್ಕೋಸ್ಕರ ಬರೇ ಆಗಮ ಜ್ಞಾನವು ಅವಶ್ಯವಿಲ್ಲ. ಅನೇಕ ನಿರ್ಬಂಧಗಳಿಗೆ ಒಳಗಾಗಿ ಆಚರಿಸುವದೂ ಅವಶ್ಯವಿಲ್ಲ. ಅವುಗಳಿಂದ ಪರಮಾತ್ಮನು ದೊರಕಲಾರನು. ಹೀಗೆ ಆಚರಿಸುವದು ವ್ಯರ್ಥ ಶ್ರಮವು ಮಾತ್ರ. ಅನೇಕ ಭಕ್ತರು ದೇವರ ಮೇಲೆ ನೀರು ಮುಕ್ಕಳಿಸಿದರು, ಕಲ್ಲಿನಿಂದ ಒಗೆದರು ಪುಷ್ಪವನ್ನು ಅವನ ಮೇಲೆ ಎಸೆದರು. ಆದರೂ ಅವರು ಪರಮಾತ್ಮನನ್ನು ಒಲಿಸಲು ಶಕ್ತರಾದರು. ಯಾಕೆಂದರೆ, ಅವರ ಮನಸ್ಸು ಶುದ್ಧವಾಗಿತ್ತು. ಪರಮಾತ್ಮನಿಗೆ ‘ ಶರಣು ’ ಎಂದು ಒಂದು ನುಡಿಯನ್ನು ನುಡಿದರೆ ಸಾಕು. ಪರಮಾತ್ಮನು ಪ್ರೀತನಾಗುವನು. ಯಾಕಂದರೆ ಅವರು ಸಂಪೂರ್ಣ ಭಕ್ತಿಯುಳ್ಳವರಾಗಿ ಇಂಥ ನುಡಿಯನ್ನು ನುಡಿಯುತ್ತಾರೆ. ಅದೇ ಆಗಮಾಚಾರವು. ನಿಜವಾದ ಪರಮಾತ್ಮನನ್ನು ಒಲಿಸುವ ರೀತಿಯು. (೧೬)

ಭಕ್ತನಾದವನು ಯಾವ ಪದವಿಯನ್ನೂ ಬಯಸುವದಿಲ್ಲ ಪರಮಾತ್ಮನೊಡನೆ ಭಕ್ತಿಯಿಂದಿರುವದೇ ಅವನಿಗೆ ಶ್ರೇಷ್ಠತರವಾದ ಪದವಿಯಾಗಿರುತ್ತದೆ. ಇದನ್ನೇ ಅವನು ಹಾರೈಸುತ್ತಿರುತ್ತಾನೆ. (೧೭)

---

# ಮಹೇಶ.

## ವಚನಗಳು.

೧೮. ಒಲಿದು ಒಲಿಸಿಕೊಳ್ಳಬೇಕು. ಒಲಿವಲ್ಲದೆ ಇಲ್ಲ. ಹಲವು ಕೊಂಬೆಗೆ ಹಾರದಿರು ಮರುಳೇ. ಅಟ್ಟಿ ನೋಡುವ, ಮುಟ್ಟಿ ನೋಡುವ. ತಟ್ಟಿ ನೋಡುವ, ಒತ್ತಿ ನೋಡುವ. ಅಟ್ಟಿದಡೆ, ಒತ್ತಿದಡೆ, ನಿಷ್ಠೆಯು ಬಿಡದಿರ್ದಡೆ, ತನ್ನನೀವ ಮಹಾಲಿಂಗ ಕಲ್ಲೇಶ್ವರಾ.

೧೯. ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ತಟ್ಟುವ ಮುಟ್ಟುವ ಕೊರತೆ ನೆರತೆಗಳ ಹಿಡಿವನೇ ಶರಣನು? ಹಿಡಿಯನು. ಅದೇನು ಕಾರಣವೆಂದಡೆ ಅವೆಲ್ಲವು ನಿನ್ನ ಮಾಯೆ ಎಂಬುದ ಬಲ್ಲನಾಗಿ. ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಶರಣರು ನಿಜ ಕಲಿಗಳು.

೨೦. ಆರಡಿ ತಾನಿಹ ಆಶ್ರಯವ ಮಾಡುವಲ್ಲಿ, ಬೇರೆ ಬಾಯಿಲ್ಲ. ಕುಸುಮದ ಕಂಪಿತವನುಂಬುವಕ್ಕೆ ಬೇರೆ ಬಾಯಿಲ್ಲ. ತ್ರಿವಿಧ ಮಲವ ಬಿಟ್ಟು ಬಹ ಸಮರ್ಪಣೆಯನರಿಯಬೇಕು. ತೊಟ್ಟಿರ್ದುದ ತೊಡದೆ, ಬಿಟ್ಟಿರ್ದುದ ತಾ ಮುಟ್ಟದೆ, ಬಿಟ್ಟುದನರಿದು, ತೊಟ್ಟ ಬಿಟ್ಟ ಹಣ್ಣಿನಂತೆ ನಿಜ ನಿಶ್ಚಯವಾದ ಭಕ್ತಿಮೂರ್ತಿ ಮಹಾ ಮಹಿಮ ಕಲ್ಲೇಶ್ವರಲಿಂಗವು ತಾನಾದ ಶರಣ.

೨೧. ಆವಂಗದಲ್ಲಿರ್ದಡೇನು? ಸುಸಂಗವೇದಿ ಲಿಂಗದಲ್ಲಿಯೇ ನಿರುತಭರಿತ ಕಾಣಿರೋ. ಶರಣನ ಮನದಲ್ಲಿ ಸಂಚಲವಿಲ್ಲದೆ ಲಿಂಗವನಿಂಬುಗೊಂಡ ಶರಣಂಗೆ ಬೆದರಿ ಓಡವೇ ಕರ್ಮಂಗಳು? ಉರಿದು ಹೋಗವೇ ಭವಂಗಳು? ಕರ್ಪುರದುರಿಯ ಸಂಗದಂತೆ ಗುರುಪಾದವ ಸೋಂಕಿ ಜ್ಞಾನವಾದ ಬಳಿಕ ಜಡಕರ್ಮವಿಹುದೇ ಮಹಾಲಿಂಗ ಕಲ್ಲೇಶ್ವರಾ?

೨೨. ಏಕ ಏವ ರುದ್ರ ನ ದ್ವಿತೀಯನೆಂಬ ಶೃತಿ. ಲಿಂಗಭಕ್ತನೇ ದೇವನೆಂದಿತ್ತು. ಅಪಿ ವಾ ಯುಶ್ಚಾಂಡಾಲೋ ಎಂಬ ಶೃತಿ. ಲಿಂಗಭಕ್ತನೇ ಕುಲಜನೆಂದಿತ್ತು. ಘೃತಂ ಜಿಘಂತಿ ಎಂಬ ಶೃತಿ ಲಿಂಗಪ್ರಸಾದವೇ ಪರವೆಂದಿತ್ತು. ಇದ ನೋಡಿ ಬರುದೊರೆವೋದಿರಿ. ಶೃತಿಬಾಹ್ಯರಾದಿರಿ. ಶಿವಭಕ್ತಿ ಇಲ್ಲದೆ ಹೋದಿರಿ. ಗುರು ಲಿಂಗ ಜಂಗಮದ ಪಾದೋದಕ ಪ್ರಸಾದವ ಧರಿಸುವನೇ ಭಜಿಸುವನೇ ಕುಲಜನೆಂದು ಶೃತಿ

ನಾರುತ್ತಿದೆ. ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಶರಣಂಗೆ ಮಿಗೆ ಶರಣೆಂಬೆ.

೨೩. ಕ್ಷೇತ್ರ ವಿಶೇಷವೋ ಬೀಜ ವಿಶೇಷವೋ ಬಲ್ಲವರು ಹೇಳಿರೇ. ಬೀಜ ವಿಶೇಷವೆಂದರೆ ಕುಲದಲಧಿಕ ಸದ್ಬ್ರಾಹ್ಮಣನ ಸತಿ ಜಾರೆಯಾಗಿ ಶ್ವಪಚನ ರಮಿಸಲು ,ಗರ್ಭಿಣಿಯಾಗಿ ಜನಿಸಿದ ಸುತನಂತೆ ಬ್ರಾಹ್ಮಣಕರ್ಮದಿಂದುಪನಯನ ಬ್ರಹ್ಮಚರ್ಯ ವೇದಾಧ್ಯಯನ ಅಗ್ನಿಹೋತ್ರ ಯಜ್ಞ ಯಜನಕ್ಕೆ ಯೋಗ್ಯವಾಗನೇ ಆ ಸುತನು ? ಬೀಜ ವಿಶಿಷವೆಂದಡೆ ಕುಲದಲ್ಲಧಿಕ ಬ್ರಾಹ್ಮಣನು ಚಾಂಡಾಲಗಿತ್ತಿಯ ರಮಿಸಲು ಆ ಬೀಜ ಗರ್ಭವಾಗಿ ಜನಿಸಿದ ಸುತಂಗೆ ವಿಪ್ರಕರ್ಮ ಸಲ್ಲದೇ ಹೋಗದೇ ? ಇದು ದೃಷ್ಟ. ಇವನತಿಗಳೆವ ವೇದಾದಿ ವಿದ್ಯಂಗಳ ಬಲ್ಲ ತಾರ್ಕಿಕ ವಿದ್ವಾಂಸರು ತಿಳಿದು ನೋಡಿ ಹೇಳಿರೇ. ಜನ್ಮನಾ ಜಾಯತೆ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ ವೇದಾಧ್ಯಾಯು ಭವೇದಿಪಃ ಬ್ರಹ್ಮಂ ಚರತಿ ಬ್ರಾಹ್ಮಣಾ ವರ್ಣೇನ ಜಾಯತೆ ಶೂದ್ರಸ್ತ್ರೀ ಶೂದ್ರಾಚ ಕಾರಣಾತ್ ಉತ್ಪತ್ತಿ ಶೂದ್ರ ಪುತಶ್ಚವಿಪ್ರ ಶೂದ್ರಾನ್ನ ಭುಂಜಯೇತ್ ಇಂತೆಂದುದಾಗಿ ಇದು ಕಾರಣ ಗುರು ಸದ್ಭಾವದಲುದಯಿಸಿದ ಶಿವಜ್ಞಾನ ಬೀಜ ಸದ್ಭಕ್ತಿಯನಿಂಬುಗೊಂಡ ಶಿಷ್ಯನ ಹೃದಯ ಮನಕರಣವೆಂಬ ಸುಕ್ಷೇತ್ರವು. ಕುಲಹೀನಸ್ತ್ರೀ ಕುಲಯುಕ್ತ ಪುರುಷ ಕುಲಹೀನ ಪುರುಷ ಕುಲಯುಕ್ತ ಸ್ತ್ರೀಯರ ದೋಷ ಪಿಂಡದಂತಲ್ಲ..ಎನ್ನ ಮಹಾಲಿಂಗ ಕಲ್ಲೇಶ್ವರನ ಶರಣರೇ ಆಜಾತರೆಂದಿಕ್ಕಿದ ಮುಂಡಿಗೆಯನು ಎತ್ತಿಕೊಳ್ಳಿರೋ.

೨೪ ಹೋ ಹೋ ವೇದವೇ ತತ್ವನಾದಡೆ ಮಾದಾರನ ಮನೆಯಲುಂಡಂದು, ಒಬ್ಬ ನಿಧಾನವುಳ್ಳ ಉಪಾಧ್ಯಾಯರಾದರೂ ಇಲ್ಲನಾದರೇ ? ಆಗಮ ವಿದಿಯಲ್ಲಿ ಮಂತ್ರ ಮೂರ್ತಿ ಎಂದೆಂಬ ಮಾತದಂತಿರಲಿ. ಅದ ಕೇಳಲಾಗದು. ಭ್ರಾಂತಿ ಬೇಡ. ಅಕುಲ, ಕುಲವೆಂದರೆ ಕಕ್ಕಯ್ಯನ ಮನೆಯ ಅಕ್ಕರ. ನಿಮ್ಮ ತರ್ಕ ಮುಕ್ಕಾಯಿತ್ತು ಲೋಕವರಿಯದೆ ? ಕಲ್ಲಿಲಿಟ್ಟು ಕಾಲಿಲೊದ್ದರೆ ಅಲ್ಲಿ ಮೂರ್ತಿ ನುಡಿಯಿತ್ತಲ್ಲಾ. ಇಂಬಿಲ್ಲದ ದ್ವಿಜರೆಲ್ಲರೂ ಹೇಳಿರೇ ? ಸಲ್ಲದು ನಿಮ್ಮ ಮಾತು. ನಿಲ್ಲಿ ನಿಲ್ಲಿ. ಬಲ್ಲಿದ ನಡೆದುದೇ ಬಟ್ಟೆ. ಮಹಾಲಿಂಗ ಕಲ್ಲೇಶ್ವರನಲ್ಲಿ ಲಿಂಗಾಚಾರಿಗಳು ನಿಸ್ಸೀಮರು.

೨೫. ಶಿವ ತನ್ನ ನಿಜರೂಪನನ್ನು ಸದ್ಭಕ್ತರಿಗಲ್ಲದೆ ತೋರನೆಂದುದು ವೇದ. ಆ ಸದ್ಭಕ್ತನೇ ಬ್ರಾಹ್ಮಣ. ಆ ಸದ್ಭಕ್ತನೇ ಸತ್ಕುಲಜ. ಆ ಸದ್ಭಕ್ತನೇ ಎಲ್ಲರಿಗಿಂದಧಿಕನೆಂದು ಶ್ರೀ ರುದ್ರ ವೇದ ಬೊಬ್ಬಿಡುತ್ತಿದೆ॥ ಯಾತೆ ರುದ್ರ ಶಿವಾತನೂರಘೋರಾ ಪಾಪ ನಾಶಿನೀ ತಯಾನಸ್ತನು ವಾಶಂತಮಯಾ ಗಿರಿ ಶಂತಾಭಿಚಾಕಶೀಃ। ಯಾಮಿ ಷುಂಗಿರಿ ಶಂತಹಸ್ತೆಬಿ ಭರ್ಷ್ಯಸ್ತವೆ॥ ಎಂದುದಾಗಿ ಶಿವಲಿಂಗ ಭಕ್ತನಲ್ಲದೆ ಅತಃಪರ ಒಂದೂ ಇಲ್ಲ ಕೇಳಿ ಭೋ! ಯಜುರ್ವೇದ ಶೃತಿಯು ವಿಚಾರಿಸಿ ನೋಡಿರಣ್ಣ. ಓಂ ಸಂಪದ ಸ್ತ್ರೈರ್ದ್ಯಾರ್ವಾಭೂಮಿ ಜನಯನ್ದೇವ ಎಂದುದಾಗಿ॥ ಶೈವಪುರಾಣೆ॥ ಶ್ಲೋ॥ ಯಥಾಪಂಕೆ ಸರೊಜಂಚ ಯಥಾಕಾಷ್ಠೆಹುತಾಶನಃ। ಯಥಾಸುವರ್ಣಂ ಪಾಷಾಣೆ ಭಕ್ತಶ್ಚಾಂಡಾಲ ವಂಶಜಃ॥ ವುತ್ತಂ ಲೈಂಗ್ಯೆ॥ ಶಿವದೀಕ್ಷಾಭಿಜಾತಸ್ಯ ಪೂರ್ವ ಜಾತಿಂ ನ ಚಿಂತಯೇತ್। ಸುಪ್ರತಿಷ್ಠಿತ ಲಿಂಗೆ ತು ನ ಯಥಾಪೂರ್ವಭಾವನಂ ಇಂತೆಂದು ಪುರಾಣ ವಾಕ್ಯಂಗಳು ಸಾರುತ್ತಿವೆ. ಶಿವಲಿಂಗ ಭಕ್ತನೇ ಶ್ರೇಷ್ಠನು. ಶ್ವಪಚನಾದಡೆಯೂ ಆ ಲಿಂಗಭಕ್ತನೇ ಕುಲಜನು. ಆ ಲಿಂಗಭಕ್ತನೇ ಉತ್ತಮನಯ್ಯಾ ಮಹಾಲಿಂಗ ಕಲ್ಲೇಶ್ವರಾ.

೨೬. ಅಯ್ಯಾ ವಿಪ್ರರೆಂಬವರು ಮಾತಂಗಿಯ ಮಕ್ಕಳೆಂಬುದಕ್ಕೆ ಇದೇ ದೃಷ್ಟ. ಮತ್ತೆ ವಿಚಾರಿಸಿ ಕೇಳಿದಡೆ ಹೇಳುವೆನು. ಬಡಗಿ ಮಾಚಲಿ ದೇವಿಯ ಕುಲಜೆಯ ಮಾಡಿಹೆವೆಂದು ಕಡಿದು ಹಂಚಿ ತಿಂದರಂದು ಗೋಮಾಂಸವ ಬಿಡದೆ. ಅತ್ಯಂತ ಯಜ್ಞಕ್ರತುವೆಂದು ಹೋತನೇ ಕೊಂದು ಕಡಿದು ಭಕ್ಷಿಸಿದುದ ಕಂಡು, ಮಿಕ್ಕ ಹದಿನೇಳು ಜಾತಿಗಳು ಈ ವಿಪ್ರರ ಕೈಯ್ಯಲನುಗ್ರಹವ ಪಡೆದು ತಿನಕಲಿತರಯ್ಯ, ॥ ಶ್ಲೋಕ ॥ ಶ್ವಪಚೋಪಿ ಸನೋವಿಪ್ರಜಾತಿ ಭೇದಂ ನಕಾರಯೇತ್ ಅಜಹತ್ಯೆ ಪದೆಸೇವಾಂ ವರ್ಣಾನಾಂ ಬ್ರಾಹ್ಮಣೋ ಗುರುಃ। ಎಂದುದಾಗಿ ಕಿರಿದನು ತಿಂಬ ದ್ವಿಜರು ವೈಕುಂಠಕ್ಕೆ ಹೋಹರೆ? ಭರ್ಗೋದೇವಸ್ಯ ಧೀಮಹಿ ಎಂಬ ದಿವ್ಯ ಮಂತ್ರವನೋದಿ, ನಿರ್ಬುದ್ಧಿಯಾದಿರಿ. ಶಿವಪಥವನರಿಯದೆ ನರಕಕ್ಕೆ ಭಾಜನರಾದಿರಿ. ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಶರಣಂಗೆ ಸರಿಯೇ ಜಗದನ್ಯಾಯಿಗಳು?

---

## ವಿವರಣೆ.

ನಿಷ್ಠೆಯು ಮಹೇಶ್ವರ ಸ್ಥಲದ ಮುಖ್ಯ ವೈಶಿಷ್ಟ್ಯವು. ಅತ್ಯನ್ನತವಾದ ನಂಬಿಗೆಯಿಂದ ಆಚರಿಸುವದೇ ನಿಷ್ಠೆ ಎನಿಸುವದು. ಆತ್ಮಪ್ರಗತಿಯ ಕಾರ್ಯದಲ್ಲಿ ಇಂಥ ನಂಬಿಗೆಯು ಅತ್ಯಾವಶ್ಯಕವು. ಇಲ್ಲದಿದ್ದರೆ ಮನುಷ್ಯನು ಚಂಚಲನಾಗಿ ಆವ ಕಾರ್ಯಗಳನ್ನೂ ಮಾಡಲಾರನು.

ಆದರೆ ಪರಮಾತ್ಮನನ್ನು ಒಲಿಸಿಕೊಳ್ಳಬೇಕಾದರೆ ತಾನು ಆವನನ್ನು ಮೊದಲು ಪ್ರೀತಿಸಬೇಕು. ಹೀಗೆ ಪ್ರೀತಿಸದಿದ್ದರೆ ಅವನು ಒಲಿಯನು. ಆದರೆ ಈ ಪ್ರೀತಿಯು ನಿಶ್ಚಲವಾಗಿರಬೇಕು. ಅವನಲ್ಲಿ ಹೀಗೆ ನಿಶ್ಚಲತ್ವವಿದೆಯೋ ಹೇಗೆಂಬುದನ್ನು ಪರಮಾತ್ಮನು ಮೊದಲು ಪರೀಕ್ಷಿಸುತ್ತಾನೆ. ಅವನು ಭಕ್ತನನ್ನು ಅನೇಕ ಸಂಕಟಗಳಿಗೆ ಗುರಿಮಾಡುವನು. ಅವುಗಳನ್ನು ಭಕ್ತನು ಅಂಜದೆ ಎದುರಿಸಿದರೆ, ಪರಮಾತ್ಮನು ಆವನಿಗೆ ಒಲಿಯುವನು. ಇಷ್ಟೇ ಅಲ್ಲ, ತನ್ನನ್ನೇ ಆವನ ಕಯ್ಯಲ್ಲಿ ಕೊಟ್ಟು ಬಿಡುವನು. (೧೮)

ಹೀಗೆ ಬರುವ ಕಷ್ಟಪರಂಪರೆಗಳು ನಿಜವಾದವುಗಳಲ್ಲ. ಅವು ಮಾಯಾವಶದಿಂದಲೂ ಬರುವದುಂಟು. ಅವು ಕ್ಷಣಿಕವಾದವುಗಳು. ಅವುಗಳಿಗೊಳಗಾಗಿ ಭಕ್ತನು ನರಳುತ್ತ ಕುಳ್ಳಿರತಕ್ಕದಲ್ಲ. ಶರಣರು ನಿಜವಾದ ಕಲಿಗಳಾಗಿ ಆಚರಿಸಬೇಕು. (೧೯)

ಆದರೆ ಇಂಥ ಕಲಿತನವು ಮಲತ್ರಯಗಳನ್ನು ಬಿಟ್ಟರೆ ಮಾತ್ರ ಎಡೆಗೊಳ್ಳುವದು. ಭಕ್ತನು ಉತ್ತಮವಾದುದನ್ನೂ ಕೆಡುಕಾದುದನ್ನೂ ಏಕಕಾಲದಲ್ಲಿ ಆಚರಿಸುವದಿಲ್ಲ. ಭೃಂಗವು ಒಂದೇ ಬಾಯಿಂದ ಮಲವನ್ನು ಬಿಡುತ್ತಿದೆ. ಸವಿಯನ್ನು ತಿನ್ನುತ್ತಿದೆ. ಆದರೆ ಮನುಷ್ಯನು ಹಾಗೆ ಆಚರಿಸಬಾರದು. ಅವನು ತೊಟ್ಟುಬಿಟ್ಟ ಪಕ್ವವಾದ ಹಣ್ಣಿನಂತಿರಬೇಕು. ಇಂಥ ಹಣ್ಣು ತನ್ನ ಪೂರ್ವಸ್ಥಲವನ್ನು ಹೊಂದಲಾರದು. ಹಾಗೆಯೇ ಭಕ್ತನು ಮಾಯಾ ಪಾಶವನ್ನು ಬಿಟ್ಟ ಬಳಿಕ ಪುನಃ ಅದರಿಂದ ಕಟ್ಟುವಡೆಯಬಾರದು. ಈ ತರದ ಪರಿಸ್ಥಿತಿಯು ಸಮರ್ಪಣ ಭಾವದಿಂದ ಒದಗುವದು. (೨೦)

ಸಮರ್ಪಣ ಭಾವವುಳ್ಳವನಲ್ಲಿ ಲಿಂಗವು ಸದಾ ನೆಲೆಗೊಳ್ಳುವದು. ಅಂತಹ ಲಿಂಗವು ಸಂಚಲಿಸದು. ಈ ಲಿಂಗವಿದ್ದಲ್ಲಿ ಕರ್ಮಗಳು ಬಿಟ್ಟೋ

ಡುವವು. ಭವವು ದೂರಾಗುವನು. ಕರ್ಪೂರಕ್ಕೆ ಉರಿಯು ಹತ್ತಿದಂತೆ ಅವನಲ್ಲಿ ಪರಿಶುದ್ಧವಾದ ಜ್ವಾಲೆಯು ಹೊರಹೊಮ್ಮುವದು. ಇಂಥವನಿಗೆ ಜಡ ಕರ್ಮಗಳು ಹತ್ತಲಾರವು. (೨೧)

ಹೀಗೆ ಲಿಂಗಭರಿತನಾದ ಭಕ್ತನೇ ದೇವನೆಂದು ಭಾವಿಸಬೇಕು. ಅವನು ಚಾಂಡಾಲನಾದರೂ ಸತ್ಕುಲವುಳ್ಳವನು. ಲಿಂಗದ ಪ್ರಸಾದವನ್ನು ಅವನು ಭೋಗಿಸುವದರಿಂದ ಲಿಂಗ ಶಕ್ತಿಯು ಅವನಲ್ಲಿ ವಾಸಿಸುತ್ತದೆ. ಇದನ್ನು ತಿಳಿಯದೆ ನಿಜವಾದ ಭಕ್ತಿಯನ್ನು ಆಚರಿಸದೆ ಮನುಜರು ವ್ಯರ್ಥವಾಗಿ ಜೀವಿಸುತ್ತಾರೆ. (೨೨)

ಜಾತಿ ಎಂಬುದು ಇರುವದಿಲ್ಲ. ಜನ್ಮಮಾತ್ರದಿಂದ ಉಗಮಿಸಿದ ಅದು ಚಿರಕಾಲವಿರದು. ಕ್ಷೇತ್ರವು ಹೆಚ್ಚೋ, ಬೀಜವು ಹೆಚ್ಚೋ ಎಂಬುದನ್ನು ವಿಚಾರಿಸಿದಲ್ಲಿ ಬೀಜವೇ ಮಹತ್ವವಾದುದೆಂಬದು ಗೊತ್ತಾಗದೆ ಇರದು. ಕ್ಷೇತ್ರವನ್ನು ಕೃತ್ರಿಮ ಉಪಾಯಗಳಿಂದ ಪರಿಶುದ್ಧಮಾಡಬಹುದು. ಹಾಗೆಯೇ ಹುಟ್ಟು ಹೇಗಿದ್ದರೂ ಯುಕ್ತ ಕ್ರಿಯೆಗಳಿಂದ ಉತ್ತಮ ವರ್ಣದವನಾಗಬಹುದು. ಬ್ರಾಹ್ಮಣ ಕರ್ಮಗಳನ್ನು ಮಾಡಿ ಪೂರ್ವದ ಅಕುಲವನ್ನು ಕಳೆಯಬಹುದು. ಶಿವಜ್ಞಾನದಿಂದ ಕುಲಹೀನತೆಯು ದೂರಾಗುತ್ತದೆ. ಸದ್ಗುರುವಿನಿಂದ ಜ್ಞಾನವನ್ನು ಪಡೆದು ವರ್ತಿಸಿದಲ್ಲಿ ಪುನರ್ಜಾತನಾಗುವನು. ಇಂತವನು ಅಜಾತನೆಂದೆನಿಸಿಕೊಳ್ಳುತ್ತಾನೆ. ಆದರೆ ಹುಟ್ಟು ಎಷ್ಟು ಉಚ್ಚತರದ್ದಿದ್ದರೂ ಸಂಸ್ಕೃತಿಯು ಸರಿಯಾಗಿರದಿದ್ದರೆ ಅದರಿಂದ ಉತ್ತಮ ಕುಲವಂತನೆನಿಸಿಕೊಳ್ಳಲಾರನು. ಕ್ಷೇತ್ರವು ಸರಿಯಾಗಿದ್ದರೂ ಕೂಡ ಅದಕ್ಕೆ ಬೀಜವು ಉತ್ತಮವಾಗಿರಬೇಕು. ಇಲ್ಲದಿದ್ದರೆ ಅದರಿಂದ ಪ್ರಯೋಜನವಿಲ್ಲ. (೨೩)

ಬಾಹ್ಯ ಕ್ರಿಯೆಗಳನ್ನು ಬೋಧಿಸುವ ವೇದಾಗಮಗಳಿಂದ ಆವ ಪ್ರಯೋಜನವಿಲ್ಲ. ಭಕ್ತಿ ಇದ್ದಲ್ಲಿ ಇಂಥ ಪರಿಸ್ಥಿತಿಯು ದೂರಾಗುತ್ತದೆ. ಕಕ್ಕಯ್ಯನು ಘೋರರವನು. ಆದರೆ ಅವನ ಮುಂದೆ ತರ್ಕವು ನಿಂತಿತು. ಅನೇಕ ಶರಣರು ಪರಮಾತ್ಮನನ್ನು ಕಾಲಿಲೊದ್ದು, ಕಲ್ಲಿಲಿಟ್ಟು ಪೂಜಿಸಿದರು. ಇದಾವ ಆಗಮವಿಧಿ? ಆದರೆ ಭಕ್ತನು ಬಲ್ಲಿದನು. ಅವನು ನಡೆದುದೇ ಬಟ್ಟೆ. ಆದುದರಿಂದ ಅವರು ಪರಮಾತ್ಮನನ್ನು ಒಲಿಸಿದರು. (೨೪)

ಅನೇಕರು ತಾವು ಬ್ರಾಹ್ಮಣರು ತಾವು ಬ್ರಾಹ್ಮಣರೆಂದು ಹೆಮ್ಮೆ ಯಿಂದ ನುಡಿಯುತ್ತಾರೆ. ಆದರೆ ಸದ್ಭಕ್ತರೇ ನಿಜವಾದ ಬ್ರಾಹ್ಮಣರು. ಈ ವಿಧಾನಕ್ಕೋಸ್ಕರ ಅನೇಕ ಶೃತಿ ಪ್ರಮಾಣಗಳಿವೆ. ಆದ್ದರಿಂದ ಶಿವಲಿಂಗ ಭಕ್ತನೇ ಕುಲಜನು, ಉತ್ತಮನು. (೨೫)

ಜನರು ಹೊಲೆಯರು, ಹೊಲೆಯರು ಎಂದೆನ್ನುತ್ತಾರೆ ಆದರೆ ವಿಪ್ರರೇ ನಿಜವಾದಹೊಲೆಯರು. ಯಾಕಂದರೆ ಒಬ್ಬಳನ್ನು ಕುಲಜೆಯಾಗಿ ಮಾಡುವೆವೆಂದು ಗೋಮಾಂಸವನ್ನು ಕಡಿಕಡಿದು ತಿನ್ನುತ್ತಾರೆ. ಹೋತನೇ ಕೊಲ್ಲುತ್ತಾರೆ. ಇವರು ಎಂದಾದರೂ ವೈಕುಂಠಕ್ಕೆ ಹೋಗಬಲ್ಲರೇ? ಇವರು ಶ್ರೇಷ್ಠವಾದ ಗಾಯತ್ರೀ ಮಂತ್ರವನ್ನು ಪಠಿಸುತ್ತಾರೆ. ಆದರೆ ಶಿವಪಥವನ್ನರಿಯರು. ಆದುದರಿಂದ ಶಿವಶರಣರೇ ಜಗತ್ತಿನಲ್ಲಿ ಮಿಗಿಲಾದವರು. (೨೬)

---

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

---

ರಾ॥ ಸಾ॥ **ಫ. ಗು. ಹಳಕಟ್ಟಿ**ಯವರು ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

---

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ **"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

---

R. N. B 2554

ಶ್ರೀ




ಸಂಪುಟ ೧೩ ] ಮೇ—ಜೂನ ೧೯೩೯. [ ಸಂಚಿಕೆ ೮—

## ವಿಷಯಾನುಕ್ರಮಣಿಕೆ.

# ಚಂದಾದಾರರಿಗೆ ಸೂಚನೆ.



ಮೇ ತಿಂಗಳಲ್ಲಿ ಹೊರಡಬೇಕಾಗಿದ್ದ ಶಿವಾನುಭವ ಮಾಸಪತ್ರಿಕೆಯನ್ನು ಪ್ರೆಸ್ಸಿನ ವಿಶೇಷ ಕೆಲಸಗಳ ಮೂಲಕ ಸಕಾಲಕ್ಕೆ ಹೊರಡಿಸುವದಾಗಲಿಲ್ಲ. ಈಗ ತಮ್ಮ ಹಸ್ತಗತವಿರುವ ಸಂಚಿಕೆಯು ಮೇ ಮತ್ತು ಜೂನ ಈ ಎರಡು ತಿಂಗಳುಗಳ ೮-೯ ಈ ಸಂಯುಕ್ತ ಸಂಚಿಕೆಗಳಿಂದ ಕೂಡಿಕೊಂಡಿರುತ್ತದೆ. ಈ ಎರಡು ಸಂಚಿಕೆಗಳಲ್ಲಿ ನಮ್ಮ ಶಿವಾನುಭವ ಕ್ರಮದಂತೆ ೧೨೮ ಪುಟಗಳ ವಿಷಯವು ಬರಬೇಕಾಗಿದ್ದಿತು. ಆದರೆ ಈಗ ೯೬ ಪುಟಗಳನ್ನು ಸೇರಿಸಿರುತ್ತೇವೆ. ಇನ್ನು ಕಡಿಮೆ ಬಿದ್ದ ೩೨ ಪುಟಗಳನ್ನು ಮುಂದಿನ ಸಂಚಿಕೆಯಲ್ಲಿ ಅಂದರೆ ಜುಲೈ ಸಂಚಿಕೆಯಲ್ಲಿ ಜೋಡಿಸಿ ಕಳಿಸುವೆವು. ಇನ್ನು ಮುಂದಿನ ಸಂಚಿಕೆಗಳು ಎಂದಿನಂತೆ ಸಕಾಲಕ್ಕೆ ಹೊರಡಿಸಲ್ಪಡುವವು. ಇಡೀ ಕನ್ನಡ ನಾಡಿನಲ್ಲಿ ಒಂದೇ ಒಂದಾದ ವೀರಶೈವ ಮಹತ್ವದ ವಾಙ್ಮಯವನ್ನು ಬೆಳಕಿಗೆ ತರುವ ಈ ಮಾಸಪತ್ರಿಕೆಯ ಬಗ್ಗೆ ಯಾವಾಗಲೂ ಪ್ರೇಮಾಭಿಮಾನಗಳನ್ನು ತೋರಿಸುತ್ತಿರಬೇಕೆಂದು ನಾವು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇವೆ. ಮುಂದಿನ ಸಂಚಿಕೆಯಲ್ಲಾದರೂ ಅನೇಕ ಹೊಸ ಐತಿಹಾಸಿಕ ಲೇಖಗಳು ಪ್ರಕಟಿಸಲ್ಪಡತಕ್ಕವಿರುತ್ತವೆ. ಆದ್ದರಿಂದ ವಾಚಕರು ತಮ್ಮ ಈ ಕಾರ್ಯದಲ್ಲಿ ಯಾವಾಗಲೂ ನಮ್ಮನ್ನು ಪ್ರೋತ್ಸಾಹಿಸುತ್ತಿರಬೇಕೆಂದು ಅಪೇಕ್ಷಿಸಿರುತ್ತೇವೆ.

ಮ್ಯಾನೇಜರ.

**ಶಿವಾನುಭವ ಆಫೀಸು**

**ವಿಜಾಪುರ.**

# ಶಿವಾನುಭವ.

ವರ್ಷ ೧೩]　　ಮೇ ಜೂನ ೧೯೩೯　　[ಸಂಚಿಕೆ ೮೯

## ರುದ್ರಮುನಿಯು ಚರಿತ್ರೆ.

(ಲೇಖಕ:— ರಾ|| ಸಾ|| ಫ. ಗು. ಹಳಕಟ್ಟಿ ಬಿ. ಎ. ಎಲ್ ಎಲ್. ಬಿ.)

### ಜನನ.

ರುದ್ರಮುನಿಯು ರೇವಣಸಿದ್ಧೇಶ್ವರನ ಮಗನು. ರೇವಣಸಿದ್ಧೇಶ್ವರನು ಕಂಚೀ ಪಟ್ಟಣದಲ್ಲಿದಾಗ್ಗೆ ಅವನು ಚೋಳ ರಾಜನ ಪುತ್ರಿಯನ್ನು ಲಗ್ನವಾಗಿದ್ದನೆಂಬ ಐತಿಹ್ಯವಿದ್ದು ರುದ್ರಮುನಿಯು ಆಕೆಯಿಂದ ಉದಯಿಸಿ ಮುಂದೆ ಬಹು ಪ್ರಖ್ಯಾತನಾದನು. ರೇವಣಸಿದ್ಧೇಶ್ವರನು ತರ್ದವಾಡಿ (ವಿಜಾಪುರ) ನಾಡಿನಲ್ಲಿ ವಾಸಿಸಿದ್ದಾಗ್ಗೆ ಇಲ್ಲಿಯೇ ರುದ್ರಮುನಿಯು ಜನ್ನಿಸಿದನೆಂದು ತೋರುತ್ತದೆ. ಇಲ್ಲಿ ರೇವಣಸಿದ್ಧನು ಸಿದ್ಧನಕೆರೆ ಎಂಬ ಕೆರೆಯನ್ನು ಕಟ್ಟಿಸುತ್ತಿರುವಾಗ್ಗೆ ಅವನು ಅಲ್ಲಿ ಉದಯವಾದನು. ಈ ಎಲ್ಲ ಸಂಗತಿಗಳನ್ನು ನಾನು ರೇವಣಸಿದ್ಧೇಶ್ವರನ ಚರಿತ್ರೆಯನ್ನು ಬರೆಯುವಲ್ಲಿ ಶಿವಾನುಭವ ಸಂಚಿಕೆ ೫ ಇದರಲ್ಲಿ ಚರ್ಚಿಸಿದ್ದೇನೆ.

ರೇವಣಸಿದ್ಧೇಶ್ವರನ ಚರಿತ್ರೆಯನ್ನು ಮಹಾಕವಿ ಹರಿಹರನು ತನ್ನ ರಗಳೆಯಲ್ಲಿ ಬರೆದಿದ್ದಾನೆ. ಅವನ ಸೋದರಳಿಯನಾದ ರಾಘವಾಂಕನು ಸಹ ತನ್ನ ಸಿದ್ಧರಾಮೇಶ್ವರ ಪುರಾಣದಲ್ಲಿಯೂ ಅವನ ಬಗ್ಗೆ ಉಲ್ಲೇಖಿಸಿದ್ದಾನೆ. (೧ನೇ ಸಂಧಿ-ಶ್ಲೋಕ ೩೪ರಿಂದ ೩೭ ನೋಡಿರಿ.) ರಾಘವಾಂಕನು ಅವನ ವಿಷಯವಾಗಿ ಅದರಲ್ಲಿ ವಿವರಿಸುವದೇನಂದರೆ:— "ರೇವಣಸಿದ್ಧನು ಸಿದ್ಧಕುಲಚಕ್ರೇಶ್ವರನೆನಿಸಿಕೊಂಡು ಅಪ್ರತಿಮ ಗುರುವಾಗಿ ಸೊನ್ನಲಾಪುರದ ಊರ ಸೀಮೆಯಲ್ಲಿ ಬಂದಿಳಿದನು. ಅವನು ಆ ಪಟ್ಟಣದಲ್ಲಿ

ಬರುವ ಪೂರ್ವದಲ್ಲಿ ತನ್ನ ಹಾವುಗೆಗಳನ್ನು ಬದಿಗಿಟ್ಟು ಪಟ್ಟಣವನ್ನು ನಮಸ್ಕರಿಸಿ ಪುಳುಕಿತನಾಗಲು ಅವನ ಶಿಷ್ಯರು ಅವನನ್ನು ಕುರಿತು ಇಲ್ಲಿ ಯಾವ ಮಹತ್ವದ ದೇವಗೃಹಗಳಿಲ್ಲ, ತೀರ್ಥಗಳಿಲ್ಲ, ಇಂಥಲ್ಲಿ ನೀವು ಹೀಗೇಕೆ ವರ್ತಿಸಿದಿರೆಂದು ಕೇಳಲು, ಇಲ್ಲಿ ಒಬ್ಬ ಶಿವಸಿದ್ಧನು ಜನಿಸುವನು. ಆತನಿಂದ ಇದು ಲಿಂಗದ ಬೀಡಾಗುವದು, ಸಿರಿಗೆ ಮನೆಯಾಗುವದು, ಮುಕ್ತಿಗೆ ಕ್ಷೇತ್ರವಾಗುವದು, ಹೀಗೆ ಈ ಸೊನ್ನಲಿಗೆಯು ಮೆರೆಯುವದು" ಎಂದು ತಿಳಿಸಿದನು. ಈ ಪ್ರಕಾರ ರಾಘವಾಂಕನು ತನ್ನ ಚರಿತ್ರೆಯಲ್ಲಿ ರೇವಣಸಿದ್ಧನ ವಿಷಯವಾಗಿ ಬರೆದಿರುತ್ತಾನೆ. ಇದೇ ಸಂದರ್ಭವನ್ನು ಹರಿಹರನು ತನ್ನ ರೇವಣಸಿದ್ಧೇಶ್ವರನ ರಗಳೆಯಲ್ಲಿಯೂ ವರ್ಣಿಸಿ ರುದ್ರಮುನಿಯ ಬಗ್ಗೆ ಸಹ ಉಲ್ಲೇಖಿಸಿದ್ದಾನೆ. ಅದು ಹೇಗೆಂದರೆಃ—

ಎಂದೊಲಿದು ನಡೆತಂದು ಮುದ್ದುಗೌಡನ ಮನೆಗೆ
ನಿಂದು ಭಿಕ್ಷೆಯನಾಂತು ಕೈಕೊಂಡು ಕೃಪೆ ಬೆಳಗೆ
ಸುಗ್ಗಗೌಡಿಯು ಮೆರೆವ ಪುಣ್ಯೋದರದಲ್ಲಿ
ಅಗ್ಗಿಸುತ್ತಂ ಮುಟ್ಟೆ ಭಸಿತಮಂ ಇಡುತಲ್ಲಿ
ಸೇನೆಯಂ ರುದ್ರಮುನಿದೇವರಂ ನೋಡುತಂ
ಮಾನಿ ಚಾಮಲದೇವಿಗಾಗಳಪ್ಪೈಸುತಂ

ಎಂದು ಹೇಳುತ್ತಾನೆ. ಮುಂದೆ ರೇವಣಸಿದ್ಧನು ಸೊಲ್ಲಾಪುರದಿಂದ ಆಕಾಶ ಮಾರ್ಗದಿಂದ ಕೊಲ್ಲಿಪಾಕಿಗೆ ಹೋಗಿ ಸೋಮನಾಥನಲ್ಲಿ ಐಕ್ಯನಾಗುತ್ತಾನೆ.

ಇದರ ಮೇಲಿಂದ ರೇವಣಸಿದ್ಧೇಶ್ವರನು ಸೊನ್ನಲಿಗೆಯಲ್ಲಿ ರುದ್ರಮುನಿಯೊಡನೆ ಬಂದಿದ್ದನೆಂದು ತಿಳಿಯುತ್ತದೆ.

## ರುದ್ರಮುನಿಗೆ ಶೈವಾಚಾರ್ಯ ಸ್ಥಾನ.

ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿ ಇದ್ದಾಗ್ಗೆ ರುದ್ರಮುನಿಯು ಅತ್ಯಂತ ಜ್ಞಾನಿಯಾಗಿ ಉನ್ನತ ಸ್ಥಾನವನ್ನು ಪಡೆದಿದ್ದನೆಂದು ತೋರುತ್ತದೆ. ರೇವಣಸಿದ್ಧೇಶ್ವರನು ರುದ್ರಮುನಿಗೆ ೬ನೇ ವರ್ಷದಲ್ಲಿ ಶೈವೋಪದೇಶವನ್ನು ತಾನೇ ಕರುಣಿಸಿ ಅವನಿಗೆ ಪರಮ ಸ್ವರೂಪ ಜ್ಞಾನವನ್ನು ಬೆಸಸುತ್ತ ಇದ್ದನೆಂದು ಹರಿಹರನು ತನ್ನ ರಗಳೆಯಲ್ಲಿ ಹೇಳಿದ್ದಾನೆ.

(ಪುಟ ೩೮ ನೋಡಿರಿ.) ಮತ್ತು ಅವನು ಹಾವಿನಹಾಳ ಗ್ರಾಮಕ್ಕೆ ಹೋದ ಕಾಲದಲ್ಲಿ ಅಲ್ಲಿಯೂ ರುದ್ರಮುನಿಯ ವಿಷಯವು ಬರುತ್ತದೆ. ಆಗ ಅಲ್ಲಿಯ ಕಲ್ಲಯ್ಯನು ತನಗೆ ಉಪದೇಶ ಮಾಡಲು ಕೇಳಿಕೊಳ್ಳಲು ರೇವಣಸಿದ್ಧನು ಹೇಳಿದ್ದು ಏನೆಂದರೆ:—

ಏಳಯ್ಯ ನಿನ್ನಯ ಮನೋರಥವನೀವೆನೆನೆ
ಏಳ್ವ ಕೈಮುಗಿದಿರ್ದ ಕಲ್ಲಯ್ಯನಂ ಕಂಡು
ತಾಳ್ದು ಕಾರುಣ್ಯಮಂ ಭಕ್ತಿಗೆ ಮನಂಗೊಂಡು
ರುದ್ರಮುನಿದೇವನಿಂ ಕರುಣಮಂ ಮಾಡಿಸುತೆ
ರುದ್ರನಣುಗಂ ಶೈವದೀಕ್ಷೆಯಂ ನೀಡಿಸುತೆ
(ಪುಟ ೪೦)

ಈ ಪ್ರಕಾರ ರೇವಣಸಿದ್ಧೇಶ್ವರನು ತನ್ನ ಮಗ ರುದ್ರಮುನಿಯಿಂದಲೇ ಹಾವಿನಹಾಳ ಕಲ್ಲಯ್ಯನಿಗೆ ಶಿವದೀಕ್ಷೆಯನ್ನು ಕೊಡಿಸಿದನೆಂದು ಇಲ್ಲಿ ಹೇಳಲ್ಪಟ್ಟಿದೆ.

ಹಾವಿನಹಾಳ ಕಲ್ಲಯ್ಯನ ರಗಳೆಯಲ್ಲಿಯೂ ರುದ್ರಮುನಿಯ ವರ್ಣನೆಯು ಇದೇ ಪ್ರಕಾರ ಇದೆ. ಅದು ಹೇಗೆಂದರೆ—

ಸಿದ್ಧರೇವಣದೇವನ ಮಗನೆಂದೆನಿಸಿರ್ದ
ಉದ್ಧತಜ್ಞಾನಿ ಶೈವಾಚಾರ್ಯನೆನಿಸಿರ್ದ
ರುದ್ರದೇವಂ ನಿನಗೆ ಗುರುವಾಗಿ ಸಂದಪಂ
ಭದ್ರಗುಣನಾನಂದದಿಂದಲ್ಲಿ ಬಂದಪಂ
(ಪುಟ ೭೫)

ಈ ಪ್ರಕಾರ ರುದ್ರಮುನಿಯು ಉದ್ಧತ ಜ್ಞಾನಿಯೂ ಶೈವಾಚಾರ್ಯನೂ ಆಗಿದ್ದನೆಂದು ಇಲ್ಲಿ ವರ್ಣಿಸಲ್ಪಟ್ಟಿರುತ್ತಾನೆ.

ಮುಂದೆ ಪುಟ ೭೭ ರಲ್ಲಿ ಕಲ್ಲಯ್ಯನು ತನಗೆ ಒಬ್ಬ ಗುರುವನ್ನು ಕರುಣಿಸುವುದೆಂದು ಕೇಳಿಕೊಳ್ಳಲು, ರೇವಣಸಿದ್ಧನು

ಮುಂದಿರ್ದ ರುದ್ರಮುನಿದೇವರಂ ಪರಿಕಿಸುತ
ಮಗನೆ ಕಲ್ಲಯ್ಯಂಗೆ ಗುರುವಾಗು ಪೋಗಯ್ಯ
ಬಗೆಗೆ ವೆಗ್ಗಳವಾದ ಮಾಯೆಯಂ ನೀಗಯ್ಯ

ಎಂದಲ್ಲಿ ರುದ್ರಮುನಿದೇವರಂ ಕಳಿಸುತಿರೆ
ಬಂದನಾ ಕಲ್ಲಿನಾಥಂ ಮನದೊಳೆಳಿಸುತ್ತಿರೆ

ಆಗ ರುದ್ರಮುನಿಯು ಪಂಚಕಲಶಸ್ಥಾಪನೆಯನ್ನು ಮಾಡಿ ಕಲ್ಲಯ್ಯನಿಗೆ ದೀಕ್ಷೆಯನ್ನು ಕೊಡುತ್ತಾನೆ. ಅದು ಹೇಗೆಂದರೆಃ—

ರಂಗಮಂಟಪದೊಳಗೆ ಶಿವಕಲಶಮುಮನಿರಿಸಿ
ಪಿಂಗದೊಲವಿಂ ಪಂಚಶುದ್ಧಿಯಂ ಸಂಗಡಿಸಿ
ಸುರುಚಿರವಿಭೂತಿಯಂ ಶಿವಪಟ್ಟಮಂ ಕಟ್ಟಿ
ಶರಣಸಂತತಿಯೊಲ್ದು ಸಂತೋಷಮಂ ಮುಟ್ಟಿ
ಗುರುಕಲಶದೊಡನೆ ಶಿವಕಲಶಂಗಳಂ ಪಿಡಿದು
ಪರಮಾನುರಾಗದಿಂ ಕಲಶೋದಕವನೆರೆದು
ಇಂತು ಗುರುರುದ್ರಮುನಿದೇವ ಬಿಜಯಂಗೆಯ್ಯೆ
ಪಿಂತೆ ಕಲ್ಲಯ್ಯನಾ ಶೈವರಾಜ್ಯಂಗೆಯ್ಯೆ
ಗುರುಹಸ್ತದಿಂ ಪಿಡಿಯೆ ಲಘುವಳಿದು ಗುರುವಾಗಿ
ಉರುತರಜ್ಞಾನಮಯನಾಗಿ ಸುಖತರವಾಗಿ

(ಪುಟ ೭೭)

ಈ ಪ್ರಕಾರ ಪಂಚಕಲಶ ವಿಧಾನಪೂರ್ವಕವಾಗಿ ರುದ್ರಮುನಿಯು ಹಾವಿನಹಾಳ ಕಲ್ಲಯ್ಯನಿಗೆ ದೀಕ್ಷೆಯನ್ನು ಕೊಡುತ್ತಾನೆ. ಇಲ್ಲಿ ಪಂಚ ಕಲಶಗಳು ಈಶ್ವರನ ಪಂಚಮುಖಗಳೆಂದು ವರ್ಣಿಸಲ್ಪಟ್ಟಿವೆ.

ಈ ಪ್ರಕಾರ ರುದ್ರಮುನಿಯು ರೇವಣಸಿದ್ಧೇಶ್ವರನಿರುವಾಗಲೇ ಮಹತ್ವದ ಸ್ಥಾನವನ್ನು ಹೊಂದಿದ್ದನೆಂದು ತಿಳಿಯುತ್ತಿದೆ. ಅವನು ರೇವಣಸಿದ್ಧೇಶ್ವರನೊಡನೆ ತರ್ದೆವಾಡಿ ಸೀಮೆಯಲ್ಲಿ ಬಹು ದಿವಸಗಳ ವರೆಗೆ ವಾಸ ಮಾಡಿರಲಿಕ್ಕೆಬೇಕು. ಮತ್ತು ಅವನೊಡನೆ ಇಲ್ಲಿ ಆಗಿಂದಾಗ್ಗೆ ಸಂಚಾರ ಮಾಡುತ್ತಿರಲಿಕ್ಕೆಬೇಕು. ಮತ್ತು ಶೈವಾಚಾರ್ಯನೆಂತಲೂ ಇಲ್ಲಿ ಪ್ರಸಿದ್ಧಿ ಹೊಂದಿದನು.

ಆದರೆ ರುದ್ರಮುನಿಯು ರೇವಣಸಿದ್ಧೇಶ್ವರನೊಡನೆ ಕೊಲ್ಲಿಪಾಕಕ್ಕೆ ಹೋಗದೆ ತರ್ದೆವಾಡಿ ಸೀಮೆಯಲ್ಲಿಯೇ ಉಳಿದನು. ಅವನು ಬಹುಶಃ ಮಂಗಳವಾಡ ಅಥವಾ ಸೊಲ್ಲಾಪುರ ಈ ಪಟ್ಟಣಗಳಿದ್ದ ಸೀಮೆಯಲ್ಲಿಯೇ ವಾಸವಾಗಿದ್ದನು.

## ರುದ್ರಮುನಿ ಮತ್ತು ಶಿವಾನುಭವ ಮಂಟಪ.

ಆಮೇಲೆ ಕೆಲವು ವರ್ಷಗಳಲ್ಲಿಯೇ ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ಕಲಚೂರ್ಯ ರಾಜನಾದ ಬಿಜ್ಜಳನಲ್ಲಿ ಮಂತ್ರಿಪದವನ್ನು ಹೊಂದಿ ವಿಖ್ಯಾತನಾದನು. ಇಷ್ಟರಲ್ಲಿಯೇ ಬಳ್ಳಿಗಾವಿ, ಶ್ರೀಶೈಲ ಮೊದಲಾದ ಸ್ಥಳಗಳಲ್ಲಿ ಬಹುಕಡೆಗೆ ವೀರಶೈವ ಮತೋದ್ಧಾರ ಕಾರ್ಯಗಳು ಅನೇಕ ಶರಣರಿಂದ ಬಲವಾಗಿ ನಡಿಸಲ್ಪಟ್ಟಿದ್ದವು. ಬಸವೇಶ್ವರನು ರೇವಣಸಿದ್ಧ, ಪ್ರಭುದೇವ, ಇವರಂತೆ ಧರ್ಮಬೋಧೆ ಮಾಡುತ್ತ ಕಲ್ಯಾಣ ಪಟ್ಟಣವನ್ನು ಬಿಟ್ಟು ಸಂಚರಿಸಿದಂತೆ ಎಲ್ಲಿಯೂ ಉಲ್ಲೇಖವಿಲ್ಲ. ಆದುದರಿಂದ ಅವನು ಮಂತ್ರಿಪದವನ್ನು ಹೊಂದುವ ಪೂರ್ವದಲ್ಲಿಯೇ ಶೈವ ಧರ್ಮದ ಚಳವಳಿಯನ್ನು ಬಹುಕಡೆಗೆ ಶಿವಶರಣರು ಜರಗಿಸುತ್ತ ಬಂದಿದ್ದರೆಂದು ಊಹಿಸಬೇಕಾಗುತ್ತದೆ. ಅವರು ಬಹು ಕಡೆಗೆ ಅನೇಕರಾಗಿ ಉದ್ಭವಿಸಿದ್ದರೆಂದು ತೋರುತ್ತದೆ. ಬಸವೇಶ್ವರನು ಒಂದು ಬಲಿಷ್ಠ ರಾಜ್ಯದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿದ ಕೂಡಲೆ ಈ ಶಿವಶರಣಲ್ಲನೇಕರು ಕಲ್ಯಾಣಕ್ಕೆ ಆಗಮಿಸಿದರೆಂದು ತೋರುತ್ತದೆ. ಇವರು ಅಲ್ಲಿ ಏಕೀಕೃತವಾದ ಬಳಿಕ ಅಲ್ಲಿ ಒಂದು ಶಿವಾನುಭವ ಮಂಟಪವು ಸ್ಥಾಪಿತವಾಯಿತು. ಅಲ್ಲಿ ಶಿವಶರಣರು ನೆರೆದು ಧಾರ್ಮಿಕ ತತ್ವಗಳನ್ನು ಚರ್ಚಿಸುತ್ತ ವೀರಶೈವ ಧರ್ಮದಲ್ಲಿ ಒಂದು ಸುವ್ಯವಸ್ಥೆಯನ್ನುಂಟು ಮಾಡಿದಂತೆ ತೋರುತ್ತದೆ.

ಆದರೆ ರುದ್ರಮುನಿಯು ಈ ಶಿವಾನುಭವ ಮಂಟಪದ ಚರ್ಚೆಗಳಲ್ಲಿದ್ದುದು ತೋರಿಬರುವದಿಲ್ಲ. ಅವನು ಈ ಕಾಲದಲ್ಲಿ ಬಹುಶಃ ತದ್ದೇವಾಡಿ ಭಾಗದಲ್ಲಿಯೇ ವಾಸಿಸುತ್ತಿರಬಹುದು. ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿದ್ದಾಗ ಉಂಟಾದ ಧರ್ಮ ಜಾಗೃತಿಯ ಕಾರ್ಯಗಳಲ್ಲಿ ಅವನ ಉಲ್ಲೇಖಗಳು ದೊರೆಯುವದಿಲ್ಲ. ಆದುದರಿಂದ ಅವನು ಆಗ ಕಲ್ಯಾಣಕ್ಕೆ ಬಂದಿರಲಿಲ್ಲೆಂಬ ಅನುಮಾನವು ಉಂಟಾಗುತ್ತದೆ.

## ಶಿವಶರಣರಿಗೆ ರುದ್ರಮುನಿಯ ಸಹಾಯ.

ಆದರೆ ಮುಂದೆ ಶಿವಶರಣರಿಗೂ ಬಿಜ್ಜಳನಿಗೂ ವಿರೋಧಗಳು ಉತ್ಪನ್ನವಾದವು. ಕಲ್ಯಾಣ ಪಟ್ಟಣದಲ್ಲಿ ಭೀಕರಸ್ಥಿತಿಯು ಉಂಟಾಯಿತು. ಬಸವೇಶ್ವರ, ಪ್ರಭುದೇವ, ಮಹಾದೇವಿಯಕ್ಕ ಮೊದಲಾದ ಶಿವಶರಣರು ಕಲ್ಯಾಣ ಪಟ್ಟಣವನ್ನು ಬಿಟ್ಟು ಶ್ರೀಶೈಲ ಮೊದಲಾದ

ಕಡೆಗೆ ತೆರಳಿದರು. ಈ ಸ್ಥಿತಿಯಲ್ಲಿ ಚನ್ನಬಸವ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ ಇವರೇ ಕೆಲವರು ಮುಖ್ಯಸ್ಥರಾಗಿ ಹಿಂದೆ ಉಳಿಯುವ ಪ್ರಸಂಗವು ಬಂದಿತು. ಇಂಥ ಕಠಿಣ ಕಾಲದಲ್ಲಿ ರುದ್ರಮುನಿಯು ಮುಂದುವರಿದನು. ಮತ್ತು ಚನ್ನಬಸವಾದಿಗಳಿಗೆ ಸಹಾಯಕನಾಗಿ ನಿಂತನು. ಆ ಕಾಲಕ್ಕೆ ಅವನು ಮಾಡಿದ ಸಹಾಯವೂ ಸಾಹಸಕಾರ್ಯಗಳೂ ವರ್ಣನೀಯವಾಗಿರುತ್ತವೆ. ಇದರಿಂದ ಅವನು ವೀರಶೈವ ಇತಿಹಾಸದಲ್ಲಿ ಒಂದು ಮಹತ್ವದ ಸ್ಥಾನವನ್ನು ಹೊಂದಿರುತ್ತಾನೆ.

## ಚೆಂಗಣಿಗಿಲ ಮಂಟಪ.

ಇದೇ ಸಮಯದಲ್ಲಿ ಅಥವಾ ಇದಕ್ಕೂ ಸ್ವಲ್ಪಕಾಲ ಮೊದಲು ರುದ್ರಮುನಿಯು ಕಲ್ಯಾಣ ಪಟ್ಟಣಕ್ಕೆ ಬಂದು ಅಲ್ಲಿ ವಾಸವಾಗಿರಬಹುದೆಂದು ತೋರುತ್ತದೆ. ಅವನು ಅಲ್ಲಿ ಚೆಂಗಣಿಗಿಲ ಮಂಟಪವೆಂಬ ಸ್ಥಾನವನ್ನು ರಚಿಸಿ ವಾಸಿಸುತ್ತಿದ್ದನು. ಈ ಮಂಟಪದ ನೆರೆಯಲ್ಲಿ ಚೆನ್-ಕಣಿಗಿಲು ಎಂದರೆ ಕೆಂಪು ಕಣಿಗಿಲ ಹೂವಿನ ಗಿಡಗಳು ಹೆಚ್ಚಾಗಿ ಇದ್ದುದರಿಂದ ಈ ಹೆಸರು ಅದಕ್ಕೆ ಬಂದಿರಬಹುದು. ಈ ಮಂಟಪದಲ್ಲಿ ರುದ್ರಮುನಿಯು ಏಕಾಂತದಲ್ಲಿದ್ದುಕೊಂಡು ಶಿವಧ್ಯಾನ ಪರಾಯಣನಾಗಿ ಇರುತ್ತಿದ್ದನೆಂದು ವೀರಶೈವ ಗ್ರಂಥಗಳಲ್ಲಿ ಹೇಳಲ್ಪಡುತ್ತದೆ.

ರುದ್ರಮುನಿಯು ಇರುವ ಸ್ಥಳವು ಕಲ್ಯಾಣ ಪಟ್ಟಣದಲ್ಲಿ ಈಗಲೂ ತೋರಿಸಲ್ಪಡುತ್ತದೆ. 'ರುದ್ರಮುನಿಯ ಗವಿಯು' ಎಂಬ ಹೆಸರಿನ ಸ್ಥಾನವು ಇಲ್ಲಿ ಇದೆ. ಅದು ಮರಿದೇವರ ಗುಡ್ಡದ ನೆರೆಯಲ್ಲಿಯೇ ಇದೆ.

ಈ ಕಾಲದಲ್ಲಿ ರುದ್ರಮುನಿಯು ಆವ ಕಾರ್ಯಗಳನ್ನು ಮಾಡಿದನು ಮತ್ತು ಅವನು ಆವ ರೀತಿಯಾಗಿ ಚನ್ನಬಸವನಿಗೆ ಸಹಾಯ ಮಾಡಿದನು ಎಂಬುದರ ಬಗ್ಗೆ ವರ್ಣನೆಗಳು ಚನ್ನಬಸವ ಪುರಾಣ, ನಿರಂಜನವಂಶ ರತ್ನಾಕರ, ಕಾಲಜ್ಞಾನದ ವಚನಗಳು, ಶರಣ ಲೀಲಾಮೃತ ಈ ಮೊದಲಾದ ಗ್ರಂಥಗಳಲ್ಲಿ ಬಂದಿರುತ್ತವೆ. ಅವುಗಳಲ್ಲಿ ಉಲ್ಲೇಖವಾದ ಸಂಗತಿಗಳ ಮೇಲಿಂದ ರುದ್ರಮುನಿಯ ಚರಿತ್ರೆಯು ಕೆಳಗೆ ಕೊಡಲ್ಪಟ್ಟಿದೆ.

ಹರಳಯ್ಯ ಮಧುವಯ್ಯಗಳು ಬಿಜ್ಜಳನಿಂದ ಘಾತಿಸಲ್ಪಟ್ಟ ಬಳಿಕ ಬಸವೇಶ್ವರನು ಕಲ್ಯಾಣಪಟ್ಟಣವನ್ನು ತೊರೆದು ಕಪ್ಪಡಿಸಂಗಮನಲ್ಲಿಗೆ

ತೆರಳಿದನು. ಮತ್ತು ಅಲ್ಲಿಯೇ ಅವನು ಐಕ್ಯವನ್ನು ಹೊಂದಿದನು. ಆದರೆ, ಇದರಿಂದ ಕಲ್ಯಾಣಪಟ್ಟಣದಲ್ಲಿ ಶಾಂತತೆಯುಂಟಾಗಲಿಲ್ಲ. ಶಿವ ಶರಣರಿಗೂ ಬಿಜ್ಜಳನಿಗೂ ವೈಮನಸ್ಸು ಪ್ರಬಲವಾಗುತ್ತ ಹೋಗಿ, ಅದು ಕಡೆಗೆ ಬಿಜ್ಜಳನ ಕೊಲೆಯಲ್ಲಿ ಪರಿಣಮಿಸಿತು. ಆಗ ರಾಜಧಾನಿಯಲ್ಲಿ ಭೀಕರ ಕದನಗಳೆಸಗಿದವು. ಬಿಜ್ಜಳನ ತರುವಾಯ ರಾಯಮುರಾರಿ ಸೋವಿದೇವನು ರಾಜ್ಯಕ್ಕೆ ಒಡೆಯನಾದನು. ಅವನ ದಂಡಾಳುಗಳಿಗೂ ಶಿವಶರಣರಿಗೂ ಪಟ್ಟಣದಲ್ಲಿ ಕಾದಾಟಗಳು ನಡೆದವು. ಈ ಸ್ಥಿತಿಯಲ್ಲಿ ಬಹು ಜನ ಶರಣರು ಪಟ್ಟಣವನ್ನು ಬಿಟ್ಟು ಹೊರಟು ಹೋಗಲುದ್ಯುಕ್ತ ರಾದರು. ಆಗ ದೇಶದಲ್ಲಿದ್ದ ವೀರಶೈವ ಸಮಾಜದ ಮೇಲೆ ಒಂದು ಘೋರ ವಿಪತ್ತು ಬಂದೊದಗಿತು. ಒಂದು ವೇಳೆ ಈ ಕಾಲದಲ್ಲಿ ವೀರಶೈವರು ಆತ್ಮ ರಕ್ಷಣೆಗಾಗಿ ವ್ಯವಸ್ಥೆ ಮಾಡಿಕೊಳ್ಳದಿದ್ದರೆ ಮತ್ತು ಹಾಗೆಯೇ ಚದರಿ ಹೋಗಿ ದ್ದರೆ ದೇಶದಲ್ಲಿ ಅವರ ಉಳಿವೇ ಅಶಕ್ಯವಾಗುತ್ತಿತ್ತು. ಇಂಥ ಪ್ರಸಂಗದಲ್ಲಿ ಕಿನ್ನರಿಬ್ರಹ್ಮಯ್ಯ, ಮಡಿವಾಳ ಮಾಚಿದೇವ ಮತ್ತು ಚನ್ನಬಸವರು ವೀರಶೈವರಿಗೆ ನೇತೃಗಳಾಗಿ ನಿಂತುಕೊಂಡು, ಸಮಾಜದ ರಕ್ಷಣೆಯನ್ನು ಮಾಡಲು ನಿರ್ಧರಿಸಿ ರಾಜನೊಡನೆ ಹೋರಾಡಲು ಸಿದ್ಧರಾದರು.

## ರುದ್ರಮುನಿಯು ಶಿವಶರಣರಲ್ಲಿ ಸಂಘಟನೆ ಮಾಡಿದ್ದು.

ಆಗ ಈ ಮೂವರು ಪಟ್ಟಣದಲ್ಲಿ ಉಳಿದ ಶಿವಶರಣರನ್ನು ಕಂಡು ಅವ ರನ್ನು ಒಂದುಗೂಡಿಸಲು ಪ್ರಯತ್ನಿಸಹತ್ತಿದರು. ಆದರೆ ಆರಂಭದಲ್ಲಿ ಅವರಿಗೆ ಇದರಲ್ಲಿ ಯಶಸ್ಸು ದೊರೆಯಲಿಲ್ಲ. ಯಾರೂ ಅವರೊಡನೆ ಇದ್ದುಕೊಂಡು ಕಾದಾಡಲು ಸಿದ್ಧರಾಗಲಿಲ್ಲ. (ಕಾಲಜ್ಞಾನದ ವಚನಗಳು ಪುಟ ೨ ರಿಂದ ೫ ವರೆಗೆ ನೋಡಿರಿ.) ಆ ಸಮಯದಲ್ಲಿ ಅವರು ಚಂಗಣಗಿಲ ಮಂಟಪದಲ್ಲಿದ್ದ ರುದ್ರಮುನಿಯನ್ನು ಕಂಡು, ಈ ಕಾರ್ಯದಲ್ಲಿ ತಮಗೆ ಸಹಾಯವಾಗ ಬೇಕೆಂದು ಅವನಿಗೆ ಬಿನ್ನೈಸಿಕೊಂಡರು. ಅದಕ್ಕೆ ರುದ್ರಮುನಿಯು ಒಪ್ಪಲಾಗಿ ಅವರೆಲ್ಲರೂ ಕಲ್ಯಾಣದಲ್ಲಿ ಉಳಿದ ಶಿವಶರಣರನ್ನು ಕಂಡು, ಅವರನ್ನು ಪ್ರೇರಣೆಮಾಡಲಿಕ್ಕೆ ಹತ್ತಿದರು. ಇದರಲ್ಲಿ ಅವರು ಯಶಸ್ಸನ್ನು ಹೊಂದಿ ಉಳಿವೆಯ ಮಹಾಮನೆಗೆ ಚಿತ್ತೈಸಬೇಕೆಂದು ನಿರ್ಧರಿಸಿದರು. ಆಗ ೧೨ ಸಾವಿರ ಷಟ್-ಸ್ಥಲ ಬ್ರಹ್ಮಿಗಳೂ ೭೭೦ ಅಮರಗಣಂಗಗಳೂ ಒಟ್ಟು ೧೨,೭೭೦ ಜನರು ಸಿದ್ಧರಾದರು. ಅವರು ಒತ್ತಟ್ಟಿಗೆ ಸೇರಿ, ಕಲ್ಯಾಣವನ್ನು ಬಿಟ್ಟು ತೆರಳಿದರು. ಆಗ ರಾಯಮುರಾರಿ ಸೋವಿದೇ

ಕಡೆಗೆ ತೆರಳಿದರು. ಈ ಸ್ಥಿತಿಯಲ್ಲಿ ಚನ್ನಬಸವ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮಯ್ಯ ಇವರೇ ಕೆಲವರು ಮುಖ್ಯಸ್ಥರಾಗಿ ಹಿಂದೆ ಉಳಿಯುವ ಪ್ರಸಂಗವು ಬಂದಿತು. ಇಂಥ ಕಠಿಣ ಕಾಲದಲ್ಲಿ ರುದ್ರಮುನಿಯು ಮುಂದುವರೆದನು. ಮತ್ತು ಚನ್ನಬಸವಾದಿಗಳಿಗೆ ಸಹಾಯಕನಾಗಿ ನಿಂತನು. ಆ ಕಾಲಕ್ಕೆ ಅವನು ಮಾಡಿದ ಸಹಾಯವೂ ಸಾಹಸ ಕಾರ್ಯಗಳೂ ವರ್ಣನೀಯವಾಗಿರುತ್ತವೆ. ಇದರಿಂದ ಅವನು ವೀರಶೈವ ಇತಿಹಾಸವಲ್ಲಿ ಒಂದು ಮಹತ್ವದ ಸ್ಥಾನವನ್ನು ಹೊಂದಿರುತ್ತಾನೆ.

## ಚೆಂಗಣಿಗಿಲ ಮಂಟಪ.

ಇದೇ ಸಮಯದಲ್ಲಿ ಅಥವಾ ಇದಕ್ಕೂ ಸ್ವಲ್ಪಕಾಲ ಮೊದಲು ರುದ್ರಮುನಿಯು ಕಲ್ಯಾಣ ಪಟ್ಟಣಕ್ಕೆ ಬಂದು ಅಲ್ಲಿ ವಾಸವಾಗಿರಬಹುದೆಂದು ತೋರುತ್ತದೆ. ಅವನು ಅಲ್ಲಿ ಚೆಂಗಣಿಗಿಲ ಮಂಟಪವೆಂಬ ಸ್ಥಾನವನ್ನು ರಚಿಸಿ ವಾಸಿಸುತ್ತಿದ್ದನು. ಈ ಮಂಟಪದ ನೆರೆಯಲ್ಲಿ ಚೆನ್-ಕಣಿಗಿಲು ಎಂದರೆ ಕೆಂಪು ಕಣಿಗಿಲ ಹೂವಿನ ಗಿಡಗಳು ಹೆಚ್ಚಾಗಿ ಇದ್ದುದರಿಂದ ಈ ಹೆಸರು ಅದಕ್ಕೆ ಬಂದಿರಬಹುದು. ಈ ಮಂಟಪದಲ್ಲಿ ರುದ್ರಮುನಿಯು ಏಕಾಂತದಲ್ಲಿದ್ದುಕೊಂಡು ಶಿವಧ್ಯಾನ ಪರಾಯಣನಾಗಿ ಇರುತ್ತಿದ್ದನೆಂದು ವೀರಶೈವ ಗ್ರಂಥಗಳಲ್ಲಿ ಹೇಳಲ್ಪಡುತ್ತದೆ.

ರುದ್ರಮುನಿಯು ಇರುವ ಸ್ಥಳವು ಕಲ್ಯಾಣ ಪಟ್ಟಣದಲ್ಲಿ ಈಗಲೂ ತೋರಿಸಲ್ಪಡುತ್ತದೆ. 'ರುದ್ರಮುನಿಯ ಗವಿಯು' ಎಂಬ ಹೆಸರಿನ ಸ್ಥಾನವು ಇಲ್ಲಿ ಇದೆ. ಅದು ಮರಿದೇವರ ಗುಡ್ಡದ ನೆರೆಯಲ್ಲಿಯೇ ಇದೆ.

ಈ ಕಾಲದಲ್ಲಿ ರುದ್ರಮುನಿಯು ಆವ ಕಾರ್ಯಗಳನ್ನು ಮಾಡಿದನು ಮತ್ತು ಅವನು ಆವ ರೀತಿಯಾಗಿ ಚನ್ನಬಸವನಿಗೆ ಸಹಾಯ ಮಾಡಿದನು ಎಂಬುದರ ಬಗ್ಗೆ ವರ್ಣನೆಗಳು ಚನ್ನಬಸವ ಪುರಾಣ, ನಿರಂಜನವಂಶ ರತ್ನಾಕರ, ಕಾಲಜ್ಞಾನದ ವಚನಗಳು, ಶರಣ ಲೀಲಾಮೃತ ಈ ಮೊದಲಾದ ಗ್ರಂಥಗಳಲ್ಲಿ ಬಂದಿರುತ್ತವೆ. ಅವುಗಳಲ್ಲಿ ಉಲ್ಲೇಖವಾದ ಸಂಗತಿಗಳ ಮೇಲಿಂದ ರುದ್ರಮುನಿಯ ಚರಿತ್ರೆಯು ಕೆಳಗೆ ಕೊಡಲ್ಪಟ್ಟಿದೆ.

ಹರಳಯ್ಯ ಮಧುವಯ್ಯಗಳು ಬಿಜ್ಜಳನಿಂದ ಘಾತಿಸಲ್ಪಟ್ಟ ಬಳಿಕ ಬಸವೇಶ್ವರನು ಕಲ್ಯಾಣಪಟ್ಟಣವನ್ನು ತೊರೆದು ಕಪ್ಪಡಿಸಂಗಮನಲ್ಲಿಗೆ

ತೆರಳಿದನು. ಮತ್ತು ಅಲ್ಲಿಯೇ ಅವನು ಐಕ್ಯವನ್ನು ಹೊಂದಿದನು. ಆದರೆ, ಇದರಿಂದ ಕಲ್ಯಾಣಪಟ್ಟಣದಲ್ಲಿ ಶಾಂತತೆಯುಂಟಾಗಲಿಲ್ಲ. ಶಿವ ಶರಣರಿಗೂ ಬಿಜ್ಜಳನಿಗೂ ವೈಮನಸ್ಸು ಪ್ರಬಲವಾಗುತ್ತ ಹೋಗಿ, ಅದು ಕಡೆಗೆ ಬಿಜ್ಜಳನ ಕೊಲೆಯಲ್ಲಿ ಪರಿಣಮಿಸಿತು. ಆಗ ರಾಜಧಾನಿಯಲ್ಲಿ ಭೀಕರ ಕದನಗಳೆಸಗಿದವು. ಬಿಜ್ಜಳನ ತರುವಾಯ ರಾಯಮುರಾರಿ ಸೋವಿದೇವನು ರಾಜ್ಯಕ್ಕೆ ಒಡೆಯನಾದನು. ಅವನ ದಂಡಾಳುಗಳಿಗೂ ಶಿವಶರಣರಿಗೂ ಪಟ್ಟಣದಲ್ಲಿ ಕಾದಾಟಗಳು ನಡೆದವು. ಈ ಸ್ಥಿತಿಯಲ್ಲಿ ಬಹು ಜನ ಶರಣರು ಪಟ್ಟಣವನ್ನು ಬಿಟ್ಟು ಹೊರಟು ಹೋಗಲುದ್ಯುಕ್ತ ರಾದರು. ಆಗ ದೇಶದಲ್ಲಿದ್ದ ವೀರಶೈವ ಸಮಾಜದ ಮೇಲೆ ಒಂದು ಘೋರ ವಿಪತ್ತು ಬಂದೊದಗಿತು. ಒಂದು ವೇಳೆ ಈ ಕಾಲದಲ್ಲಿ ವೀರಶೈವರು ಆತ್ಮ ರಕ್ಷಣೆಗಾಗಿ ವ್ಯವಸ್ಥೆ ಮಾಡಿಕೊಳ್ಳದಿದ್ದರೆ ಮತ್ತು ಹಾಗೆಯೇ ಚದರಿ ಹೋಗಿ ದ್ದರೆ ದೇಶದಲ್ಲಿ ಅವರ ಉಳಿವೇ ಅಶಕ್ಯವಾಗುತ್ತಿತ್ತು. ಇಂಥ ಪ್ರಸಂಗದಲ್ಲಿ ಕಿನ್ನರಿಬ್ರಹ್ಮಯ್ಯ, ಮಡಿವಾಳ ಮಾಚಿದೇವ ಮತ್ತು ಚನ್ನಬಸವರು ವೀರಶೈವರಿಗೆ ನೇತೃಗಳಾಗಿ ನಿಂತುಕೊಂಡು, ಸಮಾಜದ ರಕ್ಷಣೆಯನ್ನು ಮಾಡಲು ನಿರ್ಧರಿಸಿ ರಾಜನೊಡನೆ ಹೋರಾಡಲು ಸಿದ್ಧರಾದರು.

## ರುದ್ರಮುನಿಯು ಶಿವಶರಣರಲ್ಲಿ ಸಂಘಟನೆ ಮಾಡಿದ್ದು.

ಆಗ ಈ ಮೂವರು ಪಟ್ಟಣದಲ್ಲಿ ಉಳಿದ ಶಿವಶರಣರನ್ನು ಕಂಡು ಅವ ರನ್ನು ಒಂದುಗೂಡಿಸಲು ಪ್ರಯತ್ನಿಸಹತ್ತಿದರು. ಆದರೆ ಆರಂಭದಲ್ಲಿ ಅವರಿಗೆ ಇದರಲ್ಲಿ ಯಶಸ್ಸು ದೊರೆಯಲಿಲ್ಲ. ಯಾರೂ ಅವರೊಡನೆ ಇದ್ದುಕೊಂಡು ಕಾದಾಡಲು ಸಿದ್ಧರಾಗಲಿಲ್ಲ. (ಕಾಲಜ್ಞಾನದ ವಚನಗಳು ಪುಟ ೨ರಿಂದ ೫ ವರೆಗೆ ನೋಡಿರಿ.) ಆ ಸಮಯದಲ್ಲಿ ಅವರು ಚಂಗಣಗಿಲ ಮಂಟಪದಲ್ಲಿದ್ದ ರುದ್ರಮುನಿಯನ್ನು ಕಂಡು, ಈ ಕಾರ್ಯದಲ್ಲಿ ತಮಗೆ ಸಹಾಯವಾಗ ಬೇಕೆಂದು ಅವನಿಗೆ ಬಿನ್ನೈಸಿಕೊಂಡರು. ಅದಕ್ಕೆ ರುದ್ರಮುನಿಯು ಒಪ್ಪಲಾಗಿ ಅವರೆಲ್ಲರೂ ಕಲ್ಯಾಣದಲ್ಲಿ ಉಳಿದ ಶಿವಶರಣರನ್ನು ಕಂಡು, ಅವರನ್ನು ಪ್ರೇರಣೆಮಾಡಲಿಕ್ಕೆ ಹತ್ತಿದರು. ಇದರಲ್ಲಿ ಅವರು ಯಶಸ್ಸನ್ನು ಹೊಂದಿ ಉಳಿವೆಯ ಮಹಾಮನೆಗೆ ಚಿತ್ತೈಸಬೇಕೆಂದು ನಿರ್ಧರಿಸಿದರು. ಆಗ ೧೨ ಸಾವಿರ ಷಟ್-ಸ್ಥಲ ಬ್ರಹ್ಮಿಗಳೂ ೭೭೦ ಅಮರಗಣಂಗಗಳೂ ಒಟ್ಟು ೧೨,೭೭೦ ಜನರು ಸಿದ್ಧರಾದರು. ಅವರು ಒತ್ತಟ್ಟಿಗೆ ಸೇರಿ, ಕಲ್ಯಾಣವನ್ನು ಬಿಟ್ಟು ತೆರಳಿದರು. ಆಗ ರಾಯಮುರಾರಿ ಸೋವಿದೇ

ವಸ ದಂಡಾಳುಗಳು ಅವರನ್ನು ಬೆನ್ನಟ್ಟಿದರು. ಅವರೊಡನೆ ಈ ಶಿವ ಶರಣರು ಅಲ್ಲಲ್ಲಿ ಕಾಳಗಗಳನ್ನೊಡ್ಡುತ್ತ ಉಳಿವೆಯ ಮಹಾರಣ್ಯದ ಕಡೆಗೆ ತೆರಳಿದರು.

ಈ ಪ್ರಕಾರ ರುದ್ರಮುನಿಯು ಶಿವಶರಣರಲ್ಲಿ ಒಂದು ವ್ಯವಸ್ಥೆಯನ್ನು ಮಾಡಿ ಅವರನ್ನು ಕಳಿಸಿಕೊಟ್ಟ ಬಳಿಕ ಅವನು ಕಲ್ಯಾಣದಲ್ಲಿಯ ತನ್ನ ಮಂಟಪದಲ್ಲಿಯೇ ಉಳಿದನು. ಅವನು ಚನ್ನಬಸವಣ್ಣ ಮಡಿವಾಳ ಮಾಚಿದೇವರೊಡನೆ ಉಳವಿಗೆ ಈ ಸಮಯದಲ್ಲಿ ಹೋದಂತೆ ತೋರುವದಿಲ್ಲ.

ಮುಂದೆ ವೀರಶೈವರು ತೊರಗಲ್ಲಿನ ಸೀಮೆಯನ್ನು ಸೇರಿದರು. ರಾಯಮುರಾರಿಯ ಸೈನ್ಯವು ಅಲ್ಲಿಯೂ ಅವರನ್ನು ಬೆಂಬತ್ತಿತು. ವೈರಿಗಳೊಡನೆ ಕಾಳಗಮಾಡುತ್ತ ಶಿವಶರಣರು ಉಳಿವಿಯ ಮಹಾಘೋರಾರಣ್ಯವನ್ನು ಪ್ರವೇಶಿಸಿದರು. ಈ ವರೆಗೆ ಮಡಿವಾಳ ಮಾಚಿದೇವನೇ ವೀರಶೈವರಿಗೆ ನಾಯಕನಾಗಿ, ವೈರಿಗಳೊಡನೆ ಕಾದಾಡುತ್ತ ಮುಂದೆ ಸಾಗಿದನು. ಆದರೆ ಅವನು ಮುಂದೆ ಶರಣರೊಡನೆ ಅರಣ್ಯವನ್ನು ಪ್ರವೇಶಿಸಿ ಉಳವಿಗೆ ಹೋಗಲಿಲ್ಲ. ಅವನು ಅವರ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಗ್ರಾಮವಾದ ಹಿಪ್ಪರಗೆಗೆ ತಿರುಗಿಬಂದನು. ಇದು ವಿಜಾಪುರದ ಪೂರ್ವಕ್ಕೆ ೩೦ ಮೈಲುಗಳ ಮೇಲೆ ಇದೆ. ಮತ್ತು ಅಲ್ಲಿ ತನ್ನ ಗುರುವಾದ ಮಲ್ಲಿಕಾರ್ಜುನ ದೇವನನ್ನು ಕಂಡು, ಕಲ್ಲಿನಾಥನಲ್ಲಿ ಐಕ್ಯವನ್ನು ಹೊಂದಿದನು.

## ಉಳಿವಿಗೆ ಪ್ರಯಾಣ.

ಶಿವಶರಣರು ಯುದ್ಧಮಾಡುತ್ತ ಅರಣ್ಯವನ್ನು ಪ್ರವೇಶ ಮಾಡಿದ ಸಂಗತಿಯು ಕಲ್ಯಾಣ ನಗರದಲ್ಲಿದ್ದ ರುದ್ರಮುನಿಗೆ ತಿಳಿದಿರಲಿಕ್ಕೆಬೇಕು. ಆಗ ಅವನು ಕಲ್ಯಾಣದಿಂದ ಹೊರಟು ಹಿಪ್ಪರಿಗೆಯಲ್ಲಿಯ ಮಲ್ಲಿಕಾರ್ಜುನ ದೇವರನ್ನು ಕಂಡು, ಅವರನ್ನೂ ಸಹ ಕರೆದುಕೊಂಡು, ಉಳಿವಿಗೆ ಬಂದನು. ಆಗ ಅಲ್ಲಿದ್ದ ಶಿವಶರಣರು ಅವರನ್ನು ಸತ್ಕರಿಸಿದರು. ಮುಂದೆ ಶಿವಶರಣರು ಹೆಚ್ಚು ದಿವಸವಿರದೆ ಉಯ್ಯಾಲೆಯ ತೊಟ್ಟಿಲಲ್ಲಿ ಕುಳಿತುಕೊಂಡು ಕೈಲಾಸಕ್ಕೆ ತಮ್ಮ ಕಾಯ ಸಹಿತ ಹೊರಟು ಹೋದರು. ಈ ಸಮಯದಲ್ಲಿ ರುದ್ರಮುನಿಯು, ಮಲ್ಲಿಕಾರ್ಜುನ ದೇವರು, ಮತ್ತು ಹಡಪದ ರೇಚಣ್ಣ ಈ ಮೂವರು ಮಾತ್ರ ಜೀವದಿಂದ ಉಳಿದರು. ಈ ಪ್ರಕಾರ ವೀರಶೈವ ಗ್ರಂಥಗಳಿಂದ ತಿಳಿದು ಬರುತ್ತಿದೆ.

## ವೀರಶೈವರ ಧರ್ಮಯುದ್ಧ.

ಈ ಕಾಲದಲ್ಲಿ ವೀರಶೈವರು ಒಂದು ಘೋರವಿಪತ್ತಿಗೆ ಗುರಿಯಾದದ್ದು ನಿಶ್ಚಯವು. ಅವರು ಬಲಾಢ್ಯನಾದ ಒಬ್ಬ ಸಾರ್ವಭೌಮನ ರೋಷಕ್ಕೆ ಪಾತ್ರರಾದರು. ಅವರು ಅವನ ರಾಜ್ಯದಲ್ಲಿ ತಮ್ಮ ಧರ್ಮಾಚರಣೆಗಳಂತೆ ನಡೆಯಲು ಸಾಧ್ಯವಾಗದ್ದರಿಂದ ಅವರು ಶಸ್ತ್ರವನ್ನು ಎತ್ತಬೇಕಾಯಿತು. ಅವರು ಭಯಂಕರವಾದ ಕಾಳಗಗಳನ್ನೆಸಗಿದರು. ಅರಸನ ಪ್ರಬಲ ದಂಡಾಳುಗಳನ್ನು ಎದುರಿಸಿದರು. ಆದರೆ ಗೆಲವು ಸಾಧ್ಯವಾಗಲಿಲ್ಲ. ಆದರಿಂದ ಕಾಡನ್ನು ಆಶ್ರಯಿಸಿದರು. ಕಾಡಿನಲ್ಲಿಯೂ ಅವರು ಬೆನ್ನಟ್ಟಲ್ಪಟ್ಟರು. ಅಲ್ಲಿಯೂ ಕೂಡ ಜೀವದ ಹಂಗುದೊರೆದು ಕಾದಿದರು. ಅವರಲ್ಲಿ ಯಾರೂ ತಮ್ಮ ಇದಿರಾಳಿಗೆ ಶರಣು ಹೋಗಲಿಲ್ಲ. ಕಡೆತನಕ ಅವನೊಡನೆ ಹೋರಾಡಿದರು. ಕಡೆಗೆ ಮೂವರು ಮಾತ್ರ ಜೀವದಿಂದ ಉಳಿದರು. ಉಳಿದವರೆಲ್ಲರೂ ವೀರಸ್ವರ್ಗವನ್ನು ಹೊಂದಿದರು. ಹೀಗೆ ಒಂದು ಧರ್ಮಯುದ್ಧವು ಈ ಕಾಲದಲ್ಲಿ ಜರಗಿತೆಂಬದು ಸ್ಪಷ್ಟವಾಗುತ್ತದೆ.

ಈ ಎಲ್ಲ ಸಂಗತಿಗಳ ನಿಜತ್ವವನ್ನು ಬಲಪಡಿಸುವಂಥ ಅನೇಕ ಕುರುಹುಗಳು ಈ ಭಾಗದಲ್ಲಿ ಈಗಲೂ ತೋರಿಬರುತ್ತವೆ. ಈ ವೃತ್ತಾಂತವು ಅತ್ಯಂತ ಮನೋವೇಧಕವಾಗಿದೆ. ಇದರ ಬಗ್ಗೆ ನಾನು ಕೆಲವು ಲೇಖಾಂಕಗಳನ್ನು ಬೇಗನೇ ಬರೆಯುವವನಿದ್ದೇನೆ. ಆದರೆ ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ರುದ್ರಮುನಿಯು ಮಾಡಿದ ಸಮಾಜ ಸೇವೆಯು ಮಹತ್ತರವಾದುದು. ಬಸವೇಶ್ವರನ ತರುವಾಯ ವೀರಶೈವ ಸಮಾಜವು ತನ್ನ ಅಸ್ತಿತ್ವವನ್ನು ಮತ್ತು ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಪ್ರಯತ್ನಿಸಿದವರಲ್ಲಿ ರುದ್ರಮುನಿಯು ಅಗ್ರಗಣ್ಯನು. ಈ ಸಂಗತಿಯು ಮುಂದಿನ ವಿವರಣೆಗಳಿಂದ ಸಹ ಹೆಚ್ಚಿಗೆ ದೃಢಪಡುತ್ತಿದೆ.

## ಶ್ರೀಶೈಲಕ್ಕೆ ರುದ್ರಮುನಿಯ ಪ್ರಯಾಣ.

ಉಳಿವಿಯಲ್ಲಿ ವೀರಶೈವರಿಗೆ ದುರಂತ ಸ್ಥಿತಿಯುಂಟಾದ ಬಳಿಕ ಅವರು ಕಲಚೂರ್ಯರ ರಾಜ್ಯದಲ್ಲಿ ಸುರಕ್ಷಿತವಾಗಿ ಜೀವಿಸುವ ಸಂಭವವಿದ್ದಿಲ್ಲ. ಈ ಸ್ಥಿತಿಯಲ್ಲಿ ಅವರಲ್ಲಿ ಬಹು ಜನರು ದೇಶತ್ಯಾಗ ಮಾಡಿದರು. ಅವರಲ್ಲನೇಕರು ಶ್ರೀಶೈಲ ಮಲ್ಲಿಕಾರ್ಜುನನಲ್ಲಿಗೆ ಹೋಗಿ ಆಶ್ರಯವನ್ನು ಹೊಂದಿದರು. ಕಲ್ಯಾಣದಲ್ಲಿ ಅನಾಹುತಗಳಾಗುವ ಚಿನ್ಹಗಳು ತೋರಿದ

ಕೂಡಲಿ ಪ್ರಭುದೇವ, ಮಹಾದೇವಿಯಕ್ಕ, ಮೊದಲಾದವರು ಶ್ರೀಶೈಲಕ್ಕೆ ತೆರಳಿದರು. ಉಳಿದವರಲ್ಲಿ ಬಹು ಜನರು ಉಳಿವಿಯ ಅರಣ್ಯವನ್ನು ಆಶ್ರಯಿಸಿದರು. ಆದರೆ ಅಲ್ಲಿ ಅವರು ಕಡೆಗೆ ಶತ್ರುಗಳ ಕೈಗೆ ತುತ್ತಾದರು. ರುದ್ರಮುನಿ ಮತ್ತು ಇನ್ನಿಬ್ಬರು ಮಾತ್ರ ಜೀವದಿಂದ ಉಳಿದರು. ಈ ಸ್ಥಿತಿಯಲ್ಲಿ ರುದ್ರಮುನಿಗಳು ಈ ಸ್ಥಳವನ್ನು ಬಿಟ್ಟು ಶ್ರೀಶೈಲಕ್ಕೆ ತೆರಳಿದರು. (ನಿರಂಜನವಂಶ ರತ್ನಾಕರ ಪುಟ ೧೩)

ಈ ಕಾಲದಲ್ಲಿ ಶಿವಶರಣರು ಅತ್ಯಂತ ಗೋಪ್ಯದಿಂದ ಕಲ್ಯಾಣದಲ್ಲಿ ಇದ್ದರೆಂಬ ವರ್ಣನೆಗಳು ಬರುತ್ತವೆ. ವೀರಶೈವ ಪುರಾಣಗಳಲ್ಲಿಯೂ ಕೆಲ ಜ್ಞಾನಗಳಲ್ಲಿಯೂ ಈ ತರದ ಉಲ್ಲೇಖಗಳು ಇರುತ್ತವೆ. ಇಂಥ ಬಿಕ್ಕಟ್ಟಿನ ಸಮಯದಲ್ಲಿ ಅವರು ಹೀಗೆ ವರ್ತಿಸುವದು ಸ್ವಾಭಾವಿಕವದೆ. ಇಲ್ಲದಿದ್ದರೆ ಶತ್ರುಗಳು ಅವರನ್ನು ಘಾತಿಸದೆ ಬಿಡುತ್ತಿದ್ದಿಲ್ಲ ಈ ಕಾಲದಲ್ಲಿ ಅವರು ಕಲ್ಯಾಣವೆಂದರೆ ಕಲ್ಯಾಣ ಮಾತ್ರವಲ್ಲ, ಅದನ್ನು ಬಿಟ್ಟು ಗ್ರಾಮಾಂತರಗಳಲ್ಲಿಯೂ ಹೋಗಿ ಗೋಪ್ಯವಾಗಿ ಅವರು ವಾಸವಾಗಿರಬೇಕು.

## ರುದ್ರಮುನಿಯ ನಾಯಕತ್ವ.

ಇಂಥ ಪ್ರಸಂಗದಲ್ಲಿ ರುದ್ರಮುನಿಯು ಶಿವಶರಣರಿಗೆ ಮುಖ್ಯ ನಾಯಕನಾಗಿ ನಿಂತನು. ಬಸವೇಶ್ವರನ ಕಾಲದಲ್ಲಿ ಉದಯಕ್ಕೆ ಬಂದ ಶರಣರು ಈಗ ಜೀವದಿಂದಿರಲಿಲ್ಲ. ರುದ್ರಮುನಿಯು ಉಳಿವಿಯನ್ನು ಬಿಟ್ಟು ಶ್ರೀಶೈಲಕ್ಕೆ ತೆರಳಿದ ಸ್ಥಳದಲ್ಲಿ ಬಹುಜನ ಶಿವಶರಣರು ಕಲ್ಯಾಣ ಪಟ್ಟಣವನ್ನು ಬಿಟ್ಟು ಅಲ್ಲಿಯೇ ಅರಣ್ಯದಲ್ಲಿ ಆಶ್ರಯ:ವನ್ನು ಹಿಡಿದುಕೊಂಡಿದ್ದರು. ಶ್ರೀಶೈಲವು ಕಲಚೂರ್ಯರ ರಾಜ್ಯವಾಗಿರಲಿಲ್ಲ. ಆದ್ದರಿಂದ ಉಳಿವಿಯ ವಿಪತ್ತುಗಳು ಅವರಿಗೆ ಸಂಭವಿಸುವದು ಶಕ್ಯವಿರಲಿಲ್ಲ. ರುದ್ರಮುನಿಯು ಅಲ್ಲಿಗೆ ಹೋದ ಬಳಿಕ ಅಲ್ಲಿ ನೆರೆದವರಲ್ಲಿ ಒಂದು ಸಂಘಟನೆಯನ್ನುಂಟು ಮಾಡಿದನು ಮತ್ತು ವೀರಶೈವ ಧರ್ಮವನ್ನು ರಕ್ಷಿಸುವ ಕಾರ್ಯದಲ್ಲಿ ತೊಡಗಿದನು.

## ವೈರಿಗಳೊಡನೆ ಹೋರಾಟ.

ರುದ್ರಮುನಿಯು ಮೊದಲಿನಿಂದಲೂ ಶೈವಾಚಾರ್ಯನೆನಿಸಿಕೊಂಡು ವೀರಶೈವರಲ್ಲಿ ಬಹು ಉನ್ನತ ಸ್ಥಾನವನ್ನು ಹೊಂದಿದ್ದನು. ಅವನು ಶ್ರೀಶೈಲಕ್ಕೆ ಹೋದ ಬಳಿಕ ಅಲ್ಲಿ ಮುಕ್ತಿಮುನಿ ಎಂಬವನಿಗೆ ಪಟ್ಟವನ್ನು ಕಟ್ಟಿದನು. (ನಿರಂಜನ ವಂಶರತ್ನಾಕರ ಪುಟ ೧೩) ಈ ಮುಕ್ತಿಮುನಿಯು ರುದ್ರಮುನಿಯ ಶಿಷ್ಯನಾಗಿದ್ದನು. ರುದ್ರಮುನಿಯೂ ಮುಕ್ತಿಮುನಿಯೂ ಶ್ರೀಗಿರಿ

ಸಿಂಹಾಸನದಲ್ಲಿ ನಿಂತು ದೇಶಗಳನ್ನು ಸಂಚರಿಸಿದರು. ಮತ್ತು ಧರ್ಮಾಭಿವೃದ್ಧಿಯ ಕಾರ್ಯಗಳನ್ನು ಮಾಡಿದರು. (ಚನ್ನಬಸವಪುರಾಣ ೬೨-೩೭) ಈ ಕಾಲದಲ್ಲಿ ಈ ಉಭಯತರಿಗೆ ತಮ್ಮ ಶರಣಸಮುದಾಯದೊಡನೆ ಶಸ್ತ್ರವನ್ನು ಸಹ ಹಿಡಿಯುವ ಪ್ರಸಂಗಗಳು ಬಂದವು. (ಚನ್ನಬಸವ ಪುರಾಣ ೬೨-೩೯ ನೋಡಿರಿ.) ಮುಂದೆ ಮುಕ್ತಿಮುನಿಯು ಅಜಾತ ಭಿಕ್ಷಾವರ್ತಿ ಎಂಬವನಿಗೆ ಪಟ್ಟಗಟ್ಟಿ ತನ್ನ ಶಿಷ್ಯನಾದ ದಿಗಂಬರನು ಮುಕ್ತಿಮುನಿಗೆ ಮಲೆದೇಶದಲ್ಲಿ ವೈರಿಗಳ ಉಪಟಳವು ಹೆಚ್ಚಿದ್ದರಿಂದ ಅದನ್ನು ನಿಲ್ಲಿಸಲು ಅವನನ್ನು ಕಳುಹಿದನು. ದಿಗಂಬರನು ಈ ಕಾರ್ಯವನ್ನು ಜರಿಗಿಸಿ ವೈರಿಗಳು ಸಂಹರಿಸಲ್ಪಟ್ಟ ಸ್ಥಳದಲ್ಲಿ ಬಾಳೇಹಳ್ಳಿ ಎಂಬ ಪಟ್ಟಣವನ್ನು ಕಟ್ಟಿ ಅಲ್ಲಿ ಸಿಂಹಾಸನಾಧೀಶನಾದನು.

## ರುದ್ರಮುನಿಯ ಅಂತ್ಯ

ಶ್ರೀಶೈಲದಲ್ಲಿ ರುದ್ರಮುನಿಯು ಶಿವಶರಣರೊಂದಿಗೆ ಇದ್ದು ವೀರಶೈವ ಮತವನ್ನು ಈ ಪ್ರಕಾರ ಉಜ್ಜೀವನಗೊಳಿಸಿ ಮುಂದೆ ಪುನಃ ಕಲ್ಯಾಣಪಟ್ಟಣಕ್ಕೆ ಬಂದನು. ಮತ್ತು ಅಲ್ಲಿಯೇ ಸಮಾಧಿಸ್ಥನಾದನು. ಅವನ ಸಮಾಧಿಯು ಈಗಲೂ ಅಲ್ಲಿಯೇ ಇದೆ.

ಈ ಪ್ರಕಾರ ಬಸವೇಶ್ವರನ ತರುವಾಯ ವೀರಶೈವ ಸಮಾಜದ ಮೇಲೆ ಎಂಥ ಕಠಿಣ ಪ್ರಸಂಗಗಳು ಬಂದವೆಂಬದನ್ನು ವಾಚಕರು ಊಹಿಸಬೇಕು. ಅವರು ತಮ್ಮ ಧರ್ಮರಕ್ಷಣೆಗಾಗಿ ಮತ್ತು ಅಸ್ತಿತ್ವಕ್ಕಾಗಿ ಹೋರಾಡುವ ಪ್ರಸಂಗಗಳು ಬಂದವು. ಆಗ ದೇಶದ ತುಂಬೆಲ್ಲ ಕೆಲಕಾಲ ಹೋರಾಟಗಳು ನಡೆದವು. ಆದರೆ ಕಡೆಗೆ ಬಸವೇಶ್ವರನ ತತ್ವಗಳಿಗೆ ಜಯವು ಪ್ರಾಪ್ತವಾಯಿತು. ಮತ್ತು ವೀರಶೈವ ಧರ್ಮವು ಈ ಕಾಲದಲ್ಲಿ ಶ್ರೀಶೈಲದಿಂದ ಬಳ್ಳಿಗಾವಿ ಬನವಾಸಿ ಪ್ರಾಂತದ ವರೆಗೂ ಮೊದಲಿನಕ್ಕಿಂತಲೂ ಹೆಚ್ಚು ದೃಢವಾಗಿ ನೆಲೆಗೊಂಡಿತು.

ಈ ಪ್ರಕಾರ ಬಸವೇಶ್ವರನ ತರುವಾಯ ಶಿವಶರಣರ ತತ್ವಗಳನ್ನು ದೇಶದಲ್ಲಿ ಸ್ಥಾಯಿಕವಾಗಿ ಮಾಡಿದ ಶ್ರೇಯಸ್ಸು ರೇವಣಸಿದ್ಧೇಶ್ವರನ ಪುತ್ರನಾದ ರುದ್ರಮುನಿಗೆ ಸಲ್ಲುತ್ತಿದೆ. ಅವನ ತರುವಾಯ ಅವನ ಶಿಷ್ಯಪರಂಪರೆಗೂ ಕೂಡ ಸಲ್ಲುತ್ತಿದೆ.

ರುದ್ರಮುನಿಗೆ ಸಂಬಂಧಿಸಿದ ಆವ ಶಿಲಾಶಾಸನಗಳೂ ನಮಗೆ ಈ ವರೆಗೆ ದೊರೆತಿರುವದಿಲ್ಲ. ಆದ್ದರಿಂದ ಅವನ ಈ ಚರಿತ್ರೆಯಲ್ಲಿ ಯಾವ

ಸಂಗತಿಗಳು ನಿಜವೆಂಬುದನ್ನು ದೃಢಪಡಿಸಲು ನಮಗೆ ಪ್ರತ್ಯಂತರ ಸಾಧನಗಳಿರುವದಿಲ್ಲ. ಪುರಾಣಗಳಲ್ಲಿ ಮತ್ತು ಕಾಲಜ್ಞಾನಗಳಲ್ಲಿ ನಂಬಲರ್ಹವಾಗದ ಅನೇಕ ಅದ್ಭುತಗಳೂ ಅಸಂಭವನೀಯ ಸಂಗತಿಗಳೂ ಹೇಳಲ್ಪಡುವದುಂಟು. ಆದರೆ ಅಂಥವುಗಳನ್ನು ಬೇರೆಯಾಗಿ ತೆಗೆದಿಟ್ಟು ನಿಜವಾದ ಸಂಗತಿಗಳು ಆವವಿರಬಹುದೆಂಬದನ್ನು ನಾವು ಐತಿಹಾಸಿಕ ಪರಿಸ್ಥಿತಿ ಮತ್ತು ಸ್ಥಾನಿಕ ಕುರುಹುಗಳ ಮೂಲಕ ಊಹೆಯಿಂದ ಕಂಡು ಹಿಡಿಯಲು ಶಕ್ಯವಿರುತ್ತದೆ. ಈ ರೀತಿ ಯೋಚಿಸಲು, ರುದ್ರಮುನಿಯ ಚರಿತ್ರೆಯಲ್ಲಿ ಕೆಳಗಿನ ಸಂಗತಿಗಳು ನಿಜವಾದವುಗಳೆಂದು ನನಗೆ ಕಂಡುಬರುತ್ತದೆ.

## ರುದ್ರಮುನಿಯ ಚರಿತ್ರೆಯಲ್ಲಿ ನಂಬಲರ್ಹವಾದ ಅಂಶಗಳು.

೧ ರುದ್ರಮುನಿಯು ರೇವಣಸಿದ್ಧೇಶ್ವರನ ಮಗನೆಂಬದರಲ್ಲಿ ಸಂದೇಹವಿಲ್ಲ. ಅವನು ಯಾವ ರೀತಿಯಿಂದ ಹೇಗೆ ಉದ್ಭವಿಸಿದನೆಂಬುದಕ್ಕೆ ಒಂದು ದಂತಕಥೆಯುಂಟು. ಆದರೆ ಅದು ನಿಜವೋ ಹೇಗೆ ಎಂಬುದನ್ನು ನಾವು ಚರ್ಚಿಸುವ ಅವಶ್ಯವಿಲ್ಲ. ಮತ್ತು ಹಾಗೆ ಚರ್ಚಿಸುವದರಿಂದ ಆವ ಪ್ರಯೋಜನವೂ ಇಲ್ಲ. ಮಹಾಪುರುಷರು ಆವಕಾರ್ಯ ಮಾಡಿದರೆಂಬುದನ್ನು ತಿಳಿಯುವದೇ ಮಹತ್ವವಾದದ್ದು.

೨ ರೇವಣಸಿದ್ಧೇಶ್ವರನು ತದ್ದೇವಾಡಿ ಪ್ರಾಂತದಲ್ಲಿ ಅಂದರೆ ಈಗಿನ ಮಂಗಳವೇಡೆಯ ನೆರೆಯಲ್ಲಿ ಇದ್ದಾಗ, ರುದ್ರಮುನಿಯು ಜನಿಸಿದನು. ರೇವಣಸಿದ್ಧೇಶ್ವರನು ಸಿದ್ಧನಕೆರೆಯನ್ನು ಕಟ್ಟುವಾಗ, ಅವನು ಅಲ್ಲಿ ಹುಟ್ಟಿದನೆಂಬ ಐತಿಹ್ಯವಿದೆ. ಈ ಕೆರೆಯು ಈ ಭಾಗದಲ್ಲಿಯೇ ಇವೆ. ರೇವಣಸಿದ್ಧೇಶ್ವರನು ಈ ಪ್ರಾಂತದಲ್ಲಿ ಬಹು ದಿವಸ ವಾಸ ಮಾಡಿದನು. ಆದ್ದರಿಂದ ರುದ್ರಮುನಿಯಾದರೂ ಇಲ್ಲಿಯೇ ಜನಿಸಿದನೆಂದು ತಿಳಿಯಲು ಪ್ರತ್ಯವಾಯವಿಲ್ಲ.

೩ ರುದ್ರಮುನಿಗೆ ರೇವಣಸಿದ್ಧೇಶ್ವರನೇ ಶಿವದೀಕ್ಷೆಯನ್ನು ಕೊಟ್ಟನೆಂದು ಹರಿಹರನು ಹೇಳುತ್ತಾನೆ. ರುದ್ರಮುನಿಯೇ ಹಾವಿನಹಾಳ ಕಲ್ಲಯ್ಯನಿಗೆ ಶಿವದೀಕ್ಷೆಯನ್ನು ಕೊಟ್ಟಿದ್ದಾನೆ. ಹರಿಹರನು, ರುದ್ರಮುನಿಯು ಗುರುಪೂಜ್ಯವಾಚಾರ್ಯನೂ ಎಂದು, ಅವನನ್ನು ಹೊಗಳುತ್ತಾನೆ. ಆದ್ದರಿಂದ

ರುದ್ರಮುನಿಯು ಪ್ರಬುದ್ಧನಾಗುವ ವರೆಗೂ, ಈ ಭಾಗದಲ್ಲಿಯೇ ವಾಸಮಾಡಿರಲಿಕ್ಕೆ ಬೇಕು. ಅವನು ರೇವಣಸಿದ್ಧೇಶ್ವರನ ಕೂಡ ಸೊಲ್ಲಾಪುರಕ್ಕೂ ಹೋಗಿದ್ದನೆಂದು ಹರಿಹರನು ತನ್ನ ರಗಳೆಯಲ್ಲಿ ಹೇಳುತ್ತಾನೆ.

೪ ರೇವಣಸಿದ್ಧನು ಪಾಲ್ಕುರಿಕೆಗೆ ಹೋದ ಬಳಿಕ ರುದ್ರಮುನಿಯು ಮಂಗಳವಾಡದಲ್ಲಿಯೇ ವಾಸಿಸಿರಬೇಕು. ಅವನು ಕಲ್ಯಾಣಕ್ಕೆ ಬಸವೇಶ್ವರನ ಕಾಲದಲ್ಲಿ ಹೋಗಿಲ್ಲ. ಬಸವೇಶ್ವರನ ಚರಿತ್ರೆಯಲ್ಲಿ ರುದ್ರಮುನಿಯ ಉಲ್ಲೇಖಗಳು ಬರುವದಿಲ್ಲ. ಅವನು ಶಿವಾನುಭವಮಂಟಪದಲ್ಲಿಯ ವಿವಾದಗಳಲ್ಲಿ ಭಾಗವಹಿಸಿರುವದು ಕಂಡು ಬರುವದಿಲ್ಲ.

೫ ಬಸವೇಶ್ವರನನ್ನು ರುದ್ರಮುನಿಯು ಶಿವಾನುಭವಮಂಟಪದಲ್ಲಿ ಕಾಣದಿದ್ದರೂ, ಅದು ಯಾವ ತರದ ವೈರಭಾವದಿಂದಲ್ಲ. ಯಾಕಂದರೆ ಕಟ್ಟಕಡೆಗೆ ಬಸವನು ಕಲ್ಯಾಣವನ್ನು ಬಿಟ್ಟು ತೆರಳಿದ ಬಳಿಕ ಶಿವಶರಣರಿಗೆ ಅನೇಕ ರೀತಿಯಿಂದ ರುದ್ರಮುನಿಯು ಸಹಾಯ ಮಾಡಿದ್ದಾನೆ. ಅವನು ಹೀಗೆ ಸಹಾಯಮಾಡಿದ್ದರ ಮೇಲಿಂದ ವಚನಕಾರರ ಧಾರ್ಮಿಕ ತತ್ವಗಳಿಗೆ ಅವನು ವಿರೋಧಿಯಾಗಿರಲಿಲ್ಲವೆಂದು ಕಂಡುಬರುತ್ತದೆ.

೬ ಆದರೆ ರುದ್ರಮುನಿಯು ಯಾವಾಗ್ಗೆ ಕಲ್ಯಾಣಕ್ಕೆ ಬಂದನೆಂಬುದನ್ನು ಹೇಳಲಿಕ್ಕೆ ಬರಲಾರದು. ಆದರೆ ಅವನು ಹಿಂದುಗಡೆ ಅಲ್ಲಿಗೆ ಬಂದು ಒಂದು ಮಂಟಪವನ್ನು ಏರ್ಪಡಿಸಿಕೊಂಡು, ಅಲ್ಲಿಯೇ ವಾಸವಾಗಿದ್ದನು. ಈ ಮಂಟಪದ ಹೆಸರು 'ಚಂಗಣಗಿಲು ಮಂಟಪ' ಎಂದು ಇದೆ.

೭ ಬಿಜ್ಜಳನು ಘಾತಿಸಲ್ಪಟ್ಟ ಮೇಲೆ ರುದ್ರಮುನಿಯು ಅಂಜಿಕೋದ ಶಿವಶರಣರನ್ನು ಹುರಿದುಂಬಿಸಿದನು. ಎಲ್ಲರೂ ಒಕ್ಕಟ್ಟಿನಿಂದ ಕಲ್ಯಾಣದಿಂದ ಹೊರಬೀಳುವ ಏರ್ಪಾಡು ಮಾಡಿದನು. ಶರಣರು ಮುಂದೆ ಕಾಡನ್ನು ಪ್ರವೇಶಿಸಿ, ಉಳಿವಿಗೆ ಹೋದರು. ಇದು ತಿಳಿದ ಕೂಡಲೆ, ರುದ್ರಮುನಿಯು ತಾನೂ ಅಲ್ಲಿಗೆ ಹೋಗಿ, ಕಡೆಯ ವರೆಗೂ ಅವರ ಸಮೀಪದಲ್ಲಿಯೇ ಉಳಿದನು. ಶಿವಶರಣರಿಗೆ ಒದಗಿದ ಈ ಘೋರ ಪ್ರಸಂಗದಲ್ಲಿ ರುದ್ರಮುನಿಯು ಅವರನ್ನು ತ್ಯಜಿಸಲಿಲ್ಲ.

೮ ಆ ಮೇಲೆ ರುದ್ರಮುನಿಯು ಚನ್ನಬಸವ ಪುರಾಣದಲ್ಲಿ ಬರೆದಂತೆ ಆ ಕಾಲಕ್ಕೆಯೇ ಕಲ್ಯಾಣಕ್ಕೆ ತಿರುಗಿ ಹೋಗಲಿಲ್ಲವೆಂದು, ನನಗೆ

ತೋರುತ್ತದೆ. ಕೆಲವು ಗ್ರಂಥಗಳಲ್ಲಿ ಹೇಳಿದಂತೆ ಅವನು ಶ್ರೀಶೈಲಕ್ಕೆ ಹೋಗಿರಲಿಕ್ಕೆ ಬೇಕು. ಯಾಕಂದರೆ, ಈ ಕಾಲದಲ್ಲಿ ರಾಯಮುರಾರಿ ಸೋವಿದೇವನು ವೀರಶೈವರನ್ನು ಸುರಕ್ಷಿತೆಯಿಂದ ತನ್ನ ರಾಜ್ಯದಲ್ಲಿ ಇರಗೊಡುವ ಸಂಭವವಿದ್ದಿಲ್ಲ. ಅವನು ಅವರೊಡನೆ ಕಡು ಹಗೆತನದಿಂದ ವರ್ತಿಸುವದು ಸ್ವಾಭಾವಿಕವಾಗಿದೆ.

೯ ಈ ಕಾಲಕ್ಕೆ ರುದ್ರಮುನಿಯು ಮಂಗಳವಾಡಕ್ಕೂ ಹೋಗುವ ಸಂಭವವಿಲ್ಲ. ಯಾಕಂದರೆ ರಾಯಮುರಾರಿ ಸೋವಿದೇವನಿಗೆ ಕಲ್ಯಾಣವು ರಾಜಧಾನಿಯಾಗಿದ್ದರೂ ಕೂಡ ಅವನು ಅಲ್ಲಿರದೆ ಮಂಗಳವಾಡದಲ್ಲಿಯೇ ಇರುತ್ತಿದ್ದನೆಂದು ಶಿಲಾಶಾಸನಗಳಲ್ಲಿ ಹೇಳಿದೆ. (*M. E. R. 160 of 1934*) ಮಂಗಳವಾಡ ಸೀಮೆಯು ಆಗ ವೀರಶೈವ ಧರ್ಮ ಪ್ರತಿಷ್ಠಾಪನ ಕಾರ್ಯದಲ್ಲಿ ಅಗ್ರಸ್ಥಾನವನ್ನು ಹೊಂದಿತ್ತು. ವೀರಶೈವರನ್ನು ಹತ್ತಿಕ್ಕಬೇಕಂತಲೇ ರಾಯಮುರಾರಿಯು ಈ ಸ್ಥಳವನ್ನೇ ಆಗ ತನ್ನ ಮುಖ್ಯ ಸ್ಥಾನವನ್ನಾಗಿ ಮಾಡಿಕೊಂಡಿರಬಹುದು. ಅವನು ಅಲ್ಲಿ ೧೧೬೩ರಲ್ಲಿ ಸಹ ವಾಸವಾಗಿದ್ದನೆಂದು ಮೇಲಿನ ಶಿಲಾಶಾಸನದಿಂದ ತಿಳಿದುಬರುತ್ತದೆ.

೧೦ ರುದ್ರಮುನಿಯು ಶ್ರೀಶೈಲಕ್ಕೆ ಹೋದ ಬಳಿಕ ಅಲ್ಲಿ ಕೂಡಿದ ವೀರಶೈವರಲ್ಲಿ ಒಂದು ಬಲವಾದ ಸಂಘಟನೆಯನ್ನುಂಟು ಮಾಡಿದನು. ಮತ್ತು ಇದರ ಸಹಾಯದಿಂದ ಅವನು ಅನೇಕ ರೀತಿಯಿಂದ ಧರ್ಮ ಪ್ರಸಾರಕಾರ್ಯದಲ್ಲಿ ತೊಡಗಿದನು. ಯುದ್ಧಗಳನ್ನು ಮಾಡುವ ಪ್ರಸಂಗಗಳೂ ಬಂದವು. ಆದರೆ ಇವುಗಳ ಸವಿಸ್ತಾರ ವೃತ್ತಾಂತಗಳು ನಮಗೆ ಇನ್ನೂ ದೊರೆತಿಲ್ಲ.

೧೧ ಆ ಮೇಲೆ ರುದ್ರಮುನಿಯು ಶ್ರೀಶೈಲದಿಂದ ಕಲ್ಯಾಣಕ್ಕೆ ಬಂದನು. ಆಗ ಕಲಚೂರ್ಯ ವಂಶದವರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡಿದ್ದರು. ಪ್ರಸಿದ್ಧ ಶೈವ ಸೇನಾಪತಿಯಾದ ಬರ್ಮದೇವನು ಪದಚ್ಯುತನಾದ ಚಾಲುಕ್ಯ ಸೋಮೇಶ್ವರನ ಪಕ್ಷವಹಿಸಿ ಕಲ್ಯಾಣದಲ್ಲಿ ಇದ್ದನು. ಆಗ ಚಾಳುಕ್ಯರು ಪುನಃ ರಾಜ್ಯಪದದಲ್ಲಿ ಆರೂಢರಾಗಿದ್ದರು. ಇದು ಶೈವನಾದ ಬರ್ಮದೇವನ ಸಹಾಯದಿಂದ. ಆದುದರಿಂದ ಈ ಕಾಲದಲ್ಲಿಯೇ ರುದ್ರಮುನಿಯು ಕಲ್ಯಾಣಕ್ಕೆ ಪುನಃ ಬಂದು ವಾಸಿಸಿರಬಹುದು. ಇದು ೧೧೮೩ರಲ್ಲಿ.

೧೨ ರುದ್ರಮುನಿಯ ಸಮಾಧಿಯು ಕಲ್ಯಾಣದಲ್ಲಿ ಈಗಲೂ ಇದೆ. +

೧೩ ಬಾಳೇಹಳ್ಳಿ ಸಿಂಹಾಸನಾಧಿಪತಿಗಳ ಬಿರುದಾವಳಿಯಲ್ಲಿ "ಶ್ರೀಮದ್ರಾಕ್ಷಾದ್ರೇಣುಕಾಚಾರ್ಯ ಪುಣ್ಯ ಪ್ರಚಂಡ ಕಾಂಡನಿಧಿ ಕಲಾನಿಧಿ ಶ್ರೀಮದ್ ರುದ್ರಮುನೀಶ್ವರ ದಿಗಂಬರ ಮುಕ್ತಿ ಮುನೀಶ್ವರ ಗುರು ಪರಂಪರಾಗತ ಭದ್ರತರ ಭದ್ರಾತೀರ ಭಾಸಮಾನ ಶ್ರೀಮದ್ರಂಭಾಪುರೀ' ವೀರಸಿಂಹಾಸನಾಧೀಶ್ವರ" ಎಂಬ ಶಬ್ದಗಳು ಇರುತ್ತವೆ. ಇದರಿಂದ ರುದ್ರಮುನಿ ಮತ್ತು ದಿಗಂಬರ ಮುಕ್ತಿಮುನಿ ಇವರು ಬಾಳೇಹಳ್ಳೀ ಸಿಂಹಾಸನಾಧೀಶ್ವರರ ಪೂರ್ವಜರೆಂದು ಗೊತ್ತಾಗುತ್ತದೆ. ಮತ್ತು ಇವರ ಧೀರೋದಾತ್ತ ಕಾರ್ಯಗಳ ಮೂಲಕ ವೀರಸಿಂಹಾಸನವೆಂದು ಬಾಳೇಹಳ್ಳೀ ಸಿಂಹಾಸನವು ಈಗಲೂ ಕರೆಯಲ್ಪಡುತ್ತದೆ.

ಈ ಮೇಲ್ಕಂಡ ಸಂಗತಿಗಳು ನಂಬಲರ್ಹವಾದುವೆಂದು ನನಗೆ ತೋರುತ್ತದೆ

## ರುದ್ರಮುನಿಯು ವೀರಶೈವನೇ ಹೇಗೆ?

ವೀರಶೈವ ಗ್ರಂಥಗಳಲ್ಲಿ ರುದ್ರಮುನಿಯ ವಿಷಯವಾಗಿ ಬಂದ ಅನೇಕ ವಿವರಣೆಗಳನ್ನು ನಾನು ಈ ಲೇಖದಲ್ಲಿ ಚರ್ಚಿಸಿದ್ದೇನೆ. ಅವುಗಳ ಮೇಲಿಂದ ರುದ್ರಮುನಿಯು ವೀರಶೈವನೆಂಬುದರಲ್ಲಿ ಆವ ಸಂದೇಹವೂ ಉಳಿಯಲಾರದು. ಅವನಿಗೂ ಬಸವಾದಿ ಪ್ರಮಥರ ಕಾಲದಲ್ಲಿ ಉದಯವಾದ ಶಿವಶರಣರಿಗೂ ಯಾವ ತರದ ಒಡಕುಗಳು ಕಂಡುಬರುವದಿಲ್ಲ. ಅವನು ಆರಂಭದಲ್ಲಿ ಬಸವನ ಶಿವಾನುಭವ ಮಂಟಪದಲ್ಲಿ ಸಿದ್ಧರಾಮ, ಮಡಿವಾಳ ಮಾಚಿದೇವರಂತೆ ಸೇರ್ಪಡೆಯಾಗದಿದ್ದರೂ ಶಿವಶರಣರಿಗೆ ಬಿಕ್ಕಟ್ಟಿನ ಸಮಯವು ಪ್ರಾಪ್ತವಾಗಲು ರುದ್ರಮುನಿಯು ಅವರಿಗೆ ಸಹಾಯಕನಾಗಿ ನಿಂತನು. ಅವನು ಆರಂಭದಲ್ಲಿ ಕಲ್ಯಾಣ ಪಟ್ಟ

---

+ ಅವನು ಸಾಯುವ ಮುಂದೆ ಮುಪ್ಪಿನವನಾಗಿರಬೇಕು. ಅವನು ಹಾವಿನಹಾಳ ಕಲ್ಲಯ್ಯನಿಗೆ ದೀಕ್ಷೆ ಮಾಡಿದಾಗ ದೊಡ್ಡವನಿರಲಿಕ್ಕೆಬೇಕು. ಅಂದರೆ ೩೦-೪೦ ವರ್ಷದವನಾಗಿರಬೇಕು. ಮುಂದೆ ೧೨ ವರ್ಷ ಬಸವೇಶ್ವರನ ಕಾಲ ಅವನ ತರುವಾಯ ೧೦-೧೫ ವರ್ಷಗಳು ಸಂದಿದ್ದವು. ಅಂತೂ ಅವನು ಸಮಾಧಿಸ್ಥನಾದಾಗ ೫೦-೬೦ ವರ್ಷ ವಯಸ್ಸಿನವನಿರಬೇಕು.

ಣದಲ್ಲಿ ಲ್ಲದಿದ್ದರೂ ಹಿಂದುಗಡೆ ಅವನು ಅಲ್ಲಿಗೆ ಬಂದು ಅಲ್ಲಿ ತನ್ನ ಗೋಸ್ವರ ಚೆಂಗಣಿಗಿಲಮುಂಟಪವೆಂಬ ಒಂದು ಆವಾಸ ಸ್ಥಾನವನ್ನು ಕಲ್ಪಿಸಿಕೊಂಡು ಅಲ್ಲಿ ಇರುತ್ತಿದ್ದನು. ಅಲ್ಲಿ ಅವನು ಶಿವಯೋಗನಿರತನಾಗಿದ್ದನು. ಅವನಿಗೆ ಮುನಿ ಎಂಬ ಹೆಸರು ಇದೆ. ಈ ಹೆಸರು ವೀರಶೈವ ಸಮಾಜದಲ್ಲಿ ವಿಶೇಷ ಶ್ರೇಷ್ಠತೆಯುನ್ನು ಹೊಂದಿದವರಿಗೆ ಇದ್ದಿತೆಂದು ಶಿಲಾಶಾಸನಗಳಿಂದ ಕಂಡುಬರುತ್ತದೆ. (ಶಿವಾನುಭವ ಸಂಪುಟ ೧೩ ಸಂಚಿಕೆ ೭ ಪುಟ ೨೭೫ ನೋಡಿರಿ.) ರುದ್ರಮುನಿಯು ಹಾವಿನಹಾಳ ಕಲ್ಲಿದೇವನಿಗೆ ಶಿವದೀಕ್ಷೆಯುನ್ನು ಕೊಟ್ಟಿದ್ದಾನೆ. ಆದರೆ ಈ ಕಲ್ಲಿದೇವನು ವೀರಶೈವ ವಚನಕಾರರಲ್ಲಿ ಪ್ರಮುಖನಾಗಿದ್ದಾನೆ. ಅವನ ಅನೇಕ ವಚನಗಳನ್ನು ಬಹು ಜನ ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಉದಹರಿಸಿದ್ದಾರೆ. ಅವುಗಳಲ್ಲಿ ವೀರಶೈವ ಮತತತ್ವಗಳೇ ನಿರೂಪಿಸಲ್ಪಟ್ಟಿವೆ. ಈ ಎಲ್ಲ ಸಂಗತಿಗಳಿಂದ ರುದ್ರಮುನಿಯು ವೀರಶೈವನೇ ಎಂದು ಹೇಳಲು ಪ್ರತ್ಯವಾಯುವಿಲ್ಲ.

ಹರಿಹರನು ತನ್ನ ರಗಳೆಯಲ್ಲಿ ರೇವಣಸಿದ್ಧೇಶ್ವರನೇ ರುದ್ರಮುನಿಗೆ ದೀಕ್ಷೆಯನ್ನು ಕೊಟ್ಟನೆಂದು ಹೇಳಿದ್ದಾನೆ. (ಹರಿಹರನ ರಗಳೆಗಳು ಭಾಗ ೨ ಪುಟ ೩೮) ಆದರೆ ನಿರಂಜನ ವಂಶರತ್ನಾಕರ ಪುಟ ೧೩ ಇದರಲ್ಲಿ ಹೇಳಿರುವದೇನಂದರೆ:— "ಆ ಶಿಸುವು ಭಸ್ಮ, ರುದ್ರಾಕ್ಷಿ, ಲಿಂಗಧಾರಣ ಸಹಿತನಾಗಿ ಬಂದುದಂ ರೇಣುಕರು ಕಂಡು ಪರಮ ಸಂತೋಷಿತರಾಗಿ ಈ ಮಗುವು ಅನಾದಿ ಜಂಗಮರೂಪವೆಂದು ತಿಳಿದು ರುದ್ರಮುನಿ ಎಂಬ ನಾಮವಂ ಕೊಟ್ಟು ಸಂರಕ್ಷಿಸಿ ಆ ಮೇಲೆ ಪ್ರಭುವಂಶೋದ್ಭವರಾದ **ಗುರುಲಿಂಗಣಾಚಾರ್ಯರಿಂ** ಷಟ್-ಸ್ಥಲ ಜ್ಞಾನೋಪದೇಶಮಂ ಕೊಡಿಸಿ ಆಮೇಲೆ ರೇಣುಕರು ತಾವು ಸಾಂಬಲೋಕಕ್ಕೆ ದಯಮಾಡಿಸುವದು ಸಮೀಪಿಸಿದ ಕಾರಣ" ಇತ್ಯಾದಿ. ಇದರಲ್ಲಿ ರುದ್ರಮುನಿಗೆ ಗುರುಲಿಂಗಣಾಚಾರ್ಯರೆಂಬವರು ಲಿಂಗಧಾರಣ ಮಾಡಿದರೆಂದು ಹೇಳಲ್ಪಟ್ಟಿದೆ. ಆದರೆ ರುದ್ರಮುನಿಯು ಹುಟ್ಟಿದ್ದು ಬಸವಾದಿ ಪ್ರಮಥರು ಪ್ರಸಿದ್ಧಿಗೆ ಬರುವ ಪೂರ್ವದಲ್ಲಿ. ಆದರೆ ಪ್ರಭುದೇವರು ಈ ಪ್ರಾಂತಕ್ಕೆ ಬಂದದ್ದು ಬಸವೇಶ್ವರನು ಕಲ್ಯಾಣದಲ್ಲಿ ಪ್ರಸಿದ್ಧಿಗೆ ಬಂದ ಬಳಿಕ. ಆದ್ದರಿಂದ ಪ್ರಭುವಂಶೋದ್ಭವರು ರುದ್ರಮುನಿಗೆ ಲಿಂಗಧಾರಣ ಮಾಡುವದು ಸಂಭವನೀಯುವಿರುವದಿಲ್ಲ. ಆದರೆ ಹರಿಹರನು ಹೇಳಿದಂತೆ, ರೇವಣ

ಸಿದ್ಧೇಶ್ವರನೇ ರುದ್ರಮುನಿಗೆ ಲಿಂಗಧಾರಣವನ್ನು ಮಾಡಿರಲಿಕ್ಕೆ ಬೇಕು. ಮತ್ತು ರೇವಣಸಿದ್ಧೇಶ್ವರನೇ ತನ್ನ ತರುವಾಯ ಆತನಿಗೆ ತನ್ನ ಪಟ್ಟವನ್ನು ಕೊಟ್ಟಿರಬೇಕು. ಇದೇ ಹೆಚ್ಚಿಗೆ ಸಂಭವನೀಯವೆಂದು ತೋರುತ್ತದೆ.

ಈ ಪ್ರಕಾರ ರುದ್ರಮುನಿಯು ಕೇವಲ ವೀರಶೈವನಾದುದರಿಂದ, ಆವನಿಗೆ ದೀಕ್ಷೆಯನ್ನು ಕೊಟ್ಟ ರೇವಣಸಿದ್ಧೇಶ್ವರನೂ ಕೂಡ, ವೀರಶೈವ ಧರ್ಮವನ್ನು ಪಾಲಿಸುತ್ತಿದ್ದನೆಂಬ ಊಹೆಯು ತಾನಾಗಿಯೇ ಉಂಟಾಗುತ್ತಿದೆ.

ಕೆಲವರು, ರೇವಣಸಿದ್ಧೇಶ್ವರರು ಮತ್ತು ರುದ್ರಮುನಿಗಳು ವೀರಶೈವರಲ್ಲವೆಂದು ವಾದಿಸುವದುಂಟು. ಆದರೆ ಅವರಿಬ್ಬರ ಚರಿತ್ರೆಗಳನ್ನು ಪರೀಕ್ಷಿಸಿದಲ್ಲಿ ಅವರು ಕೇವಲ ವೀರಶೈವರಾಗಿ, ವೀರಶೈವ ಮತೋದ್ಧಾರ ಕಾರ್ಯಗಳನ್ನು ಘನತರವಾದ ರೀತಿಯಿಂದ ಮಾಡಿದಂತೆ ಕಂಡು ಬರುತ್ತದೆ.

ಆ ಕಾಲಕ್ಕೆ ಈಗಿನಂತೆ ವಿರಕ್ತರು, ಗುರುವರ್ಗದವರು ಎಂಬ ಕಲಹಗಳಿರಲಿಲ್ಲ. ಆವರೆಲ್ಲರೂ ವಚನಕಾರರ ತತ್ವಗಳನ್ನೇ ಪ್ರಸಾರ ಮಾಡುವವರಾಗಿದ್ದರೆಂದು ಪೂರ್ವದ ವೀರಶೈವೇತಿಹಾಸದಿಂದ ಕಂಡು ಬರುತ್ತದೆ.

---

# ವೀರಶೈವರ ಪೂರ್ವದ ಹೆಸರು ಆವುದು ?

ಲೇಖಕರು:— ರಾ. ಸಾ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.

ಹೋದ ಸಂಚಿಕೆಯಲ್ಲಿ ನಾನು ಎರಡು ಶಿಲಾಶಾಸನಗಳನ್ನು ತೆಗೆದು ಕೊಂಡು ಅವುಗಳು ಹುಟ್ಟಿದ ಕಾಲದಲ್ಲಿ ವೀರಶೈವರಿಗೆ ಆವ ಹೆಸರುಗಳಿದ್ದ ವೆಂಬದನ್ನು ವಿವೇಚಿಸಿದ್ದೇನೆ. ಅವುಗಳಿಂದ 'ವೀರಶೈವ' ಈ ಹೆಸರು ಆ ಕಾಲದಲ್ಲಿ ಸಾಮಾನ್ಯ ಜನತೆಯಲ್ಲಿ ಇದ್ದಿಲ್ಲೆಂಬ ಅನುಮಾನವು ಉಂಟಾ ಗುತ್ತದೆ. ಮೇಲ್ಕಂಡ ಲೇಖದಲ್ಲಿ ನಾನು "ವೀರಶೈವರು ಆ ಕಾಲಕ್ಕೆ ಭಕ್ತರು, ಶಿವಾಚಾರವುಳ್ಳವರು, ಮಹೇಶ್ವರರು, ಶರಣರು, ಲಿಂಗೈಕ್ಯರು, ಲಿಂಗವೇದಕರು, ಶಿವಯೋಗಿಗಳು, ಶಿವಸಮಯದವರು, ಶಿವಭಕ್ತರು ಎಂದು ಸಾಮಾನ್ಯ ಶಬ್ದಗಳಿಂದ ಕರೆಯಲ್ಪಡುತ್ತಿದ್ದರೆಂಬ ಅನುಮಾ ನವು ಉಂಟಾಗುತ್ತದೆ. ಅವರಲ್ಲಿ ವಿಶೇಷ ಜ್ಞಾನವುಳ್ಳವರಿಗೆ ಶಿವಯೋ ಗಿಗಳು, ಮಾಹೇಶ್ವರರು, ಸಿದ್ಧರು, ಶರಣರು, ಯತಿಗಳು, ಮುನಿಗಳು ಎಂಬ ಹೆಸರುಗಳು ಇದ್ದವೆಂದು ತೋರುತ್ತದೆ" ಎಂದು ಊಹಿಸಿದ್ದೇನೆ. (ಪುಟ ೨೭೫ ನೋಡಿರಿ.)

ಆದರೆ ಆ ಶಿಲಾಲೇಖಗಳಲ್ಲಿ ಉಲ್ಲೇಖಿಸಲ್ಪಟ್ಟ ಏಕಾಂತದ ರಾಮಯ್ಯ ಮತ್ತು ಅಮುಗಿದೇವ ಇವರು ಪೂರ್ಣ ವೀರಶೈವರೆಂದು ಸಿದ್ಧವಾದರೆ ಮಾತ್ರ ನಾನು ಮೇಲೆ ಹೇಳಿದ ಅನುಮಾನವು ನಿಜವೆಂಬದು ಸ್ಪಷ್ಟವು. ಈ ಉಭಯತರು ವೀರಶೈವರೆಂದು ವೀರಶೈವ ಗ್ರಂಥಾಂತರಗಳಲ್ಲಿ ಹೇಳ ಲ್ಪಟ್ಟಿದ್ದಾರೆ. ಅಲ್ಲದೆ ಈ ಶಿಲಾಶಾಸನಗಳಲ್ಲಿಯೂ ಅವರು ವೀರಶೈವ ರಿದ್ದದರ ಬಗ್ಗೆ ಆಂತರಂಗಿಕ ಕಾರಣಗಳೂ ದೊರೆಯುತ್ತವೆ. ನಾನು ಈ ಎಲ್ಲ ಸಂಗತಿಗಳನ್ನು ಹಿಂದಿನ ಸಂಚಿಕೆಯಲ್ಲಿ ವಿವರಿಸಿದ್ದೇನೆ.

ಆದರೆ ಅನೇಕರು ಆ ಶಿವಶರಣರು ವೀರಶೈವರಲ್ಲೆಂದು ಅನುಮಾನ ಮಾಡಬಹುದು. ಆದರೆ ನಾನು ಕೆಳಗೆ ವಿವೇಚಿಸಲಣಿಸಿರುವ ಎರಡು ಶಾಸನಗಳು ಮಾತ್ರ ವೀರಶೈವ ಶಿವಶರಣರವೆಂಬುದು ನಿರ್ವಿವಾದವು.

ಈ ವಿಷಯದಲ್ಲಿ ಆವ ಸಂದೇಹವೂ ಇರಲಾರದು. ಅವುಗಳಲ್ಲಿ ಒಂದು ಅರ್ಜುನವಾಡದ ಶಿಲಾಶಾಸನವು, ಎರಡನೆಯದು ಚೌಡದಾ

ನಪುರದ ಶಿಲಾಶಾಸನವು ಹೀಗೆ ಇವೆ. ಈ ಎರಡೂ ಶಿಲಾಶಾಸನಗಳಲ್ಲಿ ಬಸವೇಶ್ವರನ ಬಗ್ಗೆ ಸ್ಪಷ್ಟ ಉಲ್ಲೇಖಗಳು ಬಂದಿರುತ್ತವೆ. ಆದ್ದರಿಂದ ಈ ಎರಡೂ ಶಾಸನಗಳಲ್ಲಿ ವೀರಶೈವ ಮಹಾತ್ಮರು ಮತ್ತು ವೀರಶೈವ ಸಮಾಜವು ಹೇಗೆ ಕರೆಯಲ್ಪಟ್ಟಿರುವರೆಂಬುವನ್ನು ನಾವು ಪರೀಕ್ಷಿಸುವದು ಬಹು ಮಹತ್ವದ್ದಾಗಿರುತ್ತದೆ.

## ಅರ್ಜುನವಾಡದ ಶಿಲಾಶಾಸನವು.

ಈ ಶಿಲಾಶಾಸನದ ಸವಿಸ್ತಾರವಾದ ವಿವೇಚನೆಯು ಶಿವಾನುಭವ ಸಂಚಿಕೆ ೩-೯-೯೩ ಇದರಲ್ಲಿ ಬಂದಿದೆ. ನಾನು ಪ್ರಸಿದ್ಧಿಸಿದ ಬಸವೇಶ್ವರನ ವಚನಗಳು (ಆವೃತ್ತಿ ೩) ಇದರಲ್ಲಿಯೂ ಈ ಶಿಲಾಶಾಸನವು ಸಮಗ್ರವಾಗಿ ಅಚ್ಚು ಹಾಕಲ್ಪಟ್ಟಿದೆ. ಈ ಶಿಲಾಶಾಸನವು ಬಸವೇಶ್ವರನ ತರುವಾಯ ೧೦೦ ವರ್ಷಗಳ ಮೇಲಿನದು ಅಂದರೆ ಕ್ರಿ. ಶ. ೧೨೬೦ ರಲ್ಲಿ ಹುಟ್ಟಿದ್ದು ಇರುತ್ತದೆ. ಇದರಿಂದ ತಿಳಿಯುವದೇನಂದರೆ, ಬಸವನ ಮೊಮ್ಮಗ ದೇವರಾಜನೆಂಬವನು ಇದ್ದು ಈ ದೇವರಾಜನ ಮೊಮ್ಮಗನು ಕಲಿದೇವನು. ಈ ಕಲಿದೇವನ ಮಗ ಹಾಲಬಸವಿದೇವನೆಂಬವನು ಇದ್ದು ಇವನಿಗೆ ದೇವಗಿರಿ ಯಾದವ ವಂಶದ ಅರಸನಾದ ಕನ್ನರನ ಮಹಾಪ್ರಧಾನನಾದ ನಾಗರಸನು ಕವಿಳಾಸಪುರದಲ್ಲಿಯ ಸುಂಕ ಮೊದಲಾದವುಗಳನ್ನು ತೆಗೆದುಕೊಳ್ಳುವ ಹಕ್ಕನ್ನು ದಾನವಾಗಿ ಕೊಟ್ಟನೆಂದು ಇದರಲ್ಲಿ ಹೇಳಲ್ಪಟ್ಟಿದೆ. ಈ ಕವಿಳಾಸಪುರವು ಬೆಳಗಾವ ಜಿಲ್ಲಾ ಹುಕ್ಕೇರಿಯ ಸಮೀಪದಲ್ಲಿಯೇ ಅಂದರೆ ಈಗಿನ ಅರ್ಜುನವಾಡದ ನೆರೆಯಲ್ಲಿಯೇ ಇತ್ತೆಂದು ಈ ಶಿಲಾಶಾಸನದಿಂದ ತಿಳಿದುಬರುತ್ತದೆ.

ಹಾಲಬಸವಿದೇವ ಮೊದಲಾದವರು ಬಸವೇಶ್ವರನ ವಂಶಜರಾದುದರಿಂದ ಇದು ವೀರಶೈವ ಶಿಲಾಶಾಸನವೆಂಬುದು ನಿರ್ವಿವಾದವಾದದ್ದು. ಇವರು ಬಸವೇಶ್ವರನ ತತ್ವಗಳನ್ನು ಮತ್ತು ಅವನ ಮಾರ್ಗವನ್ನು ಹಿಂಬಾಲಿಸಿರಲಿಕ್ಕೆಬೇಕೆಂದು ತಿಳಿಯಲಿಕ್ಕೆ ಅವ ಪ್ರತ್ಯವಾಯವೂ ಇಲ್ಲ. ಅಲ್ಲದೆ ಈ ಶಿಲಾಶಾಸನದಲ್ಲಿ ಬಸವೇಶ್ವರನು ಅತ್ಯಂತ ಪೂಜ್ಯಭಾವದಿಂದ ವರ್ಣಿಸಲ್ಪಟ್ಟಿದ್ದಾನೆ. ಅವನ ವಂಶಜರೂ ಇದೇ ರೀತಿಯಾಗಿ ಬಹು ಗೌರವಯುಕ್ತ ನುಡಿಗಳಿಂದ ಕರೆಯಲ್ಪಟ್ಟಿದ್ದಾರೆ. ಅವರು ಬಣಜು ಮೊದಲಾದ ಅನೇಕ ಸಮಯದವರಿಂದಲೂ ಆಗಿನ ರಾಜ್ಯಾ

ಧಿಕಾರಿಗಳಿಂದಲೂ ಬಹಳ ಸನ್ಮಾನವನ್ನು ಹೊಂದಿದ್ದರೆಂದು ಕಂಡು ಬರುತ್ತದೆ. ಇದರಲ್ಲಿ ಬಸವನೂ ಅವನ ವಂಶಜರೂ ಯಾವ ಶಬ್ದಗಳಿಂದ ಕರೆಯಲ್ಪಟ್ಟಿದ್ದಾರೆಂಬದನ್ನು ನಾವು ವಿವೇಚಿಸುವದು ಬಹು ಮಹತ್ವದಾಗಿದೆ.

## ಬಸವ.

ಶಿಲಾಶಾಸನದ ೯ನೇ ಓಳಿಯಲ್ಲಿ ಬಸವನ ಬಗ್ಗೆ ಹೇಳಿರುವದೇನಂದರೆ:— "ಬಸವರಾಜನ ಮಹಿಮೆ ಎಂತೆಂದೊಡೆ, ಮಂಗಳ ಕೀರ್ತಿ ಪುರಾತನ ಜಂಗಮ ಲಿಂಗೈಕಭಕ್ತಿ ನಿರ್ಭರ ಲೀಲಾಸಂಗಂ ಸಂಗನ ಬಸವಂ ಸಂಗತಿಯುಂ ಮಾಳ್ಕೆ ಭಕ್ತಿಯೊಳಗ್ಗನವರತಂ" ಎಂದು ಅವನ ಬಗ್ಗೆ ಉಲ್ಲೇಖವಿದೆ— ಎಂದರೆ ಯಾವನ ಕೀರ್ತಿಯು ಮಂಗಳವಾದದ್ದೊ ಪುರಾತನರಲ್ಲಿ, ಜಂಗಮರಲ್ಲಿ, ಮತ್ತು ಲಿಂಗದಲ್ಲಿ ಅವಿಚ್ಛಿನ್ನ ಭಕ್ತಿಯು ಯಾವನಲ್ಲಿ ದೃಢವಾಗಿ ವಾಸಿಸುತ್ತಿತ್ತೋ ಅಂಥವನೆಂದು ಬಸವೇಶ್ವರನು ಇಲ್ಲಿ ಸ್ತುತಿಸಲ್ಪಟ್ಟಿದ್ದಾನೆ. ಈ ವರ್ಣನೆಯಂತೆಯೇ ಬಸವೇಶ್ವರನ ಚರಿತೆಯೂ ಇರುತ್ತದೆಂಬುದು ಪ್ರಸಿದ್ಧವೇ ಇದೆ.

## ಬಸವನ ವಂಶಜರು.

ಮುಂದೆ ಶಿಲಾಶಾಸನದ ೩೫ನೇ ಓಳಿಯಿಂದ ೪೪ ಓಳಿಯ ವರೆಗೆ ಬಸವೇಶ್ವರನ ವಂಶಜರ ಉಲ್ಲೇಖವಿದೆ. ಅವರು ಯಾವ ಹೆಸರುಗಳಿಂದ ಕರೆಯಲ್ಪಟ್ಟಿದ್ದಾರೆಂಬುದನ್ನು ನೋಡುವದು ಬಹು ಮಹತ್ವವಾದದ್ದು.

ಬಸವೇಶ್ವರನ ಮೊಮ್ಮಗನಾದ ದೇವರಾಜನು 'ಮುನಿಪ' ನೆಂದು ಹೇಳಲ್ಪಟ್ಟಿದ್ದಾನೆ. ಅವನ ಮಗನು 'ಜಂಗಮ ಪರುಷ' ನೆಂದು ಹೇಳಲ್ಪಟ್ಟಿದ್ದಾನೆ. ಅವನ ಮಗನಾದ ಕಲಿದೇವರಸನು ಸಹ 'ಮುನಿಪ' ಎಂದು ಕರೆಯಲ್ಪಟ್ಟಿದ್ದಾನೆ. ಅವನ ಮಗನಾದ ಹಾಲಬಸವಿದೇವನು 'ಛಲರಧಿಗಂ, ಮುನೀಶಂ, ಮಹಾ ಮಾಹೇಶ್ವರಂ' ಎಂತಲೂ "ತೇಸಠ್ಠಿ (ತ್ರಿಷಷ್ಟಿ) ಪುರಾಥ (ಪುರಾತನ) ಪಾದಾರ್ಚಕರುಂ" ಎಂತಲೂ ವರ್ಣಿಸಲ್ಪಟ್ಟಿದ್ದಾನೆ. ಅಲ್ಲದೆ ಅವನು "ಮಹಾಲಿಂಗ ಜಂಗಮ ಪ್ರಸಾದ ನಿಯತರುಂ ಸಮಯಭಕ್ತಿ ಸಂಪನ್ನ ಶ್ರೀ ಬಸವರಾಜನನ್ವಯರುಮಪ್ಪ ತಪ ಚಕ್ರವರ್ತಿ ವೀರವ್ರತಿ ಹಾಲಬಸವದೇವಂಗೆ ಆ ಮಹಾಪ್ರಧಾನಂ" ಎಂದು ಈ ಹಾಲಬಸವಿದೇವನ ಬಗ್ಗೆ ಉಲ್ಲೇಖಗಳಿವೆ. ಇಲ್ಲಿ ಅವನು

ಯಾವ ವಿಶೇಷಣಗಳಿಂದ ಕರೆಯಲ್ಪಟ್ಟಿದ್ದಾನೆಂಬುದನ್ನು ವಾಚಕರು ಸೂಕ್ಷ್ಮವಾಗಿ ವಿವೇಚಿಸಬೇಕು.

ಮುಂದೆ ೬೦ನೇ ಓಳಿಯಲ್ಲಿ "ಈ ಮೂರು ಲಿಂಗಕಂ ಅಂಗಭೋಗ ರಂಗಭೋಗ ಜೀರ್ಣೋದ್ಧಾರಕಂ ಸಾರಣೆಯ ಜಂಗಮಾರಾಧನೆಗಂ" ಸುಂಕಗಳನ್ನು ಕೊಟ್ಟಿದ್ದು ಹೇಳಲ್ಪಟ್ಟಿದೆ.

ಮುಂದೆ ೬೪ನೇ ಓಳಿಯಲ್ಲಿ "ಸರ್ವ ನಮಸ್ಯವಂ ಮಾಡಿ ಚವುಡಿ ಸೆಟ್ಟಿಯರು ಸಾಗರಸರು ಯತಿರಾಯ ಹಾಲಬಸವಿದೇವಂಗೆ ಪೂರ್ವ ದತ್ತವೆಂದು ಧಾರಾಪೂರ್ವಕಂ ಮಾಡಿಕೊಟ್ಟರು" ಎಂದು ಹೇಳಲ್ಪಟ್ಟಿದೆ.

ಮುಂದೆ ಕೊನೆಗೆ ೭೭ನೇ ಓಳಿಯಲ್ಲಿ 'ಹದಿನೆಂಟು ಸಮಯಮೆ ಲ್ಲರು ಮತ ಮೂವರು ಬಣಜುಭಕುತಿ ಭೇದ' ಎಂತಲೂ 'ಬಸವರಾ ಜನೆ ಶಾಸನಿಕ' ನೆಂತಲೂ ಹೇಳಲ್ಪಟ್ಟಿದೆ.

ಈ ಎಲ್ಲ ಅವತರಣಗಳ ಮೇಲಿಂದ ಹಾಲಬಸವಿದೇವನು ಬಸ ವೇಶ್ವರನ ವಂಶಜನೆಂದೂ, ಅವನ ವಂಶಜರು ವೀರಶೈವ ಮತಾನು ಯಾಯಿಗಳಾಗಿದ್ದರೆಂದೂ ಸ್ಪಷ್ಟವದೆ. ಇದರಲ್ಲಿ ಬಂದಿರುವ ಜಂಗಮ ಲಿಂಗೈಕಭಕ್ತಿ, ಮಹಾಲಿಂಗಜಂಗಮ ಪ್ರಸಾದನಿಯತ, ಸಾರಣೆಯ ಜಂಗಮಾರಾಧಾನೆ, ಈ ಶಬ್ದಗಳು ಕೇವಲ ವೀರಶೈವ ಸಮಾಜವನ್ನು ಮತ್ತು ವೀರಶೈವ ಮತವನ್ನು ಸೂಚಿಸುತ್ತವೆ.

ಈ ಶಿಲಾಶಾಸನದಲ್ಲಿ ಬಸವನ ವಂಶಜರು ಕೆಳಗೆ ಕಾಣಿಸಿದ ಶಬ್ದ ಗಳಿಂದ ಕರೆಯಲ್ಪಟ್ಟಿರುತ್ತಾರೆ. ಅವು ಯಾವವೆಂದರೆ ಮುನಿಪ, ಮುನೀಶ, ಮಹಾ ಮಹೇಶ್ವರ, ತಪ ಚಕ್ರವರ್ತಿ, ವೀರವ್ರತಿ, ಮುನಿಗಳು, ಯತಿ ರಾಯ ಈ ಹೆಸರುಗಳೇ ಇರುತ್ತವೆ.

ಈ ಗ್ರಾಮದಲ್ಲಿ ಸಾಮಾನ್ಯ ಜನರನ್ನುದ್ದೇಶಿಸಿ ಕರೆದ ಶಬ್ದಗಳು ಒಂದೆರಡು ಮಾತ್ರ ಈ ಶಿಲಾಶಾಸನದಲ್ಲಿ ಬಂದಿವೆ. ೪ನೇ ಓಳಿಯಲ್ಲಿ "ಭಕ್ತವ್ರಂದ" ಎಂದು ಹೇಳಲ್ಪಟ್ಟಿದೆ ಮತ್ತು ೬೮ನೇ ಓಳಿಯಲ್ಲಿ "ಹದಿ ನೆಂಟು ಸಮಯಮೆಲ್ಲರು" ಎಂದು ಮಾತ್ರ ಹೇಳಲ್ಪಟ್ಟಿದೆ ಆದರೆ ಈ ಶಿಲಾಶಾಸನದಲ್ಲಿ ಎಲ್ಲಿಯೂ ವೀರಶೈವ ಎಂಬ ಹೆಸರು ಬಂದಿಲ್ಲ. ಬರೇ ಭಕ್ತ ಎಂಬ ಶಬ್ದವು ಬಂದಿರುತ್ತದೆ. ಇದರಿಂದ ವೀರಶೈವ ಎಂಬ

ಶಬ್ದವು ಆಗ ಉಪಯೋಗಿಸಲ್ಪಡುತ್ತಿದ್ದಿಲ್ಲೆಂಬ ಅನುಮಾನವು ಉಂಟಾಗುತ್ತದೆ. ಆಗ ಅವರು ಭಕ್ತರು ಅಥವಾ ಶಿವಸಮಯದವರು ಎಂದು ಮಾತ್ರ ಕರೆಯಲ್ಪಡುತ್ತಿದ್ದ ಹಾಗೆ ತೋರುತ್ತದೆ. ಆದರೆ ಅವರಲ್ಲಿ ವಿಶೇಷ ಜ್ಞಾನವನ್ನು ಹೊಂದಿ ಉಚ್ಚಪದವಿಗೇರಿದವರು ಮುನಿಪ, ಮಹೇಶ್ವರ, ಯತಿ ಎಂದು ಕರೆಯಲ್ಪಡುತ್ತಿದ್ದ ಹಾಗೆ ಕಂಡುಬರುತ್ತದೆ. ಜಂಗಮ ಈ ಶಬ್ದವಾದರೂ ಆ ಕಾಲದಲ್ಲಿ ಅಸ್ತಿತ್ವದಲ್ಲಿತ್ತು. ಬಸವನ ಒಬ್ಬ ವಂಶಜನು 'ಜಂಗಮ ಪುರುಷ' ಎಂದು ಕರೆಯಲ್ಪಟ್ಟಿದ್ದಾನೆ.

ಇನ್ನು ಮುಂದೆ ಚೌಡದಾನಪುರ ಶಿಲಾಶಾಸನವನ್ನು ತೆಗೆದುಕೊಳ್ಳುವಾ.

## ಚೌಡದಾನಪುರ ಶಿಲಾಶಾಸನಗಳು.

ರಾಣೇಬಿನ್ನೂರು ತಾಲೂಕಿನಲ್ಲಿ ತುಂಗಭದ್ರಾ ತೀರದಲ್ಲಿ ಚೌಡದಾನಪುರವೆಂಬಲ್ಲಿ ಅನೇಕ ಶಿಲಾಶಾಸನಗಳಿರುತ್ತವೆ. ಇವುಗಳಲ್ಲಿ ಕೆಲವುಗಳನ್ನು ಡಾ. ಎಸ್. ಸಿ. ನಂದೀಮಠ ಎಮ್. ಎ. ಪಿ. ಎಚ್. ಡಿ. ಇವರು ಸಂಶೋಧಿಸಿ ಕೆಲವು ಲೇಖಗಳನ್ನು ಶಿವಾನುಭವದ ೪ನೇ ಸಂಪುಟದಲ್ಲಿ ಪ್ರಸಿದ್ಧಿಸಿದ್ದಾರೆ. ಈ ಶಿಲಾಶಾಸನಗಳು ಬಸವೇಶ್ವರನ ತರುವಾಯ ೧೦೦ ವರ್ಷಗಳ ಮೇಲೆ ಹುಟ್ಟಿದವು ಇರುತ್ತವೆ. ಈ ಶಿಲಾಶಾಸನಗಳಲ್ಲಿ ವೀರಶೈವರು ಆವ ಹೆಸರಿನಿಂದ ವರ್ಣಿಸಲ್ಪಟ್ಟಿರುವರೆಂಬದನ್ನು ನಾವು ಈಗ ಲಕ್ಷಿಸಬೇಕಾಗಿರುತ್ತದೆ.

ಈ ಶಿಲಾಶಾಸನಗಳು ವೀರಶೈವ ಪರವಾಗಿರುತ್ತವೆಂಬದು ಕೆಳಗಿನ ಸಂಗತಿಗಳಿಂದ ಸ್ಪಷ್ಟವಾಗುತ್ತದೆ. ಈ ಶಿಲಾಶಾಸನಗಳಲ್ಲಿ ಶಿವದೇವನೆಂಬ ಶರಣನು ಉಲ್ಲೇಖಿಸಲ್ಪಟ್ಟಿದ್ದಾನೆ. ಅವನು ಈ ಕಾಲದಲ್ಲಿ ಈ ಭಾಗದಲ್ಲಿ ಬಹು ಖ್ಯಾತಿಯುಳ್ಳವನಾಗಿ ಇಲ್ಲಿ ಆಳುತ್ತಿದ್ದ ಗುತ್ತರಸರಿಂದ ಪೂಜ್ಯತೆಯನ್ನು ಹೊಂದಿದ್ದನು. ಈ ಶಿವದೇವನು ಈ ಶಿಲಾಶಾಸನದಲ್ಲಿ ಶ್ರೀ ಬಸವೇಶ್ವರನ ಅವತಾರವೆಂದು ವರ್ಣಿಸಲ್ಪಟ್ಟಿದ್ದಾನೆ. ಅದು ಹೇಗೆಂದರೆ:—

ಎನೆನೆಗಳ್ದದ್ರಿಜೆ ಬಿನ್ನಪದಿ ಶಿವಜಗಕ್ಕೇ ಮಾರ್ಗಮಂ ತೋರಬೇಕೇ। ಕ್ಕೆನಲಾಗ ಪ್ರಭುನಂದಿನಾಥನ ಮೊಗಂ ನೋಡಲ್ಕೆ ಶ್ರೀಸಂಗಮೋ । ಶನ

ಪುತ್ರಂ ಬಸವಯ್ಯ ಬಂದನದರಿಂ ಶಿವದೇವ ಮುದ್ದುದೇವಂ ಜನ। ಕ್ಕ
ನಿಮಿತ್ತಂ ಶಿವದೇವನಾಗಿಯು ಗಣ ಶ್ರೀಪಾದಮುಂ ತೋರುವೇಂ॥

ಎಂದರೆ ಶಿವಮತವನ್ನು ಜಗತ್ತಿನಲ್ಲಿ ಪ್ರಸಾರ ಮಾಡಬೇಕೆಂದು ಶಿವನು ನಂದಿನಾಥನ ಮೊಗವನ್ನು ನೋಡಲು ಅವನು ಸಂಗಮೇಶನ ಪುತ್ರನಾದ ಬಸವನಾಗಿ ಬಂದನು. ಮತ್ತು ಈ ಬಸವಣ್ಣನವರ ಪ್ರತಿ ಅವತಾರವೇ ಶಿವದೇವರೆಂದು ಇಲ್ಲಿ ಹೇಳಲ್ಪಟ್ಟಿದೆ. ಈ ಒಂದು ಸಂಗತಿಯಿಂದ ಶಿವದೇವನು ಬಸವನ ಸಾಂಪ್ರದಾಯವನ್ನು ಅವಲಂಬಿಸುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಅವನು ವೀರಶೈವ ಧರ್ಮವನ್ನು ಪರಿಪಾಲಿಸುತ್ತಿದ್ದನೆಂಬುದರಲ್ಲಿ ಈ ಶಿಲಾಶಾಸನದಲ್ಲಿ ಅನೇಕ ವಿವರಣೆಗಳು ಇರುತ್ತವೆ.

ಅವನು "ಅನವರತ ಲಿಂಗಸಂಜ್ಞವನನುಕರಿಸಿ" (ಶಿವಾನುಭವ ೩ನೇ ಸಂಪುಟ ಪುಟ ೧೬೦) ಎಂದು ಹೇಳಲ್ಪಟ್ಟಿದ್ದರಿಂದ ಅವನು ಲಿಂಗ ಧಾರಣೆಯನ್ನು ಹೊಂದಿದ್ದು ಗೊತ್ತಾಗುತ್ತದೆ.

ಮುಂದೆ "ಶಿವದೇವ ಮುನಿಪತಿ ತೋರಿಮೆರೆದಂ ಲಿಂಗಜಂಗಮೈಕ್ಯ ಕ್ರಮಮುಂ" (ಪುಟ ೧೬೪.)

ಎಂದು ಅವನು ವರ್ಣಿಸಲ್ಪಟ್ಟಿರುತ್ತಾನೆ. ಈ ಲಿಂಗಜಂಗಮ ಐಕ್ಯ ಕ್ರಮವು ವೀರಶೈವರ ಸಿದ್ಧಾಂತದಲ್ಲಿ ಬರುತ್ತದೇ ಹೊರ್ತು ಇತರ ಶಿವ ಮತಗಳಲ್ಲಿ ಬರುವದಿಲ್ಲ.

ಮುಂದೆ ಶಿವದೇವನ ಆಚರಣೆಗಳನ್ನು ಹೇಳುವಲ್ಲಿ ಅವನು ವರ್ಣಿಸಲ್ಪಟ್ಟಿದ್ದು ಹೇಗೆಂದರೆಃ— "ಲಿಂಗಕ್ಕೆ ಜಂಗಮಕ್ಕೆ। ಪಿಂಗದೆ ದಾಸತ್ವ ಮಾಳ್ಪುದೇಂ ಬೆಸಸಿದನಾ। ಸಂಗನಬಸವಂ ಬೆಸಸೆಮು ನಂ ಗೊಂಡ ರ್ಚಿಸುವನುಭಯಲಿಂಗವ ಮುದದಿಂ॥ ಮೃಡಗಣವರಪ್ರಸಾದ ಮ। ಪಡೆದಂ ಜಗವರಿಯಲಂದು ಸಂಗನಬಸವಂ। ಪಡೆದಾ ಪ್ರಸಾದ ಸಿದ್ಧಿಯ ಕಡುವೀರವ್ರತದಿ ಪಡೆದನೀ ಶಿವದೇವಂ॥" (ಪುಟ ೧೬೮)

ಇದರಲ್ಲಿ ಬಸವನ ಬೆಸನದಿಂದ ಲಿಂಗಜಂಗಮದಲ್ಲಿ ಭಕ್ತಿಯುಳ್ಳವನಾಗಿ ಉಭಯ ಲಿಂಗಪ್ರಸಾದ ಸೇವನೆಯಲ್ಲಿ ನಿರತನಾಗಿದ್ದನೆಂದು

ಹೇಳಲ್ಪಟ್ಟಿದೆ. ಇದರಿಂದ ಶಿವದೇವನು ಬಸವನಾಚರಣೆಯುಳ್ಳವನಾಗಿ ವೀರಶೈವಮಾರ್ಗಾನುವರ್ತಿಯಾಗಿದ್ದನೆಂಬದು ಸಿದ್ಧವಾಗುತ್ತದೆ.

ಇಷ್ಟೇ ಅಲ್ಲ, ಇಲ್ಲಿಯ ಶಾಸನಗಳಲ್ಲೊಂದರಲ್ಲಿ ವೀರಶೈವ ಮತ ನಿರೂಪಣೆ ಇದೆ. ಹೇಗೆ ಅನೇಕ ಅಶೋಕನ ಶಿಲಾಶಾಸನಗಳಲ್ಲಿ ಮತ ತತ್ವಬೋಧೆಯು ತೋರಿಬರುತ್ತದೆಯೋ ಹಾಗೆಯೇ ಈ ಶಿಲಾಶಾಸನ ಒಂದರಲ್ಲಿ ವೀರಶೈವ ಮತದ ಮುಖ್ಯ ತತ್ವಗಳು ಸಂಗ್ರಹಿಸಲ್ಪಟ್ಟಿವೆ. ಇವುಗಳು ವೀರಶೈವ ವಚನಕಾರರ ತತ್ವಗಳೇ ಇರುತ್ತವೆ. ಅವುಗಳು ಶಿವಾನುಭವ ಸಂಪುಟ ೪ ಪುಟ ೧೬೬, ೧೬೭ ಇವುಗಳಲ್ಲಿ ಹೇಳಲ್ಪಟ್ಟಿದೆ.

ಈ ಶಿಲಾಶಾಸನಗಳಲ್ಲಿ ಶಿವದೇವನಲ್ಲದೆ ಇನ್ನೂ ಕೆಲವು ಶರಣ ಶರಣೆಯರು ಉಲ್ಲೇಖಿಸಲ್ಪಟ್ಟಿದ್ದಾರೆ. ಅವರೆಲ್ಲರೂ ವೀರಶೈವ ಮತಾನುಯಾಯಿಗಳಾಗಿದ್ದರೆಂದು ಕಂಡುಬರುತ್ತದೆ. ಗುತ್ತಲದಲ್ಲಿ ಆಗ ಆಳುತ್ತಿದ್ದ ಗುತ್ತರಸರು ಸಹ ಶಿವದೇವನ ಪ್ರಭಾವದಿಂದ ವೀರಶೈವ ಮತಾವಲಂಬಿಗಳಾದದ್ದು ಈ ಶಿಲಾಶಾಸನಗಳಿಂದ ಕಂಡುಬರುತ್ತದೆ.

ಈ ವೀರಶೈವ ಶಿಲಾಶಾಸನಗಳಲ್ಲಿ ವೀರಶೈವರೂ ವೀರಶೈವ ಶರಣರೂ ಆವ ಹೆಸರುಗಳಿಂದ ಸಂಬೋಧಿಸಲ್ಪಟ್ಟಿದ್ದಾರೆಂಬುದನ್ನುಮಾತ್ರ ವಿವೇಚಿಸುವದೇ ನಮ್ಮ ಪ್ರಕೃತ ವಿಷಯವಾಗಿದೆ. ಈ ಹೆಸರುಗಳನ್ನು ನೋಡಿದಲ್ಲಿ ಅವುಗಳಲ್ಲಿ "ವೀರಶೈವ" ಎಂಬ ಹೆಸರು ಮಾತ್ರ ಎಲ್ಲಿಯೂ ದೊರೆಯುವದಿಲ್ಲ. ಈ ಹೆಸರು ತೋರುವದಿಲ್ಲಾದ್ದರಿಂದ ಈ ಶಿಲಾಶಾಸನಗಳನ್ನು ಸ್ಥೂಲರೀತಿಯಿಂದ ಓದುವವರಿಗೆ ಇವುಗಳಲ್ಲಿ ಉಲ್ಲೇಖಿಸಲ್ಪಟ್ಟವರು ವೀರಶೈವರಲ್ಲ, ಅಲಿಂಗಿಗಳಾದ ಶೈವರು ಮಾತ್ರ ಇದ್ದರೆಂದು ಭಾಸವಾಗುವಂತೆ ಇದೆ. ಆದರೆ ಈ ಶಾಸನಗಳನ್ನು ಸೂಕ್ಷ್ಮತರವಾಗಿ ಪರೀಕ್ಷಿಸಿದಲ್ಲಿ ನಿಜ ಸ್ಥಿತಿಯು ಹೀಗಿರದೆ ಇವುಗಳು ಪೂರ್ಣವಾಗಿ ವೀರಶೈವಪರವಾಗಿರುತ್ತವೆಂಬದು ಕಂಡು ಬರುತ್ತದೆ. ಇದು ನಾನು ಮೇಲೆ ಹೇಳಿದ ವಿವರಣೆಗಳಿಂದ ವಾಚಕರಿಗೆ ಗೊತ್ತಾಗದೆ ಇರದು.

ಇಲ್ಲಿ ಶಿವದೇವನು "ಧವಳೇಶ್ವರಾಖ್ಯಲಿಂಗದೊಳವಿರಳಿ ಶಿವಮುದ್ದುದೇವ ಮುನಿಪತಿ ಇಪ್ಪ ॥ ಅವ್ಯಕ್ತಶಂಕರನಾನತಿ । ಸುವ್ಯಕ್ತಂ ಮಾಡಿ ತೋರ್ಪನೆನುತೀಜಗದೊಳ್ । ದಿವ್ಯಾಧವಳೇಶಲಿಂಗವನಚ್ಚಿಯ ಶಿವ

ಮುದ್ಧ ಮುನಿವರಂ ಭಾವಿಸುವನ್ ॥ (ಪುಟ ೧೬೩) ಎಂದು ಹೇಳಲ್ಪಟ್ಟಿದ್ದಾನೆ. ಇಲ್ಲಿ ಅವನು ಮುನಿಪತಿ, ಮುನಿವರ ಎಂದು ಕರೆಯಲ್ಪಟ್ಟಿದ್ದಾನೆ.

ಮುಂದೆ ಇದೇ ಪುಟದಲ್ಲಿ "ಶಿವಮುದ್ದ ವ್ರತಿಪತಿ" ಎಂತಲೂ "ಶಿವಮುದ್ದ ವ್ರತಿಪ" ಎಂತಲೂ ಹೇಳಲ್ಪಟ್ಟಿದ್ದಾನೆ.

ಪುಟ ೧೬೪ರಲ್ಲಿ ಇವನು "ಶಿವದೇವ ವ್ರತೀಂದ್ರ" ಎಂತಲೂ "ಸಾರೆ ಶಿವದೇವ ಮುನಿಪತಿ। ತೋರಿನೆರೆದಂ ಲಿಂಗಜಂಗವೈಕ್ಯ ಕ್ರಮುಮಂ" ಎಂತಲೂ ವಿವರಿಸಲ್ಪಟ್ಟಿದ್ದಾನೆ.

ಮುಂದೆ ೧೭೧ರಲ್ಲಿ "ಸ್ವಸ್ತಿ ಶ್ರೀಮನ್ಮಹಾಪ್ರಧಾನಂ ಸರ್ವಾಧಿಕಾರಿ ತೊರಗಲೆಯ ದೇವರಸರು ಕಟಕದಿಂ ಬಂದು ಸ್ವಸ್ತಿ ಶ್ರೀಮದಾರೂಢ ವ್ರತಿ ಶಿವಯ್ಯ ಶಿವಸಿದ್ಧ ದೇವರಿಗೆ ಸಾಷ್ಟಾಂಗ ಪ್ರಣಾಮಪೂರ್ವಕಂ" ಎಂದು ಇದೆ. ಇಲ್ಲಿ ಆರೂಢವ್ರತಿ ಎಂದು ಹೇಳಲ್ಪಟ್ಟಿದ್ದಾನೆ.

ಮುಂದೆ ಅದೇ ಪುಟದಲ್ಲಿ ಆತನು "ಶಿವಯೋಗ ಸಿದ್ಧನಗುತಿಂತೆಂದಂ" ಎಂದು ಇದೆ. ಇಲ್ಲಿ ಅವನು ಶಿವಯೋಗಿ ಎಂದು ಸಂಬೋಧಿಸಲ್ಪಟ್ಟಿದ್ದಾನೆ.

ಈ ವಿವರಣೆಗಳಲ್ಲಿ ಶಿವದೇವನು ಮುನಿಪತಿ, ಮುನಿವರ, ವ್ರತಿಪತಿ, ವ್ರತಿಪ, ಆರೂಢವ್ರತಿ, ಶಿವಯೋಗಿ ಎಂದು ಹೇಳಲ್ಪಟ್ಟಿದ್ದಾನೆ.

ಈ ಶಿಲಾಶಾಸನಗಳಲ್ಲಿ ವೀರಶೈವಮತ ನಿರೂಪಣೆ ಇದೆ ಎಂದು ನಾನು ಹೇಳಿದ್ದೇನಷ್ಟೇ. ಈ ನಿರೂಪಣೆಯಲ್ಲಿ ಶಿವತತ್ವ, ಶಿವತತ್ವಾನುಭಾವ, ಶಿವಸದ್ವಿದ್ಯೆ, ಶಿವಭಾವ, ಶಿವಮಂತ್ರ, ಶಿವಮೂರ್ತಿ, ಶಿವನಿತ್ಯೋತ್ಸವ, ಶಿವಸದಾಚಾರ, ಶಿವಸಂಯೋಗ, ಶಿವಪೂಜಾಕರ್ಮ ಈ ಶಬ್ದಗಳು ಹೇರಳವಾಗಿ ಬಂದಿರುತ್ತವೆ. ಒಂದು ವೇಳೆ 'ವೀರಶೈವ' ಈ ಶಬ್ದವು ಆ ಕಾಲಕ್ಕೆ ಜನತೆಯಲ್ಲಿ ಪ್ರಚಲಿತವಾಗಿದ್ದರೆ ಅಥವಾ ಅದಕ್ಕೆ ಮಹತ್ವವಿದ್ದರೆ, ಈ ಶಿಲಾಶಾಸನದಲ್ಲಿ ವೀರಶೈವ ಎಂಬ ಪದವನ್ನು ಇಲ್ಲಿ ಪ್ರಯೋಗಿಸಿ ವೀರಶೈವ ಮತತತ್ವಗಳನ್ನು ನಿರೂಪಿಸಲಿಕ್ಕೆ ಬರುತ್ತಿತ್ತು. ಆದರೆ ಹಾಗೆ ಈ ಶಿಲಾಶಾಸನಗಳಲ್ಲಿ ಏನೂ ತೋರಿಬರುವದಿಲ್ಲ. ಇದರಿಂದ ಬಸವಣ್ಣನ ಕಾಲದಲ್ಲಿ ವೀರಶೈವ ಶಬ್ದವು ಪ್ರಚುರವಾಗಿ ಜನತೆಯಲ್ಲಿ ಉಪಯೋಗಿಸಲ್ಪಡುತ್ತಿದ್ದಿಲ್ಲವೆಂಬ ಅನುಮಾನವು ಉಂಟಾಗುತ್ತದೆ.

ಅರ್ಜುನವಾಡದ ಶಿಲಾಶಾಸನವು ಮತ್ತು ಹೋದ ಸಂಚಿಕೆಯಲ್ಲಿ ನಾನು ಉಲ್ಲೇಖಿಸಿದ ಏಕಾಂತದ ರಾಮಯ್ಯನ ಮತ್ತು ಅಮುಗಿದೇವನ ಶಿಲಾಶಾಸನಗಳಲ್ಲಿ ಯಾವ ಶಬ್ದಗಳು ಬಂದಿವೆಯೋ ಅವೇ ಈ ಚೌಡದಾನಪುರ ಶಿಲಾಶಾಸನಗಳಲ್ಲಿ ಬಂದಿರುತ್ತವೆ. ಅಮುಗಿದೇವನ ಶಿಲಾಶಾಸನವು ತೀರ ಉತ್ತರ ದೇಶದಲ್ಲಿಯದು ಅಂದರೆ ಸೊಲ್ಲಾಪುರ ಜಿಲ್ಲೆಯಲ್ಲಿಯದು, ಅರ್ಜುನವಾಡ ಶಿಲಾಶಾಸನವು ಉತ್ತರ ಕರ್ನಾಟಕದ ಮಧ್ಯಭಾಗದಲ್ಲಿಯದು, ಮತ್ತು ಚೌಡದಾನಪುರ ಶಿಲಾಶಾಸನವು ಅದರ ತೀರ ದಕ್ಷಿಣ ದೇಶದಲ್ಲಿಯದು ಅಂದರೆ ತುಂಗಭದ್ರಾ ತೀರದಲ್ಲಿಯದು ಇದ್ದು ಇವೆಲ್ಲವೂ ಬಸವೇಶ್ವರನ ತರುವಾಯ ಒಂದು ನೂರು ವರ್ಷಗಳ ಒಳಗೆ ಹುಟ್ಟಿದವು ಇರುತ್ತವೆ. ಆಗ್ಗೆ ವೀರಶೈವ ಮಾರ್ಗವು ದೇಶದಲ್ಲೆಲ್ಲ ಪ್ರಸಾರ ಹೊಂದಿರಲಿಕ್ಕೆಬೇಕು. ಆಗ ಅನೇಕ ಪುಣ್ಯಪುರುಷರು ಉದ್ಭವಿಸಿ ಆಗಿನ ರಾಜರಾದ ಯಾದವ ಭೂಮಿಪರಿಂದಲೂ ಅವರ ಮಾಂಡಲಿಕರಿಂದಲೂ ವಿಶೇಷ ಮನ್ನಣೆಯನ್ನು ಹೊಂದಿ, ಅನೇಕ ಭೂದಾನಗಳನ್ನು ಅವರು ಪಡೆದಿದ್ದಾರೆ. ಅವರೆಲ್ಲರೂ ವೀರಶೈವ ಮತತತ್ವಬೋಧಕ ಶಬ್ದಗಳಿಂದ ಈ ಶಿಲಾಶಾಸನಗಳಲ್ಲಿ ವರ್ಣಿಸಲ್ಪಟ್ಟಿದ್ದಾರೆ. ಹೀಗಿದ್ದರೂ ಕೂಡ 'ವೀರಶೈವ' ಎಂಬ ಹೆಸರು ಮಾತ್ರ ಎಲ್ಲಿಯೂ ಬಂದಿರುವದಿಲ್ಲ. ಇದರ ಮೇಲಿಂದ ಈ ಕಾಲದಲ್ಲಿ ವೀರಶೈವರು 'ವೀರಶೈವ' ಎಂಬ ಹೆಸರಿನಿಂದ ಕರೆಯಲ್ಪಡದೆ, ಕೇವಲ ಶಿವಬೋಧಕವಾದ ಶಬ್ದಗಳಿಂದ ಎಂದರೆ ಶಿವಸಮಯದವರು, ಶಿವಭಕ್ತರು, ಶೈವರು, ಎಂಬ ಶಬ್ದಗಳಿಂದ ಕರೆಯಲ್ಪಡುತ್ತಿದ್ದರೆಂದು ತೋರುತ್ತದೆ. ಆದ್ದರಿಂದ ಶಿವದೀಕ್ಷೆ ಎಂದರೆ ವೀರಶೈವ ದೀಕ್ಷೆ ಮತ್ತು ಶೈವರೆಂದರೆ, ವೀರಶೈವರು ಎಂತಲೇ ನಾವು ತಿಳಿಯಬೇಕಾಗುತ್ತದೆ.

ವೀರಶೈವ ಶಬ್ದವು ಈ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಲಿತವಿರದೆ, ೧೩ ನೇ ಅಥವಾ ೧೪ ನೇ ಶತಮಾನದಲ್ಲಿ ಉಪಯೋಗಿಸಲ್ಪಡಹತ್ತಿತೆಂದು ನನಗೆ ತೋರುತ್ತದೆ. ಈ ವಿಷಯವನ್ನು ನಾನು ಯಥಾವಕಾಶವಾಗಿ ಮುಂದೆ ನಿರೂಪಿಸುವೆನು.

ಈ ಚೌಡದಾನಪುರ ಶಿಲಾಶಾಸನದಲ್ಲಿ ವೀರಶೈವ ಮತತತ್ವ ನಿರೂಪಣೆ ಇದೆ ಎಂದು ನಾನು ಮೇಲೆ ಹೇಳಿದ್ದೇನಷ್ಟೇ. ಅದು ಯಾವುದು,

ಮತ್ತು ಅದಕ್ಕೂ ವಚನಕಾರರ ತತ್ವಗಳಿಗೂ ಹೋಲಿಕೆಯು ಇದೇಯೋ ಹೇಗೆ ಎಂಬ ಮಹತ್ವದ ವಿಷಯದ ಬಗ್ಗೆ ಬೇರೊಂದು ಲೇಖವು ಬೇಕು. ಆ ಲೇಖವನ್ನು ನಾನು ಬರೆಯುವ ಕಾಲಕ್ಕೆ ಈ ವಿಷಯವನ್ನು ಕುರಿತು ಹೆಚ್ಚಿಗೆ ವಿಸ್ತರಿಸುವೆನು.

ಈ ಕಾಲದಲ್ಲಿ ಕಾಳಾಮುಖ, ಪಾಶುಪತ ಈ ಮತಗಳ ಅನೇಕ ಶಿಲಾಶಾಸನಗಳು ಕರ್ನಾಟಕದಲ್ಲಿ ಹುಟ್ಟಿರುತ್ತವೆ. ಅವುಗಳನ್ನು ಸಹ ನಾವು ಪರೀಕ್ಷಿಸುವದು ಅವಶ್ಯವಿದೆ. ಅವುಗಳಿಗೂ ಈ ಶೈವ ಅಥವಾ ವೀರಶೈವ ಶಿಲಾಶಾಸನಗಳಿಗೂ ಕೆಲವು ವ್ಯತ್ಯಾಸಗಳಿವೆ. ಅವುಗಳನ್ನು ಲಕ್ಷಿಸುವದು ಬಹು ಅವಶ್ಯವಿದೆ .ಈ ವಿಷಯವನ್ನು ಕುರಿತು ಮತ್ತೊಂದು ಲೇಖವು ಬರೆಯಲ್ಪಡುವದು.

---

# ಮನಗೋಳಿಯ ಶಿಲಾಶಾಸನಗಳು.

ಶೋಧಕರು:— ಜೀರಗೆ ಕ. ಬಸವಪ್ಪ, ಬಿ. ಎ.
ಸಹಾಯ ಶೋಧಕರು: — ಕೆ. ಬಸಪ್ಪ

ವೀರಶೈವೇತಿಹಾಸ ಸಂಶೋಧಕ ಸಮಿತಿ
ಶ್ರೀವೀರಶೈವ ಸಮಾಜ ಸೇವಾಸಂಘ ಬೆಂಗಳೂರು ನಗರ

ವೀರಶೈವ ಧರ್ಮದ ಇತಿಹಾಸದ ಬಗ್ಗೆ ಇತ್ತೀಚೆಗೆ ಅನೇಕ ಶೋಧನೆಗಳು ನಡೆಯಲಿಕ್ಕೆ ಪ್ರಾರಂಭಿಸಿರುವುದು ಒಂದು ವಿಧದಲ್ಲಿ ವೀರಶೈವ ಸಮಾಜದ ಪ್ರಗತಿ ಎಂದು ಭಾವಿಸಿದರೆ ತಪ್ಪಾಗದು. ಆದರೆ ಚಾರಿತ್ರ ಶೋಧನೆಯು ನಾವು ಊಹಿಸುವಷ್ಟು ಸುಲಭವಾದ ಕೆಲಸವಲ್ಲ. ವೀರಶೈವ ಸಾಹಿತ್ಯದಲ್ಲಿ ಅನಂತವಾಗಿ ಗ್ರಂಥಗಳು ಹುಟ್ಟಿ ಒಂದಲ್ಲ ಒಂದು ರೀತಿಯಲ್ಲಿ ವೀರಶೈವ ಧರ್ಮದ ಚರಿತ್ರೆಯನ್ನು ವಿವೇಚಿಸತಕ್ಕವುಗಳಾಗಿದ್ದರೂ ಅವು ಕೇವಲ ಚಾರಿತ್ರ ದೃಷ್ಟಿಯಿಂದಲೇ ಬರೆದ ಗ್ರಂಥಗಳಾಗಿಲ್ಲ. ಹಿಂದಿನ ಸಾಂಪ್ರದಾಯದಂತೆ ಕಾವ್ಯರಚನಾ ಕೌಶಲ್ಯವನ್ನು ತೋರಿಸಲಿಕ್ಕೋ ಅಥವಾ ಮನೋರಂಜಕವಾಗುವಂತೆ ರಸಪುಷ್ಟಿಯನ್ನು ಕೊಡಲಿಕ್ಕೋ ಪ್ರಯತ್ನಿಸಿ ಕವಿಗಳು ಚರಿತ್ರೆಯ ಹೆದ್ದಾರಿಯಿಂದ ಹೊರಳಿದ್ದಾರೆ. ಕೆಲವು ವೇಳೆ ಅನ್ಯ ಸಮಾಜಗಳ ಹೀಯಾಳಿಕೆಯ ಭಯದಿಂದ ಇಲ್ಲವೇ ಅನ್ಯ ಸಮಾಜಗಳನ್ನು ಅನುಕರಣ ಮಾಡಬೇಕೆಂಬ ಬಯಕೆಯಿಂದ ಚಾರಿತ್ರ ವಿಷಯಗಳಿಗೆ ವಿರುದ್ಧವಾಗಿಯೇ ಕಥೆಗಳನ್ನು ಕಟ್ಟಿ ಕಾವ್ಯಗಳನ್ನು ಬರೆದುದೂ ಉಂಟು. ಉದಾಹರಣೆಗೆ ಚಾಮರಸನ ಪ್ರಭುಲಿಂಗ ಲೀಲೆಯೊಂದೇ ಸಾಕಾಗುವುದು. ವಿಚಾರ ಮಾಡಿ ನೋಡಿದರೆ ವೀರಶೈವದ ಘನತೆ ಉಳಿಯಬೇಕಾದರೆ ವೀರಶೈವದ ನಿಜವಾದ ಚರಿತ್ರೆ ಉಳಿಯಬೇಕು. ಇಂಥ ನೈಜಚರಿತ್ರೆಯು ಉಳಿಯಬೇಕಾದರೆ ಪ್ರಚಂಡವಾದ ಶೋಧನಕಾರ್ಯವು ನಡೆಯಬೇಕಾಗಿದೆ. ವೀರಶೈವ ಧರ್ಮದ ಸ್ಥಾನಮಾನಗಳೂ ಕೀರ್ತಿ ಗೌರವಗಳೂ ವೀರಶೈವ ಧರ್ಮದ ಚಾರಿತ್ರ ಶೋಧನೆಯ ಮೇಲೆ ನಿಂತಿವೆ. ಮೊದಲೇ ಹೇಳಿದಂತೆ ಚಾರಿತ್ರ ಶೋಧನೆಯು ಸಾಮಾನ್ಯ ಕೆಲಸವಲ್ಲ. ಅದಕ್ಕೆ ದ್ರವ್ಯ ಸಹಾಯವೂ ಜನರ ಬೆಂಬಲವೂ ಕೇವಲ ಅವಶ್ಯಕ. ವೀರಶೈವ ಬಂಧು

ಗಳು ಈ ಚಾರಿತ್ರ ಶೋಧನೆಯ ಕಡೆಗೆ ಹೆಚ್ಚು ಗಮನ ಕೊಟ್ಟು ವೀರಶೈವ ಇತಿಹಾಸದ ನಿಜವಾದ ಸ್ವರೂಪವನ್ನು ಹೊರಗೆಡವಲು ಪ್ರಯತ್ನಿಸಬೇಕು.

ಪ್ರಕೃತ ಈ ಶೋಧನಾಕಾರ್ಯದಲ್ಲಿ ಬೆಂಗಳೂರಿನ ಶ್ರೀಕರಿಸಿದ್ಧೇಶ್ವರ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ. ಶ್ರೀಚನ್ನಬಸವಸ್ವಾಮಿಗಳವರು ಬಹು ಉತ್ಸಾಹದಿಂದ ತಮ್ಮ ಕಾಲದ ಬಹು ಭಾಗವನ್ನು ವಿನಿಯೋಗಿಸಿ ವೀರಶೈವ ಇತಿಹಾಸ ಶೋಧನೆಯಲ್ಲಿ ಮಹತ್ತರವಾದ ಕೆಲಸಗಳನ್ನು ಮಾಡುತ್ತಲಿದ್ದಾರೆ. ಬೇರೆ ಬೇರೆ ಗ್ರಂಥ ಭಂಡಾರಗಳಿಗೆ ಹೋಗಿ ಯಾವ ಯಾವ ಗ್ರಂಥಗಳು ಇವೆ ಎಂಬದನ್ನು ತಿಳಿದು ಅವುಗಳ ಪಟ್ಟಿಯನ್ನು ತಯಾರಿಸಿ ಆ ಗ್ರಂಥಗಳ ಶೋಧನೆಗಳನ್ನು ನಡೆಸಲಿಕ್ಕೆ ಪ್ರಯತ್ನಿಸುತ್ತಲಿದ್ದಾರೆ. ಈಗಾಗಲೇ ಅವರು ಪಾಲ್ಕುರಿಕೆ ಸೋಮನಾರಾಧ್ಯರ ತೆಲುಗು ಬಸವಪುರಾಣದ ಮೇಲೆ ಸುಪ್ರಸಿದ್ಧ ವಿದ್ವಾಂಸರಾದ ಶ್ರೀ. ವೇಟೂರಿ ಪ್ರಭಾಕರ ಶಾಸ್ತ್ರಿಗಳವರು ಮತ್ತು ಶ್ರೀ. ಕಾಶೀನಾಥರ ನಾಗೇಶ್ವರರಾಯರು ಇವರು ತೆಲುಗು ಭಾಷೆಯಲ್ಲಿ ಬರೆದಿರುವ ವಿದ್ವತ್ಪೂರಿತವಾದ ಮುನ್ನುಡಿಯನ್ನು ಕನ್ನಡ ಭಾಷೆಗೆ ನಿಡುಮಾಮಿಡಿ ಮಠದ ಏಜಂಟರಾದ ಶ್ರೀಮಾನ್ ಶಿಡ್ಲಘಟ್ಟದ ಎಸ್. ಹಂಪಯ್ಯನವರ ಕೈಲಿ ಭಾಷಾಂತರ ಮಾಡಿಸಿ ವೀರಶೈವ ಇತಿಹಾಸಕ್ಕೆ ಒಂದು ಶೋಧನೆಯನ್ನು ಒದಗಿಸಿದ್ದಾರೆ. ಇದು ಪ್ರಕಟವಾಗಬೇಕಾಗಿದೆ. ಈ ಶೋಧನಾಕಾರ್ಯವನ್ನು ಇನ್ನೂ ವಿಪುಲವಾಗಿಯೂ ಮತ್ತು ಒಂದು ಕ್ರಮದಿಂದಲೂ ನೆರವೇರಿಸಬೇಕೆಂದು ಬೆಂಗಳೂರಿನ ಶ್ರೀವೀರಶೈವ ಸಮಾಜ ಸೇವಾ ಸಂಘದವರು ಒಂದು ಇತಿಹಾಸ ಸಂಶೋಧನ ಸಮಿತಿಯನ್ನು ಏರ್ಪಡಿಸಿರುವುದು ಒಂದು ಸಂತೋಷದ ವಿಷಯವಾಗಿದೆ. ಈ ಸಮಿತಿಗೆ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಶ್ರೀ. ಶ್ರೀಚನ್ನಬಸವಸ್ವಾಮಿಗಳವರು ತಮ್ಮ ಕೈಲಾದ ಸಹಾಯವನ್ನೀಯಲು ಕೃಪೆ ಮಾಡಿದ್ದಾರೆ. ಆದರೆ ಈ ಸಮಿತಿಗೆ ಇನ್ನೂ ಹೆಚ್ಚಾದ ಸಹಾಯವು ವೀರಶೈವ ಬಂಧುಗಳಿಂದ ದೊರೆಯಬೇಕಾಗಿದೆ ಹಾಗೆ ದೊರಕಿಸುವರೆಂದು ಸಮಿತಿಯು ನಂಬಿದೆ.

ಶೋಧನ ಸಮಿತಿಯ ಮೊದಲನೆಯ ಹೆಜ್ಜೆಯಾಗಿ ಈ ಲೇಖನದಲ್ಲಿ ಮನಗೂಳಿಯ ಶಿಲಾಶಾಸನಗಳ ಬಗ್ಗೆ ಕೆಲವು ಚಾರಿತ್ರ ಶೋಧನಗಳನ್ನು ವಿಮರ್ಶಿಸಲಾಗುತ್ತದೆ.

ಮುನಗ್ಗೋಳಿಯ ಶಿಲಾಶಾಸನಗಳು ಡಾಕ್ಟರ್ ಜೆ. ಎಸ್ ಫ್ಲೀಟ್ ಪಿ. ಹೆಚ್.ಡಿ. ಸಿ. ಐ. ಇ. ಇವರಿಂದ ಎಪಿಗ್ರಾಫಿಯಾ ಇಂಡಿಕಾ ಎಂಬ ಸರಕಾರದ ಗ್ರಂಥದಲ್ಲಿ ಪ್ರಕಟವಾಗಿವೆ. ಶಾಸನಗಳ ಸಂಖ್ಯೆ ನಾಲ್ಕು. ಇವುಗಳಲ್ಲಿ ಮೊದಲನೆಯದೇ ನಮಗೆ ಅವಶ್ಯಕ. ಅದರಲ್ಲಿ ವೀರಶೈವ ಧರ್ಮದ ಇತಿಹಾಸದ ಬಗ್ಗೆ ಕೆಲವು ಪ್ರಸಂಗಗಳು ವರ್ಣಿತವಾಗಿವೆ. ಈ ಶಾಸನವನ್ನು ಫ್ಲೀಟ್‌ಸಾಹೇಬರು ವಿವೇಚನೆಯಿಂದಲೂ ಸೂಕ್ಷ್ಮವಿಮರ್ಶಕ ಬುದ್ಧಿಯಿಂದಲೂ ಟೀಕಿಸಿದ್ದಾರೆ. ಶಾಸನದಬಗ್ಗೆ ಅವರು ಹೇಳಿರುವ ವಿಚಾರಗಳಲ್ಲಿ ಮುಖ್ಯವಾದವುಗಳನ್ನು ಈ ಮುಂದೆ ವಿವರಿಸಲಾಗಿದೆ.

ಮುನಗೋಳಿ ಎಂಬುದು ಬಾಗೇವಾಡಿ ವಾಯುವ್ಯ ದಿಕ್ಕಿನಲ್ಲಿ ಹನ್ನೊಂದು ಮೈಲುಗಳ ದೂರದಲ್ಲಿರತಕ್ಕ ಒಂದು ಹಳ್ಳಿ. ಬಿಜಾಪುರದ ಡಿಸ್ಟ್ರಿಕ್ಟಿನ ಬಾಗೇವಾಡಿ ತಾಲೂಕಿನಲ್ಲಿ ಮುಖ್ಯವಾದ ಊರು. ಶಾಸನಗಳಲ್ಲಿ ಈ ಊರು ಮಣಿಗವಳ್ಳಿ, ಮಣಿಂಗವಳ್ಳಿ, ಮಾಣಿಕ್ಯವಳ್ಳಿ ಎಂದು ವರ್ಣಿತವಾಗಿದೆ. ಈ ಊರು ತರ್ದವಾಡಿ ಸಾವಿರದ ಹಳ್ಳಿಗಳಲ್ಲಿ ಒಂದಾಗಿತ್ತೆಂದು ಗೊತ್ತಾಗುತ್ತದೆ. ಈ ಮುನಗೋಳಿಯ ಶಾಸನಗಳು ಶಿಲಾಶಾಸನಗಳು. ಈ ಶಾಸನಗಳು ಈಗ ಹನುಮಂತನ ಗುಡಿ ಗೋಡೆಗಳಿಗೆ ಸಿಕ್ಕಿಸಲ್ಪಟ್ಟಿವೆ. ಡಾಕ್ಟರ್ ಫ್ಲೀಟ್ ಸಾಹೇಬರ ಕಡೆಯವರು ಈ ಶಾಸನಗಳಿಂದ ತೆಗೆದ ಮಸಿಯಚ್ಚುಗಳ ಮೇಲೆ ಸಾಹೇಬರು ತಮ್ಮ ವಿಮರ್ಶೆಯನ್ನು ಈ ಮುಂದೆ ಕಂಡಂತೆ ನಡೆಸಿದ್ದಾರೆ. ಮುನಗೋಳಿಯ ಮೊದಲನೆಯ ಶಾಸನ ಬಿಜ್ಜಳನ ಕಾಲದ್ದು. ಕ್ರಿಸ್ತಶಕ ೧೧೬೧. ಈ ಶಾಸನದ ಅಳತೆ ಎರಡು ಅಡಿ ಹತ್ತು ಅಂಗುಲ ಅಗಲ, ನಾಲ್ಕಡಿ ಆರೂವರೆ ಅಂಗುಲ ಎತ್ತರ. ಲಿಪಿ ಮತ್ತು ಭಾಷೆಗಳು ಕನ್ನಡದಲ್ಲಿವೆ. ಶಾಸನ ಕಲಚೂರಿ ವಂಶದ ಬಿಜ್ಜಳನ ಕಾಲದ್ದು. ಅವನ ಆಳ್ವಿಕೆಯಲ್ಲಿ ಮಾಡಿದ ಕೆಲವು ದಾನಧರ್ಮಗಳ ವಿಷಯವಾಗಿ ಹೇಳುವುದಕ್ಕೆ ಮೊದಲು ಶಾಸನವು ಪಂಕ್ತಿ ಒಂದರಿಂದ ಐವತ್ತೊಂಭತ್ತರ ವರೆಗೆ ಪಶ್ಚಿಮ ಚಾಳುಕ್ಯರ ದೊರೆಯಾದ ಎರಡನೇ ಪೆರ್ಮಾಜಗದೇಕಮಲ್ಲನ ಕಾಲದ ಕೆಲವು ಘಟನೆಗಳನ್ನು ವರ್ಣಿಸುತ್ತದೆ. ಆ ಭಾಗದ ಶಾಸನದಲ್ಲಿ ಕೆಲವರ ವಂಶಪರಂಪರೆ ಮತ್ತು ಇನ್ನೂ ಕೆಲವು ವಿಚಾರಗಳ ಅನಂತರ ಎರಡನೇ ಜಗದೇಕಮಲ್ಲ ಮತ್ತು ಇನ್ನೂ ಕೆಲವರು ದಕ್ಷಿಣ ಸಿದ್ಧಲಿಂಗನೆಂದು ಹೆಸರುವಾಸಿಯಾದ ಕಲಿದೇವೇಶ್ವರ ದೇವರಿಗೆ

ಬಿಟ್ಟದತ್ತಿಗಳ ವಿಚಾರ ವರ್ಣಿತವಾಗಿದೆ. ಪ್ರಥಮತಃ ಹರೀತಗೋತ್ರದ ಈಶ್ವರ ಘಳಿಸಾಸಾ ಎಂಬುವನ ಹೆಸರು ಬರುತ್ತದೆ. ಅವನು ಪಶ್ಚಿಮ ಚಾಳುಕ್ಯರ ದೊರೆಯಾದ ಎರಡನೆ ತೈಲನ ಕಾಲದಲ್ಲಿ ಜಗದ್ಗುರುವಾಗಿದ್ದನೆಂತಲೂ ಆ ತೈಲನ ಕಿರೀಟ ಧಾರಣೆಯ ಕಾಲದಲ್ಲಿ ಅವನಿಗೆ ಮಣಿಂಗವಳ್ಳಿಯು ದಾನಪೂರ್ವಕವಾಗಿ ಅರ್ಪಿಸಲ್ಪಟ್ಟಿತೆಂದೂ ವರ್ಣಿತವಾಗಿದೆ. ಇವನ ವಂಶದಲ್ಲಿ ಒಬ್ಬ ಮಾಧವನು ಬರುತ್ತಾನೆ. ಇವನೇ ಮಾದಿರಾಜ ಎಂದು ಶಾಸನದ ಮೂವತ್ತೇಳನೇ ಪಂಗ್ತಿಯಿಂದ ಗೊತ್ತಾಗುತ್ತದೆ. ಈತನು ಅಂದರೆ ಮಾದಿರಾಜನು ಮೇಲ್ಕಂಡ ದಾನವು ನಡೆದ ಕಾಲಕ್ಕೆ ಆ ಊರಿನ ಮಹಾಪ್ರಭುವಾಗಿದ್ದನು. ಮತ್ತೆ ಈ ಕಲಿದೇವೇಶ್ವರ ದೇವಸ್ಥಾನವು ಒಬ್ಬ ಬಸವ ಅಥವಾ ಬಸವರಸಯ್ಯ ಎಂಬುವನಿಂದ ಕಟ್ಟಲ್ಪಟ್ಟಿತೆಂದು ಹೇಳಿದೆ. ಈ ಬಸವನು ಚಂದ್ರ ಅಥವಾ ಚಂದಿರಾಜ ಮತ್ತು ಚಂದ್ರಾಂಬಿಕೆ ಇವರ ಗರ್ಭದಲ್ಲಿ ಹುಟ್ಟಿದವನು, ಕಾಶ್ಯಪ ಗೋತ್ರದವನು. ಮಣಿಗವಳ್ಳಿಯ ಐನೂರು ಮಹಾಜನರಲ್ಲಿ ಒಬ್ಬನು. ಈ ವಿಚಾರದಲ್ಲಿ ವಿಮರ್ಶೆಯ ಮಾಡುತ್ತ ಡಾಕ್ಟರ್ ಫ್ಲೀಟ್ ಸಾಹೇಬರು ಹೇಳುವುದೇನಂದರೆ:—

"And the occurance of the names of Basava and Madiraja in this Shaiva record from the neighbourhood of Bagewadi and in connection with the foundation and endowment of a Linga temple which was evidently of some considerable size and repute, is rather suggestive of our having at last met with an epigraphic mention of the original of that Basava who, according to the Lingayat traditions as embodied in the Basava Purana and Channabasava Purana, was born at Bagewadi to a Saiva Brahmin named Madiraja and subsequently becoming the prime minister of the Kalachurya King Bijjala, over threw the Jains, revived Saivism and established the sect of Veerasaivas or Lingayats."

ಅಂದರೆ "ಬಾಗೇವಾಡಿಯ ಸರಹದ್ದಿನ ಒಂದು ಶೈವಶಾಸನದಲ್ಲಿ, ಅದರಲ್ಲೂ ತಕ್ಕಮಟ್ಟಿಗೆ ದೊಡ್ಡದಾದ ಮತ್ತು ಹೆಸರುವಾಸಿಯಾದ ಒಂದು

ಶಿವಲಿಂಗ ದೇವಸ್ಥಾನವನ್ನು ಸ್ಥಾಪನೆಮಾಡಿದ ಮತ್ತು ಆ ದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟ ಸಂದರ್ಭಗಳಲ್ಲಿ, ಬಸವ ಮತ್ತು ಮಾದಿರಾಜ ಇವರ ಹೆಸರುಗಳು ಬರುವುದರಿಂದ ಬಸವ ಪುರಾಣ, ಚನ್ನಬಸವ ಪುರಾಣಗಳಲ್ಲಿ ಉಲ್ಲೇಖವಾಗಿರುವ ಸಂಗತಿಗಳ ಪ್ರಕಾರ ಯಾವ ಬಸವನು ಬಾಗೇವಾಡಿಯಲ್ಲಿ ಶೈವ ಬ್ರಾಹ್ಮಣನಾದ ಮಾದಿರಾಜನ ಹೊಟ್ಟೆಯಲ್ಲಿ ಹುಟ್ಟಿ ಕಲಚೂರ್ಯ ದೊರೆಯಾದ ಬಿಜ್ಜಳನ ಪ್ರಧಾನ ಮಂತ್ರಿಯಾಗಿ ಜೈನರನ್ನು ಜೈಸಿ, ಶೈವ ಧರ್ಮವನ್ನು ಉದ್ಧರಿಸಿ, ವೀರಶೈವ ಅಥವಾ ಲಿಂಗಾಯತ ಮತವನ್ನು ಸ್ಥಾಪಿಸಿದನೋ, ಆ ಬಸವನ ವಿಷಯವಾಗಿ ಕೊನೆಗೆ ಒಂದು ಶಿಲಾಶಾಸನವು ಸಿಕ್ಕಿತು'' ಎಂದು ಅಭಿಪ್ರಾಯಪಟ್ಟಿದ್ದಾರೆ.

ಶಾಸನದ ಉಳಿದ ಭಾಗದಲ್ಲಿ ಅಂದರೆ ಪಂಗ್ತಿ ಐವತ್ತೊಂಬತ್ತರಿಂದ ಕೊನೆಯವರೆವಿಗೂ ಕಲಚೂರ್ಯ ದೊರೆಯಾದ ಬಿಜ್ಜಳನ ಆಳ್ವಿಕೆಯಲ್ಲಿ ನಡೆದ ಮತ್ತೆ ಕೆಲವು ಸಂಗತಿಗಳು ವರ್ಣಿತವಾಗಿವೆ. ಒಟ್ಟಿನಲ್ಲಿ ಈ ಶಾಸನದಲ್ಲಿ ಕಲಿದೇವೇಶ್ವರದೇವರ ವಿಷಯ ಮತ್ತು ಆ ದೇವರಿಗೆ ದತ್ತಿಯನ್ನು ಬಿಟ್ಟ ವಿಷಯ ಬರುತ್ತವೆ. ಈ ದೇವರ ವಿಷಯವನ್ನು ವರ್ಣಿಸುವಾಗ ಮೇಲೆ ಹೇಳಿದಂತೆ ಬಸವನ ಹೆಸರು ಬರುತ್ತದೆ.

ಈ ಶಾಸನದ ವಿಷಯಗಳು ಎರಡು ಕಾಲಗಳಿಗೆ ಸಂಬಂಧಪಟ್ಟವು. ಒಂದನೇ ಕಾಲವು ಬಿಜ್ಜಳನಿಗೆ ಪೂರ್ವದುಂದುಭಿ ಸಂವತ್ಸರದಲ್ಲಿ ಎರಡನೇ ಪೆರ್ಮಜಗದೇಕಮಲ್ಲನ ಆಳ್ವಿಕೆಯ ಐದನೆಯ ವರ್ಷಕ್ಕೆ ಸೇರಿದ್ದು ಅಂದರೆ ಕ್ರಿಸ್ತಶಕ ೧೧೪೨ ನೆ ವರ್ಷದ್ದು. ಎರಡನೆಯ ಕಾಲವು ಬಿಜ್ಜಳನ ಆಳ್ವಿಕೆಯ ಆರನೆಯ ವರ್ಷಕ್ಕೆ ಸೇರಿದ್ದು. ವಿಷುಸಂವತ್ಸರ ಅಂದರೆ ಕ್ರಿಸ್ತಶಕ ೧೧೬೧ ನೇ ವರ್ಷಕ್ಕೆ ಸೇರಿದ್ದು.

## ಶಿಲಾಶಾಸನದ ಪಾಠ.

೧ ಓಂ ಓಂ ನಮಶ್ಶಿವಾಯಃ ॥ ನಮಸ್ತುಂಗ ಶಿರಶ್ಚುಂಬಿಚಂದ್ರ ಚಾಮರ ಚಾರವೇತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಾಂಭವೇ ॥ ಓಂ ಶ್ರೀಮತ್ ಕಾಂ

೨ ಚನಕಾಂತಿ ಬಂಧುರಿತ ವಾಶಾ ಸಿಂಧುರ ಶ್ರೇಣಿ ಧಾತ್ರಿ ಮಧ್ಯಾಂ ನೆಲೆದೇವದಂಪತಿ ಶತಕ್ರೀಡಾವಿಲಾಸಂ ನಿಜೋದ್ದಾಮ ಶ್ರೀಗಭಿರಾಮಧಾಮ

೩ ವೆನೆ ಸಪ್ತ ದ್ವೀಪ ಸಪ್ತಾರ್ಣವಸ್ತೋಮಾಳಂಕೃತಿ ರಂಜಿಕುಂ ವಿವಿಧ ಕೇಳೀಕಂದರಂ ಮುಂದರಂ॥ ಕನಕ ನಗ ದಕ್ಷಿಣೋರ್ವೀವನಿತಾ ಕುಂತಳವೆನಿಪ್ಪ ಕುಂತಳಧರೆಯುಂ

೪ ವಿನುತಂ ಚಾಳುಕ್ಯರಾಜ್ಯರ್ಮ್ಮನುಸೂತ್ರದ ಟೀಕಿಡೆಂಬಿನಂ ಚಾರಿತ್ರಂ॥ ವಾಸವ ವಿಳಾಸದಿಂ ಸಿಂಹಾಸನವಷ್ಟಾದಶಂ ಪ್ರವರ್ತಿಸೆ ರಾಜ್ಯಶ್ರೀಸತಿಯೊಳ್ ನೆರೆ

೫ ದ ಯಶೋಭಾಸುರ ಚಾಳುಕ್ಯರೊಳಗೆ ಹದಿನೆಂಟನೆಯಲ್॥ ತ್ರಿಭುವನ ವಿಶ್ರುತಂಕಿಸುವಳಲ್ ತನಗನ್ವಯು ರಾಜಧಾನಿಯಾದಭಿನುತ ಕೀರ್ತಿಕಟ್ಟಿಯುರದೇವ

೬ ನ ತಂದೆಯು ತಮ್ಮನನ್ವಯು ಪ್ರಭವರೆನಿಪ್ಪ ಪಟ್ಟದ ಚಳುಕ್ಯರ ಸಂತತಿಯೊಳ್ ಸುರೇಂದ್ರ ಸನ್ನಿಭನೆಸೆದಂ ಚಳುಕ್ಯ ಕುಲಭೂಷಣನ್ ಅಯ್ಯಣದೇವಭೂಭುಜಂ॥ ಪೆಸ

೭ ರ್ವೆತ್ತ ಅಯ್ಯಣನೃಪತಿಗೆ ಜಸವೆಸೆವ ಚಳುಕ್ಯ ವಿಕ್ರಮಾದಿತ್ಯಂ ಸಾಹಸಮೇರು ಪುಟ್ಟಿದಂ ಶ್ರೀವಸುದೇವಂ ಪುಟ್ಟುವಂತೆ ಯಾದವ ಕುಲದೊಳ್॥ ಕ್ಷಿತಿಮಹಿತಕೀರ್ತಿಡಹ

೮ ಳಾಪತಿ ಲಕ್ಷ್ಮಣರಾಜಪುತ್ರಿ ಸೌಭಾಗ್ಯಸಮನ್ವಿತೆ ಬೊಂತಾದೇವಿ ಜಗನ್ನುತೆ ದೇವದೇವಕಿಯೆನಿಸಿ ವಿಕ್ರಮಾಂಗನೆಯಾದಳ್॥ ರಟ್ಟನೃಪದಿತಿಜಕುಳಸಂಘಟ್ಟದಿನಘಪಟ್ಟಚಳ್

೯ ಕಿ ಕುಳಕಭ್ಯುದಯಂ ಪುಟ್ಟೆ ಭಯುವಹಿತರಂ ಬೆನ್ನಟ್ಟೆ ದಿಶಾಧಿಪರ ಸಭೆಗಳಂ ಮುಟ್ಟೆ ಜಸ॥ ಆದಿಯು ಚಳುಕ್ಯವಂಶ ಮಹೋದಧಿಶಶಿಯೆನಿಪ ವಿಕ್ರಮಾಂಕಂಗಂ ಬೊಂತಾದೇವಿ

೧೦ ಗಂ ಮಗಂ ತಾನಾದಿ ಕೃಷ್ಣಾವತಾರ ಲೀಲಂ ತೈಲಂ॥ ಬಂಟನಮೆಯ್ಗಲಿ ತೈಲಂ ತೆಂಟಣಿಸುವರಳವೇ ಬಯಲ ಕಾಳೆಗಮಂ ನೂರೆಂಟಂ ಕಾಡಿದನೆಂಬತ್ತೆಂಟಂ ಕೊಂಡಂ ಪ್ರತಾಪದಿಂ ಕೋಟೆಗಳಂ॥ ಬೆದ

೧೧ ರದ ಮುಂನೆಯುರ್ ಬಿರುತುಪೋಗದ ಮುಂಡಳನಾಥರರ್ಗಿತರ್ಗದ ನೆಲೆಗೋಟೆ ಧೂಳಿಪಟವಾಗದ ದುರ್ಗಕುಳಂ ಕುನುಂಗಿ ಪಿಂಗದ ಪರಮಂಡಳಂ ನಡುಗಿ ಕಪ್ಪಮನೀಯುದ ವೈರಿರಾಯು

೧೨ ರಾರದಟನ ಬಾಹುಸಾಹಸ ಸಮಗ್ರತೆಗಾಹವಮಲ್ಲತೈಲನ ॥ ಪರಿಯತ್ತೀಕಾಂಗ ವೀರಂ ಮಸಗಿದ ಜವನಂ ಪೋಲ್ತು ತದ್‌ರಾಷ್ಟ್ರಕೂಟಾಂಬರ ಭಾಸ್ವಚ್ಚಂದ್ರರಂ ಕಕ್ಕರನೃಪರಣ

೧೩ ಕಂಭಾವನೀಪಾಳರಂ ಸಂಹರಿಸುತ್ತಂ ಜೀಯುಬಪ್ಪೆಂಬಿನವ ವನಿತಳಂ ಕುಂತಳೋರ್ವೀಯುಶೋಭಾಸುರ ರಾಜ್ಯಶ್ರೀಯುನತ್ಯಾಯುತಿಯೊಳೆತಳೆದಂ ಲೀ(ಲೆ) ಯಿಂ ತೈಲರಾಜ ॥ ಧ

೧೪ ರಣಿಯುನಾರಸಾ (ತ) ಳದೊಳಾರ್ದುದನಾಡಿ ವರಾಹ ರೂಪದಿಂ ಸರಸಿಜನಾಭನುದ್ಧರಿಸಿದಂದದೆ ರಟ್ಟನೃಪಪ್ರಘಟ್ಟದಿಂ ಜರಿದ ಚಳುಕ್ಯರಾಜ್ಯಮನಿಳಾನುತಕೀರ್ತಿವರಾಹ

೧೫ ಚಿಹ್ನನುದ್ಧರಿಸಿದನೀಜಗಕ್ಕೆ ಕಲಿ ತೈಲನೆ ಮರ್ತ್ಯಮುಕುಂದನಲ್ಲನೇ ॥ ಚಾಳುಕ್ಯ ರಾಜ್ಯಲಕ್ಷ್ಮೀಲೀಲಾ ಗಂಗಾನದೀ ಹಿಮಾಚಳನಖಿಳೋರ್ವೀಲಲನೇಶಂ ನೂರ್ಮಡಿತೈಲಂ ತ್ರೈಲೋಕ್ಯ ಮ

೧೬ ಲ್ಲ ಸಾಹವಮಲ್ಲ ॥ ಪರಮಾಶೀರ್ವಾದ ಪರಂಪರೆ ನಿಜರಾಜ್ಯಾಭಿವೃದ್ಧಿಗುದ್ಭವಪೆನಿಪೀಶ್ವರ ಘಳಿಸಾಸಂಗೆ ಜಗದ್ಗುರುಗೆ ಹರೀತಾಬ್ಜರವಿಗೆ ಧಾರಾಪೂರ್ವ ॥ ರಟ್ಟಘ

೧೭ ರಟ್ಟವೆಸರ್ಧರೆಗಿತ್ತಳವೆನೆ ರಾಜ್ಯ ಪಟ್ಟಬಂಧೋತ್ಸವದೊಳ್ಕೊಟ್ಟಂ ಮಣಿಂಗವಳ್ಳಿಯನೊಟ್ಟ ಜಿಕೆಗೆ ಕಳಸವಿಡುವ ತೆರದಿಂ ತೈಲ ॥ ಧರೆಪೊಗಳಲು ಚಳುಕ್ಯ ಪತಿತೈಲ ನೃ

೧೮ ಪಾರ್ಚಿತ ಪಾದನಿತ್ತನೀಶ್ವರ ಘಳಿಸಾಸನೂರ್ಜಿತ ಹರೀತಕುಳಾಗ್ರಣಿ ತಾನೆ ಮುಖ್ಯವಾಗಿರೆ ವರವಿ ಪ್ರಪಂಚ ಶತರಾಜಿಗೆ ಪೂಜಿಸಿತರ್ದವಾಡಿ ಸಾಸಿರದೊಳಗೊಳ್ಳಿತಂ ಮ

೧೯ ಣಿಗವಳ್ಳಿಯ ನೀ ಶಶಿ ಸೂರ್ಯರುಳ್ಳಿನಂ॥ ಆ ಪ್ರಭುವಿನನ್ವಯದಲ್ಲಿ॥ ಅಭಿಮಾನೋಂನತಿ ಮಂದರಾದ್ರಿಗೊರೆಯುಂ ಕಟ್ಟಿತು ವಾರಾಂಗನಾಸುಭಗತ್ವಂ ಮದನಂಗನಾದರಣೆ

೨೦ ಯಂ ಮಾಡಿತ್ತು ಸ(ಶ)ಶ್ವದ್ವಚೋವಿಭವಂ ಕರ್ಣನನೇಳಿಸಿತ್ತೆನಿಸುವಂ ಮಾಣಿಕ್ಯವಳ್ಳಿಪುರಪ್ರಭುವಿಖ್ಯಾತ ಹರೀತಗೋತ್ರ ವಿಳಸಲ್ ಲಕ್ಷ್ಮೀಧವಂ ಮಾಧವ॥ ಮಹಾಜನಂಗಳ

೨೧ ಯ್ಯೂರ್ವರ ಮಹಿಮೆಯೆಂತೆನೆ॥ ವರ ವರ್ಣಾಶ್ರಮ ಧರ್ಮ ನಿರ್ಮಳ ಗುಣಶ್ರೀ ವೇದವೇದಾಂಗ ವಿಸ್ತರ ಶಾಸ್ತ್ರಾರ್ಥ ವಿಚಾರಸಾರ ಸತತಸ್ವಾಧ್ಯಾಯ ಯಜ್ಞಕ್ರಿಯಾ ಗುರು ಪೂ

೨೨ ಜಾಕರ ವಿಪ್ರಪಂಚಶತ ಚಂಚದ್ ಬ್ರಾಹ್ಮ್ಯತೋಜೋ ನಯಾಭರಣಂ ರಂಜಿಸುಗುಂ ಮಹೀಸುರಪುರಂ ಮಾಣಿಕ್ಯವಳ್ಳಿಪುರ॥ ಮನು ಮಾರ್ಗಕ್ಕೆ ಮಣಿಪ್ರದೀಪವೆನಿಸಿತ್ತಾಚಾರ ಸಂಪತ್ತಿ

೨೩ ಸಜ್ಜನ ಹರ್ಷಾಬ್ಧಿಗೆ ಚಂದ್ರಲಕ್ಷ್ಮಿಯೆನಿಸಿತ್ತೌದಾರ್ಯವುಗ್ರದ್ವಿಷದ್ಘನದರ್ಪಾದ್ರಿಗೆ ಬಲ್ಪು ವಜ್ರವೆನಿಸಿತ್ತೆಂದಂದು ಬಾಹ್ಯೋಪರಂ ಜನರೇ ಬಾಪ್ಪುಮಣಿಂಗವಳ್ಳಿಯ ಮಹೀದೇ

೨೪ ವರ್ಕಳಯ್ಯೂರ್ವರು॥ ಚಾರುತೆಯ ಸಹಜ ಸಾರತೆರಾರಾಜಿಪ ತರ್ದವಾಡಿ ಸಾಸಿರವೆಂಬೀ ನಾರಿಯ ಕುಚರುಚಿರಾಳಂಕಾರವೆನಲ್ ಧರೆಗೆ ಮಣಿಗವಳ್ಳಿಯೆಸೇವ್ಯಂ॥ ಆ

೨೫ ನೆಗಳ್ದ ಮಣಿಗವಳ್ಳಿಯ ಭೂನುತರ್ಪೈನೂರ್ವರೊಳಗೆ ಕಾಶ್ಯಪ ಗೋತ್ರಾಂಭೋನಿಧಿ ಶಶಿಗೋವರ್ಧನನಾನತರಿಪುವಾಜಿವಂಶವರ ನುದ ಯಿಸಿದಂ॥ ಹುರ್ವಿನ ಜರ್ವುವಿಶಿ

೨೬ ಷ್ಟರ ಹರ್ವಿದ ಬಡತನದ ಕೊರ್ವನುಡುಗಿಸುಮುದರಿಂ ಹುರ್ವಿನವರೆಂಬ ನಾಮದ ಗುರ್ವಿನ ಗೋವರ್ಧನಂಗೆ ನಂದನನೆನಿಪ॥ ಜನನುತ ರೇವದಾಸವಿಭುಗಾತ್ಮಜರಾಗ್ರಣಿನಾಗದೇವನೊ

೨೭ ಳ್ಪನ ಕಣಿ ವಿಷ್ಣುಪುಣ್ಯ ನಿಧಿ ಗೊಯ್ಯರಸಂ ಹುಳಿಧಂ ಧರಿತ್ರಿ ಜೀಯೆನೆ ಪೆಸರ್ವೆತ್ತ ನಾಲ್ವರವರೀ ಕಿರಿಯಂ ಹಿರಿಯಂ ಜಗಕ್ಕೆ ಸಜ್ಜನ ನಿಧಿ ಚಂದ್ರಮಂ ಜಸಮ ನೆಯ್ದಿಸಿದಂ ಹಿಮವಂನಗೇ (೦)

೨೮ ದ್ರಮಂ॥ ಆ ಚಂದಿರಾಜ ವಿಭುಗಂ ಶ್ರೀ ಚಂದ್ರಾಂಬಿಕೆಗಮಾತ್ಮಜಂ ಪುಟ್ಟಿದನುರ್ವೀಚಕ್ರ ನುತಗುಣಾಬ್ಧಿ ಸದಾಚಾರತೆಯಿಂ ನಿಮಿರ್ಚಿ ಜಸಮಂ ಬಸವ॥ ಪರಹಿತದೊಳ್ಪರಾಕ್ರಮದೊಳಾರ್ಪಿನೊ

೨೯ ಳೂರ್ಜಿತ ಶಕ್ತಿಯೊಳ್ಮಹೇಶ್ವರ ಪದ ಭಕ್ತಿಯೊಳ್ತನಗೆ ಪಾಸಟಿಯಾರ್ಪ್ಪಿರರೆಂಬ ಹೆಮ್ಮೆಯೊಳ್ನಿರೆದು ಮಣಿಂಗವಳ್ಳಿಯಧರಾಮರ ಪಂಚಶತಾನುರಾಗ ಪಂಕರುಹವಿ

೩೦ ಕಾಸ ಭಾಸ್ಕರನೆನಲು ನೆಗಳ್ದಂ ಬಸವಂ ಗುಣಾಕರ॥ ಕೈಯ್ಯಂ ನೊಸಲ್ಗಿದಂದೆಮ್ಮಯ್ಯಂ ಗುಣಿಯೆಂದು ಪೊಗಳೆಧರೆ ಸಲೆ ಲೋಕಕ್ಕಯ್ಯ ನೆನಿಸಿಪ್ಪ ಬಸವರಸಯ್ಯಂ ಶ್ರೀಮಣಿಗವ

೩೧ ಳ್ಳಿಗೂರ್ಜಿತವೆನಿಸಲ್ ॥ ಓಂ ॥ ಇದು ವೇದತ್ರಯ ತತ್ವ ಧಾಮ ವಿದನಂ ತಾನಾದಿ ಸಂಸಿದ್ಧವಿಂತಿದು ತೇಜೋಮಯ ದಿಬ್ಯ ಲಿಂಗ ವಿದು ಲೀಲಾಲೋಕಸಾಂನಿಧ್ಯವೆಂಬ ದಯಾಭ್ಯುಂನತಿ ಚಂ

೩೨ ನ ನಾದ ಕಲಿದೇವೇಶಂಗೆ ಲೋಕೋತ್ಸವಾಸ್ಪದವಂ ಮಾಡಿ ಸಿದಂ ನಿಜಾನ್ವಯ್ಯಶಸ್ಸಂದೋಹವಂ ಗೇಹವಂ॥ ಇದು ರಜತಾದ್ರಿಯಿಂದ ಧಿಕವೆಂಬಿನೆಗಂ ಬಸವಂ ನಿವಾಸ ಸಂಪದವನೊ

೩೩ ದರ್ಚಿದಂ ಮಣಿಗವಳ್ಳಿಯ ವಿಪ್ರವರರ್ನ್ನಬೀರನೊಳ್ಪದು ವೆನಿಸಿರ್ಪ ಭಕ್ತಿಯುತರಿಲ್ಲಿಯೆ ಸಂತತವಿರ್ಪನೆಂಬ ಸನ್ನಿದತನ ವೊಪ್ಪ ವಂತೆ ಕಲಿದೇವ ಮಹೇಶ ನಿವಾಸ ವೊಪ್ಪುಗುಂ ॥

೩೪ ಸಲೆ ಮೂರುಂ ಜಗವೊಲ್ದುಪಾರ್ಜಿಸಿದ ಪುಣ್ಯಂ ಮೂರ್ತಿ ಪೆತ್ತಂತೆ ನಿರ್ಮಳ ಧರ್ಮೋಂನತಿಸನ್ನುತಂ ಸಕಳ ಲಕ್ಷ್ಮೀವಾಸ ಮಾದಂತೆ ಭೂಲಲನಾಳಂಕೃತಿ ರತ್ನರಾಶಿ ನೆರೆದಿರ್ದಂತಾವಗಂ ರಂಜಿ

೩೫ ಕುಂ ಕಲಿದೇವೇಶ ವಿಳಾಸ ಭೂಸುರ ಗೃಹಂ ಲೋಕೈಕ ಶೋಭಾವಹಂ ॥ ಓಂ ॥ ಓಂ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪೃಥ್ವೀ ವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರ

೩೬ ಮ ಭಟ್ಟಾರಕಂ ಸತ್ಯಾಶ್ರಯ ಕುಳತಿಲಕಂ ಚಾಳುಕ್ಯಾಭ ರಣಂ ಶ್ರೀಮತ್ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವರು ಕಲ್ಯಾಣ ಪುರದ ನೆಲೆವೀಡಿನೊಳ್ಸುಖ ಸಂಕಥಾವಿನೋ

೩೭ ದದಿಂ ರಾಜ್ಯಂಗೆಯ್ಯುತ್ತಮಿರೆ ತತ್ಪಾದ ಪದ್ಮೋಪಜೀವಿ ಮಹಾಪ್ರಚಂಡ ದಂಡನಾಯಕಂ ಮನೆವೆರ್ಗಡೆ ಬಮ್ಮಣಯ್ಯಂಗಳ್ ಮಹಾ ಪ್ರಭು ಮಾದಿರಾಜ ಪ್ರಮುಖ

೩೮ ಮಹಾ ಜನಂಗಳ್ಪೈನೂರ್ವರನು ಮತದಿಂ ಬಿಂನಪಂ ಗೆಯ್ಯಲವ ಧಾರಿಸಿ ಶ್ರೀಮಜ್ಜಗದೇಕಮಲ್ಲದೇವರು ಮಣಿಂಗವಳ್ಳಿಯ ದಕ್ಷಿಣ ಶ್ರೀಸಿದ್ಧ ಲಿಂಗ ಕಲಿದೇವೇಶ್ವರ

೩೯ ದೇವರ್ಗೆ ನಿಜಭುಜ ವಿಜಯನಾಮಾಂಕಿತ ವರ್ಷದ ೫ನೆಯ ದುಂದುಭಿ ಸಂವತ್ಸರದ ಪುಷ್ಯ ಶುದ್ಧ ೧೦ ಬೃಹಸ್ಪತಿವಾರದಂದುತ್ತರಾಯಣ ಸಂಕ್ರಾಂತಿವ್ಯತೀಪಾತಪ

೪೦ ರ್ವ ನಿಮಿತ್ತವಾಗಿ ಜಗತ್ತುಂಗ ಭುಜಂಗಾವಳೀ ಕುಳತಿಳಕ ಕಾಳಾಮುಖ ನೈಷ್ಠಿಕ ಪರಮ ತಪೋನಿಷ್ಠ ಬ್ರಾಹ್ಮ್ಯಕುಳಬಾಳ ಬ್ರಹ್ಮಚಾರಿ ಶ್ರೀಸದ್ಯೋಜಾತ ಪಂಡಿತದೇವರ

೪೧ ಕಾಲಂಕರ್ಚಿ ಧಾರಾಪೂರ್ವಕಂ ಮಾಡಿ ದೇವಕಾರ್ಯಮಂ ನಡೆಯಿಸುವಂತಾಗಿ ಮಣಿಂಗವಳ್ಳಿಯ ತೆಂಕಣ ಹೊಲದ ಮೊಗೆವಾಡದೊಳಗೆ ಕಲ್ಲಂ ಗುರುಕೆಯ ಬ

೪೨ ತ್ತೆಯಿಂ ಪಡುವಲು ಹೊಂನೊಲೆಯವರಕೆಯಿಂ ಮೂಡಲು ಮೂಲಸ್ಥಾನ ದೇವರ ಕೆಂಗಣವ್ವೆದೇವಿಯಕೆಯ್ಯಿಂ ಬಡಗಲು ಚನ್ನಗೇಸಿಮಯ್ಯನ ಬಿಟ್ಟಿಯರವರಮೊಗೆಯಿಂ ತೆಂಕ

೪೩ ಳ್ ಕಟ್ಟೆದಲಗಿನ ನಾಲ್ವತ್ತುಗೇಣಹಂದಿಯಗಡಿಂಬದಘಳೆಯ ಮತ್ತರಯ್ವತ್ತಂ ಕೊಟ್ಟರಾಮತ್ತರ್ ೫೦ ರೊಳಗೆ ದೇವರಂಗಭೋಗ ಚೈತ್ರಪವಿತ್ರ ಧೂಪಾರತಿನೈವೇ

೪೪ ದ್ಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ಮತ್ತರಿಪ್ಪತ್ತೈದು ಮಠದ ಶ್ರೀಶಾರದಾದೇವಿಯರಂಗಭೋಗಕ್ಕಂ ತಪೋಧನರಾಹರ ದಾನಕ್ಕಂ ಮತ್ತರೆಂಟು ಮಠದಲು ಕೌಮಾರಮಂ

೪೫ ವಕ್ಖಾಣಿಸುವುಪಾಧ್ಯಾಯರ್ಗ್ಗೆ ಮತ್ತರೈದು ದೇವರ ಬ್ರಹ್ಮಪುರಿಗಳ್ ನಾಲ್ವರ್ಗ್ಗಂ ಮತ್ತರೆಂಟು ಅಮೃತರಾಶಿಪಂಡಿತರ್ಗೆ ಮೂಲಿಗವೃತ್ತಿಯಾಗಿ ಸರ್ವಬಾಧಾಪರಿಹಾ

೪೬ ರವಾಗಿ ಕಾದಾಡುವಮತ್ತರ್ನಾಲ್ಕು ಅಂತು ಮತ್ತರ್ ೫೦ ಕ್ಕವರುವಣವಂ ಮತ್ತರಿಂಗೆ ಹಂದಿಯಸಲಿಕೆಯೊಂದಂ ತೀರುವರ್ ॥ಓಂ॥ ದೇವರ ಹೂದೋಂಟಕ್ಕೆ ನೀರ್ಗುಳಿಯ

೪೭ ಹಳ್ಳದಿಂ ಬಡಗಲು ವಳಜಿಕವೆಯ ಕೇಸ್ಯಣನ ತೋಂಟದಿಂ ಮೂಡಲ್ ಮಹಾವಿಷ್ಣುಭಟ್ಟರ ತೋಟದಿಂ ತೆಂಕಲ್ ಕುಳಿಯಬಸದಿಯ ತೋಂಟದಿಂ ಪಡುವಲ್ ಹಾರುವಗೋಲ

೪೮ ಮತ್ತರೊಂದುಮಂ ಸರ್ವನಮಶ್ಯವಾಗಿ ಕೊಟ್ಟರು ॥ಓಂ॥ ಸತ್ರದಮನೆಯಿಂ ಪಡುವಲು ಭಾಗವತಿಗೇರಿಯ ಬೀದಿಯಿಂ ಬಡಗಲ್ ರಾಜಬೀದಿಯಿಂ ಮೂಡಲ್ ಐತಮ ಸೆ

೪೯ ಟ್ಟಿಯಂಗಡಿಯಿಂ ತೆಂಕಲ್ ದೇವರ್ಗೆ ಸರ್ವ ನಮಶ್ಯವಾಗಿ ಕೊಟ್ಟ ಅಂಗಡಿ ನಾಲ್ಕು ॥ಓಂ॥ ದೇವರ ಕೇರಿಯೊಳಗೆ ದೇವರ್ಗೆ ನಂದಾದೀ ವಿಗೆಗೆ ಸರ್ವನಮಶ್ಯವಾಗಿ ಕೊಟ್ಟ ಗಾಣವಂದು ॥ಓಂ॥ ದೇವ

೫೦ ರ ಕೇರಿಯೊಳಗೆ ದೇವರ ಬ್ರಹ್ಮಪುರಿಗ [ಳ್] ನಾಲ್ವರ್ಗ್ಗಂ ಅಮೃತರಾಶಿಪಂಡಿತರು ಕೊಟ್ಟ ನಿವೇಶನಂ ನಾಲ್ಕು ಅಲ್ಲಿ ಕೌಮಾರದು ಪಾಧ್ಯಾಯರ್ಗೆ ಕೊಟ್ಟ ನಿವೇಶನವಂದು ॥ಓಂ॥ ದೇವರ

೫೧ ಕೇರಿಯೊಳಗೆ ದೇವರ ಬ್ರಹ್ಮಪುರಿಗಳ ನಿವೇಶದಿಂ ತೆಂಕಲ್ ಸಾವಣಂಗೆ ಅಮೃತರಾಶಿ ಪಂಡಿತರ್ ಕೊಟ್ಟ ನಿವೇಶನವಂದು ಆ ನಿವೇಶನಂಗಳ ಪ್ರಮಾಣು ತೆಂಕಣಾದಿಯಿಂ ಮೊ

೫೨ [ದ] ಲೊಂದು ಬಡಗಣ ಮೇರೆವರ(ಂ) ನಾಲ್ಗೇಣ ಪ್ರಮಾ ಣಿನ ಕೈಯ್ಯಲು ಪಂಸೂತ್ರದಿಂ ಪಡುವಲ್ ಮೂಗೆಯ್ಯ ಬಟ್ಟೆಯಂ ಕಳೆದಿಂ ನೇಸರಗಲದಲ್ ನಿವೇಶನ ದಗಲವರುಗಯ್ಯಿನೀಳ

೫೩ ಹದಿನಯ್ದು ಕಯ್ಯ ಪ್ರಮಾಣು ॥ ಓಂ ಸ್ವಸ್ತಿ ವಿಜ್ಞಾತಾ ನೇಕ ವೇದವೇದಾಂಗ ತತ್ವಜ್ಞಾನ ಮಾರ್ತಾಂಡ ಜ್ವಾಲಾಮಂಡಿತ ಪುಂಡರೀಕಾಕ್ಷ ಬ್ರಹ್ಮ ಲಕ್ಷ್ಮೀ ಲಕ್ಷಿತ ವಿಶಾಲವಕ್ಷಸ್ಥಳ ಹಂಸ

೫೪ ಯುವತೀ ಸರಾಜಿ ವಿರಾಜಮಾನರಪ್ಪ ಶ್ರೀಮದುತ್ತ[ಮ] ದಗ್ರಹಾರಂ ಮಣಿಂಗವಳ್ಳಿಯ ಮಹಾಪ್ರಭು ಮುಖ್ಯವಶೇಷ ಮಹಾ ಜನಂಗಳಯ್ನೂರ್ವರ್ ವೀ ಧರ್ಮಮಂತಂಮ

೫೫ ಧರ್ಮವಾಗಿ ಸದ್ಧರ್ಮದಿಂ ಶಾಸನ ಮರ್ಯಾದೆಯಿಂ ದಿವಾ ಚ[ಂದ್]ರಾರ್ಕತಾರಂ ಬರಂಪ್ರತಿಪಾಳಿಸುವರ್ ॥ ಸಾಮಾನ್ಯೋಯಂ ಧರ್ಮಸೇತುರ್ ನೃಪಾಣಂ ಕಾಲೇಕಾಲೇ ಪಾಲನೀಯೋ

೫೬ ಭವದ್ಭಿಃ ಸರ್ವಾನೇತಾಂನ್ಭಾಗಿನಃ ಪಾರ್ಥಿವೇನ್ದ್ರಾನ್ ಭೂ ಯೋ ಭೂಯೋ ಯಾಚತೇ ರಾಮಚಂದ್ರಾಃ ॥ ಸ್ವದತ್ತಾಂ ಪರದತ್ತಾಂ ವಾಯೋ ಹರೇತಿ ವಸುಂಧರಾಂ ಷಷ್ಟಿರ್ವರ್ಷ ಸಹಸ್ರಾಣಿ

೫೭ ವಿಷ್ಠಾಯಾಂ ಜಾಯತೇ ಕ್ರಿಮಿಃ॥ ಶಾಸನಮಿದಾವುದೆಲ್ಲಿಯು ಶಾಸನವಾಃರಿತ್ತರೇಕೆ ಪಲಿಸುವೆ ನಿಂತೀ ಶಾಸನಮನೆಂಬ ಪಾತಕನ ಸಕಲಂ ಕೌರವಕ್ಕೆ ಗಳಗಳ ನಿಳಿಗುಂ

೫೮ ಊರೊಡೆಯರಕ್ಕೆ ಗಣವಕ್ಕ್ಯರಾಳ್ವರಸಕ್ಕೆ ನಾಡಕೊಂಡೆಯ ರಕ್ಕಿಂತಾರೀ ಧರ್ಮಮನಳಿದಡೆಪೋರಂತಿರೆ ಕೌರವಕ್ಕೆ ಗಳಗಳನಿಳಿಗುಂ॥ ಗಂಗಾಸಾಗರ ಯಮುನಾ ಸಂಗಮದೊಳ್ ವಾರಣಾಸಿಗ

೫೯ ಯೆ ಯೆಂಬೀ ತೀರ್ಥಂಗಳೊಳಗಣಿತ ಸದ್ವಿಜ ಪುಂಗವ ಗೋಕುಲವನಳಿದ ನಿಂತಿ[ದನ]ಳಿದ[ಂ]॥ ಓಂ ಸ್ವಸ್ತಿ ಶ್ರೀಮತ್ ಕಳ ಚುರ್ಯ ಭುಜಬಳ ಚಕ್ರವರ್ತಿ ತ್ರಿಭುವನೈಕ ವೀರ ಬಿಜ್ಜಳದೇವ ವರ್ಷ

೬೦ ದ ೬ನೆಯ ವಿಷು ಸಂವತ್ಸರದ ಭಾದ್ರಪದ ಬಹುಳ ೬ ಮಂಗಳವಾರದಂದು ಸ್ವಸ್ತಿಸಮಸ್ತವಸ್ತು ವಿಸ್ತೀರ್ಣ ಘೂರ್ಣಿಕಾರ್ಣವ ನಿನಾದ ಪ್ರಣೂ(ಣು) ತಾನೂ(ನು) ತ ಭುವನ ವಿಖ್ಯಾತ ಪಂಚಶತ

೬೧ ವೀರಶಾಸನ ಲಬ್ಧಾನೇಕ ಗುಣಗಣಾಳಂಕೃತ ಸತ್ಯ ಶೌಚಾ ಚಾರ ಚಾರುಚಾರಿತ್ರನ [ಯವಿನಯ] ವಿಜ್ಞಾನ ವೀರ ಬಣಂಜ ಧರ್ಮ ಪ್ರತೀಪಾಳನರಪ್ಪ ಶ್ರೀಮದ್ ಅಯ್ಯಾವೊಳಿಯಯ್ನೂರ್ವ[ರ್] ಸ್ವಾಮಿಗ

೬೨ ಳು ಮುಖ್ಯವಾಗಿ ಯೆಂಟು ನಾಡಪದಿನರುವರುಂ ನಾನಾ ದೇಶಾಭ್ಯಂತರದ ಗವಕಿಗಳುಂಮುಂ ಮುರಿದಂಡಮುಂ ಪಟ್ಟದ ಮನೆ ಮಣಿಂಗವಳ್ಳಿಯಲ್ ಮಹಾನಾಡಾಗಿ ನೆರೆದೇಕಸ್ಥರಾಗಿರ್ದಲ್ಲಿ

೬೩ ಯ ಪ್ರಭು ಮುಖ್ಯವೆರಡಯಿನೂರ್ವರುಂ ತಳದ ಶೆಟ್ಟಿಯಃರುಂ ನಕರಂಗಳು ಮಡ್ಡ......ಹೇರುವ ಶೆಟ್ಟಿಯರುಂ ಯೆಲೆಯ ಗಾತ್ರಿಗರುಂ ತೆಲ್ಲಿಗ ಗೊತ್ತಳಿಯುಂ ತರ್ದವಾಡಿ ಸಾಸಿರದ ಹಿಟ್ಟಿನ

೬೪ ಗೆಳೆಯ ಬಾರಿಕನುಂ ನೆರೆದೇಕಸ್ಥರಾಗಿರ್ದು ಕಪಿಲಚೆಟ್ಟಿ ವ್ಯತೀಪಾತಪರ್ವ ನಿಮಿತ್ತವಾಗಿ ಶ್ರೀ ಸಿದ್ಧಲಿಂಗ ಕಲಿದೇವೇಶ್ವರ ದೇವರ್ಗೆ ದೇವಕಾರ್ಯಮುಂ ನಡಸಲ್ ತಂಮ ಧರ್ಮವಾಗಿ ನಕರಂಗಳ್ ಹ

೬೫ ತ್ತಿಹಂ ನಿರ್ಧಾನ್ಯ ಸಮಸ್ತ ಭಂಡವಾಣೆ ವಾಣಿಕವಳಗಾಗಿ ತಾವು ಮಾರುಗೊಂಡಂತಪ್ಪ ಭಂಡಕ್ಕೆ ಹೊಂಗರವೀಸಮುಂ ಕೊಟ್ಟರು ಗಾತ್ರಿಗರು ತಾವು ಮಾರಿದೆಳೆಗೆ ಹೊಂಗಯ್ಸುತ್ತೆಳೆಯುಂ ಕೊಟ್ಟರ್ ಹೇರುವ

೬೬ ಸೆಟ್ಟಿಯರು ಹೊರಗಣಿಂದಂ ತಂದ ಹಂಸಿರ್ಧಾನ್ಯ ಮೊದಲಾಗಿ ಸಮಸ್ತ ಭಂಡವಾಣೆ ಮಾಣಿಕವೊಳಗಾಗಿ ತಂದು ಮಾರಿತಕ್ಕೆ ಹೊಂಗೆವೀಸಮಂ ಕೊಟ್ಟರು ಈ ಸ್ಥಳದಳ್ತಾವು ಮಾರುಗೊಂಡತುಂಬದ

೬೭ ಭತ್ತಕ್ಕೆ ಹೊಂಗೆ ವೀಸಮಂ ಕೊಟ್ಟರ್ ತೆಲ್ಲಿಗಗೊತ್ತಳಿಗಳು ದೇವರ ನಂದಾದೀವಿಗೆಗೆ ಗಾಣಂಗಳಲೊಂದೊಂದು ಹಳಿಗೆಯಣ್ಣೆಯಂ ಕೊಟ್ಟರು ಸಾಲಿಗಸಮಯಂಗಳ್ ಗೌಡಮುಖ್ಯವಾಗಿ ನೂಲಪ

೬೮ ರ್ವಕ್ಕೆ ವರ್ಷಂಪ್ರತಿ ಒಕ್ಕಲಲ್ಲಿ ವೀಸವಯ್ದಂ ಕೊಟ್ಟರು ದೇವ [ವ] ರ ಕೊಟ್ಟಳಿಗಳ್‌ನೂಲಪರ್ವಕ್ಕೆ ಹಾಲಂ ನೂಲಂ ಬರಗಿ ಬೆರಟ್ಟಂ ಬೊಕ್ಕಲಲ್ಲಿ ವರ್ಷಂಪ್ರತಿ ವೀಸವಯ್ದಂ ಕೊಟ್ಟರು ಶೇಣಿಗಗೊಟ್ಟಳಿಗಳ್ ನೂಲಪ

೬೯ ರ್ವಕ್ಕೆ ವರ್ಷಂಪ್ರತಿ ಕುರಿಬಶೇಣಿಗರೊಕ್ಕಲೊಕ್ಕಲಲು ವೀಸವಯ್ದಂಕೊಟ್ಟರು ಬಿಲ್ಲಮೂನೂರ್ವರುಂ ಬಿಟ್ಟ ಧರ್ಮವೊ ಯಂದು ಮಾರುವ ಹೆಡಗೆಯ ಹಂಣುಹಂಪಲ್ಬಾಡುಕಾಯಿಗೆ ಹಿಡಿ

೭೦ ಬಾಡು ಹಿಡಿಹಂಣಂ ಕೊಟ್ಟರ್ ಮೇದರೊಕ್ಕಲುಗಳ್ ಹೂವಿನ ಕರಡಗೆ ಹೆಡಗೆ ಮರಕೆ ವೆ...ಕೆರಸಿಯಂ ಸದಾಕಾಲಂ ನಡಸುವಂತಾಗಿ ಕೊಟ್ಟರ್ ಗೌಡುಮುಖ್ಯವಾಗಿ ಗೌಡೊಕ್ಕಲನೆರವಿಗಳ್

೭೧ ಗಂಡಗೂಸು ಹೆಂಗೂಸೆಂನದೆ ಮದುವೆಗೆ ವೀಸವಯ್ದಂ ದೇವರಾಯವಾಗಿ ಕೊಟ್ಟರ್ ವರ್ಷಂಪ್ರತಿ ವಳಿಯರದಂ ಕೊಟ್ಟರ್ ॥ ಇಂತೀ ಧರ್ಮಮನಾಚಂದ್ರಾರ್ಕ್ಕಂ ಸ್ಥಾಯಿವರಂ ನಡೆವಂತಾಗಿ ಕೊಟ್ಟರೀಧರ್ಮಮಂ ಶಾಸನ ಮ

೭೨ ರ್ಯಾದೆಯಿಂ ನಾಡುಗಳ್ ಪ್ರತಿಪಾಳಿಸುವರೀ ಧರ್ಮಕ್ಕಡ್ಡ ಖಂಡವ ನಾಡುಗಳ್ಗಿದಿರಾದವನವಂಗೆ ಸಮುದ್ರಮ.................ದಣೆ ಬೀರವಣಿಗನದಕ್ಕಯ್ಯೂರ್ವರ ಬೆಸದಿಂ ಬಿಲ್ಲಮುಂ ನೂರ್ವರು ಕಾವರ್ ॥ ಮಂಗಳ ಮಹಾಶ್ರೀ ॥

ಈ ರೀತಿಯಲ್ಲಿ ಮನಗೋಳಿಯ ಒಂದನೆಯ ಶಾಸನವು ಡಾಕ್ಟರ್ ಫ್ಲೀಟ್ ಸಾಹೇಬರಿಂದ ಸಂಪೂರ್ಣವಾಗಿ ಪ್ರಕಾಶಗೊಳಿಸಲ್ಪಟ್ಟಿದೆ. ಇದುವರೆಗೂ ನಮಗೆ ದೊರಕಿದ್ದ ಬಸವೇಶ್ವರನ ಉಲ್ಲೇಖವಿರುವ ಶಾಸನಗಳಿಗಿಂತಲೂ ಈ ಮನಗೋಳಿಯ ಶಾಸನವು ಬಹಳ ಹಿಂದಿನದು. ಕಳ

ಚೂರ್ಯ ಬಿಜ್ಜಳನು ಕಲ್ಯಾಣದಲ್ಲಿ ಆಳಿದ ಆರನೆಯ ವರ್ಷದ ಶಾಸನವಿದು. ಈ ಶಾಸನವು ಬರೆಯಲ್ಪಟ್ಟ ಕಾಲಕ್ಕೆ ಅಂದರೆ ಕ್ರಿಸ್ತಶಕ ೧೧೬೧ಕ್ಕೆ ಹಿಂದೆಯೇ ಬಸವಣ್ಣನವರು ಜೀವಿಸಿರಬೇಕೆಂದು ಈ ಶಾಸನದಿಂದ ವ್ಯಕ್ತವಾಗುತ್ತದೆ. ಶಾಸನದಲ್ಲಿ ಬಸವಣ್ಣನವರ ಬಗ್ಗೆ ಉಲ್ಲೇಖವಾಗಿರುವ ಹಲವು ವರ್ಣನೆಗಳನ್ನು ನೋಡಿದರೆ ಆಗಿನ ಕಾಲಕ್ಕೆ ಬಸವಣ್ಣನವರು ತಕ್ಕಮಟ್ಟಿಗೆ ವಯಸ್ಕರಾಗಿಯೂ, ಆ ಪ್ರಾಂತ್ಯದಲ್ಲಿ ಅನೇಕ ಮಹತ್ಕಾರ್ಯಗಳನ್ನು ಮಾಡಿ ಪ್ರಖ್ಯಾತಿಗೆ ಬಂದವರಾಗಿಯೂ ಇದ್ದಂತೆ ಅರ್ಥವಾಗುತ್ತದೆ. "ಪರಹಿತದೋಳ್ ಪರಾಕ್ರಮದೋಳ್ ಅರ್ಪಿನೊಳ್ ಊರ್ಜಿತಶಕ್ತಿಯೊಳ್ ಮಾಹೇಶ್ವರಪದಭಕ್ತಿಯೊಳ್ ತನಗೆ ಪಾಸಟಿಯಾರ್ ಪೆರರ್" ಎನ್ನುವಷ್ಟು ಬಸವಣ್ಣನವರು ಸರ್ವ ಜನರಿಂದ ಆದರಲ್ಲಿಯೂ ಮಣಿಂಗವಳ್ಳಿಯ "ವರವರ್ಣಾಶ್ರಮ ನಿರ್ಮಳ ಗುಣಶ್ರೀ ವೇದವೇದಾಂಗ ವಿಸ್ತರ ಶಾಸ್ತ್ರಾರ್ಥ ವಿಚಾರಸಾರ ಸತತಸ್ವಾಧ್ಯಾಯ ಯಜ್ಞಕ್ರಿಯಾ ಗುರುಪೂಜಾಕ" ರಾದಂಥ ಬ್ರಾಹ್ಮಣರಿಂದ ಆದರಿಸಲ್ಪಟ್ಟವರಾಗಿದ್ದರು. ಲೋಕದ ಎಲ್ಲ ಜನರೂ "ಕೆಯ್ಯಂ ನೊಸಲ್ಗಿತಂದು ಎಮ್ಮ ಅಯ್ಯಂ" ಎಂದು ಬಸವಣ್ಣನವರನ್ನು ಭಕ್ತಿಯಿಂದ ಕಾಣುತ್ತಿದ್ದರು. ಅಷ್ಟೇ ಅಲ್ಲದೆ ಬಸವಣ್ಣನವರನ್ನು ಲೋಕಕ್ಕೆ ಅಯ್ಯ ಅಂದರೆ ಲೋಕದ ತಂದೆ ಎಂಬುದಾಗಿ ಸಂಬೋಧಿಸುತ್ತಿದ್ದರು. ಈ ರೀತಿ ಬಸವಣ್ಣನವರು ಶಾಸನದಲ್ಲಿ ವರ್ಣಿತವಾಗಿರುವುದನ್ನು ನೋಡಿದರೆ ಅವರು ಮಣಿಂಗವಳ್ಳಿಯ ಬ್ರಾಹ್ಮಣರಲ್ಲಿ ಹೆಸರು ಪಡೆದವರು ಮತ್ತು ಗಣ್ಯರಾದವರು ಆಗಿದ್ದರೆಂದು ಚೆನ್ನಾಗಿ ಕಾಣುತ್ತದೆ.

ಬಸವಣ್ಣನವರು ಹೂಡಿದ ವೀರಶೈವ ಚಳವಳಿಯು ಬ್ರಾಹ್ಮಣರಿಗೂ ಅವರ ಸನಾತನ ಧರ್ಮಕ್ಕೂ ವಿರುದ್ಧವಾದದ್ದೆಂಬುದನ್ನು ನೆನಪಿಗೆ ತಂದುಕೊಂಡರೆ ಈ ಮುನಗೋಳಿ ಶಾಸನದ ಕಾಲಕ್ಕೆ ಬಸವಣ್ಣನವರು ವೀರಶೈವದ ಚಳುವಳಿಯನ್ನು ಇನ್ನೂ ಹೂಡಿರಲಿಲ್ಲವೆಂದೂ, ತಮ್ಮ ಮತದವರಲ್ಲಿ ಯಾವ ವೈಷಮ್ಯವನ್ನೂ ಕಟ್ಟಿಕೊಂಡಿರಲಿಲ್ಲವೆಂದೂ, ವ್ಯಕ್ತವಾಗುವುದಲ್ಲದೆ ಬಸವಣ್ಣನವರು ಇನ್ನೂ ಬ್ರಾಹ್ಮಣ್ಯದಲ್ಲಿಯೇ ಇದ್ದು ಮಣಿಂಗವಳ್ಳಿಯ ಬ್ರಾಹ್ಮಣರಲ್ಲಿ ಹಿರಿಯ ಬ್ರಾಹ್ಮಣರಾಗಿ ಆಗಿನ ಕಾಲದಲ್ಲಿ ಪ್ರಚಲಿತವಾಗಿದ್ದ ಶೈವಧರ್ಮದಲ್ಲಿಯೇ ಮಹತ್ತರವಾದ ಕೆಲಸಗಳನ್ನು

ಮಾಡುತ್ತಿದ್ದರೆಂದೂ ವ್ಯಕ್ತವಾಗುತ್ತದೆ. ಮುಣಿಂಗವಳ್ಳಿಯ ಕಲಿದೇವೇಶ್ವರ ದೇವಸ್ಥಾನವನ್ನು ಬಸವಣ್ಣನವರು ಸ್ಥಾಪಿಸಿದರೆಂದು ಈ ಶಾಸನವು ಹೇಳುವದರಿಂದ ಬಸವಣ್ಣನವರು ಈ ಶಾಸನ ಕಾಲಕ್ಕೂ ಮತ್ತು ಯಾರ ಕಾಲದಲ್ಲಿ ಕಲಿದೇವೇಶ್ವರ ದೇವಸ್ಥಾನಕ್ಕೆ ದತ್ತಿಗಳು ಬಿಡಲ್ಪಟ್ಟವೋ ಅಂಥಾ ಪಶ್ಚಿಮ ಚಾಳುಕ್ಯರಾಜನಾದ ಎರಡನೆ ಪೆರ್ಮ ಜಗದೇಕಮಲ್ಲನ ಕಾಲಕ್ಕೂ ಬಸವಣ್ಣನವರು ಶೈವದಲ್ಲೇ ಪ್ರಚಂಡವಾದ ಚಳುವಳಿಯನ್ನು ನಡೆಸಿದರೆಂದು ವ್ಯಕ್ತವಾಗುತ್ತದೆ. ಕಲಿದೇವೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಿದ್ದು ಎರಡನೇ ಪೆರ್ಮ ಜಗದೇಕಮಲ್ಲನ ಆಳಿಕೆಯ ಅಯಿದನೇ ವರ್ಷವಾದ ದುಂದುಭಿ ೧೦೬೫ ಅಂದರೆ ಕ್ರಿಸ್ತಶಕ ೧೧೪೨ ಎಂದು ಶಾಸನದಲ್ಲಿ ಉಲ್ಲೇಖವಿರುವುದರಿಂದ ಕಲಿದೇವೇಶ್ವರ ದೇವಸ್ಥಾನವನ್ನು ನಿರ್ಮಿಸಿದ ಬಸವಣ್ಣನು ಕ್ರಿಸ್ತಶಕ ೧೧೪೨ ಕ್ಕೆ ಪ್ರಖ್ಯಾತನೂ ಪ್ರೌಢನೂ ಆಗಿದ್ದನೆಂದು ಗೊತ್ತಾಗುತ್ತದೆ. ಈ ವಿಷಯಗಳನ್ನು ನೋಡಿದರೆ ಬಸವಣ್ಣನವರು ಕೇವಲ ಮೂರೇ ಪಟ್ಟಗಳು ಆಳಿ ಬಹು ಚಿಕ್ಕವಯಸ್ಸಿಗೆ ಐಕ್ಯರಾದರೆಂಬುದೂ, ಹುಟ್ಟುತ್ತಲೇ ಒಬ್ಬ ಸಂಗಮೇಶ್ವರನು ಬಂದು ಲಿಂಗಧಾರಣೆಯನ್ನು ಮಾಡಿದನೆಂಬುದೂ ಅಷ್ಟೇಏಕೆ ಹರಿಹರನು ಹೇಳುವ ಹದಿನಾರನೇ ವಯಸ್ಸಿನ ವಿಷಯವೂ ಕೇವಲ ಪೌರಾಣಿಕವಾದ ಮಾತುಗಳಾಗಿ ಚರಿತ್ರೆಗೆ ನಿಲ್ಲದಂತಹವುಗಳಾಗಿವೆ. ಎಂದು ಕಂಡುಬರುತ್ತದೆ.

ಇದೆಲ್ಲವನ್ನೂ ನೋಡಿದರೆ ಡಾಕ್ಟರ ಫ್ಲೀಟ್‌ಸಾಹೇಬರು ಹೇಳುವಂತೆ ಬಸವಣ್ಣನವರು ಬಿಜ್ಜಳನಲ್ಲಿ ಮಂತ್ರಿಪದವಿಯನ್ನು ಪಡೆದು ರಾಜ್ಯಾಧಿಕಾರವನ್ನು ಕೈಗೆ ತೆಗೆದುಕೊಂಡಮೇಲೆ ವೀರಶೈವ ಧರ್ಮದ ತಳಹದಿಯನ್ನು ಹಾಕಿದರೆಂದು ಕಾಣುತ್ತದೆ ಕಲಿದೇವೇಶ್ವರ ದೇವಸ್ಥಾನದ ದತ್ತಿಯನ್ನು ಬಿಡುವಾಗ ಕಾಳಾಮುಖ ನೈಷ್ಠಿಕನಾದ ಒಬ್ಬ ಸದ್ಯೋಜಾತ ಪಂಡಿತದೇವರು ಬರುತ್ತಾರೆ. ಅವರ ಕಾಲನ್ನು ತೊಳೆದು ದಾನವು ಕೊಡಲ್ಪಡುವುದು. ಇದನ್ನು ನೋಡಿದರೆ ಈ ಶಾಸನದ ಕಾಲಕ್ಕೆ ಶೈವ ಧರ್ಮವು ಅದರಲ್ಲೂ ಕಾಳಾಮುಖ ಶೈವವು ನಾಡಿನಲ್ಲಿ ಆವರಿಸಿತ್ತೆಂದೂ, ಈ ಶೈವವನ್ನೇ ಮುಂದಕ್ಕೆ ಬಸವಣ್ಣನವರು ಮಾರ್ಪಡಿಸಿ ತಮ್ಮದೇ ಆದ ವೀರಶೈವ ಧರ್ಮವನ್ನು ಪ್ರತಿಷ್ಠಾಪಿಸಿದರೆಂದೂ ಊಹಿಸಲಿಕ್ಕೆ ಬಲವಾದ ಅವಕಾಶವಿದೆ.

ಅಂತು ಈ ಶಾಸನವು ಬಸವಣ್ಣನವರ ಬಗ್ಗೆ ಬಹಳ ಪುರಾತನವಾವದ್ದಿದ್ದು ಬಸವಣ್ಣನವರ ಜೀವನದ ಮೇಲೆ ಮಹತ್ತರವಾದ ಬೆಳಕನ್ನು ಚೆಲ್ಲತಕ್ಕದ್ದಾಗಿದೆ. ಬಸವಣ್ಣನವರ ಬಗ್ಗೆ ಚರಿತ್ರೆಗಳನ್ನು ಕಟ್ಟಬಯಸುವ ಚಾರಿತ್ರಕಾರರಿಗೆ ಈ ಶಾಸನವು ಬಹಳ ಉಪಕಾರಿಯಾದಿದೆ. ಚಾರಿತ್ರಕರ ಚಿತ್ತವು ಈ ಶಾಸನದ ಮೇಲೆ ಬಿದ್ದದ್ದಾದರೆ ಶೋಧಕ ಸಮಿತಿಯವರ ಶ್ರಮವು ಸಾರ್ಥಕವಾದಂತೆಯೇ ಸರಿ.

---

# ಭಾವ ಚಿಂತಾರತ್ನದ ವಿಮರ್ಶೆ.

## ಬಃ— ಚಂದ್ರಶೇಖರದೇವರು ಅಡ್ನೂರು

(ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು.)

---

ಇದರಂತೆ ಇವನ ತಾಯಿಯಾದ ಅಮೃತವತಿಯ ಹೆಸರೂ ಸಾರ್ಥಕವಾಗಿತ್ತು. ಯಾಕಂದರೆಃ—

ಒಂದು ಚಂದ್ರನ ಮಾಡಿ ಮೊದಲದು ಕಳಂಕಾದು।
ದೆಂದಂಬರಕ್ಕಿಟ್ಟು ಮತ್ತೆರಡ ರಚಿಸಿ ರಾ-।
ಕೇಂದುವಿನ ಷೋಡಶಾಂಶವನೀಶ್ವರಂಗಿತ್ತು ಸಪ್ತಕಲೆಯಂ ದೇಹಕೆ॥
ತಂದಿಟ್ಟು ಮಿಕ್ಕೆಂಟ ಪಣೆಗಿಟ್ಟು ಮೂರನೆಯ।
ಚಂದಿರನ ಮೊಗದೊಳಿರಿಸಿದನೋ ಕಶ್ಯಪನ।
ತಂದೆಯಲ್ಲದೊಡೆ ಸತ್ಯೇಂದ್ರನಂಗನೆಗಮೃತವತಿಯೆಂಬ ಪೆಸರೆಸೆವುದೇ? ॥

ಇದಲ್ಲವೆ ಕವಿಯು ಕಾಲಕ್ಕೆ ಸಮರ್ಪಕವಾದ ಉಪಮಾನ, ಉತ್ಪ್ರೇಕ್ಷೆ, ರೂಪಕ ಮೊದಲಾದವುಗಳಿಂದ ಅಲ್ಲಲ್ಲಿ ಭಾವವ್ಯಂಜನ ಮಾಡಿದ್ದಾನೆ. ಇವುಗಳಿಗಾಗಿ ಇಲ್ಲಿ ಕೆಲವು ಮಾತುಗಳನ್ನು ವಿಹಂಗಮ ದೃಷ್ಟಿಯಿಂದ ನೋಡದೆ ಬಿಡುವಂತಿಲ್ಲ.

ಸಿಂಹಳನ ಮೇಲೆ ಚೋಳರಾಜನು ರೇಗಿ ಕದನಕ್ಕೆ ಹೊರಡಲುಜ್ಜಗಿಸೆ ಮಂತ್ರಿಯು "ಜೀಯ ಪಟುವೀರ! ಬಡಬಂಗಾತನಾಂಪನೇ? ಪಕ್ಷಿಗೇತಕೆ ಪಾಶುಪತವೆಂದನು" ಸಿಂಹಳನ ಮೇಲೇರಿ ಹೋಗಲು ಸನ್ನದ್ಧವಾದ ಚೋಳನ ಚತುರಂಗಸೈನ್ಯವು "ಬಾಯಿತೆರೆದಿಳೆ ಘೂರ್ಮಿಪಂತೆ ನಿಸ್ಸಾಣ ನಿಕರಾಯ ಕೋಟಿಗಳ ಧಾಂಧಳರವಂ ಪೊಣ್ಮೆ" ಮಂತ್ರಲಕ್ಷಕನ ಶಿರಚ್ಛೇದನಕ್ಕೆ ಬೀದಿಯೊಳಗೆ ಹಿಡಿದೊಯ್ಯುವದನ್ನು ಕಂಡು ಜನರು— "ಅಜನ ಸಂಬಂಧ ಲಿಖಿತ ಪ್ರಮಾಣದ ಜೀವಿಯೆ?" ಎಂದು ಮರುಗುವರು. ಮಂತ್ರಲಕ್ಷಕನ ಕತ್ತರಿಸಿದ ಶಿರವು ಅಂಬರಕ್ಕೆ ನೆಗೆಯೆ "ಕುಂಡಲಿಯ ಪಿರಿಯುರಗನ ಫಣಾಮಣಿ ಪ್ರಭೆಯೋ, ಹೃದ್ದೀಪ ಪ್ರಕಾಶವೋ" ಎನ್ನುವಂತಿತ್ತು. ತಾವೇ ಕತ್ತರಿಸಿಕೊಂಡ ಪತಿವ್ರೋಹಿ ಮತ್ತು ಸಂದಾಯಿಗಳ ಶಿರಗಳನ್ನು ಈ ಮಂತ್ರಲಕ್ಷಕನ ತಲೆಯೊಡನೆ ಕೂಡಿಡಲು

ಅವೂ ಪಂಚಾಕ್ಷರಿಯನ್ನು ಉಚ್ಚರಿಸುವವು. ಆ ಧ್ವನಿಗಳು "ಶಿವನೂರ ಸೂರೆಯುಗೊಳುವ ಸೂಚನೆಗಳು" ಎಂಬಂತಿದ್ದವು. "ಜಗಂ ಕಂದಿತೋ" ಎಂಬಂತೆ ಕತ್ತಲೆಯು ಕವಿಯಿತು. "ಸೌಖ್ಯಾರ್ಣವದ ತೆರೆಗಳಂತೆ" ಅವ್ಮೃತವತಿಯು ಸುಳಿದಳು. ಹೀಗೆ ಈ ಗ್ರಂಥದಲ್ಲಿ ಕವಿಯು ಸನ್ನಿವೇಶಕ್ಕೆ ತಕ್ಕಂತೆ ಸಹಜವಾದ ರೀತಿಯಲ್ಲಿ ಉಪಮಾದ್ಯಲಂಕಾರಗಳನ್ನು ಉಪಯೋಗಿಸಿದ್ದಾನೆ. ಇವು ಕಾವ್ಯಕ್ಕೆ ಹೆಚ್ಚು ಶೋಭೆಯನ್ನು ತಂದು ಕೊಟ್ಟಿವೆ. ಕವಿಯ ಭಾವವ್ಯಂಜಕ ಶಕ್ತಿಯನ್ನು ಮನದಟ್ಟು ಮಾಡುತ್ತವೆ.

## ಶೃಂಗಾರದಲ್ಲಿ ಭಕ್ತಿರಸ.

ಇದೊಂದು ವೀರಶೈವ ಕವಿಗಳಲ್ಲಿ ವಿಶಿಷ್ಟವಾದ ಮಾರ್ಗ. ಇದನ್ನು ಬಹುಪಟ್ಟಿಗೆ ಎಲ್ಲ ಕವಿಗಳೂ ಅನುಸರಿಸಿದ್ದಾರೆ. ಆದರೆ ಅದನ್ನು ಕೆಲವರು ತೃಪ್ತಿಕರವಾಗಿ ಪೂರೈಸುವದಿಲ್ಲ. ಈತನು ಮಾತ್ರ ಓದುಗರಿಗೆ ಬೇಸರ ಬರದಂತೆ ಶೃಂಗಾರಕ್ಕೆ ಇನ್ನಿಷ್ಟು ಕಳೆಯೇರುವಂತೆ ಬರೆಯುತ್ತಾನೆ. ಅವನೀಚಾತುರ್ಯಕ್ಕೆ ಇವೆರಡೇ ಪದ್ಯಗಳು ಸಾಕು.

ವಿಳಸದೋಂಕಾರ ಬೀಜಂ ಕಂದವಾಗೆ ಪೊಡೆ।
ಯೊಳೆ ಮೆಲ್ಲನಂಕುರಿಸೆ ನಾಭಿಮಂಡಲದಲ್ಲಿ।
ಸುಳಿದೋರಲೆರ್ದೆಯ ಸೆರೆ ಪಸುರ್ವಳ್ಳಿಯಾಗೆ ಮತ್ತಧರದೊಳು ತಳಿರು ದೋರೆ॥

ನಳನಳಿಪ ಕುಚಕುಟ್ಮಲಂ ಮೆರೆಯೆ ನಾಡೆ ಕ-।
ಣ್ಗಳುಮಲರೆ ರಾಜಿಸಿದಳಾಕಾಂತೆ ಚೋಳ ಭೂ-।
ವಳಯಾಧಿಪತಿಗಿಷ್ಟಫಲವೀವ ಕಲ್ಪಲತೆಯಂತೆ ಕಣ್ಗಿನದ ಬೀರೆ॥
೩-೫೩

ನಲಿದು ಗುರುಕರುಣದಿಂ ಕೈಲಾಸಪುರದ ಬಾ।
ಗಿಲತೋರ್ಪಕಂದನಂ ಪಡೆವೆನೆಂಬಾಬಾಸೆ।
ಬಲವೇರಿತೆಂಬಂತೆ ಬಾಸೆ ನಳನಳಿಸಿತ್ತು ಬಹಳ ಬಡತನದೊಳಿರ್ಪ॥

ಈ ಪ್ರಸಂಗದಲ್ಲಿ ಈ ಕವಿಯು ಇನ್ನೊಂದು ಶಕ್ತಿಯನ್ನು ಇಲ್ಲಿ ತೋರಿಸದೆ ತೃಪ್ತಿಯಿಲ್ಲ. ಈತನು ಯಾವುದನ್ನು ವರ್ಣಿಸಬೇಕಾದರೂ ಪ್ರಾಸಬದ್ಧವಾಗಿಯೇ ವರ್ಣಿಸಿ ಮುಗಿಸುತ್ತಾನೆ. ಆ ಪ್ರಾಸದ ಸೆಳೆ

ತಕ್ಕೆ ಬಿದ್ದರೂ ಕಥೆಯ ಎಳೆಯನ್ನೂ, ರಸದ ಝುರಿಯನ್ನೂ, ಎಲ್ಲಿಯೂ ಕೆಡಿಸುವದಿಲ್ಲ ಇದನ್ನು ಈ ೮-೧೦ ಪಂಕ್ತಿಗಳಲ್ಲಿ ಕಾಣಬಹುದು.

"ಎಸೆದಳಾ ಚಲ್ವ ಪೆಣ್ಣು ಭೂಭುಜನ ಕಣ್ಣು"
"ಆ ನೃಪನ ರಾಣಿ, ಗುರುಮಂತ್ರವಾಣಿ"
"ಪರಮ ಗುರುರಾಜ, ನತಕಲ್ಪ ಭೂಜ"
"ಚಿದ್ಘನ ಶಿವಾಚಾರ್ಯ, ಅಘತಿಮಿರ ಸೂರ್ಯಂ"
"ಎಸೆದನಾ ಮಂತ್ರಲಕ್ಷಂ, ಕ್ರಿಯಾಜ್ಞಾನಪಕ್ಷಂ"
"ರಿಪು ಕುಮುದ ಮಾರ್ತಂಡ ನಹಿತೋದ್ರೇಕ ಷಂಡ ಗಿರಿವಜ್ರದಂಡ"
"ಶರತ್ಕಾಲ, ದಿಗ್ವಿಜಯ ಮೂಲ"
"ಸೈಪುಗರೆದು, ಸಿಂಗರವ ಮರೆದು"
"ವರ್ಷಾಕಾಲ, ಬರದಶೂಲ"
"ಉದಯವಾದನಾ ತರಣಿ, ಕಣ್ಮಾಲ್ಗೆ ಹರವರಿಯ ಸರಣಿ"
ಇತ್ಯಾದಿ

## ವರ್ಣನೆಯ ವೈವಿಧ್ಯ.

ಒಂದೇ ವಸ್ತುವನ್ನು ಹಲವು ವಿಧವಾಗಿ ವರ್ಣಿಸುವದೊಂದು ಕವಿಯ ಜಾಣು. ಇದು ಸಾಮಾನ್ಯವಾದ ಮಾತಲ್ಲ; ಸರ್ವರಿಗೂ ಬರಲು ಸಾಧ್ಯವಲ್ಲ. ಅದು ಸೈಗೂಡಬೇಕಾದರೆ ಕವಿಯಲ್ಲಿ ಒಂದು ಅಮೋಘವಾದ ಅಂತರಂಗದ ಶಕ್ತಿಬೇಕು. ಮೇಲಾಗಿ ಆತನ ಕಲ್ಪನೆಗಳು ಆ ವಿಧದಲ್ಲಿ ಓಡಬೇಕು; ಓದುಗರನ್ನೂ ಓಡಿಸಬೇಕು. ಈ ಶಕ್ತಿಯೂ ಈತನಲ್ಲಿ ಇದೆ ಎಂಬ ನನ್ನೀ ಅಭಿಪ್ರಾಯವನ್ನು ಈ ಪದ್ಯಗಳು ಎಷ್ಟರಮಟ್ಟಿಗೆ ಸಮರ್ಥಿಸುತ್ತವೆ ಎಂಬುದನ್ನು ನೋಡಿ:—

ಚಲುವ ನೀರೆಯರು ಚೋಳನಿಗೆ ಹೂವನೀಯುವ ಬಗೆ

"ಭಾವಕಿಯರೈದೆ ಪೂಜಾಸ್ಥಲಕೆ ನಡೆತಂದು
ದೇವ ಚಿತ್ತೈಸಯ್ಯ ಸಿರಿವೆತ್ತು ರಾಜಿಸುವ।
ತಾವರೆಯ ಕುಸುಮಗಳ ಶೋಕೆಗಳ ಚೂತದೊಳ್ದಳಿರ್ಗಳಂ ಮಲ್ಲಿಗೆಗಳ॥
ಪೂವ ಕನ್ನೆಯ್ದಿಲ್ಗಳಟ್ಟಿದಂ ಮನ್ಮಥ ಮ-।
ಹಾವೀರನೀಶಂಗೆ ಸೋಲ್ತಸ್ತ್ರ ಸಂಕುಳವ।
ನೇವೇಳ್ವೆನುಳಿದ ಪುಷ್ಪಗಳನೀಯುತಿರ್ದರು ರಾಯನಾನಂದಿಸೆ॥
೪-೨೯

ಶಬರ ಸೇನೆಯು ಬೇಂಟೆಗೆ ಬಂದ ಅಡವಿಯು ಹೀಗೆ ರಾಜಿಸುತ್ತಿತ್ತು —

ಆಗಮ ಕ್ಷುಪ ಶಾಬರವ್ರಾತ ಶಾಂಡಿಲ್ಯ ।
ರಾಗಿಸುವ ರೇಖಾಜಟವ್ರಾತ ಶಲ್ಯಾದಿ ।
ಯೋಗದಿಂ ಪೊತ್ತಗೆಗಳಂ ತಾ ದಧೀಚಿ ಹರಿಗಳ ಯುದ್ಧರಂಗದಂತೆ ॥
ಮೇಗೆಮಿಗೆ ಪಕ್ಕಣದ ದುರ್ದಿನದ ವರಗೌತ ।
ಮಾಗಾರದಂತೆ ಸುರಪುರಿಯಂತೆ ವರಮಹಾ ।
ಭಾಗಮುನಿಯಂತೆ ಕೌರವ ಸೇನೆಯಂತೆ ರಾಜಿಸುವ ಪೇರಡವಿಯಲ್ಲಿ ॥
ಸ.೯

ಇಂತೊಪ್ಪುವಾ ಪೇರಡವಿಯಲ್ಲಿ ಶಬರಾಧೀಶನಾದ ಕಾಳಮೇಘನು ಬೇಂಟೆಯಾಡಿದುದು —

ಇದೆಯಣಿಲೆಯೊತ್ತಿನೊಳೆ ಸಿಂಗದು ಗುರ್ಗೊನೆವಜ್ಜೆ ।
ಯಿದೆ ಸೋಮವಲ್ಲಿ ಯಡೆಯೊಳ್ ಮೊಲದ ಕಾಲ್ಗುರುಹು ।
ಇದೆ ರಾಜವೃಕ್ಷದ ಸಮೀಪದೊಳಗೆರಲೆಗಾಲಿಂ ತುಳಿದ ನೆಲದ ಠಾವು ॥
ಇದೆ ಬಿಲ್ವ ಮೂಲದೊಳ್ ಪುಲಿಯು ನಖಚಿನ್ಹಮಿಂ ।
ತಿದೆ ಸರ್ವ ಮೃಗಪಕ್ಷಿಗಳ ಪಕ್ಕೆಯೆಂದು ಪರಿ ।
ದೊದರುವಾ ಪಡೆವೆರಸಿ ಬೇಂಟೆಯಾಡುತ್ತಿರ್ದನಂದು ಶಬರಾಧೀಶನು ॥
ಸ.೧೦

ಹೀಗೆ ಬೇಂಟೆಯಾಡುವಾಗ ಇವರ ತೇಹಿಗೊಂದು ಸಿಂಗ ಬರಲು —

"......ಎಮ್ಮ ಬಲವ್ಯೆದೆ ಖೋಯೆಂದು ಬೊಬ್ಬಿಟ್ಟ ಕವಿಯಲಾಗಿ ॥
ಕೋಪದಿಂದಟ್ಟಿತ್ತು ಮುಟ್ಟಿತ್ತು ಮೆಟ್ಟಿತ್ತು ।
ಭಾಪ-ರೇ ಸರ್ರಗಿರ್ರೆಂದು ಸೀಳ್ದೊದರುತ್ತ ।
ದೇಪೇಳ್ವೆನರ್ಥಬಲವರಿಯೆ ಕಂಡೊಡೆಯನತಿಸ ರಭಸದೊಳಿದಿರಾದನು ॥
ಸ.೧೨

ರಾತ್ರಿ ವಿಹಾರಕ್ಕೆಂದು ಹೊರಟ ರಾಜಕುಮಾರರು ಗಣಿಕಾ ವೀಧಿಗೆ ಬಂದಾಗ —

ಎರಳೆ ಗಣ್ಣಾಳೆ ಸಗ್ಗವೆಣ್ಗಳ ಶಿರೋರತ್ನೆ ।
ಪರಿಕಲಿಪ ನರುಸುಯ್ಯ ಕಂಪನುಳ್ಳವಳೆ ಬಂ- ।

ಧುರಶಿಖಿಯು ಪೋಲ್ವ ಮುಡಿಯಳ್ ಶಿಥಿಲ ಮಧ್ಯಳೀ ಭಾಸ್ವಚ್ಛರೋರ
ನಯನೇ ॥

ಉರುತರ ವಿಲಾಸವಿಭ್ರಮ ಸಕಲರಲ್ಲಿ ಸಿ- ।
ಷ್ಮರ ವಚನ ದಾರಿದ್ರ್ಯ ಸೌಖ್ಯಪರವಸೆ ನಿನ್ನ ।
ವರಿಸಿದನೆ ನಿರ್ಜೀವಿಯೆಂದು ನುತಿಸಿದಳಬ್ಬೆ ಸೂಚಿಸಿ ದಶಾವಸ್ಥೆಯಂ ॥
೬-೨೬

ನಡುವೆ ಬಡತನವಾಯ್ತು ನಿನಗೆಂದು ಚುನ್ನವಂ ।
ನುಡಿವ ಮೊಲೆಗಳ್ಗೆ ನಡುವೆಂದುದಂದೆಲೆಲೆ ಪೊಂ- ।
ಗೊಡನೆಂಬ ಬಗೆಯ ನರಿದರ್ಥವಿತ್ತರ್ ಪಿಡಿದು ಕತ್ತುರಿಯ ಕೆಸರ ಕೂಡಿ ॥

ನಿಡುಗಲ್ಲ ಹೇರಲದು ಕೊರಲ್ಬಾರವಾಗಲಿ ।
ಟ್ಟಿಡೆಗೊಂಬ ನಿಮ್ಮ ಕುಂದರಿಯರ್ಕೈ ಬಾಸೆಯಂ ।
ಬಿಡೆವೆಂದು ಜರಿವಿರೆಂಬಂತೆಸೆವ ನಡುವಿನಬಲೆಯರು ಕಣ್ಗೆಸೆದಿರ್ದರು ॥
೬-೩೧

ಚೋಳರಾಯನ ಒಡ್ಡೋಲಗಕ್ಕೆ ಬಂದ ಮಾಂಡಲಿಕರು ಹೀಗೆ ಒಪ್ಪಿದ್ದರು—

ರವಿವಂಶರತ್ನ ಮಯುದಗೆಗಳೋ ನಾಡೆಯೊ ।
ಪ್ಪುವ ರೋಹಣಾದ್ರಿಗಳ ಗಂಡಶೈಲಂಗಳಂ ।
ದಿವರ ಮಸ್ತಕದೆಡೆಗೆ ಬಂದ ಮಣಿಪುಂಜಗಳೊ ಪೆರ್ಚುಕುಂದಿನ
ಶರಧಿಯ ॥

ನವರತ್ನ ರಾಶಿಗಳು ಗಾಂಭೀರ್ಯನಿಧಿ ಚೋಳ ।
ಭುವನಾಧಿಪನ ಸಭೆಯ ಸಾರ್ದವೋ ಪೇಳಿಮೆಂ- ।
ಬವೊಲಿರ್ಪ ಮಣಿಮಕುಟ ವರ್ಧನರ ಸಂಖ್ಯಾತರಿರ್ದರೊಡ್ಡೋಲಗ
ದೊಳು ॥ ೭೯

## ಕಾವ್ಯದ ವಿಶಿಷ್ಟಾಂಶಗಳು.

ಈ ಕಾವ್ಯದಲ್ಲಿ ಕವಿಯು ಚಿತ್ರಿಸಿದ ವಿಶೇಷಾಂಶಗಳನ್ನು ಕಾಣದೆ ಕಡೆಗಾಣುವಂತಿಲ್ಲ. ಏಕೆಂದರೆ ಹಲಕೆಲವು ಸಂದರ್ಭಗಳನ್ನು ವರ್ಣಿಸುವಾಗ ಕವಿ ಓದುಗರ ಹೃದಯವನ್ನು, ಒಮ್ಮೆ ಅರಳಿಸುತ್ತಾನೆ;

ಇನ್ನೊಮ್ಮೆ ಅಳಿಸುತ್ತಾನೆ. ಒಮ್ಮೆ ನಗಿಸುತ್ತಾನೆ; ಇನ್ನೊಮ್ಮೆ ರೇಗಿಸುತ್ತಾನೆ. ಅಲ್ಲಲ್ಲಿ ಆ ಆ ರಸಾವಿರ್ಭಾವಗಳನ್ನು ತರುವದೇ ಕವಿಯ ಕೌಶಲ್ಯ.

ಚಂದ್ರೋದಯುವನ್ನು ನೋಡಿ—

ಮಾಸಿದಂಬರವುಳಿದು ಧವಳಾಂಬರವನಾಂತು ।
ಲೇಸೆನಿಪ ತಾರಹಾರಂದೊಟ್ಟು ಲಾವಣ್ಯ ।
ಭಾಸುರ ಸಮುದ್ರಮಂ ಪೆರ್ಚಿಸುತಮಿಂದು ನೈದಲ್ಗಳಂ ನೆರೆನೋಡಲು ॥
..."

ಚಂದ್ರನುದಯಿಸುವನು. ಇದನ್ನು ಕೇಳಿ ಯಾರ ಹೃದಯಾಂಬರದಲ್ಲಿ ಆನಂದ ಚಂದ್ರನುದಯಿಸಲಿಕ್ಕಿಲ್ಲ ?

ಈ ಚಂದ್ರನ ಚಂದ್ರಿಕೆಯಲ್ಲಿ ವೈಹಾಳಿಗೆ ಹೊರಟ ಚತುರಂಗ ಬಲವು—

ಗಮ್ಮನಿಕ್ಕೆಲದಲ್ಲಿ ಸೇನೆ ಘೌಜಿಪ್ಪಣ್ಣ ।
ತಮ್ಮಂದಿರಿದಿರಾಗಿ ಖೋಯೆಂದು ಸಕಲವಾ ।
ದ್ಯವಿನ್ನೊಳಗೆ ಬೊಬ್ಬಿಡುತೆ ರಥರಥಕೆ, ಕರಿಕರಿಗೆ, ಹಯುಹಯುಕೆ, ಭಟಭಟರ್ಗೆ
ತಮ್ಮೊಳಗೆ ತಾವು ಪೆರ್ಗಾಳೆಗದ ಮಾಳ್ಕೆಯಿಂ ।
ದಮ್ಮಮ್ಮ ಪೊಣರ್ದರಿಳೆ ಕಮಠಫಣಿರಾಜಾಳಿ ।
ಬಿಮ್ಮಗಿಡಲಲ್ಲಿ ಮರೆದುದು ಬಾಘು ಚತುರ ವೈಹಾಳಿ ವರ್ಷದ ಭಿಡಾಳಿ॥
೮-೧೨

ಇದೂ ಒಂದು ಆನಂದದ ಎಲ್ಲೆ.

ತಿರುಕೊಳವಿನಾಚಿಯು ಮನೆಯಲ್ಲಿಲ್ಲದ ಮಗನನ್ನು ಅರಸುತ್ತ ಬೀದಿಗೆ ಬಂದು

ಮುತ್ತಿದ್ದ ಜನಮನುರೆ ಬಗೆದೊಳ ಪುಗುತ್ತಲಾ- ।
ನೆತ್ತರಂ ರುಂಡಮಂ ಮುಂಡಮಂ ಕಂಡು ಹಾ! ।
ಪುತ್ರನುಜ! ಹಾಕಂದ! ಹಾಮುದ್ದುಮಗನೆ! ಹಾ! ಹಾ! ಕೆಟ್ಟೆನೆಂದೊರಲುತೆ.
ಎತ್ತಿಕೊಂಡಾತಲೆಯ ನೆರ್ದೆಯ ಗುಂಡಿಗೆಯೊಳಮ- ।
ರ್ದೊತ್ತಿ ಶಿವಧೋಯೆಂದು ತನುವನಿಳೆಗೀಡಾಡಿ !
ಪುತ್ತಿಳ್ದು ಬಿಳ್ದು ಹೊರಳುತ್ತೆ ದುಕ್ಕದ ಕಡಲೊಳೀಸಾಡುವಂತಿರ್ದಳು ॥
೮-೨೬

ಇವಳ ಈ ಗೋಳನ್ನು ಕೇಳಿ ದುಃಖದ ಕಡಲಲ್ಲಿ ಧುಮುಕದವರಾರು? ಇದಲ್ಲದೆ ಎಲೆ ಮಗನೆ! ನಿನ್ನಯ ವಿಲೋಚನಂ ಕಂದಿದುವೆ? ಶಶಿಯ ಪೋಲ್ವ ಮುಖವೈದೆ ಕೊರಗಿತ್ತೆ? ಮಂಗಲಸೌವ್ಯವರತುದೇ? ಗುರು ಕೃಪೆಯದೇನಾಯ್ತು? ಎಂದು ಹಲವುವಿಧವಾಗಿ ಹಲುಬಿ ಕೊನೆಗೆ 'ಈ ಭೂಮಿಯಿರಲು ತುರಗಲಘುಚರಣಕ್ಕೆ ಬಲೆಯಾದೆಲಾ! ಗ್ರಹ ಬಲಂ ತಪ್ಪಿತೆ? ಅಕಟಾ!' ಎಂದು ಭೂಮಿಗೆ ಬಿದ್ದು ಬೋರಿಡುವಾಗ ಕಣ್ಣೀರನ್ನು ಕಡೆಗೆಡುವದಿರುವುದು ಸಾಧ್ಯವೇ? ಮನವು ಮರುಕದಿರುವುದೆ? ಹೃದಯವು ಬಳುಕದೆ ಬಿಡುವುದೆ?

ಆ ಕಂದನನ್ನು ಕೊಂದ ರಾಜ ಪುತ್ರರು ಮುಂದಿದ್ದುದನ್ನು ಕಂಡು ಚೋಳನು ಕೋಪಗೊಂಡು ಪೇಳಿದುದನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ.

ಚಿಲುಪಾಲಿನೊಳು ವಿಷಂ ತವರಾಜನೊಳು ಕೃಪೆ।
ಸುಲಲಿತ ಸುಮುತ್ತಿನೊಳು ಭಿನ್ನಪ್ರೊಪ್ಪವ ಗುಣಾ।
ವಲಿಯಲ್ಲಿ ಲೋಭವೆಸೆದಿಹ ಸತ್ಯದೊಳಗನೃತವುರೆವಿರಿದ ನರು
ಗಂಪಿನ ॥
ಅಲರಿನೊಳು ಪುಳು ಶಿವಾಚಾರದೊಳು ದುರ್ನೀತಿ।
ನೆಲಸಿದಂತೊಗೆದಿರ್ದೈ ಮತ್ಕುಲದೊಳೆಂದರಸ।

೯-೩

ಈ ವಿಷಯದಲ್ಲಿ ಹೀಗೆ ಬೇಕಾದಷ್ಟನ್ನು ಬರೆಯಬಹುದು. ಆದರೀ ಲೇಖನದಲ್ಲಿ ಅದು ಸಾಧ್ಯವಿಲ್ಲ. ಕಾವ್ಯದಲ್ಲಿಯೇ ಕಂಡುಕೊಳ್ಳುವದು ಉಚಿತ.

## ಕಡೆನುಡಿ.

ಮಂತ್ರಮಹಾತ್ಮ್ಯ ಪ್ರದರ್ಶನಕ್ಕಾಗಿ ಮಹಾ ವ್ಯಕ್ತಿಗಳ ಜೀವನ ಮುಖಾಂತರವಾಗಿ ತನ್ನ ಕವಿವಾಣಿಯಿಂದ ಪರಮಾನಂದವನ್ನು ನೀಡಿದ ಮಹಾಕವಿಯೀತ. ಮಹಾಮಂತ್ರ ಜಲವನ್ನು ಕಿವಿಯಿಂದೀಂಟಿಸಿದ ಜಾಣ ವರುಣ ನೀ ಕವಿ. ಭಕ್ತಿರಸವನ್ನೂ ಬೆರಸಿ ಭಾವತರಂಗಗಳನ್ನು ಹೊರ ಹೊಮ್ಮಿಸಿದ ಕುಶಲಸಿವನು. ಕೇವಲ ಭಾಷಾಸೌಂದರ್ಯವು ಕಾವ್ಯಕ್ಕೆ

ಒಂದು ಕುಸುರುಮಾತ್ರ. ಅದರ ಜೊತೆಗೆ ಭಾವ ಸೌಷ್ಠವವೂ ಬೇಕು. ವಿವಿಧತೆಯ ತಳಹದಿಯಿಲ್ಲದಿದ್ದರೆ ಆಗದು. ಇದೆಲ್ಲವೂ ಈ ಕಾವ್ಯದಲ್ಲಿದೆ. ಈ ದೃಷ್ಟಿಯಿಂದ ಈತನು ಮಹಾಕವಿ. ಈತನ ಈ ಕಾವ್ಯವು ಪ್ರಾಯಕ್ಕೆ ಬಂದ ಪ್ರಮದೆಯಂತೆ ಅಂದವಾಗಿಯೂ ಬಂಧುರವಾಗಿಯೂ ಇದೆ. ಕವಿಯು ಪದಗಳನ್ನು ಪ್ರಯೋಗಿಸುವ ಪೋಲ್ಕೆ, ಕಥಾರಚನೆಯ ಮೇಲ್ಮೆ, ಸಮಯಕ್ಕೆ ತಕ್ಕಂತೆ ಸಂಕ್ಷಿಪ್ತವಾಗಿ ವರ್ಣಿಸುವ ಜಾಣ್ಮೆ, ರಸವನ್ನು ತುಂಬುವ ಚದುರತೆ, ಧರ್ಮದ ಮರ್ಮವನ್ನು ತೆರೆದು ತೋರುವ ಕುಶಲತೆ, ಪ್ರಾಸಂಗಿಕವಾಗಿ ಅಲಂಕಾರಗಳನ್ನಿಡುವ ಬೆಡಗು ಲಲಿತವಾದ ಹಳೆಗನ್ನಡ ಶೈಲಿಯ ಸೊಗಸು ಹೆಚ್ಚು ಮೆಚ್ಚುವಂತಹವು. ಆದರೆ ಈ ಕಾವ್ಯವು ಪ್ರೌಢಿಮಿತೆಯ ಪರದೆಯನ್ನು ಹರಿದು, ಮತದ ಕಟ್ಟನ್ನು ಕತ್ತರಿಸಿ ನಿಂತಿದ್ದರೆ ಇನ್ನೂ ಚನ್ನಾಗಿದ್ದಿತು.

ಇಂತಹ ಅಮೋಘವಾದ ಕಾವ್ಯವನ್ನು ಮೈಸೂರಿನ ಕಾವ್ಯಕಲಾನಿಧಿ ಪ್ರೆಸ್ಸಿನವರು ಕ್ರಿ. ೧೯೩೩ ರಲ್ಲಿ ದ್ವಿತೀಯ ಮುದ್ರಣವನ್ನು ಮಾಡಿದ್ದಾರೆ. ಮದ್ರಾಸ್ ಯೂನಿವರ್ಸಿಟಿಯವರು ಕನ್ನಡ ವಿದ್ವಾನ್ನಕ್ಕೆ ನಿಯಮಿಸಿಕೊಂಡಿದ್ದಾರೆ. ಕಾವ್ಯವು ತಾನೇ ತನ್ನ ಪ್ರತಿಭೆಯಿಂದ ಅವರ ಮನಸ್ಸನ್ನೆಳೆದು ಜೀವಿಸಿಕೊಂಡಿದೆ. ಆದರೆ ಕೊಡಗೈ ದೊರೆಗಳಾದ ವೀರಶೈವರು ಈ ಕಾವ್ಯದ ವಿಷಯವಾಗಿ ಯಾವ ವಿಧದಲ್ಲಿಯೂ ಗಮನ ಕೊಟ್ಟಿಲ್ಲವೆಂದು ಹೇಳಲು ಬಹು ವಿಷಾದವೆನಿಸುತ್ತದೆ. ಇಷ್ಟು ರಸವತ್ತಾದ, ಇನಿತೊಂದು ಭಾವಪೂರಿತವಾದ ಕಾವ್ಯವನ್ನು ಅಚ್ಚುಕಟ್ಟಾಗಿ ಅಚ್ಚುಹಾಕಿಸಿ ಮತ್ತು ವಿಮರ್ಶಿಸಿ ಜನರ ಮುಂದಿಡುವ ಮಹಾನುಭಾವರು ನಮ್ಮಲ್ಲಿಲ್ಲವೆಂಬುದು ವಿಷಾದಕಾರಕ ವಿಷಯವಲ್ಲದೆ ಮತ್ತೇನು? ಇನ್ನಾದರೂ ಇದಕೊಂದು ಸರಿಯಾದ ಮುನ್ನುಡಿಯನ್ನು ಬರೆದು ತಿಳಿಯಾದ ಪರಿಶಿಷ್ಟವನು ರಚಿಸಿ ಮುದ್ರಿಸುವ ಕಾರ್ಯವನ್ನು ನಮ್ಮವರು ಬೇಗ ಕೈಕೊಳ್ಳಬೇಕೆಂದು ಆಗ್ರಹದಿಂದ ಕೋರುತ್ತೇನೆ. ಈ ಗ್ರಂಥಪರಿಚಯವನ್ನು ಸಾಹಿತ್ಯಪರಿಷತ್ಪತ್ರಿಕೆಯ ೧೦ನೇ ಸಂಪುಟದ ೩ನೇ ಸಂಚಿಕೆಯಲ್ಲಿ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಮಾತ್ರ ಮಾಡಿಕೊಟ್ಟಿರುವರು. ಇಂತಹ ಪ್ರೌಢಕಾವ್ಯಕ್ಕೆ ಇಷ್ಟೊಂದು ಅನಾದರವೇ?

---

# ಜೈನ ಧರ್ಮ.

(ಲೇಖಕರು:— ವೀರಪ್ಪ ಯುಗಟಿ ಬಿ. ಏ. ಎಲ್. ಎಲ್. ಬಿ. ಹಾವೇರಿ)

ಹಿಂದಿನ ಸಂಚಿಕೆಯಿಂದ ಮುಂದರಿದುದು.

---

ಮೊದಲನೆಯ ಅಜೀವ ದ್ರವ್ಯವು ಆಕಾಶ ಅಥವಾ ಸ್ಥಲವಾಗಿದೆ. ಆಕಾಶವು ಜಗತ್ತಿನ ವಸ್ತುಗಳಿಂದ ಆಕ್ರಮಿಸಿ (೧) ಲೋಕಾಕಾಶವೆಂತಲೂ (೨) ಅದರಾಚೆ ಬಟ್ಟ ಬಯಲಾದ ಅಲೋಕಾಕಾಶವೆಂತಲೂ ವಿಭಾಗಿಸಲ್ಪಟ್ಟದೆ. ಸ್ಥಲದ ಒಂದು ಅಂಶದಲ್ಲಿ ಪುದ್ಗಲದ ಒಂದು ಅಖಂಡವಾದ ಅಣುವು ಆಕ್ರಮಿಸಿರುವದು. ಇಂಥ ಸ್ಥಳದಲ್ಲಿ ಧರ್ಮದ ಒಂದಂಶವೂ, ಅಧರ್ಮದ ಒಂದಂಶವೂ, ಕಾಲದ ಒಂದಂಶವೂ, ಪ್ರಕೃತಿಯ ಅನೇಕ ಅಣುಗಳೂ ಸೂಕ್ಷ್ಮ ಸ್ಥಿತಿಯಲ್ಲಿರಬಹುದು. ಸ್ಥಲವು ಚಲನೆ ಮತ್ತು ವಿಶ್ರಾಂತಿಗಳ ಕಾರಣವಿರಲಾರದು. ಚಲನೆ ಮತ್ತು ವಿಶ್ರಾಂತಿಗಳಿಂದ ಬದ್ಧವಾದಾಗ ವಸ್ತುಗಳು ಸೃಷ್ಟಿಯನ್ನುಂಟುಮಾಡಬಲ್ಲವು. ಧರ್ಮವು ಚಲನೆಯ ಕಾರಣವಾಗಿದೆ. ಧರ್ಮವು ಶಬ್ದ, ಸ್ಪರ್ಶ, ರೂಪ, ರುಚಿ, ಗಂಧ, ಗುಣಗಳಿಲ್ಲದ್ದು. ಅದು ಇಡೀಜಗತ್ತನ್ನು ವ್ಯಾಪಿಸಿ ಅಖಂಡವಾಗಿರುವದು. ಧರ್ಮವು ಪ್ರಕೃತಿ ಗುಣವಿರಹಿತವಾಗಿದ್ದು ಸ್ವಯಂಭುವಾಗಿದೆ. ಅಧರ್ಮವು ವಿಶ್ರಾಂತಿಯ ಕಾರಣವು. ಅದು ಪ್ರಕೃತಿಗುಣವಿರಹಿತವಾಗಿದ್ದು ಲೋಕಾಕಾಶವನ್ನು ವ್ಯಾಪಿಸಿರುವದು. ಇವೆರಡು ತತ್ವಗಳು ಕ್ರಿಯಾರಹಿತವೂ, ಅಪ್ರಾಕೃತವೂ, ಅಣುರಹಿತವೂ ಆಗಿವೆ. ಧರ್ಮಾಧರ್ಮಗಳು ಚಲನೆ ಮತ್ತು ವಿಶ್ರಾಂತಿಗಳ ಉದಾಸೀನ ಹೇತುಗಳಾಗಿವೆ. ಧರ್ಮಾಧರ್ಮಗಳಿಂದ ಕೂಡಿದ ಸ್ಥಲವು ಆತ್ಮ ಮತ್ತು ಪ್ರಕೃತಿ ಮೊದಲಾದ ಎಲ್ಲ ವಸ್ತುಗಳ ಅಸ್ತಿತ್ವಕ್ಕೆ ಕಾರಣವಾಗುವದು. ಸ್ಥಲವು ಇರುವದಕ್ಕೆ ಅವಕಾಶ ಕೊಡುತ್ತದೆ. ಧರ್ಮವು ವಸ್ತುಗಳು ಚಲಿಸುವಂತೆ ಮಾಡುವದು. ಅಧರ್ಮವು ವಸ್ತುಗಳು ವಿಶ್ರಾಂತಿ ಹೊಂದುವಂತೆ ಮಾಡುವದು.

ಜಗತ್ತಿನಲ್ಲಿ ಕಾಲವು ವಿಶ್ವವ್ಯಾಪಿಯಾಗಿದೆ. ಕಾಲಕ್ಕೆ ಅಸ್ತಿತ್ವವಿದ್ದರೂ ಅದಕ್ಕೆ ಕಾಯತ್ವವಿಲ್ಲ. ಅನಂತವಾದಕಾಲಕ್ಕೆ ರೂಪ ಆದಿ ಅಂತ

ಗಳಿಲ್ಲ. ಸಂಬಂಧಾತ್ಮಕವಾದ ಕಾಲಕ್ಕೆ ಆದಿ ಅಂತಗಳೂ ಹೆಚ್ಚು ಕಡಿಮೆ ಗಳೂ ಉಂಟು. ಇದಕ್ಕೆ ಸಮಯವೆಂದು ಹೆಸರು. ಸಮಯವು ವಸ್ತುಗಳ ಲ್ಲಿಯ ಚಲನೆಯಿಂದ ಅಥವಾ ಬದಲಾವಣೆಯಿಂದ ನಿರ್ಣಯಿಸಲ್ಪಡುವದು. ಕಾಲಕ್ಕೆ ಚಕ್ರವೆಂದು ಹೆಸರು. ಕೆಲವು ಕಾಲದಲ್ಲಿ ಎಲ್ಲ ವಸ್ತುಗಳು ರೂಪರಹಿತವಾಗಿ ಲಯ ಹೊಂದುವವು. ಯಾವ ವಸ್ತುಗಳು ಇಂದ್ರಿಯ ಗಳಿಂದ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಂದ ಮನಸ್ಸು ಕರ್ಮ ವೊದ ಲಾದವುಗಳಿಂದ ತಿಳಿಯಲ್ಪಡುತ್ತವೋ ಅವು ಮೂರ್ತ ವಸ್ತುಗಳಿದ್ದು ಪುದ್ಗ ಲಗಳಾಗಿವೆ. ಪುದ್ಗಲವು ಅಣುಗಳ ಬದಲಾವಣೆಯಿಲ್ಲದೆ ಆಕೃತಿಯಲ್ಲಿ ಹೆಚ್ಚು ಕಡಿಮೆಯಾಗಬಹುದು. ಅದು ಶಕ್ತಿಯ ಅಥವಾ ಚಲನೆಯ ಸಾಧನವಾಗಿದೆ. ಚಲನೆಯು ಪರಿಸ್ಪಂದ (ಸಹಜಚಲನೆ) ಯೆಂತಲೂ ಪರಿಣಾಮ (ಉತ್ಕ್ರಾಂತಿ) ಯೆಂತಲೂ ಎರಡು ವಿಧವಾಗಿದೆ. ಪುದ್ಗ ಲವು ಜಗತ್ತಿನ ಭೌತಿಕ ತಳಹದಿಯಾಗಿದೆ. ಪುದ್ಗಲವು ಆರುವಿಧವಾಗಿದೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆತ್ಮಗಳ ಮತ್ತು ಸ್ಥಲದ ಹೊರ್ತಾಗಿ ಜಗತ್ತಿನಲ್ಲಿಯ ಎಲ್ಲ ವಸ್ತುಗಳು ಪ್ರಕೃತಿಯಿಂದಾಗಿವೆಯೆಂದು ಜೈನರು ಪ್ರತಿಪಾದಿಸುತ್ತಾರೆ. ಇಂದ್ರಿಯಗಳಿಗೆ ಗೋಚರವಾಗದ ಸೂಕ್ಷ್ಮ ಪ್ರಕೃತಿ ಯುಂಟು. ಇದು ಕರ್ಮರೂಪದಲ್ಲಿ ಬದಲಾವಣೆ ಹೊಂದುವದು. ಜೈನರ ಭೌತಿಕ ಶಾಸ್ತ್ರವು ಜಗತ್ತು, ಅಣುಗಳಿಂದ ರಚನೆಯಾಗಿದೆಯೆಂದು ಹೇಳುತ್ತದೆ. ಭೌತಿಕ ವಸ್ತುಗಳು ಅಣು ಅಥವಾ ಪರಮಾಣುಗಳಿಂದ ಕೂಡಿವೆ. ಅಣುವಿಗೆ ಆದಿ ಮಧ್ಯ ಅಂತ್ಯವಿಲ್ಲ. ಅದಕ್ಕೆ ಉತ್ಪತ್ತಿ ಇಲ್ಲ ನಾಶವೂ ಇಲ್ಲ. ಅದು ಎಲ್ಲ ರೂಪಕ್ಕೆ ಆಶ್ರಯವಾಗಿದ್ದರೂ ಅದಕ್ಕೆ ರೂಪ (ಮೂರ್ತ) ವಿಲ್ಲ. ಅಣುಗಳಿಗೆ ಭಾರವುಂಟು. ಪ್ರತಿಯೊಂದು ಅಣುವು ಒಂದು ಸ್ಥಲಾಂಶವನ್ನು ಆಕ್ರಮಿಸುವದು. ಪ್ರತಿಯೊಂದು ಅಣುವಿಗೆ ಸ್ಪರ್ಶ ರಸ ಗಂಧ ರೂಪಗಳುಂಟು. ಈ ಗುಣಗಳು ಶಾಶ್ವತವಾದವುಗಳಲ್ಲ. ಅಣು ಗಳ ಸಂಯೋಗದಿಂದ ಭೌತಿಕ ವಸ್ತುಗಳು ಹುಟ್ಟುವವು. ಗುಣಗಳಿಂದ ವ್ಯತ್ಯಸ್ತವಾದ ಅಣುಗಳಲ್ಲಿಯೇ ಸಂಯೋಗವಾಗುವದು. ಸ್ಥಲ ಧರ್ಮ ಅಧರ್ಮಗಳಿಂದ ಅಣುಗಳಲ್ಲಿ ಚಲನೆಯುಂಟಾಗುವದು. ಭೌತಿಕ ಜಗ ತ್ತಿನಲ್ಲಿ ಉಂಟಾಗುವ ಬದಲಾವಣೆಗಳು ಅಣುಗಳ ಕೂಡುವಿಕೆ ಅಥವಾ ಅಗಲುವಿಕೆಯಿಂದುಂಟಾಗುವವು. ಅಣುಗಳು ಗುಣಗಳಿಂದ ಕೂಡಿದಾಗ ಭೌತಿಕ ವಸ್ತುಗಳಾಗುವವು. ನ್ಯಾಯವೈಶೇಷಿಕ ಸಿದ್ಧಾಂತವು ಭೂತ

ಗಳಲ್ಲಷ್ಟೇ ಅಣುಗಳ ಜಾತಿಗಳುಂಟೆಂದು ಹೇಳುತ್ತದೆ. ಆದರೆ ಜೈನರು ಒಂದೇ ವಿಧವಾದ ಅಣುಗಳು ಅನೇಕ ವಿಧವಾಗಿ ಕೂಡುವದರಿಂದ ಅನೇಕ ಜಾತಿಯ ಭೂತಗಳನ್ನುಂಟುಮಾಡುವವೆಂದು ಹೇಳುತ್ತದೆ. ಮೂಲ ಅಣುಗಳಲ್ಲಿ ಗುಣಭೇದವಿಲ್ಲೆಂದು ಅಣುವಾದಿಯಾದ ಡೆಮಾಕ್ರಿಟಸನಂತೆಯೇ ಜೈನರು ಹೇಳುತ್ತಾರೆ. ಅಣುವು ಜಗತ್ತನ್ನು ಒಂದೇ ನಿಮಿಷದಲ್ಲಿ ಸಂಚರಿಸುವಷ್ಟು ಶೀಘ್ರವಾದ ಚಲನೆಯನ್ನು ಸಂಪಾದಿಸಬಹುದು.

ಕರ್ಮವು ಪ್ರಕೃತಿ ಸ್ವರೂಪವಾದದ್ದು (ಪುದ್ಗಲವತ್) ಎಂದು ಜೈನರು ಹೇಳುತ್ತಾರೆ. ವಿಚಾರಗಳು ನಮ್ಮ ವರ್ತನೆಯನ್ನು ರೂಪಾಂತರಿಸುವವು. ಆತ್ಮದ ಬಲವನ್ನು ಬದಲಾಯಿಸುವವು. ಕರ್ಮವು ಪ್ರಕೃತಿಯ ಸೂಕ್ಷ್ಮರೂಪವಾಗಿದೆ. ಆತ್ಮವು ಜಗತ್ತಿನ ವ್ಯವಹಾರದಲ್ಲಿ ಮಗ್ನವಾಗುವದರಿಂದ ಸೂಕ್ಷ್ಮಪ್ರಕೃತಿಯ ಕಣಗಳಿಂದ ಆವರಿಸಲ್ಪಡುವದು. ಇವು ಕರ್ಮಗಳಾಗಿ ಕರ್ಮ ಶರೀರವೆಂಬ ವಿಶೇಷವಾದ ಶರೀರವನ್ನು ರಚಿಸುವವು. ಈ ಕರ್ಮ ಶರೀರವು ಆತ್ಮಕ್ಕೆ ಅಂಟಿಕೊಂಡು ಆತ್ಮವು ಕೊನೆಯ ಮೋಕ್ಷವನ್ನು ಹೊಂದುವವರೆಗೆ ಆತ್ಮವನ್ನು ಬಿಟ್ಟಿರುವದಿಲ್ಲ. ಈ ಕಾರ್ಮಿಕ ಪ್ರಕೃತಿಯು ಆತ್ಮದ ಪ್ರಕಾಶವನ್ನು ಮರೆಮಾಡುವದು. ಭಾವಕರ್ಮವು ಜೀವಕ್ಕೆ ಸಂಬಂಧಿಸಿದ್ದೂ ದ್ರವ್ಯಕರ್ಮವು ಶರೀರಕ್ಕೆ ಸಂಬಂಧಿಸಿದ್ದೂ ಇರುವವು. ಅವು ಚೇತನಾಚೇತನಗಳಾಗಿದ್ದರೂ ಒಂದಕ್ಕೊಂದು ಕೂಡಿಕೊಂಡಿರುವವು. ಕರ್ಮದಿಂದಾದ ಕೃತಿಯ ಗುರುತು ದೇಹದಲ್ಲುಳಿದು ಅದು ಮುಂದಿನ ಕೃತಿಯ ಆಧಾರವಾಗುವದು. ಅದು ಜೀವರೂಪದಲ್ಲಿ ವರ್ತಿಸುತ್ತಿರುವದು. ಜೀವಕ್ಕೆ ಐದು ಭಾವಗಳುಂಟು. (ಕರ್ಮವು ಸಹಜ ರೀತಿಯಲ್ಲಿ ಪರಿಣಾಮಗಳನ್ನುಂಟುಮಾಡುವದು. 2ಸರಿಯಾದ ಪ್ರಯತ್ನದಿಂದ ಕೆಲವು ಕಾಲದ ವರೆಗೆ ಕರ್ಮವನ್ನು ತಡೆಯಬಹುದು. 3 ಕರ್ಮವನ್ನು ತಡೆದರೂ ಅದು ಬೂದಿ ಮುಚ್ಚಿದ ಕೆಂಡದಂತಿರುವದು. 4 ಕರ್ಮವನ್ನು ಪೂರ್ಣ ನಾಶಮಾಡಿದಾಗ ಮೋಕ್ಷವು ಲಭಿಸುವದು. (ಅಜೀವವು ಐದುವಿಧವಾಗಿದೆ.) ಅಮೂರ್ತ ಅಂದರೆ ದೇಶ, ಕಾಲ, ಧರ್ಮ, ಅಧರ್ಮ, ಮೂರ್ತ ಅಥವಾ ಪುದ್ಗಲ. ಈ ಐದರಿಂದ ಲೋಕ (ಜಗತ್ತು) ಉಂಟಾಗಿದೆ. ಲೋಕದ ಆಚೆಗೆ ಅಪ್ರಮಾಣವಾದ ಮತ್ತು ಅನಂತವಾದ ಅಲೋಕವುಂಟು. ಆತ್ಮಗಳು ಪ್ರಕೃತಿಯಿಂದ ವ್ಯತಿರಿಕ್ತವಾಗಿವೆ. ಇವು ಅಸಂಖ್ಯಾತವಾಗಿದ್ದು ಬೇರೆ ಬೇರೆ

ತರಹದವಾಗಿವೆ. (೧) ನಿತ್ಯಸಿದ್ಧ (೨) ಮುಕ್ತ (೩) ಬದ್ಧ-ಮುಕ್ತ ಜೀವಗಳು ಪುನಃ ಶರೀರವನ್ನು ಧರಿಸುವದಿಲ್ಲ. ಅವು ಭವವಿರಹಿತವಾಗುವವು. ಅವು ಅನಂತ ಜ್ಞಾನವುಳ್ಳವೂ ಅನಂತ ದರ್ಶನವುಳ್ಳವೂ, ಅನಂತ ವೀರ್ಯವುಳ್ಳವೂ, ಅನಂತ ಸುಖವುಳ್ಳವೂ ಆಗಿವೆ. ಸೋಪಾಧಿ ಜೀವಗಳು ಅಜ್ಞಾನದ ಮೂಲಕ ಪ್ರಕೃತಿಯೆಂದು ತಮ್ಮನ್ನು ಗಣಿಸುವವು. ಆತ್ಮಪ್ರಕೃತಿಗಳ ನಡುವೆ ಕರ್ಮವು ಸರಪಳಿಯಂತಿರುವದು. ಆತ್ಮವು ಬದಲಾವಣೆ ಹೊಂದದೆ ಶಾಶ್ವತವಾಗಿದ್ದು ಶರೀರದಿಂದುದ್ಭವಿಸಿರುವದಿಲ್ಲ. ಹೊಸ ವಸ್ತುವು ಹುಟ್ಟುವದಿಲ್ಲೆಂತಲೂ ಹಳೆ ವಸ್ತುವು ನಾಶವಾಗುವದಿಲ್ಲೆಂತಲೂ ಜೈನರು ಒಪ್ಪುತ್ತಾರೆ. ಭೂತಗಳ ಸಮ್ಮಿಶ್ರಣದಿಂದ ರೂಪ ಬದಲಾವಣೆಯಾಗಿ ಹೊಸ ವಸ್ತುವೆನಿಸುವದು. ಜೀವಗಳು ಅನೇಕವಾಗಿದ್ದು ಎಲ್ಲವೂ ಶಾಶ್ವತವಾಗಿವೆ. ಅವು ಚೇತನಾಮಯವಾಗಿವೆ. ಅವಕ್ಕೆ ದೇಹಕ್ಕೆ ತಕ್ಕ ಸಣ್ಣ ದೊಡ್ಡ ಆಕೃತಿಗಳುಂಟು. ಜೀವಗಳು ಇಂದ್ರಿಯಗಳಿದ್ದ ಹಾಗೆ ವಿವಿಧವಾಗಿರುವವು. ಯಾವಕ್ಕೆ ಪಂಚೇಂದ್ರಿಯಗಳುಂಟೋ ಅವೇ ಹೆಚ್ಚಿನ ತರಗತಿಯವು. ಸ್ಪರ್ಶೇಂದ್ರಿಯ ಒಂದೇವುಳ್ಳವು ಕಡಿಮೆತರಗತಿಯವು. ಉತ್ತಮ ಜೀವಿಗಳಾದ ಮನುಷ್ಯ ಮತ್ತು ದೇವತೆಗಳು ಆರನೆಯ ಇಂದ್ರಿಯವಾದ ಮನಸ್ಸುಳ್ಳವು. ಆತ್ಮವು ಇಂದ್ರಿಯ ಮತ್ತು ದೇಹಗಳಿಂದ ಆಗಿರದೆ ಜ್ಞಾನಸ್ವರೂಪಾದದ್ದು. ಮನುಷ್ಯ ಮೊದಲಾದ ಪ್ರಾಣಿಗಳಲ್ಲಿರುವಂತೆಯೇ ಅಣುರೇಣುಗಳಲ್ಲಿ ಸಹ ಆತ್ಮವಿದೆಯೆಂದು ವೀರಶೈವರಂತೆ ಜೈನರು ಒಪ್ಪುತ್ತಾರೆ. ಸಸ್ಯಗಳು ಏಕೇಂದ್ರಿಯ ಜೀವಿಗಳಾಗಿವೆ. ಇವು ಸ್ಥೂಲ ಅಥವಾ ಸೂಕ್ಷ್ಮರೂಪದಲ್ಲಿರಬಹುದು. ಜೈನರು ಸೂಕ್ಷ್ಮ ಸಸ್ಯಗಳಿಗೆ ನಿಗೋಡವೆಂದು ಕರೆದಿದ್ದಾರೆ. ಇವು ಅನೇಕ ಆತ್ಮಗಳಿಂದ ಕೂಡಿದ್ದು ಉಸಿರಾಡಿಸುವ ಮತ್ತು ಪೋಷಣಾಶಕ್ತಿಯುಳ್ಳವುಗಳಾಗಿವೆ. ಈ ನಿಗೋಡಗಳು ನಿರ್ವಾಣದಿಂದ ಬರಿದಾದ ದೇಹಗಳಿಗೆ ಆತ್ಮಗಳನ್ನು ಒದಗಿಸಿಕೊಡುವವು. ಜೈನಧರ್ಮದ ಪ್ರಕಾರ ಜಗತ್ತು, ಎಂದೂ ಜೀವಶೂನ್ಯವಾಗದಂತಾಗುವದು. ಜಗತ್ತಿನ ಪೂರ್ಣಲಯವು ಅಶಕ್ಯವಾಗುವದು. ಜೈನ ಮತ್ತು ವೀರಶೈವ ಧರ್ಮಗಳಲ್ಲಿ ಕಂಡುಬರುವ ಬಲವಾದ ವೈಷಮ್ಯವೆಂದರೆ ವೀರಶೈವರಲ್ಲಿ ಯಾವ ವ್ಯಕ್ತಿಯು ನಿರ್ವಾಣ ಅಥವಾ ಸಾಮರಸ್ಯವನ್ನು ಹೊಂದುವನೋ ಅಂತಹ ವ್ಯಕ್ತಿಯ ಆತ್ಮವು ಪರಮಾತ್ಮನಲ್ಲಿ ಪೂರ್ಣ ಬೆರೆಯುವದರಿಂದ ಆ ಆತ್ಮದ

ಸ್ಥಾನದಲ್ಲಿ ಮತ್ತೊಂದು ಆತ್ಮವು ಬರಲಾರದೆಂಬದು. ಈ ವಿಶಿಷ್ಟವಾದ ತತ್ವದಮೂಲಕ ಜೈನತತ್ವಕ್ಕೆ ಅನೇಕಾತ್ಮವಾದವೆಂದು (*Pluralistic Realism*) ಹೆಸರುಂಟಾಗಿದೆ.

ನಿರವಯ ವಸ್ತುವಿನಲ್ಲಿ (ಉದಾಹರಣೆಗಾಗಿ ಕಬ್ಬಿಣ, ಕಲ್ಲು) ಆತ್ಮ ಚೈತನ್ಯವು ಜಾಗ್ರತವಾಗಿಲ್ಲ. ಜೀವಕ್ಕೆ ಆಕಾರ ಅಥವಾ ರೂಪವಿರದಿದ್ದರೂ ಶರೀರದ ಪ್ರಮಾಣದಷ್ಟೇ ಇದೆ. ಜೀವವು ಕರ್ಮ ಫಲವನ್ನು ಭೋಗಿಸುವದು. ಅದು ಭಾವಗಳ ಉಪಾದಾನ ಕಾರಣವಾಗಿದೆ. ಕುಂಬಾರನ ಭಾವದಲ್ಲಿ ಮಡಿಕೆಯ ರೂಪವಿದೆ. ಆ ಮೇಲೆ ಪ್ರಕೃತಿ ರೂಪವಾದ ಮಣ್ಣಿನಿಂದ ನಿಜವಾದ ಮಡಿಕೆಯು ತಯಾರಾಗುವದು. ಮಣ್ಣು ನಿಮಿತ್ತ ಕಾರಣವು. ಆತ್ಮವು ಅನೇಕ ರೂಪಗಳಲ್ಲಿ ಬದಲಾವಣೆ ಹೊಂದಿದರೂ ಅದರ ವ್ಯಕ್ತಿತ್ವವನ್ನು ಬದಲಾಯಿಸುವದಿಲ್ಲ. ಜನನ ಮರಣಗಳು ಆತ್ಮದ ಪರ್ಯಾಯಗಳು. ಆತ್ಮವು ಶರೀರವನ್ನು ಬಿಟ್ಟಿರಬಲ್ಲದು. ಚೇತನಾಶಕ್ತಿಯು ಪ್ರಕೃತಿಯಿಂದ ಸ್ವತಂತ್ರವಾಗಿದೆ. ಅದು ಅನಾದ್ಯನಂತವಾದದ್ದು. ಕಾಲವು ನಿಜವಾದದ್ದು. ಆದರೆ ಜೀವಾಜೀವಗಳಿಗಿರುವಂತೆ ಇದಕ್ಕೆ ಸ್ಥಲಾಕ್ರಮಣವಿಲ್ಲ. ಜೈನರಲ್ಲಿ ಆರು ದ್ರವ್ಯಗಳಿರುವಂತೆ ವೈಶೇಷಿಕರಲ್ಲಿ ಒಂಭತ್ತು ಭೂತಗಳುಂಟು. ವೈಶೇಷಿಕರು ಆಕಾಶವನ್ನು ಶಬ್ದದ ಮೂಲವೆಂದು ತಿಳಿಯುತ್ತಾರೆ. ಜೈನರು ಶಬ್ದವು ಅಣುಗಳ ಹೊಯ್ದಾಟದಿಂದುಂಟಾಗುತ್ತದೆಂದು ತಿಳಿಯುತ್ತಾರೆ. ಆರು ದ್ರವ್ಯಗಳಲ್ಲಿ ಜೀವ, ಪುದ್ಗಲಗಳು ಮುಖ್ಯವಾಗಿವೆ. ಜೀವವು ಪ್ರಕೃತಿಯ ಬಲೆಯಲ್ಲಿ ಸಿಗುವದೇ ಸಂಸಾರವಿದ್ದು ಮತ್ತೇನೂ ಅಲ್ಲ. ಜೀವ ಪುದ್ಗಲಗಳು ಸಕ್ರಿಯ ದ್ರವ್ಯಗಳಿದ್ದು ಸ್ಥಲದಿಂದ ಸ್ಥಲಕ್ಕೆ ಚಲಿಸುವವು. ಜೀವಾಜೀವಗಳಲ್ಲಿಯ ಕೂಡುವಿಕೆಗೆ ಕರ್ಮವು ಮಧ್ಯ ಸರಪಳಿಯಂತಿರುವದು. ಜೀವವು ಅಜೀವದಿಂದ ಪೂರ್ಣ ಬಿಡುಗಡೆ ಹೊಂದಿದಾಗ ಮೋಕ್ಷವುಂಟಾಗುವದು. ಕರ್ಮವನ್ನು ಕಳೆದಾಗ ಈ ಧ್ಯೇಯವು ಸಾಧಿಸುವದು. ಕರ್ಮಲಯವು ನೈತಿಕ ವರ್ತನೆಯಿಂದುಂಟಾಗುವದು. ಕರ್ಮವಾಸನೆಯಿಂದಲೇ ಜೀವವು ಸಂಸಾರಕ್ಕೆ ಸಿಕ್ಕುವದು. ಮರಣವುಂಟಾದಾಗ ಆತ್ಮವು ಕರ್ಮ ಶರೀರ ರಹಿತವಾಗಿ ಹೊಸ ಶರೀರವನ್ನು ಪ್ರವೇಶಿಸುವದು. ದೇಹಧಾರಿಗಳಾದ ಆತ್ಮಗಳು ತಮ್ಮ ಜನ್ಮಗಳ ಮೂಲಕ (೧) ನರಲೋಕ ಜನ್ಮಿಗಳು (೨) ಪಶುಲೋಕ ಜನ್ಮಿಗಳು (೩) ಮನುಷ್ಯಲೋಕ ಜನ್ಮಿಗಳು (೪) ದೇವಲೋಕ ಜನ್ಮಿಗಳೆಂದು ನಾಲ್ಕು ವಿಧವಾಗಿವೆ.

ನೀತಿಶಾಸ್ತ್ರಃ--- ಪ್ರಕೃತಿಯನ್ನು ಕೆಳಗೊತ್ತಿ ಅಂತರಾತ್ಮವನ್ನು ಪ್ರಕಾಶಗೊಳಿಸುವದೇ ಮೋಕ್ಷದ ಸಾಧನವು. ಜಿನನಲ್ಲಿ ಭಕ್ತಿಯಿಡುವದರಿಂದ ಅವನ ತತ್ವದ ಜ್ಞಾನದಿಂದ ಮತ್ತು ಉತ್ತಮವಾದ ವರ್ತನವೆಂಬ ಈ ಮೂರು ರತ್ನಗಳ ಮೂಲಕ ನಿರ್ವಾಣಕ್ಕೆ ಹಾದಿಯುಂಟು. ತತ್ವಗಳಲ್ಲಿ ನಂಬಿಕೆಯೇ ಭಕ್ತಿಯು. ಸಂಶಯವಿಲ್ಲದ ಜ್ಞಾನವೇ ನಿಜವಾದ ಜ್ಞಾನವು. ರಾಗ ದ್ವೇಷಗಳಿಲ್ಲದೆ ಬಹಿರಂಗ ವಸ್ತುಗಳಲ್ಲಿ ನಿರಪೇಕ್ಷ ಬುದ್ಧಿಯಿಂದಿರುವದು ಉತ್ತಮವಾದ ವರ್ತನೆಯಾಗಿದೆ. ಈ ಮೂರನ್ನೂ ಏಕಕಾಲದಲ್ಲಿಯೇ ಆಚರಿಸತಕ್ಕದ್ದು. ಸದ್ಗುಣವು ಐದು ವಿಧವಾದ ವರ್ತನೆಯಿಂದ ಕೂಡಿರುವದು. (೧) ಅಹಿಂಸೆ (೨) ಅಸ್ತೇಯ (೩) ಸತ್ಯ ಮತ್ತು ಧ್ಯಾನ (೪) ಮನೋವಾಕ್ಕಾಯಗಳಲ್ಲಿ ಶುದ್ಧತೆ (೫) ವೈರಾಗ್ಯ. ಜೈನ ಸನ್ಯಾಸಿಗಳು ಬತ್ತಲೆಯಾಗಿರುತ್ತಾರೆ. ಯಾಕಂದ್ರರೆ ಮಾನಾಪಮಾನಗಳ ಭೇದ ಬುದ್ಧಿಯಿರುವದಾದರೆ ಮೋಕ್ಷವು ಲಭಿಸಲಾರದೆಂದು ಅವರ ನಂಬಿಕೆ. ವೀರಶೈವರು ಭಕ್ತಿ ಜ್ಞಾನ ಕರ್ಮಗಳಿಗೆ ಸಮವಾದ ಮಹತ್ವ ಕೊಟ್ಟಿರುವಂತೆಯೇ ಜೈನರು ಸಹ ಅದಕ್ಕೆ ಸಮವಾದ ಮಹತ್ವ ಕೊಟ್ಟಿದ್ದಾರೆ. ಪರಹಿಂಸೆ ಮಾಡುವದು ಪಾಪವು. ಪರೋಪಕಾರವು ಪುಣ್ಯವು. ಅಸತ್ಯ ಅತ್ಯಾಶೆ ಕ್ರೋಧ ಮೋಸ ಪರಸ್ತ್ರೀಗಮನ ಮುಂತಾದವು ಪಾಪಮಯವಾದವೂ ಸಂಸಾರ ಬಂಧನಕ್ಕೆ ಕಾರಣವೂ ಆಗಿವೆ. ಪಾಪಕೃತಿಯಿಂದ ದೇವರಿಗೆ ದ್ರೋಹ ಮಾಡಿದಂತಾಗುವದಿಲ್ಲವೆಂತಲೂ ಮನುಷ್ಯರಿಗೆ ದ್ರೋಹ ಮಾಡಿದಂತಾಗುವದೆಂದೂ ಜೈನರ ನಂಬಿಕೆ. ಆದರೆ ವೀರಶೈವರಲ್ಲಿ ಪಾಪ ಕೃತಿಯಿಂದ ದೇವರಿಗೆ ಸಹ ದ್ರೋಹವಾಗುವದೆಂಬ ನಂಬಿಕೆಯಿದೆ. "ಹಲ್ಲುದೋರಿ ಮೂಗು ಕೊಯ್ಯುವ ನಮ್ಮ-ಸಂಗಮದೇವ" ಮುಂತಾದ ವಚನಗಳಿವೆ. ಜೈನರ ನಂಬಿಕೆಯಂತೆ ಪಾಪಿಗೆ ಶಾಸನವಾಗದೇ ಹೋದಾಗ ಇಹಲೋಕದಿಂದ ಪಾರಾಗಿ ಪರಲೋಕದಲ್ಲಿಯೂ ಪಾರಾಗಿ ಅವನ ಪಾಪಕೃತ್ಯದ ಹೊಣೆಗಾರಿಕೆಯೇ ಇಲ್ಲದಂತಾಗುವದು. ಮನುಷ್ಯನ ಪುಣ್ಯ ಪಾಪಗಳಿಗೆ ಸದ್ಗತಿ ಅಥವಾ ದುರ್ಗತಿಯನ್ನು ವಿಧಿಸುವ ಮನುಷ್ಯನಿಗಿಂತಲೂ ಶ್ರೇಷ್ಠನಾದ ಒಬ್ಬ ದೇವನ ಅಧಿಕಾರವನ್ನು ಮನ್ನಿಸದಿದ್ದಲ್ಲಿ ನೈತಿಕ ಕ್ಷೇತ್ರವು ಅನರ್ಥವಾದದ್ದೂ ಅರಾಜಕವಾದದ್ದೂ ಆಗುವದು. ಶಾಂತಿಯು ಉತ್ತಮ ಗುಣವು. ಸುಖವು ಪಾಪದ ಮೂಲವು. ನಮ್ಮ ಕರ್ಮವೇ ನಮ್ಮ ಅದೃಷ್ಟವನ್ನು ರಚಿಸುವದು. ಹಿಂದಿನ ಕರ್ಮದ ಫಲವನ್ನು ಸದ್ಯದ ಕರ್ಮದಿಂದ ನಾವು ಸರಿಪಡಿಸಿಕೊಳ್ಳಬಲ್ಲೆವು.

ಇದರಲ್ಲಿ ದೇವರು ಕೈಹಾಕುವದೇ ಇಲ್ಲ. ಜಪವು (ಧ್ಯಾನ) ನಮ್ಮ ಪ್ರತಿಜ್ಞೆಗಳನ್ನು ಸಫಲಗೊಳಿಸುವದಕ್ಕೆ ನಮಗೆ ಶಕ್ತಿಯನ್ನುಂಟು ಮಾಡುವದರಿಂದ ನಾವು ಧ್ಯಾನ ಮಾಡಬೇಕು. ಜೈನರಲ್ಲಿ ಅಹಿಂಸೆಯೇ ಮುಖ್ಯ ತತ್ವವು. ಜೀವಗಳು ನಾಶವಾಗಬಾರದೆಂದು ಜೈನರು ನೆಲವನ್ನು ಉಡುಗುತ್ತ ಅಡ್ಡಾಡುವರು. ಶ್ವಾಸೋಚ್ಛ್ವಾಸಗಳಲ್ಲಿ ಪ್ರಾಣಿಗಳಿಗೆ ಹಿಂಸೆಯಾಗಬಾರದೆಂದು ಮೂಗು ಬಾಯಿಗಳಿಗೆ ಬಟ್ಟೆಯನ್ನು ಕಟ್ಟುವರು. ಜೇನ ತುಪ್ಪವನ್ನು ಸ್ವೀಕರಿಸುವದಿಲ್ಲ. ಹನ್ನೆರಡು ವರ್ಷ ಸನ್ಯಾಸ ವ್ರತವನ್ನು ಮಾಡಿದ ನಂತರ ನಿರ್ವಾಣವು ಲಭಿಸುವದರಿಂದ ಆಗ ಆತ್ಮಹತ್ಯವನ್ನು ಮಾಡಿಕೊಳ್ಳಬಹುದೆಂದು ಜೈನರು ಹೇಳುತ್ತಾರೆ. ತನ್ನ ಕರ್ಮದಿಂದ ಬೇಕಾದವನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನಾಗಬಲ್ಲನು. ಜೈನಧರ್ಮವು ರಾಮಕೃಷ್ಣ ಮುಂತಾದ ಹಿಂದೂ ದೇವತೆಗಳನ್ನು ಮಾನ್ಯ ಮಾಡಿದ್ದರಿಂದಲೂ ಹಿಂದೂ ಪದ್ಧತಿಗೆ ಅನುಸರಿಸಿ ನಡೆದದ್ದರಿಂದಲೂ ಬೌದ್ಧ ಧರ್ಮದಂತೆ ನಾಮಶೇಷವಾಗದೆ ಈಗಲೂ ಉಳಿದಿದೆ. ಬೌದ್ಧ ಜೈನ ಧರ್ಮಗಳೆರಡೂ ಜೀವಿತವು ದುಃಖಮಯವಾದದ್ದೆಂದು ತಿಳಿದವು. ಬಡತನ, ಶುದ್ಧಾಚರಣೆ, ಶಾಂತಿ, ದುಃಖಾನುಭವಗಳನ್ನು ಮೇಲೆಂದು ಭಾವಿಸಿದವು.

ದೈವೀಕಲ್ಪನೆಃ—ಸೃಷ್ಟಿಲಯದ ಕಾರ್ಯಕ್ಕಾಗಿ ದೇವರ ಅವಶ್ಯಕತೆ ಇಲ್ಲ. ಇರುವ ವಸ್ತುಗಳಿಗೆ ಲಯವಿರಲಾರದು. ಇಲ್ಲದ ವಸ್ತುವಿನಿಂದ ಹೊಸ ವಸ್ತುವಿನ ಉತ್ಪತ್ತಿಯೂ ಇರಲಾರದು. ವಸ್ತುಗಳು ಪರಸ್ಪರ ಕ್ರಿಯೆಯಿಂದ ಹೊಸ ಗುಣಗಳನ್ನು ಹುಟ್ಟಿಸುವವು. ಜಗತ್ತಿನ ಮೂಲ ಕಾರಣವನ್ನು ಗ್ರಹಿಸುವ ಅವಶ್ಯಕತೆಯಿಲ್ಲ. ಜೀವಾಜೀವಗಳಿಂದ ಕೂಡಿದ ಯಾವತ್ತು ಜಗತ್ತು ಅನಂತಕಾಲದಿಂದ ಸೃಷ್ಟಿನಿಯಮದ ಶಕ್ತಿಯಿಂದಲೇ ಸಾಗಿರುವದಲ್ಲದೆ ದೇವರಿಂದಲ್ಲ. ಜಗತ್ತಿನ ವಿವಿಧತೆಯು ಕಾಲ, ಸ್ವಭಾವ, ನಿಯತಿ, ಕರ್ಮ, ಉದ್ಯಮ (ಇರುವ ಮತ್ತು ವರ್ತಿಸುವ ಇಚ್ಛೆ) ಎಂಬ ಐದು ಕಾರಣಗಳ ಸಹಕಾರದಿಂದಾಗಿರುವದು. ಬೀಜವು ಮರವಾಗುವ ಶಕ್ತಿಯಿಂದ ಕೂಡಿರಬಹುದು. ಆದರೆ ಅದು ಮರವಾಗಿ ಬೆಳೆಯುವ ಮೊದಲು ಕಾಲದ (ಋತು) ಯೋಗ್ಯ ಪರಿಸ್ಥಿತಿಯ ಮತ್ತು ಯೋಗ್ಯ ಕ್ಷೇತ್ರದಲ್ಲಿ ಇರಿಸಲ್ಪಡುವ ಸಹಾಯವನ್ನು ಹೊಂದಬೇಕಾಗುವದು. ಬೀಜವು ತನ್ನ ಸ್ವಭಾವಕ್ಕನುಗುಣವಾದ ವೃಕ್ಷವಾಗಿಯೇ ಬೆಳೆಯುವದು. ಜಗತ್ತಿನಹೊರ್ತಾಗಿ ದೇವರೆಂಬ ಪ್ರತ್ಯೇಕ ವಸ್ತುವಿರದಿದ್ದರೂ ಜಗತ್ತಿನಲ್ಲಿಯ ಕೆಲವು ವಸ್ತುಗಳು ಪರಿಪೂರ್ಣತೆಯನ್ನು ಹೊಂದಿದಾಗ ದೈವೀಸ್ವರೂಪವನ್ನು

ಹೊಂದುವವು. ಇವರೇ ಅರ್ಹತರು, ಸರ್ವಜ್ಞರು, ಸರ್ವಸಂಗಪರಿತ್ಯಾಗಿಗಳು. ಮನುಷ್ಯನ ಆತ್ಮವೇ ಪರಿಪೂರ್ಣತೆಯನ್ನು ಹೊಂದಿದಾಗ ಪರಮಾತ್ಮವೆಂದು ಹೇಳಿಸಿಕೊಳ್ಳುವದು. ಇದರ ಹೊರತಾಗಿ ಮತ್ತೆ ಬೇರೆ ದೇವರಿಲ್ಲ. ಎಲ್ಲ ಅರ್ಹತರು ಸಮವಾಗಿಯೇ ದೈವೀಪುರುಷರಿದ್ದಾರೆ. ಅವರಲ್ಲಿ ಭೇದವಿಲ್ಲ. 'ಜೈನರಲ್ಲಿ ಖಂಡಿತವಾಗಿ ಭಕ್ತಿಗೆ ಆಸ್ಪದವಿಲ್ಲ.' ಆದರೆ ಸಾಧಾರಣ ಜನರು ಧರ್ಮ ಸಾಧನೆಗಾಗಿ ತೀರ್ಥಂಕರರಲ್ಲಿ ಭಕ್ತಿಯನ್ನಿಡುತ್ತಾರೆ. ಇಹದಲ್ಲಿ ಪುಣ್ಯ ಗಳಿಸಿದ ಆತ್ಮಗಳೇ ಸ್ವರ್ಗದಲ್ಲಿ ದೇವತೆಗಳಾಗಿರುವವು. ಪುಣ್ಯ ತೀರಿದಮೇಲೆ ದೇವತೆಗಳ ಜೀವಿತವು ಮುಗಿಯುವದು. ಮೋಕ್ಷ ಪಡೆದ ಆತ್ಮಗಳು ದೇವತೆಗಳಿಗಿಂತ ಶ್ರೇಷ್ಠವಾಗಿವೆ. ಅವಕ್ಕೆ ಪುನರ್ಜನ್ಮವಿಲ್ಲ, ಭವದ ಹಂಗಿಲ್ಲ. ಜನರ ಪ್ರಾರ್ಥನೆಯು ಅವರನ್ನು ಮುಟ್ಟುವದಿಲ್ಲ. ಆ ಪ್ರಾರ್ಥನೆಗೆ ಎದುರುತ್ತರವನ್ನುಸಹ ಅವರು ಕೊಡುವದಿಲ್ಲ. ಮೋಕ್ಷದ ಹಾದಿಗೆ ಆತ್ಮ ಸಾಕ್ಷಾತ್ಕಾರವೇ ಕಾರಣವಲ್ಲದೆ, ತೀರ್ಥಂಕರರಲ್ಲಿ ಭಕ್ತಿಯಲ್ಲ. ಜೀವನನ್ನು (ಪರಿಪೂರ್ಣ ಹೊಂದಿದ ಆತ್ಮ) ಧ್ಯಾನಿಸುವದರಿಂದ ಆತ್ಮವು ಪವಿತ್ರವಾಗುವದು. ಜೈನಧರ್ಮದಲ್ಲಿ ದೇವದಯೆ ಅಥವಾ ಕ್ಷಮೆಗೆ ಆಸ್ಪದವಿಲ್ಲದ್ದರಿಂದ ಅದು ಜನರ ಮನಸ್ಸನ್ನು ಆಕರ್ಷಿಸದಾಯಿತು. ಆ ಮೇಲೆ ಧರ್ಮ ನಂಬಿಗೆಯಲ್ಲಿ ಕೆಲವು ಬದಲಾವಣೆಗಳುಂಟಾದವು.

ನಿರ್ವಾಣ—ನಿರ್ವಾಣವೆಂದರೆ ಆತ್ಮದ ನಾಶವಲ್ಲ. ಆದರೆ ಆತ್ಮವು ಶಾಶ್ವತವಾದ ಆನಂದ ಸ್ಥಿತಿಯನ್ನು ಹೊಂದುವದು. ಅದು ಶರೀರಬಂಧನದಿಂದ ಪಾರಾಗಿರುವ ಸ್ಥಿತಿಯು. ರೂಪರಹಿತವಾಗಿಯೂ, ಪುನರ್ಜನ್ಮವಿಲ್ಲದೆಯೂ, ಜ್ಞಾನಮಾತ್ರವಾಗಿಯೂ ಇರುವ ಸ್ಥಿತಿಯು. ಮುಕ್ತಾತ್ಮಕ್ಕೆ ಆದಿಯಿದ್ದು ಅಂತ್ಯವಿಲ್ಲ. ಬದ್ಧಾತ್ಮಕ್ಕೆ ಆದಿಯಿರದೆ ಅಂತವುಂಟು. ನಿರ್ವಾಣಸ್ಥಿತಿಯಲ್ಲಿ ಆತ್ಮವು ದೇಹವನ್ನು ಬಿಟ್ಟು ಪ್ರತ್ಯೇಕವಾಗಿರುವದು. ಆದರೆ ವೀರಶೈವರ ಕೈವಲ್ಯಸ್ಥಿತಿಯಲ್ಲಿ ಆತ್ಮವು ಪರಮಾತ್ಮನಲ್ಲಿ ಬೆರೆತು ನೀರಿನಲ್ಲಿ ನೀರು ಬೆರೆತಂತೆ, ಬೆಂಕಿಯಲ್ಲಿ ಕರ್ಪುರ ಬೆರೆತಂತೆ, ಪೂರ್ಣ ಐಕ್ಯವನ್ನು ಹೊಂದುವದು. ಆತ್ಮಕ್ಕೆ ಪ್ರತ್ಯೇಕ ಅಸ್ತಿತ್ವವಾಗಲಿ, ಜ್ಞಾನವಾಗಲಿ, ಉಳಿಯದೆ ಕೇವಲ ಪರಮಾತ್ಮನಲ್ಲಿ ಒಂದಾಗಿಬಿಡುವದು. ಜೈನರ ನಿರ್ವಾಣ ಮತ್ತು ವೀರಶೈವರ ಕೈವಲ್ಯಗಳಲ್ಲಿ ಕಂಡುಬರುವ ವೈಷಮ್ಯವಿದು. ಜೈನರು ಮುಕ್ತಾತ್ಮಗಳು ಸಿದ್ಧಶೀಲವೆಂಬ ಮೇಲಿನ ಲೋಕದಲ್ಲಿ ಇರುತ್ತವೆಂದು ನಂಬುತ್ತಾರೆ.

ಜೈನರು ಜಗತ್ತು ಜೀವಗಳಿಂದ ತುಂಬಿರುವದೆಂದು ಹೇಳುತ್ತಾರೆ. ಲೀಬ್ನಿಝು ಎಂಬ ತತ್ವಜ್ಞನು ಜಗತ್ತು ಜೀವ ಪರಮಾಣುಗಳಿಂದ (*Monads*) ಕೂಡಿರುವದೆಂದು ಹೇಳಿದ್ದು ಜೈನತತ್ವವನ್ನು ಹೋಲು ವದು. ಜೀವವು ಅಸ್ತಿತ್ವದಲ್ಲಿರುವ ಒಂದು ವಿಶಿಷ್ಟ ವಸ್ತುವು. ಪ್ರಕೃತಿ ಯಿಂದ ಮುಕ್ತವಾದ ಜೀವಕ್ಕೆ ಆತ್ಮವೆಂದು ಹೆಸರು. ಆತ್ಮವು ಶುದ್ಧ ಜ್ಞಾನಸ್ವರೂಪವು. ಜೈನರು ಈ ಜೀವಾತ್ಮರ ಭೇದವನ್ನು ಅರಿತುಕೊಳ್ಳ ಲಿಲ್ಲ. ಜೈನರು ಪ್ರಕೃತಿಗೆ ಜೀವಚೈತನ್ಯವುಂಟೆಂದು ಹೇಳುತ್ತಾರೆ. ಪ್ರತಿ ಯೊಂದು ಜೀವವು ಅನೇಕತ್ವದಲ್ಲಿ ಏಕತ್ವವಾಗಿಯೂ ಏಕತ್ವದಲ್ಲಿ ಅನೇ ಕತ್ವವಾಗಿಯೂ ಇದೆ. ಜಗತ್ತಿನಲ್ಲಿ ಆತ್ಮ ಮತ್ತು ಪ್ರಕೃತಿಗಳು ಯಾವಾ ಗಲೂ ಕೂಡಿರುತ್ತವೆ. ಜೀವದಲ್ಲಿಯ ಪುರುಷಾಂಶವು ಯಾವಾಗಲೂ ಉಚ್ಚಮಾರ್ಗಕ್ಕೆಳೆಯುವದು. ಪ್ರಕೃತಿಯ ಅಂಶವು ಅಧೋಮಾರ್ಗಕ್ಕೆ ಳೆಯುವದು. ಜೀವಗಳಲ್ಲಿ ಹೆಚ್ಚುಕಡಿಮೆ ತರಗತಿಗಳುಂಟು. ಧಾತು ಗಳಲ್ಲಿ ಜೀವಾಂಶವು ಕಡಿಮೆಯಾಗಿದೆ. ಸಸ್ಯಗಳಲ್ಲಿ ಸ್ವಲ್ಪ ಹೆಚ್ಚು, ಪಶು ಗಳಲ್ಲಿ ಇನ್ನೂ ಹೆಚ್ಚು, ಮನುಷ್ಯರಲ್ಲಿ ಅದಕ್ಕೂ ಹೆಚ್ಚು, ದೇವತೆಗಳಲ್ಲಿ ಅದಕ್ಕಿಂತಲೂ ಹೆಚ್ಚು. ಜೈನರು ಅನೇಕ ಜೀವಗಳುಂಟೆಂದು ಹೇಳುವರು. ಆದರೆ ಪ್ರಕೃತಿಯಿಂದ ಪುರುಷನನ್ನು ಪ್ರತ್ಯೇಕಿಸಿದಾಗ ಪುರುಷನೊಬ್ಬನೇ ಇರುವದು ಕಂಡುಬರುವದು. ಚಿತ್ಸ್ವರೂಪನಾದ ಆತ್ಮನು ಜಗತ್ತೆಲ್ಲ ವನ್ನು ವ್ಯಾಪಿಸಿರುವನು. ಆತ್ಮನು ಒಬ್ಬನೇ. ಆದರೆ ಜಗತ್ತಿನಲ್ಲಿ ಬೇರೆ ಬೇರೆ ವಸ್ತುಗಳಲ್ಲಿ ಬೆರೆತು ಸಂಕುಚಿತವಾಗಿ ಜೀವಭಾವವನ್ನು ಧರಿಸಿ ದಂತೆ ಕಾಣುವನು. ಈ ಮೂಲಕವಾಗಿಯೇ ವೀರಶೈವವು ಆತ್ಮ ಪರ ಮಾತ್ಮರಲ್ಲಿ ಅಭೇದವನ್ನು ಮನ್ನಿಸುವದು. ಈ ಅಂತಿಮ ಧ್ಯೇಯವನ್ನು ಜೈನಧರ್ಮವು ಮರೆತುಬಿಟ್ಟಿತು. ಆತ್ಮವು ಸಂಸಾರದಲ್ಲಿ ಸಿಲುಕಿದಾಗ ಮತ್ತು ಜೀವರೂಪದಿಂದ ಕರ್ಮಫಲವನ್ನನುಭವಿಸುವಾಗ ಜೀವಗಳು ಅನೇಕವಾಗಿವೆಯೆಂದು ಗ್ರಹಿಸಬಹುದು. ಆದರೆ ಸಂಸಾರ ಬಂಧನವು ತೊಲಗಿದಾಗ ಆತ್ಮದ ಅನೇಕ ಸ್ವರೂಪಗಳು ಉಳಿಯುವವೆಂಬದು ತರ್ಕ ವಿರೋಧವಾಗುವದು. ಸೂರ್ಯನು ಇರುವಾಗ ಅನೇಕ ನೀರಿನ ಪಾತ್ರೆ ಗಳಲ್ಲಿ ಸೂರ್ಯನ ಅನೇಕ ಪ್ರತಿಬಿಂಬಗಳು ಕಾಣುವವು. ಸೂರ್ಯನು ಮರೆಯಾದಾಗ ಪ್ರತಿಬಿಂಬಗಳು ಸೂರ್ಯನಲ್ಲಿ ಅಡಗುವವು. ಜೀವಗಳ ಪರಿಯಾದರೂ ಹೀಗೆಯೇ ಇರುವದು.

---

# ಬಸವನ ಬಟ್ಟೆ ಬಟ್ಟೆ.

(ಲೇ:— ಶ್ರೀ. ಸ. ಹಾ. ಶಿವಮೂರ್ತಿಗಳು ಶಿವಯೋಗಮಂದಿರ

ಮುಕ್ಕಾಂ ಬನಾರಸ್ ಸಿಟಿ)

[ತಾ. ೨೨-೪-೩೯ ರಲ್ಲಿ ಬನಾರಸ್ಸಿನ ಲಲಿತಾಘಾಟಿನವರು ಬಸವೇಶ್ವರ ಜಯಂತಿಯನ್ನಾಚರಿಸಿದ ಸಮಯದಲ್ಲಿ ಮಾಡಿದ ಉಪನ್ಯಾಸದಿಂದ.]

ಪ್ರಿಯ ಬಾಂಧವರೇ! "ಬಸವನ ಬಟ್ಟೆಬಟ್ಟೆ." ಎಂಬ ವಾಕ್ಯವನ್ನು, ಬಸವಣ್ಣನವರನ್ನು ಬಗೆಬಗೆಯಿಂದ ಬಣ್ಣಿಸುವಾಗ ಹರಿಹರದೇವನು ಹೇಳಿದ್ದಾನೆ. 'ಬಟ್ಟೆ' ಯೆಂದರೆ ಮಾರ್ಗ; 'ಬಸವನ ಮಾರ್ಗವೇ ಮಾರ್ಗ' ಎಂಬುದು ಅದರರ್ಥ. ಈ ನುಡಿಯನ್ನೇ ಹಿಡಿದು ನನ್ನ ಬಡಮತಿಗೆ ಬಂದಂತೆ ನಾಲ್ಕು ಮಾತಾಡಲು ತಮ್ಮೆಲ್ಲರ ಅಪ್ಪಣೆ ಬೇಡುತ್ತೇನೆ.

೧

ಪರಿ ಪರಿಯ ಕಾಲಗಳಲ್ಲಿ ತೆರ ತೆರನಾದ ಹಿರಿ ಹಿರಿಯ ಕ್ರಾಂತಿಗಳು ತಲೆಯೆತ್ತುತ್ತವೆ; ಬೆಲೆಹೊಂದುತ್ತವೆ. ಆ ಆ ಕ್ರಾಂತಿಗಳಿಗೆ ಒಂದು 'ಸಂಧಿ' ಅಥವಾ 'ಈಶ್ವರಸಂಕೇತ' ವೆಂಬುದು ಇದ್ದೇ ಇರುತ್ತದೆ. ಇದಿಲ್ಲದೆ ಕ್ರಾಂತಿ ದೇವಿಯು ಮುಡಿಗೆದರಿ ರಕ್ತಾಕ್ಷಿಯಾಗಿ ಅಡಿಯಿಡಲಾರಳು. ಮಹತ್ತಾದ ಕ್ರಾಂತಿಗಳಿಗೆಲ್ಲಾ "ಈಶ್ವರ ಸಂಕೇತ" ವಿರುತ್ತದೆಂದು ಕಾರ್ಯಗಳಿಂದ ಊಹಿಸಬಹುದು. ಇಂದು ಹಿಂದುಸ್ತಾನದಲ್ಲೆಲ್ಲಾ ಪ್ರಜ್ವಲಿಸುತ್ತಿರುವ ಈ ರಾಜಕೀಯ (ಕಾಂಗ್ರೆಸ್) ಕ್ರಾಂತಿಗೆ ಅಗಾಧ ಶಕ್ತಿಯುತರಾದ ಮಹಾತ್ಮಾ ಗಾಂಧಿ, ಪಂಡಿತ ಜವಾಹರಲಾಲ ಮುಂತಾದ ಎಷ್ಟೋ ರಾಜಕೀಯ ಮಹಾಮಹಾ ವ್ಯಕ್ತಿಗಳು ಏಕಕಾಲದಲ್ಲಿಯೆ ಒದಗಿರುವದನ್ನು ನೋಡಿ ಕೊಂಚ ಯೋಚಿಸಿದರೆ, ಇದೊಂದು 'ಸಂಧಿ' ಅಥವಾ ಈಶ್ವರೇಚ್ಛೆಯ ಪ್ರಭಾವವೆಂದು ತಾನಾಗಿಯೇ ಬೋಧೆಯಾಗುವುದಲ್ಲವೆ? ಇಲ್ಲದಿರಲು ಇಂತಹ ರಾಜಕೀಯ ಮಹಾವ್ಯಕ್ತಿಗಳು ಏಕಕಾಲದಲ್ಲಿ ಏಕತ್ರಿತರಾಗುವದು ಹೇಗೆ?

ಈ ಸಮಯದಲ್ಲಿ ವಚನಸಾಹಿತ್ಯೋದ್ಧಾರಕರಾದ ಶ್ರೀಮಾನ್ ರಾ. ಸಾ. ಪಿ. ಜಿ. ಹಳಕಟ್ಟಿಯವರ ವಿಚಾರಪ್ರಚುರವಾದ ವಾಕ್ಯವೊಂದು ನೆನಹಿಗೆ ಬರುತ್ತಿದೆ:- "ಯಾವದಾದರೊಂದು ಮಹತ್ತರವಾದ ಕ್ರಾಂತಿಯು ತತ್ಕಾಲದಲ್ಲಿ ಎಂದೂ ಸಂಭವಿಸುವದಿಲ್ಲ. ಇದು ರೂಪಕ್ಕೆ ಬರಲು ಒಂದು ಪೂರ್ವೇತಿಹಾಸವಿರುತ್ತದೆ. ಆಗ ಅನೇಕರು ಉದ್ಭವಿಸಿ ಪ್ರಚಾರ ಕಾರ್ಯ ಮಾಡುವದುಂಟು. ಅದರ ಪರಿಣಾಮವಾಗುತ್ತ ಕೆಲಕಾಲದ ಮೇಲೆ ಮತ್ತೊಬ್ಬ ಮಹಾವ್ಯಕ್ತಿಯು ಉದ್ಭವಿಸಿ, ಅವನು ತನ್ನ ಘಟನಾ ಶಕ್ತಿಯಿಂದ ಒಂದು ಅದ್ಭುತವಾದ ಕ್ರಾಂತಿಯನ್ನು ಸಮಾಜದಲ್ಲಿ ಎಸಗುವನು. ಅವನ ಹೆಸರೇ ಮುಂದೆ ಬಹುಕಾಲ ಉಳಿಯುತ್ತದೆ. ಅವನು ಮಹಾತ್ಮನಾಗುತ್ತಾನೆ. ಎಂದು ತಿಳಿಸಿದ್ದಾರೆ. ಏಕೆಂದರೆ ಅರುಣೋದಯವಾಗದೆ ಸೂರ್ಯೋದಯವಾಗದು. ಇದೀಗ ಉಗ್ರವಾಗಿ ಸಮಗ್ರವಾಗಿ ಪ್ರಜ್ವಲಿಸುತ್ತಿರುವ ಕಾಂಗ್ರೆಸ್ ಕ್ರಾಂತಿಗೆ ಪೂರ್ವೇತಿಹಾಸವೊಂದು ಇದ್ದೇ ಇದೆ. ಟಿಳಕರು ಅರುಣೋದಯದಂತಿದ್ದರೆ, ಗಾಂಧಿಯವರು ಸೂರ್ಯೋದಯದಂತಿದ್ದಾರೆ. ಗಾಂಧಿಯವರಿಗಿಂತಲೂ ಮೊದಲು, ಲೋಕಮಾನ್ಯ ಟಿಳಕ, ಚಿತ್ತರಂಜನದಾಸ ಮೊದಲಾದವರು ದುಡಿದಿದ್ದಾರೆ; ದುಃಖಪಟ್ಟಿದ್ದಾರೆ. ಆದರೆ ಗಾಂಧಿಯವರೇ ಇದಕ್ಕೆ ಪ್ರಧಾನ ನಾಯಕರೆಂಬ ಪ್ರಖ್ಯಾತಿಯು, ಇಂದು ದೇವಲೋಕಕ್ಕೆ ಮುಟ್ಟಿದೆ. ಅರುಣೋದಯ ಸೂರ್ಯೋದಯಗಳಲ್ಲಿ ತೋರಿಬರುವ, ತಾರತಮ್ಯವಿದೇ ಇರಬಹುದು. ಹೀಗೆಯೇ ಬಸವಣ್ಣನವರ ಕಾಲ [೧೧ ಹಾಗೂ ೧೨ನೇ ಶತಮಾನಗಳ ಮಧ್ಯ] ದಲ್ಲಿ ಧಾರ್ಮಿಕ ಕ್ರಾಂತಿಯೆದ್ದಿತು. ಈಶ್ವರೇಚ್ಛೆಯಂತೆ ಅಂತಹ ಧೀರ ವೀರವ್ಯಕ್ತಿಗಳೇ ಆಗ ಏಕಕಾಲದಲ್ಲಿ ಏಕತ್ರಿತರಾದರು. ಟಿಳಕರ ತರುವಾಯ ಗಾಂಧಿಯವರಾದಂತೆ, ಅರುಣೋದಯದ ತರುವಾಯ ತರಣಿಯು ಉದಯವಾದಂತೆ, ರೇವಣಸಿದ್ಧೇಶ್ವರರ ತರುವಾಯ ಬಸವಂಣನವರಾದರು. ಗಾಂಧಿಯವರು ಪ್ರಖ್ಯಾತಿಗೆ ಬರಲು, ಟಿಳಕರ ವಿಷಯದಲ್ಲಿ ಜನರು ಬರುಬರುತ್ತ ಮಂದೋತ್ಸಾಹರಾದರು; ಆಗಿರುತ್ತಾರೆ. ಬಸವಂಣನವರು ಪ್ರಕಾಶಕ್ಕೆ ಬರಲು ರೇವಣಸಿದ್ಧೇಶ್ವರರ ಹೆಸರು ವೀರಶೈವರ ಸ್ಮೃತಿ ಪಥದಿಂದ ಕೊಂಚ ಸರಿದಿರಬೇಕು. ಮಾವಿನ ಹಣ್ಣು ಬರಲು ಮಾವಿನ ಹೂವಿನಲ್ಲಿದ್ದ ಲವಲವಿಕೆ ಕಡಿಮೆಯಾಗುತ್ತದೆಯಲ್ಲವೆ?

೨

ಕನ್ನಡ ಸಾಹಿತ್ಯದಲ್ಲಿ ಬಸವಂಣನವರ ಚರಿತೆಯು ಹೊತ್ತಿಗೆಗಳು ಮಿತಿ ಮೀರಿಲ್ಲವೆಂದರೂ ಕೊರತೆಯಿಲ್ಲವೆನ್ನಬಹುದು. ಆದರೆ ಅವೆಲ್ಲವೂ ಬಸವಂಣನವರ ಜೀವನರೇಖೆಯುನ್ನು ಸುಸ್ಪಷ್ಟಗೊಳಿಸಿವೆ ಎಂದು ಒಪ್ಪಿಕೊಳ್ಳುವಂತಿಲ್ಲ. ಬಸವಂಣನವರ ಜೀವನ ರಹಸ್ಯವು ಅವರ ವಚನಗಳಲ್ಲಿಯೇ ಖಚಿತವಾಗಿದೆ; ಪೌರಾಣಿಕ ಪವಾಡದ ಕಥೆಗಳಲಲ್ಲ. ಅವರ ಚರಿತ್ರೆ ಬರೆದವರೆಲ್ಲರೂ ಅವರ ವಚನಗಳನ್ನು ನೋಡಿಯೇ ಇದ್ದರು. ಆದರೆ ಜನರ ಮುಖದಲ್ಲಿ ಬೆಳೆದು ಬಂದ ಪವಾಡಗಳಿಗೆ ಸಾಕಷ್ಟು ಬೆಲೆಕೊಟ್ಟು, ಇಷ್ಟು ಸಾಲದಿದ್ದಕ್ಕೆ ತಮ್ಮಿಂದಲೂ ಸಾಧ್ಯವಿದ್ದಷ್ಟು ಕಲ್ಪಿಸಿ ಕೃತಿ ಬರೆದವರೇ ಬಹುಜನರೆನ್ನಬಹುದು. ಬಸವಂಣನವರ ವಚನಗಳನ್ನು ಹಾಡಿ ನೋಡಿ, ಅವುಗಳಲ್ಲಿರುವ ಧ್ವನಿಯುನ್ನು ಹಿಡಿದುಕೊಂಡು ಅವನ ಜೀವನದ ಬೆಳವಣಿಗೆಯಾದ ಬಗೆ, ಸತ್ಯಾನ್ವೇಷಣೆಯುಲ್ಲಿರುವ ಆತನ ವಿಮರ್ಶಾತ್ಮಕಬುದ್ಧಿ, ಮತ್ತು ಇದಕ್ಕೆ ತಕ್ಕ ಧೀರ ಲಲಿತ ಸ್ವಭಾವ, ಆದರೂ ಸಹಿಷ್ಣುತೆಯುನ್ನೊಳಕೊಂಡ ಕುಸುಮ ಕೋಮಲವಾದ ಚಿತ್ತವೃತ್ತಿ, ಎಲ್ಲಕ್ಕೂ ಮಿಗಿಲಾಗಿ ಕೂಡಲಸಂಗಮನಲ್ಲಿದ್ದ ಅವನ ಅಹೇತುಕ ವಿಶ್ವಾಸ ಪ್ರಧಾನವಾದ ಸುಸ್ಥಿರ ಭಕ್ತಿ, ಆ ಭಕ್ತಿ ಭಾವದಲ್ಲಿರುವ ಸರ್ವಾರ್ಪಣಭಾವ, ಇವುಗಳನ್ನೆಲ್ಲ ಯಥಾಮತಿ ಗ್ರಹಿಸಿಯೂ ವಹಿಸಿಯೂ, ವಚನಗಳಿಗೆ ಸರಿಬರುವ ಜನರ ಮುಖದಲ್ಲಿದ್ದ ಕೆಲವು ಪವಾಡಗಳನ್ನು ಸೇರಿಸಿಕೊಂಡು, ಆ ಭಕ್ತಿ ಭಾಂಡಾರಿಯ ಸರಳ ಹೃದಯವನ್ನೂ ಮರೆಮಾಡದೆ, ಚರಿತ್ರೆಗೆ ತಕ್ಕ ಚದುರಿಡಿದ, ಮೃದುವಡೆದ, ಸವಿನುಡಿಯ ಕಾವ್ಯ ವಾಣಿಯಿಂದ ಭಾವಭರಿತವಾಗಿ ಹಾಡಿದವನೆಂದರೆ 'ಹರಿಹರದೇವ' ನೊಬ್ಬನಾಗಬಹುದೆಂದು ನನಗೆ ತೋರುತ್ತದೆ. ಚಂದ್ರಲೇಖೆಯ ಅಭಿರುಚಿಯುನ್ನು ಚಕೋರವು ಬಲ್ಲುದಲ್ಲವೆ? ಅಥವಾ "ಭುಜಂಗ ಏವ ಜಾನೀತೇ ಭುಜಂಗ ಚರಣಂ ಸಖೇ! " ಹಾವಿನಡಿಯನು ಹಾವುಗಳೆ ನೆರೆಬಲ್ಲುವಲ್ಲವೆ?

೩

ಕನ್ನಡ ಸಾಹಿತ್ಯದಲ್ಲಿ ಬಸವಣ್ಣನು ಸೀಮಾ ಪುರುಷನಾಗಿದ್ದಾನೆ. ಆತನುಸುರಿದ ತತ್ವವು, (ಧಾರ್ಮಿಕ ಕ್ರಾಂತಿಯು) ಆತನ ಆತ್ಮಶಕ್ತಿ ಪ್ರಭೆಯು ಜಗತ್ತನ್ನು ಆವರಿಸಿದೆ; ಅಚ್ಚುಕಟ್ಟು ಮಾಡಿದೆ; ಅಚ್ಚರಿಗೊ

ಳಿಸಿದೆ. ಅವನ ನಿಷ್ಕಪಟವಾದ ನಡೆ ನುಡಿಗಳಿಗೆ ಮುಗ್ಧರಾದ ಜನರ ವನನ್ನು ನಂದೀಶ್ವರನ ಅವತಾರವೆಂದೂ, ಮತ್ತೆ ಹಲರು ಎರಡನೆಯ ಶಂಭುವೆಂದೂ ಭಾವಿಸಿ ಬಣ್ಣಿಸಿದರು. ಈ ನಮ್ಮ ವಿಜ್ಞಾನ ಯುಗ ದಲ್ಲಿ ಅವತಾರ ವಿಷಯವನ್ನು ಬಹು ಜನರು ನಂಬಲಾರರು. ನಂಬ ಲೂಬಾರದು. ಆದರೆ ಮಾನವನಾಗಿ ಹುಟ್ಟಿ ಮಹಾದೇವನಾಗಿ ನಿರ್ವ ಯಲಾದನೆನಬಾರದೇಕೆ? ಇದನ್ನು ಸಿದ್ಧರಾಮಣ್ಣನವರೇ— "ಬಸವನ ಎರಡನೆಯ ಶಂಭುವೆನ್ನುವರು. ನಾವು ಮೂರನೆಯ ಶಂಭುವೇನಯ್ಯ?" ಎಂದು ಪ್ರಸಿದ್ಧಿಸಿದ್ದಾರೆ. ಏಕೆಂದರೆ ಯಾವ ವಸ್ತುವು ಸದಾ ಅಖಂ ಡವಾಗಿ ಒಂದೇ ಇದೆಯೋ, ಅದರಲ್ಲಿಯೇ ನ್ಯೂನವಾಗದ ತತ್ಸದೃಶ ಮತ್ತೊಂದು ವಸ್ತು ಹುಟ್ಟುವದು ಸಿದ್ಧವಾದರೆ, ಮೂರನೆಯದು. ಹಾಗೇ ನಾಲ್ಕು, ಐದು ಬೆಳೆಯುತ್ತ ಬೆಳೆಯುತ್ತ 'ಶಂಭುವಿನ' ಎಂಬ ಪದವು ಹೋಗಿ 'ಶಂಭುಗಳ' [ಎಂದಾಗಿ] ಸಂಖ್ಯೆ ಹೆಚ್ಚಿ ಶಂಭುವಿಗೂ ನಾಶ ವೊದಗಬೇಕಾದೀತೆಂಬುದೇ ಆ ಪ್ರಶ್ನೆಯ ತಾತ್ಪರ್ಯ. ಮುಂದೆ ಅದೇ ವಚನದಲ್ಲಿ—"ತನ್ನ ತಾ ತಿಳಿದಲ್ಲಿ ಎರಡನೆಯ ಶಂಭುವೆಂದೆನಿಸಿದ. ತನ್ನ ತಾ ಮರೆದಲ್ಲಿ ಮಹೀತಳದ ಮಾನವನೆನಿಸಿದ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ" (ಸಿ ರಾ. ವ. ಪುಟ ೧೧೪) ಎಂದು ಉತ್ತರಿಸಿದ್ದಾರೆ. ಈ ಬಗೆಯಲ್ಲೇ ಕ್ರಮವಿಡಿದು ಬಳೆದು ಬಂದ ಧಾರ್ಮಿಕ ಜೀವನದ ಯೋಗ್ಯತೆಯ ಜೊತೆಗೆ, ರಾಜಕೀಯ ವಿಚಾರದಲ್ಲಿಯೂ, ವ್ಯವಹಾರ ದಲ್ಲಿಯೂ (ಹರಿಹರನು ಹೇಳುವ ಬಗೆಯಲ್ಲಿ ಅನುವು ದೊರೆತು) ಸಮರ್ಥ ಬುದ್ಧಿಯೊದಗಿದ್ದರಿಂದ, ಬಸವಣ್ಣನವರು ಮಂತ್ರಿ ಪದವಿಯಿಂದ ಬಹು ಮಾನಿತರಾದರು. ಅವರ ದಾನ ವಿನಯಾದಿ ಸಚ್ಚರಿತ್ರೆಯಿಂದುಂಟಾದ ಕೀರ್ತಿಲತೆಯಾಗ ಜಗತ್ತನ್ನು ವ್ಯಾಪಿಸತೊಡಗಿತು. ಅದನ್ನು ರಸಿಕ ಚಕ್ರವರ್ತಿಯಾದ ಆ ಹರಿಹರನು ಬಣ್ಣಿಸಲಿ:—

"ಬಸವನ ಪುಣ್ಯ ಕೀರ್ತಿಲತೆ, ಬೇರ್ವರಿಯುತ್ತುರಗೇಂದ್ರ ಲೋಕದೊಳ್,।
ದೆಸೆಗಳನಗ್ಗಳಂ ಮುಸುಕಿ, ಪರ್ವಿಗೆಯಾಯ್ತು ನರೇಂದ್ರ ಲೋಕದೊಳ್;॥
ಕುಸುಮಿತವಾಗಿ ಸೌರಭದಿ, ಹೊಂಪುಳಿಯಾಯ್ತುಮರೇಂದ್ರ ಲೋಕ
ದೊಳ್;।
ಪಸರಿಸಿ, ಪೂರಿತಾಮಳ ಸುಧಾಫಳವಾದುದು ರುದ್ರಲೋಕದೊಳ್.॥

[ಭಾವಾರ್ಥ:— ಬಸವನ ಕೀರ್ತಿಯೆಂಬ ಲತೆಯು ಪಾತಾಳದ ವರೆಗೂ ಬೇರಿಟ್ಟು, ಭೂತಲದಲ್ಲೆಲ್ಲಾ ಕುಡಿಯಿಟ್ಟು, ದಶದಿಗಂತಗಳಲ್ಲಿ

ಅಡಿಯಿಟ್ಟು, ಸ್ವರ್ಗದಲ್ಲಿ ಹೂ ಬಿಟ್ಟು ಸೌಸವವ ಬೀರಿ, ರುದ್ರ (ಕೈಲಾಸ) ಲೋಕದಲ್ಲಿ ಅಮೃತರಸಪೂರಿತವಾದ ಫಲಗಳನ್ನು ಬಿಟ್ಟಿತು.]

ಇದೇ ಸಮಯದಲ್ಲಿ ವಿರತಿ ತಳೆದ ಅಲ್ಲಮ ಪ್ರಭು, ವೀರ ಮಡಿವಳ ಮಾಚಿದೇವಾದಿ ಸಹಸ್ರಾರು ಶರಣರು ನೆರೆಯಲು ಬೆರೆಯಲು, ಬಸವಣ್ಣನ ಧಾರ್ಮಿಕ ಕ್ರಾಂತಿಯು ಉಜ್ವಲಾಕಾರವನ್ನು ತಾಳಿತು. ಕ್ರಾಂತಿಯ ಕೂಗು ಕರ್ಣಾಟಕದ ಮೂಲೆ ಮೂಲೆಗಳಲ್ಲಿಯೂ ಕೇಳಿತು.

೪

ಕ್ರಾಂತಿದೇವಿಗೆ ಸಾಹಿತ್ಯವೇ ಮುಖ. ಪ್ರತಿಯೊಂದು ಧರ್ಮದ, ಕರ್ಮದ, ರಾಷ್ಟ್ರದ ಅಭ್ಯುದಯವಾಗಬೇಕಾದರೆ ಸಾಹಿತ್ಯಮುಖದಿಂದಲೇ ಕೂಗಬೇಕು; ಸಾಗಬೇಕು. ಹಿಂದಿನಿಂದ ಇಂದಿನವರೆಗೆ ನಿರುಕಿಸಿದರೆ, ಪರಿಕಿಸಿದರೆ, ಮಾನವ ಪ್ರಪಂಚವು ಭವ್ಯರೂಪವನ್ನೂ, ದಿವ್ಯ ಚೈತನ್ಯವನ್ನೂ, ನವ್ಯ ಪ್ರತಿಭೆಯನ್ನೂ ಸಾಹಿತ್ಯಮುಖದಿಂದಲೇ ಹೊಂದಿತು; ಹೊಂದುವದು. ಈ ಕಾರಣದಿಂದಲೇ ಆ ಆ ಕಾಲಗಳ ಇತಿಹಾಸವು ಅಂದಿನ ಸಾಹಿತ್ಯದ ಒಡಲಿನಲ್ಲಿ ಅಡಗಿರುತ್ತದೆಂದು ನುಡಿಯುತ್ತಾರೆ. ಬಸವಣ್ಣನವರ ಶತಮಾನವು ಧಾರ್ಮಿಕ ಕ್ರಾಂತಿಮಯವಾಗಿತ್ತೆಂಬುದು, ಆ ಕಾಲದ ವಚನಸಾಹಿತ್ಯವನ್ನು ಬಿಟ್ಟರೆ ಮತ್ತಾವುದರಿಂದಲೂ ತಿಳಿಯಲಾಗುವದಿಲ್ಲ. ಮತ್ತೊಂದು ವೈಶಿಷ್ಟ್ಯವೇನೆಂದರೆ:— ಈ ವಚನಸಾಹಿತ್ಯವು ಭಾಷೆಯ ಸುಂದರತೆಯಲ್ಲಿಯೂ, ಭಾವದ ಬಂಧುರತೆಯಲ್ಲಿಯೂ ಕನ್ನಡಕ್ಕೆ ಹೊಸತು. ಪದ್ಯವೂ ಅಲ್ಲ; ಗದ್ಯವೂ ಅಲ್ಲ; ಇವೆರಡನ್ನೊಡಗೂಡಿ, ಒಂದು ನವೀನ ತತ್ವದಿಂದ, ಸತ್ವದಿಂದ ಆಳವಾಗಿಯೂ, ಅಗಲವಾಗಿಯೂ, ಅಂದವಾಗಿಯೂ, ಮಂದವಾಗಿಯೂ ಕನ್ನಡ ಕಾವೇರಿಯಂತೆ ಪ್ರವಹಿಸಿದ್ದುದರ ಮೂಲಕ, ಕನ್ನಡ ಸಾಹಿತ್ಯವೂ ವಿಶ್ವಸಾಹಿತ್ಯದಲ್ಲಿ ತನಗೊಂದು ವಿಶಿಷ್ಟ ಸ್ಥಾನವನ್ನು ಪಡೆಯುವ ಅಭಿಮಾನವನ್ನು ತಾಳಲು ಸಮರ್ಥವಾಗಿದೆ. ಕರ್ಣಾಟಕ ವಾಙ್ಮಯೋದ್ಯಾನಕ್ಕೆ ವಸಂತನ ಬರುವಿನಂತೆ, ಈ ವಚನ ಸಾಹಿತ್ಯದಿಂದ ಚೆಲುವು ಸಂದಿದೆ; ಬೆಲೆಯು ಬಂದಿದೆ. ಇದರಲ್ಲಿ ಬಸವಣ್ಣನವರ ವಚನಗಳು ಸರ್ವಜನ ಚಿತ್ತಾಕರ್ಷಕಗಳಾಗಿವೆ. ಇದಕ್ಕೆ ಬಸವಣ್ಣನವರ ಮಹಾನುಭಾವತೆಯೇ ಕಾರಣವು.

೫

ವೀರಶೈವ ಶಾಸ್ತ್ರದ ಅಥವಾ ಬಸವಣ್ಣನವರ ಉಪದೇಶವು ಹಳೆಯದೆಲ್ಲವೂ ಪುರಸ್ಕರಣೀಯ, ಹೊಸದೆಲ್ಲದೂ ತಿರಸ್ಕರಣೀಯವೆಂಬ ಮಾರ್ಗವಿ

ಡಿದು ಸಾಗಿಲ್ಲ. ಅವರ ಉಪದೇಶದಲ್ಲಿ ವಿಚಾರಕ್ಕೇ ತುಂಬಾ ಪ್ರಾಶಸ್ತ್ಯ ಯಿದೆ. ಯಾವುದಾದರೊಂದು ವಿಷಯವು ಅನುಭವದಿಂದಲೇ ಸರ್ವ ಸಮ್ಮತವಾಗುತ್ತಿರಲು ಆಗಮದ ಪ್ರಮಾಣವಿಲ್ಲವಲ್ಲಾ? ಎಂದು ನೊಂದು ಹಿಂದುಳಿಯುವದು ಬಸವಣ್ಣನವರ ಉದ್ದೇಶವಾಗಿರಲಿಲ್ಲ. ಏಕೆಂದರೆ ಅವರು ಶಾಸ್ತ್ರದ ಹುಟ್ಟನ್ನೂ, ಅದರ ಬಿತ್ತರದ ಮುಟ್ಟನ್ನೂ ತಿಳಿದಿದ್ದರು. "ನಾಲಿಗೆ ತಾಗಿದ ರುಚಿಗೆ ಮನ ಮನವೇ ಸಾಕ್ಷಿ ಸಾಲದೇ ಅಯ್ಯ? ಮಾಲೆಗಾರನ ಕೇಳಿ ನನೆಯರಳುವದೇ? ಆಗಮವನಿದಿರಿಂಗೆ ತೋರುವುದು ಆಚಾರವೇ ಅಯ್ಯ?..." (ಬ ವ. ಪು ೧೩೨) ಎಂಬ ರಾಜಮಾರ್ಗ ಬಸವಣ್ಣನವರದು. "ಮಾಲೆಗಾರನ ಕೇಳಿ ನನೆಯರಳುವದೇ?" ಎಂಬ ನುಡಿ ಅದೆಷ್ಟು ನಿಸರ್ಗವಾದುದು; ಸ್ವೈಜವಾದುದು ನೋಡಿ:— ಮೊಗ್ಗು (ನನೆಯು) ಅರಳುವದು ಹೂವಾಡಿಗನ ಅಪ್ಪಣೆಯಿಂದಲ್ಲ; ಅದು ತನಗಿರುವ ಸ್ವಾತಂತ್ರ್ಯದಿಂದ ಸಮಯವರಿತು ಅರಳಿ ಸೌಸವವ ಬಿರುತ್ತಿರುತ್ತದೆ. ಇದರಂತೆ ಅನುಭವಿಯಾದರೂ ಶಾಸ್ತ್ರಕಾರನ ಅಪ್ಪಣೆಯನ್ನು ಪಡೆಯಬೇಕಾಗಿಲ್ಲ. ಅವನು ತಾನು ಕಂಡುಂಡ ಅನುಭವವನ್ನು ತನಗಿರುವ ವಿಚಾರಸ್ವಾತಂತ್ರ್ಯದಿಂದ ಸಮಯವರಿತು ನುಡಿಯುತ್ತಾನೆ. ಇಂತಹ ವ್ಯಕ್ತಿಗಳ ನುಡಿಗಡಣವೇ ಮುಂದೆ ಸಂಕಲನದಿಂದ ಶಾಸ್ತ್ರವಾಗಬಹುದಾಗಿ ತೋರುತ್ತದೆ. ಹೇಗಾದರೂ ಲೋಕಾನುಭವ[೧] [ಅನುಭವಿಯ ವಾಕ್ಯ] ವನ್ನು ಬಿಟ್ಟು ಶಾಸ್ತ್ರವಾಗಲಾರದು. ಮಾಲೆಗಾರನಂತೆ ಶಾಸ್ತ್ರಕಾರನಿಗೂ ಸ್ವಾತಂತ್ರ್ಯವಿಲ್ಲ. ಅನುಭವಿಯು ಮಾತ್ರ ಸರ್ವ ತಂತ್ರಸ್ವತಂತ್ರ. ಆದರೀಸ್ವಾತಂತ್ರ್ಯವು ಲೋಕಸುಖಕ್ಕೆ ಹೊರತಾದುದಲ್ಲ. ಬಸವಣ್ಣನವರು ಅನುಭವಿಗಳಿನಿತಲ್ಲ; ಮಹಾನುಭವಿಗಳು. ಅಂತೆಯೇ ಅವರು ಸಮಾಜ ಸುಧಾರಣೆಗೆ ತೊಡಗಿ ಜಾತಿ ನಿಷ್ಕರ್ಷೆ ಮಾಡುವಾಗ ನೀತಿಗೆ ಮಹತ್ವವಿತ್ತರು. "ಜಾತಿವಿಡಿದು ಸೂತಕವನರಸುವೆ. ಜ್ಯೋತಿವಿಡಿದು ಕತ್ತಲೆಯನರಸುವೆ. ಇದೇಕೋ ಮರುಳು ಮಾನವಾ?" ಎನ್ನುತ್ತಾರೆ. ಜಾತಿವಿಡಿದರೆ, ಸೂತಕ [ಅಸ್ಪೃಶ್ಯತೆ] ಸಿಗುವದಿಲ್ಲ. ಜ್ಯೋತಿ [ದೀಪ] ವಿಡಿದರೆ, ಕತ್ತಲೆ ಸಿಗುವದಿಲ್ಲ. "ಕುಲಜನೆಂಬುದಕ್ಕೆ ಏನುದೃಷ್ಟ? ಸಪ್ತ ಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ಆತ್ಮಜೀವ ಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ?" [ಬ. ವ. ಪುಟ ೯೧] 'ಹೊಲೆಯೊಳಗೆ ಹುಟ್ಟಿ ಕುಲವನರಸು

---

೧:— ಅನುಭವಿಯ ನುಡಿಯೇ ಲೋಕಾನುಭವವು.

ವಿರಿ' ಎಂದರೆ ಹುಟ್ಟುವಲ್ಲಿ ಎಲ್ಲರೂ ಹೊಲೆಯರು. "ಕೊಲ್ಲುವನೇ ಮಾದಿಗ' ಹೋತ ತಂದು ನೀವು ಕೊಲುವಿರಿ. ಹೋತು ಒಂದೆಡೆಯಿರಲಿ. "ಕೂಡಲಸಂಗಮದೇವಯ್ಯ ! ಹೊಲೆಯರ ಬಸಿರಲ್ಲಿ ವಿಪ್ರರು ಹುಟ್ಟಿ ಗೋಮಾಂಸವ ತಿಂಬರು" ಪಾಪ! ಆ "ಸತ್ತುದನೆಳೆವನೆತ್ತಣಹೊಲೆಯ"? [ಬ. ವ. ಪುಟ ೮೮] ಇನ್ನು ನಿಮ್ಮ ದೇವಭಕ್ತಿಯನ್ನು ನೋಡಿದರೆ— ''ಕಿಚ್ಚು ದೈವವೆಂದು ಹವಿಯನಿಕ್ಕುವಾಗ ಕಿಚ್ಚಿದ್ದು ಸುಡಲು, ಬಚ್ಚಲ ನೀರ, ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವಿರಿ. ವಂದನೆಯ ಮರೆದು ನಿಂದಿಸುತ್ತಿರುವಿರಿ." [ಬ. ವ. ಪುಟ ೮೯] ಹೀಗೆ ಹೇಳುವ ಬಸವಂಣನವರಲ್ಲಿ ಮತಾಸೂಯೆಯ ವಾಸನೆಯಿತ್ತೆಂದು ತಿಳಿಯಲಿಂಬಿಲ್ಲ. ಏಕೆಂದರೆ "ಏನಯ್ಯಾ ! ವಿಪ್ರರು ನುಡಿದಂತೆ ನಡೆಯರು. ತಮಗೊಂದು ಬಟ್ಟೆ; ಶಾಸ್ತ್ರಕ್ಕೊಂದು ಬಟ್ಟೆ. ಇದೆಂತಯ್ಯ?" ಎಂಬ ಚಿಂತೆ ಬಸವಂಣನವರಿಗೆ ಹೀಗೆ ವಿಪ್ರವರ್ಣದವರನ್ನು ಕುರಿತು ಅವರ ಸಂಬಂಧದವೇ ಆದ ಎಷ್ಟೋ ದೋಷೋದ್ಘಾಟನಪ್ರಶ್ನೆಗಳನ್ನು ಮಾಡಿದ್ದಾರೆ. ಯಾಂವರೂ ಇದರಿಂದ, ಬಸವಂಣನವರಿಗೆ ಉಚ್ಚಕುಲದವರೆಂದುಕೊಳ್ಳುವ ವಿಪ್ರರನ್ನು ಕೆಳಗೊತ್ತಬೇಕೆಂಬ ಅಸೂಯೆಯಿದ್ದಿತೆನ್ನುವುದಾದರೆ, ಗುಣಿಯಾದ, ಗುಪ್ತಭಕ್ತನಾದ, ಹೊಲೆಯನನ್ನು ಅದೆಂದೂ ಅವರು ಮೇಲಕ್ಕೊಯ್ಯುತ್ತಿದ್ದಿಲ್ಲ. ಆದರೆ ಉಚ್ಚ ಕುಲವೆನ್ನುವಲ್ಲಿ ಈ ತುಚ್ಛ ಕರ್ಮದ ಹೊಲೆಯೇಕೆ? ಜಾತಿಮಾತ್ರಕ್ಕೆ ಹೊಲೆಯನಾಗಿ ಉಚ್ಚವಿಚಾರ-ಆಚಾರಗಳುಳ್ಳವನಲ್ಲಿ ತುಚ್ಛತೆಯೇಕೆ? ಎಂಬುದೇ ಬಸವಂಣನವರ ಪ್ರಶ್ನೆಯ ಉದ್ದೇಶ. ಆಧುನಿಕ ಕಾಲದಲ್ಲೇ ಇಂತಹ ವಿಚಾರಗಳಿಗೆ ಇನ್ನೂ ವಿರೋಧಿಸುವವರು ಎಷ್ಟೋ ಜನರಿದ್ದಾರೆಂದ ಮೇಲೆ, ಲೋಕವೇ ಅಂದು ಬಸವಂಣನವರಿಗೆ ವಿರೋಧಿಸಿರಬಹುದೆನ್ನುವಲ್ಲಿ ಅಚ್ಚರಿಯಾದರೂ ಏನು ? ಆದರೆ ಸತ್ಯವ ನುಡಿವುದೇ ದೇವಲೋಕವೆಂದು ಸಾರಿದ ಬಸವಂಣನವರು:—''ನ್ಯಾಯನಿಷ್ಠುರ ದಾಕ್ಷಿಣ್ಯಪರ ನಾನಲ್ಲ; ''ಲೋಕವಿರೋಧಿ'' ಶರಣನಾರಾರಿಗೂ ಅಂಜುವನಲ್ಲ; ಕೂಡಲಸಂಗಮದೇವರ ರಾಜ ತೇಜದಲ್ಲಿಪ್ಪನಾಗಿ" ಎಂದು ಉದ್ಘೋಷಿಸಿದರು. ಸತ್ಯಕ್ಕೆ ಹೆದರಿಕೆಯೇ, ಎಂದು ಮತ್ತೆಮತ್ತೆ ಉಪದೇಶಿಸಿದರು; ವ್ಯವಹರಿಸಿದರು. ಆಗ ಬಹುಜನ ವಚನಕಾರರಿಂದ ವೇದಾಗಮಗಳೂ ವಿಮರ್ಶಿಸಲ್ಪಡಲೇಬೇಕಾದವು. ಇದಕ್ಕೆ ವಚನಗ್ರಂಥಗಳೇ ಉದಾಹರಣೆ. ಆದರೂ ವಚನಕಾರರು ಪ್ರಾಯಶಃ ಪಂಡಿತರಿದ್ದಿಲ್ಲವೆಂದು ಪ್ರತಿಪಾದಿಸುವದಕ್ಕಾಗಿ, ಅಲ್ಲೊಬ್ಬ ಇಲ್ಲೊಬ್ಬರು

ಗುಸುಗುಟ್ಟುವಂತೆ ತೋರುತ್ತದೆ ಆದರವರು ವಿಮರ್ಶೆಯಲ್ಲಿ ಜಯಶೀಲರಾಗರೆಂದೇ ನನ್ನ ಮತ. ಆಚಾರ್ಯ ಬಸವಣ್ಣನವರೊಡನೆ, ತರ್ಕ, ಮೀಮಾಂಸಾ, ಮೊದಲಾದ ಶಾಸ್ತ್ರದವರು ಶಾಸ್ತ್ರಾರ್ಥ ಮಾಡಿ ಪರಾಭವವನ್ನು ಹೊಂದಿದರೆನ್ನಲು, ಬಸವಣ್ಣನವರ ವಚನಗಳೂ, ಮೊದಲಿನ ಅವರ ಚರಿತ್ರಗ್ರಂಥಗಳೂ ಸಾಕ್ಷಿಯಿವೆ. ಒಂದು ಪಕ್ಷ ಬಸವಣ್ಣ ಮೊದಲಾದ ವಚನಕಾರರು ಶಾಸ್ತ್ರವರಿಯದವರಾಗಿದ್ದರೆ, ಆಗಿನ ಕಾಲದಲ್ಲಿ ಮಾತ್ರ ಈ ಮತಪ್ರಚಾರಪ್ರವಾಹವು ಅದೆಂದೂ ಮುಂದುವರಿಯುತ್ತಿದ್ದಿಲ್ಲ; ಆದಿಯಿಂದಲೂ ಸ್ವಮತೋತ್ಕರ್ಷಕ್ಕಾಗಿಯೇ ಹೆಣಗಾಡುತ್ತಿರುವ ನಮ್ಮ ಕರ್ಮಠಬ್ರಾಹ್ಮಣಬಂಧುಗಳು, ಇದನ್ನು ಬಂಧಿಸದೆ, ನಿಂದಿಸದೆ ಸುಮ್ಮನೇ ಸಮಾಧಾನಿಗಳಾಗುತ್ತಿರಲಿಲ್ಲ.

ಜೈನ ಮತದಂತೆ ವೀರಶೈವ ಮತವೂ ಅಹಿಂಸಾತತ್ವಕ್ಕೆ ನಡೆನುಡಿಗಳಲ್ಲಿ ಬಹು ಪ್ರಾಧಾನ್ಯವಿತ್ತಿದೆ. ಒಂದು ದಿನ ಯಜ್ಞದ ಸಲುವಾಗಿ ಕೊಲ್ಲಲು ಕಟ್ಟಿದ್ದ ಹೋತಿನ ಕಳವಳದ ಕೂಗನ್ನು ಕೇಳಿದ, ದಯಾವೀರರಾದ ಬಸವಣ್ಣನವರ ಚಿತ್ತವು ಕರಗಿ ಕೋಡಿವೊಡೆದು ತೆರೆತೆರೆಯಾಗಿ ಎಂತು ಹರಿದಿದೆ ನೋಡಿಃ— "ಮಾತಿನ ಮಾತಿಂಗೆ[೧] ನಿನ್ನ ಕೊಂದಿಹರೆಂದು ಎಲೆ ಹೋತೇ ಅಳು ಕಂಡೆಯಾ! ವೇದವನೋದಿದವರ ಮುಂದೆ ಅಳು ಕಂಡೆಯಾ!! ಹೋತೇ, ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ!!! ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ." ಎಂದು ಉಪದೇಶಿಸುವಾಗ ಸಹಿಸಲಾಗದ ದುಃಖದಾವೇಶದಿಂದ, ಆತುರತೆಯಿಂದ, ಕಣ್ಣೀರ ಸುರಿಸುತ್ತ, ಹರಿಸುತ್ತ, 'ದಯವಿಲ್ಲದ ಧರ್ಮವಾವುದಯ್ಯ?' ಎಂದು ತಮ್ಮ ಕೂಡಲಸಂಗಮನಲ್ಲಿ ಮೊರೆಯಿಟ್ಟಿದ್ದಾರೆ. "ವೇದ, ಪುರಾಣ ಹೋತಿಂಗೆ ಮಾರಿ" (ರಕ್ಕಸಿ) ಯಾದ ಕಾರಣ ಎಂದು ನಂಬುವೆನಯ್ಯ? ಎಂದಿದ್ದಾರೆ. ಉತ್ತಮ ಕುಲಬೇಕಾಗಿದ್ದರೆ ಸಕಲ ಜೀವಾತ್ಮರಿಗೆ ಲೇಸನೆ ಬಯುಸಬೇಕು; ಇದು ದೇವ

---

೧ ಟೀ— 'ಮಾತಿನ ಮಾತಿಂಗೆ' ಎಂದರೆ ವೇದ ಶಾಸ್ತ್ರಗಳ ಮಾತನ್ನು ಓದಿದ್ದಕ್ಕಾಗಿ ಎಂದರ್ಥ.

ನೊಲಿಯುವ ಮಾರ್ಗ. ದೇವನೊಲಿದಾತನೇ[೧] ಕುಲಜ. ಆ ದೇವನೊಲುಮೆಗೆ ಕುರಿಬೇಡ; ಮರಿಬೇಡ; ಬರಿಯ ಪತ್ರೆಯ ತಂದು ಮರೆಯದೆ ಪೂಜಿಸು. ಪೂಜಿಸುವ ಪೂಜೆಯಲ್ಲಿ ಕೊಳಕು ವಿಚಾರಗಳನ್ನಿಟ್ಟುಕೊಂಡು, (ಅಂತರಂಗ ಶುದ್ಧಿಯಿಲ್ಲದೆ) ಹೊರಗಿನ ಬರಿಯ ಸ್ನಾನ ಮೌನ ತಪೋಪವಾಸಾದಿಗಳನ್ನಾಚರಿಸಿದರಾಗದು. ಏಕೆಂದರೆ ಹುತ್ತವ ಬಡಿದರೆ ಒಳಗಣ ಹಾವು ಸಾಯದು. ದೇಹ ಶುದ್ಧಿಗಿಂತಲೂ ಮೊದಲು ಅಂತರಂಗ ಶುದ್ಧಿಯು ಬೇಕು. ಇದರ ಶುದ್ಧಿಯ ಬಗೆಯನ್ನಾದರೂ ತಿಳಿಯಿರಾ? ಕೇಳುಃ— "ಕಳಬೇಡ; ಕೊಲಬೇಡ; ಹುಸಿಯ ನುಡಿಯಲು ಬೇಡ; ಮುನಿಯಬೇಡ; ಅನ್ಯರಿಗೆ ಅಸಹ್ಯಪಡಬೇಡ; ತನ್ನ ಬಣ್ಣಿಸಬೇಡ. ಇದಿರು ಹಳಿಯಲುಬೇಡ; ಇದೇ ಅಂತರಂಗ ಶುದ್ಧಿ; ಇದೇ ಬಹಿರಂಗ ಶುದ್ಧಿ; ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ." ಇಂಥವನ ಹುಟ್ಟು ಎಲ್ಲಿಯೇ ಆಗಲಿ; ಅವನೇ ಸತ್ಕುಲಜ. ದುರ್ವಾಸನು ಮಚ್ಚಿಗನಾಗಿ, ಕಶ್ಯಪನು ಕಮ್ಮಾರನಾಗಿ, ವಾಲ್ಮೀಕಿಯು ವ್ಯಾಧನಾಗಿ ಹುಟ್ಟಿದ್ದಿಲ್ಲವೆ? ಆದರೆ ಅವರೆಲ್ಲ ಭವಿಗಳೇ? ಅಲ್ಲ. ಪರಹಿಂಸೆ, ಪರಸ್ತ್ರೀಗಮನ, ಪರದ್ರವ್ಯಾಪಹರಣವುಳ್ಳೊಡೆ ಅವನಾದರೂ ಭವಿಯು. ಅಂತೂ ವೀರಶೈವ ಮತದ, ಬಸವಣ್ಣನವರ ಅಥವಾ ವಚನಕಾರರ ದೃಷ್ಟಿಯಲ್ಲಿ ಸೃಷ್ಟಿಯಲ್ಲಿ ಕುಲಗಳೆರಡೇ. ಒಂದು ಸತ್ಕುಲ; ಇನ್ನೊಂದು ದುಷ್ಕುಲ. ಮೊದಲನೆಯದಕ್ಕೆ ಭಕ್ತನೆನ್ನಿ; ಶರಣನೆನ್ನಿ; ಇಷ್ಟವಿದ್ದರೆ ಬ್ರಾಹ್ಮಣನೆನ್ನಿ; ಅಥವಾ ವೀರಶೈವನೆನ್ನಿ ಇನ್ನೊಂದಕ್ಕೆ ಭವಿಯೆನ್ನಿ; ಅಥವಾ ಮಾದಿಗನೆನ್ನಿ; ಚಾಂಡಾಲನೆನ್ನಿ. ಇದರ ನಿರ್ಣ

---

೧ ಟೀಃ— ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ ?।
ಜಾತಿ ವಿಜಾತಿ ಯೆನಬೇಡ. ದೇವನೊಲಿ-।
ದಾತನೇ ಜಾತಸರ್ವಜ್ಞ" (ಸರ್ವಜ್ಞ ವಚನಗಳು)

"ಕುಲದಲ್ಲಿ ಶೂದ್ರನಾದರೇನು? ಮನದಲ್ಲಿ ಮಹಾದೇವ ನೆಲೆಗೊಂಡವನೇ ವೀರಶೈವ ನೋಡಾ. ಕಾಂಚನಂ ರಜಿತಂ ತಾಮ್ರಂ ರಸಯೋಗಾತ್ ಸುವರ್ಣತಾ । ತಥಾಶಿವಜ್ಞಾನರಸಾಚ್ಛೂದ್ರಾದ್ಯಾಃ ಶಿವತಾಂ ವ್ರಜೇತ್. ॥ ಎಂಬುದು ಸಟೆ ಎನ್ನೈ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೇ?"

(ಸಿದ್ಧರಾಮೇಶ್ವರ ವಚನ. ಪು. ೧೧೫)

(ಈ ವಚನದಲ್ಲಿ ಉದಾಹರಿಸಿರುವ ಸಂಸ್ಕೃತ ಶ್ಲೋಕವು, 'ಸೂಕ್ಷ್ಮತಂತ್ರ'ದ, ಐದನೆಯ ಪಟಲದಲ್ಲಿ ೬೨ ನೆಯ ಶ್ಲೋಕವಾಗಿದೆ.)

ಯವು ಮಾತ್ರ ಕರ್ಮದಿಂದ; ಹುಟ್ಟಿನಿಂದಲ್ಲ. ಇದರಂತೆಯೇ ಬಸವಣ್ಣನವರು ಅನಂತ ದೇವತಾರಾಧನೆಗಳನ್ನು ಖಂಡಿಸಿ ಏಕೇಶ್ವರವಾದವನ್ನು ಮಂಡಿಸಿದ್ದಾರೆ. ಈ ವಿಚಾರಗಳೆಲ್ಲ ರಾಷ್ಟ್ರದ ಸಂಘಟನೆಗೆ, ಸ್ವಾತಂತ್ರ್ಯಕ್ಕೆ ಬಹು ಮುಖ್ಯವಾಗಿವೆ. ಒಟ್ಟು ಬಸವಣ್ಣನವರು ಸಮತಾವಾದಿಗಳೂ, ಸ್ವಾತಂತ್ರ್ಯಪ್ರಿಯರೂ, ಸತ್ಯದ ಪ್ರೇಮಿಗಳೂ ಆಗಿದ್ದಾರೆ.

೭

ಇನ್ನು ವೀರಶೈವ ಶಾಸ್ತ್ರವು, ಮನ್ವಾದಿಸ್ಮೃತಿಗಳಂತೆ ಕೇವಲ ಹೊಟ್ಟೆ ಹೊರೆವುದಕ್ಕಾಗಿ ಜಾತಿಕರ್ಮ ನಿರತನಾಗಬೇಕೆಂದು ಹೇಳುವದಿಲ್ಲ. ಇವನು [ವೀರಶೈವನು] ಪರಮಾತ್ಮನ ಪ್ರಸಾದಕ್ಕಾಗಿ ಯಾವುದಾದರೊಂದು ಕರ್ಮ ನಿರತನಾಗಬೇಕು. ಇವನ ಬಾಳು ಲಿಂಗಕ್ಕಾಗಿ ಅಂಗಕ್ಕಲ್ಲ. ಅಂತೆಯೇ ಇಲ್ಲಿ ಜೀವ [ಭಕ್ತ] ನು, ಶಿವಸಂತೃಪ್ತಿಗಾಗಿ, ಸಾಮರಸ್ಯಕ್ಕಾಗಿ, ದುಡಿಯುತ್ತ ದುಡಿಯುತ್ತ ಆ ಮಾಟದ [ದುಡಿಮೆಯ] ಲ್ಲಿ ಶಿವನ ಕೂಟ [ಐಕ್ಯ] ವನ್ನು ಸಾಧಿಸುತ್ತಾನೆ; ಸಂಪಾದಿಸುತ್ತಾನೆ. ಈಗಿವನ ಕರ್ಮವೆಲ್ಲ ಶಿವಮಯವಾಗುತ್ತದೆ. ಆದ್ದರಿಂದ ಜೀವನಿಗಿಲ್ಲಿ ಕರ್ಮದ ಯಾವ ಲೇಪವೂ ಇಲ್ಲ; ತಾಪವೂ ಇಲ್ಲ. ಎಂದರೆ ಪಾಪವಿಲ್ಲದೆ, ಪುಣ್ಯವಿಲ್ಲದೆ, ಆ ವಿಶ್ವಮೂರ್ತಿಯ [ಚಿತ್ಸ್ವರೂಪನ] ಹೃದಯಕನುಲದಲ್ಲಿ ಜ್ಞಾನಪಾನ ಮಾಡುತ್ತ ಉನ್ಮತ್ತ ಭೃಂಗದಂತೆ ಆಡುತ್ತ, ಹಾಡುತ್ತ ಐಕ್ಯನಾಗುತ್ತಾನೆ- ಈ ಸ್ಥಿತಿಗೆ 'ಮಾಟಕೂಟ' 'ಐಕ್ಯ'ವೆಂದೂ 'ನಿರ್ವಯಲು' ಎಂದೂ ವೀರಶೈವರು ಕರೆಯುತ್ತಿರಬಹುದಾಗಿ ನನಗೆ ತೋರುತ್ತದೆ. ಇದಕ್ಕೆ ವೇದಾಂತಿಗಳು 'ಮುಕ್ತಿ' 'ಕೈವಲ್ಯ' ಎನ್ನುತ್ತಾರೆ. ವೇದಾಂತಿಗಳ ದೃಷ್ಟಿಯಲ್ಲಿ ಈ ಮುಕ್ತಿ ಪ್ರಾಪ್ತಿಯಾಗಬೇಕಾದರೆ "ಕರ್ಮಯೋಗ" ಕ್ಕೆ ಎಷ್ಟೊಂದು ಪ್ರಾಧಾನ್ಯ ಬಂದಿದೆಯೋ, ಬಸವಾದಿ ವಚನಕಾರರ ದೃಷ್ಟಿಯಲ್ಲಿ ಈ 'ಮಾಟಕೂಟ' [ಲಿಂಗೈಕ್ಯ] ದೊರೆಯಬೇಕಾದರೆ "ಕಾಯಕ" ಕ್ಕೂ ಅಷ್ಟೇ ಪ್ರಾಧಾನ್ಯ ಬಂದಿದೆ. "ಕರ್ಮಯೋಗ" ವೆಂಬ ಪದವು ಎಷ್ಟು ಪವಿತ್ರವಾಗಿ, ಎಂತಹ ವಿಸ್ತೃತಾರ್ಥವನ್ನೊಳಗೊಂಡಿದೆಯೋ "ಕಾಯಕ"ವೆಂಬ ಪದವೂ ಅಷ್ಟೇ ಪಾವಿತ್ರ್ಯವನ್ನೂ ಅಂತಹ ವಿಸ್ತೃತಾರ್ಥವನ್ನೊಳಗೊಂಡಿದೆ. ಸಿದ್ಧವೀರಣ್ಣೊಡೆಯನ "ಶೂನ್ಯ ಸಂಪಾದನೆ"ಯೆಂಬ ಗ್ರಂಥವಂತೂ ಈ "ಕಾಯಕ"ದ ಮಹತ್ವವನ್ನು ತೋರುವುದಕ್ಕಾಗಿ ಸಾರುವುದಕ್ಕಾಗಿ ರಚಿತವಾಗಿರಬೇಕು. ಆದರೆ ಈಗಿನ

ವೀರಶೈವ ಸಮಾಜವು ಈ ಕಾಯಕದ ಉಚ್ಚ ವಿಚಾರವನ್ನಾಗಲಿ, ಹೆಚ್ಚು ಪ್ರಚಾರವನ್ನಾಗಲಿ ಮಾಡುತ್ತಿರುವಂತೆ ತೋರುವುದಿಲ್ಲ.

ಮತ್ತು ಆರ್ಥಿಕ ಸುಧಾರಣೆಗೂ ಕೂಡ 'ಕಾಯಕ'ವು ಸಹಾಯಕ ವಾಗುತ್ತದೆಂಬುದು ಬಸವಣ್ಣನವರ ಉದ್ದೇಶವಾಗಿತ್ತು. ಇಹ-ಪರಗಳ ಸುಖ-ಶಾಂತಿಗಳಿಗೆ ಸ್ವಾರ್ಜಿತ ಸಂಪತ್ತೇ ಸರ್ವೋತ್ಕೃಷ್ಟವಾದುದು. ಆದ್ದರಿಂದ ಧನಿಕನಾಗಲಿ, ದರಿದ್ರನಾಗಲಿ, ಸದ್ವಿನಿಯೋಗದ ಸಲುವಾಗಿ ಜಾತಿ ನಿಯಮವಿಲ್ಲದೆ ಯಾವುದಾದರೊಂದು ಹೋರೆಯನ್ನು ನಿಯತ ದಿಂದ ಮಾಡಬೇಕು. "ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈ ಕೂಲೆಯ ಮಾಡುವೆ'' ಎಂದು ಹಾಡಿದ ಬಸವಣ್ಣನವರು, ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕೆಲಸ ಮಾಡಿದರು. ಮಾಡುವಾ ಕಾಯಕವನ್ನು ಮನಮುಟ್ಟಿ, ತನುಮುಟ್ಟಿ, ಪ್ರಾಮಾಣಿಕತನದಿಂದ ಮಾಡಬೇಕು. ಅದೇ ಕಾಲದಲ್ಲಿದ್ದ ಆಯದಕ್ಕಿ ಮಾರಯ್ಯಗಳೆಂಬ ಶರ ಣರು ಕಾಯಕದಲ್ಲಿರುವ ತತ್ಪರತೆಯನ್ನು ಆದರ ಮಹತ್ವವನ್ನು ಹೀಗೆ ಹೇಳಿದ್ದಾರೆ:—

"ಕಾಯಕದಲ್ಲಿ ನಿರುತನಾದೊಡೆ ಗುರುದರುಶನವಾದಡೂ ಮರೆ ಯಬೇಕು; ಲಿಂಗಪೂಜೆಯಾದರೂ ಮರೆಯಬೇಕು; ಜಂಗಮ ಮುಂದಿ ದ್ದಡೆಯೂ ಹಂಗುಹರಿಯಬೇಕು; ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು."

(ಶೂನ್ಯಸಂಪಾದನೆ ಪುಟ ೨೨೩)

ಕೇವಲ ಭೌತಿಕ ದೃಷ್ಟಿಯನ್ನಿಟ್ಟುಕೊಂಡಿರುವ ಪಾಶ್ಚಿಮಾತ್ಯರಲ್ಲಿ, ಉದ್ಯೋ ಗದಲ್ಲಿರಬೇಕಾದ ಈ ಪವಿತ್ರ ಧ್ಯೇಯವಿಲ್ಲದಿರಬಹುದಾದರೂ, ಈ ಕಾರ್ಯ ತತ್ಪರತೆ, ಈ ಪ್ರಾಮಾಣಿಕತನ, ಈ ಸತತೋತ್ಸಾಹವೀಗ ಅವರಲ್ಲಿ ಪ್ರಸಾ ರವಾಗಿದೆ; ಪ್ರವೃದ್ಧಿಯಾಗಿದೆ. ಅಂತೆಯೇ ಅವರೀಗ ಸಿರಿಯ ಗೋಪು ರವನ್ನು ಕಟ್ಟಿದ್ದಾರೆ; ಅದಕ್ಕೆ ರತ್ನ ಕಲಸವನ್ನಿಟ್ಟಿದ್ದಾರೆ. ಕಾಯಕವು ಬಸವಣ್ಣನವರ ಕಾಲದಲ್ಲಿ "ಕಾಯಕವೇ ಕೈಲಾಸ" ವೆನ್ನುವಷ್ಟು ಉದಾತ್ತ ಭಾವನೆಯಿಂದ ಉಚ್ಚ ಪದವಿಯನ್ನು ಹೊಂದಿತ್ತು. ಈ ಕಾರಣ ವೀರ ಶೈವ ಸಮಾಜವಾಗ ನೆಮ್ಮದಿಯಾಗಿತ್ತು. ಆದರೆ ಉನ್ನತಾರ್ಥವುಳ್ಳ ಈ ಕಾಯಕದ ಸಲುವಾಗಿ ವೀರಶೈವರು ಪುನಃ ಪರಿಶ್ರಮವನ್ನೂ, ಪ್ರಚಾರವನ್ನೂ ಮಾಡತೊಡಗಿದರೆ, 'ಗತವೈಭವಶಾಲಿ' ಗಳೆಂಬ ಹೇಡಿ

ಬಿರುದನ್ನಳುಕಿಸಬಹುದಲ್ಲವೆ? ಈ ಉದಾತ್ತ ಮಾರ್ಗವನ್ನು ಸಮಗ್ರ ಭಾರತವೇ ಅನುಮೋದಿಸಿ ಅನುಸರಿಸಬಹುದಲ್ಲವೆ? (ಪಕ್ಷ ವಿಪಕ್ಷಗಳನ್ನು ಸ್ಥಾಪಿಸಿ, ಕಲಹಲಂಪಟರಾಗಿ, ಕೋರ್ಟು ಕಚೇರಿಗಳ ಕಟ್ಟೆಯನ್ನೇರಿಳಿದು, ಸುಳ್ಳು ಸಾಕ್ಷಿಗಳಿಂದ ಸೋತು ಸಾಕಾಗಿರುವ ಇಂದಿನ 'ಪಾಪಿ' ಗುರು-ವಿರಕ್ತರು, ಸ್ವಕರ್ತವ್ಯ ಸಂಪಾದನೆಗಾಗಿ ಇತ್ತ ಮನವಿತ್ತು, ತನುತೆತ್ತು, ಪುಣ್ಯಶಾಲಿಗಳಾಗಿ 'ಪೂಜ್ಯ'ರೇಕಾಗಬಾರದು?)

೮

ಇನ್ನೊಂದು ವಿಷಯುವನ್ನು ವಿಜ್ಞಾಪಿಸದಲೆ ಈ ನನ್ನ ಮಾತನ್ನು ಮುಗಿಸಲಾರೆ:— ನಮ್ಮ ಹಿಂದುಸ್ಥಾನದಲ್ಲಿ- "ನಾರೀ ಪ್ರತ್ಯಕ್ಷ ದೇವತಾ" ಎಂದು, ಮಹಿಳೆಯರಿಗೆ ಮನ್ನಣೆಯನ್ನೀವ ಉಕ್ತಿಗಳು ದೊರೆಯುತ್ತಿವೆಯಾದರೂ, ಅವರ ಧಾರ್ಮಿಕ ಜೀವನದ ಸ್ವಾತಂತ್ರ್ಯವನ್ನು ನಮ್ಮ ಶಾಸ್ತ್ರಕಾರರು ಬಲುಮಟ್ಟಿಗೆ ಕೆಳಗಿಟ್ಟಿದ್ದಾರೆ; ತಲೆ ಮೆಟ್ಟಿದ್ದಾರೆ. ಒಮ್ಮೊಮ್ಮೆ ವಿಚಾರಿಸುವುದಾದರೆ, ಬೊಮ್ಮನು ಇವರ ವಿನೋದಕ್ಕಾಗಿ, ವಿಹಾರಕ್ಕಾಗಿ ಮಾಡಿಕೊಟ್ಟ ಗೊಂಬೆಯ ಸ್ಥಿತಿಯೇ ಸ್ತ್ರೀಯರ ಗತಿಯಾಗಿರುವದು ಕಂಡುಬರುತ್ತದೆ. ಆದರೆ ವೀರಶೈವ ಮತದಲ್ಲಿ ಮಾತ್ರ ಆ ಸಂಕೋಚಕ್ಕೆ ಎಡೆಯಿಲ್ಲ; ಅವರ ಧಾರ್ಮಿಕ ಸ್ವಾತಂತ್ರ್ಯಕ್ಕೆ ತಡೆಯಿಲ್ಲ. ವೀರಶೈವರು ಜಾತಿಭೇದವನ್ನೆಂತು ಮಾಡಲಾರರೋ, ಅಂತೆಯೇ ಧರ್ಮದಲ್ಲಾಗಲಿ, ಕರ್ಮದಲ್ಲಾಗಲಿ, ವಿದ್ಯೆಯಲ್ಲಾಗಲಿ, ವಿವೇಕದಲ್ಲಾಗಲಿ ಸ್ತ್ರೀಪುರುಷರೆಂಬ ಭೇದಭಾವವನ್ನು ಮಾಡುವದಿಲ್ಲ. ಸ್ತ್ರೀ-ಪುರುಷರೆಂಬುದು ಕೇವಲ ಒಂದು ಗುರುತಷ್ಟೆ. ಇದೆ ಕೇಳಿ ವಚನಕಾರನ ಉಪದೇಶವ:— "ಶುಕ್ಲ ಶೋಣಿತ ಪಿಂಡದಲ್ಲಿಯೇ ಉತ್ಪತ್ತಿ, ಚಿತ್ತ, ವಾಯು, ಪ್ರಾಣ ಅಷ್ಟದಳ ಪದ್ಮದಲ್ಲಿಹುದು. ಮೊಲೆ, ಮುಡಿ ಮೂಡಿದರೆ ಹೆಣ್ಣೆಂಬರು. ಗಡ್ಡ ಮೀಸೆಯಾಗಲು ಗಂಡೆಂಬರು. ನಡುವೆ ಸುಳಿವಾತನು ಹೆಣ್ಣಲ್ಲ ಗಂಡಲ್ಲ. ಇದರಂತುವ ತಿಳಿಯಲ್ಕೆ ಶ್ರುತಿಗಗೋಚರವೆಂದಾತ ನಂಬಿಗರ ಚೌಡಯ್ಯ" (ಅಂಬಿಗರ ಚೌಡಯ್ಯನ ವಚನ ಪು. ೧೩೪) ಹೆಂಣು ಗಂಡೆಂಬ ಶಬ್ದಗಳು ಉಪಾಧಿವಶದಿಂದ ಬರುತ್ತವೆ. ಆ ಉಪಾಧಿಯುದಾವುದು? ಎಂದರೆ—'ಮೊಲೆ ಮುಡಿ ಮೂಡಿದರೆ' ಹೆಂಣು, 'ಗಡ್ಡ ಮೀಸೆಯಾಗಲು' ಗಂಡು ಎಂಬುದು. ಆದರೆ ಒಳಗೆ ಸುಳಿವಾತ[ಆತ್ಮ]ನು ಈರ್ವರಲ್ಲಿಯೂ ಓರ್ವನೇ. ಆತ ಹೆಂಣಲ್ಲ ಗಂಡಲ್ಲ.

ಕಾರಣ ಧಾರ್ಮಿಕ ವಿಚಾರದಲ್ಲಿ ಭೇದದ ವಾದವೇಕೆ ಬೋಧೆಯೇಕೆ? ಎಂಬುದು ವೀರಶೈವತತ್ವ. ''ಇದರಂತುವ ತಿಳಿಯಲ್ಕೆ ಶೃತಿಗಗೋಚರ ವೆಂದಾತನಂಬಿಗರ ಚೌಡಯ್ಯ'' ಎಂಬ ಮಾತಿನಲ್ಲಿ ವಚನಕಾರನು ವೀರ ಶೈವರ ಈ ಉದಾತ್ತವಿಚಾರದ, ಉನ್ನತ ತತ್ವದ ಆಳವನ್ನು ಆಧಿಕ್ಯವನ್ನು ಸೂಚಿಸಿದ್ದಾನೆ. ಈ ತತ್ವದ ವಿಕಾಸಕ್ಕೆ ಪ್ರಕಾಶಕ್ಕೆ ಕಾರಣವಾವುದು? ಬಸವಂಣನು ಅನುಭವಮಂಟಪದಲ್ಲಿ ಮಹಾದೇವಿಯಕ್ಕ, ನಾಗಲಾಂಬಿಕೆ, ನೀಲಾಂಬಿಕೆ, ಗಂಗಾಂಬಿಕೆ, ಲಕ್ಕಮ್ಮ ಮೊದಲಾದ ಶಿವಶರಣೆಯರಿಗೆ ಇಂಬುಕೊಟ್ಟು, ಶಿವಾನುಭವ ಪ್ರಸಂಗದ ಅವರ ಜಾಣ್ನುಡಿಗಳಿಗೆ ತನು ತೂಗಿ, ಮನ ಬಾಗಿ, ಶರಣರಿಗೆ ಸಮಾನವಾಗಿ ಇಷ್ಟಲ್ಲ ಅದಕ್ಕೂ ಹೆಚ್ಚು ಅವರನ್ನು ಎಂದು ಗೌರವಿಸಿದನೋ, ಅಂದಿನಿಂದ ಸ್ತ್ರೀ ಸ್ವಾತಂತ್ರ್ಯವಾದವು ವೀರಶೈವರಲ್ಲಿ ಬಳೆದುಬಂದಿದೆ; ಬಾಳಿ ನಿಂದಿದೆ. ವೀರ ಶೈವ ಸ್ತ್ರೀಯರಾದರೂ ಸ್ವಾತಂತ್ರ್ಯದ ಉಪಯೋಗವನ್ನು ಯಾವ ರೀತಿಯಲ್ಲಿ ನೀತಿಯಲ್ಲಿ ಬಳೆಯಿಸಿಕೊಂಡಿದ್ದಾರೆಂಬುದಕ್ಕೆ ಈಮೇಲೆ ಉದಾಹರಿಸಿದ ಶಿವಶರಣೆಯರ ವಚನಗಳನ್ನು ಅವಶ್ಯವಾಗಿ ಸರ್ವಸಮಾಜದ ಮಾತೆಯರೂ ಪರಿಕಿಸಿನೋಡಬೇಕು. ಮಹಾದೇವಿಯಕ್ಕನ ಸಾಮರಸ್ಯ ಜ್ಞಾನ, ಲಕ್ಕಮ್ಮನ ಕರ್ಮಯೋಗದಲ್ಲಿಯ ಕೌಶಲ್ಯ, ಇವುಗಳನ್ನು ಚೆನ್ನಾಗಿ ಪರಾಮರ್ಶಿಸಬೇಕು.

ಹೀಗೆ ಬಸವಂಣನವರು ಹೋದ ಮಾರ್ಗವು ಬಹು ವಿಶಾಲವಾದುದು; ವಿಮಲವಾದುದು. ಅದನ್ನೆಲ್ಲಾ ಅರಿದ ಆ ಹರಿಹರದೇವನು "ಬಸವನ ಬಟ್ಟೆಬಟ್ಟೆ'' [ಬಸವನ ಮಾರ್ಗವೇ ಮಾರ್ಗ] ಎಂದು ಕಹಳೆಯೂದಿದನು. ನಾನಿದುವರೆಗೂ ತಮ್ಮೆದುರಿನಲ್ಲಿಟ್ಟ ವಿಚಾರದಲ್ಲಿ, ಬಸವಂಣನವರ ಬಟ್ಟೆಯ ಹೊರಮೈಯ್ಯಲ್ಲಿಯ ಒಂದು ಅಣುವನ್ನಾದರೂ ಮುಟ್ಟಿರುವೆನೋ ಇಲ್ಲವೋ ಇದೆ ನನಗೆ ಧೈರ್ಯವಿಲ್ಲ. ಬಸವಂಣನವರ ''ಭಕ್ತಿಯೋಗ''ವು ಬಹು ಮಹತ್ವವಾದುದು. ಅದರದು ನನ್ನಂತಹನಿಂದ ಹೇಳಲು ಬಾರದು. ಲೋಕೋಪಕಾರಕ್ಕಾಗಿ ತೊಡಗಿದ ಬಸವಂಣನವರ ಈ ಎಲ್ಲ ಉದ್ದೇಶಗಳಿಗೆ, ಉಪದೇಶಗಳಿಗೆ ಅದೆಷ್ಟೋ ಜನವಾಗ ಹೊಗಳಿತು. ಎಷ್ಟೋ ಜನವು ತೆಗಳಿತು. ಆದರೆ ಬಸವಂಣನವರು ಮಾತ್ರ

ಮಿಗೆ ಪಳಿವರೆನ್ನನೆನ್ನದೆ।
ಪೊಗಳ್ವರ್ ನೆರೆದೆ-ಲ್ಲರೆನ್ನನೆನ್ನದೆ ತನ್ನೊಳ್ ॥

ಬಗೆದುಭಯ ಲೋಕಹಿತವೊಳ್ ।
ನೆಗಳ್ಗೆ, ಜನಂ ಪಳಿಗೆ, ಪೊಗಳ್ಗೆ, ತನಗೇನದರೊಳ್ ॥

ಎಂಬ ಉದಾತ್ತವೃತ್ತಿಯು ಒಟ್ಟೈ ಪಿಡಿದು, ನಿಸ್ಶಂಕೆಡದೆ, ಹೊಗಳಿಕೆ-ತೆಗಳಿಕೆಗಳಿಗೆ, ವೈಯುಂಣದೆ, ಮನನೊಯ್ಯದೆ ನಡೆಯುತ್ತಿರುವಾಗ ಅಂದು ಆ ಮಹಾದೇವನು ಬಂದು ತನಗೆ ಬೇಕೆಂದು ಎತ್ತಿಕೊಂಡು ಅವರನ್ನು ಹೃದಯಕಮಲದಲ್ಲಿ ಐಕ್ಯಮಾಡಿಕೊಂಡನು.

---

# ಬಸವನ ಜನ್ಮಸ್ಥಳವಾವುದು ?

## (ಮನಗೋಳೀ ಶಿಲಾಶಾಸನದ ವಿಮರ್ಶೆ)

ಲೇಖಕ:— ರಾ॥ ಸಾ॥ ಫ. ಗು. ಹಳಕಟ್ಟಿ ವಿಜಾಪುರ.

ಮನಗೋಳೀ ಗ್ರಾಮವು ವಿಜಾಪುರ ಪಟ್ಟಣದಿಂದ ಆಗ್ನೇಯ ದಿಕ್ಕಿಗೆ ೧೧ ಮೈಲು ಮತ್ತು ಬಾಗೇವಾಡಿಯಿಂದ ವಾಯುವ್ಯಕ್ಕೆ ೧೫ ಮೈಲು ಅಂತರದ ಮೇಲೆ ಇರುತ್ತದೆ. ಇದು ಡೋಣೀ ನದಿಯು ಹಾಯ್ದಂಥ ಬಹು ಫಲದ್ರೂಪವಾದ ಪ್ರದೇಶದಲ್ಲಿದೆ. ಈ ಗ್ರಾಮದಲ್ಲಿ ಈಗ ಒಂದು ಹನುಮಂತ ದೇವರ ಚಿಕ್ಕ ಗುಡಿ ಇದ್ದು ಅದರ ಗೋಡೆಯಲ್ಲಿ ಈ ಶಾಸನವಿರುತ್ತದೆ. ಇದನ್ನು ಈಗಲೂ ಅಲ್ಲಿ ನೋಡಬಹುದು. ಈ ಶಾಸನದಬಗ್ಗೆ ಶ್ರೀ ಜೀರಗೆ ಬಸವಪ್ಪನವರು ಈ ಸಂಚಿಕೆಯಲ್ಲಿ ಒಂದು ಲೇಖವನ್ನುಬರೆದಿದ್ದಾರೆ. ಆದರೆ ಇದು ಕಾಳಾಮುಖರ ಶಾಸನವಿರುತ್ತದೆ. ವೀರಶೈವ ಶಾಸನವಲ್ಲ. ಕಾಳಾಮುಖರ ಶಾಸನಗಳು ಈ ಭಾಗದಲ್ಲಿ ಬಹು ಕಡೆಗೆ ದೊರೆಯುತ್ತವೆ. ಇದರಿಂದ ಬಸವೇಶ್ವರನ ಕಾಲದಲ್ಲಿ ಕಾಳಾಮುಖರ ಪ್ರಾಬಲ್ಯವು ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿ ಸಹ ಹೆಚ್ಚಿತ್ತೆಂದು ತೋರುತ್ತದೆ.

ಮಿ॥ ಜೀರಗೆ ಕೆ. ಬಸವಪ್ಪನವರು, ಈ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬಸವನು ವೀರಶೈವ ಧರ್ಮೋದ್ಧಾರಕನಾದ ಬಸವನೆಂದು ಭಾವಿಸಿರುತ್ತಾರೆ. ಆದರೆ ಈ ಮನಗೋಳೀ ಬಸವನು ಅವನಿಂದ ಬೇರೆ ಎಂದು ತೋರುತ್ತದೆ. ಇದಕ್ಕೆ ಕಾರಣಗಳನ್ನು ನಾನು ಕೆಳಗೆ ವಿವರಿಸುತ್ತೇನೆ—

(೧) ಮನಗೋಳೀ ಬಸವನು ಮಾಣಿಕ್ಯವಳ್ಳಿಯವನಿರುವನು. ಆದರೆ ಧರ್ಮೋದ್ಧಾರಕನಾದ ಬಸವನು ಇಂಗುಳೇಶ್ವರ–ಬಾಗೇವಾಡಿಯಲ್ಲಿ ಜನಿಸಿದನೆಂದು ಇವನ ಚರಿತ್ರೆಗಳೆಲ್ಲವೂ ಹೇಳುತ್ತವೆ. ಇವುಗಳಲ್ಲಿ ಒಂದಾದರೂ ಮನಗೋಳಿಯಲ್ಲಿ ಅವನು ಜನಿಸಿದನೆಂದು ಹೇಳುವದಿಲ್ಲ. ಮನಗೋಳೀ ಬಸವನೆಂತಲೂ ಅವನನ್ನು ಯಾರೂ ಎಂದೂ ಕರೆದಿಲ್ಲ. ಬಸವನ ವಂಶಜನಾದ ಹಾಲಬಸವಿದೇವನ ಶಿಲಾಶಾಸನವು ಹುಕ್ಕೇರಿ ಸಮೀಪದಲ್ಲಿ ಅರ್ಜುನವಾಡದಲ್ಲಿ ಇದ್ದು ಇದರಲ್ಲಿ ೮ ನೇ ಓಳಿಯಲ್ಲಿ "ಶ್ರೀಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿ

ರಾಜನ ತನೂಜಂ ಬಸವರಾಜನ ಮಹಿಮೆ ಎಂತೆಂದಡೆ" ಎಂಬ ವಾಕ್ಯವು ಇದೆ. ಇದರಲ್ಲಿ ಬಾಗವಾಡಿ ಎಂಬ ಹೆಸರು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಬಸವನ ವಂಶಜನು ಹೀಗೆ ಬಸವನು ಬಾಗೇವಾಡಿಯವನೆಂದು ಹೇಳಿದ್ದನ್ನು ನಾವು ನಂಬಬೇಕಾಗುತ್ತದೆ. ಬಾಗೇವಾಡಿಯಲ್ಲಿ ಈಗಲೂ ಬಸವೇಶ್ವರನ ಪ್ರಸಿದ್ಧ ದೇವಾಲಯವಿದೆ. ಅಲ್ಲಿ ಪ್ರತಿವರ್ಷ ದೊಡ್ಡ ಜಾತ್ರೆಯೂ ಆಗುತ್ತದೆ. ಆದರೆ ಮನಗೋಳಿಯಲ್ಲಿ ಬಸವೇಶ್ವರನ ಆವ ಸ್ಥಾನವೂ ಇರುವದಿಲ್ಲ. ಮತ್ತು ಅಲ್ಲಿ ಅವನ ಯಾವ ಐತಿಹ್ಯವೂ ಇರುವದಿಲ್ಲ. ಈ ಎಲ್ಲ ಸಂಗತಿಗಳನ್ನು ನಾವು ಒಟ್ಟಾರೆ ನೋಡಿದರೆ ಬಸವನು ಬಾಗೆವಾಡಿಯವನೆಂತಲೇ ನಾವು ನಂಬಬೇಕಾಗುತ್ತದೆ.

(೨) ಬಾಗೇವಾಡೀ ಬಸವೇಶ್ವರನ ಇಷ್ಟ ದೇವತೆಯು ಸಂಗಮನಾಥನು. ಕೂಡಲಸಂಗಮೇಶ್ವರನೆಂತಲೂ ಇದಕ್ಕೆ ಒಂದು ಹೆಸರು ಇದೆ. ಬಸವೇಶ್ವರನ ಮುದ್ರಿಕೆಯಾದರೂ ಯಾವಾಗಲೂ 'ಕೂಡಲ ಸಂಗಮದೇವಾ' ಎಂದು ಇದೆ. ಆದರೆ ಶಿಲಾಶಾಸನದಲ್ಲಿ ಹೇಳಿದ ಈ ಮನಗೋಳೀ ಬಸವನ ಮುಖ್ಯದೇವತೆಯು ಅದೇ ಗ್ರಾಮದಲ್ಲಿರುವ ಕಲಿದೇವನು. ಈ ಶಿಲಾಶಾಸನದಲ್ಲಿ 'ಸಂಗನಬಸವ' ಅಥವಾ 'ಸಂಗಮೇಶ್ವರ' ಎಂಬ ಹೆಸರು ಎಲ್ಲಿಯೂ ಬರುವದಿಲ್ಲ. ಹಿಂದಿನ ಶಿವಶರಣರು ತಮ್ಮ ಇಷ್ಟ ದೇವತೆಯನ್ನು ಯಾವಾಗಲೂ ಸ್ಮರಿಸುವದುಂಟು. ಅದರಲ್ಲಿ ಅವರು ಬದಲಾವಣೆಮಾಡುವದಿಲ್ಲ. ಆದರೆ ಮನಗೋಳೀ ಬಸವನ ಇಷ್ಟ ದೇವತೆಯು ಬೇರೆ ಇರುವದರಿಂದ ಅವನು ಬೇರೆ ಒಬ್ಬ ಬಸವನೆಂದು ತೋರುತ್ತದೆ.

(೩) ಮನಗೋಳೀ ಬಸವನ ತಂದೆಯು ಹೆಸರು ಚಂದಿರಾಜ ಮತ್ತು ತಾಯಿಯು ಹೆಸರು ಚಂದ್ರಾಂಬಿಕೆ ಎಂದು ಈ ಶಾಸನದಲ್ಲಿ ಹೇಳಲ್ಪಟ್ಟಿದೆ. ಆದರೆ ಬಾಗೇವಾಡಿ ಬಸವನ ತಂದೆಯು ಹೆಸರು ಮಾದಿರಾಜನೆಂದಿದೆ. ವೀರಶೈವ ಪುರಾಣಗಳಲ್ಲಿ ಇದೇ ಹೆಸರೇ ಯಾವಾಗಲೂ ಹೇಳಲ್ಪಡುವದುಂಟು. 'ಮಾದಿರಾಜ' ಈ ಹೆಸರೇ ಅರ್ಜುನವಾಡದ ಶಿಲಾಶಾಸನದಲ್ಲಿ ಬಂದಿರುತ್ತದೆ. ಇಷ್ಟೇ ಅಲ್ಲ ಅವನ ವಂಶಾವಳಿಯೂ ಅದರಲ್ಲಿ ಕೊಡಲ್ಪಟ್ಟಿದೆ. ಅದು ಹೇಗೆಂದರೆ, ಬಸವನ ಮೊಮ್ಮಗನ ಹೆಸರು ದೇವರಾಜ, ಈ ದೇವರಾಜನ ಮೊಮ್ಮಗನು ಕಲಿದೇವರಸನು, ಈ ಕಲಿದೇವನ ಮಗನು ಹಾಲಬಸವಿದೇವ ಎಂದು ವಿಸ್ತಾರಪೂರ್ವಕ

ವಾಗಿ ಇದರಲ್ಲಿ ಹೇಳಲ್ಪಟ್ಟಿದೆ. ಈ ಹಾಲಬಸವಿದೇವನು ಬಸವನ ವಂಶಜನಾದ್ದರಿಂದ ಅವನು ತನ್ನ ಪೂರ್ವಜನಾದ ಬಸವನ ತಂದೆಯ ಹೆಸರನ್ನು ತಪ್ಪಾಗಿ ಬರೆಯುವ ಸಂಭವವಿಲ್ಲ. ಆದ್ದರಿಂದ ಅದನ್ನು ನಾವು ನಂಬಬೇಕಾಗುತ್ತದೆ.

(೪) ಈ ಮನಗೋಳಿ ಶಿಲಾಶಾಸನವು ಹುಟ್ಟಿದಾಗ್ಗೆ ಬಿಜ್ಜಳನು ರಾಜ್ಯಭಾರವನ್ನು ವಹಿಸಿದ್ದನು. ಅದು ಬಿಜ್ಜಳನ ಆಳಿಕೆಯ ೬ನೇ ವರ್ಷ ವೆಂತಲೂ ಅದು ವಿಷು ಸಂವತ್ಸರವೆಂತಲೂ ಇದರಲ್ಲಿ ಹೇಳಲ್ಪಟ್ಟಿದೆ. ೧೨ ನೇ ಶತಮಾನದಲ್ಲಿ ವಿಷು ಸಂವತ್ಸವು ಕ್ರಿ. ಶ. ೧೧೬೨ ರಲ್ಲಿ ಬೀಳು ತ್ತದೆ. ಆದುದರಿಂದ ಬಿಜ್ಜಳನು ರಾಜ್ಯವನ್ನು ಆಳಹತ್ತಿದ್ದು ೧೧೫೬ ಆಗುತ್ತಿದೆ. ಬೇರೆ ಶಿಲಾಶಾಸನಗಳಿಂದ ಈಗ ಗೊತ್ತಾಗಿರುವದೇನಂದರೆ ಬಿಜ್ಜಳನು ಚಾಲುಕ್ಯರ ರಾಜ್ಯವನ್ನು ೧೧೫೬ರಲ್ಲಿಯೇ ಆಕ್ರಮಣಮಾಡಿದನು ಮತ್ತು ೧೧೬೨ ರ ಸುಮಾರಿನಲ್ಲಿ ರಾಜ್ಯಾಭಿಷೇಕ ಮಾಡಿಸಿಕೊಂಡನು. ಮುಂದೆ ಅವನು ರಾಜನಂತೆ ೧೧೬೮ ರ ವರೆಗೂ ತನ್ನ ಆಳಿಕೆ ಯನ್ನು ನಡಿಸಿದನು. ಬಸವೇಶ್ವರನು ಬಿಜ್ಜಳನಕಿಂತಲೂ ಪೂರ್ವದಲ್ಲಿ ಸ್ವಲ್ಪ ಕಾಲದ ಹಿಂದೆ ಕಲ್ಯಾಣವನ್ನು ಬಿಟ್ಟು ಸಂಗಮೇಶ್ವರನಲ್ಲಿಗೆ ಹೋದನು. ಆದುದರಿಂದ ಈ ಶಿಲಾಶಾಸನವು ಹುಟ್ಟಿದ ವರುಷ ಅಂದರೆ ೧೧೬೨ರಲ್ಲಿ ಅವನು ಜಿವಂತ ಇದ್ದನೆಂಬುದು ನಿಶ್ಚಯವು. ಆ ಕಾಲಕ್ಕೆ ಅವನು ದೇಶದಲ್ಲಿ ವೀರಶೈವ ಧರ್ಮದ ಅಂದೋಲನಗಳನ್ನು ಬಲವಾಗಿ ನಡಿಸಿರಲಿಕ್ಕೆಬೇಕು. ಇಂಥ ಕಾಲದಲ್ಲಿ ಹುಟ್ಟಿದ ಶಿಲಾಶಾಸನವು ಇದಾ ಗಿದೆ. ಇಷ್ಟೇ ಅಲ್ಲ, ಅದರಲ್ಲಿ ಅವನ ಜನ್ಮಗ್ರಾಮದವರು (ಮನಗೋಳಿಯೇ ಅವನ ಜನ್ಮಗ್ರಾಮವೆಂದು ಭಾವಿಸಿದಲ್ಲಿ) ಅವನ ಉಲ್ಲೇಖವನ್ನು ಮಾಡುತ್ತಾ ಇದ್ದಲ್ಲಿ ಅವರು ತಮ್ಮಲ್ಲಿಯ ಒಂದು ಶಿಲಾಶಾಸನದಲ್ಲಿ ಬಸವನು ಕಾಳಾಮು ಖನೆಂದು ಹೇಳುತ್ತಾರೆ! ಆರಂಭದಲ್ಲಿ ಅವನು ಹೀಗೆ ಕಾಳಾಮುಖನೆಂದು ಭಾವಿಸಿದರೂ ಹಿಂದುಗಡೆ ಅವನು ವೀರಶೈವ ಧರ್ಮಪರಿಪಾಲನೆ ಮಾಡಿದ್ದ ರಿಂದ ಇಂಥ ಮಹತ್ವಿಕನನ್ನು ಅವನ ಗ್ರಾಮದವರು ಅವನ ಈ ಶಾಸನದಲ್ಲಿ ಅವನು ನಡೆಸಿದ ಧರ್ಮ ಜಾಗ್ರತಿ ಅಥವಾ ಅವನು ಅನುಸರಿಸುತ್ತಿದ್ದ ಶೈವ ಧರ್ಮವನ್ನು ಕುರಿತು ಕೆಲಮಟ್ಟಿಗಾದರೂ ಉಲ್ಲೇಖಿಸಬಹುದಾ ಗಿತ್ತು. ಆದರೆ ಹೀಗೇನು ಅವರು ಮಾಡಿರುವದಿಲ್ಲ. ಇದು ಆರಂಭದಿಂದ ಕಡೆಯುವರೆಗೂ ಪೂರ್ಣ ಕಾಳಾಮುಖಶಾಸನವಾಗಿದೆ. ಆದ್ದರಿಂದ ಈ

ಮನಗೋಳಿ ಬಸವನು ಕಾಳಾಮುಖನಾದ ಬೇರೆ ಬಸವನೆಂದು ತೋರು ತ್ತದೆ.

(೫) ಈ ಶಿಲಾಶಾಸನದಲ್ಲಿ "ಬಸವ" ಎಂಬ ಹೆಸರು ಬಂದದ್ದರಿಂದಲೂ ಇದು ಬಸವನ ಕಾಲದ್ದಿರುವರಿಂದಲೂ ಫ್ಲೀಟಸಾಹೇಬರು ತಪ್ಪು ಗ್ರಹಿಕೆ ಮಾಡಿಕೊಂಡಿದ್ದಾರೆ. ಆದರೆ ಬಸವನೆಂಬ ಹೆಸರಿನವರು ಈ ಶಿಲಾಶಾಸನವು ಹುಟ್ಟುವ ಪೂರ್ವದಲ್ಲಿ ಅನೇಕರು ಆಗಿ ಹೋಗಿರುತ್ತಾರೆ. (ಶಿವಾನುಭವ ಸಂಪುಟ ೫ ಸಂಚಿಕೆಗಳು ೧೧-೧೨ ಪುಟ ೩೫೦ ನೋಡಿರಿ) ಆದರಲ್ಲಿ ಡಾ॥ ಎಸ್. ಸಿ. ನಂದೀಮಠ ಎಮ್. ಎ. ಪಿ. ಎಚ್. ಡಿ. ಇವರು (೧) ಕುರ್ತುಕೋಟಿಯ ಎಡವಬಸವಯ್ಯ (೨) ಹಾನಗಲ್ಲು ತಾಲೂಕಿನಲ್ಲಿ ಸೆಂಬೊಳಲ ಬಸವಯ್ಯ (೩) ಧರ್ಮದ ಬಸವಣ್ಣ ಇವರನ್ನು ಉಲ್ಲೇಖಿಸಿದ್ದಾರೆ. ಇವರೆಲ್ಲರೂ ಬಸವನಕಿಂತಲೂ ಹಿಂದಿನವರು. ಆದುದರಿಂದ 'ಬಸವ' ಎಂಬ ಹೆಸರು ಆ ಕಾಲದಲ್ಲಿ ಜನರಲ್ಲಿ ವಾಡಿಕೆಯಾಗಿ ಉಪಯೋಗಿಸಲ್ಪಡುತ್ತಿತ್ತು. ಆದ್ದರಿಂದ ಈ ಹೆಸರು ಇಲ್ಲಿ ಬಂದಮಾತ್ರದಿಂದ ಧರ್ಮೋದ್ಧಾರಕನಾದ ಬಸವನೆಂದು ಹೇಳಲು ಬರಲಾರದು.

ಈ ಶಿಲಾಶಾಸನವು ಬಸವನದು ಇರದಿದ್ದರೂ ಒಂದು ಮಹತ್ವದ ಕಾಲದಲ್ಲಿ ಅದು ಉಂಟಾಗಿರುತ್ತದೆ. ಇದರಲ್ಲಿ ಬಿಜ್ಜಳ, ಬರ್ಮರಸ, ನೂರ್ಮಡಿ ಚಾಲುಕ್ಯ ಇವರ ಉಲ್ಲೇಖಗಳಿವೆ. ಅದು ಆಗಿನ ಸಾಮಾಜಿಕ ಸ್ಥಿತಿಯ ಮೇಲೆ ಮಹತ್ವದ ಪ್ರಕಾಶವನ್ನು ಕೆಡಹುತ್ತಿದೆ. ಇದರಲ್ಲಿ ಬಣಂಜು ಧರ್ಮದವರ ರೀತಿ ನಡೆಗಳೂ ಹೇಳಲ್ಪಟ್ಟಿವೆ. ಆ ಕಾಲದಲ್ಲಿ ವಿಜಾಪುರ ಪಟ್ಟಣದ ನೆರೆ ಪ್ರದೇಶವು ಸಂಪತ್ತಿನಲ್ಲಿಯೂ ವ್ಯಾಪಾರಾಭಿವೃದ್ಧಿಯಲ್ಲಿಯೂ ಬಹು ಮುಂದುವರಿದಿತ್ತೆಂದು ತೋರಿಬರುತ್ತಿದೆ. ಈ ಎಲ್ಲ ವಿಷಯಗಳನ್ನು ಕುರಿತು ನಾನು ಕ್ರಮೇಣ ಲೇಖಗಳ ಮೂಲಕ ಪ್ರಸ್ತಾಪಿಸುತ್ತ ಹೋಗುವೆನು.

# ಮಲಗಿಸೆನ್ನನು ತಾಯೆ!



೧

ಮಲಗಿಸೆನ್ನನು ತಾಯೆ, ನಲ್ಜೋಗುಳವ ಹಾಡಿ,
ಅಳಲಳಲಿ ತೊಳತೊಳಲಿ ಬಂದಿರುವೆನು!
ಆಶಾ-ನಿರಾಶೆಗಳ ಘರ್ಷಣದಿ ನಾ ಸಿಕ್ಕು
ಕಡು ಸೋತು, ನಿನ್ನೆಡೆಗೆ ಬಂದಿರುವೆನು,

೨

ಜಗಕೆ ಬೇಸರವಾಗಿ ಬೇಡಾದರೇ ನಾನು?
ಬಳ್ಳಿಗದು ಕಾಯಿ ತಾ ಭಾರವೇನು?
ಜಗವು ಕೈ ಬಿಟ್ಟರೂ, ನೀನು ಕೈ ಬಿಡದವಳು!
ಅದಕಾಗಿ ನಿನ್ನಡಿಗೆ ಬಂದಿರುವೆನು!

೩

ನಿನ್ನ ನುಣ್ಚರ ಲಾಲಿಯಲಿಯೆನ್ನ ಶ್ರಮಭ್ರಮೆಗ-
ಳೆಲ್ಲ ಕೊಚ್ಚುತ ತೇಲಿ ಮರೆಯಾಗಲಿ!
ನಿನ್ನ ಕರುಣೆಯು ದಿಟ್ಟಿ-ಜೊನ್ನದಲಿ, ಮಿಂದೆನ್ನ
ಬಾಡಿರುವ ಹೃತ್ಕುಮುದವರಳಿ ಬರಲಿ!

೪

ನಿನ್ನಭಯ-ಕರ-ಸ್ಪರ್ಶಕೆನ್ನ ಮೈ-ಮನ-ನೋವು-
ಗಳು ವಾಸಿಯಾಗಿ ಹೊಸ ಹುಟ್ಟು ಬರಲಿ!
ನಿನ್ನೆಡೆಯು ಹಾಲುಂಡು, ಮತ್ತೆ ಚೇತನಗೊಂಡು,
ನಡೆವೆ ನಾ ನಿನ್ನ ಕೈಯಾಸರೆಯಲಿ!

೫

ಕಂಗಳಿದೊ ಉರಿಯುತಿವೆ! ನಿನ್ನುಡಿಯ ತೊಟ್ಟಿಲೊಳ-
ಗೆತ್ತುತೆನ್ನನು, ತಾಯೆ, ಹಾಡು! ಹಾಡು!
ಯುಗಯುಗಂಗಳ ಗಾಢ-ನಿದ್ರೆಯಾವರಿಸೆನ್ನ
ವಿಸ್ಮೃತಿಗೆ ನೂಕುವೊಲು ಹಾಡು! ಹಾಡು!

೬

ನೋಡುನೋಡುತೆ ನಿನ್ನ ಮೊಗವ, ಕಣ್ಮುಚ್ಚುವೆನು
ಕೇಳುಕೇಳುತೆ ನಿನ್ನ ಜೋಗುಳವನು!
ಪ್ರಳಯ-ಕೋಲಾಹಲಕು, ನಸುವು ನಾ ಮಿಸುಕದೊಲು
ಹಾಡಮ್ಮ ನಿತ್ಯತೆಯ ಜೋಗುಳವನು!

೭

ನಿದ್ದೆ ತಿಳಿದೆದ್ದಾಗ, ಹೊಸ ಬೆಳಕು ಮೂಡಿರಲಿ!
ಹೊಸ ದಿಟ್ಟಿ, ಹೊಸ ಆಶೆ ಕೊನರೊಡೆಯಲಿ!
ನಿನ್ನ ಕೈವಿಡಿದಾನು ಮುಂಬಟ್ಟೆ ತುಳಿಯುವೆನು!
ನಿನ್ನನೇ ಹಾಡುತಲಿ, ಲೀಲೆಯಲ್ಲಿ!

೮

ಮಲಗಿಸೆನ್ನನು ತಾಯೆ, ನಲ್ಜೋಗುಳವನಾಡಿ,
ಅಳಲಳಲಿ ತೊಳತೊಳಲಿ ಬಂದಿರುವೆನು!
ಆಶಾ-ನಿರಾಶೆಗಳ ಘರ್ಷಣದಿ ನಾ ಸಿಕ್ಕು
ಕಡು ಸೋತು, ನಿನ್ನೆಡೆಗೆ ಬಂದಿರುವೆನು!

ಈಶ್ವರ ಸಣಕಲ್ಲ.

# ಪ್ರಸಾದಿ.

## ವಚನಗಳು.

೨೭. ಅಶನದಾಪ್ಯಾಯನ ವ್ಯಸನವುಳ್ಳನ್ನಕ್ಕ ಆನಿಮ್ಮ ನೆನವುದು ಹುಸಿಯಯ್ಯ! ಆನಿಮ್ಮ ಪೂಜಿಸುವುದು ಹುಸಿಯಯ್ಯ! ಎನ್ನ ಹಸಿವಿಂಗೆ ಸೀನೆ ಓಗರವಾದರೆ ನಾ ನಿಮ್ಮ ನೆನೆವುದು ದಿಟ ಕಾಣಾ ಮಹಾಲಿಂಗಕಲ್ಲೇಶ್ವರಾ.

೨೮. ಅರ್ಧನಾರಿಯಾಗಿದ್ದ ಉಮಾದೇವಿ ಬೇರೆ ಮತ್ತೊಬ್ಬನೊಡನುಂಬುವಳೇ? ಗಂಡಂಗೆ ತೆರಹಿಲ್ಲದ ವಧು ಮತ್ತೊಬ್ಬರೊಡನುಂಬ ಪರಿ ಎಂತೋ? ಪುನರ್ಜಾತನಾಗಿ ಪ್ರಾಣಲಿಂಗ ಪ್ರಸಾದಿಯಾದಾತ ಇದಿರೊಡನುಂಬ ಪರಿ ಎಂತೋ? ಒಂದೆಂದೆನಲಿಲ್ಲ. ಎರಡೆಂದೆನಲಿಲ್ಲ. ಒಂದಾಗುಂಡಲ್ಲಿ ಸಜ್ಜನಿಕೆ ಬೆಂದಿತ್ತು. ಗುರುವತನ ನೊಂದಿತ್ತು. ಜಂಗಮ ನಾಚಿತ್ತು. ಪ್ರಸಾದ ಬೇಸರ ಹೋಯಿತ್ತು. ಇದು ಕಾರಣ ಒಂದೆನಲಮ್ಮೆ. ಬೇರೆನಲಮ್ಮೆ. ನಿಮ್ಮ ಶರಣರೊಕ್ಕುದ ಕೊಂಬೆ ಕಾಣಾ ಮಹಾಲಿಂಗ ಕಲ್ಲೇಶ್ವರಾ.

೨೯. ಇದೇ ಪ್ರಸಾದದಾದಿ ಕುಳ. ಈಯಾದಿ ಕುಳದರಿವುವಿಡಿದು ಪ್ರಸಾದವಿಡಿದು ಮಹಾ ಪ್ರಸಾದ. ಇಂತಹ ಪ್ರಸಾದ ಗ್ರಾಹಕರಿಗೆ ನಮೋ ನಮೋ ಎಂಬೆ. ಉಳಿದ ಉದ್ದೇಶಿಗಳೆನಿಸುವ ಭ್ರಾಂತರಹ ಜಾತ್ಯಂಧಕರಿಗೆ ನಾನಂಜುವೆನಯ್ಯಾ ಮಹಾಲಿಂಗಕಲ್ಲೇಶ್ವರಾ.

೩೦. ಶಿವಲಿಂಗಾರ್ಪಿತವಿಲ್ಲದೆ ಕೊಂಬ ಕರ್ಮಿಗಳು ನೀವು ಕೇಳಿಭೋ. ಅನರ್ಪಿತವು ಏನ ಮಾಡುವುದು, ಅನರ್ಪಿತವು ಏನ ಈವುದು, ಎಂದಡೆ, ಅದಕ್ಕೆ ಆಗಮವು ಹೇಳುತ್ತಿದೆ. "ಅಸಮರ್ಪ್ಯ ಪದಂ ಶಂಭೋ ಭುಂಕ್ತೇಖಾ" ದತಿಪಾತಿಚ। ಸ್ವಮಾಂಸಮಸ್ಥಿ ಮೂತ್ರಂಚ ಭುಂಕ್ತೇಖಾದತಿ ಪಾತಿಚ॥ ಎಂಬುದಾಗಿ ಇದನರಿದು ಮಹಾಲಿಂಗ ಕಲ್ಲೇಶ್ವರ ದೇವರಿಗೆ ಸಮರ್ಪಿಸದೆ ಕೊಂಡರೆ ತನ್ನ ತನ್ನೆಲು ತನ್ನ ಮಲ ಮೂತ್ರವ ಕುಡಿದು ನುಂಗಿದಂತೆ ಕಾಣಿರಣ್ಣಾ.

---

## ವಿವರಣೆ.

ಭಕ್ತನು ಲಿಂಗ ಭೋಗೋಪಭೋಗಿಯಾಗಿರಬೇಕು. ಎಂದರೆ ತಾನು ಸೇವಿಸುವದನ್ನೆಲ್ಲ, ಭುಂಜಿಸುವುದನ್ನೆಲ್ಲ, ಭೋಗಿಸುವದನ್ನೆಲ್ಲ, ಪರಮಾತ್ಮನಿಗೆ ಅರ್ಪಿಸಿ ಸೇವಿಸಬೇಕು. ಹೀಗೆ ಸೇವಿಸಿದ್ದಾದರೆ, ಅದು ಪ್ರಸಾದವೆನಿಸಿಕೊಳ್ಳುವದು. ಆದರೆ ಈ ಅರ್ಪಣದಲ್ಲಿ ಉಚ್ಚ ಮಾನಸಿಕ ಭಾವನೆ ಇರಬೇಕು. ಮತ್ತು ಆಚರಣೆಯಲ್ಲಿ ಹೊರಹೊಮ್ಮಬೇಕು. ಕೇವಲ ವಿಷಯಾಸಕ್ತನಾಗಿ ಆಚರಿಸಕೂಡದು. ಇಂಥವನಿಗೆ ಅರ್ಪಣ ವಿಲ್ಲ, ಪ್ರಸಾದವಿಲ್ಲ. ಈ ವಿಚಾರಗಳು ಈ ಪ್ರಸಾದಿ ಸ್ಥಲದ ವಚನಗ ಳಲ್ಲಿರುತ್ತವೆ.

ಕೇವಲ ಅಶನ ವ್ಯಸನಕ್ಕೊಳಗಾಗಿ ಆಚರಿಸುವವನಿಗೆ ಪರಮಾತ್ಮ ಧ್ಯಾನವು ಎಂದೂ ಅಳವಡದು. ಹಾಗೆ ಧ್ಯಾನ ಮಾಡಿದರೆ ಅದು ಸುಳ್ಳು. ಅಂಥವನ ಪೂಜೆಯೂ ಸುಳ್ಳು. ಆದರೆ ಅವನು ಪರಮಾತ್ಮ ನಿಗರ್ಪಿಸಿ ಭುಂಜಿಸಬೇಕು. ಹೀಗೆ ಅರ್ಪಿಸುವದೆಂದರೆ ಪರಮಾತ್ಮನೇ ಅವನಿಗೆ ಓಗರವಾದಂತೆ ಸರಿ. ಹೀಗೆ ಓಗರವಾದಲ್ಲಿ ಪರಮಾತ್ಮನ ಕಳೆಯು ಅವನಲ್ಲಿ ನೆಲೆಗೊಳ್ಳುವದು. (೨೭)

ಭಕ್ತನು ಪರಮಾತ್ಮನೊಡನೆಯೇ ಇರುತ್ತಾನೆ. ಹೇಗೆ ಪರಮೇ ಶ್ವರನು ಅರ್ಧನಾರಿಯಾಗಿದ್ದಾನೋ, ಹಾಗೆಯೇ ಭಕ್ತನ ಅರ್ಧ ಶರೀರವು ಲಿಂಗವಾಗಿದೆ. ಅವನೂ ಅರ್ಧನಾರಿಯು. ಆದುದರಿಂದ ಭಕ್ತನು ಭುಂಜಿ ಸುವದು ಲಿಂಗದೊಡನೆ ಭುಂಜಿಸಿದಂತೆಯೇ ಸರಿ. ಇಷ್ಟೇ ಅಲ್ಲ, ಅವನು ಭುಂಜಿಸುವದೆಲ್ಲ ಇತರ ಯಾವ ವಸ್ತುಗಳಿಗೂ ಸಲ್ಲಕೂಡದು. ಭಕ್ತನು ಪ್ರಾಣಲಿಂಗಿಯು, ಅಂದರೆ ಲಿಂಗವೇ ಪ್ರಾಣವಾಗಿದ್ದಾನೆ. ಆದುದರಿಂದ ಅವನು ಲಿಂಗದೊಡನೆ ಉಣಲಾರದೆ ಇರುವದು ಶಕ್ಯವಲ್ಲ ಆದರೆ ಈ ಬಗೆಯ ಊಟದಲ್ಲಿ ಒಂದೆರಡೆಂಬ ಭಾವವಿರಕೂಡದು. ಇದ್ದದ್ದಾದರೆ ಅಲ್ಲಿ ಉತ್ಕೃಷ್ಟತೆಯು ಹೋಗಿ ಬಿಡುತ್ತದೆ. ಅವನಲ್ಲಿ ಜಂಗಮ ಅಂದರೆ ಲಿಂಗ ಚೈತನ್ಯವೂ ಕಳೆದು ಹೋಗುತ್ತದೆ. ಈ ರೀತಿಯಾಗಿ ಶರಣ ರೊಕ್ಕುದನ್ನು ಕೊಳ್ಳಬೇಕು. (೨೮)

ಇದೇ ಪ್ರಸಾದ ಗ್ರಹಣದ ರೀತಿ. ಅರಿವುವಿಡಿದುಹೀಗೆ ಭುಂಜಿಸು ವುದೇ ಪ್ರಸಾದವು. ಇಂಥವರಿಗೆ ನಮೋ, ನಮೋ ಎಂಬೆನು. ಉಳಿ

ದವರು ಉದ್ದೇಶಿಪ್ರಾಣಿಗಳು, ಭ್ರಾಂತರು ಜಾತ್ಯಂಧಕರು. ಅವರನ್ನು ನೋಡಿ ನಾನು ಅಂಜುತ್ತೇನೆಂದು ವಚನಕಾರನು ನುಡಿಯುತ್ತಾನೆ. (೨೯)

ಶಿವಲಿಂಗದ ಎಚ್ಚರು ಯಾವಾಗಲೂ ಇರಬೇಕು. ಉಣ್ಣುವಲ್ಲಿ, ಉಡುವಲ್ಲಿ, ಇರುವಲ್ಲಿ, ಲಿಂಗವ ಅರಿಕೆಯು ಬೇಕು. ಈ ಅರಿಕೆಯೊಡನೆ ಸಮರ್ಪಣೆಯು ಅವಶ್ಯವಾಗಿ ಬೇಕು. ಇಲ್ಲದಿದ್ದರೆ ಅವನು ತನ್ನ ಮಲ ಮೂತ್ರ ಹೇಸಿಕೆಯನ್ನು ತಿಂದಂತೆಯೇ ಸರಿ. (೩೦)

---

# ಪ್ರಾಣಲಿಂಗಿ.

## ವಚನಗಳು.

೩೧. ಅರಿವೇ ಗುರು, ಆಚಾರವೇ ಶಿಷ್ಯ. ಜ್ಞಾನವೇ ಲಿಂಗ, ಪರಿಣಾಮವೇ ತಪ, ಸಮತೆ ಎಂಬುದೇ ಯೋಗ ನೋಡಾ. ಈಸುವ ನರಿಯದೆ ಲೋಚು ಬೋಳಾದರೇನು? ಮಹಾಲಿಂಗಕಲ್ಲೇಶ್ವರ ದೇವರು ನಗುವರು.

೩೨. ಉಪನಿಷದ್ವಾಕ್ಯವೆನಬಹುದಲ್ಲದೆ, ಆ ಪರಬ್ರಹ್ಮವೆನಬಾರದು. ಸಮತೆ ಸಮಾಧಾನವೆಂಬುದು ಯೋಗದಾಗು ನೋಡಾ. ಸಮತೆ ಸಮಾಧಾನ ನೆಲೆಗೊಳ್ಳದಿದ್ದಡೆ ಆ ಯೋಗ ಅಜ್ಞಾನದಾಗು. ಅಷ್ಟಶಿಲೆ ಸಹಸ್ರ ಋಷಿಯರು ಸಮತೆ ಸಮಾಧಾನ ನೆಲೆಗೊಳ್ಳದೆ ನಾನಾ ಯೋನಿಯಲ್ಲಿ ಬಂದರು. ಮಹಾಲಿಂಗಕಲ್ಲೇಶ್ವರದೇವಾ ಸಮತೆ ನೆಲೆಗೊಂಡು ಸಮಾಧಾನ ಸಹಜವಾದುದೇ ಮುಕ್ತಿಕ್ಷೇತ್ರ.

೩೩. ಅತ್ಯಾಸೆ ಎಂಬುದೇ ಪಾಪ. ಬೇರೆ ಪಾಪವಿಲ್ಲ ಕಂಡಿರೇ ಅಯ್ಯ. ಪರಿಣಾಮವೆಂಬುದೇ ಪರಮಾನಂದ. ಬೇರೆ ಪರಮಾನಂದವಿಲ್ಲ ಕಂಡಿರೇ ಅಯ್ಯ. ಇಹ ಪರದಾಸೆ ಇಲ್ಲದಿಹುದೇ ಶಿವಯೋಗ, ಬೇರೆ ಶಿವಯೋಗವಿಲ್ಲ. ಕಂಡಿರೇ ಅಯ್ಯ. ಮಹಾಲಿಂಗಕಲ್ಲೇಶ್ವರ ಬಲ್ಲ.

೩೪. ಅರ್ಥವೆಂಬುದೇ ಪಾಪ, ಬೇರೆ ಪಾಪವಿಲ್ಲ ಕಂಡಯ್ಯ. ಪರಿಣಾಮವೆಂದುದೇ ಪುಣ್ಯ, ಬೇರೆ ಪುಣ್ಯವಿಲ್ಲ ಕಂಡಯ್ಯ. ಪಾಪ ಪುಣ್ಯಗಳನತಿಗಳೆದ ಉಳುವೆ ಶಿವಯೋಗ ಮಹಾಲಿಂಗ ಕಲ್ಲೇಶ್ವರನು ಬಲ್ಲ.

---

## ವಿವರಣೆ.

ಈ ಸ್ಥಲದಲ್ಲಿ ವೀರಶೈವರ ಯೋಗವಿಚಾರಗಳು ನಿರೂಪಿಸಲ್ಪಡುತ್ತವೆ. ವೀರಶೈವಯೋಗವು ಸಿದ್ಧಿಯನ್ನುದ್ದೇಶಿಸಿ ಆಚರಿಸಲ್ಪಡತಕ್ಕುದಲ್ಲ. ಅದರಲ್ಲಿ ಮಾನಸಿಕ, ನೈತಿಕ ಉಚ್ಚಗುಣಗಳನ್ನು ವಿಕಾಸಪಡಿಸುತ್ತ ಅಷ್ಟಾವರಣ ಯುಕ್ತನಾಗಿ ಆಚರಿಸಿ ಲಿಂಗಾಂಗ ಸಾಮರಸ್ಯವನ್ನು ಹೊಂದತಕ್ಕದ್ದು. ಅಷ್ಟಾವರಣಗಳು ಬಾಹ್ಯವಾಗಿಯೂ, ಆಂತರಂಗಿಕವಾಗಿಯೂ ಇರುತ್ತವೆ. ಆಂತರಂಗಿಕವಾಗಿ ಆಚರಿಸುವದರಿಂದ ಶಿವಯೋಗವು ಪ್ರಾಪ್ತವಾಗುತ್ತದೆ.

ಅಂತರಂಗಿಕ ಶಿವಯೋಗದಲ್ಲಿ ಅರಿವೇ ಗುರುವು. ಅರಿವುವಿಡಿದು ಆಚರಿಸುವುದೇ ಶಿಷ್ಯ, ಜ್ಞಾನದ ಪರಿಣಾಮವೇ ಲಿಂಗ ತಪಸ್ಸು. ಇಂಥ ತಪಸ್ಸಿನಿಂದುಂಟಾಗುವ ಸಮಾಧಾನ ವೃತ್ತಿಯೇ ಯೋಗವೆನಿಸುವದು. ಇದೇ ಶಿವಯೋಗವು. ಈ ಶಿವಯೋಗವಿಲ್ಲದೆ ಬಾಹ್ಯಾಚರಣೆಗಳನ್ನು ಮಾತ್ರ ಆಚರಿಸಿದರೆ ಪರಮಾತ್ಮನು ಹಾಸ್ಯ ಮಾಡುತ್ತಾನೆ (೩೧)

ಬರೇ ಉಪನಿಷದ್ವಾಕ್ಯಾರ್ಥ ಮಾಡಿದಲ್ಲಿ ಪರಬ್ರಹ್ಮವು ಪ್ರಾಪ್ತವಾಗಲಾರದು. ಆದರೆ ಅದರ ಪರಿಣಾಮಗಳು ಮನಸ್ಸಿನಲ್ಲಿ ನೆಲೆಗೊಳ್ಳಬೇಕು. ಸಮತೆ ಸಮಾಧಾನಗಳುಂಟಾಗಬೇಕು. ಹೀಗಾದಲ್ಲಿ ಅದೇ ಶಿವಯೋಗವೆನಿಸುವದು. ಹೀಗಾಗದೆ ಹೋದರೆ, ಆ ಯೋಗವು ಅಜ್ಞಾನಸ್ಥಿತಿಯು. ಈಬಗೆಯ ಋಷಿಗಳು ಜಗತ್ತಿನಲ್ಲಿ ಬಹು ಜನರು ಇದ್ದಾರೆ. ಅವರು ಪುನಃ ಹುಟ್ಟಿ ಹುಟ್ಟಿ ಕಷ್ಟಪಡುತ್ತಾರೆ. ಮನುಷ್ಯನಲ್ಲಿ ಸಮತೆ ಸಮಾಧಾನಗಳು ನೆಲೆಗೊಳ್ಳಬೇಕು. ಸಹಜಭಾವವಳವಡಬೇಕು. ಅದೇ ಮುಕ್ತಿ ಎನಿಸುವದು (೩೨)

ಆಸೆ ಎಂಬುದೆ ಪಾಪ. ನಿರಾಸೆ ಎಂಬುದೇ ಪುಣ್ಯ. ಈ ರೀತಿಯ ಆಚರಣೆಯಿಂದಲೇ ಪರಮಾನಂದವು ದೊರೆಕೊಳ್ಳುವದು. ಆಗ ಇಹ ಪರದಾಸೆಯು ದೂರಾಗುವದು. ಈ ಸ್ಥಿತಿಯೇ ಶಿವಯೋಗವು. ಶಿವಯೋಗವು ಇದರ ಹೊರ್ತು ಬೇರೊಂದಿಲ್ಲ (೩೩)

ಆಸೆ ಮಾಡಿ ಧನಗಳಿಸುವದೇ ಪಾಪವೆನಿಸುವದು. ಆದರೆ ಹೀಗೆ ಧನಗಳಿಸದೆ ಲಿಂಗದಲ್ಲಿ ಪರಿಣಾಮಿಯಾದರೆ ಅದೇ ಪುಣ್ಯವು. ಪರಿಣಾಮಿಯಾಗುವ ಸ್ಥಿತಿಯನ್ನು ವಚನಕಾರನು ಹಿಂದೆಯೇ ವಿವರಿಸಿದ್ದಾನೆ. ಈ ರೀತಿಯಾಗಿ ಪುಣ್ಯ ಪಾಪಗಳ ವಿಚಾರವನ್ನರಿತು ಆಚರಿಸಿದರೆ, ಅದೇ ಶಿವಯೋಗವು. ಆಗ ಅವನಲ್ಲಿ ಕೆಡುಕಾದುದು ಹೊರಟುಹೋಗುತ್ತದೆ. ಇದು ಹೊರಟುಹೋಗಿ, ಆವುದು ಅವನಲ್ಲಿ ಉಳಿಯುವದೋ ಅದೇ ನಿಜವಾದ ಶಿವಯೋಗದ ಪರಿಸ್ಥಿತಿಯು. ಇದನ್ನು ಪರಮಾತ್ಮನೊಬ್ಬನೇ ಬಲ್ಲನು. (೩೪)

ಪ್ರಾಣಲಿಂಗಿಯ ಸುಖವನ್ನು ನುಡಿಯಲಿಕ್ಕೆ ಆರಿಗೂ ಬರಲಾರದು. ಅದು ತನುಗುಣಗಳಿಂದಾಚೆ ಇರುತ್ತದೆ. ಇದು ಭಾವದ ಸುಖವು. ಅದು ಭವವನ್ನು ದೂರ ಮಾಡುತ್ತದೆ. (೩೫)

---

# ಶರಣಸ್ಥಲ.

## ವಚನ.

೩೫. ತನು ನೇಹದ ಸುರುಚಿಗಳು ತೋರಲಿಕ್ಕಾರಿಗೆಯೂ ಬಾರದು. ಅದು ಸಕ್ಕರೆಯಂತುಟಲ್ಲ. ಅದು ತವರಾಜದಂತುಟಲ್ಲ. ಭಾವದ ಸುಖ ಭವಗೆಡಿಸಿತ್ತು. ಮಹಾಲಿಂಗಕಲ್ಲೇಶ್ವರ ನೀನೇ ಬಲ್ಲೆ.

೩೬. ಅರಳಿದ ಪುಷ್ಪ ಪರಿಮಳಿಸದಿಹುದೇ? ತುಂಬಿದ ಸಾಗರ ತೆರೆನೊರೆಯಾಡದಿಹುದೇ? ಆಕಾಶವ ಮುಟ್ಟುವವ ದೊಂಟಿಗೋಲ ಹಿಡಿವನೇ? ಪರಮಪರಿಣಾಮಿ ಕರ್ಮವನತಿಗಳೆಯದಿಹನೇ ಮಹಾ ಲಿಂಗ ಕಲ್ಲೇಶ್ವರಾ?

೩೭. ಇಕ್ಕದೇ ಕೋಗಿಲೆ ಕಾಗೆಯ ತತ್ತಿಯಲ್ಲಿ? ಅದು ಸಾಕದೇ ತನ್ನ ಶಿಸುವೆಂದು? ಮನ ಬುದ್ಧಿಯಿಂದ ಇಕ್ಕಿದಡೇನೋ? ದೇವಪಿಂಡವ ತಂದು ಮಾನವ ಯೋನಿಯಲ್ಲಿ ಹುಟ್ಟಿದಡೇನೋ? ಲಿಂಗಶರಣನು ನರಯೋನಿಯಲ್ಲಿ ಬಂದಡೇನೋ? ಇದುಕಾರಣ ಮಹಾಲಿಂಗ ಕಲ್ಲೇ ಶ್ವರಾ ಕಾಗೆಗೆ ಪಿಕ ಶಿಶುವೇ?

೩೮. ಭಕ್ತದೇಹಿಕ ದೇವನೆಂದಂಜದ ಮನವದೇನಪ್ಪುದೋ? ಭಯವಿಲ್ಲದ ಭಕ್ತಿ, ನಯವಿಲ್ಲದ ಸಸಿ, ಗುಣವಿಲ್ಲದ ನಂಟ, ಮುಂದೇ ನಪ್ಪುದೋ? ಬಲ್ಲಹರಿಗೆ ಬಲ್ಲಹನು, ಬಿನ್ನಾಣಿಗೆ ಬಿನ್ನಾಣಿ ಮಹಾಲಿಂಗ ಕಲ್ಲೇಶ್ವರನನೊಲಿಸಬಾರದು.

೩೯. ದಾನಿಯಾದಡೇನು? ಅವನ ಬೇಡಿದಲ್ಲದರಿಯಬಾರದು. ರಣರಂಗಧೀರನಾದಡೇನು? ಅಲಗಲಗು ಹಳಚಿದಲ್ಲದರಿಯಬಾರದು. ಸ್ನೇಹವಾದಡೇನು? ಅಗಲದಲ್ಲದರಿಯಬಾರದು. ಹೇಮಜಾತಿಯಾದ ಡೇನು? ಒರೆದಲ್ಲದರಿಯಬಾರದು. ಮಹಾಲಿಂಗ ಕಲ್ಲೇಶ್ವರನ ಘನವನರಿ ದಿಹೆನೆಂದಡೆ ಸಂಸಾರಸಾಗರವ ದಾಂಟಿದಲ್ಲದರಿಯಬಾರದು.

೪೦. ಅರಿವ ಬೈಚಿಟ್ಟುಕೊಂಡು ಮರೆಯ ಮಾನವನಂತೆ ಕುರು ಹಿನ ಹೆಸರಲ್ಲಿ ಕರೆದರೆ, ಓ ಎನುತಿಪ್ಪವರು ನರರೇ ಅಯ್ಯಾ ನಿಮ್ಮ ಶರಣರು? ಕುರುಹಿಲ್ಲ ಲಿಂಗಕ್ಕೆ. ತೆರಹಿಲ್ಲ ಶರಣಂಗೆ. ಬರಿಯ ಸಂಸಾರವ ಬಳಸಿಯೂ ಬಳಸದಂತಿಪ್ಪರು ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಶರಣರು.

---

## ವಿವರಣೆ

ಪ್ರಾಣಲಿಂಗಿಯ ತರುವಾಯ ಶರಣ ಸ್ಥಲವು ಇರುತ್ತದೆ. ಈ ಸ್ಥಲದಲ್ಲಿ ಮನುಷ್ಯನ ಎಲ್ಲ ಶರೀರಗಳು ವಿಕಾಸಹೊಂದುತ್ತವೆ. ಈ ರೀತಿಯನ್ನು ವಚನಕಾರರು ಈ ಸ್ಥಳದಲ್ಲಿ ವರ್ಣಿಸುವದುಂಟು.

ಶರಣನು ತನ್ನ ಎಲ್ಲ ಕರ್ಮಗಳನ್ನು ಕಳೆದುಕೊಂಡು ಪರಮಾತ್ಮನಲ್ಲಿ ಪರಿಣಾಮಿಯಾಗಿರುತ್ತಾನೆ. ಅವನು ಪೂರ್ಣತೆಯನ್ನು ಹೊಂದಿರುತ್ತಾನೆ. ಆದುದರಿಂದ ಅವನ ಎಲ್ಲ ಗುಣಗಳು ಪ್ರಫುಲ್ಲಿತವಾಗುತ್ತವೆ. ಪಕ್ವಕ್ಕೆ ಬಂದ ಪುಷ್ಪವು ಸುವಾಸಿತವಾಗುತ್ತದೆ. ಸಾಗರವು ತುಂಬಿದಲ್ಲಿ ಅದರಲ್ಲಿ ನೊರೆತೆರೆಗಳಾಡುವವು. ಈ ಸ್ಥಿತಿಯನ್ನು ಹೊಂದಿದ ಶರಣನು ಕೀಳುತೆರದ ಸ್ಥಿತಿಯನ್ನು ಬಯಸನು. (೩೬)

ಈ ತೆರದ ಶರಣನು ಮಾನವ ಜನ್ಮದಲ್ಲಿ ಹುಟ್ಟಿದರೂ ಮಾನವನೆಂದೆನಿಸಿಕೊಳ್ಳುವದಿಲ್ಲ. ಕೋಗಿಲೆಯು ತನ್ನ ತತ್ತಿಗಳನ್ನು ಕಾಗೆಯ ಗೂಡಿನಲ್ಲಿ ಹಾಕಿ ತನ್ನ ಮರಿಯನ್ನು ಕಾಗೆಯಿಂದ ರಕ್ಷಿಸಿಕೊಂಡರೂ ಆ ಕೋಗಿಲೆಯು ಕಾಗೆಯಾಗಲಾರದು. ಹಾಗೆಯೇ ಶರಣನು ಮಾನವ ಜನ್ಮದಲ್ಲಿ ಪೋಷಿಸಿಕೊಂಡರೂ ಅವನು ಶರಣನೇ ಹೊರ್ತು ಮಾನವನಲ್ಲ. (೩೭)

ಇಂಥ ಶರಣನು ಭಕ್ತದೇಹಿಕದೇವನಾಗಿರುತ್ತಾನೆ. ಅವನು ಬಲ್ಲಹರಿಗೆ ಬಲ್ಲಹನು, ವಿಜ್ಞಾನಿಗಳಿಗೆ ವಿಜ್ಞಾನಿಯಾಗಿರುತ್ತಾನೆ. (೩೮)

ಇಂಥ ಶರಣನು ಭವಸಾಗರವನ್ನು ನಿಜವಾಗಿ ದಾಂಟುವನು. (೩೯)

ಶರಣರು ಸಂಸಾರದಲ್ಲಿದ್ದರೂ, ಅದರ ಸೋಂಕು ಹತ್ತಿಕೊಳ್ಳದೆ ಜೀವಿಸುತ್ತಾರೆ. (೪೦)

---

# ಐಕ್ಯ.

## ವಚನಗಳು.

೪೧. ಬಾಲಕಿ ಹಾಲ ಸವಿದಂತೆ, ಮರುಳಿನ ಮನದ ನೆನಹಿನಂತೆ, ಮೂಗ ಕಂಡ ಕನಸಿನಂತೆ, ವೈಯ್ಯಾರಿಯದ ನೆಳಲಿನಂತೆ, ಬಂಜೆಯ ಮನದ ಸ್ನೇಹದಂತೆ, ಮಹಾಲಿಂಗಕಲ್ಲೇಶ್ವರನಲ್ಲಿ ಎನಗೆ ಲಿಂಗೈಕ್ಯವು.

೪೨. ಕಲ್ಲೊಳಗಣ ಕಿಚ್ಚುರಿಯದ ಪರಿಯಂತೆನ್ನನು. ಬೀಜದೊಳಗಣ ವೃಕ್ಷ ಉರಿಯದ ಪರಿಯಂತೆನ್ನನು. ಪುಷ್ಪದ ಕಂಪು ನನೆಯಲ್ಲಿ ತೋರದ ಪರಿಯಂತೆನ್ನನು. ಚಂದ್ರಕಾಂತದ ಉದಕ ಒಸರದ ಪರಿಯಂತೆನ್ನನು. ಎನ್ನ ಮಹಾಲಿಂಗಕಲ್ಲೇಶ್ವರಲಿಂಗ ಲಿಂಗಯ್ಯ ಇಹವೆನ್ನ, ಪರವೆನ್ನ, ತಾನೆನ್ನ, ಸಹಜವೆನ್ನ.

೪೩. ಕರ್ಪುರದ ಕಳ್ಳನ ಹುಲ್ಲಿನಲ್ಲಿ ಕಟ್ಟಿರಲು, ಅಗ್ನಿ ಎಂಬ ಹಿತವು ಬಂದು ಬಿಡಿಸಲು ಪಾಶ ಬೆಂದು ಕಳ್ಳ ತನ್ನಲ್ಲಿಯೇ ಅಡಗಿದನು. ಬಯಲ ಶರಣನ ಬಯಲಪಾಶ ಬಂದು ಕಟ್ಟಿರಲು, ಬಯಲ ಲಿಂಗ ಬಂದು ಬಿಡಿಸಲು ಬಯಲು ಬಯಲೇಕವಾಯಿತ್ತು. ಮಹಾಲಿಂಗ ಕಲ್ಲೇಶ್ವರನೆಂಬ ಸಂಪತ್ತು ಸದಾ ಶೂನ್ಯವಾಯಿತ್ತು.

---

## ವಿವರಣೆ

ಇದರಲ್ಲಿ ವಚನಗಳಲ್ಲಿಯ ಐಕ್ಯಸ್ಥಿತಿಯ ವರ್ಣನೆಯನ್ನು ವಚನಕಾರನು ಮಾಡಿದ್ದಾನೆ.

ಲಿಂಗೈಕ್ಯದ ಸ್ಥಿತಿಯನ್ನು ಹೇಳಲಿಕ್ಕೆ ಬರಲಾರದು. ಅದನ್ನು ಅಂತರಂಗದಲ್ಲಿಯೇ ಅನುಭವಿಸಿ ಆನಂದಿಸತಕ್ಕದ್ದು. (೪೧)

ಲಿಂಗೈಕ್ಯವು ಇಹದಲ್ಲಿರುವ ಎಲ್ಲ ವಸ್ತುಗಳನ್ನು ಮೀರಿದ್ದಿರುತ್ತದೆ. ಅದು ವಾಚಾತೀತವಾಗಿರುತ್ತದೆ. (೪೨)

ಲಿಂಗೈಕ್ಯವು ಬಯಲು. ಇಲ್ಲಿ ಬಯಲು ಲಿಂಗ ಬಂದು ಮಾನವ ಜನ್ಮವನ್ನು ಬಿಡಿಸಲು ಆ ಬಯಲು ಬಯಲು ಏಕವಾಗುತ್ತವೆ. ಇದು ಶೂನ್ಯಸ್ಥಿತಿಯು. (೪೩)

---

# ಆಚಾರಗಳು.

ವೀರಶೈವರಲ್ಲಿ ಅಷ್ಟಾವರಣಗಳನ್ನುದ್ದೇಶಿಸಿ ಆಚಾರಗಳು ಕಲ್ಪಿಸಲ್ಪಟ್ಟಿರುತ್ತವೆ. ಅಷ್ಟಾವರಣಗಳ ಸಂಬಂಧವಾಗಿ ನಮಗೆ ದೊರೆತ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಅವುಗಳನ್ನು ನಾವು ಇಲ್ಲಿ ಕೊಟ್ಟಿದ್ದೇವೆ.

## ಗುರು.

೪೪. ಕುಲಹೀನ ಶಿಷ್ಯಂಗೆ ಅನುಗ್ರಹವ ಕೊಟ್ಟು ತನ್ನ ಪ್ರಾಣಲಿಂಗವ ನಿಕ್ಷೇಪಿಸಿ ಕರ್ಣಮಂತ್ರವ ಹೇಳಿ ಆ ಶ್ರೀಗುರು ಬಂದು ಆ ಶಿಷ್ಯನ ಮನೆಯ ಹೊಗಲೊಲ್ಲದೆ ಅಕ್ಕಿ ತುಪ್ಪವನೀಸಿಕೊಂಡುಂಬ ಭವಗೇಡಿಗಿನ್ನೇವೆನಯ್ಯಾ? ತನ್ನ ಪ್ರಾಣಲಿಂಗವನವರಿಗೆ ಕೊಟ್ಟು ತಾ ಹೊಗಲೊಲ್ಲೆನೆಂಬ ವ್ರತಗೇಡಿಗಿನ್ನೇವೆನಯ್ಯ? ಅವನ ಧನಕ್ಕೆ ತಂದೆಯಾದನಲ್ಲದೆ ಅವನ ಕುಲಕ್ಕೆ ತಂದೆಯಲ್ಲ. ಇದು ಕಾರಣ ಮಹಾಲಿಂಗ ಕಲ್ಲೇಶ್ವರ ಲಿಂಗವ ಮಾರಿಕೊಂಡುಂಬ ಭಂಗಗಾರರು ಕೆಟ್ಟ ಕೇಡನೇನೆಂಬೆನಯ್ಯಾ?

೪೫. ಸದ್ಗುರುಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ, ಹಸ್ತಮಸ್ತಕ ಸಂಯೋಗದ ಕಾಲದಲ್ಲಿ ಪಂಚಕಲಶದ ಉದಕದಲ್ಲಿ ನಿರ್ಮಲವಾಗಿ ಲಿಂಗವ ಗ್ರಹಿಸಿದಲ್ಲಿ, ಲಿಂಗಕ್ಕೆ ಮಜ್ಜನಕ್ಕೆರೆಯ ತೊಡಗಿ ಮಜ್ಜನೋದಕವನರಿದೆನು. ಲಿಂಗ ಸ್ಪರ್ಶನದಿಂದ ಪಾದೋದಕವನರಿದೆನು. ಲಿಂಗಾರ್ಪಿತ ಭೋಗೋಪಭೋಗದಲ್ಲಿ ಪ್ರಸಾದೋದಕವನರಿದೆನು. ಮಜ್ಜನೋದಕ ಭೋಜನೋದಕ ಅಭಿಷೇಕದಿಂದ ಪಾದೋದಕ ಇಂತೀ ತ್ರಿವಿಧೋದಕವನರಿವುದು. ಅನ್ಯೋದಕಮಂ ಮರೆದು ನಿಮ್ಮಲ್ಲಿ ತದ್ಗತನಾದೆನಯ್ಯಾ ಮಹಾಲಿಂಗ ಕಲ್ಲೇಶ್ವರಾ.

---

## ಲಿಂಗ.

೪೬. ಪೂರ್ವಜಾತವ ಕಳೆದು ಪುನರ್ಜಾತನಾದ ಬಳಿಕ ಏನೆಂದೆನಲುಂಟು? ಭಕ್ತಕಾಯ ಮಮಕಾಯವಾದ ಬಳಿಕ ಏನೆಂದೆನಲುಂಟು? 'ನ ಮುಕ್ತಶ್ಚ ನ ಧರ್ಮಶ್ಚ ನ ಪುಣ್ಯಂ ಚ ನ ಪಾಪ ನ ಕರ್ಮಾಪಿ ನ ಜನ್ಮ ಚ ಗುರೂಭಾವ ನಿರೀಕ್ಷಣಾತ್' ಎಂದುದಾಗಿ ಇದು ಕಾರಣ ಹಮ್ಮು ಬಿಮ್ಮು ಸೊಮ್ಮಳಿದ ಮಹಾಲಿಂಗ ಕಲ್ಲೇಶ್ವರ ತಾನಾದ ಬಳಿಕ ಏನೆಂದೆನಲುಂಟು?

೪೭. ವೇದವನೋದಿದಡೇನು? ಶಾಸ್ತ್ರ ಪುರಾಣಾಗಮಂಗಳ ಕೇಳಿದಡೇನು? ಗುರು ಕಾರುಣ್ಯವಿಲ್ಲದವನು ಲಿಂಗವ ಮುಟ್ಟಿ ಪೂಜಿಸಲಾಗದು. ಜಪ ಧ್ಯಾನ ವಿಭೂತಿ ರುದ್ರಾಕ್ಷಿಯ ಧರಿಸಿದಡೇನು? ಗುರೂಪದೇಶವಿಲ್ಲದೆ ಲಿಂಗವ ಪೂಜಿಸಿದಡೆ ಅವನು ಪಂಚಮಹಾ ಪಾತಕನು. ಅವನ ಮುಖವ ನೋಡಲಾಗದು. ಇದನರಿದು ಗುರುಕರುಣವಿಡಿದು ಮಾಡುವ ಪೂಜೆಯೇ ಶಿವಂಗೆ ಪ್ರೀತಿ. ಇದನರಿಯದೆ ಗುರುಕರುಣವಿಲ್ಲದೆ ಶಿವಲಿಂಗ ಪೂಜೆಯ ಮಾಡಿದಡೆ ಅಘೋರ ನರಕ ತಪ್ಪದು ಮಹಾಲಿಂಗ ಕಲ್ಲೇಶ್ವರಾ.

೪೮. ಪರಮ ಪವಿತ್ರ ನಿರ್ಮಲ ಲಿಂಗ ತನ್ನಂಗದ ಮೇಲಿರುತಿರಲು, ಅಂಗ ಶುದ್ಧ ಸೌಕರ್ಯವಿಲ್ಲದವನ ಮುಖವ ನೋಡಲಾಗದು. ಅವನ ಮುಟ್ಟಲಂತೂ ಆಗದು. ಮನದ ಮಲಿನವ ಕಳೆದು, ಪ್ರಾಣಲಿಂಗವ ಧರಿಸಬೇಕು. ತನುವಿನ ಮಲವ ಕಳೆದು ಇಷ್ಟಲಿಂಗವ ಧರಿಸಬೇಕು. ಜೀವತ್ರಯಂಗಳ ಮಲವ ಕಳೆದು ಪ್ರಸಾದವ ಧರಿಸಬೇಕು ಮನದ ಮಲಿನವಾವುದೆಂದಡೆ, ಮನವ್ಯಾಕುಲ. ತನುವಿನ ಮಲಿನವಾವುದೆಂದಡೆ, ತನುಗುಣವ್ಯಾಪ್ತಿ. ತನುತ್ರಯದ ಮಲಿನವಾವುದೆಂದಡೆ ಈಷಣತ್ರಯ. ಜೀವತ್ರಯದ ಮಲಿನವಾವುದೆಂದಡೆ ಅವಸ್ಥಾತ್ರಯ. ಕರಣಂಗಳ ಮಲವಾವುದೆಂದಡೆ ಸಂಕಲ್ಪವಿಕಲ್ಪ ಅಸತ್ಯ, ನಿಂದೆ, ಮಿಥ್ಯಾವಾದ, ತಸ್ಕರಿಸುವ, ಅನ್ಯರಿಗೆ ಕೈಯಾನುವ. ॥ಶ್ಲೋಕ॥ 'ನಿರ್ಮಲಸ್ಯಾತ್ಮ ನೈರ್ಮಲ್ಯಂ ಚ ಮಲದೇಹೀ ನ ಧಾರಯೇತ್' ಎಂದುದಾಗಿ ಲಿಂಗ ವಿಪ್ಪ ಸುಕ್ಷೇತ್ರ ಕಾಯದ ಮಲಿನವ ಕಳೆದು ಪ್ರಸಾದವ ಧರಿಸದಿರ್ದಡೆ ಭವಮಾಲೆ ಹಿಂಗದು. ನರಕ ತಪ್ಪದಯ್ಯಾ ಮಹಾಲಿಂಗ ಕಲ್ಲೇಶ್ವರಾ.

೪೯. ಒಳಗೆ ಶೋಧಿಸಿ ಹೊರಗಳವಡಿಸಿ ಭಾವದಿಂದ ಗುಡಿ ತೋರಣವ ಕಟ್ಟುವೆನಯ್ಯಾ. ಎನ್ನ ಲಿಂಗವೇ ಬಾರಯ್ಯಾ! ಎನ್ನ ದೇವ ಬಾರಯ್ಯಾ! ಎನ್ನಂತರಂಗದ ಪರಂಜ್ಯೋತಿಲಿಂಗವನಿದಿರುಗೊಂಬೆನು ಬಾರಯ್ಯಾ. ಮಹಾಲಿಂಗ ಕಲ್ಲೇಶ್ವರ ನಿಮ್ಮ ಧರ್ಮವು, ಬಾರಯ್ಯಾ.

---

## ಲಿಂಗ ಜಂಗಮ.

೫೦. ಎಡದ ಕೈಯ್ಯಲಿ ನಿಗಳವನಿಕ್ಕಿ, ಬಲದ ಕೈಯ್ಯ ಕಡಿದುಕೊಂಡರೆ, ನೋವು ನಿಮ್ಮದಲ್ಲ! ಲಿಂಗ ಪ್ರಾಣದಂತಿಪ್ಪವು ಲಿಂಗಜಂಗಮ. ಲಿಂಗದಲ್ಲಿ ಪೂಜೆಯ ಮಾಡಿ, ಜಂಗಮದಲ್ಲಿ ನಿಂದೆಯ ಮಾಡಿದರೆ, ನಿಮ್ಮ ಮುಂದೆ ನಾಯಕನರಕದಲ್ಲಿಕ್ಕುವ ನಮ್ಮ ಮಹಾಲಿಂಗಕಲ್ಲೇಶ್ವರನು.

೫೧. ಗುರುಕರುಣಾಮೃತವಿಲ್ಲದ ಭಕ್ತಿಯನು ಮನದಲನುಕರಿಸುವ ಜೀವಿಗಿನ್ನೆಲ್ಲಿಯದೋ ಸತ್ಕ್ರಿಯೆ? ಸತ್ಪಥವೆಲ್ಲಿಯದೊ? ಇದು ಕಾರಣ ಮಹಾಲಿಂಗಕಲ್ಲೇಶ್ವರದೇವ ಲಿಂಗಜಂಗಮದ ಕರುಣವಿಲ್ಲದ ಜಡಮತಿಗಿನ್ನೆಲ್ಲಿಯದೋ?

---

## ಲಿಂಗ ಜಂಗಮ ಪ್ರಸಾದ.

೫೨. ನಿಃಕಲ ಪರತತ್ವವೇ ಮಹಾಲಿಂಗಕ್ಷೇತ್ರ. ಆ ಕ್ಷೇತ್ರದಲ್ಲಿ ನಿಕ್ಷೇಪವಾಗಿಹ ಸಿದ್ಧಿ ಘನ ಚೈತನ್ಯ ಷಟ್‌ಸ್ಥಲಲಿಂಗಮೂಲಾಂಕುರವೆನಿಸುವ ಪರಮ ಕಳೆ. ಆ ಪರಮಕಳೆಯೇ ಪರಬ್ರಹ್ಮ, ಪರಂಜ್ಯೋತಿ, ಪರಾತ್ಪರ, ಪರತತ್ವ, ಪರಮಾತ್ಮ, ಪರಮಜ್ಞಾನ, ಪರಮಚೈತನ್ಯ, ನಿಃಕಲಚರವೆನಿಸುವ ಪರವಸ್ತು. ಶೃತಿ 'ವರ್ಣಾತೀತಂ ಮನೋತೀತಂ ಭಾವಾತೀತಂ ಚ ತತ್ಪರಂ ಜ್ಞಾನಾತೀತ ನಿರಂಜನಂ ತತ್ಕಲಾಸೂಕ್ಷ್ಮಭಾವತಃ' ಇಂತೆಂದುದಾಗಿ, ಇಂತೀ ನಿರವಯ ಚರಲಿಂಗದ ಚೈತನ್ಯವೆಂಬ ಪ್ರಸನ್ನಪ್ರಸಾದಮಂ ಇಷ್ಟಲಿಂಗಕ್ಕೆ ಕಲಾಸಾನ್ನಿಧ್ಯವಂ ಮಾಡಿ, ಆಚಾರಲಿಂಗದ ಸಾಮರಸ್ಯ ಚರಣಾಂಬುವಿಂ ಮಜ್ಜನಕ್ಕೆರೆದು ನಿಜಲಿಂಗೈಕ್ಯವನೈದಲರಿಯದೆ, ಕಂಡವರ ಕಂಡು ತೀರ್ಥದಲ್ಲಿ ಮಂಡೆಯ ಬೋಳಿಸಿಕೊಂಡವರ ತೆರನಾದ ಭಂಡರ ಮೆಚ್ಚುವನೇ ಮಹಾಲಿಂಗಕಲ್ಲೇಶ್ವರಾ ನಿಮ್ಮ ಶರಣ?

೫೩. ಲಿಂಗನಿಷ್ಠೆ ಇಲ್ಲದವರ ಅಂಗಣವ ಮೆಟ್ಟಲಾಗದು. ಜಂಗಮ ನಿಷ್ಠೆ ಇಲ್ಲದವರ ಸಂಗವ ಮಾಡಲಾಗದು. ಪ್ರಸಾದನಿಷ್ಠೆ ಇಲ್ಲದವರ ಸಹಪಂಙ್ತಿಯಲ್ಲುಣಲಾಗದು. ಲಿಂಗ ಮುಖಕ್ಕೆ ಬಾರದ ರುಚಿ ಕಿಲ್ಬಿಷ ನೋಡಾ ಮುಟ್ಟಲಾಗದು ಮಹಾಲಿಂಗಕಲ್ಲೇಶ್ವನೊಲಿಸುವ ಶರಣಂಗೆ.

---

## ಗುರುಲಿಂಗ ಜಂಗಮ.

೫೪. ಜಂಗಮದ ಪಾದೋದಕವ ಲಿಂಗಕ್ಕೆ ಮಜ್ಜನಕ್ಕೆರೆದು, ಆ ಜಂಗಮದ ಪ್ರಸಾದವನೆ ಲಿಂಗಕ್ಕೆ ಅರ್ಪಿಸುವ ಅವಿವೇಕಿಗಳು ನೀವು ಕೇಳಿರೇ. ಅಟ್ಟೋಗರವನಟ್ಟೆನೆಂಬ, ಕಾಷ್ಠವ ಸುಟ್ಟು ಬೂದಿಯ ಮರಳಿ ಸುಟ್ಟೆಹೆನೆಂಬ, ಭ್ರಮಿತರು ನೀವು ಕೇಳಿರೇ. ಪದಾರ್ಥ ಪ್ರಸಾದ ವಾದುದು, ಇಷ್ಟಲಿಂಗ ಮುಖದಿಂದ. ಆ ಇಷ್ಟಲಿಂಗವ ಸೋಂಕಿ ಬಂದಾದಿ ಪ್ರಸಾದವೇ ಪ್ರಾಣಲಿಂಗಕ್ಕೆ ಅಂತ್ಯ ಪ್ರಸಾದ. ಆ ಪ್ರಾಣಲಿಂಗ ಮುಖದಲೊದಗಿದ ಅಂತ್ಯ ಪ್ರಸಾದವೇ ಭಾವಲಿಂಗಕ್ಕೆ ತೃಪ್ತಿ ಮುಖ ದಲ್ಲಿ ಸೇವ್ಯಪ್ರಸಾದ. ಇಂತೀ ಆದಿ ಪ್ರಸಾದ, ಅಂತ್ಯ ಪ್ರಸಾದ, ಸೇವ್ಯ ಪ್ರಸಾದ ಗ್ರಾಹಕವೇ ಜಂಗಮ. ಇಷ್ಟಲಿಂಗವಿಡಿದು ಗುರು, ಇಷ್ಟಲಿಂಗ ವಿಡಿದು ಭಕ್ತ, ಇಷ್ಟಲಿಂಗವಿಡಿದು ಜಂಗಮ. ಇಷ್ಟಲಿಂಗಕ್ಕೆ ಅಷ್ಟವಿಧಾ ರ್ಚನೆ ಷೋಡಶೋಪಚಾರವ ಮಾಡಿ ಪ್ರಸನ್ನ ಪ್ರಸಾದವ ಪಡೆದು ಅಷ್ಟಭೋಗವ ಭೋಗಿಸುವಾತನೇ ಗುರು. ಇಂತೀ ಆದಿಕುಳ ಮಹಾ ನಂದ ಪ್ರಸಾದದ ನಿಜಾನುಭಾವಿಯೇ ಜಂಗಮ. ಇಂತೀ ಗುರುಲಿಂಗ ಜಂಗಮದಲ್ಲಿ ಭಕ್ತಿ ನೆಲೆಗೊಂಡ ನಿರುಪಾಧಿಕನೇ ಭಕ್ತ. ಆ ಭಕ್ತನು ಲಿಂಗಮುಖದಲ್ಲಿ ಶುದ್ಧಪ್ರಸಾದವ ಪಡೆದು ಭೋಗಿಸುವುದು. ಜಂಗಮ ಮುಖದಲ್ಲಿ ಸಿದ್ಧಪ್ರಸಾದವ ಪಡೆದು ಭೋಗಿಸುವುದು. ಗುರು ಮುಖ ದಲ್ಲಿ ಪ್ರಸಿದ್ಧ ಪ್ರಸಾದವ ಪಡೆದು ಭೋಗಿಸುವುದು. ಸ್ವಚ್ಛಂದ ಲಲಿತ ಭೈರವಿಯಲ್ಲಿ 'ಲಿಂಗಾರ್ಪಿತ ಪ್ರಸಾದಂಚ ದದ್ಯೋ ಜಂಗಮಾದಿಷು ಜಂಗಮಸ್ಯ ಪ್ರಸಾದಂ ಚ ನ ದದ್ಯಾತ್ ಲಿಂಗಮೂರ್ತಿಷು ಜಂಗಮಸ್ಯ ಪ್ರಸಾದಂ ಚ ಸ್ವೇಷ್ಟ ಲಿಂಗೇನ ಚಾರ್ಪಯೇತ್। ಪ್ರಸಾದಾದರ್ಪಿತಂ ಚೈವ. ಪ್ರಸಾದೊ ನಿಷ್ಫಲೋಭವೇತ್' ಇಂತೆಂದುದಾಗಿ ಅಂದಾದಿ ಇಂದಾ

ದಿಯಾಗಿ ಎಂಬೆಂದು ಇದೇ ಪ್ರಸಾದದಾದಿಕುಳ. ಈ ಆದಿಕುಳವರಿವು ವಿಡಿದು ಪ್ರಸಾದವಿಡಿವ ಮಹಾಪ್ರಸಾದ ಸಾಧ್ಯ ಗ್ರಾಹಕರಿಗೆ ನಮೋ ನಮೋ ಎಂಬೆ. ಉಳಿದ ಉದ್ದೇಶಿಗಳೆನಿಸುವ ಭ್ರಾಂತರು ಜಾತ್ಯಂಧಕರಿಗೆ ನಾನಂಜುವೆನಯ್ಯಾ ಮಹಾಲಿಂಗ ಕಲ್ಲೇಶ್ವರಾ.

೫೫. ಗುರುಲಿಂಗ ಜಂಗಮಕ್ಕೆ ಅರ್ಥಪ್ರಾಣಾಭಿಮಾನವಂ ಕೊಟ್ಟು, ಅಹಂಕಾರವಳಿದಿಹಂತಹ ಪ್ರಮಥ ಗಣಂಗಳು, ಇಂದೆನ್ನ ಮನೆಗೆ ಬಂದಿಹರೆಂದು ಗುಡಿ ತೋರಣವ ಕಟ್ಟಿ ಷಟ್ಸಮ್ಮಾರ್ಜನೆಯಂ ಮಾಡಿ ರಂಗವಲ್ಲಿಯನಿಕ್ಕಿ ಉಘೇ ಚಾಂಗು, ಭಲಾ, ಎಂಬೆನು. ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಪುರಾತನರು ತಮ್ಮ ಒಕ್ಕುದನಿಕ್ಕಿ ಸಲುಹುವರಾಗಿ.

---

## ರುದ್ರಾಕ್ಷಿ.

೫೬. ಅಯ್ಯ ರುದ್ರಾಕ್ಷಿಯಿಂದ ಇರವ ಕಂಡೆ. ಅಯ್ಯ ರುದ್ರಾಕ್ಷಿಯಿಂದ ಪರವ ಕಂಡೆ. ಅಯ್ಯ ರುದ್ರಾಕ್ಷಿಯಿಂದ ಗತಿಯ ಕಂಡೆ. ಅಯ್ಯ ರುದ್ರಾಕ್ಷಿಯಿಂದ ಮತಿಯ ಕಂಡೆ. ಅಯ್ಯ ರುದ್ರಾಕ್ಷಿಯಿಂದ ಮೋಕ್ಷವ ಕಂಡೆ. ಅಯ್ಯ ಬದುಕಿದೆ ಬದುಕಿದೆನಯ್ಯ! ಅಯ್ಯ ಇನ್ನು ಭವಂ ನಾಸ್ತಿಯಾಯಿತ್ತೆನಗೆ. ಅಯ್ಯ ಮಹಾಲಿಂಗಕಲ್ಲೇಶ್ವರ ನಿಮ್ಮ ಮಹಾಶ್ರೀ ರುದ್ರಾಕ್ಷಿಯಿಂದ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ ಮಹಾಗೂಢವಾಗಿಪ್ಪ ನಿಮ್ಮ ದಿವ್ಯಮೂರ್ತಿಯ ಹೆಂಪನು.

೫೭. ಶ್ರೀರುದ್ರಾಕ್ಷಿಯ ಹಸ್ತ ತೋಳು ಉರ ಕಂಠ ಮೊದಲಾದ ಸ್ಥಾನಂಗಳಲ್ಲಿ ಧರಿಸಿ ಶಿವಾರ್ಚನೆಯ ಮಾಡುವುದೀಗ ಸದಾಚಾರ. ಅದೇ ಸದ್ಭಕ್ತಿ. ಅದುಕಾರಣ ಆ ಮಹಾರುದ್ರಾಕ್ಷಿಯ ಧರಿಸಿ ಎನ್ನ ಭವ ನಾಸ್ತಿಯಾಯಿತ್ತು. ಮಹಾಲಿಂಗಕಲ್ಲೇಶ್ವರಾ ರುದ್ರಾಕ್ಷಿಯಿಂದ ಕೃತಾರ್ಥನಾದೆನು.

---

## ಪಾದೋದಕ.

೫೮. ಶ್ರೀಗುರು ಸ್ವಾಮಿ ಶಿಷ್ಯಂಗೆ ಅನುಗ್ರಹವ ಮಾಡುವಲ್ಲಿ ಹಸ್ತ ಮಸ್ತಕಸಂಯೋಗ ಮಾಡುವ ಕಾಲದಲ್ಲಿ ಪಂಚ ಕಳಸದ ನಿರ್ಮಲ ಜಲವ ತನ್ನ ಕರುಣ ಜಲವ ಮಾಡಿ ಆತನ ಜನ್ಮದ ವೈಲಿಗೆಯು ಕಳೆಯಲು ತಾನು ನಿರ್ಮಲನಾಗಿ ಲಿಂಗವ ಗ್ರಹಿಸಿದಲ್ಲಿ ಲಿಂಗಕ್ಕೆ ಮಜ್ಜನ ಎರೆಯುತೊಡಗಿ ಮಜ್ಜನೋದಕವನರಿದೆ. ಲಿಂಗ ಸ್ಪರ್ಶನದಿಂದ ಪಾದೋದಕವನರಿದೆ. ಲಿಂಗಾರ್ಪಿತ ಭೋಗೋಪಭೋಗದಲ್ಲಿ ಅರ್ಪಿತ ಪ್ರಸಾದವನರಿದೆ. ಅರಿದು ಅನ್ಯೋದಕವ ಮರೆದು ನಿಮ್ಮಲ್ಲಿ ತದ್ಗತನಾಗಿದ್ದೆನಯ್ಯ ಮಹಾಲಿಂಗ ಕಲ್ಲೇಶ್ವರಾ.

---

## ಗುರುಲಿಂಗ ಜಂಗಮದಿಂದ ಐಕ್ಯ.

೫೯. ಶರಣ ಸಂಬಂಧವನರಿದಾತಂಗೆ ಕುಲಛಲಮದವೆಂಬುದಿಲ್ಲ. ಲಿಂಗ ಸಂಬಂಧವನರಿದಾತಂಗೆ ಶೀಲ ಸಂಬಂಧವಿಲ್ಲ. ಪ್ರಸಾದ ಸಂಬಂಧವನರಿದಾತಂಗೆ ಇಹಪರವೆಂಬುದಿಲ್ಲ. ಇಂತೀ ತ್ರಿವಿಧ ಸಂಬಂಧವನರಿದಾತಂಗೆ ಮುಂದೇನು ಇಲ್ಲ, ಮಹಾಲಿಂಗ ಕಲ್ಲೇಶ್ವರ ನಿಮ್ಮ ಶರಣಂಗೆ.

೬೦. ತಾನಿಲ್ಲದ ಮುನ್ನವೇ ಗುರುವೆಲ್ಲಿಯುದೋ, ಲಿಂಗವೆಲ್ಲಿಯುದೋ, ಜಂಗಮವೆಲ್ಲಿಯುದೋ, ಪ್ರಸಾದವೆಲ್ಲಿಯುದೋ, ಪರವೆಲ್ಲಿಯುದೋ, ಸ್ವಯವೆಲ್ಲಿಯುದೋ? ತನಗೆ ತೋರಿದ ಗುರು, ತನಗೆ ತೋರಿದ ಲಿಂಗ, ತನಗೆ ತೋರಿದ ಜಂಗಮ, ತನಗೆ ತೋರಿದ ಪ್ರಸಾದ, ತನಗೆ ತೋರಿದ ಪರ, ತನಗೆ ತೋರಿದ ಸ್ವಯ, ಗುರುವೆಂದರಿದವನು ತಾನೇ, ಲಿಂಗವೆಂದರಿದವನು ತಾನೇ, ಜಂಗಮವೆಂದರಿದವನು ತಾನೇ, ಪ್ರಸಾದವೆಂದರಿದವನು ತಾನೇ, ಪರವೆಂದರಿದವನು ತಾನೇ, ಸ್ವಯವೆಂದರಿದವನು ತಾನೇ, ಇಂತಿವೆಲ್ಲವ ಹೆತ್ತರಿವು ತಾನೇ ಸ್ವಯಂಜ್ಯೋತಿ ಮಹಾಲಿಂಗ ಕಲ್ಲೇಶ್ವರಾ.

---

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

ರಾ॥ ಸಾ॥ **ಫ ಗು ಹಳಕಟ್ಟಿಯವರು** ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ

ಇವರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

---

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ **"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

R. N. B 2554

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೩ ]  ಜೂನ—ಜುಲೈ ೧೯೩೯.  [ ಸಂಚಿಕೆ ೯—೧೦

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೩]  ಜುಲೈ ೧೯೩೯  [ಸಂಚಿಕೆ ೧೦

## ಶಿಲಾಲೇಖಗಳಲ್ಲಿ ವೀರಶೈವ ಧರ್ಮದ ವಿವರಣೆ.

(ಲೇಖಕ:— ರಾ|| ಸಾ|| ಫ. ಗು. ಹಳಕಟ್ಟಿ ಬಿ ಎ. ಎಲ್ ಎಲ್. ಬಿ. ವಿಜಾಪುರ)

ಶಿಲಾಶಾಸನಗಳು ಸಾಮಾನ್ಯ ಜನರ ತಿಳುವಳಿಕೆಗಾಗಿ ಬರೆದವುಗಳಿರುತ್ತವೆ. ಎಲ್ಲರೂ ಅವುಗಳನ್ನು ನೋಡುವ ಉದ್ದಿಶ್ಯವಾಗಿಯೇ ಅವುಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಎಂದರೆ ಗುಡಿಗೋಪುರ, ಧರ್ಮಶಾಲೆ, ಅಗ್ರಹಾರ, ಮಠಮಂದಿರಗಳಲ್ಲಿ ಸ್ಥಾಪಿಸುವುದುಂಟು. ಆದುದರಿಂದ ಅವುಗಳಲ್ಲಿ ಸಮಾಜ ಸ್ಥಿತಿಯ ವಿಷಯವಾಗಿ ವಿವರಣೆಗಳಿದ್ದರೆ ಅವುಗಳು ಯಥಾರ್ಥವಾದವುಗಳೆಂದು ಭಾವಿಸಲು ಆವ ಪ್ರತ್ಯವಾಯುವೂ ಇರುವದಿಲ್ಲ.

ಅಶೋಕ ರಾಜನು ತನ್ನ ರಾಜ್ಯದಲ್ಲಿ ಅನೇಕ ಕಡೆಗೆ ಶಿಲಾಸ್ತಂಭಗಳನ್ನು ನೆಡಿಸಿ ಅವುಗಳ ಮೇಲೆ ಬೌದ್ಧಧರ್ಮದ ತತ್ವಗಳನ್ನು ಲಿಖಿಸಿದ್ದಾನೆ. ಅವುಗಳಿಂದ ಅವನು ಎಂತಹ ಧಾರ್ಮಿಕ ಬುದ್ಧಿಯುಳ್ಳವನೂ ಜನಹಿತೈಷಿಯೂ ಆಗಿದ್ದನೆಂಬುದು ವ್ಯಕ್ತವಾಗುತ್ತದೆ. ಹಾಗೆಯೇ ವೀರಶೈವರಾದರೂ ತಮ್ಮ ತತ್ವಗಳನ್ನು ಅಲ್ಲಲ್ಲಿ ಶಾಸನಗಳಲ್ಲಿ ಬರೆದಿಡಿಸಿದ್ದು ಕಂಡುಬರುತ್ತದೆ. ಪುರಾತನ ಶಿವಶರಣರು ಸಾಮಾನ್ಯ ಜನರಲ್ಲಿ ಧರ್ಮಜಾಗ್ರತಿಯನ್ನು ಮಾಡಲು ಪ್ರಯತ್ನಿಸಿದವರು. ಅವರು ಈ ರೀತಿ ಶಿಲಾಶಾಸನಗಳ ಮುಖಾಂತರ ತಮ್ಮ ಧರ್ಮತತ್ವಗಳನ್ನು ಜನ ಸಾಮಾನ್ಯರಲ್ಲಿ ಪ್ರಸಾರಪಡಿಸಲು ಯತ್ನಿಸಿದ್ದರೆ, ಅದರಲ್ಲೇನೂ ಆಶ್ಚರ್ಯವಿಲ್ಲ.

ಪ್ರಕೃತ ಕಾಲದಲ್ಲಿ ಅನೇಕ ಕಾರಣಗಳ ಮೂಲಕ ವೀರಶೈವ ತತ್ವಗಳ ನಿಜ ಸ್ವರೂಪು ಅಡಗಿ ಹೋಗಿರುತ್ತವೆ. ಮಧ್ಯಕಾಲದಲ್ಲಿ ಅನೇಕ

ಪುರಾಣಗಳೂ, ಕಾವ್ಯಗಳೂ ಹುಟ್ಟಿದವು. ಅವು ವೀರಶೈವ ಕವಿಗಳಿಂದ ರಚಿತವಾಗಿದ್ದರೂ ಕೂಡ, ಬಸವೇಶ್ವರನ ಕಾಲದಲ್ಲಿದ್ದ ವೀರಶೈವ ಧರ್ಮದ ನಿಜಸ್ವರೂಪವನ್ನು ತಿಳಿಯಲು ಅಷ್ಟು ಸಹಾಯಕಾರಿಯಾದವುಗಳಲ್ಲ. ವೀರಶೈವ ನಿಜತತ್ವಗಳು ವಚನ ವಾಙ್ಮಯದಲ್ಲಿ ಅತ್ಯಂತ ವೈಶಾಲ್ಯವನ್ನು ಹೊಂದಿ ಕಣ್ಣಿಗೆ ತೋರುತ್ತವೆ. ಈ ತತ್ವಗಳ ಸ್ವರೂಪು ಅವುಗಳಲ್ಲಿ ಬಹು ಸ್ಫುಟವಾಗಿ ದೃಷ್ಟಿಗೆ ಬೀಳುತ್ತಿದೆ. ಆದರೆ ಶಿಲಾಶಾಸನಗಳಲ್ಲಿ ನಿರೂಪಿತವಾದ ಸಂಗತಿಗಳನ್ನು ನಾವು ಲಕ್ಷಿಸಿದರೆ ಈ ವಿಷಯದ ಮೇಲೆ ಹೆಚ್ಚಿಗೆ ಪ್ರಕಾಶವು ಬೀಳುವಂತೆ ಇದೆ. ಈ ದೃಷ್ಟಿಯಿಂದ ಚೌಡದಾನಪುರ ಶಿಲಾಶಾಸನಗಳು ಬಹು ಮಹತ್ವವಾದವುಗಳಿರುತ್ತವೆ.

ಈ ಶಿಲಾಶಾಸನಗಳಿಂದ ಶಿವದೇವನೆಂಬ ಹೆಸರಿನ ಮಹಾನುಭಾವನು ಈ ಕಾಲದಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ್ದನೆಂದು ತಿಳಿದು ಬರುತ್ತದೆ. ಅವನು ೧೩ನೇ ಶತಮಾನದ ಮೊದಲಿನ ಅರ್ಧಭಾಗದಲ್ಲಿ ಅಂದರೆ ೧೨೩೬ರಿಂದ ೧೨೬೭ರ ವರೆಗೆ ಜೀವಿಸಿದ್ದನೆಂದು ಕಂಡು ಬರುತ್ತಿದೆ. ಆಗ ಅವನಿಗೆ ಗುತ್ತಲದಲ್ಲಿ ಆಳುತ್ತಿದ್ದ ಗುತ್ತರಸರು, ತೊರೆಗಲೆಯಲ್ಲಿದ್ದ ದೇವಗಿರಿ ಯಾದವರ ಮಾಂಡಲಿಕನೊಬ್ಬನು ಅವನ ಅನುಯಾಯಿಗಳಾಗಿದ್ದರು. ಇಷ್ಟೇ ಅಲ್ಲ, ಅವರು ಅವನಿಂದ ವೀರಶೈವ ದೀಕ್ಷೆಯನ್ನು ಸಹ ಹೊಂದಿದರೆಂದು ತಿಳಿದುಬರುತ್ತಿದೆ. ಇಂಥ ಶಿವದೇವನ ವಿಷಯವನ್ನು ಹೇಳುವಲ್ಲಿ ವೀರಶೈವ ಧಾರ್ಮಿಕ ವಿಚಾರಗಳನ್ನು ಕುರಿತು ಈ ಶಿಲಾಶಾಸನಗಳಲ್ಲಿ ವಿವೇಚನೆಗಳು ಬಂದಿವೆ. ಅವುಗಳನ್ನು ಪರಿಶೀಲಿಸಿದಲ್ಲಿ ವಚನಕಾರರು ವಿವರಿಸಿರುವ ತತ್ವಗಳು ಬಸವೇಶ್ವರನ ಕಾಲದಲ್ಲಿ ಚೆನ್ನಾಗಿ ರೂಢವಾಗಿದ್ದವೆಂಬುದು ನಿಶ್ಚಿತವಾಗುತ್ತದೆ. ಈ ಶಿಲಾಶಾಸನದಲ್ಲಿ ಹೇಳಿದ ತತ್ವಗಳಾವವೆಂಬುದನ್ನು ನಾನು ಈ ಲೇಖದಲ್ಲಿ ಉಲ್ಲೇಖಿಸುತ್ತೇನೆ. ಈ ಶಿಲಾಶಾಸನಗಳನ್ನು ಡಾ॥ ಎಸ್. ಸಿ ನಂದೀಮಠ ಎಮ್. ಎ. ಪಿ. ಎಚ್. ಡಿ. ಇವರು ಲಂಡನಿನಲ್ಲಿದ್ದಾಗ್ಗೆ ಅಲ್ಲಿಯ ಪುಸ್ತಕಾಲಯದಲ್ಲಿ ಕಂಡುಹಿಡಿದು ಅವುಗಳ ಬಗ್ಗೆ ವಿವೇಚನೆಯನ್ನು ಶಿವಾನುಭವ ಸಂಪುಟ ೪ ಸಂಚಿಕೆ ೨, ೩, ೪ ಇವುಗಳಲ್ಲಿ ಅವರು ಮಾಡಿರುತ್ತಾರೆ. ಅದರಲ್ಲಿ ಅವರು ಶಿಲಾಶಾಸನಗಳಲ್ಲಿಯ ಅವತರಣಗಳನ್ನು ಸವಿಸ್ತಾರವಾಗಿ ಕೊಟ್ಟಿರುತ್ತಾರೆ. ಅವುಗಳನ್ನು ಆಧಾರವಾಗಿಟ್ಟುಕೊಂಡು ನಾನು ಈ ಕೆಳಗಿನ ವೃತ್ತಾಂತವನ್ನು ಕೊಟ್ಟಿದ್ದೇನೆ.

ಈ ಶಿಲಾಶಾಸನಗಳಲ್ಲಿ ವೀರಶಿವದೇವನು "ಅನವರತ ಲಿಂಗಸಂಜ್ಞೆಯಂನನುಕರಿಸಿ" ಎಂದು ಹೇಳಲ್ಪಟ್ಟಿದ್ದಾನೆ. ಎಂದರೆ ಯಾವಾಗಲೂ ಲಿಂಗದ ಚಿನ್ಹವನ್ನು ಧರಿಸುವವನೆಂದು ಅವನ ಬಗ್ಗೆ ವಿವರಣೆ ಇದೆ. ಇದರಿಂದ ಅವನು ಲಿಂಗಧಾರಕನಾಗಿದ್ದನೆಂದು ತೋರುತ್ತದೆ. (ಶಿವಾನುಭವ ಪುಟ ೧೬೦). 'ಅನುಕರಿಸು' ಇದು ಧಾರಣೆಮಾಡು ಈ ಅರ್ಥದಲ್ಲಿ ಇಲ್ಲಿ ಅದರ ಉಪಯೋಗವಾಗಿರುತ್ತದೆ.

ಈ ಪ್ರಕಾರ ಶಿವದೇವನು ಲಿಂಗಧಾರಕನಾಗಿ ಇತರ ದೇವತೆಗಳ ಪೂಜೆಯನ್ನು ನಿರಾಕರಿಸುತ್ತಿದ್ದನೆಂದು ಇಲ್ಲಿ ಹೇಳಲ್ಪಟ್ಟಿದೆ. ಇದು ಕೆಳಗಿನ ಉಕ್ತಿಯಿಂದ ಕಂಡುಬರುತ್ತದೆ. "ಪರದೈವಮಾನ ಮರ್ದನ, ಪರದೈವ, ಕುಭೂಧರವಜ್ರ ಪಾತನೆನಿಪಂ ಹರಗಣತೇಜ ಪ್ರಭಾವದಿಂ ಶಿವದೇವಂ" ಎಂದು ಅವನು ಹೇಳಲ್ಪಟ್ಟಿದ್ದಾನೆ. ಎಂದರೆ ಪರದೈವಗಳನ್ನು ನಿರಾಕರಿಸುವವನು, ಪರದೈವ ಎಂಬ ವೃಕ್ಷಗಳಿಗೆ ಸಿಡಿಲಿನಂತಿದ್ದವನು ಎಂದು ವರ್ಣಿಸಲ್ಪಟ್ಟಿದ್ದಾನೆ. ವೀರಶೈವರು ಸದಾ ಲಿಂಗಧಾರಕರಾದ್ದರಿಂದ ಲಿಂಗವನ್ನು ತೊರೆದು ಇತರ ದೈವಗಳನ್ನು ಎಂದೂ ಪೂಜಿಸಬಾರದೆಂದು ಅವರ ಮುಖ್ಯ ತತ್ವವಾಗಿದೆ.

ಪುಟ ೧೬೨ನೇದರಲ್ಲಿ ವೀರಶೈವ ಧರ್ಮದ ಸಾಮಾನ್ಯ ಸ್ವರೂಪು ಹೇಳಲ್ಪಟ್ಟಿದೆ. ಇಂಥ ಧರ್ಮವನ್ನು ಜಗಕ್ಕೆ ತೋರಬೇಕೆಂದು ಶಿವನು ನಂದಿನಾಥನನ್ನು ಭೂಲೋಕಕ್ಕೆ ಕಳಿಸಿದನೆಂದು ಇಲ್ಲಿ ಹೇಳಿದೆ. ಈ ವೀರಶೈವ ಧರ್ಮವು ನಾಲ್ಕು ವೇದ, ಆರು ಶಾಸ್ತ್ರಗಳು, ಇಷ್ಟೇ ಅಲ್ಲ, ಎಲ್ಲ ಶಾಸ್ತ್ರಗಳನ್ನು ದಾಟಿ ಹೋದಂತಹದು, ಸ್ಮೃತ್ಯರ್ಥಕ್ಕಿಂತಲೂ ಶ್ರೇಷ್ಠತರವಾದದ್ದು, ತ್ರಿಭುವನದಲ್ಲಿರುವ ಜ್ಞಾನ ವಿಜ್ಞಾನಗಳಕಿಂತಲೂ ಮುಂದೆ ಹೋದದ್ದು, ಪ್ರಣಮದಿಂದ ಹುಟ್ಟಿದಂಥಹದು, ಧ್ಯಾನ ಮತ್ತು ಭಾವ ಇವುಗಳೇ ಇದಕ್ಕೆ ಮೇರೆಯು, ವಿಖ್ಯಾತವಾದದ್ದು, ಶ್ರೀ ಜ್ಯೋತಿರ್ಮಯವಾದ ಲಿಂಗದ ಕರುಣೆಯಿಂದ ಉತ್ಪನ್ನವಾದ ಭಕ್ತಿಯುಳ್ಳದು, ಎಂದು ವೀರಶೈವ ಧರ್ಮದ ಸಾಮಾನ್ಯ ಸ್ವರೂಪು ಇಲ್ಲಿ ವರ್ಣಿಸಲ್ಪಟ್ಟಿದೆ.

ಈ ವರ್ಣನೆಯ ಮೇಲಿಂದ ವೀರಶೈವ ಧರ್ಮವು ಕೇವಲ ವೇದಗಳು ಷಡ್ದರ್ಶನಗಳು ಸ್ಮೃತ್ಯಾದಿ ಗ್ರಂಥಗಳು ಇವುಗಳ ತೊಡಕಿನಿಂದ ದಾಟಿಹೋಗಿ, ಧ್ಯಾನ, ಭಕ್ತಿ, ಪ್ರಣಮಜ್ಞಾನ ಇವುಗಳನ್ನು ಅವಲಂಬಿ

ಸಿದ ಧರ್ಮವೆಂದು ಇಲ್ಲಿ ಹೇಳಲ್ಪಟ್ಟಿದೆ. ಈ ವಿಚಾರಗಳು ವಚನಕಾರರ ವಿಚಾರಗಳನ್ನೇ ಅನುಸರಿಸುತ್ತವೆ.

ಮುಂದೆ ಬಸವೇಶ್ವರನೇ ಶಿವದೇವನಾಗಿ ಜನಿಸಿದನೆಂದು ಹೇಳಲ್ಪಟ್ಟಿದ್ದು ಶಿವದೇವನು— "ಅವ್ಯಕ್ತ ಶಂಕರನಾನತಿ ಸುವ್ಯಕ್ತಂ ಮಾಡಿ ತೋರ್ಪನೆನುತೀ ಜಗದೊಳ್...ಶಿವಮುದ್ದು ಮುನಿವರಂ ಭಾವಿಸುವನ್" ಎಂದು ಹೇಳಲ್ಪಟ್ಟಿದ್ದಾನೆ. ಇಲ್ಲಿ ಅವ್ಯಕ್ತ ಶಂಕರನನ್ನು ಸುವ್ಯಕ್ತಮಾಡಿ ತೋರಿಸುವವನೆಂದು ಹೇಳಲ್ಪಟ್ಟಿದೆ. ಇಲ್ಲಿ ಲಿಂಗಧಾರಣೆಯ ತತ್ವವು ಸೂಚಿಸಲ್ಪಟ್ಟಿರುತ್ತದೆ. (ಪುಟ ೧೬೩)

ಮುಂದೆ ೧೬೪ನೇ ಪುಟದಲ್ಲಿ "ಶಿವದೇವ ಮುನಿಪತಿ ತೋರಿ ಮೆರೆದಂ ಲಿಂಗ ಜಂಗಮೈಕ್ಯ ಕ್ರಮುಮಂ" ಎಂದು ಹೇಳಲ್ಪಟ್ಟಿದೆ. ಇಲ್ಲಿ ಜಂಗಮ ಈ ಶಬ್ದವು ಕೇವಲ ವ್ಯಕ್ತಿವಾಚಕವಾಗಿಲ್ಲ. ವಚನಕಾರರು ಜಂಗಮ ಶಬ್ದದ ಮೂಲಕ ಜ್ಞಾನ, ಚೈತನ್ಯ, ಭಾವ ಶರೀರದ ಪರಿಣತೆ, ಈ ಅರ್ಥಗಳನ್ನು ಬೋಧಿಸುತ್ತಾರೆ. ಇದೇ ಅರ್ಥದಿಂದ ಈ ಶಬ್ದವು ಇಲ್ಲಿ ಉಪಯೋಗಿಸಲ್ಪಟ್ಟಿದೆ.

ಮುಂದೆ ಗುತ್ತರಸನಾದ ವಿಕ್ರಮಾದಿತ್ಯನು "ಲಿಂಗಾನುನಯದಿಂ ಸಂಜಾತ" ಎಂದು ಹೇಳಲ್ಪಟ್ಟಿದ್ದಾನೆ. (ಪು. ೧೬೫) ಈ ಶಬ್ದಗಳು ಲಿಂಗದೀಕ್ಷೆಯನ್ನು ಸೂಚಿಸುತ್ತವೆ. ಇದರಿಂದ ಶಿವದೇವನಿಂದ ಈ ಅರಸನು ವೀರಶೈವ ದೀಕ್ಷೆಯನ್ನು ಹೊಂದಿದನೆಂದು ಕಂಡುಬರುತ್ತದೆ.

'ಲಿಂಗಾನುನಯ' ಈ ಶಬ್ದವು ಈ ಶಿಲಾಶಾಸನದಲ್ಲಿ ೨-೩ ಕಡೆಗೆ ಬಂದಿದೆ. ಈ ಶಬ್ದವು ಲಿಂಗಧಾರಣೆ ಈ ಅರ್ಥವನ್ನು ಸೂಚಿಸುವಂತೆ ತೋರುತ್ತದೆ.

ಪುಟ ೧೬೬ರಲ್ಲಿ ವೀರಶೈವ ಮತತತ್ವಗಳು ನಿರೂಪಿಸಲ್ಪಟ್ಟಿರುತ್ತವೆ.

ಶಿವದೇವನು "ಉದಯಿಸಿದನಗ್ರ ಜನ್ಮದ ಪದದೊಳ್ ತನುಗುಣವನೊಂದದೆಲ್ಲಾಗಮದೊಳ್" ಅಂದರೆ ಅವನು ಶ್ರೇಷ್ಠವಾದ ಮಾನವ ಜನ್ಮದಲ್ಲಿ ಹುಟ್ಟಿದನು. ಆದರೆ ಅವನಿಗೆ ತನುಗುಣಗಳೆಂಬುವಿರಲಿಲ್ಲೆಂದು ಇಲ್ಲಿ ಹೇಳಲ್ಪಟ್ಟಿದೆ.

ಅವನು ಮದನ ವಿರೋಧಿಯಾಗಿದ್ದನೆಂದು ಹೇಳಲ್ಪಟ್ಟಿದ್ದಾನೆ. ಇಲ್ಲಿಂದ ಮುಂದೆ ಹೇಳಲ್ಪಟ್ಟಿರುವದೇನಂದರೆ:— "ಆಶ್ರಮ ನಾಲ್ಕುಂ

ತಿಳಿಯೆ ಯನಾಶ್ರಮ ನಾಶ್ರಮುನುನೆಯ್ದುದುದಾಶ್ರಮದಿಂ ಶಿವಾಶ್ರಮವೆ ವಿಹಿತವೆಂದತ್ಯಾಶ್ರಮಮಂ ಧರಿಸಿ ಮೆರೆದ ಶ್ರೀ ಶಿವದೇವಂ'' ಎಂಬ ವಾಕ್ಯವಿದೆ. ಈ ವಾಕ್ಯದ ಮೊದಲನೆಯ ಭಾಗದ ಅರ್ಥವು ಸ್ಪಷ್ಟವಾಗುವದಿಲ್ಲ. ಮೂಲ ಶಿಲಾಶಾಸನವನ್ನು ಓದುವಲ್ಲಿ ಒಂದು ವೇಳೆ ತಪ್ಪಾಗಿರಬಹುದು. ಆದರೆ ವಾಕ್ಯದ ಕಡೆಯ ಭಾಗದ ಅರ್ಥವು ಸ್ಪಷ್ಟವಿದೆ. ಶಿವಾಶ್ರಮವು ವಿಹಿತವಾದುದು, ಅದು ಅತ್ಯಾಶ್ರಮವು, ಅದನ್ನೇ ಶಿವದೇವನು ಧರಿಸಿ ಮೆರೆದನೆಂದು ಇಲ್ಲಿ ಹೇಳಿದೆ. ಇದು ಬಸವಾದಿ ಪ್ರಮಥರ ತತ್ವವು. ವೀರಶೈವರು ಅತಿ ವರ್ಣಿಗಳೂ ಅತ್ಯಾಶ್ರಮಿಗಳೂ ಎಂದೆನಿಸಿಕೊಳ್ಳುವರು. ಈ ಅರ್ಥವೇ ಈ ವಾಕ್ಯದಲ್ಲಿ ಬೋಧಿಸಲ್ಪಟ್ಟಿದೆ.

ಮುಂದೆ ಅದೇ ಪುಟದಲ್ಲಿ— "ಲಿಂಗವನಪ್ಪಿದ ತೋಳ್ಗಳಿನಂಗನೆಯುರನಪ್ಪೆ ನಲವಿ ನೋಡಿ" ಎಂದು ಹೇಳಲ್ಪಟ್ಟಿದೆ. ಶಿವದೇವನಿಗೆ ಲಿಂಗಧಾರಣವಿದ್ದಿತೆಂಬುದು ಈ ವಾಕ್ಯದಿಂದಲೂ ಚೆನ್ನಾಗಿ ಬೋಧವಾಗುತ್ತಿದೆ.

ಶಿವದೇವನು ಶಂಕರನಿಗೆ ಭಾಷೆಕೊಟ್ಟಿದ್ದು ಮುಂದೆ ಹೇಳಲ್ಪಟ್ಟಿದೆ. ಅದು ಏನೆಂದರೆ:— "ತಲೆವಂಡ ಸ್ವರ್ಗ ಮುಕ್ತಿಯ ಫಲಪದವನಪೇಕ್ಷಿಸಿದೆನಾದಡೆ ಶಂಕರ ಕೇಳ್ ಸಲೆ ಪುಣ್ಯ ಪಾಪವೆರಡರ ಫಲವಿಲ್ಲದ ನಿತ್ಯಪೂಜೆಯಂ ಮಾಡಿದಪೆಂ." ಫಲಪದವನಪೇಕ್ಷಿಸದೆ ಕಾರ್ಯ ತತ್ಪರನಾಗಿರು ಎಂಬ ತತ್ವಾರ್ಥವೇ ಇಲ್ಲಿ ಹೇಳಲ್ಪಟ್ಟಿವೆ. ವಚನಕಾರರಲ್ಲಿ ಇಂಥ ವಿಚಾರಗಳು ಯಾವಾಗಲೂ ಬರುವದುಂಟು.

"ಆಸೆಯ ಪಾಶಮಂ ಹರಿದು, ರೋಷದ ಮೀಸೆಯ ಕಿತ್ತು ಕಾಮದ ಡೋಸರೆಂದು ಲೋಭಮದವೆಂಬುದನಟ್ಟಿತ ಮನಮೋಹತ್ರಸ್ವಾಸ (?) ಬಲಂಗಳಂ ಜರಿದು ಬೊಗ್ಗಿಸಿ ಗೆಲ್ದರೆ ತುತ್ತುಮಾಡಿದಂ ದೂಷಕ ಧೂಮಕೇತು ಶಿವದೇವನತರ್ಕ್ಯಗುಣ ಪ್ರಭಾವಂ" ಇಲ್ಲಿ ಶಿವದೇವನ ನೈತಿಕ ವೃತ್ತಿಯು ಹೊಗಳಲ್ಪಟ್ಟಿದೆ.

ಮುಂದೆ ವಿಭೂತಿಯ ಮಹತ್ವವು ಹೇಳಲ್ಪಟ್ಟಿದೆ. ವಿಭೂತಿಯ ತಿಲಕವು ಕಟ್ಟಾಳುತನ, ಮನದಲ್ಲಿ ನಿಶ್ಶಂಕತೆ, ನಿರ್ಮಲತ್ವ ಇವುಗಳನ್ನು ತೋರಿಸುತ್ತದೆ.

'ಲೆಂಕೆಗೆ ಝುಂಕೆಗೆ ಮನದೊಳ್ ಶಂಕಿಸಿದೊಡೆ ನಿನ್ನ ಭಕ್ತರಾಣೆಲೆ ಪಶುಪತಿ'' ಎಂದು ಹೇಳಲ್ಪಟ್ಟಿದೆ. ಇಲ್ಲಿ ದಾಸೋಹಭಾವವುಳ್ಳ ವೀರಶೈವ ವೃತ್ತಿಯು ಹೇಳಲ್ಪಟ್ಟಿದೆ.

"ಶಂಕರನೊಳಾದಡಂ ಕೇಳಿ ಬೇಡಿದಡೆ ಎನ್ನ ತಲೆಯೋ ದಂಡ." ವೀರಶೈವನಾದವನು ಭಿಕ್ಷೆಯನ್ನು ಬೇಡಕೂಡದು. ವಚನಕಾರರ ಈ ತತ್ವವು ಇಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ.

"ಸೆಣಸುವ ವಾದಿಂಗೆ ಬಾಯಿ ಸರಿ ಜಗವರಿಯೆ ಗುಣಿ, ಸಕಳ ವೇದ ಶಾಸ್ತ್ರದ ಕಣಿ, ಶಿವತತ್ವಾನುಭಾವನಿ● ಶಿವದೇವಂ" ಎಂದು ಹೇಳಲ್ಪಟ್ಟಿದೆ. ಶಿವದೇವನು ಶಿವತತ್ವಾನುಭಾವಿಯಾಗಿದ್ದರೂ ಅವನು ವೇದ ಶಾಸ್ತ್ರಗಳನ್ನು ತಿರಸ್ಕರಿಸುವವನಲ್ಲವೆಂತಲೂ ಹೇಳಲ್ಪಟ್ಟಿದೆ.

ವೀರಶೈವರು ವೇದಶಾಸ್ತ್ರಗಳನ್ನು ತಿರಸ್ಕರಿಸುವದಿಲ್ಲ. ಆದರೂ ಅವರು ತಮ್ಮದೊಂದು ಸ್ವತಂತ್ರ ಮಾರ್ಗವನ್ನು ಕಲ್ಪಿಸಿಕೊಂಡಿದ್ದರಿಂದ ಇದನ್ನೇ ಅವರು ಅನುಸರಿಸಬೇಕಾದುದು ಅವರ ಕರ್ತವ್ಯವಾಗಿದೆ.

ಶಿವದೇವನು 'ವೀರವ್ರತಿ' ಎಂದು ಹೇಳಲ್ಪಟ್ಟಿದ್ದಾನೆ. ಇದೇ ಮೇರೆಗೆ ಅರ್ಜುನವಾಡ, ಪುಳುಜ ಗ್ರಾಮುಗಳಲ್ಲಿಯ ಶಿಲಾಶಾಸನಗಳಲ್ಲಿ ಶಿವಶರಣರು ವ್ರತಿಗಳೆಂದು ಹೇಳಲ್ಪಟ್ಟಿದ್ದಾರೆ. ಆದರೆ ಇವರ ವ್ರತಗಳಿಗೂ ಬ್ರಾಹ್ಮಣ ವ್ರತಗಳಿಗೂ ಬಹಳ ಅಂತರವಿದೆ. ಈ ವ್ರತಗಳಾವವೆಂಬುದು ಈ ಶಿಲಾಶಾಸನದಲ್ಲಿ ಹೇಳಲ್ಪಟ್ಟಿದೆ. ಪುಟ ೧೬೦ರಲ್ಲಿ ಹೇಳಿರುವದೇನೆಂದರೆಃ—

"ಶಿವಸದ್ವಿದ್ಯೆಯೆ ವಿದ್ಯೆ ಎಂದು, ಶಿವಭಾವಂಭಾವವೆಂದು, ಹೆಂದದಾ ಶಿವಮಂತ್ರಂಗಳೇ ಮಂತ್ರವೆಂದು, ಶಿವಮೂರ್ತಿಧ್ಯಾನವೇ ಧ್ಯಾನವೆಂದು, ಶಿವನಿತ್ಯೋತ್ಸವಮುತ್ಸವಂ, ಶಿವಕಥಾಳಾಪಂಗಳಾಳಾಪ, ಮಿಕ್ಕುವ ಸೇವ್ಯಂಗಳೆನುತ ವೀರಶಿವದೇವಂ ತಾಳ್ದಂ ವೀರವ್ರತಂ" ಇಲ್ಲಿ ವೀರಶೈವವ್ರತಗಳು ಹೇಳಲ್ಪಟ್ಟಿವೆ.

ಮುಂದೆ ಪುನಃ ಹೇಳಲ್ಪಟ್ಟಿರುವದೇನಂದರೆಃ— "ಶಿವನಂ ತೋರುವ ಮಾರ್ಗ ಮಾರ್ಗ, ಶಿವಸದಾಚಾರಂಗಳಾಚಾರ ಮೀ। ಶಿವಸಂಯೋಗವೇ ಯೋಗ ನಿತ್ಯ ಶಿವಪೂಜಾ ಕರ್ಮವೇ ಕರ್ಮಮೀ। ಶಿವನೇ ದೇವನನ್ಯ ವಿಷಯುಂ ಬೇರಿಲ್ಲ ಹೊಲ್ಲೆಂದು ಶ್ರೀ ಶಿವದೇವ ಪ್ರ। ಭುವೆತ್ತಿದಂ ಧ್ವಜ ಪತಾಕೋದ್ದಂಡ ಮಾದಂಡಮುಂ" ಎಂದು ಇದ್ದು ಇದರಲ್ಲಿ ಬಸವಾದಿ ಪ್ರಮಥರು ಆಚರಿಸಿದ ವೀರಶೈವ ಮಾರ್ಗವು ಅತ್ಯುತ್ತಮ ರೀತಿಯಿಂದ ಬೋಧಿಸಲ್ಪಟ್ಟಿದೆ. ಈ ಶ್ಲೋಕದ ಅರ್ಥವು ಸ್ಪಷ್ಟವದೆ.

ಶಿವದೇವನಿದ್ದ ಕಾಲದಲ್ಲಿ ಅನೇಕ ಮತಗಳು ಕರ್ನಾಟಕದಲ್ಲಿ ದ್ದವು. ಅವುಗಳನ್ನು ಶಿವದೇವನು ತಿರಸ್ಕರಿಸಿ ಹೇಳುವದೇನಂದರೆ:—

ಎಲೆ ಗಳಪ ವಾದಿ ವೈಷ್ಣವಂಗಧಿಪ ವೈಷ್ಣವಗಿಷ್ಣವ ಸೌರಗೌರವಾ। ಣೆಲೆ ಗಳಪ ವಾದಿ ಬೊಮ್ಮ ಗಿಮ್ಮ ನಿಗಮಾರ್ಥವನರಿಯದೆ ಯಜ್ವ ಗಿಜ್ವ ಬೇ। ಡೆಲೆ ಗಳಪ ವಾದಿ ಬುದ್ಧಗಿದ್ಧ ಬರಿಯಾಗಮಿ ಗೀಗಮಿ ಮಂತ್ರ ವಾದಿ ಸಾ। ಕುಲಿಯದಿರೆಂದು ಬಗ್ಗಿಪುದು ಶ್ರೀ ಶಿವದೇವನ ಕಾಲ ಹೊಂದೊಡರು ॥

ಮೇಲಿನ ಉಕ್ತಿಯಿಂದ ಈ ಕಾಲದಲ್ಲಿ ವೈಷ್ಣವರು, ಆಗಮಿಕರು, ಬೌದ್ಧರು, ಸೌರರು ಮೊದಲಾದವರು ಇದ್ದ ಹಾಗೆ ತೋರುತ್ತದೆ. ಅವರೆ ಲ್ಲರನ್ನೂ ಇಲ್ಲಿ ಶಿವದೇವನು ನಿರಾಕರಿಸುತ್ತಾನೆ. ಕರ್ನಾಟಕದಲ್ಲಿ ಆಗಮ ವಾದಿಗಳು ಆಗ ಕಾಳಾಮುಖರೇ ಆಗಿದ್ದರು. ಅವರು ಇಲ್ಲಿ ಉಲ್ಲೇ ಖಿಸಲ್ಪಟ್ಟಿದ್ದಾರೆಂದು ತೋರುತ್ತದೆ.

ಅದೇ ಪ್ರಕಾರ ಮುಂದಿನ ಶ್ಲೋಕದಲ್ಲಿ ಷಡ್ದರ್ಶನಗಳೂ ಟೀಕಿಸ ಲ್ಪಟ್ಟಿವೆ. ಅದು ಹೇಗೆಂದರೆ:—

ಬೆರಳಂ ಕರ್ಚಿ ಕರಂಗಳಂ ಮುಗಿದು ಬಾಯ್ಗೆ ಪಾಯುವಂತೆಮ್ಮ। ಕ್ಕರದಿಂ ಮುಚ್ಚುತ ಬಾಯಿಮಿಟ್ಟು ಕುಸಿದುಂ ಮೈಯಿಕ್ಕುತಂ ಪಲ್ಗಳಂ। ಕಿರಿದುಂ ಜೀಯ ಶರಣಾರ್ಥಿ ಎಂದನುದಿನಂ ಷಡ್‌ದರ್ಶನಂ ಬಾಹುಲಿ। ಭರದೊಳ್ ತಳ್ತುಲಿವುತ್ತಮಿದುವನೀಶಂ ಶಿವದೇವವಾಮಾಂಘ್ರಿಯೊಳ್ ॥ ಎಂದು ಹೇಳಲ್ಪಟ್ಟದೆ. (ಪುಟ ೧೬೮)

ಮುಂದೆ ಅದೇ ಪುಟದಲ್ಲಿ "ಲಿಂಗಕ್ಕೆ ಜಂಗಮಕ್ಕೆ। ಪಿಂಗದೆ ದಾಸತ್ವ ಮಾಳ್ಪುದಂ ಬೆಸಸಿದನಾ। ಸಂಗನಬಸವಂ ಬೆಸಸೆ ಮ। ನಂಗೊಂ ಡರ್ಚಿಸುವನುಭಯಲಿಂಗವ ಮುದದಿಂ।

ಮೃಡಗಣ ವರಪ್ರಸಾದವುಂ! ಪಡೆದಂ ಜಗವರಿಯಲಂದು ಸಂಗನ ಬಸವಂ। ಪಡೆದಾಪ್ರಸಾದ ಸಿದ್ಧಿಯ ಕಡುವೀರವ್ರತದಿ ಪಡೆವನೀ ಶಿವದೇವಂ ॥"

ಇಲ್ಲಿ ವೀರಶೈವರಲ್ಲಿಯ ದಾಸೋಹವೂ ಪ್ರಸಾದದ ಸೇವನೆಯೂ ವಿವರಿಸಲ್ಪಟ್ಟಿವೆ. ಬಸವನೂ ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ.

ಈ ಪ್ರಕಾರ ಶಿವದೇವನು ನಡೆಯುತ್ತಿದ್ದು ಆತನು "ಶ್ರೀಮುದಾರೂಢವ್ರತಿ" "ಶಿವಯೋಗಸಿದ್ಧ" ಎಂದು ಹೇಳಲ್ಪಟ್ಟಿದ್ದಾನೆ. (ಪುಟ ೧೭೧)

ಶಿಲಾಶಾಸನದ ಕೊನೆಗೆ ಹೇಳಲ್ಪಟ್ಟಿರುವದೇನಂದರೆಃ—

ಎಂದ ವ್ರತೋದರಪ್ರಭವದೇವ ನೃಪ ಮುಡಿದುದೊಂದು ವಾಕ್ಯದೊಳ್ । ಬಂದಖಿಳಾಗಮಾರ್ಥ ನೆಲಸಿರ್ದುದು ಶಾಸ್ತ್ರದಿ ಸರ್ವ ಸಂಪದಂ। ಸಂದುದು ವೈದಿಕಾರ್ಥವಡಗಿರ್ದುದು ಧರ್ಮದ ಪೆರ್ಮೆವೆತ್ತುದೇ । ನೆಂದಪೆನೆಂದು ತನ್ನೊಳನುಮಾನಿಸುತಂ ಶಿವದೇವರೆಂದಪರ್ ॥

ವೀರಶೈವ ಧರ್ಮದಲ್ಲಿ ಅಖಿಳಾಗಮಾರ್ಥವು ನೆಲಸಿರುತ್ತದೆ. ಶಾಸ್ತ್ರದ ಸಂಪತ್ತು ಅದರಲ್ಲಿ ಸಂದಿರುತ್ತದೆ, ವೈದಿಕಾರ್ಥವು ಅಡಗಿರುತ್ತದೆ ಧರ್ಮದ ಹೆಚ್ಚುವಿಕೆಯು ಅದರಲ್ಲಿದೆ ಎಂದು ಈ ನುಡಿಯಲ್ಲಿ ಹೇಳಲ್ಪಟ್ಟಿದೆ.

ಈ ಪ್ರಕಾರ ಈ ಶಿಲಾಶಾಸನದಲ್ಲಿ ವೀರಶೈವ ಮತತತ್ವಗಳು ವರ್ಣಿಸಲ್ಪಟ್ಟಿವೆ. ವಚನಕಾರರ ತತ್ವಗಳೇ ಇಲ್ಲಿ ಅನೇಕ ತರಹವಾಗಿ ನಿರೂಪಿಸಲ್ಪಟ್ಟಿವೆ. ಈ ಶಿಲಾಶಾಸನದ ಕಾಲವು ಶಕವರ್ಷ ೧೧೮೪ ಎಂದರೆ ಕ್ರಿ. ಶ ೧೨೬೨ ಇರುತ್ತದೆ. ಎಂದರೆ ಬಸವೇಶ್ವರನ ತರುವಾಯ ೧೦೦ ವರ್ಷದ್ದು ಇದೆ. ಈ ಕಾಲದಲ್ಲಿ ವೀರಶೈವ ಧರ್ಮವು ಕರ್ನಾಟಕದಲ್ಲೆಲ್ಲ ಪ್ರಸಾರಗೊಂಡಿತ್ತು. ಅನೇಕ ರಾಜರೂ ಮಾಂಡಲಿಕರೂ ಅದನ್ನು ಪರಿಪಾಲಿಸುತ್ತಿದ್ದರು. ಈ ಸಂಗತಿಗಳು ಈ ಶಿಲಾಶಾಸನದಿಂದ ಸ್ಪಷ್ಟವಾಗುತ್ತವೆ. ಅದರ ಉಚ್ಚ ಉದಾರ ಸ್ವರೂಪು ಈ ಕಾಲದಲ್ಲಿ ಪೂರ್ಣವಾಗಿ ಅದಕ್ಕೆ ಉಂಟಾಗಿತ್ತು ಎಂಬುದೂ ಗೊತ್ತಾಗುತ್ತದೆ.

ಈ ಶಿಲಾಶಾಸನದಲ್ಲಿ ವೀರಶೈವ ಲಿಂಗಧಾರಣೆ ಈ ಶಬ್ದಗಳು ಮಾತ್ರ ಸ್ಪಷ್ಟವಾಗಿ ಇರುವದಿಲ್ಲ. ಈ ವಿಷಯುವಾಗಿ ನಾನು ಹಿಂದಿನ ಸಂಚಿಕೆಯಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇನೆ. ಆದರೆ ಅವುಗಳ ಸಂಬಂಧದ ವಿಚಾರಗಳು ಬೇರೆ ಶಬ್ದಗಳಿಂದ ಇಲ್ಲಿ ಬಹು ಸ್ಪಷ್ಟವಾಗಿ ಹೊರಪಟ್ಟಿರುತ್ತವೆ. ಆದುದರಿಂದ ಶಿವದೇವನು ವೀರಶೈವನೆಂದೇ ತಿಳಿಯುಲು ಯಾವ ಪ್ರತ್ಯವಾಯುವೂ ಇಲ್ಲ. ಈ ಶಾಸನದಲ್ಲಿ ಬಂದಿರುವ ಅನೇಕ ಶಬ್ದಗಳು ಮತ್ತು ವಿಷಯುಗಳು ಅಬ್ಬಲೂರು, ಅರ್ಜುನವಾಡ, ಪುಳುಜ ಈ ಗ್ರಾಮುಗಳಲ್ಲಿಯ ಶಾಸನಗಳಲ್ಲಿಯೂ ಕೂಡ ಬಂದಿರುತ್ತವೆ. ಅದ್ದ

ರಿಂದ ಈ ಶಾಸನಗಳಲ್ಲಿಯೂ ವೀರಶೈವರವೆಂದು ತಿಳಿಯಲು ಯಾವ ಆತಂಕವೂ ತೋರುವದಿಲ್ಲ.

ಆದರೆ ಇಲ್ಲಿ ಸ್ಥಾವರ ಲಿಂಗಪೂಜೆಯೂ ಅದರ ಪ್ರತಿಷ್ಠಾಪನೆಯೂ ಕಂಡುಬರುತ್ತವೆ. ವಚನಕಾರರು ತಮ್ಮ ವಚನಗಳಲ್ಲಿ ಈ ವಿಧವನ್ನು ಖಂಡಿಸುವದುಂಟು. ಲಿಂಗಧಾರಣ ಹೊಂದಿದ ಬಳಿಕ ಈ ಮಾರ್ಗವು ಲಿಂಗಾಂಗ ಸಾಮರಸ್ಯಕ್ಕೆ ಹೊಂದಿಕೆಯಲ್ಲವೆಂದು ಹೇಳಿದರೂ ಈ ಶಿವಾಲಯಗಳೂ ಶಿವ ಚಿನ್ಹಗಳೂ ತಿರಸ್ಕಾರಕ್ಕೆ ಯೋಗ್ಯವಾದುವಲ್ಲೆಂಬ ಅಭಿಪ್ರಾಯವು ಮೊದಲಿನಿಂದಲೂ ವೀರಶೈವ ಸಮಾಜದಲ್ಲಿ ರೂಢವಾಗಿತ್ತೆಂದು ತೋರುತ್ತದೆ.

ಈ ಶಿಲಾಶಾಸನದಿಂದ ಮತ್ತೊಂದು ಮಹತ್ವದ ವಿಷಯವು ಹೊರಪಡುತ್ತದೆ. ವಚನಗಳು ಎಂದು ಬರೆಯಲ್ಪಡಹತ್ತಿದವೆಂಬುದು ಇನ್ನೂ ಐತಿಹಾಸಿಕ ರೀತಿಯಿಂದ ನಿರ್ಣಯಿಸಲ್ಪಟ್ಟಿಲ್ಲ. ಈ ಶಾಸನದಲ್ಲಿ 'ವಚನಗಳು' ಈ ಶಬ್ದವು ಸ್ಪಷ್ಟವಾಗಿ ದೊರೆಯದಿದ್ದರೂ ಅವುಗಳಲ್ಲಿಯ ತತ್ವಗಳು ಬಹು ಸ್ಪಷ್ಟ ರೀತಿಯಿಂದ ಪ್ರತಿಪಾದಿತವಾಗಿರುತ್ತವೆ.

ಇದರ ಮೇಲಿಂದ ಕ್ರಿ. ಶ. ೧೨೨೬ರ ಹಿಂದೆಯೇ ವಚನ ಗ್ರಂಥಗಳಿದ್ದವೆಂದು ನಾವು ಊಹಿಸಬಹುದಾಗಿದೆ. ಈ ಶಿಲಾಶಾಸನಗಳ ಓದುವಿಕೆಯಲ್ಲಿ ತಪ್ಪುಗಳಿರಬಹುದು. ಕೆಲವೆಡೆಗಳಲ್ಲಿ ಅರ್ಥವೂ ಅಸ್ಪಷ್ಟವಿರುತ್ತದೆಂಬದು ನಿಜವು. ಆದರೆ ವಾಕ್ಯಗಳ ಸ್ಥೂಲಾರ್ಥವು ಚನ್ನಾಗಿ ಸ್ಪಷ್ಟವಾಗಿರುತ್ತದೆ. ಅವುಗಳ ಮೇಲಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಧರ್ಮದ ಸ್ವರೂಪು ಹೇಗಿತ್ತೆಂಬುದನ್ನು ನಾವು ಕಂಡುಹಿಡಿಯಬಹುದಾಗಿದೆ.

ಈ ಶಿಲಾಶಾಸನಗಳನ್ನು ಪ್ರತ್ಯಕ್ಷ ನೋಡಿ ಅಭ್ಯಾಸಮಾಡಲಿಚ್ಛಿಸುವವರು ಚೌಡದಾನಪುರಕ್ಕೆ ಹೋಗಿ ಇವುಗಳನ್ನು ಅವಶ್ಯವಾಗಿ ನೋಡಬೇಕು. ಈ ಗ್ರಾಮವು ತುಂಗಭದ್ರಾ ತೀರದಲ್ಲಿ ಬಹು ರಮಣೀಯವಾದ ಸ್ಥಳದಲ್ಲಿದೆ. ಸಮೀಪದಲ್ಲಿಯೇ ಕೆಲವು ಕ್ಷೇತ್ರಗಳೂ ಇವೆ. ಸಂಶೋಧಕರು ಈ ಸ್ಥಳದ ದರ್ಶನ ಲಾಭವನ್ನು ಅವಶ್ಯವಾಗಿ ಹೊಂದಬೇಕೆಂದು ನಮ್ಮ ಸೂಚನೆ ಇದೆ.

---

# ಬಸವೇಶ್ವರನು ಮಾಡಿದ ಅಸ್ಪೃಶ್ಯ ನಿವಾರಣೆ.

(ಲೇಖಕ:— ಎಸ್. ವ್ಹಿ. ಹಂಜಿ ಬಿ. ಏ. ಹಲಸಿ)



ಬಸವೇಶ್ವರನು ಮಾಡಿದ ಸಮಾಜ ಸುಧಾರಣೆಗಳಲ್ಲಿ ಅಸ್ಪೃಶ್ಯ ನಿವಾರಣೆಯು ಬಹಳ ಮಹತ್ವದ್ದೂ ಕ್ರಾಂತಿಕಾರಕವೂ ಆಗಿರುತ್ತದೆ. ಮತ್ತು ಭರತಖಂಡದ ಉಜ್ವಲ ಇತಿಹಾಸದಲ್ಲಿ ಇದು ಚಿರಸ್ಮರಣೀಯವಾದ ಸಂಗತಿಯಾಗಿರುವದು. ಆ ಕಾಲದ ಜನರಿಗೆ ಇದರ ಮಹತ್ವವು ಅಷ್ಟು ಹೊಳೆದಿರಲಿಕ್ಕಿಲ್ಲ. ಆದುದರಿಂದಲೇ ಅವರು ವಂಶಪರಂಪರೆಯಿಂದ ಬಂದ ಅಸ್ಪೃಶ್ಯರ ದುರವಸ್ಥೆಯನ್ನು ಕಂಡು ಏನೂ ಸುಧಾರಣೆ ಮಾಡಿದ್ದಿಲ್ಲ. ಆದರೆ ಬಸವಾದಿ ಪ್ರಮಥರು ಸಮಾಜ ಸುಧಾರಣೆಯನ್ನು ಮಾಡುವಾಗ ಅಸ್ಪೃಶ್ಯ ನಿವಾರಣೆಗೆ ಅಗ್ರಸ್ಥಾನವನ್ನು ಕೊಟ್ಟು ಅವರ ಹೊಲಸು ನಡತೆಯನ್ನೂ ಕೀಳು ವಿಚಾರಗಳನ್ನೂ ಹೋಗಲಾಡಿಸಿ ಅವರನ್ನು ಮುಂದಕ್ಕೆ ಕರೆದು ಸಮಾಜದಲ್ಲಿ ಅವರಿಗೆ ಸರಿಯಾದ ಹಕ್ಕು ಬಾಧ್ಯತೆಗಳನ್ನು ಒದಗಿಸಿ ಕೊಟ್ಟರು. ಹೀಗೆ ಕ್ರಾಂತಿಕಾರಕವಾದ ಈ ಅದ್ಭುತ ಕಾರ್ಯಗಳನ್ನು ಮಾಡುವಾಗ ಅವರಿಗೆ ಅನೇಕ ವಿಘ್ನಗಳು ಒದಗಿದವು. ಆದರೆ ಅವರು ತಾವು ನುಡಿದಂತೆ ನಡೆಯುತಕ್ಕದನ್ನು ಬಿಡಲಿಲ್ಲ. ಅವರು ತಮ್ಮ ಪ್ರಾಣವನ್ನಾದರೂ ಅರ್ಪಣಮಾಡಿ ಹೋರಾಡಿದರು ಹೊರತು ತಮ್ಮ ಸತ್ಯ ಧರ್ಮದ ತತ್ವಗಳನ್ನು ಬಿಟ್ಟುಕದಲಲಿಲ್ಲ. ಅವರು ಅಸ್ಪೃಶ್ಯ ನಿವಾರಣೆಯನ್ನು ಮಾಡುವಾಗ ಆಗಿನ ಕಾಲದ ಜನರು ಅವರಿಗೆ ವಿರೋಧಿಗಳಾಗಿ ಹೋರಾಡಿದ್ದು ಸಹಜವಾದ ಸಂಗತಿಯಾಗಿರುವದು. ಯಾಕಂದರೆ ಬಸವೇಶ್ವರನ ಉದಾತ್ತ ತತ್ವಗಳನ್ನು ತಿಳಕೊಳ್ಳುವಷ್ಟು ವಿಶಾಲ ಮನಸ್ಸು ಅವರಲ್ಲಿದ್ದಿಲ್ಲ. ಅಷ್ಟೇಕೆ, ಪಾಶ್ಚಿಮಾತ್ಯರ ಸಂಪರ್ಕದಿಂದ ಈಗಿನ ನವನಾಗರಿಕತೆಯ ಯುಗದಲ್ಲಿಯೂ ಕೂಡ ಅಸ್ಪೃಶ್ಯ ನಿವಾರಣೆಯ ಉದಾತ್ತ ತತ್ವಗಳನ್ನು ಅಲ್ಲಗಳೆಯುವವರು ಅನೇಕರಿರುವಾಗ ಆಗಿನ ಕಾಲದಲ್ಲಿ ಇದ್ದದ್ದು ಅಷ್ಟೊಂದು ಆಶ್ಚರ್ಯಕರವಾದ ಸಂಗತಿಯಲ್ಲ.

ಅಸ್ಪೃಶ್ಯರ ದುರವಸ್ಥೆಯನ್ನು ಕಂಡು ಮರುಗಿ ಅವರನ್ನು ಸಮಾಜದಲ್ಲಿ ಸೇರಿಸಿಕೊಂಡು ಸರಿಸಮಾನವಾದ ಹಕ್ಕುಗಳನ್ನು ಒದಗಿಸಿ

ಕೊಟ್ಟು ಸುಖಶಾಂತಿಗಳನ್ನು ದಯಪಾಲಿಸುವದು ಸಾಧಾರಣ ವಿಚಾರಗಳುಳ್ಳ ಜನರ ಕಾರ್ಯವಲ್ಲ. ನಿಜವಾಗಿಯೂ ಅವರು ವಿಶಾಲ ಹೃದಯದವರೂ ಉಚ್ಚ ವಿಚಾರಗಳುಳ್ಳವರೂ ಸುಸಂಸ್ಕೃತರೂ ಇರಬೇಕಾಗುವದು. ಮತ್ತು ಅವರ ವಿಚಾರಗಳನ್ನು ತಿಳಕೊಂಡು ಅವರಿಗೆ ಬೆಂಬಲಕೊಡುವವರಾದರೂ ಸಹ ಹಾಗೆಯೇ ಇರಬೇಕು. ಸಂಕುಚಿತ ಮನಸ್ಸಿನವರೂ ಪಕ್ಷಪಾತ ಬುದ್ಧಿಯಿಂದ ವಿಚಾರ ಮಾಡುವವರೂ ಒಂದೇ ದೃಷ್ಟಿಯಿಂದ ನಿರೀಕ್ಷಿಸುವವರೂ ಅಸ್ಪೃಶ್ಯ ನಿವಾರಣೆಗೆ ಮಾನ್ಯ ಮಾಡಲಿಕ್ಕಿಲ್ಲ. ಆದುದರಿಂದ ಅಸ್ಪೃಶ್ಯರ ವಿಷಯವಾಗಿ ಬಸವೇಶ್ವರನ ಮತ್ತು ಆತನ ಅನುಯಾಯಿಗಳ ವಿಚಾರಗಳನ್ನು ತಿಳಕೊಳ್ಳಬೇಕಾದರೆ ನಮ್ಮ ಸಂಕುಚಿತ ವಿಚಾರಗಳನ್ನು ಬದಿಗಿಟ್ಟು ವಿಶಾಲ ಮನಸ್ಸಿನವರಾಗಿ ಸ್ವಮತಗಳ ದುರಭಿಮಾನವನ್ನು ಬಿಟ್ಟು ಒಳ್ಳೇ ಶಾಂತ ಮತ್ತು ಸೂಕ್ಷ್ಮರೀತಿಯಿಂದ ವಿಚಾರ ಮಾಡಬೇಕಾಗುತ್ತದೆ.

ಅಸ್ಪೃಶ್ಯನಿವಾರಣೆಯು ವೀರಶೈವ ಮತಕ್ಕೆ ಹೊಸದಲ್ಲ. ಆಗಮಗಳ ಕಾಲದಿಂದಲೂ ಅಸ್ಪೃಶ್ಯರಿಗೆ ಮನ್ನಣೆಯು ಸಿಗುತ್ತಬಂದು ಬಸವೇಶ್ವರನ ಕಾಲಕ್ಕೆ ಅದು ಒಳ್ಳೇ ಘನತೆಗೇರಿತು. ಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ಸಂಗತಿಯು ಪ್ರತ್ಯಕ್ಷ ಆಚರಣೆಯಲ್ಲಿ ಬಂದಿತು. ಬಸವೇಶ್ವರನು ವೀರಶೈವ ಮತವನ್ನು ಪ್ರಸಾರಮಾಡಿ ಒಳ್ಳೇ ಸರ್ವಾಂಗ ಸುಂದರವಾದ ಸಮಾಜ ಮಂದಿರವನ್ನು ನಿರ್ಮಾಣಮಾಡುವಾಗ ಅಸ್ಪೃಶ್ಯರ ಉದ್ಧಾರಕ್ಕೆ ಬಹಳ ಪ್ರೋತ್ಸಾಹನ ಕೊಟ್ಟನು. ಒಮ್ಮೆ ಲಿಂಗ ದೀಕ್ಷೆಯಾದ ಕೂಡಲೆ ಎಲ್ಲರೂ ಶಿವಭಕ್ತರು ಸಮಾನರು ಎಂದು ಸಾರಿ ಹೇಳಿ ಅದನ್ನು ವೀರಶೈವ ಧರ್ಮದ ಒಂದು ತತ್ವವನ್ನಾಗಿಯೇ ಮಾಡಿಬಿಟ್ಟನು. ಆದುದರಿಂದ ವೀರಶೈವ ಮತಕ್ಕೆ ಸೇರಿದ ಎಲ್ಲತರದ ಜಾತಿಯವರಿಗೂ ಅದರಲ್ಲಿಯೂ ಮುಖ್ಯವಾಗಿ ಅಸ್ಪೃಶ್ಯರಿಗೆ ಸರಿಸಮಾನವಾದ ಹಕ್ಕುಗಳು ದೊರೆತು ಸಮಾಜದ ಕಾರ್ಯಗಳಲ್ಲಿ ಅವರೂ ಮುಂದುವರಿದು ಕೆಲಸಮಾಡಹತ್ತಿದರು. ಇಲ್ಲಿಯವರೆಗೆ ಅವರು ಎಲ್ಲ ಜಾತಿಯವರಿಂದ ಬೇರೆ ಇದ್ದು ಅವರು ಹೇಳಿದ ಕೆಲಸಗಳನ್ನು ಮಾಡುತ್ತ ಬಹಳ ಹೀನಸ್ಥಿತಿಯಲ್ಲಿದ್ದರು. ಸಂತೆ, ಪೇಟೆ, ದೇವಾಲಯಗಳಲ್ಲಿ ಅವರಿಗೆ ಪ್ರವೇಶವಿದ್ದಿಲ್ಲ. ಉಳಿದವರು ಉಪಯೋಗಿಸುವ ನೀರನ್ನೂ ಸಹ ಅವರು ಮುಟ್ಟುವಂತೆ ಇದ್ದಿಲ್ಲ. ವರ್ಣಾಶ್ರಮ ಧರ್ಮದ ನಿಯಮದಂತೆ

ಬಹುತರವಾಗಿ ಬ್ರಾಹ್ಮಣರು ತಾವೇ ಜನರಲ್ಲಿ ಶ್ರೇಷ್ಠರೆಂಬ ಭಾವನೆಯಲ್ಲಿದ್ದರು. ಆದರೆ ಈಗ ಬ್ರಾಹ್ಮಣನೆಂದರೆ ಹೆಚ್ಚಿನವನಲ್ಲ, ಹೊಲೆಯನೆಂದರೆ ಕಡಿಮೆಯುವನಲ್ಲ, ಇಬ್ಬರು ಸಮಾನರು, ಎಂಬ ಭಾವನೆಯು ಎಲ್ಲರಲ್ಲಿಯೂ ಬಂದಿತು.

ಈ ಸಂಗತಿಗಳನ್ನು ಬಸವೇಶ್ವರನ ವಚನಗಳಲ್ಲಿ ಕಾಣಬಹುದು. "ದೇವ ದೇವಾ ಬಿನ್ನಪವ ಅವಧಾರು! ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರೆಲ್ಲರನೊಂದೇ ಎಂಬೆ. ಈ ನುಡಿದ ನುಡಿಯೊಳಗೆ ಎಳ್ಳು ಮೊನೆಯಷ್ಟು ಸಂದೇಹವುಳ್ಳರೆ ನೀನಂದೇ ಮೂಗು ಕೊಯ್ಯಿ ಕೂಡಲಸಂಗಮದೇವಾ"

ಇದರ ಮೇಲಿಂದ ಮೊದಲು ಶ್ರೇಷ್ಠನೆಂದು ತಿಳಿದುಕೊಂಡ ಬ್ರಾಹ್ಮಣನಿಗೂ ಕೀಳು ಎಂದು ತಿಳಿದುಕೊಂಡ ಅಂತ್ಯಜನಿಗೂ ಭೇದವಿಲ್ಲೆಂದೂ ಅವರಿಬ್ಬರೂ ಶಿವಭಕ್ತರು, ಒಬ್ಬರಿಗೊಬ್ಬರು ಸಮಾನರು ಎಂಬುದೂ ಕಂಡುಬರುವದು. ಇನ್ನು ಅಂತ್ಯಜನು ಶಿವಭಕ್ತನಾದರೂ ಅವನು ಮಾಡತಕ್ಕ ಉದ್ಯೋಗವನ್ನು ಮಾಡಲೇಬೇಕು. ಯಾಕಂದರೆ "ಕಾಯಕವೇ ಕೈಲಾಸ" ಎಂಬ ನೂತನ ತತ್ವದ ಪ್ರಕಾರ ಅವನಿಗೆ ಕಾಯಕದಿಂದಲೇ ಮುಕ್ತಿ. ಅವನು ಮಾಡುವ ಉದ್ಯೋಗವು ಬೇಕಾದಷ್ಟು ಕೀಳಾದರೂ ಅದು ಪವಿತ್ರವು. ಹೀಗೆ ಅವನು ಪರಧನವನ್ನು ಮುಟ್ಟದೆ ತನ್ನ ಸ್ವಂತ ಶ್ರಮದಿಂದ ಗಳಿಸಿದ ಹಣವನ್ನೇ ಉಪಯೋಗಿಸಬೇಕು. ಈ ಪ್ರಕಾರ ಭಕ್ತರು ಬೇರೆ ಬೇರೆ ಉದ್ಯೋಗಗಳನ್ನು ಕೈಕೊಂಡರೂ ಅವರಲ್ಲಿ ಉಚ್ಚ ನೀಚ ಕುಲಗಳೆಂಬ ಭೇದವಿಲ್ಲ. ಇದನ್ನೇ ಬಸವೇಶ್ವರನು ತನ್ನ ವಚನದಲ್ಲಿ ಹೀಗೆ ಸ್ಪಷ್ಟವಾಗಿ ಹೇಳಿದ್ದಾನೆ.

"ದೇವ ಸಹಿತ ಭಕ್ತರ ಮನೆಗೆ ಬಂದು ಕಾಯಕವಾವುದೆಂದು ಬೆಸಗೊಂಡೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ತಲೆದಂಡ ತಲೆದಂಡ. ಭಕ್ತರಲ್ಲಿ ಕುಲವನರಿಸಿದರೆ ನಿಮ್ಮಾಣೆ ನಿಮ್ಮ ರಾಣಿವಾಸದಾಣೆ. ಕುಲಕ್ಕೆ ತಿಲಕ ನಮ್ಮ ಮಾದರ ಚನ್ನಯ್ಯ ಕೂಡಲಸಂಗಮದೇವಾ"

ಈ ವಚನದ ಮೇಲಿಂದ ಭಕ್ತರಲ್ಲಿ ಕುಲವನ್ನು ಎಣಿಸುತ್ತಿದ್ದಿಲ್ಲವೆಂದು ಸ್ಪಷ್ಟವಾಗಿ ಕಂಡು ಬರುವದು. ಹಾಗಾದರೆ ಬ್ರಾಹ್ಮಣನಾರು?

ಹೊಲೆಯನಾರು ? ಎಂದು ಯಾರಾದರೂ ಕೇಳಬಹುದು. ಅದಕ್ಕೂ ಸ್ಪಷ್ಟವಾದ ಉತ್ತರವಿರುವದು. ಬ್ರಾಹ್ಮಣನೆಂದರೆ ಜಾತಿಯಿಂದ ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟಿದರೆ ಬ್ರಾಹ್ಮಣನಲ್ಲ. ಆದರೆ ಬೇಕಾದ ಕುಲದಲ್ಲಿ ಹುಟ್ಟಿದರೂ ಚಿಂತಯಿಲ್ಲ. ಅವನು ಸದಾಚಾರ ಸದ್ಗುಣಗಳಿಂದ ಕೂಡಿದವನಾಗಿರಬೇಕು. ಮತ್ತು ಜೀವನದ ಮಲಗಳನ್ನು ದಾಟಿದವನಾಗಿರಬೇಕು. ಈ ಸಂಗತಿಯನ್ನೇ ಸಿದ್ಧರಾಮೇಶ್ವರನು ತನ್ನ ವಚನಗಳಲ್ಲಿ ಹೀಗೆ ಹೇಳಿರುವನು.

"ವೇದವ ನೋಡಿ ವೇದಾಧ್ಯಯನವ ಮಾಡಿದರೇನು ? ಬ್ರಾಹ್ಮಣನಾಗಬಲ್ಲನೇ? ಬ್ರಹ್ಮವಿತ್ತುಗಳ ಶುಕ್ರಶೋಣಿತ-ದಿಂದ ಜನಿಸಿದರೇನು ? ಬ್ರಾಹ್ಮಣನಾಗಬಲ್ಲನೇ ? ಯಜನಾದ್ಯಷ್ಟ ಷಟ್ಕರ್ಮಂಗಳ ಬಿಡದೆ ಮಾಡಿದರೇನು ? ಬ್ರಾಹ್ಮಣನಾಗಬಲ್ಲನೇ ? ಬ್ರಹ್ಮ ಜಾನಾತಿ ಬ್ರಾಹ್ಮಣಃ, ಎಂಬ ವೇದವಾಕ್ಯವನರಿತು ಬ್ರಹ್ಮಭೂತನಾದಾತನೆ ಬ್ರಾಹ್ಮಣ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ."

"ಗುಣದಿಂದ ಹಾರುವನಲ್ಲದೆ ಅಗಣಿತ ಅಭ್ಯಾಸದಿಂದ ಹಾರುವನಲ್ಲ ನೋಡಾ. ಹಾರಬೇಕು ಮಲತ್ರಯಂಗಳ, ಹಾರಬೇಕು ಸೃಷ್ಟಿ ಸ್ಥಿತಿ ಲಯವ ಹಾರಬೇಕು ಸರ್ವಹಾರ ಕಪಿಲಸಿದ್ಧ ಮಲ್ಲಿಕಾರ್ಜುನನ ಆಹಾರದಲ್ಲಿ."

ಮೇಲಿನ ಈ ವಚನಗಳಿಂದ ನಿಜವಾದ ಬ್ರಾಹ್ಮಣನು ಯಾರು ಎಂಬ ಕಲ್ಪನೆಯು ಸಹಜವಾಗಿ ಹೊಳೆಯುವದು.

ಇನ್ನು ಹೊಲೆಯನಾರೆಂಬುದನ್ನು ನೋಡೋಣ. ಇದನ್ನು ಬಸವೇಶ್ವರನ ವಚನದಲ್ಲಿ ಸ್ಪಷ್ಟವಾಗಿ ಕಾಣುವೆವು.

"ಕೊಲ್ಲುವನೇ ಮಾದಿಗನು. ಹೊಲಸು ತಿಂಬುವನೇ ಹೊಲೆಯ. ಕುಲವೇನೋ? ಅವಂದಿರ ಕುಲವೇನೋ ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವರು ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು."

ಹೀಗೆ ಭಕ್ತರಲ್ಲಿ ಭೇದವಿಲ್ಲೆಂದ ಮೇಲೆ ಅವರ ಪರಸ್ಪರ ಕೂಡುವಿಕೆ ಊಟ ಮಾಡುವದು ಶರೀರಸಂಬಂಧ ಮಾಡುವದು ನಡೆಯಬೇಕಲ್ಲವೇ? ಆಗ ಅನೇಕರು ಆಕ್ಷೇಪಣೆಗಳನ್ನು ಎತ್ತಬಹುದು. ಅದಕ್ಕೆ ಬಸವೇಶ್ವರನು ಹೀಗೆ ಹೇಳಿದ್ದಾನೆ.

"ಉಂಬಲ್ಲಿ ಉಡುವಲ್ಲಿ ಕ್ರಿಯೆಯುಳಿಯಿತ್ತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರೆಂತಯ್ಯ? ಅವರು ಭಕ್ತರೆಂತೆಂಬೆನೆ? ಅವರು ಯುಕ್ತರೆಂತೆಂಬೆನಯ್ಯ? ಕೂಡಲಸಂಗಮದೇವ ಕೇಳಯ್ಯ. ಹೊಲತಿ ಶುದ್ಧ ನೀರ ಮಿಂದಂತಾಯಿತ್ತು."

ಕೇವಲ ಹೆಸರಿಗೆ ಮಾತ್ರ ಎಲ್ಲರೂ ಸಮಾನರು. ಆದರೆ ವ್ಯವಹಾರದಲ್ಲಿ ಮಾತ್ರ ಬೇರೆ ಬೇರೆ ಇರುವದು ಯೋಗ್ಯವಲ್ಲ ಎಂಬುದನ್ನು ಅಲ್ಲಮ ಪ್ರಭುವು ತನ್ನ ವಚನದಲ್ಲಿ ಈ ಪ್ರಕಾರ ಹೇಳಿರುವನು.

"ಎಡೆಗೆ ಬಾರದಾತ ಅಡಿಗೆಗೆ ದೂರ. ಅಡಿಗೆಗೆ ದೂರಾದಾತ ಮನೆಗೆ ದೂರ. ಮನೆಗೆ ದೂರಾದಾತ ಮನಕ್ಕೆ ದೂರ. ಮನಕ್ಕೆ ದೂರಾದಾತ ಗುಹೇಶ್ವರ ಲಿಂಗಾನುಭಾವಕ್ಕೆ ದೂರ ಚನ್ನಬಸವಾ."

ಇಷ್ಟು ವಿವೇಚನೆ ಮಾಡಿ ತಿಳಿಸಿದರೂ ಇನ್ನೂ ಕೆಲವರು ಅನೇಕ ತರದಿಂದ ವಾದಮಾಡಿದಂತೆ ಕಾಣುತ್ತದೆ. ಅದಕ್ಕೆ ಅವರು ಜಾತಿಯು ಸಂಬಂಧ ಪುನಃ ಮಾತನ್ನೇ ಎತ್ತಾದ ಹಾಗೆ ಸ್ಪಷ್ಟವಾದ ಉತ್ತರವನ್ನು ಕೊಟ್ಟಿದ್ದಾರೆ. ಅದನ್ನು ಮಾದರ ಚನ್ನಯ್ಯನ ವಚನದಲ್ಲಿ ಕಾಣಬಹುದು. ಅದರಲ್ಲಿ ಶ್ರೇಷ್ಠ ಋಷಿವರ್ಯರ ಜನ್ಮಗಳು ಇರುವವು. ಅದನ್ನೆಲ್ಲ ವಿಚಾರಿಸುತ್ತ ಹೋದರೆ ಬ್ರಾಹ್ಮಣರೆಲ್ಲರೂ ಶೂದ್ರ ಮಾದಿಗ ವಂಶದವರಾಗುವರು.

"ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ, ದೂರ್ವಾಸ ಮುಚ್ಚಿಗ, ದಧೀಚಿ ಕೀಲಿಗ, ಕಶ್ಯಪ ಕಮ್ಮಾರ, ರೋಮಜ ಕಂಚುಗಾರ, ಕೌಂಡಿಲ್ಯ ನಾವಿಂದ, ಎಂದುದನರಿಯದೆ ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ? ಇಂತೀ ಸಪ್ತ ಋಷಿಗಳೆಲ್ಲರೂ ಸತ್ಯದಿಂದ ಮುಕ್ತರಾದುದನರಿಯದೆ ಅಸತ್ಯದಲ್ಲಿ ನಡೆದು ವಿಪ್ರರು ನಾವು ಘನವೆಂದು ಹೋರುವ ಹೊತ್ತುಹೋಕರ ಮಾತೇತಕ್ಕೆ? ಕಯ್ಯುಳಿಗತ್ತಿ ಅಡಿಗೂಂಟಿ ಕೆಡೆಯಾಗಬೇಡ, ಅರಿ ನಿಜಾತ್ಮಾ ರಾಮ ರಾಮನಾ."

ಇನ್ನು ಕೆಲವರು ವೇದಾಗಮಾದಿಗಳನ್ನು ಆಧಾರಕೊಟ್ಟು ಅಸ್ಪೃಶ್ಯರನ್ನು ಮುನ್ನಿಸಲಾಗದೆಂದು ಹೇಳಿದ್ದಕ್ಕೆ ಬಸವೇಶ್ವರನು ಒಳ್ಳೇ ಧೈರ್ಯದಿಂದ,

"ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ವೆ ನೋಡಯ್ಯ. ಮಹಾ

ದಾನಿ ಕೂಡಲಸಂಗಮದೇವ, ಮಾದರ ಚನ್ನಯ್ಯನ ಮನೆಯ ಮಗ ನಾನಯ್ಯ."

ಎಂದು ಹೇಳಿ ವೇದಾಗಮಾದಿಗಳಿಂದ ಈ ವಿಷಯದಲ್ಲಿ ಯಾವ ಉಪಯೋಗವಿಲ್ಲೆಂದೂ ಮನುಷ್ಯನು ತನ್ನ ಸದಸದ್ವಿವೇಕಕ್ಕೆ ಹೊಳೆದದ್ದನ್ನು ಮಾಡುವದೇ ನ್ಯಾಯವೆಂದೂ ತಿಳಿಸಿದನು.

ಇಲ್ಲಿಯ ವರೆಗೆ ಅಸ್ಪೃಶ್ಯರ ವಿಷಯವಾಗಿ ಬಸವೇಶ್ವರನ ಮತ್ತು ಉಳಿದ ಕೆಲವು ಶಿವಶರಣರ ವಿಚಾರಗಳನ್ನು ಹೇಳಿದುದಾಯಿತು. ಇನ್ನು ಪ್ರತ್ಯಕ್ಷ ಅವರು ಅದನ್ನು ಪ್ರಚಾರದಲ್ಲಿ ತಂದರೋ ಹೇಗೋ ನೋಡೋಣ. ಬಸವೇಶ್ವರನ ಮತ್ತು ಉಳಿದ ವಚನಕಾರರ ವಿಷಯವಾಗಿ ಹೇಳುವ ಮುಖ್ಯ ಮಾತೇನಂದರೆ ಅವರು ವ್ಯವಹಾರದಲ್ಲಿ ಉಪಯುಕ್ತವಾದ ಮತ್ತು ಆಚರಿಸಲಿಕ್ಕೆ ಬರುವಂಥ ವಿಷಯಗಳನ್ನೇ ಪ್ರತಿಪಾದಿಸುತ್ತಿದ್ದರು. ಮತ್ತು ಬರೆ ಬಾಯಿಂದ ಅವುಗಳನ್ನು ಹೇಳಿ ಬಿಡುತ್ತಿದ್ದಿಲ್ಲ. ಆದರೆ ಪ್ರತ್ಯಕ್ಷ ಕಾರ್ಯರೂಪದಲ್ಲಿ ತರುತ್ತಿದ್ದರು. ಹಾಗೆಯೇ ಅವರು ಅಸ್ಪೃಶ್ಯ ನಿವಾರಣೆಯನ್ನಾದರೂ ಪ್ರತ್ಯಕ್ಷವಾಗಿ ಮಾಡದೆ ಬಿಡಲಿಲ್ಲ. ಅಸ್ಪೃಶ್ಯತೆಯನ್ನು ಅವರು ಸಂಪೂರ್ಣವಾಗಿ ಹೋಗಲಾಡಿಸಿರಲಿಕ್ಕಿಲ್ಲ. ಆದರೆ ಅವರು ಸಣ್ಣ ಪ್ರಮಾಣದಲ್ಲಿ ಅಸ್ಪೃಶ್ಯ ನಿವಾರಣೆ ಮಾಡಿದರು. ಮತ್ತು ಅವರಲ್ಲಿ ಅಸ್ಪೃಶ್ಯ ನಿವಾರಣೆಯ ಬಗ್ಗೆ ಸಂಪೂರ್ಣವಾಗಿ ಸಹಾನುಭೂತಿಯು ಇತ್ತೆಂದು ಇತಿಹಾಸ ಪ್ರಸಿದ್ಧವಾದ ಸಮಾಜದಲ್ಲೆಲ್ಲ ಒಳ್ಳೇ ಕ್ರಾಂತಿಯನ್ನೇ ಉಂಟುಮಾಡಿದ ಹರಳಯ್ಯ ಮಧುವಯ್ಯರ ಬಾಂಧವ್ಯದಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಹರಳಯ್ಯನು ಮೊಚ್ಚೆಗಾರನು. ಅವನು ಬಸವೇಶ್ವರನ ಮೇಲಿನ ಭಕ್ತಿಯ ಪ್ರೇಮಕ್ಕಾಗಿ ತನ್ನ ಮತ್ತು ತನ್ನ ಹೆಂಡತಿಯ ಚರ್ಮದಿಂದ ಒಂದು ಸುಂದರವಾದ ಮೊಚ್ಚೆಯ ಜೋಡನ್ನು ಮಾಡಿಕೊಂಡು ಬಸವೇಶ್ವರನಿಗೆ ಅವುಗಳನ್ನು ಕಾಣಿಕೆಯಾಗಿ ಅರ್ಪಿಸಲಿಕ್ಕೆ ಹೋದನು. ಆದರೆ ಬಸವೇಶ್ವರನು ಅವುಗಳನ್ನು ಮೆಟ್ಟಿದರೆ ತನ್ನ ಭಕ್ತರನ್ನು ತುಳಿದಂತೆಯಾಗುವದರಿಂದ ಬಹಳ ವಿನಯದಿಂದ ಅವುಗಳನ್ನು ನಿರಾಕರಿಸಿದನು. ಆ ಮೇಲೆ ಹರಳಯ್ಯನು ಉಪಾಯವಿಲ್ಲದೆ ಅವುಗಳನ್ನು ಕಟ್ಟಿಕೊಂಡು ಮನೆಗೆ ಬರುತ್ತಿದ್ದನು. ದಾರಿಯಲ್ಲಿಯೇ ದಂಡನಾಯಕನಾದ ಮಧುವಯ್ಯನೆಂಬ ಬ್ರಾಹ್ಮಣನ ಮನೆಯಿದ್ದು ಆತನು ಹರಳಯ್ಯನನ್ನು ಕರೆದು ಅವನು ಒಯ್ಯುತ್ತಿರುವ

ವಸ್ತುವಾವುದೆಂಬದನ್ನು ಕೇಳಿದನು. ಹರಳಯ್ಯನು ಅವುಗಳನ್ನು ಬಿಚ್ಚಿ ತೋರಿಸಿ ಇದ್ದ ಸಂಗತಿಯನ್ನೆಲ್ಲ ವಿವರಿಸಿ ಹೇಳಲು ಮಧುವಯ್ಯನು ಆ ಸುಂದರವಾದ ಮೊಚ್ಚಿ ಜೋಡನ್ನು ಮೆಟ್ಟಿಯೇ ತೀರಬೇಕೆಂಬ ಹವ್ಯಾಸಕ್ಕೆ ಬಿದ್ದನು. ಆದರೆ ಹರಳಯ್ಯನು ಅವನಿಗೆ "ಶಿವಶರಣರು ಮೆಟ್ಟುವ ಜೋಡನ್ನು ನೀವು ಮೆಟ್ಟುವದು ಯೋಗ್ಯವಲ್ಲ. ಇದರಿಂದ ನಿಮಗೆ ಅಪಾಯವಾಗುವದು" ಎಂದು ಹೇಳಿದನು. ಆದರೆ ಅಧಿಕಾರ ಮದಾಂಧನಾದ ಮಧುವಯ್ಯನು ಅವನ ಮಾತುಗಳನ್ನು ಕೇಳದೆ ಒತ್ತಾಯದಿಂದ ಅವುಗಳನ್ನು ತಕ್ಕೊಂಡನು. ಹರಳಯ್ಯನು ಸುಮ್ಮನೆ ಮನೆಗೆ ತೆರಳಿದನು.

ಇತ್ತ ಮಧುವಯ್ಯನು ಆ ಸುಂದರವಾದ ಜೋಡನ್ನು ಒಳ್ಳೇ ಆನಂದ ಮತ್ತು ಆತುರದಿಂದ ಮೆಟ್ಟಿದ್ದೊಂದೇ ತಡ, ಅವನ ಮೈಯಲ್ಲಿ ಉರಿಬಿದ್ದು ವೇದನೆಯಿಂದ ಬಹಳ ತಳಮಳಿಸಹತ್ತಿದನು. ಆಗ ಅವನು ಯೋಗ್ಯ ಜನರಿಗೆ ಕೇಳಿ ನೋಡಲು ಪ್ರತಿದಿವಸ ತಣ್ಣೀರಿನ ಸ್ನಾನವನ್ನು ಮಾಡಬೇಕೆಂದು ಹೇಳಿದರು. ಮುಂದೆ ಅವನು ಪ್ರತಿದಿನ ತಣ್ಣೀರಿನ ಸ್ನಾನವನ್ನು ಬೇಕಾದಷ್ಟು ಮಾಡಹತ್ತಿದನು. ಆದರೆ ಮೈ ಉರಿಯುವದು ಮಾತ್ರ ಕಡಿಮೆಯಾಗಲಿಲ್ಲ. ಹೀಗೆ ಕೆಲವು ದಿವಸಗಳು ಗತಿಸಿದ ನಂತರ ಒಂದು ವಿಚಿತ್ರ ಸಂಗತಿಯು ಘಟಿಸಿತು. ಪ್ರತಿದಿವಸ ಸಮೀಪದ ಹೊಳೆಯಿಂದ ನೀರು ತರುತ್ತಿದ್ದ ದಾಸಿಯು ಒಂದು ದಿನ ದಾರಿಯಲ್ಲಿ ಡೊಂಬರ ಆಟವನ್ನು ನೋಡುತ್ತ ವೇಳೆ ಕಳೆಯಲು ಮುಂದೆ ಹೊತ್ತು ಮುಳುಗುವ ವೇಳೆಗೆ ಅವಳಿಗೆ ತನ್ನ ಕೆಲಸದ ನೆನಪಾಯಿತು. ಆಗ ಅವಳು ಅವಸರದಿಂದ ಹೊಳೆಗೆ ಹೋಗದೆ ಅಲ್ಲಿಯೇ ಒಂದು ಓಣಿಯ ಬದಿಗೆ ಇರುವ ಒಂದು ಕೊಂಡದಲ್ಲಿರುವ ನೀರನ್ನು ಯಾರೂ ಇಲ್ಲದ್ದನ್ನು ನೋಡಿ ಬೇಗನೇ ತುಂಬಿಕೊಂಡು ಮನೆಗೆ ಬಂದು ಮಧುವಯ್ಯನಿಗೆ ಸ್ನಾನ ಮಾಡಿಸಿದಳು. ಕೂಡಲೆ ಅವನ ಮೈ ಉರಿಯುವದು ಕಡಿಮೆಯಾಗಿ ಪೂರ್ಣ ಸ್ನಾನವಾದ ಮೇಲೆ ಅವನು ಸಂಪೂರ್ಣವಾಗಿ ಗುಣಹೊಂದಿದನು.

ಹೀಗೆ ಅಕಸ್ಮಾತ್ತಾಗಿ ಆ ನೀರಿನಿಂದ ಗುಣಹೊಂದಿದ್ದನ್ನು ಕಂಡು ಅವನಿಗೆ ಬಹಳ ಆಶ್ಚರ್ಯವಾಯಿತು. ಆ ನೀರಿನಲ್ಲಿ ವಿಶೇಷ ಗುಣವಿರಬೇಕೆಂದು ಅವನು ದಾಸಿಗೆ ಹೆದರಬೇಡೆಂದು ಹೇಳಿ ಇದ್ದ ಸಂಗತಿ

ಯನ್ನು ಇದ್ದ ಹಾಗೆ ಹೇಳೆಂದು ಅಪ್ಪಣೆ ಮಾಡಿದನು. ಅವಳು ಮೊದಲಿನಿಂದ ಕೊನೆಯ ವರೆಗೆ ಎಲ್ಲ ವಿಷಯವನ್ನು ಹೇಳಲು ಅವನಿಗೆ ಆ ಕೊಂಡವು ಹರಳಯ್ಯನು ಚರ್ಮವನ್ನು ಕೊಳೆಹಾಕುವ ನೀರಿನ ಕೊಂಡವೆಂದು ಗೊತ್ತಾಯಿತು. ಆಗ ಅವನಲ್ಲಿ ಹರಳಯ್ಯನು ಅಸ್ಪೃಶ್ಯನಾದರೂ ಅವನ ಪವಿತ್ರ ಆಚರಣೆಯ ಬಗ್ಗೆ ಬಹಳ ಭಕ್ತಿಯು ಹುಟ್ಟಿತು. ಅವನ ಉಪಕಾರವು ಬಹಳವಾದುದರಿಂದ ಅದನ್ನು ಹೇಗಾದರೂ ಮಾಡಿ ತೀರಿಸಲೇಬೇಕೆಂದು ನಿಶ್ಚಯ ಮಾಡಿ ಆತನ ಮನೆಗೆ ಹೋಗಿ ಇಲ್ಲಿಯ ವರೆಗೆ ಆದ ಎಲ್ಲ ವೃತ್ತಾಂತವನ್ನು ಅರುಹಿ ಕೊನೆಗೆ ತನ್ನ ಮಗಳನ್ನು ಅವನ ಮಗನಿಗೆ ಸ್ವೀಕರಿಸಲಿಕ್ಕೆ ಬೇಡಿಕೊಂಡನು. ಅಸ್ಪೃಶ್ಯನಾದ ಹರಳಯ್ಯನಿಗೆ ಇದನ್ನೆಲ್ಲ ಕೇಳಿ ಅವನಿಗೆ ಬಹಳ ಆಶ್ಚರ್ಯವಾಯಿತು. ಮತ್ತು ತನ್ನಂಥವರಿಗೆ ಇಂಥ ಬಾಂಧವ್ಯವು ಯೋಗ್ಯವಲ್ಲೆಂದು ಪರಿಪರಿಯಿಂದ ಹೇಳಿಕೊಂಡರೂ ಮಧುವಯ್ಯನು ಅದು ಆಗಿಯೇ ತೀರಬೇಕೆಂದು ಹಟಹಿಡಿದನು. ಮುಂದೆ ಉಳಿದ ಶಿವಶರಣರ ಒಪ್ಪಿಗೆಯಿಂದ ಸುಪ್ರಸಿದ್ಧವಾದ ಮಿಶ್ರ ವಿವಾಹವು ಜರುಗಿತು.

ಪರಸ್ಪರ ಒಳ್ಳೇ ಪ್ರೇಮದಿಂದ ಜರುಗಿದ ಈ ವಿವಾಹದ ಸಂಗತಿಯನ್ನು ಗುಪ್ತವಾಗಿ ಇಡುವ ಸಂಭವವಿದ್ದಿಲ್ಲ. ನಿಜವಾಗಿ ನೋಡಿದರೆ ಇಡೀ ಸಮಾಜಕ್ಕೆಲ್ಲ ಇದೊಂದು ಆದರ್ಶ ವಿವಾಹವೇ ಸರಿ. ಮತ್ತು ಅಸ್ಪೃಶ್ಯ ನಿವಾರಣೆಯ ಬಗ್ಗೆ ಸಣ್ಣ ಪ್ರಮಾಣದಲ್ಲಿ ಮಾಡಿದ ಒಂದು ಪ್ರಯೋಗವೆಂದು ಹೇಳಬಹುದು. ಆದುದರಿಂದ ಈ ಸಂಗತಿಯು ದೇಶದಲ್ಲೆಲ್ಲ ಹಬ್ಬಿತು. ಅರಸನಾದ ಬಿಜ್ಜಳನಿಗಂತೂ ಈ ಸುದ್ದಿಯು ಈ ಮೊದಲೇ ಹೋಗಿ ಮುಟ್ಟಿತ್ತು. ಹರಳಯ್ಯ-ಮಧುವಯ್ಯರು ವಂಶಪರಂಪರೆಯಿಂದ ನಡೆದು ಬಂದ ವರ್ಣಾಶ್ರಮ ಧರ್ಮದ ತತ್ವಗಳನ್ನು ಮುರಿದು ವರ್ಣಸಂಕರ ಮಾಡಿದರೆಂಬ ಆರೋಪದಿಂದ ಅವರನ್ನು ಹಿಡಿದು ಬಿಜ್ಜಳನ ಮುಂದೆ ತರಲಾಯಿತು. ಅವರಿಗೆ ಮರಣ ದಂಡನೆಯು ವಿಧಿಸಲ್ಪಟ್ಟಿತು. ಬಿಜ್ಜಳನಿಗೆ ಅನೇಕರು ಅನೇಕ ರೀತಿಯಿಂದ ಬುದ್ಧಿಯನ್ನು ಹೇಳಿದರೂ ಅವನು ಕೇಳಲಿಲ್ಲ. ಬಸವೇಶ್ವರನಿಗೂ ಅವನಿಗೂ ಮನಸ್ತಾಪವು ಮೊದಲಿನಿಂದ ಇತ್ತು. ಮತ್ತು ಬಸವೇಶ್ವರನು ಕೊನೆಯ ವರೆಗೂ ಅಹಿಂಸಾ ವೃತ್ತಿಯನ್ನೇ ಪ್ರತಿಪಾದಿಸಿದನು. ಆದರೆ ಶಿವಶರಣರ ಮರಣ ದಂಡನೆಯನ್ನು ತಾಳಲಾರದ ಉಳಿದ ಶರಣರಿಗೆ

ಬಸವೇಶ್ವರನ ಈ ನಡತೆಯು ಸರಿಬೀಳಲಿಲ್ಲ. ಹೀಗಾಗಿ ಶಿವಾನುಭವ ಮಂಟಪದ ಶರಣರೆಲ್ಲರಲ್ಲಿಯೂ ಮನಸ್ತಾಪವು ಹೆಚ್ಚಾಯಿತು. ಆಗ ಬಸವೇಶ್ವರನು ತನ್ನ ಮಾತು ಯಾರೂ ಕೇಳುವದಿಲ್ಲೆಂದೂ ಇಲ್ಲಿಗೆ ತನ್ನ ಅವಸಾನ ಕಾಲವು ಮುಗಿಯಿತೆಂದೂ ತಿಳಿದು ಹರಳಯ್ಯ ಮಧುವಯ್ಯರ ವಧೆಯು ಆಗಲು ಶಿವಶರಣರ ಕೊಲೆಯನ್ನು ತಾಳಲಾರದ ಉಗ್ರಪಂಗಡದ ಕೆಲವು ಶರಣರು ಭಯಂಕರ ರೊಚ್ಚಿಗೆದ್ದು ಬಿಜ್ಜಳನನ್ನು ಕೊಂದುಹಾಕಿದರು. ಮುಂದೆ ಶರಣರ ತಂಡವೆಲ್ಲ ಮುರಿದು ಅವರು ಬೇರೆ ಬೇರೆ ದಿಕ್ಕುಗಳಿಗೆ ಚದರಿ ಹೋಗಿಬಿಟ್ಟರು.

ಈ ಮೇಲಿನ ಕಥೆಯಿಂದ ಬಸವಾದಿ ಪ್ರಮಥರ ಅಸ್ಪೃಶ್ಯನಿವಾರಣೆಯ ತತ್ವವು ಎಷ್ಟು ಕ್ರಾಂತಿಕಾರಕವಾದ ಸಂಗತಿಗೆ ಪರಿಣಮಿಸಿತೆಂದು ಹೊಳೆಯದೆ ಇರಲಾರದು. ಇನ್ನೂ ಕೆಲವು ಮಡಿವಂತ ವೀರಶೈವರು ಬಸವೇಶ್ವರನು ಅಸ್ಪೃಶ್ಯನಿವಾರಣೆಯನ್ನು ಮಾಡಲೇ ಇಲ್ಲವೆಂದೂ ಮತ್ತು ಕೆಲವರು ತಮ್ಮಲ್ಲಿಯೇ ಇದ್ದ ಅಸ್ಪೃಶ್ಯರನ್ನಷ್ಟೇ ಉದ್ಧಾರ ಮಾಡಿದನೆಂದೂ ವಾದಿಸುತ್ತಾರೆ. ಬೇಕಾದವರು ಬೇಕಾದ ಹಾಗೆ ವಾದಿಸಲಿ. ಬಸವೇಶ್ವರನೂ ಮತ್ತು ಅವನ ಅನುಯಾಯಿಗಳೂ ಅಸ್ಪೃಶ್ಯನಿವಾರಣೆಗೆ ಸಂಪೂರ್ಣವಾಗಿ ಮೊದಲಿನಿಂದ ಕೊನೆಯವರೆಗೂ ಸಹಾನುಭೂತಿಯುಳ್ಳವರೂ, ಆದಷ್ಟು ಮಟ್ಟಿಗೆ ಅಸ್ಪೃಶ್ಯರನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಉದ್ಧಾರ ಮಾಡುವ ಆಲೋಚನೆಯುಳ್ಳವರೂ ಆಗಿದ್ದರೆಂದು ಮೇಲಿನ ಸಂಗತಿಯಿಂದ ಚನ್ನಾಗಿ ಕಂಡು ಬರುವದು. ಒಂದು ವೇಳೆ ಅವರು ಅಸ್ಪೃಶ್ಯನಿವಾರಣೆಗೆ ವಿರೋಧವಾಗಿದ್ದರೆ ಹರಳಯ್ಯ-ಮಧುವಯ್ಯರ ಪಕ್ಷಕಟ್ಟಿ ಅವರು ಮಾಡಿದ್ದು ನ್ಯಾಯವೆಂದು ಅವರನ್ನು ಉಳಿಸಲಿಕ್ಕೆ ಪ್ರಯತ್ನಪಡುತ್ತಿದ್ದಿಲ್ಲ. ಮತ್ತು ಹಾಗೆ ಅವರು ಮಾಡಿದ್ದು ತಪ್ಪೆಂದೂ ಇನ್ನೊಮ್ಮೆ ಇಂಥ ಸಂಗತಿಗಳು ಘಟಿಸದ ಹಾಗೆ ತಾವು ನೋಡಿಕೊಳ್ಳುತ್ತೇವೆಂದೂ ಅವರು ಬಿಜ್ಜಳನಿಗೆ ಹೇಳಿ, ಕ್ಷಮೆ ಬೇಡಿಕೊಂಡು ಎಲ್ಲ ಶರಣರೂ ಸುಖದಿಂದ ಇರಬಹುದಾಗಿತ್ತು. ಆದರೆ ಇಂಥ ಯಾವ ಸಂಗತಿಗಳೂ ಜರುಗಿಲ್ಲ. ನುಡಿಯಂತೆ ನಡೆಯತಕ್ಕವರಲ್ಲಿ ಅಗ್ರೇಸರರಾದ ಅವರು ತಮ್ಮ ತತ್ವ ಪ್ರತಿಪಾದನೆಗಾಗಿ ತಮ್ಮ ಜೀವನವನ್ನೇ ಅರ್ಪಣ ಮಾಡಿ ಕಾರ್ಯಸಾಧಿಸಿದರು ಹೊರತು ತಮ್ಮ ನುಡಿಯಲ್ಲಿಯೇ ನಂಬಿಗೆಯಿಲ್ಲದ ಅಂಜುಬುರುಕರಂತೆ ತಾವು ಮಾಡಿ

ದುದು ತಪ್ಪೆಂದು ಅವರು ಎಂದೂ ಒಪ್ಪಿಕೊಳ್ಳಲಿಲ್ಲ. ದೇವರ ಸಾಕ್ಷಿಯಾಗಿ ತಾವು ನ್ಯಾಯವಾದದ್ದನ್ನೇ ಮಾಡುತ್ತೇವೆಂದು ಎಲ್ಲರಿಗೂ ಸಾರಿ ಹೇಳಿದರು. ಮತ್ತು ಕೊನೆಯವರೆಗೂ ತಮ್ಮ ತತ್ವಗಳಂತೆಯೇ ನಡೆದು ಕೇವಲ ಅಸ್ಪೃಶ್ಯನಿವಾರಣೆಗಾಗಿಯೇ ಪ್ರಾಣತ್ಯಾಗ ಮಾಡಿದರು.

ಆಧುನಿಕ ಕಾಲದಲ್ಲಿ ಅಸ್ಪೃಶ್ಯನಿವಾರಣೆಯನ್ನು ಮಾಡಬೇಕೆಂದು ಪ್ರತಿಯೊಬ್ಬನು ಬಾಯಿಯಿಂದ ಹೇಳುತ್ತಿದ್ದರೂ ಅದು ಎಷ್ಟು ಕಠಿಣವಾದ ಕಾರ್ಯವೆಂಬುದು ಎಲ್ಲರಿಗೂ ತಿಳಿದ ಮಾತಾಗಿರುವದು. ಮಹಾತ್ಮಾ ಗಾಂಧಿಯವರು ಅಸ್ಪೃಶ್ಯನಿವಾರಣೆಯನ್ನು ಮಾಡುವಾಗ ಅವರು ಎಷ್ಟು ಕಷ್ಟಗಳನ್ನು ಅನುಭವಿಸಬೇಕಾಯಿತು. ಎಷ್ಟು ಜನರು ಅವರಿಗೆ ಬಾಯಿಗೆ ಬಂದಂತೆ ಅಂದರು ಎಂಬದನ್ನು ಬೇರೆ ಹೇಳುವ ಅವಶ್ಯವಿಲ್ಲ. ಆದರೆ ದೊಡ್ಡವರು ಎಂಥ ಎಡರುಗಳು ಬಂದೊದಗಿದರೂ ಸಹ ತಮ್ಮ ಸತ್ಕಾರ್ಯಗಳನ್ನು ಮಾಡಿಯೇ ಮಾಡುವರು. ಹಾಗೆಯೇ ಬಸವೇಶ್ವರನಾದರೂ ೮೦೦ ವರ್ಷಗಳ ಪೂರ್ವದಲ್ಲಿಯೇ ಅಸ್ಪೃಶ್ಯನಿವಾರಣೆಯ ಕಾರ್ಯವನ್ನು ಒಳ್ಳೇ ಸಾಹಸದಿಂದ ಜರುಗಿಸಿದನು. ಅವನು ಹಾಗೆ ಮಾಡಿದ್ದು ನ್ಯಾಯವೋ? ಅನ್ಯಾಯವೋ? ಎಂಬುದು ಅವನ ಸೂಕ್ಷ್ಮ ವಿಚಾರಗಳನ್ನು ತಿಳಕೊಳ್ಳುವವರ ಮನಸ್ಸಿನ ಮೇಲೆ ಅವಲಂಬಿಸಿರುತ್ತದೆ. ಒಬ್ಬ ಮಹಾತ್ಮನ ವಿಚಾರಗಳನ್ನು ನಾವು ತಿಳಕೊಳ್ಳಬೇಕಾದರೆ ನಮ್ಮ ಬುದ್ಧಿ ಮನಸ್ಸುಗಳು ಬೆಳೆದು ಸಾರಾಸಾರವಾಗಿ ವಿಚಾರ ಮಾಡುವಷ್ಟು ಪರಿಪಕ್ವ ಸ್ಥಿತಿಗೆ ಬರಬೇಕಾಗುತ್ತದೆ. ಸಂಕುಚಿತ ಹೃದಯದಿಂದ ವಿಚಾರಿಸುತ್ತ ಹೋದರೆ ಬಸವೇಶ್ವರನು ಮಾಡಿದ್ದು ಅನ್ಯಾಯವೇ ಸರಿ ಎಂದು ಅನಿಸುವದು. ಆದರೆ ಎಲ್ಲ ಧರ್ಮಗಳನ್ನು ವಿಶಾಲ ಹೃದಯದಿಂದ ತುಲನಾತ್ಮಕ ದೃಷ್ಟಿಯಿಂದ ನೋಡುವವರಿಗೆ ಬಸವೇಶ್ವರನ ಕಾರ್ಯವು ಒಬ್ಬ ಮಹಾತ್ಮನು ಮಾಡುವ ಯೋಗ್ಯ ಕಾರ್ಯವೇ ಎಂದು ಸಿದ್ಧವಾಗುವದು. ಆದುದರಿಂದ ಅಸ್ಪೃಶ್ಯನಿವಾರಣೆಯ ಬಗ್ಗೆ ಬಸವೇಶ್ವರನ ವಿಚಾರಗಳು ಇನ್ನು ಕೆಲವರ ಮನಸ್ಸಿಗೆ ಬರದಿದ್ದರೆ ಅದು ಅವರ ತಪ್ಪಲ್ಲ. ಆದರೆ ಅವರಲ್ಲಿ ಶಿಕ್ಷಣ ಸಂಸ್ಕೃತಿ, ವಿಶಾಲಹೃದಯ, ಅನ್ಯಧರ್ಮಸಹಿಷ್ಣುತೆ, ಇವುಗಳ ಅಭಾವವು ಅತಿಶಯವಾಗಿದೆಯೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ.

---

# ಮಹಾತ್ಮ ಬಸವನೆ ಕಾಯ್ವೆ !



ಧಾಟಿ:– "ಐಮಾತೃಭೂಮಿ ತೇರೆ" ಎಂಬಂತೆ.

(ಹಿಂದುಸ್ತಾನಿ ಗಜಲ)

ಮಹಾತ್ಮ ಬಸವನೆ! ಕಾಯ್ವೆ
ಪರದಾಸ್ಯ ಶೃಂಖಲೆ ಹರಿಸೈ ॥ಪಲ್ಲ॥

೧

ಸ್ವಾರ್ಥಾಭಿಲಾಷೆಯನಳಿಸಿ
ದೇಶಾಭಿಮಾನವನುಳಿಸಿ
ಸೇವಾ–ಧರ್ಮವ ಸಾರಿ
ಸ್ವರಾಜ್ಯ ಸುಖವನು ತೋರಿ
ಪರಮಾತ್ಮ ಬಸವನೆ! ಕಾಯ್ವೆ !
ಪರದಾಸ್ಯ ಶೃಂಖಲೆ ಹರಿಸೈ !

೨

ವಚನಾಮೃತವನು ಸುರಿಸಿ
ಸಾಹಿತ್ಯ–ಸಂಪದ ಬೆಳಿಸಿ
ಕಾಯಕದೇಳ್ಗೆಯನರುಹಿ
ಕರುನಾಡ ಕೀರ್ತಿಯ ಹರಡಿ
ಕಲ್ಯಾಣ ಬಸವನೆ! ಕಾಯ್ವೆ !
ಪರದಾಸ್ಯ ಶೃಂಖಲೆ ಹರಿಸೈ !

೩

ಕರ್ನಾಟಕಿಂತಲು ಮಿಗಿಲು
ಕೈಲಾಸದೊಳೇನಿಹುದು ?
ಸದ್ಭಕ್ತ ವೃಂದವು ನಿನ್ನ
ಕರವುತ್ತಲಿರುವದು ಮುನ್ನ
ಕಾರುಣ್ಯ ಮೂರುತಿ ಬಾರೈ !
ಪರದಾಸ್ಯ ಶೃಂಖಲೆ ಹರಿಸೈ !

— ಆನಂದಕವಿ–ಕುರಗುಂದ.

# ಋಷಿಗಳ ಕಾಲದಲ್ಲಿ.

(ಲೇ:— ಮಧುರ ಚೆನ್ನ)

—:—

ಆಧುನಿಕ ತರ್ಕ ಪ್ರಧಾನ ಆಧ್ಯಾತ್ಮ ಸಾಧಕರು ಉಪನಿಷತ್ಕಾಲದ ಋಷಿಗಳ ಉದಾರ ಜೀವನದ ಕಡೆಗೆ ಒಂದಿಷ್ಟು ಕಣ್ದೆರೆದು ನೋಡುವುದು ಆಗತ್ಯವಾಗಿದೆ. ಅವರಲ್ಲಿ ಛಲವಿಲ್ಲ, ಹಮ್ಮಿಲ್ಲ, ಏಕದೇಶೀಯತೆಯಿಲ್ಲ. ಅಸತ್ಯವಿಲ್ಲ. ಆತುರವಿಲ್ಲ. ಅವರು ಇಂಥ ಧೀರರು.

× × ×

ನಾಲ್ಕು ಜನ ಋಷಿಗಳು ಒಂದೆಡೆ ಕಲೆತರೆ ತೀರಿತು. ಪರಮ ತತ್ವವನ್ನು ಕುರಿತು ಚರ್ಚೆಗೆ ಆರಂಭ. ಒಬ್ಬೊಬ್ಬರು ಒಂದೊಂದು ದಿಕ್ಕಿನಿಂದ ಮಂಡಿಸಲಾರಂಭಿಸುವರು. ಕೊನೆಗೆ ಅಭಿಪ್ರಾಯ ಭೇದವುಂಟಾದರೆ ಎಲ್ಲರೂ ಕೂಡಿಕೊಂಡು ತಮಗಿಂತ ಹೆಚ್ಚಿನ ಜ್ಞಾನಿಯನ್ನು ಹುಡುಕಿಕೊಂಡು ಅವನೆಡೆಗೆ ಹೋಗುವರು. ಆತನು ಇವರಲ್ಲಿ ಯಾರ ತತ್ವವೂ ಅಲ್ಲವೆಂದು ಹೇಳಲಾರನು. ಯಾಕಂದರೆ ಅವೆಲ್ಲವೂ ಅವರವರ ಅನುಭವದಿಂದಲೇ ಸಿದ್ಧವಾದವುಗಳು. ಆದರೂ ಆತನು ಅವೆಲ್ಲ ಎಳೆಗಳನ್ನು ಒಂದುಗೂಡಿಸಿ ಒಂದು ಹೊಸ ಹುರಿಯನ್ನು ಹೊಸೆದು ಅವರಿಗೆ ಕೊಟ್ಟು, ಮೇಲೆ ಹೇಳುವುದೇನಂದರೆ:— "ನೀವು ಒಬ್ಬೊಬ್ಬರು ಕಂಡದ್ದೂ ಸತ್ಯವೇ ಹೌದಾದರೂ ಅದು ಆಂಶಿಕ ಸತ್ಯ. ನಿಮ್ಮೆಲ್ಲರ ಅಂಶಗಳನ್ನು ಒಳಕೊಂಡ ಅಖಂಡ ಸತ್ಯವೊಂದಿದೆ. ಅದೇ ಪರಮ ಸತ್ಯ. ಇದನ್ನು ಅರಿಯದೆ ನೀವು ನಿಮ್ಮ ನಿಮ್ಮ ಸತ್ಯದ ದಿಶಾನುಸಾರವಾಗಿ ಇಂಥಿಂಥ ಅಂಗವೈಕಲ್ಯಾದಿ ಹಾನಿಗಳೊದಗುತ್ತಿದ್ದವು." ಹೀಗೆಂದು ಆ ಪರಮ ಜ್ಞಾನಿಯು ಉಪದೇಶಗೈಯಲು ಅವರು ತಮ್ಮೆಲ್ಲರ ಅನುಭವಗಳ ಅಪೂರ್ಣತೆಯನ್ನೊಪ್ಪಿಕೊಂಡು ಸರ್ವಸಮನ್ವಯದ ಅಖಂಡ ತತ್ವಪಿಂಡವೊಂದನ್ನು ಸಂಪಾದಿಸಿಕೊಂಡು ಹೋಗುತ್ತಿದ್ದರು.

× × ×

ಇನ್ನೊಬ್ಬ ಋಷಿಯು ತನ್ನ ಮಗನಿಗೆ ಸಕಲ ಶಾಸ್ತ್ರಗಳನ್ನು ಕಲಿಸಿಕೊಟ್ಟು ರಾಜಸಭೆಗೆ ಕಳುಹಲು ಅಲ್ಲಿ ಆ ಋಷಿ ಕುಮಾರನಿಗೆ ಪರಿ

ಚಯವಿಲ್ಲದ ಪ್ರಶ್ನಗಳನ್ನು ವಿಚಾರಿಸಿದ್ದರಿಂದ ಆತನು ಹಿಂದುರುಗಿ ತಂದೆಯ ಬಳಿಗೆ ಬಂದು— 'ನೀನು ನನಗೆ ಸ್ವಲ್ಪ ಮಾತ್ರವೇ ಕಲಿಸಿ ಎಲ್ಲಾ ಕಲಿಸಿದ್ದೇನೆಂದು ಹೇಳಿದೆಯಲ್ಲ!' ಎಂದು ಮುನಿಸಿನಿಂದ ನುಡಿದಾಗ ಆ ತಂದೆಯು— 'ಅಯ್ಯೋ! ನನಗೇ ಆ ಪ್ರಶ್ನೆಗಳು ಬಗೆಹರಿಯದಿರಲು ನಿನಗೇನು ಕಲಿಸಲಿ? ನೀನು ಅನಕಾ ಇಲ್ಲೇ ಇರು. ಮೊದಲು ನಾನೇ ಅಲ್ಲಿಗೆ ಹೋಗಿ ಕಲಿತುಕೊಂಡು ಬರುತ್ತೇನೆ.' ಎಂದು ಹೇಳಿ ಶಿಷ್ಯಭಾವದಿಂದ ರಾಜನಲ್ಲಿಗೆ ಹೊರಟು ಹೋಗುತ್ತಾನೆ.

× × ×

ಮತ್ತೊಬ್ಬ ಕುಮಾರನು ಬ್ರಹ್ಮವಿದ್ಯೆಗೆ ಮನಸೋತು ಅದನ್ನು ಸಂಪಾದಿಸುವದಕ್ಕೆಂದು ಗುರುಕುಲಕ್ಕೆ ಹೋಗಲು ಅಲ್ಲಿ ಆತನ ಗೋತ್ರ ಸೂತ್ರಗಳನ್ನು ವಿಚಾರಿಸಿದಾಗ— "ನನ್ನ ತಾಯಿಯು ಯವ್ವನದ ಅಂಧತೆಯಲ್ಲಿ ಬಹುಜನರನ್ನು ಪರಿಚರಿಸಿದ್ದರಿಂದ ನಾನು ಯಾರಿಗೆ ಹುಟ್ಟಿದನೆಂಬುದನ್ನು ನಾನೂ ಅರಿಯೆ; ನನ್ನ ತಾಯಿಯೂ ಅದನ್ನರಿಯಳು." ಎಂದು ಹೇಳುತ್ತಾನೆ. ಅದಕ್ಕೆ ಆ ಗುರುಕುಲದ ಮಹರ್ಷಿಯು- 'ಅಯ್ಯಾ, ಇಂಥ ಪ್ರಖರ ಸತ್ಯವನ್ನು ನುಡಿಯುವವನು ಬ್ರಹ್ಮವಿದ್ಯೆಗೆ ಎಂದೆಂದಿಗೂ ಅನರ್ಹನಿರಲಾರನು. ಆದ್ದರಿಂದ ನಿನ್ನ ಗೋತ್ರಸೂತ್ರಗಳು ಗೊತ್ತಿಲ್ಲದಿದ್ದರೂ ಅಡ್ಡಿಯಿಲ್ಲ' ಎಂದು ಆಶೀರ್ವದಿಸುವನು.

× × ×

"ಅದು ಹೇಗೆ?" ಎಂದು ಶಂಕಿಸಿದಾಗ ಉಪನಿಷತ್ತಿನ ಋಷಿಗಳು "ಹೀಗೆ" ಎಂದು ತಟ್ಟನೆ ಸಮಾಧಾನವನ್ನು ಹೇಳದೆ- "ಅಯ್ಯಾ, ತಪವೂ ಬ್ರಹ್ಮಚರ್ಯವೂ ಇಲ್ಲದೆ ನಿಜಜ್ಞಾನವು ನೆಲೆಗೊಳ್ಳಲಾರದು. ಆದ್ದರಿಂದ ಇಂತಿಷ್ಟು ವರ್ಷ ಬ್ರಹ್ಮಚರ್ಯನಿರತನಾಗಿ ತಪವನ್ನು ಆಚರಿಸಿ ಆ ಮೇಲೆ ಇಲ್ಲಿಗೆ ಬಾ ಅಂದರೆ ನಿನಗೆ ನನ್ನ ಹೇಳಿಕೆಯು ಅರ್ಥವಾದೀತು." ಎಂದು ಅಪ್ಪಣೆಯನ್ನು ವಿಧಿಸುವರು. ಜಿಜ್ಞಾಸುವು ಅದರಂತೆ ಕೆಲವು ವರುಷ ಆಚರಿಸಿ ಬಂದು ಸತ್ಯ ತತ್ವವನ್ನು ತಿಳಿದುಕೊಂಡು ಹೋದ ಮೇಲೆ ಕೆಲದಿನಗಳಲ್ಲಿ ಆತನಿಗೆ ಅದರಲ್ಲಿ ಪುನಃ ಅತೃಪ್ತಿಹುಟ್ಟಿ. 'ಸ್ವಾಮಿ, ಇನ್ನೂ ಮುಂದೆ ಏನಾದರೂ ಇದೆಯೆ?' ಎಂದು ಗುರುವಿಗೆ ಬಿನ್ನೈಸಲು ಆತನು- 'ಪುನಃ ಇಂತಿಷ್ಟು ವರುಷ ಬ್ರಹ್ಮಚರ್ಯನಿರತನಾಗಿ ತಪವನ್ನಾಚರಿಸಿ ಆ ಮೇಲೆ ನನ್ನೆಡೆಗೆ ಬಾ' ಎಂದು ಆಜ್ಞಾಪಿಸುವನು. ಶಿಷ್ಯನು

ಹಾಗೆ ಅನುಸರಿಸಿದ ಬಳಿಕ ಗುರುವು ಮತ್ತೆ ಬೋಧಿಸುವನು. ಅಷ್ಟಕ್ಕೇ ಎಲ್ಲವೂ ಎಲ್ಲಿ ತೀರುತ್ತದೆ? ಶಿಷ್ಯನು ಪುನಃ ಬರುತ್ತಾನೆ. ಗುರುವು ಪುನಃ ಜ್ಞಾನಕ್ಕೆ ತಪಸ್ಸು ಮತ್ತು ಬ್ರಹ್ಮಚರ್ಯ ಇವುಗಳ ಮಹತ್ವವೆಷ್ಟಿದೆಯೆಂಬುದನ್ನು ತಿಳಿಸಿಕೊಡುತ್ತಾನೆ. ಆತನು ಪುನಃ ಅದರಂತೆ ಆಚರಿಸಿ ಬಂದ ಬಳಿಕ ಋಷಿಯು ಪುನಃ ಬೋಧಿಸುತ್ತಾನೆ. ಹೀಗೆ ಪುನಃ ಪುನಃ ತಪಸ್ಸು, ಮತ್ತು ಪುನಃ ಪುನಃ ಬೋಧನೆ. ಈ ಪ್ರಕಾರವಾಗಿ ಒಬ್ಬೊಬ್ಬರ ಜೀವನದಲ್ಲಿ ಪೂರ್ಣ ಜ್ಞಾನಪ್ರಾಪ್ತಿಗೆ ನೂರುಗಟ್ಟಲೆ ವರುಷಗಳು ಗತಿಸಿಹೋಗಿರುವವು.

× × ×

ಹೀಗೆ ಆಧ್ಯಾತ್ಮವೆಂಬುದು ಕಣಜದೊಳಗಿನ ಧಾನ್ಯವನ್ನು ತೆಗೆದುಕೊಂಡು ಕುದಿಸಿ ಅನ್ನವನ್ನು ಮಾಡಿಕೊಳ್ಳುವಂತೆ ಇರದೆ ಅರಣ್ಯದೊಳಗಿನ ಕಾಳುಗಳನ್ನು ಆರಿಸಿ ತಂದು ಕಾಡನ್ನು ಕಡಿದು, ಕಸವನ್ನು ಕಿತ್ತಿ, ನೆಲವನ್ನು ಹದಗೊಳಿಸಿ, ಉಚಿತಕಾಲದಲ್ಲಿ ಬಿತ್ತಿ, ಸಾವಧಾನತೆಯಿಂದ ಬೆಳೆಯನ್ನು ಕಾಪಾಡಿ ಹದಕ್ಕೆ ಬಂದ ಬಳಿಕ ರಾಶಿಯನ್ನು ಮಾಡಿ ವಿಪುಲ ಅನ್ನ ಸಾಮುಗ್ರಿಯನ್ನು ದೊರಕಿಸಿಕೊಳ್ಳುವಂತೆ ದುರ್ಧರವಾಗಿದೆ.

× × ×

ಆದರೆ ಇಂದಿನವರಾದ ನಾವು ಇದ್ದ ಕಲ್ಮಷಗಳನ್ನೆಲ್ಲ ಇದ್ದಕ್ಕಿದ್ದಂತೆ ಇಟ್ಟುಕೊಂಡು ಒಂದೇ ದಿನದಲ್ಲಿ ಋಷಿಗಳ ಅಜ್ಜಮುತ್ತಂದಿರಾಗಿ ಬಿಡುತ್ತೇವೆ !!!

---

# ಪಾತಂಜಲ ದರ್ಶನ-ಭಗವದ್ಗೀತೆ.

(ಲೇಃ— ಹಣಮಂತರಾಯ ಸಾಸನೂರ ಎಮ್. ಎ. ವಿಜಾಪುರ.)

ಗೀತೆಯು ಮುಖ್ಯವಾಗಿ ಯೋಗಶಾಸ್ತ್ರವು. ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಅಧ್ಯಾಯ ಸಮಾಪ್ತಿ ಪ್ರದರ್ಶಕವಾದ 'ಶ್ರೀಮದ್ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗ ಶಾಸ್ತ್ರೆ' ಎಂಬ ಸಂಕಲ್ಪವಿರುವದು. ಇದರಿಂದ ಗೀತೆಯಲ್ಲಿ ಪ್ರತಿಪಾದಿತವಾದ ವಿಷಯವು ಬ್ರಹ್ಮ ವಿದ್ಯಾಂತರ್ಗತವಾದ ಯೋಗ ಶಾಸ್ತ್ರವೆಂದು ಗೊತ್ತಾಗುವದು. ಗೀತೆಯಲ್ಲಿ ಬ್ರಹ್ಮವಿದ್ಯೆ ಮತ್ತು ದಾರ್ಶನಿಕ ತತ್ವಗಳ ವಿವೇಚನೆಯಿದ್ದರೂ ಕೇವಲ ಅದೇ ವಿದ್ಯೆಯ ವಿಶ್ಲೇಷಣ ಮತ್ತು ವ್ಯಾಖ್ಯೆಗಳ ಸಲುವಾಗಿಯೇ ಅದು ರಚಿತವಾಗಿಲ್ಲ. ಜೀವನವು ಸುಖಕರವಾಗುವದು ಹೇಗೆ? ಸಂಸಾರದಲ್ಲಿದ್ದು ಅದರ ಕರ್ಮಾದಿಗಳನ್ನು ಮಾಡಲು ಅಲ್ಲಿಯೇ ದಿವ್ಯ ಭಾಗವತ ಜೀವನವು ದೊರೆಯುವದು ಹೇಗೆ? 'ಪ್ರಾಕ್-ಶರೀರ ವಿಮೋಕ್ಷಣಾತ್' ಅರ್ಥಾತ್ ಶರೀರ ತ್ಯಾಗದ ಮೊದಲೇ ಅಮೃತದ ಆಸ್ವಾದನೆ ಮಾಡಿ, ಜನ್ಮ-ಮೃತ್ಯು, ಜರಾ-ವ್ಯಾಧಿ ದುಃಖಗಳನ್ನು ಅತಿಕ್ರಮಣ ಮಾಡುವದು ಹೇಗೆ? ಇತ್ಯಾದಿ. ಗೀತೆಯಲ್ಲಿ ಇವೆಲ್ಲವುಗಳ ವ್ಯಾವಹಾರಿಕ ಪದ್ಧತಿಯ ಶಿಕ್ಷಣವು ಕೊಡಲ್ಪಟ್ಟಿರುವದು. ಆ ಅಪೂರ್ವ ಸಾಧನಾ ಪದ್ಧತಿಯೇ ಗೀತೆಯ ಯೋಗವು. ನಾಲ್ಕನೆಯ ಅಧ್ಯಾಯದ ಪ್ರಾರಂಭದಲ್ಲಿಯೇ ಭಗವಂತನು ತಾನೇ ತನ್ನ ಉಪದೇಶಕ್ಕೆ 'ಯೋಗ' ವೆಂಬ ಹೆಸರಿನಿಂದ ಕರೆಯುವನು. ಗೀತೆಯ ಉಪಸಂಹಾರದಲ್ಲಿ ಸಂಜಯನು ಗೀತೆಯಲ್ಲಿ ಹೇಳಿದ ಉಪದೇಶಕ್ಕೆ ಯೋಗ ವೆಂಬ ಹೆಸರಿನಿಂದ ಕರೆಯುವನುಃ—

"ವ್ಯಾಸ ಪ್ರಸಾದಾತ್ ಶ್ರುತ್ವಾನೇತದ್ ಗುಹ್ಯಮಹಂ ಪರಮ್ ।
ಯೋಗಂ ಯೋಗೇಶ್ವರಾತ್ † ಕೃಷ್ಣಾತ್ ಕಥಯತಃ ಸ್ವಯಮ್ ॥"

---

† ವ್ಯಾಸ ಪರಮರ್ಷಿ ಪ್ರಸಾದದಿ ।
ಲೇಸೆನಿಪ ನೆರೆ ಗೋಪ್ಯವೆನಿಸಿ ।
ಪೀ‌ಠ ಸಕಲ ಶಾಸ್ತ್ರಾರ್ಥಯೋಗಪತಿ ಯೆನಿಪಾ ॥
ವಾಸು ದೇವನೆ ತನಗೊಲಿದನ ಹ ।
ವಾಸವಾತ್ಮಭವಂಗೆ ಮನವೊಲಿ ।
ದೀಸ ನೊರೆದುದ ಕೇಳ್ದೆನಾಂ ಧೃತರಾಷ್ಟ್ರ ಕೇಳೆಂದ ॥
(ನಾಗರಸ)

ಸ್ವಯಂ ಕೃಷ್ಣನು ಈ ಯೋಗೋಪದೇಶವನ್ನು ಮಾಡಿರುವನೆಂದ ರೇನು ?

ಯೋಗಶಾಸ್ತ್ರವೆಂದರೆ ಸಾಮಾನ್ಯವಾಗಿ ಪಾತಂಜಲಿಯ ಯೋಗ ಸೂತ್ರವೆಂದು ತಿಳಿವಳಿಕೆಯುಂಟು. ಆ ಯೋಗವು ರಾಜಯೋಗವು. ಗೀತೆಯಲ್ಲಿ ಪಾತಂಜಲ ಯೋಗಸೂತ್ರದಲ್ಲಿ ವರ್ಣಿತವಾದ ರಾಜಯೋಗದ ವ್ಯಾಖ್ಯೆ ಅಥವಾ ಸಂಗ್ರಹವು ಇರುವದೆಂದರೆ ಬಹು ದೊಡ್ಡ ಪ್ರಮಾದವಾಗುವದು. ಕೆಲವು ಜನ ಗೀತಾರ್ಥ ವಿಚಾರಿಗಳು ಪತಂಜಲಿಯ ಯೋಗವೂ, ಗೀತೆಯ ಯೋಗವೂ ಒಂದೇ, ಭಿನ್ನವಲ್ಲ ಎಂದು ಭಾವಿಸಿ ದೊಡ್ಡ ಗಲಭೆಯನ್ನೇ ಎಬ್ಬಿಸಿರುವರು. ಗೀತೆಯ ಆಂಗ್ಲಭಾಷಾಂತರ ಕರ್ತರಲ್ಲಿ ಒಬ್ಬರಾದ ಟಿವ್ಸನ್ ಸಾಹೇಬರು ಗೀತೆಯ ಕರ್ಮಯೋಗವು ಪಾತಂಜಲ ಯೋಗದ ರೂಪಾಂತರವೆಂದು ಸ್ಪಷ್ಟವಾಗಿ ಹೇಳುವರು. ಆದರೆ ಒಳ್ಳೇ ಲಕ್ಷ್ಯಗೊಟ್ಟು ಓದಲು ಗೀತೆಯ ಯೋಗವು ಪಾತಂಜಲ ಸೂತ್ರ ವರ್ಣಿತವಾದ ರಾಜಯೋಗವಲ್ಲವೆಂದು ತಿಳಿಯುವದು, ಗೀತೆಗೂ ಪಾತಂಜಲ ದರ್ಶನಕ್ಕೂ ಇರುವ ಸಂಬಂಧವನ್ನು ಸಂಕ್ಷೇಪವಾಗಿ ಹೇಳುವದು ಈ ಲೇಖನದ ಉದ್ದೇಶ.

ಸಾಂಖ್ಯದಾರ್ಶನಿಕ ತತ್ವಗಳ ವಿಶ್ಲೇಷಣಗಳ ಮೇಲೆಯೇ ಪಾತಂಜಲ ಯೋಗದ ಕಟ್ಟಡವು. ಸಾಂಖ್ಯವು ಈಶ್ವರನ ಅಸ್ತಿತ್ವವನ್ನು ಒಪ್ಪುವದಿಲ್ಲ. ಪಾತಂಜಲ ದರ್ಶನವು ಒಪ್ಪುತ್ತದೆ. ಇಷ್ಟೇ ಇವುಗಳಲ್ಲಿಯ ಭೇದವು. ಇದಕ್ಕೋಸುಗ ಪಾತಂಜಲ ದರ್ಶನಕ್ಕೆ 'ಸೇಶ್ವರ ಸಾಂಖ್ಯ' ವೆಂಬ ಮತ್ತೊಂದು ಹೆಸರು.

ಪದಾರ್ಥ ನಿರ್ಣಯಾಂಶದಲ್ಲಿ ಸಾಂಖ್ಯ ದರ್ಶನಕ್ಕೂ ಪಾತಂಜಲ ದರ್ಶನಕ್ಕೂ ಯಾವ ಭೇದವೂ ಇಲ್ಲ. ಸಾಂಖ್ಯದಲ್ಲಿ ಪುರುಷ, ಪ್ರಕೃತಿ, ಮತ್ತು ಮಹತ್ ತತ್ವ ಮೊದಲಾದ ೨೫ (ಇಪ್ಪತ್ತೈದು) ತತ್ವಗಳು ಸ್ವೀಕೃತವಾಗಿರುವವು. ಇದಕ್ಕೋಸುಗ ಪಾತಂಜಲ ದರ್ಶನಕ್ಕೆ ಸಾಂಖ್ಯ ಪ್ರವಚನವೆಂದು ಮತ್ತೊಂದು ಹೆಸರು. ಆದರೆ ಸಾಂಖ್ಯದ ಇಪ್ಪತ್ತೈದು ತತ್ವಗಳ ಹೊರತು ಪಾತಂಜಲವು ಈಶ್ವರ ತತ್ವವನ್ನು ಒಪ್ಪಿಕೊಂಡಿದೆ. ಒಟ್ಟು ಪಾತಂಜಲದಲ್ಲಿ ೨೬ ತತ್ವಗಳಾಗುತ್ತವೆ. ಆದರೆ ಈಶ್ವರ ತತ್ವದ ಬಗ್ಗೆ ಸಾಂಖ್ಯಕ್ಕೂ ಪಾತಂಜಲಕ್ಕೂ ವಿಶೇಷ ಭೇದವಿಲ್ಲ. ಯಾಕೆಂದರೆ ಪಾತಂಜಲ ಯೋಗದಲ್ಲಿ ಈಶ್ವರನಿಗೆ ಬಹಳ ಗೌಣಸ್ಥಾನವಿದೆ.

ಸಾಂಖ್ಯ ಮತ್ತು ಪಾತಂಜಲಗಳ ಆರಂಭ ಮತ್ತು ಲಕ್ಷ್ಯಗಳು ಒಂದೇ. ಈ ಸಂಸಾರವು ದುಃಖಮಯ. ದುಃಖದ ಆತ್ಯಂತಿಕ ಮತ್ತು ಐಕಾಂತಿಕ ನಿವೃತ್ತಿಯೇ ಪುರುಷಾರ್ಥವು. ಪುರುಷನೊಡನೆ ಪ್ರಕೃತಿಯ ಸಂಯೋಗವಾಗಲು ಸಂಸಾರ ಲೀಲೆ; ಈ ಸಂಸಾರ ಲೀಲೆಯೇ ದುಃಖಕ್ಕೆ ಮೂಲವು. ಪುರುಷನು ಅಜ್ಞಾನ ವಶದಿಂದ ಪ್ರಕೃತಿಯೊಡನೆ ತಾನು ಒಂದು ಎಂದು ತಿಳಿಯುವನು. ಆದರಲ್ಲಿಯೇ ಪ್ರಕೃತಿಯ ಲೀಲೆಗೆ ಸುಯೋಗವು ದೊರೆಯುವದು. ಪುರುಷನಿಗೆ ಸುಖ ದುಃಖಗಳ ಭೋಗ ಮಾಡಬೇಕಾಗುವದು. ಆದುದರಿಂದ ಸಂಸಾರದಲ್ಲಿ ಆಗತ-ಅನಾಗತ ಸಮಸ್ತ ಸುಖ ದುಃಖಗಳು ವಸ್ತುತಃ ದುಃಖಗಳು. ಕಾರಣ ಅವು ಹೇಯ ಅರ್ಥಾತ್ ಪರಿತ್ಯಜ್ಯ. ಅವಿದ್ಯಾ ಅಥವಾ ಅಜ್ಞಾನವು ದೂರಾಗಲು ಪುರುಷನು ತನ್ನ ಪ್ರಕೃತ ಸತ್ತೆಯನ್ನು ಪಡೆದಾಗ, ಪ್ರಕೃತಿಯಿಂದ ತನ್ನ ಸ್ವಾತಂತ್ರ್ಯವನ್ನು ಹೊಂದಿದಾಗ ಅವನು ಪ್ರಕೃತಿಯ ಆಟಕ್ಕೆ ತನ್ನ ಆಟವೆಂದು ಭ್ರಮೆಗೊಳ್ಳುವದಿಲ್ಲ. ಆಗಲೇ ಪ್ರಕೃತಿಯ ಲೀಲೆ-ಸಂಸಾರದ ಲೀಲೆಯು ಮುಗಿಯುವದು—ಪುರುಷನ ದುಃಖಯೋಗವೂ ಮುಗಿಯುವದು ಪುರುಷನು ಮುಕ್ತಿ ಅಥವಾ ಕೈವಲ್ಯವನ್ನು ಸಂಪಾದನೆ ಮಾಡುವನು. ಈ ವರೆಗೆ ಸಾಂಖ್ಯ ಮತ್ತು ಪಾತಂಜಲಗಳಲ್ಲಿ ಯಾವ ಭೇದವೂ ಇರುವದಿಲ್ಲ ಆದರೆ ಎರಡರ ಸಾಧನಾ ಪದ್ಧತಿಯಲ್ಲಿ ಮಾತ್ರ ಭೇದವಿರುವದು. ಯಾವ ಉಪಾಯದಿಂದ ಈ ಮುಕ್ತಿ ಅಥವಾ ಕೈವಲ್ಯವು ಸಂಪಾದನೆ ಮಾಡಲು ಶಕ್ಯ? ಪುರುಷನಿಗೆ ಜ್ಞಾನಪ್ರಾಪ್ತಿ ಯಾವ ಕಾಲದಲ್ಲಿ? ತನ್ನ ಪ್ರಕೃತ ಸತ್ತೆಯ ಸಂಬಂಧದಿಂದ ಪುರುಷನು ಯಾವಾಗ ಸಚೇತನನಾಗುವನು? ಆಗಲೇ ಅವನಿಗೆ ಮುಕ್ತಿ ಎಂಬ ಈ ಸಾಂಖ್ಯರ ಮತವನ್ನು ಪಾತಂಜಲವು ಸ್ವೀಕಾರ ಮಾಡುತ್ತದೆ. * "ವಿವೇಕ ಖ್ಯಾತಿರವಿಪ್ಲವಾಹಾನೋಪಾಯಃ" ಅರ್ಥಾತ್ ಪುರುಷ ಮತ್ತು ಪ್ರಕೃ

* ಬಿಡದೆ ವಿವೇಕವನ್ನು ಅಭ್ಯಾಸ ಮಾಡುವದು ಅಜ್ಞಾನವನ್ನು ಹೋಗಲಾಡಿಸುವದು ಉಪಾಯವು.

ವಿಶೇಷಃ— ಅಭ್ಯಾಸಕ್ಕೆ ಇದೇ ನಿಜವಾದ ಪ್ರಯೋಜನವು. ಇದು ನಿಜ ಇದು ಸುಳ್ಳು; ಪುರುಷನು ಪ್ರಕೃತಿಯಲ್ಲ; ಮನಸ್ಸೂ ಅಲ್ಲ; ಭೌತಿಕ ಪದಾರ್ಥವೂ ಅಲ್ಲ; ಅದು ಪ್ರಕೃತಿಯಲ್ಲದುದರಿಂದ ಅದಕ್ಕೆ ಯಾವ ವಿಕಾರವೂ ಆಗಲಾರದು--- ಎಂದು ತಿಳಿಯುವದೇ ಅಭ್ಯಾಸದ ಪ್ರಯೋಜನ. ಬಿಡದೆ ಅಭ್ಯಾಸ ಮಾಡುವದರಿಂದ ವಿವೇಕವುಂಟಾಗುತ್ತದೆ. ಅಜ್ಞಾನವು ಓಡಿ ಹೋಗಿ ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆದ ಪುರುಷನ ದಿಟವಾದ ಸ್ವರೂಪವು ಬೆಳಗತೊಡಗುತ್ತದೆ.

ತಿಯ ಪ್ರಭೇದ ಸಂಬಂಧದಿಂದ ಸಂಪೂರ್ಣ ಜ್ಞಾನವು ಚರಮ ಭಾವ ದಲ್ಲಿ ಆಮೊಡನೆಯೇ ಮುಕ್ತಿಯಾಗುವದು. ಕಾರಣ ಜ್ಞಾನವೇ ಹಾನ ಮತ್ತು ಮುಕ್ತಿಯ ಉಪಾಯವಾಗುವದು. ಯಾವ ರೀತಿಯಿಂದ ಈ ವಿವೇಕ ಖ್ಯಾತಿಯು ಈ ಭೇದ ಜ್ಞಾನದಿಂದ ಸಂಪಾದಿಸಲ್ಪಡುತ್ತದೆ? ಬುದ್ಧಿಯಿಂದ ವಿಚಾರದ ಫಲದಲ್ಲಿಯೇ ಈ ವಿವೇಕ ಲಾಭವಾಗುವ ದೆಂದು ಸಾಂಖ್ಯವು ಹೇಳುವದು. ಮೊದಲು ಚಿತ್ತವನ್ನು ಶುದ್ಧ ಮತ್ತು ಶಾಂತ ಮಾಡಲು ಶಕ್ಯವಾಗದಿದ್ದರೆ ಜ್ಞಾನದ ಚರಮೋತ್ಕರ್ಷವಾ ಗಲು ಅಶಕ್ಯವೆಂದು ಪತಂಜಲಿಯು ಹೇಳುವನು. ಪತಂಜಲಿಯು ಯಾವ ಪದ್ಧತಿಯಿಂದ ಜ್ಞಾನಲಾಭದ ಉಪಾಯ ಸ್ವರೂಪವಾದ ಚಿತ್ತಕ್ಕೆ ಶುದ್ಧ ಮಾಡುವ ಉಪದೇಶವನ್ನು ಮಾಡಿರುವನು ಅದು ಅವನ ಅಷ್ಟಾಂಗ ಯೋಗವು.

"ಯೋಗಾಂಗಾನುಷ್ಠಾನಾತ್ ಜ್ಞಾನದೀಪ್ತಿರಾ ವಿವೇಕ ಖ್ಯಾತೇಃ" ಅರ್ಥಾತ್ ಯೋಗಾಂಗಳ ಅನುಷ್ಠಾನದಿಂದ ಜ್ಞಾನದ ಉತ್ಕರ್ಷವು ಆಗುತ್ತ ಆಗುತ್ತ ಕೊನೆಗೆ ವಿವೇಕಖ್ಯಾತಿಯುಂಟಾಗುವದು. ವಿವೇಕ ಖ್ಯಾತಿಯು ಜ್ಞಾನದ ಅಂತಿಮ ಮೇರೆಯು. ಪತಂಜಲಿಯ ಯೋಗವು ಬುದ್ಧಿ, ತರ್ಕ, ಯುಕ್ತಿ, ವಿಚಾರ ರೂಪವಾದ ಜ್ಞಾನಯೋಗವಲ್ಲ. ಚಿತ್ತದ ಚಾಂಚಲ್ಯತೆಯಿಂದಲೇ ನಮ್ಮ ಪ್ರಕೃತ ಜ್ಞಾನ ಅಥವಾ ವಿವೇ ಕಕ್ಕೆ ಅಡ್ಡಿಬರುವದು. ತಿಳಿಗೊಳದಲ್ಲಿ ಸ್ಪಷ್ಟವಾದ ಪ್ರತಿಬಿಂಬವು ಕಾಣು ವಂತೆ ರಾಡಿಯಿಂದ ಕೂಡಿದ ನೀರಿನಲ್ಲಿ ಕಾಣದು. ಆ ರಾಡಿಯು ತಳ ದಲ್ಲಿ ಸಂಚಯವಾಗಿ ನೀರು ಸ್ಥಿರವಾಗುವ ತನಕ ಸ್ಪಷ್ಟವಾದ ಪ್ರತಿ ಬಿಂಬವು ಕಾಣದು. ಅದರಂತೆ ಚಿತ್ತವು ಸ್ಥಿರ ಮತ್ತು ಪ್ರಶಾಂತವಾ ದಾಗ ಪ್ರಕೃತ ಜ್ಞಾನವು ತಾನೇ ಪ್ರಕಾಶ ಹೊಂದುವದು. ಅಂತೆಯೇ ಚಿತ್ತದ ಚಾಂಚಲ್ಯತೆಯನ್ನು ದೂರಮಾಡುವದು, ಚಿತ್ತವೃತ್ತಿ ನಿರೋಧ ಮಾಡುವದು ಪಾತಂಜಲ ದರ್ಶನದ ಮೂಲಸೂತ್ರವು. "ಯೋಗಶ್ಚಿ ತ್ತವೃತ್ತಿ ನಿರೋಧಃ"

ಪಾತಂಜಲವು ಸಾಂಖ್ಯದ ಮೂಲ ಮಾತಗಳನ್ನು ಗ್ರಹಣಮಾಡಿ ರುತ್ತದೆಂದು ಕಂಡುಬಂದರೂ ಅದರ ಮೇಲೆ ತನ್ನ ಈಶ್ವರ ತತ್ವವನ್ನು ಮಾತ್ರ ಹೊಂದಿಸಿರುತ್ತದೆ. ಸಾಂಖ್ಯದ ಪ್ರಕೃತಿ ಪುರುಷ ಪ್ರಭೇದ ಮತ್ತು ತತ್ವವಿಶ್ಲೇಷಣವನ್ನು ತಕ್ಕೊಂಡೇ ಗೀತೆಯ ಆರಂಭ. ಪಾತಂಜಲದಂತೆ

ಗೀತೆಯು ಹೇಳಿರುವದೇನಂದರೆ:- ಸಾಂಖ್ಯದಂತೆ ಕೇವಲ ಜ್ಞಾನ ಮತ್ತು ಸನ್ಯಾಸದ ಮೇಲೆ ಅವಲಂಬನ ಮಾಡಲು ಅನೇಕ ಕಷ್ಟನಷ್ಟಗಳನ್ನು ಹೊಂದಬೇಕಾಗುವದು. ಆದರೆ ಯೋಗದ ಸಹಾಯವನ್ನು ಗ್ರಹಣ ಮಾಡಲು ಸಹಜವಾಗಿಯೇ ಬ್ರಹ್ಮವನ್ನು ಸಂಪಾದನೆ ಮಾಡಲು ಶಕ್ಯವಾಗುತ್ತದೆ.

* "ಸನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।
ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥

ಸಾಂಖ್ಯರ ಸಾಧನೆಯಲ್ಲಿ ಕರ್ಮ ಅಥವಾ ಭಕ್ತಿಗೆ ಯಾವ ಸ್ಥಾನವೂ ಇಲ್ಲ. ಪಾತಂಜಲವು ಈಶ್ವರನಲ್ಲಿ ಭಕ್ತಿಯನ್ನು ಈಶ್ವರಾರ್ಥ ಕರ್ಮಕ್ಕೆ ಯೋಗದ ಸಹಾಯದಿಂದ ಸ್ವೀಕಾರ ಮಾಡುತ್ತದೆ. ಇಲ್ಲಿ ಪಾತಂಜಲದೊಡನೆ ಗೀತೆಯ ಸಾದೃಶ್ಯವನ್ನು ನೋಡುವೆವು.

ಆದರೆ ಪಾತಂಜಲದೊಡನೆ ಗೀತೆಯು ಈ ರೀತಿಯಿಂದ ಎಷ್ಟೋ ಕೂಡಿದರೂ ಗೀತೆಯು ಪಾತಂಜಲಕ್ಕಿಂತ ಬಹುದೂರ ಮುಂದೆ ಹೋಗಿದೆ. ಪ್ರಥಮತಃ ಪಾತಂಜಲಿಯ ಯೋಗದಲ್ಲಿ ಕರ್ಮಕ್ಕೆ ಸ್ಥಾನವು ಬಹಳೇ ಕೆಳಗೆ. ಅಷ್ಟಾಂಗ ಯೋಗದ ಅಭ್ಯಾಸ ಮಾಡಲಸಮರ್ಥರಾದವರಿಗೆ ಪ್ರಾಥಮಿಕ ಶಿಕ್ಷಣ ಮತ್ತು ಸಾಧನಾರೂಪದಿಂದ ಕರ್ಮದ ಉಪಯುಕ್ತತೆಯು ಇರುತ್ತದೆ. ಆದರೆ ಅಷ್ಟಾಂಗ ಯೋಗವನ್ನವಲಂಬಿಸಿ ಚಿತ್ತವೃತ್ತಿನಿರೋಧದ ಸಾಧನೆ ಮಾಡುವವರಿಗೆ ಕರ್ಮದಿಂದ ಯಾವ ಪ್ರಯೋಜನವೂ ಇಲ್ಲ. ಕರ್ಮವು ಅವರಿಗೆ ಪ್ರತಿಬಂಧ ಸ್ವರೂಪವು. ಕರ್ಮಗಳೆಲ್ಲವೂ ಬಂಧನದ ಕಾರಣವು. ಧರ್ಮಾಧರ್ಮ, ಪಾಪ ಪುಣ್ಯ, ಈ ಎಲ್ಲ ಪ್ರಕಾರದ ಕರ್ಮಗಳಿಗೆ ಫಲವುಂಟು. ಹಾಗೂ ಆ ಫಲಭೋಗ

---

* ಯಮನಿಯಮ ಯೋಗಂಗಳಿಲ್ಲದೆ ।
ಸಮನಿಸದು ಸನ್ಯಾಸಮಪ್ಪೊಡೆ ।
ಯಮನಿಯಮ ಯೋಗಂಗಳಭ್ಯಾಸವನು ಮಡದದಿಂದ ॥
ಕ್ರಮವಿಡಿದು ಮಾಡುವ ಮುನಿಪ ಕೇ ।
ಳಮಲ ಬ್ರಹ್ಮವ ಬೇಗದಿಂ ತನು ।
ಭ್ರಮೆಯಳಿದು ಸುಖದಿಂದಲೈದುವ ಪಾರ್ಥ ಕೇಳೆಂದ ॥
(ನಾಗರಸ)

ವನ್ನು ಮಾಡಲಿಕ್ಕೆ ಜೀವನಿಗೆ ಪುನಃ ಪುನಃ ಸಂಸಾರ ಬಂಧನದಲ್ಲಿ ಬದ್ಧನಾಗಬೇಕಾಗುವದು. ಕಾರಣ ಕಡೆಯುವರೆಗೆ ಕರ್ಮವನ್ನು ಪರಿತ್ಯಾಗ ಮಾಡಬೇಕಾಗುವದು. ಆದರೆ ಸಾಂಖ್ಯದಲ್ಲಿ ಕರ್ಮಕ್ಕೆ ಎಲ್ಲಿಯೂ ಆವ ಸ್ಥಾನವಿಲ್ಲ. ಕರ್ಮ ಸನ್ಯಾಸವೇ ಸಾಂಖ್ಯದ ಪ್ರಾಥಮಿಕ ಸಾಧನೆಯು. ಪಾತಂಜಲವು ಅದರ ಪರಿವರ್ತನದಲ್ಲಿ ಹೇಳುವದೇನಂದರೆ ನಿಮ್ನಾಧಿಕಾರಿಯ ಪಕ್ಷದಲ್ಲಿ ಕ್ರಿಯಾ ಯೋಗವು ಸಹಾಯ ಸ್ವರೂಪವು. ಇದು ಎಲ್ಲಕ್ಕೂ ಅನ್ವಯಿಸುವದಿಲ್ಲ. ತಪ, ಸ್ವಾಧ್ಯಾಯ, ಈಶ್ವರಪ್ರಣಿಧಾನ ಅಥವಾ ಈಶ್ವರಧ್ಯಾನ ಇವು ಮೂರೇ ಕ್ರಿಯಾ ಯೋಗಗಳು. ಈ ಎಲ್ಲ ಕರ್ಮದ ಸಾಧನೆಯಿಂದ ಅಜ್ಞಾನ, ವಾಸನಾ, ಅಹಂಕಾರಗಳು ಕ್ರಮೇಣ ಕ್ಷೀಣವಾಗುತ್ತವೆ; ಸಮಾಧಿ ಸ್ಥಿತಿಗೆ ಸಹಾಯವಾಗುತ್ತವೆ.

''ತಪಃ ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ಕ್ರಿಯಾಯೋಗಃ"
(ಯೋಗಸೂತ್ರ)
''ಸಮಾಧಿ ಭಾವನಾರ್ಥಃ ಕ್ಲೇಶತನೂ ಕರಣಾರ್ಥಶ್ಚ। ''
(ಯೋಗಸೂತ್ರ)

ಸಾಧನೆಯು ಸಿದ್ಧಿಯಾಗಲು ಕರ್ಮವು ಬಂಧನದ ಕಾರಣವಾಗುವದಿಲ್ಲ. ಆದರೆ ಆಗ ಕರ್ಮಕ್ಕೆ ಯಾವ ಉಪಯುಕ್ತತೆ ಅಥವಾ ಸಾರ್ಥಕತೆಯೂ ಇಲ್ಲ. ಜೀವವು ಆಗ ಕೈವಲ್ಯ ಸ್ಥಿತಿಯನ್ನು ಹೊಂದಿರುತ್ತದೆ. ಆಗ ಸಂಸಾರವೂ ಇಲ್ಲ ಕರ್ಮವೂ ಇಲ್ಲ ಕೇವಲ ಅಚಲ, ಅಕ್ಷರ, ಉದಾಸೀನ ಪುರುಷನ ಸ್ತಬ್ಧತೆ, ನಿಶ್ಚಲಶಾಂತಿ, ಶುದ್ಧನಿರ್ಮಲ ಚೈತನ್ಯ ಮೊದಲಾದ ಅಖಂಡ ಪ್ರಸನ್ನತೆಗಳು ಇರುತ್ತವೆ. ಆದುದರಿಂದ ಕೊನೆಯ ವರೆಗೆ ಸಾಂಖ್ಯ ಮತ್ತು ಪಾತಂಜಲಗಳು ಒಂದು. ಆದರೆ ಗೀತೆಯು ಈ ಎರಡನ್ನೂ ಬಿಟ್ಟುಕೊಟ್ಟಿದೆ. ಗೀತೆಯಲ್ಲಿ ಕರ್ಮವು ಕೇವಲ ಪ್ರಾಥಮಿಕ ಸಾಧನೆಯಲ್ಲ. ಅದು ಕೊನೆಯ ವರೆಗೆ ಯೋಗದ ಅಂಗವು. ಗೀತೆಯ ಮತದಲ್ಲಿ ಕರ್ಮವೆಂದರೆ ಕೇವಲ ತಪಸ್ಸು, ಸ್ವಾಧ್ಯಾಯ, ಯಾಗ, ಯಜ್ಞ ಮೊದಲಾದವುಗಳಲ್ಲ; ಈಶ್ವರೋಪಾಸನೆಯೂ ಅಲ್ಲ. ಗೀತೆಯ ಮತದಲ್ಲಿ ಸರ್ವಕರ್ಮಗಳು ಸಂಸಾರದ ಪ್ರಯೋಜನೆಯ ಯಾವತ್ತೂ ಕರ್ಮಗಳನ್ನು ಸರ್ವದಾ ಮಾಡಿಯೇ ಯೋಗವನ್ನು ಸಾರ್ಥಕ ಮಾಡಿಕೊಳ್ಳಬೇಕಾಗುವದು.

* "ಸರ್ವ ಕರ್ಮಾಣ್ಯಪಿ ಸದಾಕುರ್ವಾಣೋ ಮದ್ ವ್ಯಪಾಶ್ರಯಃ ।
ಮತ್ ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ॥"

(ಗೀ. ಅ. ೧೮-೫೬)

ಯಾವಾಗಲೂ ಎಲ್ಲ ಪ್ರಕಾರದ ಕರ್ಮಗಳನ್ನು ಮಾಡಿ ಮತ್ಪರಾಯಣನಾದ ವ್ಯಕ್ತಿಯು ಮತ್ಪ್ರಸಾದದಿಂದ ಅನಾದಿಯೂ ಅವ್ಯಯವೂ ಆದ ಪದವನ್ನು ಸಂಪಾದಿಸುತ್ತಾನೆ.

ಪಾತಂಜಲ ಯೋಗದಲ್ಲಿ ಕರ್ಮಕ್ಕೆ ಗೌಣಸ್ಥಾನವಿದ್ದಂತೆ ಭಕ್ತಿಗೂ ಗೌಣಸ್ಥಾನವು. ಸಾಂಖ್ಯದಲ್ಲಿ ಈಶ್ವರ ಭಕ್ತಿಗೆ ಸ್ಥಾನವಿಲ್ಲ. ಸಾಂಖ್ಯ ಮತದಲ್ಲಿ ಈಶ್ವರನೇ ಇಲ್ಲ. ಪತಂಜಲಿಯು ಈಶ್ವರನ ಅಸ್ತಿತ್ವದ ಪ್ರಮಾಣವನ್ನು ಕೊಟ್ಟಿರುವನು. ಹಾಗೂ ಈಶ್ವರ ಪ್ರಣಿಧಾನಕ್ಕೆ ಯೋಗದ ಸಹಾಯ ಸ್ವೀಕರಿಸಿರುವನು ಈಶ್ವರ ಪ್ರಣಿಧಾನ ಅರ್ಥಾತ್ ಭಕ್ತಿ ಸಹಕಾರದಿಂದ ಈಶ್ವರನ ಅನುಸರಣ ಈಶ್ವರನ ನಾಮಗುಣ ಕೀರ್ತನ, ಈಶ್ವರನ ಉದ್ದೇಶದಿಂದ ಯಾಗ ಯಜ್ಞಾದಿಗಳನ್ನು ಮಾಡುವದು ಇತ್ಯಾದಿ ಇಲ್ಲಿ ಗೀತೆಗೂ ಪಾತಂಜಲಕ್ಕೂ ಸಾದೃಶ್ಯವಿರುವದೇನೋ ನಿಜ. ಆದರೆ ಅದು ಒಳ್ಳೇ ಗಭೀರವಲ್ಲ. ಪಾತಂಜಲ ಮತದಲ್ಲಿ ಈಶ್ವರ ಭಕ್ತಿಗೆ ವಿಶೇಷ ಆವ ಸ್ಥಾನವೂ ಇಲ್ಲ. ಪತಂಜಲಿಯು ಈಶ್ವರ ಪ್ರಣಿಧಾನಕ್ಕೆ ಕ್ರಿಯಾಯೋಗದ ಸಹಾಯವೆಂದು ಹಿಡಿದಿರುವನು. ಇಲ್ಲಿ ಈಶ್ವರ ಭಕ್ತಿಯು ಯೋಗದ ಒಂದು ಪ್ರಾಥಮಿಕ ಸಹಾಯ ಮಾತ್ರ. ಯಮ, ನಿಯಮ, ಆಸನ ಮೊದಲಾದ ತಪಸ್ಸಿನಿಂದ ಚಿತ್ತವೃತ್ತಿಗೆ ನಿರೋಧ ಮಾಡುವದೇ ಪ್ರಕೃತ ಯೋಗವು. ಇಂತಹ ತಪಸ್ಸಿನಲ್ಲಿ ಪ್ರತಿಗಳಾದವರಿಗೆ ಮತ್ತೊಂದು ಪ್ರಯೋಜನವೇ ಇಲ್ಲ ಆದರೆ ಗೀತೆಯಲ್ಲಿ ಈಶ್ವರನೇ ಸರ್ವವು ಈಶ್ವರನನ್ನು ಬಿಟ್ಟುಕೊಟ್ಟು ಗೀತೆಯಲ್ಲಿ

---

* ಸರ್ವ ಭಾವಂಗಳಲಿ ನನ್ನನೆ ।
ಸರ್ವಥಾ ಆಶ್ರಯಿಸಿದಾತನು ।
ಸರ್ವ ಕಾಲಂಗಳಲಿ ಮಾಡುತ ಸರ್ವಕರ್ಮವನು ॥
ಸರ್ವಥಾ ಎನ್ನಲಿ ಸಮರ್ಪಿಸಿ ।
ನಿರ್ವಚನದಿಂದೆನ್ನ ಕರುಣದಿ ।
ಸರ್ವಥಾ ಕೇಡಿಲ್ಲದಿಹ ನಿಜಪದವನೈದುವನು ॥

(ನಾಗರಸ)

ಯಾವ ಸಾಧನವೂ ಇಲ್ಲ. ಇಲ್ಲಿ ಯೋಗವೆಂದರೆ ಒಂದಿಲ್ಲೊಂದು ಬಗೆಯಿಂದ ಈಶ್ವರನನ್ನು ಕೂಡುವಿಕೆಯು. ಈ ಯೋಗ, ಎಲ್ಲ ಜ್ಞಾನ, ಎಲ್ಲ ತಪಸ್ಸು, ಎಲ್ಲ ಕರ್ಮಗಳ ಮೇಲೆ ಪರಮ ಶ್ರದ್ಧಾ ಸಹಕಾರದಿಂದ ಈಶ್ವರನಲ್ಲಿ ಭಕ್ತಿಯನ್ನಿಡುವವನು ಶ್ರೇಷ್ಠಯೋಗಿ.

"ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಧಿಕಃ ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾತ್ ಯೋಗೀ ಭವಾರ್ಜುನ॥ ಯೋಗಿನಾಮಪಿ ಸರ್ವೇಷಾಂ ಮದ್‌ಗತೇನಾಂತರಾತ್ಮನಾ ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ॥

(ಗೀ—ಅ—೬,—೪೬, ೪೭)

ಗೀತಾಯೋಗವೆಂದರೆ ಪಾತಂಜಲದಲ್ಲಿ ಹೇಳಿದ ಅಷ್ಟಾಂಗರಾಜ ಯೋಗವಲ್ಲವೆಂದು ಇಲ್ಲಿಯವರೆಗೆ ಮಾಡಿದ ಪ್ರತಿಪಾದನೆಯಿಂದ ಸ್ಪಷ್ಟವಾಗದೆ ಇರದು. ಆ ಕಾಲದಲ್ಲಿ ಪ್ರಚಲಿತವಾದ ಸಾಧನಾ ಸಂಬಂಧದಿಂದ ಶ್ರೀ ಕೃಷ್ಣನು ಸ್ಥೂಲಮಾನದಿಂದ ಎರಡು ಭಾಗ ಮಾಡಿ ಹೇಳಿರುವನು.

"ಲೋಕೇಽಸ್ಮಿನ್ ದ್ವಿವಿಧಾನಿಷ್ಠಾ ಪುರಾಪ್ರೋಕ್ತಾಮಯಾನಘ। ಜ್ಞಾನ ಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್॥ ಪೂರ್ವಕಾಲದಿಂದ ಸಾಧನೆಯ ಎರಡು ಮಾರ್ಗಗಳು ಪ್ರಚಲಿತವಾಗಿರುತ್ತವೆ. ಜ್ಞಾನ ಮಾರ್ಗ ಹಾಗೂ ಕರ್ಮ ಮಾರ್ಗ. ಜ್ಞಾನಮಾರ್ಗವು ಸಾಂಖ್ಯರದು. ಕರ್ಮ ಮಾರ್ಗವು ಯೋಗಿಗಳದು. ಗೀತೆಯು ಕರ್ಮಯೋಗವನ್ನು ತಿಳಿಸುತ್ತದೆ. ಪತಂಜಲಿಯ ಯೋಗಸೂತ್ರದಲ್ಲಿ ಕರ್ಮದ ಮೂಲ ಮಾತುಗಳು ಇದ್ದರೂ ಅವು ಕರ್ಮ ಯೋಗವಲ್ಲ. ಕೆಲವು ವಿಶಿಷ್ಟ ಪ್ರಕ್ರಿಯೆಗಳಿಂದ ಚಿತ್ತವೃತ್ತಿ ನಿರೋಧನ ಮಾಡುವದೇ ಪಾತಂಜಲ ಯೋಗವು. ಆ ಯೋಗ ಪದ್ಧತಿಗೆ ರಾಜಯೋಗವೆಂಬ ಹೆಸರು. ಗೀತೆಯು ಈ ಸಂಕೀರ್ಣಾರ್ಥದಲ್ಲಿ 'ಯೋಗ' ವನ್ನೆಲ್ಲಿಯೂ ಉಪಯೋಗಿಸಿಲ್ಲ. ಗೀತೆಯು ಪ್ರಚಲಿತ ಕರ್ಮ ಯೋಗಕ್ಕೆ ಯೋಗವೆಂದು ಗ್ರಹಿಸಿದೆ; ಕರ್ಮದೊಡನೆ ಜ್ಞಾನ ಮತ್ತು ಭಕ್ತಿ ಇವೆರಡರ ಸಮನ್ವಯ ಮಾಡಿ ನಿಜಸ್ವಪೂರ್ಣ ಯೋಗದ ಶಿಕ್ಷಣವನ್ನು ಕೊಟ್ಟಿದೆ.

ಜ್ಞಾನ ಪಥದಲ್ಲಿ ಕರ್ಮವು ಅಂತರಾಯ ಅಥವಾ ಅಡ್ಡಿ ಎಂದು ತಿಳಿಯಲ್ಪಟ್ಟಿದೆ. ಆದುದರಿಂದ ಇದು ಸನ್ಯಾಸ ಮಾರ್ಗವು. ಕರ್ಮ

ಮಾರ್ಗದಲ್ಲಿ ಕರ್ಮವು ಎಂದೂ ಸಾಧನೆಯ ಪ್ರತಿಕೂಲ ಘಟಕವಲ್ಲ. ಕರ್ಮದಿಂದಲೇ ಚರಮ ಸಿದ್ಧಿ ಲಾಭವಾಗಲು ಶಕ್ಯ! 'ಕರ್ಮಣ್ಯೈವ ಹಿ ಸಂಸಿದ್ಧಿಮ್ ಆಸ್ಥಿತಾ ಜನಕಾದಯಃ'' ಸಿದ್ಧಿಯ ತರುವಾಯದ ಲ್ಲಿಯೂ ಕರ್ಮವು ನಡೆದಿರುತ್ತದೆ. ಇದೇ ಜನಕಾದಿಗಳಿಂದ ಪ್ರಚಾರಿ ತವಾದ ಕರ್ಮಯೋಗವು. ಗೀತೆಯು ಈ ಮಹಾನ್ ಕರ್ಮಯೋಗದ ಆದರ್ಶವನ್ನೇ ಗ್ರಹಣ ಮಾಡಿದೆ. ಆದರೆ ಗೀತೆಯು ಈ ಕರ್ಮ ಯೋಗಕ್ಕೂ ಸಾಂಖ್ಯಯೋಗಕ್ಕೂ ಯಾವ ವಿರೋಧವಿಲ್ಲೆಂದು ತೋರಿ ಸಿರುವದು.

''ಸಾಂಖ್ಯಯೋಗೌ ಪೃಥಗ್ ಬಾಲಾಃ ಪ್ರವದಂತಿ ನ ಪಂಡಿತಾಃ
ಏಕಮಪ್ಯಾಸ್ಥಿತಃ ಸಮ್ಯಗ್ ಉಭಯೋರ್ವಿಂದತೆ ಫಲಮ್ ॥
ಯತ್ ಸಾಂಖ್ಯೈಃ ಪ್ರಾಪ್ಯತೆ ಸ್ಥಾನಮ್ ತದ್ಯೋಗೈರಪಿ ಗಮ್ಯತೆ ।
ಏಕಂ ಸಾಂಖ್ಯಂ ಚ ಯೋಗಂಚ ಯಃ ಪಶ್ಯತಿ ಸ ಪಶ್ಯತಿ ॥''

ಸಾಂಖ್ಯರು ಕರ್ಮಸನ್ಯಾಸ ಮತ್ತು ಜ್ಞಾನವನ್ನು ಇಚ್ಛಿಸುವರು. ಗೀತೆಯಪ್ರಕಾರ ನಿಜವಾದ ಕರ್ಮಯೋಗಾಚಾರದಲ್ಲಿ ಮೇಲಿನ ವೆರಡೂ ಅಡಕವಾಗುತ್ತವೆ. ಜೀವನದಲ್ಲಿ ನಾವು ಮಾಡುವ ಕರ್ಮ ಗಳೆಲ್ಲವೂ ನಮ್ಮವಲ್ಲ, ಪ್ರಕೃತಿಯವು. ನಾನು ಏನೂ ಮಾಡುವದಿಲ್ಲ. ನನ್ನ ಅಂತರಂಗ ಬಹಿರಂಗದಲ್ಲಿ ನಡೆಯುವ ಕರ್ಮಗಳು ಚಿತ್ತ ಮತ್ತು ಇಂದ್ರಿಯಗಳ ಚೇಷ್ಟೆ ಹಾಗೂ ಪ್ರವೃತ್ತಿಗಳೆಲ್ಲವೂ ಪ್ರಕೃತಿಯ ಕ್ರಿಯೆ ಗಳು, ಪುರುಷನವು ಅಲ್ಲ- ಆತ್ಮನದೂ ಅಲ್ಲ; ನನ್ನ ನಿಜವಾದ 'ಅಹಂ'ದೂ ಅಲ್ಲ. ಈ ಭಾವವನ್ನು ಅಂತರಂಗದಲ್ಲಿಟ್ಟುಕೊಂಡು ಎಲ್ಲ ಕರ್ಮಗ ಳನ್ನು ಮಾಡುವದೇ ಕರ್ಮಯೋಗವು. ಇದೇ ಪ್ರಕೃತಜ್ಞಾನ. ಎಲ್ಲ ಕರ್ಮಗಳನ್ನು ಬಿಟ್ಟುಕೊಟ್ಟು ಮೌನವಾಗಿ ಕೂತುಕೊಳ್ಳುವದೇ ಕರ್ಮದ ಶೇಷವೆಂದು ಕೆಲವರು ತಿಳಿಯುತ್ತಾರೆ. ಅವರು ಅಜ್ಞಾನಿಗಳು. ಕರ್ಮವು ಎಂದೂ ತಟಸ್ಥವಾಗಿ ಇರುವದಿಲ್ಲ. ನ ಹಿ ಕಶ್ಚಿತ್ ಕ್ಷಣ ಮಪಿ ಜಾತು ತಿಷ್ಟತ್ಯ ಕರ್ಮಕೃತ್' ಯಾರು ಕರ್ಮದಲ್ಲಿ ಕರ್ಮಹೀನತೆಯನ್ನೂ, ಕರ್ಮ ಹೀನತೆಯಲ್ಲಿ ಕರ್ಮವನ್ನು ನೋಡುವರೋ ಅವರೇ ಪ್ರಕೃತಜ್ಞಾನಿಗಳು. ಕರ್ಮವನ್ನು ಪರಿತ್ಯಜಿಸಲು ಆವ ಪ್ರಯೋಜನವೂ ಇಲ್ಲ, ಅದು ಸಂಭ ವವೂ ಅಲ್ಲ. ನಾನು ಏನೂ ಮಾಡುವದಿಲ್ಲ; ಪ್ರಕೃತಿಯೇ ಎಲ್ಲವನ್ನು ಮಾಡುತ್ತದೆ. ಈ ರೀತಿಯ ಭಾವವೇ ಪ್ರಕೃತ ಕರ್ಮಸನ್ಯಾಸವು;

ಇದೇ ಪ್ರಕೃತ ನೈಷ್ಕರ್ಮ್ಯವು. ಬಾಹ್ಯ ಕರ್ಮತ್ಯಾಗವು ಪ್ರಕೃತ ಸನ್ಯಾಸವಲ್ಲ. ಒಳಗಿನ ತ್ಯಾಗವೇ ಸನ್ಯಾಸವು. ಸಾಂಖ್ಯರು ಹೇಳಿದ ಪ್ರಕೃತಿ ಪುರುಷರ ಭೇದ ಜ್ಞಾನವಾಗಲಾರದವರಿಗೆ ನಿಷ್ಕಾಮ ಕರ್ಮಯೋಗವು ಅಸಂಭವವು. ಮತ್ತು ಭ್ರಮದಿಂದ ಬಾಹ್ಯ ಕರ್ಮಗಳನ್ನು ತ್ಯಾಗ ಮಾಡಿ ಮನದಲ್ಲಿ ಸನ್ಯಾಸಿಯಾದವನಲ್ಲಿ ಪ್ರಕೃತ ಜ್ಞಾನದ ಸ್ಫುರಣ ವಾಗುವದಿಲ್ಲ. ಪುರುಷನು ನಿಷ್ಕ್ರಿಯನು. ಪ್ರಕೃತಿಯೇ ಎಲ್ಲವನ್ನು ಮಾಡುತ್ತದೆ. ಈ ಭಾವದಿಂದ ನಿಷ್ಕಾಮ ನಿರಹಂಕಾರವಾಗಿ ಸಂಸಾರದ ಪ್ರಯೋಜನೀಯವಾದ ಎಲ್ಲ ಕರ್ಮಗಳನ್ನು ಮಾಡುವದೇ ಪ್ರಕೃತ ಸನ್ಯಾಸವು ಹಾಗೂ ಪ್ರಕೃತ ಯೋಗವು.

“ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸನ್ಯಾಸೀ ಚ ಯೋಗೀಚ ನ ನಿರಗ್ನಿರ್ನ ಚಾಕ್ರಿಯಃ ॥

ಈ ರೀತಿಯಾಗಿ ಗೀತೆಯು ಸಾಂಖ್ಯದ ಜ್ಞಾನ ಹಾಗೂ ಯೋಗದ ಕರ್ಮ ಈ ಎರಡರ ಸಮನ್ವಯ ಮಾಡಿರುತ್ತದೆ. ಸಂಕ್ಷೇಪವಾಗಿ ಹೇಳುವದಾದರೆ ಕರ್ಮಯೋಗಕ್ಕೂ ಸಾಂಖ್ಯಯೋಗಕ್ಕೂ ಯಾವ ವಿರೋಧವೂ ಇಲ್ಲ. “ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ”

ಆದರೆ ಈ ಸಮನ್ವಯದಲ್ಲಿ ಒಂದು ಪ್ರಶ್ನದ ಸಮಾಧಾನವಾಗಿಲ್ಲ. ಸಾಂಖ್ಯ ಜ್ಞಾನವನ್ನು ಪಡೆದ ವ್ಯಕ್ತಿಗೆ ಕರ್ಮ ಬಂಧನದ ಕಾರಣವಿಲ್ಲ. ಕರ್ಮವಾದರೇನು ಆಗದಿದ್ದರೇನು, ಅವನಿಗೆ ಅದರಲ್ಲಿ ಏನೂ ಬರ ಹೋಗುವದಿರುವದಿಲ್ಲ. ‘ನೈವ ತಸ್ಯ ಕೃತೇನಾರ್ಥೋ ನಾಕೃತೇ ನೇಹ ಕಶ್ಚನ” ಎಂದು ತಿಳಿಯುತ್ತದೆ. ಈ ಕರ್ಮಮಾಡಲು ಆವ ದೋಷವೂ ಇಲ್ಲ. ಕರ್ಮ ಮಾಡದಿದ್ದರೆ ಆವ ಅನರ್ಥವೂ ಇಲ್ಲ. “ತಸ್ಮಾದಾಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚಾರ.” ಪ್ರಕೃತಿಯೇ ಎಲ್ಲವನ್ನು ಮಾಡುವದೆಂದ ಮೇಲೆ ಕರ್ಮವು ನಡಿಯಲಿ, ನಡಿಯದಿರಲಿ. ವಿಚಲಿತ ವಾಗುವ ಕಾರಣವಿಲ್ಲ.

ಜ್ಞಾನ ಸಮಾನ್ವಿತ ಕರ್ಮ ಮಾಡಿದರೆ ಅದು ಯಾವ ಬಂಧನಕ್ಕೂ ಕಾರಣವಾಗುವದಿಲ್ಲ. ಅದನ್ನು ಪಾತಂಜಲವೂ ಸ್ವೀಕಾರ ಮಾಡುತ್ತದೆ, ಹಾಗು ಇದೇ ಕರ್ಮಯೋಗದ ಭಿತ್ತಿಯು. ಪಾತಂಜಲ ಸೂತ್ರದಲ್ಲಿ “ಕ್ಲೇಶ ಮೂಲಃ ಕರ್ಮಾಶಯಃ ದೃಷ್ಟಾದೃಷ್ಟ ಜನ್ಮವೇದನೀಯಃ”,

ಅರ್ಥಾತ್ ಅಜ್ಞಾನ, ಅಹಂಕಾರ, ಆಸಕ್ತಿಗಳೊಡನೆ ಮಾಡಲ್ಪಟ್ಟ ಕರ್ಮವೇ ಇಹಜನ್ಮದಲ್ಲಿ ಮತ್ತು ಪರಜನ್ಮದಲ್ಲಿ ಫಲೀಭೂತವಾಗುವದು. ಆದುದರಿಂದ ಪಾತಂಜಲ ಮತದಲ್ಲಿಯೂ ಜ್ಞಾನಿಗಳಿಗೆ ಕರ್ಮಮಾಡಲಿಕ್ಕೆ ಆವ ಹಾನಿಯೂ ಇಲ್ಲ. ಆದರೂ ಪಾತಂಜಲವು ಕರ್ಮಕ್ಕೆ ಆವ ಪ್ರಯೋಜನವನ್ನೂ ಹೇಳಿಲ್ಲ. ಗೀತೆಯಂತೆ ಕರ್ಮದ ಉಪದೇಶವನ್ನು ಮಾಡಿಲ್ಲ. ಸಾಂಖ್ಯದಂತೆ ಸನ್ಯಾಸ ಮತ್ತು ಕರ್ಮ ತ್ಯಾಗಕ್ಕೇ ಜೀವನದ ಶ್ರೇಷ್ಠ ಆದರ್ಶವೆಂದು ಗ್ರಹಣ ಮಾಡಲ್ಪಟ್ಟಿದೆ. ಸಾಂಖ್ಯ ಮತ್ತು ಪಾತಂಜಲದ ಲಕ್ಷ್ಯವು ಪ್ರಕೃತಿಯ ಅತಿಕ್ರಮಣ ಮಾಡುವದು, ತ್ರಿಗುಣಾತೀತವಾಗುವದು, ವಿವೇಕ ಖ್ಯಾತಿಯಿಂದ ಪರಾ ವೈರಾಗ್ಯವನ್ನು ಪಡೆದು ಪುರುಷನ ನಿತ್ಯ, ಸನಾತನ, ಅಚಲ, ಅಕ್ಷರ, ನಿಷ್ಕ್ರಿಯ, ಶಾಂತ ಪ್ರತಿಷ್ಠಾ ಪಡೆಯುವದು ಇರುತ್ತದೆ. ಇದಕ್ಕೋಸುಗ ಕಡೆಯ ವರೆಗೆ ಸಾಂಖ್ಯ ಮತ್ತು ಪಾತಂಜಲಗಳಲ್ಲಿ ಕರ್ಮಕ್ಕೆ ಸ್ಥಾನವಿಲ್ಲ. ಗೀತೆಯು ತ್ರಿಗುಣಮಯಿ ಅಪರಾ ಪ್ರಕೃತಿಯನ್ನು ಅತಿಕ್ರಮ ಮಾಡಲಿಚ್ಛಿಸುತ್ತದೆ; ಇದಕ್ಕೋಸುಗ ಅಭ್ಯಾಸ ಮತ್ತು ವೈರಾಗ್ಯಗಳ ಉಪದೇಶವನ್ನು ಮಾಡಿದೆ. ಆದರೆ ಗೀತೆಯು ಮತ್ತೊಂದು ಪ್ರಕೃತಿಯ ಸಾಧನೆಯನ್ನು ಕೊಟ್ಟಿದೆ, ಹಾಗೂ ನೀಚ ಪ್ರಕೃತಿಯನ್ನು ಬಿಟ್ಟು ಅದೇ ದಿವ್ಯ ಪ್ರಕೃತಿಯ ಲೀಲಾ ವರ್ಧನಕ್ಕೆ ನಡೆಯುತ್ತದೆ. ಅದೇ ದಿವ್ಯ ಜೀವನ, 'ಮದ್ಭಾವ ಮಾಗತಾಃ, ಮಮ ಸಾಧರ್ಮ್ಯ ಮಾಗತಾಃ।' ಅಜ್ಞಾನವು ಪ್ರಕೃತಿಯ ಆಟವನ್ನು ಬಿಟ್ಟು ಭಗವಂತನೊಡನೆ ಯುಕ್ತನಾಗಿ ಭಾಗವತ ಭಾವದಲ್ಲಿ, ಭಾಗವತ ಪ್ರಕೃತಿಯಲ್ಲಿ ದಿವ್ಯ ಜೀವನ ಲೀಲಾ ವಿಲಾಸವನ್ನು ಮಾಡಬೇಕಾಗುವದು. ಇದೇ ಗೀತೆಯ ಚರಮ ಲಕ್ಷ್ಯ. ಕೇವಲ ನೀಚ ಪ್ರಕೃತಿಯ ಅಧೀನ ದುಃಖ ಮತ್ತು ಅಶಾಂತಿಮಯ ಸಂಸಾರ, ಹಾಗು ಇದರ ಮೇಲೆ ಅನಂತ, ಅಕ್ಷಯ, ಪೂರ್ಣ ಶಾಂತಿಮಯ ಪುರುಷ ಅಥವಾ ಆತ್ಮನ ಸಚೇತನ ಪ್ರತಿಷ್ಠೆ; ಅಂತೇ ಅವರು (ಸಾಂಖ್ಯ ಮತ್ತು ಪಾತಂಜಲಗಳು) ಸಂಸಾರವನ್ನು ಬಿಟ್ಟು ಈ ಅಕ್ಷರ ಪ್ರತಿಷ್ಠಾ ಲಾಭಮಾಡುವದಕ್ಕೇ ಪರಮ ಪುರುಷಾರ್ಥವೆಂದು ಗ್ರಹಣಮಾಡಿದ್ದಾರೆ. ಗೀತೆಯೂ ಈ ಅಕ್ಷರದ ಶಾಂತಪ್ರತಿಷ್ಠೆಯನ್ನು ಇಚ್ಛಿಸುತ್ತದೆ. ಆದರೆ ಗೀತೆಯು ಇಲ್ಲಿಗೇ ನಿಲ್ಲುವದಿಲ್ಲ. ಅಕ್ಷರವೇ ಎಲ್ಲವೂ ಅಲ್ಲ, ಶ್ರೇಷ್ಠ ಸತ್ತಾ ಅಲ್ಲ.

ಭಗವಂತನ ವಿಶ್ವಲೀಲೆಯಲ್ಲಿ ದುಃಖವಿಲ್ಲ. ಅದು ಅಖಂಡ ಆನಂದದ ಲೀಲೆ, ಸಚ್ಚಿದಾನಂದದ ಆಟ. ಭಗವಂತನ ಆದೇ ಲೀಲೆಯೊಡನೆ ಕೂಡುವದೇ ಜೀವದ ಪರಮಾಗತಿ. ಭಗವಂತನ ಅಂತರ್ಜಗತ್ತಿನಲ್ಲಿ ಅಕ್ಷರದ ಶಾಂತಿ ಬಹಿರ್ಜಗತ್ತಿನಲ್ಲಿ ಕ್ಷರದ ಲೀಲೆ. ಕ್ಷರ ಮತ್ತು ಅಕ್ಷರಗಳು ಎರಡೂ ಒಂದೇ ಕಾಲಕ್ಕೆ ಭಗವಂತನಲ್ಲಿ ಸ್ಥಾನ ಹೊಂದಿರುತ್ತವೆ.

ಯೋಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ
ಸ ಸರ್ವವಿದ್ ಭಜತಿಮಾಂ ಸರ್ವಭಾವೇನ ಭಾರತ।''

ಮೋಹದಿಂದ ಮುಕ್ತನಾದ ವ್ಯಕ್ತಿಯು ಈ ಪುರುಷೋತ್ತಮ ತತ್ವವನ್ನು ತಿಳಿಯಲಿಕ್ಕೆ ಶಕ್ತನು. ಅವನು ಸರ್ವವಿದ್. ಎಲ್ಲ ಕರ್ಮಗಳ ಪರಿಣತಿ ಜ್ಞಾನದಲ್ಲಿ; ಎಲ್ಲ ಜ್ಞಾನದ ಪರಿಣತಿ ಭಕ್ತಿಯಲ್ಲಿ; ಜ್ಞಾನ ಮತ್ತು ಕರ್ಮದ ಮೇಲೆ ಪ್ರತಿಷ್ಠಿತವಾದ ಭಕ್ತಿಯೇ ಗೀತೆಯ ಶ್ರೇಷ್ಠಶಿಕ್ಷಣವು. ಜ್ಞಾನ, ಕರ್ಮ, ಮತ್ತು ಭಕ್ತಿಗಳೊಳಗಿಂದ ಪುರುಷೋತ್ತಮನೊಡನೆ ಯುಕ್ತವಾಗುವದೇ ಗೀತೆಯ ಯೋಗವು.



# ಶ್ರೀನಿಡುಮಾಮಿಡಿಮಠದ ಇತಿಹಾಸ

(ಲೇಖಾಂಕಃ— ೧೦)

ಲೇಖಕಃ— ಎಂ. ಜಿ. ನಂಜುಂಡಾರಾಧ್ಯ 'ವಿಶಾರದ'
ಸಿದ್ಧಗಂಗಾ ಗುರುಕುಲಾಶ್ರಮ

---

## ಶ್ರೀಕರಿಬಸವದೇಶಿಕೇಂದ್ರ ಶಿವಾಚಾರ್ಯರು (ಸು. ೧೭೩೦)

ಶ್ರೀಮಾಚೇಶ್ವರ ಶಿವಾಚಾರ್ಯರ ಕರಕಂಜಸಂಜಾತರಾದ ಶ್ರೀಕರಿಬಸವದೇಶಿಕೇಂದ್ರಶಿವಾಚಾರ್ಯರು ಧರ್ಮವರದ ಮಠದಲ್ಲಿ ಶಿವಯೋಗನಿಷ್ಠರಾಗಿ ಕೆಲವು ಕಾಲವಿದ್ದರು. ಆ ಸಮಯದಲ್ಲಿ ಅಲ್ಲಿಗೆ ಸಮೀಪದಲ್ಲಿದ್ದ 'ಗುಮ್ಮನಾಯಕನಪಾಳ್ಯ'ದ ಪಾಳೆಯಗಾರನು ಶ್ರೀಯವರ ಪ್ರಭಾವವನ್ನರಿತು ಅವರನ್ನು ತನ್ನ ಪುರಕ್ಕೆ ಬಿಜಯಂಗೈಸಿ ಅವರಿಂದ ಉಪದೇಶವನ್ನು ಪಡೆದು ಕೃತಾರ್ಥನಾದನು. ಆತನೂ ಸಹ ಶ್ರೀಯವರಿಗೊಂದು ಮಠವನ್ನು ಕಟ್ಟಿಸಿಕೊಟ್ಟನು.

ಶ್ರೀಕರಿಬಸವೇಂದ್ರಸ್ವಾಮಿಗಳವರು ಕರ್ಣಾಟಕ ಸಿಂಹಾಸನ ಸಂಸ್ಥಾಪಕರಾದ ಶ್ರೀವಿದ್ಯಾರಣ್ಯರಂತೆ ಲೌಕಿಕ ವಿಚಕ್ಷಣರಾಗಿಯೂ ಇದ್ದಂತೆ ತಿಳಿದು ಬರುತ್ತದೆ. ಇದುವರೆಗೆ ಆಗಿ ಹೋದ ಮಹಾ ಸ್ವಾಮಿಗಳು ಕೇವಲ ಆಧ್ಯಾತ್ಮಿಕ ಜೀವನಪಥದಲ್ಲಿ ಮಾತ್ರ ತೊಡಗಿದವರಾಗಿ ಸಂಸಾರ ಸಾಗರ ಸಂತಪ್ತ ಜೀವರಿಗೆ ತಾರಕರಾಗಿದ್ದರು. ಅನೇಕರು ಭಾವಿಸಿರುವಂತೆ ಸಂಸಾರದಿಂದ ಕೈತೊಳೆದುಕೊಂಡು ಕೇವಲ ಜ್ಞಾನಮಾರ್ಗದಲ್ಲೇ ನಿರತರಾದಂತೆ ಮುಕ್ತಿಯ ಫಲವು ಲಭಿಸುವುದೆಂಬ ಒಂದು ಸಿದ್ಧಾಂತವನ್ನು ಲೋಕವಂದ್ಯರಾದ ಶ್ರೀವಿದ್ಯಾರಣ್ಯರು 'ಜ್ಞಾನಿನಾಚರಿತುಂ ಶಕ್ಯಂ ಸಮ್ಯಕ್ ರಾಜ್ಯಾದಿಲೌಕಿಕಮ್' ಎಂಬ ಕುಠಾರದಿಂದ ಛೇದಿಸಿ ಜಗತ್ತಿಗೆ ನೂತನ ಸಿದ್ಧಾಂತವನ್ನು ಕಾರ್ಯತಃ ಮಾಡಿತೋರಿಸಿದರು. ಅವರು ಆಧ್ಯಾತ್ಮಿಕದಲ್ಲಿ ಅದ್ವಿತೀಯರಾಗಿದ್ದಂತೆಯೇ ರಾಜ್ಯಾದಿಕಾರ್ಯಗಳನ್ನು ದಕ್ಷತೆಯಿಂದ ವಹಿಸಿ ಭಾರತಮಾತೆಯ ಪ್ರೀತಿಯನ್ನು ಗಳಿಸಿದರು. ಭಾರತಮಾತೆಯು ಪರಕೀಯರ ಪದಾಹತಿಯಿಂದ ಬಳಲುತ್ತಿರುವಾಗ ಮೂಗು ಹಿಡಿದು ಕುಳಿತಿರುವುದು ಅನುಚಿತವೆಂಬುದು ಅವರ ಜೀವನ ಪರಿವೆಯ

ಕುರುಹೆಂದು ತೋರುತ್ತದೆ. 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ' ಎಂಬ ಮಹಾಮಂತ್ರವನ್ನು ಜಗತ್ತಿಗೆ ಬೋಧಿಸಿದ ಮಹಾತ್ಮಾ ಬಸವಣ್ಣನವರೂ ಮತ್ತು ಅವರ ಅನುಯಾಯಿಗಳೂ ಲೌಕಿಕ ಪಾರಮಾರ್ಥಿಕ ವಿದ್ಯೆಯಲ್ಲಿ ಪಾರಂಗತರಾಗಿದ್ದಂತೆ ತೋರುತ್ತದೆ. ಈಗ ನವಯುಗದಲ್ಲಿ ಜಗತ್ಪ್ರಸಿದ್ಧ ರಾಜಕಾರಣ ಪಟುಗಳಾದ ಮಹಾತ್ಮಾ ಗಾಂಧಿಜಿಯವರೂ ಸಹ ಆಧ್ಯಾತ್ಮಿಕದಲ್ಲಿ ಉಚ್ಚಸ್ಥಾನವನ್ನು ಪಡೆದಿರುವರೆಂಬುದು ಸರ್ವಜನ ವಿದಿತವದೆ.

ಆದುದರಿಂದ ಇಂತಹ ಮಹತ್ವ ಪೂರ್ಣವಾದ ಕಾರ್ಯದಲ್ಲಿ ಈ ಮಠದ ಸ್ವಾಮಿಗಳು ಬಹಳ ಮುಂದುವರಿದಿದ್ದಾರೆ. ಇವರ ಕಾಲದಲ್ಲಿ ಅನಂತಪುರಕ್ಕೆ ಅಧಿಪತಿಯಾಗಿದ್ದ 'ಹಂಡೆ' ವಂಶಕ್ಕೆ ಸೇರಿದ ಪವಾಡಪ್ಪನು ಶ್ರೀಸ್ವಾಮಿಗಳಿಗೆ ಮುಖ್ಯ ಶಿಷ್ಯನಾಗಿದ್ದನೆಂದು ಹಿಂದೆಯೇ ಹೇಳಿದ್ದೇವೆ. ಈತನ ಅಣ್ಣನಾದ ಪ್ರಸನ್ನಪ್ಪನು ವಸಂತಮ್ಮನೆಂಬ ತನ್ನ ಪ್ರೇಯಸಿಯಿಂದ ದುರ್ಮರಣವನ್ನೈದಿದ ತರುವಾಯ ಪವಾಡಪ್ಪನೇ ರಾಜ್ಯವನ್ನು ಪರಿಪಾಲಿಸತೊಡಗಿದನು. ಈತನ ಅಮಿತಭಕ್ತಿಗೆ ಮೆಚ್ಚಿ ಶ್ರೀಸ್ವಾಮಿಗಳು ಆತನಿಗೆ ಅನೇಕ ವಿಧದಿಂದ ಸಲಹೆ ಸಹಾಯಗಳನ್ನು ಮಾಡುತ್ತಿದ್ದರು. ಈತನಿಗೆ 'ರಾಮಾಜಿ' ಎಂಬ ಓರ್ವ ಮಂತ್ರಿಯಿದ್ದನು. ರಾಜನು ಈತನ ಕೃತ್ರಿಮವನ್ನರಿತಿರಲಿಲ್ಲ. ಪವಾಡಪ್ಪನು ಕಡಪ ನವಾಬನಿಗೆ ಪ್ರತಿವರ್ಷವೂ ಕಪ್ಪವನ್ನು ಕೊಡುತ್ತಿದ್ದನು. ಒಂದುದಿವಸ ನವಾಬನ ಸೈನ್ಯಶಾಖಾಧಿಕಾರಿಗಳಾದ ಮಹಮ್ಮದಖಾನ್, ಆಲಿಖಾನ್ ಮತ್ತು ಸರ್‌ದಾರ್‌ಖಾನ್ ಎಂಬುವರು ಎಲ್ಲಿಗೋ ಹೋಗಬಯಸಿ ತಮ್ಮ ಸೈನ್ಯದೊಂದಿಗೆ ಅನಂತಪುರದ ಮಾರ್ಗವಾಗಿ ಬಂದು ಕೆರೆಯ ದಂಡೆಯಲ್ಲಿರುವ ಜೂಟೂರಿನ ಹತ್ತಿರ ಇಳಿದರು. ರಾಜನು ನವಾಬರ ಸರದಾರರು ಬಂದಿರುವರೆಂಬಂಶವನ್ನು ಅರಿತು ನವಾಬನಿಗೆ ಕೊಡಬೇಕಾದ ಕಪ್ಪವನ್ನು ತನ್ನ ಮಂತ್ರಿಯಾದ ರಾಮಾಜಿಯೊಡನೆ ಅವರಲ್ಲಿಗೆ ಕೊಟ್ಟು ಕಳುಹಿಸಿದನು.

ರಾಮಾಜಿಯು ತನ್ನ ಕುತಂತ್ರಕ್ಕೆ ಸಮಯವನ್ನು ನಿರೀಕ್ಷಿಸುತ್ತಿದ್ದನು. ಅವನು "ಪವಾಡಪ್ಪನು ಕುಡಕ ಈಗ ಈ ಸಂಸ್ಥಾನದ ಸ್ಥಿತಿಯು ಚಿಕ್ಕಟ್ಟಾಗಿಲ್ಲ. ಬೊಕ್ಕಸದಲ್ಲಿ ದ್ರವ್ಯವಿಲ್ಲ. ನೀವು ಸ್ವಲ್ಪ ಧೈರ್ಯಮಾಡಿ ಈತನನ್ನು ಬೆದರಿಸಿದರೆ ಸಂಸ್ಥಾನವು ನಿಮ್ಮದಾಗುವುದು" ಮುಂತಾಗಿ ಎಲ್ಲ ರಹಸ್ಯಗಳನ್ನು ಹೇಳಿದನು. ಇಂತಹ ವಿಭೀಷಣರಿಂದಲ್ಲವೇ ನಮ್ಮ

ನಾಡು ಪರಕೀಯರ ರಜೋಧೂಸರಿತವಾಗಿರುವುದು! ಪರಮ ದ್ರೋಹಿ ಯಾದ ಆತನ ಮಾತುಗಳನ್ನು ಕೇಳಿ ಸರದಾರರು 'ನಾವು ಪವಾಡಪ್ಪ ನನ್ನು ನೋಡಲು ಬರುವೆವೆಂದು' ಹೇಳಿಕಳುಹಿಸಿದರು. ಪವಾಡಪ್ಪನು ಅವರನ್ನು ಸ್ವಾಗತಿಸಲುಚಿತರೀತಿಯಿಂದ ಮರ್ಯಾದೆ ಮಾಡಿದನು. ಅವರು 'ನೀವು ನಾಲ್ಕು ವರ್ಷಗಳಿಂದ ಕಪ್ಪವನ್ನು ಕೊಟ್ಟಿಲ್ಲ. ಈಗ ಫೈಸಲಮಾಡಿ ಇಲ್ಲವೆ ನವಾಬರ ಹತ್ತಿರಕ್ಕೆ ಹೊರಡಿ' ಎಂದು ನಿರ್ಬಂಧಿಸಿದರು. ಪವಾಡ ಪ್ಪನು ದಿಗ್ಭ್ರಾಂತನಾದನು. ಕಪ್ಪವನ್ನು ಕೊಡಲು ದ್ರವ್ಯವಿಲ್ಲ. 'ನವಾಬರ ಆಜ್ಞೆಯನ್ನು ತೋರಿದರೆ ನಿಮ್ಮೊಡನೆ ಬರುವೆ'ನೆಂದನು. ಇದರಿಂದ ಸರದಾ ರರು ಕೃದ್ಧರಾಗಿ ಪವಾಡಪ್ಪನನ್ನು ಬಂಧಿಸಿದರು. ಈ ಸಂದರ್ಭವು ಅನಂ ತಪುರದ ಇತಿಹಾಸದಲ್ಲಿ ಈ ರೀತಿ ಉಲ್ಲೇಖಿಸಲ್ಪಟ್ಟಿದೆ.

"ಈ ಸಮಾಚಾರಮು ಕೊತ್ತಚೆರುವುನಂ ದುಂಡಿನ ನಿಡುಮಾಮಿಡಿ ಸ್ವಾಮುಲವಾರು ಎಟ್ಲೋವಿನಿರಿ. ಪವಾಡಪ್ಪ ಬುಕ್ಕ ಪಟ್ಟಣಮುನನುನ್ನ ಪ್ಪುಡು ಆ ಸ್ವಾಮುಲ ಪೈಚಾಲಭಕ್ತಿಗಲಿಗಿಯುಂಡೆನು. ಕಾವುನನಟ್ಲೆ ಯಿನ ಪವಾಡಪ್ಪನು ವಿಡುಪಿಂಚವಲಯುನನಿ ನಿಶ್ಚಯಿಂಚುಕೊನಿವೆಂಟನೇ ಬುಕ್ಕ ಪಟ್ಟಣಮು ಕೊತ್ತಚೆರವುನಂದಲಿ ಜನುಲನುವೆಂಟ ಬೆಟ್ಟುಕೊನಿ ಯೆವರಿಕಿನಿತೆಲುಪಕ ಅನಂತಪುರಮುನಕುವಚ್ಚಿನು. ಅನಂತಪುರಮುನ ನುಂಡಿನ ಚನ್ನಬಸಪ್ಪನು ಪಿಲುಪಿಂಚಿ ಏಕಾಂತಮುನ ನತನಿಕೋ 'ಮೀ ಬಾವಯ್ಯೈನ ಪವಾಡಪ್ಪಗಾರಿ ಸಂಸ್ಥಾನಮು ಮುನುಗುನಟ್ಲುನ್ನದಿ. ಇದಿ ಯಂತಯುರಾಮಾಜೀ ದ್ರೋಹಮೋ ಮನಮೆಟ್ಲಯಿನ ನೀ ತುರುಕುಲನು ಪಾರದೋಲಿ ಪವಾಡಪ್ಪಗಾರಿನಿ ವಿಡುಪಿಂಚವಲಯುನು ಅನಿಚಪ್ಪೆನು. ವಾರಿದ್ದರುನು ಚಾಲಕಾಲಮುಯೋಚಿಂಚಿ ಬುಕ್ಕರಾಯ ಸಮುದ್ರಮುನಂ ದಲಿ ಜನುಲನುಕೂಡ ಪಿಲಿಪಿಂಚಿಯುಪಾಯಮು ಚೇತಟಾಲುನ ಮಹ ಮ್ಮದೀಯುಲ ಪೈಬಡಿ ಯುದ್ಧಮುಚೇಸಿ ವಾರಿನಿಪಾರದೋಲಿರಿ. ಚನ್ನಬ ಸಪ್ಪಯು, ನಿಡುಮಾಮಿಡಿ ಸ್ವಾಮುಲನು ಚೇಸಿನಯುಪಕಾರಮುನಕು ಪವಾಡಪ್ಪಚಾಲಸಂತೋಷಿಂಚೆನು."

ಈ ವಿಷಯವು ಈ ಮಠದ ಇತಿಹಾಸದಲ್ಲಿಯೂ ಸುಂದರವಾಗಿ ಚಿತ್ರಿಸಲ್ಪಟ್ಟಿದೆ. ಇದರಿಂದ ಇದರಲ್ಲಿನ ಐತಿಹಾಸಿಕದ ಮಟ್ಟವು ವ್ಯಕ್ತವಾ ಗದಿರದು. ಸೀ "......ಅನಂತಾಖ್ಯಪುರಮುನಕಧಿಕವೈನ। ಖಾನು ಲಂದರು ಕರುಲಕಂಖಾಣ ಮುಲನು। ನೆಕ್ಕಿಬಕ್ಕಿಸುನಾಯುಧಾಲಕ್ಕಜಿ

ಮುಗ। ಬಟ್ಟಿವಚ್ಚಿನಚ್ಚಿನ ಸೇನಲಪಾದಧೂಳಿ। ಪಟ್ಟಣಮು ನಿಂಡಗಪ್ಪಿನ ಪೌರಜನುಲು।" ನವಾಬನ ಸೈನ್ಯವು ನಗರವನ್ನಾಕ್ರಮಿಸಲು ಪುರಜನರು ಭೀತರಾದರು. ಪವಾಡಪ್ಪನು ಆ ರಾತ್ರಿ ಬಂದಿಯಾಗಿ ಶ್ರೀಯುವರನ್ನು ಸ್ಮರಿಸಿಕೊಂಡನು.

'ಸೀ' ಯಿದಿಯೆಲ್ಲವಿನಿ ವಿಭುಡಾರಾತ್ರಿ ಭಕ್ತಿತೋ ಗುರುನಿದಲ ಚುಚು ಕನ್ನುಗೂರ್ಚಿನಪುಡು। ಕರಿಬಸವಸ್ವಾಮಿ ಕಲಲೋಕನುಪಿಂಚಿ ಭಯಪಡವಲದಂಚು ಬಲುಕುಚುಂಡ। ನಿದ್ರದೌರಿನ ಧಾರುಣೀಶ್ವರುಂ ಡಾತ್ಮಲೋ ಸಂತಶಿಲ್ಲುಚುನುಂಡನಂತಲೋನ। ತನ ಶಿಷ್ಯುನಕು ಕಷ್ಟ ದಶಸಾಂಭವಿಂಚಿನ ವಾರ್ತವಿನಿ ಸ್ವಾಮುಲವಾರುವೆಡಲಿ।......ಗುರುವ ರೇಣ್ಯುಡಂನಂತಾಖ್ಯಪುರ ಮುಜೇರಿ। ವನಮುಲೋ ಪಲವಶಿಯಿಂಚಿಯು ನಘಮೂರ್ತಿ"

ಹೀಗೆ ಶ್ರೀಯುವರು ತಮ್ಮ ಶಿಷ್ಯಗಣದೊಂದಿಗೆ ಪವಾಡಪ್ಪನ ಸ್ವಪ್ನ ದಲ್ಲಿ ಅಭಯವಿತ್ತು ಅನಂತಪುರದುಪವನದಲ್ಲಿದ್ದು ಸಮಯವನ್ನು ನೋಡಿ ರಾಜನ ಭಾವಮೈದನಾದ ಚನ್ನಬಸಪ್ಪನ ಸಹಾಯದಿಂದ ತುರುಕ ರನ್ನು ಸೋಲಿಸಿ ಓಡಿಸುತ್ತಾರೆ.

ಇದರಿಂದ ಸಂತುಷ್ಟನಾದ ರಾಜನು ಶ್ರೀಯುವರನ್ನು ಈ ರೀತಿ ಸ್ತುತಿಸುತ್ತಾನೆ.

ಉ॥ ಅಂತಪವಾಡ ಭೂವಿಭುಡು ನಾಗುರುವರ್ಯ ನಿಜೇರಿವ್ರೊಕ್ಕಿಮಾ।
ರೆಂತ ಮಹಾನುಭಾವುಲನಿಯೆನ್ನುದು ಸನ್ನುತಿಶೇಯ ಶಕ್ಯಮೇ॥
ದಂತಿ ತುರಂಗಯೂಥ ಮುಲದಾಕೊನಿ ಸೇನಲ ಮೀದದುಡಿಗಾ।
ನಂತಕುಮಾಟ್ಕಯ್ಯೆರಿಪುಲ ನಾಹವರಂಗಮುನಂದು ದ್ರುಂಚಿತೇ॥

ಚ॥ ಗುರುವುಲನೇಕುಲಂಗಲರು ಕುಂಭಿಣಿ ಮೀದನುಮೀ ಸಮಾನಮಾ।
ಪರುಲರುದೆಂಚಿ ಶಿಷ್ಯನ ಕುಬಾಧಲು ಬೆಟ್ಟಿನಚೂಚಿ ಧೀರತನ್॥
ಧುರಪೊಸರಿಂಚಿ ವೈರುಲನುದ್ರುಂಚಿ ಸುಖಸ್ಥಿತಿನುಂಡಜೇಶಿತಾ।
ಪರಮ ಕೃಪಾಸಮುದ್ರ ಮಿಮುಬ್ರಸ್ತುತಿ ಶೇಯನುನಾಕುಶಕ್ಯಮೇ॥

"ಎಲೈ ಗುರುವರ್ಯರೇ ಜಗತ್ತಿನಲ್ಲಿ ಗುರುಗಳೆಂಬುವರು ಅನೇಕ ವಾಗಿದ್ದಾರೆ. ಆದರೆ ತಮ್ಮಂತೆ ಶಿಷ್ಯರಿಗೆ ಉಂಟಾದ ವಿಪತ್ತನ್ನು ಪರಾಂ ಬರಿಸಿ ಅವನ ಉದ್ಧಾರಕ್ಕಾಗಿ ಧೈರ್ಯದಿಂದ ಯುದ್ಧಮಾಡಿ ಕಣತುರ

ಗಾಳಿಯಿಂದ ಸಮಾಕೀರ್ಣವಾದ ಶತೃಸೇನೆಯನ್ನು ಸೋಲಿಸಿ ನಮ್ಮನ್ನು ಉದ್ಧಾರಮಾಡಿದ ಪರಮ ಕೃಪಾ ಸಮುದ್ರರಾದ ತಮ್ಮನ್ನು ಸ್ತುತಿಸಲು ನಾನೆಷ್ಟರವನು!"

ಈ ರೀತಿಯಾದ ಸ್ತುತಿಯು ಆವನ ಅಂತರಾತ್ಮನ ಒಳದನಿಯನ್ನು ಮಿಡಿಯುವುದಾಗಿದೆ. ಶಿಷ್ಯರು ಸಮೃದ್ಧರಾಗಿರುವಾಗ ಹೊಗಳಿ ಕಾಣಿಕೆಯನ್ನೆಳೆಯುವುದು ಮಾತ್ರವೇ ಗುರುಗಳ ಕರ್ತವ್ಯವಲ್ಲ. ಶಿಷ್ಯರಿಗೆ ಅಂದಂದಿಗೆ ಸಂಭವಿಸತಕ್ಕ ಈತಿ ಬಾಧೆಗಳನ್ನು ಪರಿಹರಿಸತಕ್ಕ ಗುರುಗಳು ಇಂದು ಎಷ್ಟು ಮಂದಿ ಸಿಗುವರು! ಈ ಸಂಘಟನೆಯು ಇಂದಿನ ಸನ್ಯಾಸಿ ವೃಂದಕ್ಕೆ ಆದರ್ಶವಾಗಿದೆಯಲ್ಲವೇ! ಇದಲ್ಲವೆ ಡಾ॥ ಕುರ್ತು ಕೋಟಿ ಶಂಕರಾಚಾರ್ಯರು ೧೨ ಲಕ್ಷ ಸನ್ಯಾಸಿಗಳನ್ನು ಇಂದಿನ ಸಮಾಜ ಸುಧಾರಣಾ ರಣಕ್ಷೇತ್ರಕ್ಕೆ ಆಹ್ವಾನಿಸುವುದಕ್ಕೆ ತಳಹದಿಯು. ಎಂದಿನ ವರೆಗೆ ಇಂದಿನ ಸನ್ಯಾಸಿ ಗುರು-ವಿರಕ್ತ ವರ್ಗವು ಈ ತೆರನಾದ ನಾಡಿನ ಸೇವೆಯಲ್ಲಿ ತೊಡಗುವುದಿಲ್ಲವೊ ಅಂದಿನ ವರೆಗೆ ಅವರ ಅನುಷ್ಠಾನವು ಕಾನನದ ಕೌಮುದಿಯಂತೆ ನಿರರ್ಥಕವಲ್ಲವೇ? ಅಸ್ತು.

ಈ ಪುಸ್ತಕಕ್ಕೆ ಸಂಬಂಧಿಸಿದ ಅನೇಕ ಚಾರಿತ್ರಕ ವಿಷಯಗಳು ಉಪಲಬ್ಧವಿದ್ದರೂ ಅದಕ್ಕೆ ಪ್ರತ್ಯೇಕವಾದ ಗ್ರಂಥದ ಪ್ರಯತ್ನವೇ ನಡೆಯಿಸುವುದರಲ್ಲಿರುವುದರಿಂದ ಪ್ರಕೃತವನ್ನನುಸರಿಸುವ.

ಹೀಗೆ ಶ್ರೀ ಕರಿಬಸವೇಂದ್ರ ಯೋಗೀಂದ್ರರು ಆತನಿಂದ ವಿಶೇಷ ಮರ್ಯಾದೆಯನ್ನು ಹೊಂದಿ ಆಶೀರ್ವದಿಸಿ ಹೊಸಕೆರೆಗೆ ದಯಮಾಡಿಸಿ ಶಿವಯೋಗದಲ್ಲಿರುತ್ತಿದ್ದು ಕೆಲವು ದಿವಸದ ನಂತರ ಅವರು ನಿಡುಮಾಮಿಡಿಗೆ ದಯಮಾಡಿಸುತ್ತಾರೆ.

ಪವಾಡಪ್ಪನು ತನಗೆ ದ್ರೋಹಮಾಡಿದ ರಾಮಾಜಿಗೆ ತಕ್ಕ ಶಿಕ್ಷೆಯನ್ನಿತ್ತು ಶ್ರೀಯವರ ಅಪ್ಪಣೆಯಂತೆ ರಾಜ್ಯಭಾರ ಮಾಡುತ್ತಿದ್ದನು. ಅನಂತರ ಪವಾಡಪ್ಪನು ಶಿವಾಧೀನನಾದನಂತರ ಆತನು ಮೊದಲೇ ಪ್ರಾರ್ಥಿಸಿಕೊಂಡಿದ್ದಂತೆ ಆತನ ಸಮಾಧಿಯು ಸನ್ ೧೭೩೭ರಲ್ಲಿ ಹೊಸಕೆರೆಯಲ್ಲಿ ಮಠದ ಆವರಣದಲ್ಲಿ ಮಾಡಲ್ಪಟ್ಟಿತು. ಈ ವಿಚಾರವು ಮೆ॥ ಸಿ. ಪಿ. ಬ್ರೌನ್ ಸಾಹೇಬರು ಬರೆದಿರುವ 'ಅನಂತಪುರಂ ಜಿಲ್ಲಾ ಗೆಜೆಟಿಯರ್' ನಲ್ಲೂ ವ್ಯಕ್ತವಾಗಿದೆ.

ಸು. ೧೭೬೧ರಲ್ಲಿ ಮೈಸೂರು ರಾಜ್ಯವನ್ನು ಆಕ್ರಮಿಸಿದ ಹೈದರನು ದಂಡಯಾತ್ರೆಯನ್ನು ಮಾಡಿ ಪೆನುಗೊಂಡೆ, ಸೀರ್‍ಯ, ಬಿದನೂರು ಮುಂತಾದುವನ್ನು ಆಕ್ರಮಿಸಿದನು ಎಂಬುದು ಇತಿಹಾಸ ಪ್ರಸಿದ್ಧವಿದೆ ಅವನು ಪ್ರಥಮತಃ ಬಂದಾಗ್ಗೆ ಪೆನುಗೊಂಡೆಗೆ ಸಮೀಪದಲ್ಲಿದ್ದ ನಿಡುಮಾಮಿಡಿ ಸ್ವಾಮಿಗಳ ಸಮಾಚಾರವನ್ನು ಕೇಳಿ ಅವರಿಗೆ ಅಪಮಾನ ಮಾಡಬೇಕೆಂಬ ತನ್ನ ದುರ್ಮಿತ್ರರ ಪ್ರೇರಣೆಯಂತೆ ಶ್ರೀಯವರನ್ನು ಅರಮನೆಗೆ ಕರೆಯಿಸಿ ಒಂದು ಮನೆಯಲ್ಲಿ ಬಂಧಿಸುತ್ತಾನೆ. ಇದನ್ನು ಕವಿಯು ಈ ರೀತಿ ವಿವರಿಸಿದ್ದಾನೆ.

ಸೀ॥ ಅಚ್ಛೋಟ ಕೊನ್ನಿಯೇಂಡ್ಲಾನಂದ ಮೂರ್ತಿಯೈ ಶಿವಯೋಗ ಸಾಮ್ರಾಜ್ಯ ಶೀಲುಡಗುಚು। ಶಿಷ್ಯುಲು ಬಹು ಮಂದಿ ಸೇವಿಂಚುಚುಂಡಾಗಾ ಗರ್ವಾತ್ಮುಲದಿ ಚೂಚಿಯೋರ್ವ ಲೇಕ। ಕೊಂದರುಜನಿ ಪೆನುಗೊಂಡ ಹೈದರುಖಾನು ಚೇರಿಸಲ್ಲಾಮುಲು ಚೇಸಿವಾರು। ನಿಡುಮಾಮಿಡಿ ಸಮೀಪ ಮಡವಿಲೋಮಠಮುಂದು ಲಿಂಗಧಾರುಲ ಗುರುಡು ಜಂಗಮಯ್ಯ।..................

ಚೇರಿಯುನ್ನಾಡು ಪೆಟ್ಟಿಕುನ್ನಾಡು ಇತರುಲನುಟ್ಟನೀಡು।
ಪಟ್ಟಿ ನಿರ್ಬಂಧಪೆಟ್ಟಿತೆ ಭಯಮುಕಲಿಗಿ।
ಅಂತಯಿಂತೈನಯಿಚ್ಚುರಮ್ಮಾಂಚುಬಲುಕ॥

ಹೀಗೆ ಕೆಲ ದುಷ್ಟರು ಶ್ರೀಯವರನ್ನು ಹೆದರಿಸಿದರೆ ದ್ರವ್ಯವನ್ನು ಕೊಡುವರೆಂದು ಹೇಳಲು ಅವನು ಆವರನ್ನು ಕರೆಯಿಸಿ ನಿರ್ಬಂಧಿಸುತ್ತಾನೆ. ಆದರೆ ಅವರ ಪ್ರಭಾವ ಮಹಾತ್ಮ್ಯದಿಂದ ಆತನ ಪರಿವಾರಕ್ಕೆ ಹೃದಯ ಶೂಲೆಯು ಅಮಿತವಾಗಿ ಬಾಧಿಸತೊಡಗುತ್ತದೆ. ಅದರಿಂದ ವಿದಿತ ಮಹಿಮನಾದ ಹೈದರನು ಅವರ ಪ್ರಭಾವಕ್ಕೆ ಶರಣಾಗತನಾಗಿ ಅಪರಾಧ ಕ್ಷಮೆಯನ್ನು ಬೇಡಿ ಗೌರವಿಸುತ್ತಾನೆ.

## ಶಿವಗಂಗಾ ಕ್ಷೇತ್ರಕ್ಕೆ ಪ್ರಯಾಣ.

ಅಲ್ಲಿಂದ ಶ್ರೀಯವರು ಆಂದೋಲಿಕಾರೂಢರಾಗಿ ಪರಿವಾರದೊಂದಿಗೆ ದೇಶಾಟನೆ ಹೊರಟು ಶಿವಗಂಗಾಕ್ಕೆ ದಯಮಾಡಿಸುತ್ತಾರೆ. ಇಲ್ಲಿ ಕವಿಯು ಶಿವಗಂಗಾ ಗಿರಿಯನ್ನು ಹೀಗೆ ವರ್ಣಿಸಿದ್ದಾನೆ.

ಸೀ॥ ಶಿವಗಂಗ ಪರ್ವತ ಶ್ರೀಷಣ್ಮುನಿಚರಿತಂಬು ವಿವರಿಂಚಿ ಚೆಪ್ಪೆ ದವಿನುಡಟಂಚು। ಯೊಕದಿಕ್ಕುವೀಕ್ಷಿಂಪ ಯುರಗೇಂದ್ರ ಫಣ ಮುಗಾ ಯೊಕ ದಿಕ್ಕು ಗಜಮುಖುಂಡುಂಡಿನಟ್ಲು। ಯೊಕದಿಕ್ಕು ಲಿಂಗವ್ಯೆ ಪ್ರಕಟಂಬುಗಾದೋಚು ನೊಕದಿಕ್ಕ ವೃಷಭ ವ್ಯೆಯೊಪ್ಪುಚಂಡು। ನಟ್ಟಿ ಪರ್ವ ರಾಜಮುಂದು ಪ್ರಕಾಶಿಂಚು ಗೋಪುರೋನ್ನತ ವ್ಯೆನ ಗೋಪುರಂಬು।

'ಸೀ' ಚುಟ್ಟುಪ್ರಾಕಾರ ಮುಂಟಿಪ ಶೋಭಿತಂಬು।
ತಪಮುಗಾವಿಂಚು ಮುನುಲಕು ಸ್ಥಾವರಂಬು॥
ಸಕಲಭಕ್ತುಲಮುಕ್ತಿಸಾಧಕಂಬು।
ನಲರು ಗಂಗಾಧರೇಶ್ವರು ನಾಲಯುಂಬು॥

ಹೀಗೆ ವರ್ಣನೆಯು ಮನಮೋಹಕವಾಗಿದೆ. ಪರ್ವತವು ಪೂರ್ವ ದಿಂದ ವೃಷಭಾಕಾರವಾಗಿಯೂ, ಪಶ್ಚಿಮದಿಂದ ಸರ್ಪಾಕಾರವಾಗಿಯೂ, ದಕ್ಷಿಣದಿಂದ ವಿನಾಯಕನ ಆಕಾರವಾಗಿಯೂ ಮತ್ತು ಉತ್ತರದಿಂದ ಲಿಂಗಾಕಾರವಾಗಿಯೂ ಪ್ರಾಕೃತಿಕ ಸೌಂದರ್ಯದಿಂದ ರಾರಾಜಿಸುವು ದನ್ನು ಹೃದಯಂಗಮವಾಗಿ ಚಿತ್ರಿಸಿದ್ದಾನೆ.

ಶ್ರೀಯವರು ಅಲ್ಲಿ ಕೆಲವು ದಿನ ಶಿವಯೋಗದಲ್ಲಿದ್ದರು. ಅಲ್ಲಿಗೆ ಮುಖ್ಯ ಸ್ಥನಾದ 'ಗಂಗಾಧರಗೌಡ' ನೆಂಬುವನು ಶ್ರೀಯವರನ್ನು ಪುರಕ್ಕೆ ಸ್ವಾಗ ತಿಸಿ ಗೌರವಿಸಿದಂತೆಯೂ ಉಲ್ಲೇಖವಿದೆ. ಅಲ್ಲಿಗೆ ಅನತಿದೂರದಲ್ಲಿರುವ 'ಕಂಬಾಳು' ಎಂಬಲ್ಲಿ ಶ್ರೀಪರ್ವತಪೀಠಕ್ಕೆ ಸೇರಿದ ಒಂದು ಮಠವಿದೆ. ಬಹುಶಃ ಇದು ಶ್ರೀಯವರ ಕಾಲಕ್ಕೆ ಏರ್ಪಟ್ಟಿರಬೇಕೆಂದು ಊಹಿಸಲು ಅವ ಕಾಶವಿದೆ. ಶ್ರೀದುರ್ಗದಲ್ಲಿ ಇಂದಿಗೂ ರಂಭಾಪುರೀ, ಉಜ್ಜಯನೀ ಮತ್ತು ಪರ್ವತ ಪೀಠಗಳ ಶಾಖಾಮಠಗಳು ಇರುತ್ತವೆಯೆಂಬುದು ಸರ್ವ ವಿದಿತವೇ ಇದೆ. ಅವುಗಳು ಈಗ ಮೇಲಣಗವಿಮಠ, ಹೊನ್ನಮ್ಮಗವಿ ಮಠ ಮತ್ತು ಬಾಳು ಮಠವೆಂದು ಪ್ರಸಿದ್ಧಿಯಾಗಿರುತ್ತವೆ. *

---

* ಮೇಲಣಗವಿ ಮತ್ತು ಹೊನ್ನಮ್ಮಗವಿ ಮಠಗಳ ವಿಷಯದಲ್ಲಿ ಮತ್ತೊಮ್ಮೆ ಚಾರಿತ್ರಿಕ ವಿವರಗಳನ್ನು ಪ್ರಕಟಿಸುವ ಪ್ರಯತ್ನದಲ್ಲಿದೆ.

(ಲೇ.)

ಅಲ್ಲಿಂದ ಶ್ರೀಯವರು ಸಂಚಾರ ಮಾಡುತ್ತ ಶ್ರೀನಂದಿಗೆ ದಯ ಮಾಡಿಸಿ ಅಲ್ಲಿನ ಪ್ರಕೃತಿಸೌಂದರ್ಯಮುಗ್ಧರಾಗಿ ಶಿವಯೋಗದಲ್ಲಿರುತ್ತಾರೆ. ಅಲ್ಲಿಗೆ ಗೌಡನಾದ ನಂದಿಗೌಡನು ಇವರನ್ನು ಪೂಜಿಸುತ್ತಾನೆ. ಆತನು ಶ್ರೀಯವರಿಗೆ ಏರ್ಪಡಿಸಿಕೊಟ್ಟಿರುವ ಮಠವು 'ಪಾದಸಂದ್ರದ ಮಠ'ವೆಂದು ಇಂದಿಗೂ ಈ ಮಠದ ಸ್ವಾಧೀನದಲ್ಲಿರುತ್ತದೆ. ಅಲ್ಲಿಂದ ಶ್ರೀಯವರು ಹೊಸಕೆರೆಗೆ ದಯಮಾಡಿಸಿ ಓರ್ವ ಸದ್ವಂಶೀ ವಟುವಿಗೆ

ಕಂ॥ ಲಾಲಿತಮಗ ಆರಾಧ್ಯುಲ।

ಬಾಲುನಿಶಿರ ಮಂದುಹಸ್ತಪಂಕಜ ಮುಪುಡುನ್ ॥
ಶೀಲಮುಚೇಸಿದುವ್ವಚು ।
ಮಾಲಿಮಿತೋಗಟ್ಟಿ ಪಟ್ಟಮತನಿಕಿ ಗುರುಡುನ್ ॥

ಪಟ್ಟಾಭಿಷೇಕವನ್ನು ಮಾಡಿ 'ಮರಿಕರಿಬಸವೇಂದ್ರ ಶಿವಾಚಾರ್ಯ' ನೆಂದು ಅಭಿಧಾನವಿಟ್ಟು ಅಲ್ಲಿಯೇ ಲಿಂಗದಲ್ಲಿ ಬೆರೆಯುತ್ತಾರೆ.

ಶಿವಯೋಗಿ ಚಕ್ರವರ್ತಿಗಳೂ ರಾಜಕಾರಣ ಪಟುಗಳೂ ಆದ ಈ ಮಹನೀಯರ ಕಾಲದಲ್ಲಿ ವೀರಶೈವಮತಕ್ಕೂ ಭಾರತಮಾತೆಗೂ ಅಮಿತ ವಾದ ಸೇವೆಯೊದಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಅವರ ಇತ್ರೋ ಪ್ಯತಿಶಯವಾದ ಮಹತ್ಕಾರ್ಯಗಳು ಇತಿಹಾಸದ ಗರ್ಭದಲ್ಲಿ ಮಲಿನ ವಾಗಿದ್ದರೂ ಇಂತಹ ಒಂದೆರಡು ಸನ್ನಿವೇಶಗಳು ಅವೆಲ್ಲವುಗಳ ಸ್ಮಾರಕ ಗಳಾಗಿವೆ. ಇಂದಿನ ಸನ್ಯಾಸಿವರ್ಗಕ್ಕೆ ಅವು ಆದರ್ಶವಾಗುವುದಾದರೆ ಅವು ಸಾರ್ಥಕವಾಗುತ್ತದೆ. ಮತ್ತು ನಮ್ಮ ಉದ್ಯಮವು ಕೃತಕೃತ್ಯವಾ ಗುತ್ತದೆ.

## ಶ್ರೀಮರಿಕರಿಬಸವನೇಂದ್ರ ಶಿವಾಚಾರ್ಯರು (ಸು. ೧೭೬೫)

ಶ್ರೀಸ್ವಾಮಿಗಳು ಅಧಿಕಾರವನ್ನು ಸ್ವೀಕರಿಸಿದ ಕೆಲವು ಕಾಲದ ಅನಂ ತರ ಅವರು ದೇಶಸಂಚಾರಕ್ಕೆ ದಯಮಾಡಿಸುತ್ತಾರೆ. ಆ ಸಮಯಕ್ಕೆ ಅನಂತಪುರದಲ್ಲಿ ರಾಮಪ್ಪನೆಂಬ ಪವಾಡಪ್ಪನ ಅಣ್ಣನಮಗನು ರಾಜ್ಯ ಪರಿಪಾಲನೆ ಮಾಡುತ್ತಿದ್ದನು. ಈ ಸಂದರ್ಭದಲ್ಲಿ ಇದಕ್ಕೆ ಸಂಬಂಧಿಸಿದ ಒಂದೆರಡು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿದೆ.

ಪವಾಡಪ್ಪ ತೀರಿಕೊಂಡನಂತರ ಆತನ ಮಗನಾದ 'ಸಿದ್ದಪ್ಪ' ನು ೧೭೩೮ ರಲ್ಲಿ ಪಟ್ಟಕ್ಕೆ ಬಂದನು. ಈತನು ಬಳ್ಳಾರಿಯಲ್ಲಿದ್ದ ಮೋಲಿ

ಹೇಳಿದ ರಾಮಪ್ಪನ ಪತ್ನಿಯ ತಂಗಿಯಾದ ಭದ್ರಮ್ಮನನ್ನು ವಿವಾಹವಾದನು. ಈತನು ಕಡುಕನೂ ದುರ್ಮಾರ್ಗಿಯೂ ಆಗಿದ್ದನು. ಪ್ರಜೆಗಳ ಕಷ್ಟಗಳನ್ನು ವಿಚಾರಿಸುತ್ತಿರಲಿಲ್ಲ. ಅಷ್ಟೇ ಅಲ್ಲದೆ ಅವರಿಗೆ ವಿಶೇಷ ತೊಂದರೆ ಕೊಡುತ್ತಿದ್ದನು. ಪ್ರಸನ್ನಪ್ಪನು ತೀರಿಕೊಂಡ ಮೇಲೆ ಪವಾಡಪ್ಪನು ಅನಂತಪುರಕ್ಕೆ ಒಡೆಯನಾದನೆಂದು ಹಿಂದೆಯೇ ಹೇಳಿದೆ. ತಂದೆಯು ತೀರಿಕೊಂಡಮೇಲೆ ರಾಮಪ್ಪನು ಬಳ್ಳಾರಿ ಜಿಲ್ಲೆಗೆ ಸೇರಿದ ಹೊಸಪೇಟೆ ತಾಲ್ಲೂಕು ಹೊಸೂರಿನಲ್ಲಿ ತನ್ನ ಬಂಧುಗಳಹತ್ತಿರ ಇದ್ದನು. ರಾಮಪ್ಪನು ಉತ್ತಮ ಪ್ರಕೃತಿಯುಳ್ಳವನು, ಜನಾನುರಾಗಿ. ಹಿರಿಯನ ಮಗನಾದರೂ ರಾಜ್ಯವಿಲ್ಲ. ಅನಂತಪುರ ಮುಂತಾದ ಪ್ರಮುಖ ಗ್ರಾಮಗಳ ಮುಖಂಡರು ಸಿದ್ದಪ್ಪನ ಅನ್ಯಾಯಗಳನ್ನು ತಡೆಯಲಾರದೆ ರಾಮಪ್ಪನಲ್ಲಿಗೆ ಹೋಗಿ ಅನಂತಪುರಕ್ಕೆ ಬಂದು ರಾಜ್ಯ ಸ್ವೀಕರಿಸಲು ಪ್ರಾರ್ಥಿಸಿಕೊಂಡರು. ಈ ಸಮಾಚಾರವನ್ನು ಸಿದ್ದಪ್ಪನು ಕೇಳಿ ಬೊಕ್ಕಸದಲ್ಲಿದ್ದ ಹಣವನ್ನು ತೆಗೆದುಕೊಂಡು ತಾಡಿಮರಿಯಲ್ಲಿ ತನ್ನ ಸ್ನೇಹಿತನಾದ ದೊಡ್ಡ ತಿರುಮಲರಾಯನಲ್ಲಿಗೆ ಹೋದನು. ರಾಮಪ್ಪನು ಬಂದು ಅನಂತಪುರವನ್ನು ಸೇರಿದನು. ಆದರೆ ಸಿದ್ದಪ್ಪನು ತಿರುಮಲರಾಯನ ಸಹಾಯದಿಂದ ದೊಡ್ಡ ಸೈನ್ಯ ತೆಗೆದುಕೊಂಡು ಯುದ್ಧಕ್ಕೆ ಬಂದನು. ರಾಮಪ್ಪನು ಅಸಹಾಯನಾದನು. ಬೊಕ್ಕಸದಲ್ಲಿ ಹಣವಿಲ್ಲ. ಆಗ ಆತನು ತನ್ನ ಮಿತ್ರನಾದ ಗುತ್ತಿದುರ್ಗದಲ್ಲಿದ್ದ ಮುರಾರಿರಾಯನ ಸಹಾಯವನ್ನು ಬಯಸಿದನು. ಮುರಾರಿರಾಯನು ಭಾರಿ ಸೈನ್ಯದೊಡನೆ ಬಂದು ಅವನನ್ನು ಸೋಲಿಸಿದನು. ಸಿದ್ದಪ್ಪನು ಸೈದಿಯಾಗಿ ಕಡೆಗೆ ಅದೇ ದುಃಖದಲ್ಲೇ ಕಾಲವಾದನು. ಈ ರಾಮಪ್ಪನ ಕುಮಾರನಾದ ಸಿದ್ಧರಾಮಪ್ಪನು ೧೭೭೨ ರಾಜ್ಯಾಧಿಪತಿಯಾಗಿದ್ದ ಕಾಲದಲ್ಲಿ ಶ್ರೀಮರಿಕರಿಬಸವದೇಶಿಕೇಂದ್ರಶಿವಾಚಾರ್ಯರು ಆಹ್ವಾನಿತರಾಗಿದ್ದಂತೆ ತಿಳಿದುಬರುತ್ತದೆ ಶ್ರೀಮಠದ ಇತಿಹಾಸದಲ್ಲಿ:—

ಸೀ॥ ಭೂರಿಅನಂತಾಖ್ಯಪುರಮುಪಾಲನಶೇಯು ಹಂಡೆರಾಮೇಂದ್ರುಂಡುಚಂಡಕೋಪಿ। ರಾಜ್ಯಮುಧಾಂಟುಂಡ್ಯೆರಾಜ್ಯಂಬುಶೇಯು ಚುನೊಕನಾಡು ಗುರುಮೂರ್ತಿಯುನ್ನಚೋಟು। ತೆಲಿಸಿ ಕನಯಿಂಟಿಕಿ ಪಿಲುಪಿಂಚು ಕೊನಿವಾಡು ಪರುಲದುರ್ಬೋಧಕುಂಪಾಲುಮಾಲಿ। ವಚ್ಚಿಸ್ವಾಮಿಕಿವಂದನಾದಿ ಕ್ರಿಯಲ್ ಚರಪಕಗರ್ವಿಂಚಿ ಸರಕುಗೊನಕ।... ..”

ಈ ರೀತಿ ಆತನು ಕೆಲದಿನ ರಾಜ್ಯಪರಿಪಾಲನೆ ಮಾಡಿದನಂತರ ಗರ್ವಿಷ್ಠನಾಗಿ ಶ್ರೀಯವರನ್ನು ಕರೆಯಿಸಿ ಕೆಲವರ ದುರ್ಬೋಧನೆಯಿಂದ ಗೌರವಿಸುವುದಿಲ್ಲ. ಇದರಿಂದ ಕುಪಿತರಾದ ಶ್ರೀಯವರು ಶಪಿಸಿ ಅಲ್ಲಿಂದ ತಮ್ಮ ಮಠಕ್ಕೆ ಹಿಂತಿರುಗಿ ಬರುತ್ತಾರೆ. ಸಿದ್ಧರಾಮಪ್ಪನು ಅಷ್ಟು ಬುದ್ಧಿವಂತನಲ್ಲ. ಈತನ ತಂದೆಯಾದ ರಾಮಪ್ಪನು ಬಂಧುಗಳಿಂದ ಕೊಲ್ಲಲ್ಪಟ್ಟನಂತರ ಈತನೂ ಇವನ ಭಾವನಾದ ಬಸಪ್ಪನು ಬಳ್ಳಾರಿ ಕೋಟೆಯಲ್ಲಿ ಬಂಧಿತರಾದರು. ಬಸಪ್ಪನು ಸಾಹಸಿ. ಅವನು ಯಾವ ಕಾಲದಲ್ಲಿ ಏನು ಮಾಡಬೇಕೆಂಬ ಪರಿಜ್ಞಾನವು ಆತನಿಗಿತ್ತು. ಆದ್ದರಿಂದ ಉಪಾಯದಿಂದ ಇಬ್ಬರೂ ಅಲ್ಲಿಂದ ಬಿಡುಗಡೆ ಹೊಂದಿ ಅನಂತಪುರಕ್ಕೆ ತಲುಪಿದರು. ೧೭೫೭ರಲ್ಲಿ ಶಿದ್ಧರಾಮಪ್ಪನಿಗೆ ಪಟ್ಟಾಭಿಷೇಕವಾಯಿತು. ಆದರೂ ಬಸಪ್ಪನೇ ಎಲ್ಲ ಕಾರ್ಯಭಾರವನ್ನು ವಹಿಸಿದ್ದನು. ಆದರೆ ಆತನು ೧೭೭೨ ರಲ್ಲಿ ಕಾಲನಾದ್ದರಿಂದ ಈತನು ಶ್ರೀಯವರ ಆಗ್ರಹಕ್ಕೆ ಪಾತ್ರನಾಗಬೇಕಾಯಿತು. ಆದರೆ ದೈವಬಲವು ಕುಂದಿದಾಗ ಎಂತಹ ವಿಪತ್ತುಗಳು ಒದಗುವುವೆಂಬುದನ್ನು ಹೇಳಲಾರಿಗೆ ಸಾಧ್ಯ? ಇಲ್ಲಿ ಕವಿಯು ಗುರುತಿರಸ್ಕಾರದಿಂದಲೇ ಈತನಿಗೆ ಏಕಕಾಲದಲ್ಲಿ ನಾನಾ ಕಡೆ ಯುದ್ಧವು ಪೊದಗಿ ಅನೇಕ ವಿಧದಿಂದ ನಷ್ಟವು ಸಂಭವಿಸಿತೆಂದು ಹೇಳುತ್ತಾನೆ. ಅನಂತರ ಈತನು ಕ್ಷಮಾಪಣೆಯನ್ನು ಬೇಡಿದಂತೆಯೂ ಶ್ರೀಯವರು ಅನುಗ್ರಹ ಮಾಡಿದಂತೆಯೂ ಕವಿಯು ಉಲ್ಲೇಖಿಸಿದ್ದಾನೆ. ಆದರೂ ೧೭೬೧ರಲ್ಲಿ ಪಟ್ಟಕ್ಕೆ ಬಂದ ಹೈದರ್ ಆಲಿಯು ೧೭೭೫ರಲ್ಲಿ ಮಹತ್ತರ ಸೇನೆಯೊಡನೆ ಗುತ್ತಿದುರ್ಗವನ್ನು ಆಕ್ರಮಿಸಿ ಅನಂತಪುರದಿಂದ ಪ್ರತಿವರ್ಷವೂ ನಲವತ್ತು ಸಾವಿರ ರೂಪಾಯಿಗಳನ್ನು ವಸೂಲು ಮಾಡುವಂತೆ ಗುತ್ತಿಯಲ್ಲಿ ನಿಯಮಿಸಲ್ಪಟ್ಟ 'ಬಾಲಾಜಿರಾವ್' ಎಂಬುವನಿಗೆ ವಿಧಿಸಿ ಹೊರಟುಹೋದನು. ಅಂದಿನಿಂದ ಅನಂತಪುರದಲ್ಲಿ ವೀರಶೈವ ರಾಜರ ಸಂಪದಭಿವೃದ್ಧಿಯು ಕ್ಷೀಣಿಸಿತು. ಅನಂತಪುರ ರಾಜಸೂರ್ಯನು ಅಸ್ತೋನ್ಮುಖನಾದನು. ಅಸ್ತು.

ಅಲ್ಲಿಂದ ಶ್ರೀಯವರು ದಕ್ಷಿಣ ದೇಶ ಸಂಚಾರವನ್ನು ಕೈಕೊಂಡು ರಾಮೇಶ್ವರದವರೆಗೂ ದಯಮಾಡಿಸಿ ಬರುವಾಗ್ಗೆ ಕಂಚಿಯಲ್ಲಿ ಅನೇಕ ವೈಷ್ಣವರೊಡನೆ ವಾಕ್ಯಾರ್ಥವನ್ನು ಮಾಡುತ್ತಾರೆ. ಆ ಪುರದ ಭಕ್ತರು

ಕಂ॥ ಕಂಚಿಯನು ಪಟ್ಟಣ್ಣಂಬುನ।
ಕಂಚಿತಮುಗಪ್ರೋವು ಚುಂಡನಾಪುರಭಕ್ತುಲ್ ॥

ಮಂಚಿಫಲಂಬುಲುಗ್ಯೆಕೊನಿ ।
ಪಂಚ ಮಹಾ ವಾದ್ಯವೈಭವಮುಲತೋಸ್ ॥

ಉತ್ಸವಾದಿಗಳನ್ನು ಮಾಡುತ್ತಾರೆ. ಅಲ್ಲಿಯ ವೈಷ್ಣವರು ಇವರ ವೈಭವವನ್ನು ನೋಡಿ ಸಹಿಸಲಾರದೆ ಶ್ರೀಯವರಲ್ಲಿ ವಾಕ್ಯಾರ್ಥ ಮಾಡಿ ಕಡೆಗೆ ಶರಣಾಗತರಾಗುತ್ತಾರೆ. ಅಲ್ಲಿಂದ ಹೊರಟು ಅವರು ವಾಲಾಜನಗರದಲ್ಲಿ ವಿಶೇಷ ಮರ್ಯಾದೆಯನ್ನು ಪಡೆಯುತ್ತಾರೆ. ಅಲ್ಲಿಯ ಸಮಸ್ತ ವೀರಶೈವ ಮಂಡಲಿಯವರೂ ಪ್ರತಿವರ್ಷವೂ ಶ್ರೀಮಠಕ್ಕೆ ದೀಪಾರಾಧನೆ ಕಾಣಿಕೆಯನ್ನು ಒಪ್ಪಿಸುವುದಾಗಿ ಒಂದು ತಾಳಪತ್ರದ ದಾನಶಾಸನವನ್ನು ಬರೆದು ಕೊಟ್ಟಿದ್ದಾರೆ. ಅದರ ಒಕ್ಕಣಿಕೆಯು ನಕಲು ಹೀಗಿದೆ.

'ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ಸಂವತ್ಸರಂಬುಲು ೧೬೯೩ ಕಲ್ಯಾಬ್ದಿ ಕಲಿಯುಗ ವರ್ಷಂಬುಲು ೪೮೭೨ ಪ್ರಭವಾದಿ ಗತ ೨೫ ಆನೇಟಿಖರನಾಮ ಸಂವತ್ಸರಂ ಶ್ರಾವಣ ಶುದ್ಧ ೨ ವಿದಿಯ ಸೋಮವಾರಂ ಆಡಿ ನೆಲ ೩೧ ತೇದಿ ಶ್ರೀಮನ್ನಿಡುಮಾಮಿಡಿ ಮಣಿಖಚಿತ ಕನಕ ಸಿಂಹಾಸನಾ ರೂಢುಲಯಿನ ಮಹಾರಾಜ ರಾಜಶ್ರೀ ಪಟ್ಟಂ ಮರಿಕರಿಬಸವರಾಜ ದೇವರು ಸ್ವಾಮುಲವಾರಿಕಿ ಶ್ರೀಮಸ್ವಸ್ತಿ ಸಮಸ್ತ ನಿಜನಾಮಾಂಕ ಮಾಲಿಕಾ ಪ್ರಶಸ್ತ ಸಹಿತುಲಯಿನ ಶ್ರೀಮದ್ಗಣೇಶ ಗೌರೀಶ್ವರ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕುಲಯಿನ ಅಭಿನವ ಜಂಬೂ ದ್ವೀಪ ಪಾಪ ನಿರೋಹರಣ ಘಟೋಪೇತ ಸುವರ್ಣ ಇಂದಿರಾ ಮಂದಿರಂ ಜೈನ ಪೃಥ್ವಿಕಿ ಪುಣ್ಯಕ್ಷೇತ್ರಂ ಬೈಯಿನ ಅಯ್ಯಾವಳಿ ಪ್ರಮುಖುಲಯಿನ ಪೃಥಿವಿಶೆಟ್ಟಿ ರಾಯಾನಮಂತ್ರಿ ಭಾಸ್ಕರನ್ನ ಮೊದಲಯಿನ ಸಾಲೂ ಮೂಲ ಸಮಸ್ತಂ ಬೈನಯಾ ಭೈಯಾರು ದೇಶಂ ಮೊದಲಯಿನ ವಾಲಾಜಾ ನಗರಂ ಗುಂಡಪ್ಪಶೆಟ್ಟಿ ಸಂಗಪ್ಪಶೆಟ್ಟಿ ಮೊದಲಯಿನ ಸಮಸ್ತ ದೇಶಂವಾರು ವ್ರಾಯಿಂಚಿಯಿಚ್ಚಿನ ದಾನಪತ್ರಿಕ ಕ್ರಮಮೆಟ್ಲನ್ನನು ಗುಯ್ಯಲೂರು ಪಟ್ಟಣಂ ಮಾದಪನ್ನ ಸ್ವಾಮುಲವಾರಿಮಠಂ ದೀಪಾರಾಧನ ಕುಮಾಪುತ್ರ ಪೌತ್ರ ಪಾರಂಪರ್ಯ ಮುಗಾ... ಮಾರಾಜೀನ ವ್ರಾಯಿಂಚಿ ಇಚ್ಚಿನ ದಾನಪತ್ರಿಕ......"

ಹೀಗೆ ಇನ್ನು ಮುಂದೆ ಗುಡಿಯಾತಂ, ವೇಲೂರು ಮುಂತಾದ ಕಡೆಗಳಲ್ಲಿ ವಿಶೇಷ ಸನ್ಮಾನವನ್ನು ಹೊಂದಿ ರಾಯಚೋಟಿಗೆ ದಯಮಾಡಿಸುತ್ತಾರೆ. ಅಲ್ಲಿ ತಮ್ಮ ವೀರಭದ್ರೇಶ್ವರ ದೇವಾಲಯಕ್ಕೆ ಅಂದ

ಣದಲ್ಲಿಯೇ ಬರುತ್ತಿರುವುದನ್ನು ಕಂಡು ಅಲ್ಲಿಗೆ ಪ್ರಮುಖನಾದ 'ಕೇಶವ ರಾಯ' ನೆಂಬುವನು ಶ್ರೀಯವರ ಪ್ರಭಾವವನ್ನರಿಯದೆ ತಡೆಯುವನು. ಅಷ್ಟರಲ್ಲಿಯೇ ಕಂಡುಬಂದ ಅನೇಕ ಅಮಂಗಲ ಸೂಚನೆಗಳಿಂದ ಭಯ ಗ್ರಸ್ತನಾಗಿ ಶರಣಾಗತನಾಗುತ್ತಾನೆ. ಶ್ರೀಯವರು ಶ್ರೀ ವೀರಭದ್ರ ಮೂರ್ತಿಗೆ ಏಕಾದಶವಾರ ರುದ್ರಾಭಿಷೇಕಾದಿಗಳನ್ನು ಅನ್ನ ಶಾಂತಿಯನ್ನು ಮಾಡುವಂತೆ ಬೆಸಸುತ್ತಾರೆ. ಆತನು ಅದರಂತೆ ಆಚರಿಸಿ ಶ್ರೀಯ ವರನ್ನು ಅವರ ಮಠದಲ್ಲಿರಿಸಿ ಆರಾಧಿಸಿ ಅವರ ಕೃಪೆಗೆ ಪಾತ್ರನಾಗುತ್ತಾನೆ.

## ಕಂಬಳಿ ದೇಶಿಕೇಂದ್ರರ ಆಗಮನ.

ಕಂ॥ ಅಂಬರಮುಲೇ ನಿಜಂಗಮು ।
ಕಂಬಳ ಮುನುಮೇನಗಪ್ಪಿ ಘನ ಗುರುಮೂರ್ತಿನ್ ॥
ಸಂಭ್ರಮ ಮುನಗನುಗೊನುಚುನ್ ।
...ಮವಿನಯಂಬುತೋಡ ಪ್ರಣತುಂಡಗುಚುನ್ ॥

ಕ॥ ಪ್ರೊಕ್ಕಗ ಜಂಗಮುವಟುಸಿನ್ ।
ಚಕ್ಕಗ ದೀವಿಂಚಿ ಶಿವರಸ್ಯಮುಲೆಲ್ಲಿನ್ ॥
ಮಕ್ಕುವತೋ ಬೋಧಿಂಚುಚು ।
ಮಿಕ್ಕುಟ ಮುಗಧಾರಿಣಿಯಂದು ಮೆಲಗುಮಟಂಚುನ್ ॥

ವ॥ ಅನಿ ಮರಿಯು ನಿಟ್ಲನಿಯೆ

ಗೀ॥ ದಿವ್ಯವೈನಟ್ಟಿ ಕಂಬಳಿ ದೇಶಿಕೇಂದ್ರು ।
ಲನಗಭಕ್ತುಲಚೇ ಪೂಜಲಿಂದಿ ನೀವು ॥
ವೀರಶೈವ ಪ್ರಭಾವಂಬುವೆಲ್ಲ ಡಿಂಚಿ ।
ಸೌಖ್ಯ ಮುನನುಂಡು ಮನಿನಯಾ ಜಂಗಮಯ್ಯ ॥

ಇವ್ವಿಧಾಂಬುನ ಕಂಬಳಿದೇಶಿಕೇಂದ್ರುಂಡನುಯಭಿಧಾನಂಬುತೋ ಶ್ರೀಗುರು ಸ್ವಾಮಿಯನುಗ್ರಹಂಬುವಡಸಿಯಚ್ಚೋಟುವೆಡಲಿ ನಿಜೇಚ್ಛಂ ಜನಿಯೆ"

'ಆ ಸಮಯಕ್ಕೆ ಸರಿಯಾಗಿ ಕಂಬಲಧಾರಿಯಾದ ಓರ್ವ ಜಂಗಮ ಮೂರ್ತಿಯು ಶ್ರೀಯವರಲ್ಲಿಗೆ ಬಂದು ದಂಡವತ್‌ಪ್ರಣಾಮ ಮಾಡಲು ಶ್ರೀಗುರುವು ಆತನಿಗೆ ಅನುಗ್ರಹವನ್ನು ಮಾಡಿ ವೀರಶೈವ ಧರ್ಮವನ್ನು ಪ್ರಚಾರಮಾಡುವಂತೆ ಬೆಸಸಿ ಬೀಳ್ಕೊಡುತ್ತಾನೆ.'

ಅಂದಿನಿಂದ ಅವರು ಅನೇಕ ದೇಶಗಳಲ್ಲಿ ಮಹಿಮಾ ಪ್ರಭಾವಗಳಿಂದ ಪ್ರಸಿದ್ಧಿ ಪಡೆಯುತ್ತಾರೆ. ಅವರು ಕೋಲಾರದಲ್ಲಿ ಒಂದು ಮಠವನ್ನು ಸ್ಥಾಪಿಸಿದ್ದಾರೆ. ಅದು ಇಂದಿಗೂ 'ಕಂಬಳಿಮಠ' ವೆಂದು ಪ್ರಸಿದ್ಧಿಯಲ್ಲಿದೆ. ಹಾಗೆಯೇ ಉತ್ತರ ಕರ್ನಾಟಕದಲ್ಲಿಯೂ ಅನೇಕ ಕಡೆ ಅವರ ಮಠಗಳಿವೆ. ಇದನ್ನು ಸೂಚಿಸುವ ಒಂದು ಪ್ರಾಚೀನ ಉಲ್ಲೇಖವೂ ದೊರೆಕಿದೆಯೆಂಬುದನ್ನು ಹಿಂದೆಯೇ ಸೂಚಿಸಿದೆ.

ಅಲ್ಲಿಂದ ಶ್ರೀಯವರು ಗುಯಲೂರಿಗೆ ಹೋಗಿ ಮತ್ತೆ ಸಮಸ್ತ ವೈಭವದೊಡನೆ ಧರ್ಮಾವರಕ್ಕೆ ದಯಮಾಡಿಸಿ ಅಲ್ಲಿ ಪಂಡಿತಾರಾಧ್ಯ ವಂಶ ಡಿಂಭಕನಿಗೆ ಹಸ್ತಮಸ್ತಕ ಸಂಯೋಗವೆಸಗಿ ಮಂತ್ರೋಪದೇಶವಿತ್ತು ಪಟ್ಟಾಭಿಷೇಕ ಮಾಡುತ್ತಾರೆ. ಆತನಿಗೆ

ಕಂ॥ ಯಿಮ್ಮಡಿ ಕರಿಬಸವೇಶ್ವರು ।
ಡಿಮ್ಮಹಿಲೋಭಕ್ತ ಕೋಟಿಕೆಲ್ಲನು ಗುರುಡೈ ॥
ನೆಮ್ಮದಿಗಬ್ರೋಚುನನುಚು ।
ಸಮ್ಮತಮುಗಪೇರು ಬೆಟ್ಟಿ ಸಭ್ಯುಲುವಿನಗಾನ್ ॥

ಮರಿಕರಿ ಬಸವೇಶ್ವರುಡುನ್ ।
ಸ್ಥಿರಮತಿತೋ ಲಿಂಗಪೂಜ ಶೇಯುಚು ಪ್ರೀತಿನ್
ಪರಮಾಮೋದಮುನೀಷನು ।
ಚಿರತರ ಮುಗಶಿವುನಿಯಂದು ಚೇರಿರಿವಾರುನ್ ॥

ಯಿಮ್ಮಡಿ ಕರಿಬಸವೇಶ್ವರ ದೇಶಿಕನೆಂದು ಅಭಿಧಾನವಿಟ್ಟು ಶಿವಮಂತ್ರೋಪದೇಶದಿಂದ ಶಿಷ್ಯಕೋಟಿಯನ್ನುದ್ಧರಿಸಬೇಕೆಂದು ಬೆಸಸಿ ಲಿಂಗದಲ್ಲಿ ಬೆರೆಯುತ್ತಾರೆ.

## ಸಪ್ತಮಾಶ್ವಾಸಂ.

# ಶ್ರೀ ಯಿಮ್ಮಡಿಕರಿಬಸವ ಸ್ವಾಮಿಗಳು.

(ಸು. ೧೭೮೫)

ಇವರು ಧರ್ಮವರಂ ಮಠದಲ್ಲಿ ಕೆಲವು ಕಾಲ ಶಿವಯೋಗದಲ್ಲಿದ್ದು ಕೊಂಡು ಅಲ್ಲಿಯೇ ಒಂದು ಪಾಠಶಾಲೆಯನ್ನು ಸ್ಥಾಪಿಸಿ ವೀರಶೈವ ವಟು ಗಳಿಗೆ ವಿದ್ಯಾಭ್ಯಾಸವನ್ನು ಮಾಡಿಸುತ್ತಿದ್ದಂತೆ ತಿಳಿದುಬರುತ್ತದೆ.

ಸೀ॥ ವೀರಶೈವ ಮತಂಬು ವೇಡುಕತೋ ಭಕ್ತಜನುಲ ಕುಂಬೋಧಿಂಚಿ ಘನತಗಾಂಚಿ। ನೇಮಂಬುತೋಡನು ನಿಯತ ವ್ಯೈನತಪಂಬು ಶೇಯುಚು ನಾನಂಡ ಶೀಲುಡಗುಚು। ಶರಣಾಗತುಲನೆಲ್ಲ ಪರಿಣಾಮು ಮುಗನುಂಡುಡನುಚುಯಾಶೀರ್ವಾದ ಮಾಚರಿಂಚಿ। ಪಂಡಿತಾರಾಧ್ಯ ಸಂಭವಡಿಂಭ ಕುಲಕೆಲ್ಲ ಪಾಠಮುಲ್ ಜೆಪ್ಪಿಂಚಿ ಪಂಡಿತುಲಕು।

ಗೀ॥ ಭೂಷಣಾಂಬರ ವಸ್ತುವುಲ್ ಪೊಸಗನೊಸಗಿ।
ಪರಮ ಕರುಣಾಂತರಂಗುಡೈ ಭಕ್ತುಲಕುನು।
ಕೋರ್ಕೆಲೀ ಡೇರ್ಚಿಯುಚ್ಕೋಟಿ ಕೊನ್ನಿದಿನಮು।
ಲುಂಡಿಯೊಕನಾಡು ಮೌನಿಯಾಖಂಡಲುಂಡು॥

ಹೀಗೆ ಅವರು ಅಲ್ಲಿ ಪಾಠಶಾಲೆಯನ್ನೇರ್ಪಡಿಸಿ ಇರುತ್ತಿರುವಲ್ಲಿ ಒಂದು ದಿನ ಆರ್ಯಗುರುಗಳು ಸ್ವಪ್ನದಲ್ಲಿ ದೇಶಾಟನೆಗೈಯಲು ಅಪ್ಪಣೆ ಮಾಡಿದರಂತೆ. ಅದರಂತೆ ಅವರು,

ಗೀ॥ ವೀರಶೈವ ಮಹತ್ವಂಬು ವಿಶ್ವಮಂದು।
ಭಕ್ತುಲಂದರಕುಪದೇಶ ಪರಚು ಮನುಚು॥
ಶಲವುದಚೇಚಿನಂತಲೋ ತೆಲಿಯಚೂಡ।
ಗೋಚರಮುಗಾಕ ಪೋಯನನು ಗುರುವರುಂಡು॥

ವೀರಶೈವ ಮತತತ್ವಗಳನ್ನು ಪ್ರಚಾರ ಮಾಡಲು ದೇಶಾಟನಕ್ಕೆ ಹೊರಡುತ್ತಾರೆ. ದಾರಿಯಲ್ಲಿ ಹಳ್ಳಿ ಪಟ್ಟಣಗಳೆಂದು ಎಣಿಸದೆ ಸರ್ವ ಜನೋದ್ಧಾರ ಮಾಡುತ್ತಿರಲು ಜನರು ತಂಡೋಪತಂಡವಾಗಿ ಆರಾಧಿಸುತ್ತಾರೆ. ಸಂಚಾರ ಮಾಡುತ್ತಾ ಅವರು

ಉ॥ ಪಲ್ಲೆ ಪಟ್ಟಣಂಬುಲನು ಭಾಸುರವೊಪ್ಪಗ ಭಕ್ತುಲಂದರುನ್ ।
ಪೊಲ್ಲಮುಗಾಗ ಸದ್ಗುರು ನಿಮುದವೆುಲರ್ಪಗ ಸೇವಶೇಯುಗಾ॥
ಯುಲ್ಲಮು ಪಲ್ಲವಿಂಪಕರುಣೋದಧಿವಾರಲ ಕೋರ್ಕೆದೀರ್ಚಿಸಂ।
ಫುಲ್ಲಪದಾರವಿಂದುಡನು ಭೂರಿ ವಿಭೂತಿತೋ ಕಾಳಹಸ್ತಿಕಿನ್॥

ಕಾಳಹಸ್ತಿಗೆ ಪ್ರಯಾಣ ಬೆಳೆಯಿಸಿ ಅಲ್ಲಿಂದ ಕಂಚಿಯ ಮಾರ್ಗ ವಾಗಿ ಬರುತ್ತಾರೆ. ಮುಂದೆ ಕಂಗೊಂದಿ ದೇಶ (ಕಂಗೊಂದಿ ಕೊಪ್ಪದ ಪ್ರಾಂತ್ಯ) ದಲ್ಲಿ ಸಜ್ಜನರೆಂದು ಪ್ರಸಿದ್ಧರಾಗಿರುವ ಸಾವಿರಾರು ಮಂದಿ ಶಿಷ್ಯರು ಇಂದಿಗೂ ಮಠದ ಶಿಷ್ಯ ಶ್ರೇಣಿಯಲ್ಲಿರುತ್ತಾರೆ. ಇವರು ಹಿಂದೆ ಚಂದ್ರಗುಂಡ ದೇಶಿಕರ ಕಾಲದಲ್ಲಿ ಲಿಂಗಧಾರಿಗಳಾದುದು. ಆದರೆ ಅವ ರಲ್ಲಿ ಕೆಲವರು ಕಾಲಾಂತರದಲ್ಲಿ ಯಾವುದೋ ಕಾರಣದಿಂದ ಮತ್ತೆ ಅಲಿಂಗಿಗಳಾಗುತ್ತಾರೆ. ಗುರುವರ್ಯರು ಅವರಿಗೆ ಆದನ್ನರುಹಿ ಮತ್ತೆ ಲಿಂಗಧಾರಿಗಳಾಗಬೇಕೆಂದು ಉಪದೇಶಿಸುತ್ತಾರೆ. ಅವರಲ್ಲಿ ಕೆಲವರು ಶ್ರೀಯವರ ಮಾತುಗಳಿಗೆ ಕಿವಿಗೊಡದೆ ಉದಾಸೀನವಮಾಡುತ್ತಾರೆ. ಆದರೆ ಆ ರಾತ್ರಿ ಅವರೆಲ್ಲರಿಗೂ ಅನೇಕವಿಧವಾದ ಅಶುಭ ಸೂಚನೆಗಳು ತೋರಿ ಮತ್ತೆ ಗುರುಗಳಲ್ಲಿ ಕ್ಷಮೆ ಬೇಡುತ್ತಾರೆ. ಶ್ರೀಯವರು ಅನುಗ್ರಹಿಸಿ ಅನೇ ಕರಿಗೆ ಲಿಂಗಧಾರಣೆ ಮಾಡುತ್ತಾರೆ. ಉಳಿದವರು ಲಿಂಗಧಾರಣೆ ಮಾಡಿ ಸಿಕೊಳ್ಳುವ ಅವಕಾಶವಾಗದೆ ಇದ್ದರೂ ಇಂದಿಗೂ (ಮಠದ ಶಿಷ್ಯರಾಗಿ) ಸಜ್ಜನರೆಂಬ ಅಭಿದಾನದಿಂದ ಕರೆಯಲ್ಪಡುತ್ತಿದ್ದಾರೆ. ಅಲ್ಲಿಂದ ಬಹು ದೇಶಗಳನ್ನು ತಿರುಗಿಕೊಂಡು ಬರುವಲ್ಲಿ ಮಧ್ಯೆಮಾರ್ಗದಲ್ಲಿ ರಾಚವೀಟಿ ಯಲ್ಲಿದ್ದ ಕಂಬಳಿದೇಶಿಕೇಂದ್ರರು ಶ್ರೀಯವರ ದರ್ಶನಕ್ಕೆ ಬರುತ್ತಾರೆ.

ಕಂ॥ ।
ಜನುಚುಂಡಗ ಕಂಬಳಾಖ್ಯ ಜಂಗಮುಮುಪುಡುನ್ ॥

ಗೀ॥ ರಾಚವೀಟನುಂಡಿ ರಯಮುನಜನುದೆಂಚಿ ।
ಸತ್ಯಗುರುನಿಗಾಂಚಿ ಸಂತಸಿಂಚಿ ॥
ಪಾದಪದ್ಮಮುಲಕು ಪ್ರಣತುಲುಗಾವಿಂಚಿ ।
ಗಾರವಿಂಪುಮಯ್ಯ ಕರುಣಯುಂಚಿ ॥

ಸೀ॥ ಅನಿನಕಂಬಳಿದೇಶಿಕಾಗ್ರಣಿಂ ವೀಕ್ಷಿಂಚಿಯಿಮ್ಮಡಿಕರಿಬಸವೇಂ ದ್ರಗುರುಡು । ಪರತತ್ವ ಮಾರ್ಗಮೇರ್ಪಡಬೋಧಗಾವಿಂಚಿ ವೀರಶೈವಾ

ಗಮ ವಿಧುಲದೆಲಿಪಿ । ಅವನಿಮಾಸಿಂಹಾಸನಂಬುನಕು ಶಿಷ್ಯುಡೈವೆಲಯು
ಮನಿದೀವಿಂಚಿ ವಿಮಲಮೂರ್ತಿ.........”

ಶ್ರೀಯವರು ಅವರಿಗೆ ಕೆಲವು ತತ್ವರಹಸ್ಯಗಳನ್ನುಪದೇಶಿಸಿ ತಮ್ಮ ಸಿಂಹಾ ಸನಕ್ಕೆ ಶಿಷ್ಯರಾಗಿರುವಂತೆ ಬೆಸಸಿ ಗುಯಲೂರಿಗೆ ಬರುತ್ತಾರೆ.

ಇವರು ಮಠದಲ್ಲಿ ಕುಮಾರವೀರಭದ್ರದೇವರಿಗೆ ರಥೋತ್ಸವ, ಅಗ್ನಿ ಕುಂಡ ಮುಂತಾದ ದೈವೋಪಚಾರಗಳು ಪ್ರತಿವರ್ಷವೂ ನಡೆಯುವಂತೆ ಏರ್ಪಡಿಸಿರುತ್ತಾರೆ. ಶ್ರೀಯವರು ರಾಯದುರ್ಗದ ಸೀಮೆಯಿಂದ ಮೈಸೂರು ನಗರಕ್ಕೆ ದಯಮಾಡಿಸಿ ಸು. ೧೮೧೧ ನೆಯ ಸುಮಾರಿನಲ್ಲಿ ಕೀರ್ತಿಶೇಷ ರಾದ ಶ್ರೀಮನ್ ಮಹಾರಾಜ ಮುಮ್ಮಡಿಕೃಷ್ಣರಾಜೇಂದ್ರ ಮಹಾಪ್ರಭು ಗಳ ಆತಿಥ್ಯಕ್ಕೆ ಪಾತ್ರರಾಗಿ ಅವರಿಂದ ಗಜ ತುರಗೋಷ್ಟ್ರಾದಿ ಬಿರುದು ಬಾವಲಿಗಳನ್ನು ಪಡೆದಿದ್ದರೆಂದು ತಿಳಿದು ಬರುತ್ತದೆ. ನಾವು ಹಿಂದೆಯೇ ಊಹಿಸಿರುವಂತೆ ಕವಿಯು ಈ ಅಂಶವನ್ನು ವರ್ಣಿಸಿಲ್ಲ. ಆದರೆ ಶ್ರೀಮ ಠದಲ್ಲಿ ಉಪಲಬ್ಧವಾಗಿರುವ ಒಂದು ಸನ್ನದು ಕಾಪಿಯಿಂದ ಇದು ವ್ಯಕ್ತ ವಾಗುತ್ತದೆ.

ಆದರ ನಕಲು ಹೀಗಿದೆ.

ಶ್ರೀಕೃಷ್ಣರಾಜಒಡೆಯರವರು.

ಬಾಳಬಂದು ಅಕ್ಷರಗಳ ಮುದ್ರೆ

ಪ್ರಜೋತ್ಪತ್ತಿ ಸಂವತ್ಸರದ ಶ್ರಾವಣ ಶುದ್ಧ ೧೫ ರಲ್ಲು ಶ್ರೀಮತು ಅರಮನೆ ಸೀಮೆಗಡಿಗಳ ಅಮಲು ದಾರ ಖಿಲ್ಲೇದಾರರಿಗೆ ಸಹಾ ಬರಸಿ ಕಳುಹಿಸಿದ ನಿರೂಪ ಆದಾಗಿ—

ರಾಯದುರ್ಗದ ಸೀಮೆಯಿಂದ ನಿಡುಮಾಮಿಡಿಮಠದ ಕರಿಬಸಪ್ಪ ಒಡೆಯರು ಮೈಸೂರಿಗೆ ಬಂದಿದ್ದು ಪುನಃ ರಾಯದುರ್ಗಕ್ಕೆ ಇವರಸಂಗಡ ಕುದುರೆ ೫ ಪಾಲಕಿ ೧......... ಇರುವುದರಿಂದ ನೀವೆಲ್ಲರೂ ಎಚ್ಚರಿಕೆ ಯಿಂದ ಬಂದೋಬಸ್ತು ಮಾಡಿಕೊಟ್ಟು ಇಬ್ಬರು ಆಳುಗಳನ್ನು ಕೊಟ್ಟು ಗಡಿಯಿಂದ ಗಡಿಗೆ ಕಳುಹಿಸಿಕೊಡಬೇಕೆಂದು ಆಜ್ಞಾಪಿಸಿರುತ್ತಾರೆ. “ತಾರೀಖು ೪ನೇ ಮಾಹೇ ಅಗೋಸ್ತ ಸನ್ ೧೮೧೧ ಇಸವಿಯದರ ಜಾಗಾ ನಂಜನಗೂಡು ಶ್ರೀಕೃಷ್ಣ” ಎಂದು ಕಡೆಯಲ್ಲಿ ಸಹಿಯಿದೆ.

ಇದರಿಂದ ಇವರಿಗೆ ಶ್ರೀಮನ್ ಮಹಾರಾಜರವರಿಂದ ವಿಶೇಷ ಪುರಸ್ಕಾರವು ದೊರೆತಿದ್ದಿತೆಂದು ಹೇಳುವುದರಲ್ಲಿ ಸಂದೇಹವಿಲ್ಲ. ಅಲ್ಲದೆ ಇವರ ಕಾಲದಲ್ಲಿ ಮೈಸೂರು ಅರಮನೆಯಿಂದ ಪ್ರತಿ ವರ್ಷವೂ ಮಠಕ್ಕೆ ೧೨೦ ಕಂಠಿರಾಯ ವರಹ ಕೊಡುವಂತೆ ತಸ್ತೀಕು ಸನ್ನದ ದಯಪಾಲಿಸಿದ್ದಂತೆಯೂ ತಿಳಿದುಬರುತ್ತದೆ. ಶ್ರೀಯವರು ಗುಯಲೂರಿನಲ್ಲಿ ಸದ್ವಂಶೀಯ ವಟುವಿಗೆ ಪಟ್ಟಾಭಿಷೇಕವನ್ನು ಮಾಡಿ 'ಮರಿಕರಿಬಸವ ದೇಶಿಕೇಂದ್ರ ಶಿವಾಚಾರ್ಯ' ರೆಂದು ಹೆಸರಿಟ್ಟು ಅವರಿಗೆ ಶಾಲಿವಾಹನ ಶಕ ೧೭೩೮ (ಸನ್ ೧೮೧೬) ಧಾತು ಸಂವತ್ಸರ ಜೇಷ್ಠ ಬಹುಳ ಪಂಚಮಿಯಲ್ಲಿ ಪೀಠಾಧಿಕಾರವನ್ನು ವಹಿಸಿ ವಂಶಪಾರಂಪರ್ಯವಾದ ಪಂಚಮುದ್ರೆಯನ್ನು ಉಪದೇಶ ಮುಖದಿಂದ ಅದೇ ಬಹುಳ ಸಪ್ತಮೀ ಸೌಮ್ಯವಾರ ರಾತ್ರಿ ೨೬ ಗಳಿಗೆಯಲ್ಲಿ ಲಿಂಗದಲ್ಲಿ ಬೆರೆದರು.

## ಶ್ರೀಮರಿಕರಿಬಸವರಾಜ ದೇಶಿಕೇಂದ್ರ ಶಿವಾಚಾರ್ಯರು
(ಸನ್ ೧೮೧೬)

ಶ್ರೀಯವರು ಪೀಠಾರೋಹಣ ಮಾಡಿ ಮಠಕ್ಕೆ ಸಮೀಪದಲ್ಲಿರುವ 'ಪಾತಪಾಳ್ಯ' ಮುಂತಾದ ಕೆಲವು ಗ್ರಾಮಗಳಲ್ಲಿ ಮಠಕ್ಕೆ ವಂಶಪಾರಂಪರ್ಯವಾಗಿ ಶಿಷ್ಯರಾಗಿರುವ ಪಾಳಯಗಾರರ ಅರಮನೆಗಳಿಗೆ ಆಹ್ವಾನಿತರಾಗಿ ಅಲ್ಲಿ ಪೂಜೆಗೊಂಡು ಮಠದಲ್ಲಿ ಧಾತುಸಂ॥ ಮಾಘ ಶು.೭ಗೆ ನಡೆಯಿಸಬೇಕಾದ ಶ್ರೀ. ವೀರಭದ್ರದೇವರ ರಥೋತ್ಸವಕ್ಕಾಗಿ ಮೈಸೂರ ಶ್ರೀಮನ್ ಮಹಾರಾಜ ಶ್ರೀಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರವರಿಗೆ ಒಂದು ಬಿನ್ನವತ್ತಳೆಯನ್ನು ಕಳುಹಿಸಿದ್ದಾರೆ. ಅದನ್ನು ನೋಡುವುದರಿಂದ ಶ್ರೀಯವರ ವಿದ್ಯಾ ಪ್ರೌಢಿಮೆಮುಂತಾದ ಗುಣಗಳೂ ಹಾಗೂ ಮಠದ ವಿಷಯದಲ್ಲಿ ಕೃಷ್ಣರಾಜೇಂದ್ರ ಒಡೆಯರವರಿಗಿದ್ದ ಮಮತೆಯೂ ವ್ಯಕ್ತವಾಗುತ್ತವೆ.

ಮಠದ ಬಾಳ ಬಂದು ಮುದ್ರೆ

ಶ್ರೀಮರಿಕರಿಬಸವ ಸ್ವಾಮಿಯವರು.
ಶ್ರೀಮನ್ನಿಡುಮಾಮಿಡಿ ಮಣಿಖಚಿತ ಕನಕ ಸಿಂಹಾನಾರೂಢ ಶ್ರೀಮದನೇಕ ಮಹಿಮಾ ಪವಾಡೋತ್ತಮರಾದ ಪಟ್ಟದ ಮರಿಕರಿಬಸವ ದೇಶಿಕರವರು.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮ ವೀರನರಪತಿ ಶ್ರೀಮನ್ ಮಹೀಷಾಖ್ಯಪುರ ವರಾಧೀಶ್ವರರಾದಂಥ ಶ್ರೀ ಕೃಷ್ಣರಾಜೇಂದ್ರ ಅಯ್ಯಾಜೀಯವರಿಗೆ ತ್ರಿಕಾಲ ಶಿವಪೂಜೆ ವೇಳೆಯೊಳು ಶಿವನ ಸನ್ನಿಧಿಯೊಳು ಬಯಸುವ ಶ್ರೇಯಃ ಪ್ರಾರ್ಥನೆಗಳು.

ಅಯ್ಯಾಜೀ, ನೀವು ನಿಜಭಕ್ತಿಯಿಂ ಕಳುಹಿಸಿದ ಗಜತುರಗೋಷ್ಟ್ರವಾದಿಯಾದ ವಾಹನ ಮಣಿಖಚಿತ ಭೂಷಣಾಂಬರಗಳೊಡವೆರಸಿ ತ್ರಿಕಾಲ ನ್ಯಾಸಪೂರ್ವಕ ಜಪತಪ ಅಭಿಷೇಕಾರ್ಚನಾದಿ ವಿಧಿಯಿಂದ ಇಷ್ಟ ಲಿಂಗಕ್ಕೆ ತೃಪ್ತಿಪಡಿಸಿ ನಿಮಗೆ ಶ್ರೇಯಸ್ಸನ್ನು ಪ್ರಾರ್ಥಿಸುತ್ತಾ ಇದ್ದೇವೆ. ಅದಾಗಿ

ಈ ಶಾಲಿವಾಹನ ಶಕ ವರ್ಷಂಗಳು ೧೭೩೮ ಧಾತು ಪ್ರವರ್ಧಮಾನಕ್ಕೆ ಸಲ್ಲುವ ಧಾತುನಾಮ ಸಂವತ್ಸರದ ಜ್ಯೇಷ್ಠ ಬಹುಳ ೫ಯಲ್ಲಿ ನಮ್ಮ ಗುರುಮೂರ್ತಿಯಾದ ಯಿಮ್ಮಡಿಕರಿಬಸವಸ್ವಾಮಿಯವರು ವಂಶಪಾರಂಪರ್ಯವಾದ ಪಂಚಮುದ್ರೆಯನ್ನು ನಮಗೆ ಉಪದೇಶಮುಖದಿಂದ ಆಶೀರ್ವಾದ ಮಾಡಿ ಒಪ್ಪಿಸಿ ಅನಂತರ ಸದರೀ ಬಹುಳ ೭ ಸೌಮ್ಯವಾರದ ರಾತ್ರಿ ಘಳಿಗೆ ೨೭ ರಲ್ಲಿ ಲಿಂಗದಲ್ಲಿ ಬೆರೆದರು. ಮಠದ ಶಿಷ್ಯರಾದ ಕುಮಾರ ವೀರಭದ್ರದೇವರಿಗೆ ರಥೋತ್ಸವ ನಾಳೆ ಮಾಘ ಶು. ೭ಗೆ ಆಗಬೇಕಾಗಿಯಿದೆ. ನೀವು ಕಳುಹಿಸಿಕೊಟ್ಟಯಿದ್ದ ತಸ್ತೀಕು ಸನ್ನದು ಈ ಚರಮೂರ್ತಿಗಳವಂದಿಗೆ ಇಟ್ಟು ತಮ್ಮಬಳಿಗೆ ಕಳುಹಿಸಿ ಇದ್ದೇವೆ. ರಥೋತ್ಸವ ನಿತ್ಯೋತ್ಸವ ಮಾಸೋತ್ಸವ ಸಂವತ್ಸರೋತ್ಸವ ಆಗುವ ಬಗ್ಗೆ ಪ್ರಾಕು ನೀವು ಹ್ಯಾಗೆ ಭಕ್ತಿ ನಡೆಯಿಸಿ ಇದ್ದಿರೋ ಅದೇ ಪ್ರಕಾರಕ್ಕೆ ಆಗಬೇಕು. ಮಾಕಳೀದುರ್ಗದ ತಾಲ್ಲೂಕಿನಲ್ಲಿ ಪೂರ್ವದ ಧೊರೆಗಳು ಉದ್ಧಾರ ಮಾಡಿಸಿ ಇದ್ದಂಥಾ ಮಲ್ಲದೇವನ ಕೆರೆಮಠ ಶಿಥಿಲವಾಗಿ ಹೋಗಿದೆಯಾದ ಕಾರಣ ಆಲ್ಲಿ ಆ ಮಠಾ ಕಟ್ಟಿಸಿ ಬಂದಂಥಾ ಶಿವಜಂಗಮಕ್ಕೆ ಎಡೆಮಾಡಿಸಿ ನಿಮಗೆ ಧರ್ಮ ಸೇರಿಸಲಾಗಿ ಪ್ರಯತ್ನ ಮಾಡಿಕೊಂಡು ಇದ್ದೇವೆ. ನಾವು ಆ ಮಠ ಕಟ್ಟಿಸಿಕೊಳ್ಳುವಬಗ್ಗೆ ಆಶೀಮೆ ಅಮೀಲದಾರ್ರಿಗೆ ತಾಕೀದು ನಿರೂಪ ಆಗ ಮಾಡಿಸಿಕೊಡಬೇಕು. ಇತ್ಯಾದಿ ವಿವರಗಳನ್ನು ತಮ್ಮ ದಿವ್ಯಚಿತ್ತಕ್ಕೆ ತಂದು ನಿಮ್ಮ ಧರ್ಮ ಸಂಪಾದಿಸಿಕೊಳ್ಳಬೇಕು. (೧೮೧೭ ಜನವರಿ ಸುಮಾರು ಇರಬಹುದು) ಶ್ರೀಮುರಿಕರಿಬಸವಸ್ವಾಮಿ.

ಮೇಲ್ಕಂಡ ಪತ್ರದಿಂದ ಶ್ರೀಮಠಕ್ಕೆ ಇದಕ್ಕಿಂತಲೂ ಹಿಂದೆ ಅನೇಕ ವರ್ಷಗಳಿಂದ ರಾಜಸಹಾಯವು ಅರ್ಪಿಸಲ್ಪಡುತ್ತಿದ್ದಿತೆಂದೂ ಮಾಕಳೀ

ತಾಲ್ಲೂಕು ಮಲ್ಲದೇವನ ಕೆರೆಯುಮಠವು ಶ್ರೀಪೀಠಕ್ಕೆ ಸೇರಿದ್ದು ಪೂರ್ವ ಧೊರೆಗಳು ಕಟ್ಟಿಸಿಕೊಟ್ಟಿದ್ದಾರೆಂದೂ ವ್ಯಕ್ತವಾಗುತ್ತದೆ. ಇಂತಹ ಮಹತ್ವದ ವಿಷಯಗಳಬಗ್ಗೆ ವಿವರಗಳು ಕವಿಗೆ ತಿಳಿಯದಿದ್ದುದು ವಿಷಾದಕರ.

ಮೇಲ್ಕಂಡ ಬಿನ್ನಹಪತ್ರಕ್ಕೆ ಮಹಾರಾಜರ ಉತ್ತರವು ಹೀಗಿವೆ.

ಬಾಳಬಂದು ಮುದ್ರೆ,

ಮಹಿಶೂರ ಫೌಜು ಗಂಜೂರು ಬನಾವು ಅಮಲಾನೆಶಿರಸ್ತೇದಾರಾನೆ ಹಾಲಿ ಯಿಸ್ತಕಬಾಲ ತಾಲ್ಲೂಕು ಗುಮ್ಮೀನಾಯಡು ಪಾಳ್ಯಸರಕಾರದಾರ್ಲಾರಿಯಾಸತ ಮೈಸೂರು ಷರಫಸದೂರಮೆಯಾ ಬಾದ ತಾಲ್ಲೂಕು ಮುಜಕೂರು ಪೈಕಿ ಗೂಳೂರು ಕಸಬೆಯಲ್ಲಿರುವ ನಿಡುಮಾಮಿಡಿ ವೀರಭದ್ರದೇವರಿಗೆ ಪಡಿತರ ದೀಪಾರಾಧನೆ ಉತ್ಸವ ಮುಂತಾದ್ದಕ್ಕೆ ಸರ್ಕಾರದಿಂದ ಸಾಲಿಯಾನ ಕಂಠೀರಾಯ ನೂರಿಪ್ಪತ್ತು ವರಹದ ಮೇರಿಗೆ ತಾಲ್ಲೂಕು ಮ.ಜಕೂರು ಐವಜಿನ ಸಾಬಕು ಸನ್ನದುಮೇರಿಗೆ ಸಲ್ಲುತ್ತ ಇದ್ದದ್ದು ಕರಿಬಸವಯ್ಯನವರು ದೈವಾಧೀನವಾದ್ದರಿಂದ ಮೋಕೂಫ್ ಮಾಡುವಂತೆ ಅಪ್ಪಣೆ ಕೊಟ್ಟು ಇತ್ತಷ್ಟೆ. ಹಾಲಿ ಬೆಂಗಳೂರು ಫೌಜುದಾರ್ ಲಿಂಗರಾಜಯ್ಯನವರು ಸದರೀ ದೇವಸ್ತಾನಕ್ಕೆ ಸಲ್ಲುತ್ತ ಇದ್ದ ಹಣ ಯಥಾಪ್ರಕಾರಕ್ಕೆ ಮರಿಕರಿಬಸವಯ್ಯನವರ ಬೆಮ್ಮಗೆ ಕೊಡುವಂತೆ ಅಪ್ಪಣೆಯಾಗಬೇಕೆಂದು ಹೂಜೂರು ಅರ್ಜಿ ಮಾಡಿಕ್ಕೊಂಡಕಾರಣ ಕಟ್ಲೆಮಾಡಿಯಿದ್ದಿತು. ನಿಡುಮಾಮಿಡಿ ದೇವಸ್ಥಾನಕ್ಕೆ ಸಾಬಕುಮೇರಿಗೆ ಈ ಸನ್ನದು ಸ್ಥಳ ದಾಖಲು ಲಾಗಾಯಿತು ಸಾಲಿಯಾನಾ ಕಂಠೀರಾಯ ನೂರಿಪ್ಪ (೧೨೦) ವರಹದಪ್ರಕಾರ ಇಂಗ್ರೇಜೀ ತಿಂಗಳ ಕಾಯಿದೇಪ್ರಕಾರ ತಾಲ್ಲೂಕು ಮುಜಕೂರು ಐವಜು ಪೈಕಿಯಲ್ಲಿ ಈ ಕರಿಬಸವಯ್ಯನವರ ಮಾರ್ಫತ್ತಿನಲ್ಲಿ ನಗದಾಗಿ ಕೊಟ್ಟು ದೇವಸ್ಥಾನದ ಪಡಿತರ ದೀಪಾರಾಧನೆ ರಥೋತ್ಸವ ಮುಂತಾದ ಸೇವೆ ಮಾಡಿಸುತ್ತ ಬರುವುದು......... ರಥೋತ್ಸವ ಆಗುವ ವರೆಗೂ ಈ ಜನರ ಕಡೆಯಿಂದ ಹಾಸಲು ತೆಗೆದುಕೊಳ್ಳ ಕೆಲಸವಿಲ್ಲ. ಪ್ರತಿ ಸಂವತ್ಸರಕ್ಕೂ ತಾಜಾ ಸನ್ನದು ಹುಜೂರ:ಮಾಡದೆ ಈ ಸನ್ನದಿನ ನಕಲು ತಾಲೂಕು ಶಿರಸ್ತಾತ್ರ ದಪ್ತರಕ್ಕೆ ಬರೆಸಿ ಅಸಲು ಸನ್ನದು ಕರಿಬಸವಯ್ಯನವರ ಜಿಂಮ್ಮೆಗೆ ಕೊಡುವುದು. ತಾರೀಖು ಹದಿನಾರನೆಯ ಮಾಹೆ ಎಪ್ರೀಲ. ಈಶ್ವರ ಸಂವತ್ಸರದ ಚೈತ್ರ ಬಹುಳ ೩೦ ಬುಧವಾರ ಸನ್ ೧೮೭೭ನೇ ಇಸವಿ.

ಖತ ಪ್ರಸನ್ನಯ್ಯಾ ಮುನಿಷಿ ರುಜುವು (ಎಂದದೆ) ಸಾಲೀಯಾನಾ ಕಂಠಿರಾಯಿನೂರ ಇಪ್ಪತ್ತು ವರಹದ ವ್ಯಾರಿಗೆ ಕೊಡುತ್ತಾ ಬರುವುದು.

ರುಜು ಶ್ರೀಕೃಷ್ಣ (ಎಂತ ಇದೆ.)

ಇದು ಮೂರು ಭಾಷೆಗಳಲ್ಲಿ ಬರೆದು ಪ್ರತಿಯೊಂದು ಕಡೆಯೂ ರುಜು ಇದೆ.

ಹೀಗೆ ಶ್ರೀಕೃಷ್ಣ ರಾಜೇಂದ್ರ ಒಡೆಯರವರು ಸಲ್ಲಿಸುತ್ತಿದ್ದರೆಂದು ಇದರಿಂದ ಅರಿಯಬಹುದಾಗಿದೆ. ರಥೋತ್ಸವ ಮುಗಿಯಿಸಿಕೊಂಡು ಶ್ರೀಯವರು ಕಂಗೊಂದಿ ದೇಶಾಟನೆಯನ್ನು ಮಾಡುತ್ತ ಸು. ೧೮೯೯ರಲ್ಲಿ ಶ್ರೀಶೈಲಕ್ಕೆ ದಯಮಾಡಿಸಿ ಅಲ್ಲಿ ತಮ್ಮ ಮೂಲಪೀಠದಲ್ಲಿ ಕೆಲವು ಕಾಲ ನಿಂತು ಶ್ರೀ ಗೋಕರ್ಣೇಶ್ವರ ಮಠದ ಮೇಲ್ವಿಚಾರಣೆಯನ್ನು ಮಾದುಲ ವೀರಯ್ಯನೆಂಬ ತಮ್ಮ ಶಿಷ್ಯನಿಗೆ ವಹಿಸಿ ಅಲ್ಲಿಂದ ಹಿಂತಿರುಗಿದಂತೆ ಶ್ರೀ ಮಠದಲ್ಲಿ ಉಪಲಬ್ಧವಾಗಿರುವ ಒಂದು ತಾಮ್ರ ಪತ್ರ ಶಾಸನದಿಂದ ತಿಳಿದುಬರುತ್ತದೆ. ಈ ವಿಷಯವೂ ಚರಿತ್ರೆಯಲ್ಲುಪವರ್ಣಿತವಾಗಿಲ್ಲ. ತಾಮ್ರ ಪತ್ರದ ನಕಲು ಹೀಗಿದೆ.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ಸಂ. ೧೭೪೧ ಪ್ರಮಾದಿ ಸಂವತ್ಸರದ ವೈಶಾಖ ಶುದ್ಧ ೬ ಶುಕ್ರವಾರಂ ಶ್ರೀಶೈಲ ಪೂರ್ವ ದಿಗ್ಭಾಗಮುನ ಪಂಚವನ್ನಾಗಿ ಬಳಿಯ ಶ್ರೀ ಗೋಕರ್ಣ ಸಿಂಹಾಸನಾಧ್ಯಕ್ಷುಲುಯಿನ ಶ್ರೀಮರಿಕರಿಬಸವ ಸ್ವಾಮುಲವಾರು ಮಾದುಲ ವೀರಯ್ಯಕು ಪ್ರಾಯಿಂಚಿ ಯಿಚ್ಚಿನ ಶಾಸನಂ.

ಮುಜುಕೂರಿಲೋ ಶ್ರೀ ಗೋಕರ್ಣೇಶ್ವರ ಸ್ವಾಮುಲವಾರಿಕಿವುಂಡು ಕೊನ್ನಿಯಿನಾಂ ಸ್ಥಳಮುಲಲೋ ತೂರ್ಪು ಕುಚಸಿಟಿ ಸರಹದ್ದು ದಕ್ಷಿಣಾನು ಕುಮರಿಚೆಟ್ಟು ಚೇನು ಸರಹದ್ದು ಪಡಮಟಕುಕಾಟಿಗಟ್ಟು ಚೇನುಹದ್ದು ವೃತ್ತರಾನುಕು ಸುಬ್ಬಲಕ್ಷ್ಮಯ್ಯ ಮಾನ್ಯ ಪುಚೇನುಗಟ್ಟು ಹದ್ದು ಚತುರ ಶ್ರಮ್ಯೈನಯಿಾ ಸ್ಥಳಮುಲೋ ಶ್ರೀ ಸ್ವಾಮುಲವಾರು ಸಿಂಹಾಸನಾರೂಢುಲಯಿನ ಸಮಯ ಮಂದುನ ನೀಕುಧಾರಾಕೃತಂಗ ಇಪ್ಪಿಂಚಿನಾಮು. ಗನುಕಯಿಂದುನ ಫಲಪರಚು ಕೊನಿ ಆ ಫಲಕಾಯಿನಿ ನೀವು ಪುತ್ರ ಪೌತ್ರಪಾರಂಪರ್ಯಂತಂ ಅನುಭವಿಸ್ತು ಈ ಮಠಂಕ ನಿಪೆಟ್ಟಕೊನಿ ಸುಖಾನವುಂಚು ಕೊನೇದಿ ಸ್ವದತ್ತಾಂ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ದ॥ ಶ್ರೀಮರಿಕರಿಬಸವ ಸ್ವಾಮುಲವಾರು.

ಅಲ್ಲಿಂದ ಸ್ವಾಮಿಯವರು ಸಂಚಾರಹೊರಟು ಮುಂದೆ ಅನೇಕ ಪ್ರಾಂತ್ಯಗಳಲ್ಲಿ ಸಂಚಾರ ಬೆಳೆಸಿ ಬರುವಾಗ್ಗೆ ಸನ್ ೧೮೨೮ರಲ್ಲಿ ಚಿತ್ತೂರು ಜಿಲ್ಲಾ ಕಲೆಕ್ಟರಸಾಹೇಬರಿಂದ ಒಂದು ರಹದಾರಿಯನ್ನು ಪಡೆದಿರುವಂತೆ ತಿಳಿದುಬರುತ್ತದೆ. ಮುಂದೆ ಗೂಳೂರು ಮಠಕ್ಕೆ ಬಹು ದ್ರವ್ಯಸಮೇತರಾಗಿ ಬಂದು ಸು. ೧೯೩೦ರಲ್ಲಿಃ—

ಕ ॥ ಗುರುರಾಯ ಪಟ್ಟಭದ್ರುಡು ।
ಶರಣಾಗತುಲುಂಡು ದೇಶಸಂಚಾರಮುಲೋ ॥
ವಿರಿವಿಗಪೂಜಲುಗೈಕೊನಿ ।
ಮರಿಮರಿ ನಿಜಗುಯ್ಯಲೂರು ಮಠಮುನ್ ಚೇರೆನ್ ॥೮೩೦॥

ಗೀ ॥ ಆಮಠಮುನಂದು ಸಂತೋಷಿತಾತ್ಮುಡಗುಚು ।
ಶಿವರಹಸ್ಯಂಬು ಲೆಲ್ಲಿಸು ಶಿಷ್ಯುಲಕುನು ॥
ಬೋಧಾಶೇಯು ಚುಪಾರಿಚೇಪೂಜ್ಯುಲಗುಚು ।
ವಾಸ ಸಂವತ್ಸರಮುಲುಂಡೆ ಮಹಿಮಗುರುಡು ॥೮೩೧॥

ವ ॥ ಆಟ್ಟಿಸಮಯಂಬುನ

ಗೀ ॥ ಅತುಲಿತಂಬೈನ ಪಂಡಿತಾರಾಧ್ಯವಂಶ ।
ಕ್ಷೀರವಾರಾಶಿಚಂದ್ರುನಿಭಕ್ತುಲೆದುಟ ॥
ಹಸ್ತ ಮಸ್ತಕ ಸಂಯೋಗಮಾಚರಿಂಚಿ ।
ಘನತಮೀರಂಗಪಟ್ಟಂಬುಗಟ್ಟಿಯುಪುಟು ॥೮೩೨॥

ವ ॥ ಶಿಖಾಮುದ್ರಮೊದಲೈನ ಸಕಲ ಬಿರುದಾವಳುಲೊಸಂಗಿ ತದನಂತರಂಬುನ

ಕ ॥ ಪರಮಪ್ರೀತಿಗಯಿಮ್ಮಡಿ ।
ಕರಿಬಸವಸ್ವಾಮುಲನುಚುಘನಗುರುಂಡು ॥
...ಮುಗಪೇರುಬೆಟ್ಟಿನು ।
ಶರಣಾಗತರಕ್ಷಣುಂಡು ಸಂತೋಷಮುತೊನ್ ॥೮೩೩॥

ಸದ್ವಂಶೀಯನಾದ ವಟುವಿಗೆ ಪಟ್ಟಾಭಿಷೇಕಮಾಡಿ 'ಯಿಮ್ಮಡಿಕರಿಸವರಾಜದೇಶಿಕೇಂದ್ರ'ರೆಂದು ಅಭಿಧಾನವೊಸಗಿ ಅಲ್ಲಿಯೇ ಲಿಂಗೈಕ್ಯರಾದರು.

---

## ಅಷ್ಟಮಾಶ್ವಾಸಂ

# ಶ್ರೀ ಯಿಮ್ಮಡಿಕರಿಬಸವರಾಜದೇಶಿಕೇಂದ್ರಸ್ವಾಮಿಗಳು

( ಸನ್ ೧೮೩೦ )

ಇವರು ಗುರುಮೂರ್ತಿಯ ಉಪದೇಶಬಲದಿಂದ ತಪೋನಿಷ್ಠರಾಗಿ ತ್ರಿಕರಣಶುದ್ಧಿಯಿಂದ ನಿಗ್ರಹಾನುಗ್ರಹಸಮರ್ಥರಾಗಿದ್ದರು. ಅದೃಷ್ಟವಶದಿಂದ ಇವರಿಗೆ ವಿದ್ಯಾಪಾಂಡಿತ್ಯವಿಲ್ಲದಿದ್ದರೂ ದೈವದತ್ತವಾದ ಯೋಗಸಿದ್ಧಿಯು ಮೂರ್ತಿಮತ್ತಾಗಿತ್ತು. ಇವರ ವಾಕ್‌ಪರುಷದ ಮಹಿಮೆಯನ್ನು ಕಣ್ಣಾರೆಕಂಡ ಅನೇಕಮಂದಿ ವಯೋವೃದ್ಧರಿಂದಿಗೂಇದ್ದಾರೆ. ಇವರು ಕೆಲವು ಸಲ ಸುತ್ತುಮುತ್ತು ಕೆಲ ದೇಶಗಳ ಸಂಚಾರವನ್ನು ಮಾಡಿದರು. ಆದರೆ ಹಿರಿಯ ಗುರುಗಳು ಆರ್ಜಿಸಿದ್ದ ಯಥೇಚ್ಛವಾದ ದ್ರವ್ಯರಾಶಿಯನ್ನು ರಕ್ಷಣೆ ಮಾಡುವ ಉದ್ದಿಶ್ಯದಿಂದ ಇವರು ಮಠದಲ್ಲಿಯೇ ವಿಶೇಷವಾಗಿ ಉಳಿಯಬೇಕಾಯಿತು. ಶ್ರೀಯವರು ಮಠದ ಸುತ್ತೂ ವಿಶಾಲವೂ ಸದೃಢವೂ ಆದ ಶಿಲಾಪ್ರಾಕಾರವನ್ನೂ ದ್ರವ್ಯ ನಿಕ್ಷೇಪಕ್ಕಾಗಿ ಭಾರೀ ಬುರುಜನ್ನೂ ನಿರ್ಮಾಣಮಾಡಿಸಿ ವಿಶೇಷವಾಗಿ ಭೂಆಸ್ತಿಯನ್ನು ವೃದ್ಧಿಪಡಿಸಿ ಅನೇಕ ವಾಪೀಕೂಪ ತಟಾಕಾದಿಗಳನ್ನು ನಿರ್ಮಿಸಿ ಯಥೇಚ್ಛವಾಗಿ ಭೂವ್ಯವಸಾಯಕ್ಕಾಗಿ ದುಡಿದಿದ್ದಾರೆ. ಸುಮಾರು ೭೦ ವರ್ಷಗಳಕಾಲ ದರ್ಪದಿಂದಲೂ ಯೋಗಶಕ್ತಿಯಿಂದಲೂ ರಾರಾಜಿಸುತಿದ್ದರು. ಶ್ರೀಮಠದಲ್ಲಿರುವ ಸನ್ ೧೮೭೪ ನೆಯ ಇಸವಿಯ ನಿರೂಪದ ನಕಲನ್ನು ನೋಡಲಾಗಿ ಶ್ರೀಮಠದಿಂದ ಶ್ರೀಯವರ ಸಹಿಯುಳ್ಳ ನಿರೂಪವನ್ನು ತಂದೊಡನೆಯೇ ಅನೇಕ ದೇಶಗಳಿಂದ ಭಕ್ತವೃಂದವು ಶಿರಸಾ ವಹಿಸಿ ಕಪ್ಪಕಾಣಿಕೆಗಳನ್ನು ತಂದು ಅರ್ಪಿಸುತ್ತಿದ್ದಂತೆ ತಿಳಿದುಬರುತ್ತದೆ. ಜನರಿಗೆ ಶ್ರೀಯವರಲ್ಲಿ ಅಮಿತವಾದ ಭಯಭಕ್ತಿ ವಿಶ್ವಾಸವಿದ್ದಿತು.

ಈ ಚರಿತ್ರೆಯನ್ನು ಇವರ ಸಮಕಾಲಿಕರೂ, ಶಿಷ್ಯರೂ ಆದ ಅಪ್ಪಪ್ಪನುತ್ತು ಇಡಗೂರು ರುದ್ರಕವಿಗಳು ನಾಲ್ಕನೇ ಆಶ್ವಾಸದ ಕೆಲವು ಭಾಗದಿಂದ ಮುಂದುವರಿಸಿ ಇವರಕಾಲಕ್ಕೆ ವಿರಮಿಸಿರುತ್ತಾರೆ. ಇವರು ಸನ್ ೧೮೯೯ ನೆಯ ಇಸವಿಯಲ್ಲಿ ಓರ್ವ ಸದ್ವಂಶೀಯ ವಟುವಿಗೆ ಪಟ್ಟಾಭಿಷೇಕ ಮಾಡಿ ಲಿಂಗೈಕ್ಯರಾದರು.

## ಶ್ರೀಮುರಿಕರಿಬಸವರಾಜದೇಶಿಕೇಂದ್ರ ಸ್ವಾಮಿಗಳು.

(ಸನ್ ೧೮೯೯—೧೯೩೭)

ಇವರು ಪಟ್ಟಾಭಿಷಿಕ್ತರಾದ ನಂತರ ೧೯೧೫, ೧೯೨೭ ಮತ್ತು ೧೯೩೫ ಇಸ್ವಿಗಳಲ್ಲಿ ಕಂಗೂಂದಿದೇಶ ಮೊದಲಾದ ಅನೇಕಕಡೆ ಸಂಚಾರಮಾಡಿದರು. ವಾಲಾಜಿ, ಕಂಚಿ ಮುಂತಾದ ದೂರ ದೇಶಗಳಲ್ಲಿ ತಮ್ಮ ಹಿರಿಯ ಗುರುಗಳು ಆರ್ಜಿಸಿದ ಮಠಗಳ ರಿಪೇರಿ ಮುಂತಾದ್ದನ್ನು ಮಾಡಿ ಅವುಗಳ ರಕ್ಷಣೆಗೆ ತಕ್ಕ ಏರ್ಪಾಡುಗಳನ್ನು ಮಾಡಿದರು. ಅನೇಕ ಪ್ರಾಂತ್ಯಗಳಲ್ಲಿ ನೂರಾರು ವರ್ಷಗಳಿಂದ ಶ್ರೀಯುವರ ದರ್ಶನವಿಲ್ಲದೆ ಇದ್ದ ಶಿಷ್ಯವೃಂದಕ್ಕೆ ದರ್ಶನವಿತ್ತು ಸಕಾರಣ ಬೋಧೆಯಿಂದ ಶಿಷ್ಯರ ಕ್ರಮಬದ್ಧವಾದ ದಾಖಲೆಯನ್ನೇರ್ಪಡಿಸಿದರು. ವಿದ್ಯಾಪಕ್ಷಪಾತಿಗಳಾದ ಇವರು ೧೯೧೮ ರಲ್ಲಿ 'ಶ್ರೀಮದ್ದೇಶಿಕೇಂದ್ರ ವಿದ್ಯಾಲಯ'ವೆಂಬ ಹೆಸರಿನಿಂದ ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದರು. ಇದರಲ್ಲಿ ಸು. ೮೦ ಮಂದಿ ವಟುಗಳು ಅಧ್ಯಯನ ಮಾಡುತ್ತಿದ್ದರು. ಇದು ಸುಮಾರು ೮-೧೦ ವರ್ಷಗಳು ಪೂರ್ಣ ಅಭಿವೃದ್ಧಿ ಸ್ಥಿತಿಯಲ್ಲಿತ್ತು. ಆದರೆ ಕೆಲವು ದುರ್ಮಂತ್ರಿಗಳ ಹಾಗೂ ಕೆಲ ಶಿಷ್ಯರುಗಳ ಅಚಾತುರ್ಯದಿಂದ ಅದು ಕ್ಷೀಣವಾಯಿತು. ಅನಂತರ ಶ್ರೀಯುವರು ೧೯೨೮ರಲ್ಲಿ ಬೆಂಗಳೂರು ನಗರದಲ್ಲಿ ನಡೆದ ೧೧ ನೆಯ ವೀರಶೈವ ಮಹಾಸಭೆಗೆ ದಯಮಾಡಿಸಿ ಕೀರ್ತಿಶೇಷರಾದ ದಿವಾನ್ ಬಹದ್ದೂರ್ ಡಾ॥ ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿ ಕೆ. ಸಿ. ಆಯ್. ಇ. ಎಲ್. ಎಲ್. ಡಿ. ಇವರಿಂದ ಪುರಸ್ಕರಿಸಲ್ಪಟ್ಟು ಅವರ ಸಮಕ್ಷಮ ಮಠದ ಶಿಷ್ಯರಾದ ಮ॥ ರಾ॥ ಶ್ರೀ. ಯಜಮಾನ್ ಮಾದಪ್ಪನವರ ನೇತೃತ್ವದಲ್ಲಿ ನಡೆಯುತ್ತಿದ್ದ 'ವೀರಶೈವ ಅನಾಥಾಲಯ'ಕ್ಕೆ ಉದಾರ ಹಸ್ತದಿಂದ ೧೦೦೧ ರೂಪಾಯಿಗಳನ್ನು ಅನುಗ್ರಹಿಸಿದರು. ಸ್ವಾಭಾವಿಕವಾಗಿ ಶ್ರೀಯುವರು ಉತ್ತಮ ಪ್ರಕೃತಿಯುಳ್ಳವರಾದರೂ ಪರಪ್ರೇರಿತರಾಗಿದ್ದುದರಿಂದ ಅನೇಕ ಸ್ವಾರ್ಥಿಗಳು ಶ್ರೀಯುವರನ್ನು ವಂಚಿಸಿ ಮಠದಿಂದ ವಿಶೇಷ ದ್ರವ್ಯವನ್ನು ಅಪಹರಿಸಿದರು. ಈ ಮಠವು ಮತ್ತೆ ಪ್ರಾಚೀನ ಕೀರ್ತಿವೈಭವದ ನೆಲೆಯನ್ನು ಹೊಂದುವುದಕ್ಕೆ ಹಿರಿಯಗುರುವರ್ಯರ ಕೃಪಾಶೀರ್ವಾದವು ಭಕ್ತವೃಂದದಿಂದ ನಿರೀಕ್ಷಿಸಲ್ಪಟ್ಟಿದೆ. ಅನೇಕ ದೂರದೂರ ದೇಶಗಳಲ್ಲಿನ ಶಿಷ್ಯವೃಂದವು ಶ್ರೀಯುವರ ದರ್ಶನಾಶೀರ್ವಾದಗಳಿಗೆ ತವಕಪಡುತ್ತಿದೆ ಹಿಂದಿನ ಮಹಿಮಾಮೂರ್ತಿಗಳು ಜನವಂದ್ಯರಾಗಿ ರಾಜಪೂಜಿತರಾಗಿ

ಮೆರೆದು ಸಮಾಜದಲ್ಲೂ ಸಾಹಿತ್ಯದಲ್ಲೂ ಅಭೂತಪೂರ್ವವಾದ ಸೇವೆ ಯನ್ನೆಸಗಿರುವರೆಂಬುದು ವಾಚಕರಿಗೆ ವೇದ್ಯವಿದೆ. ಅಂತಹ ಮಹಿಮಾ ಪೂರ್ಣವಾದ ಪೀಠವ ಏಳ್ಗೆಯಬಗ್ಗೆ ಸರ್ವರೂ ಶ್ರದ್ಧೆವಹಿಸಿ ಶ್ರೀಮಠದ ಗತವೈಭವವನ್ನು ಮತ್ತೆ ಪ್ರಬುದ್ಧಗೊಳ್ಳುವಂತೆ ಪ್ರಯತ್ನಿಸಬೇಕು. ಅಂತಹ ಸುಸಂಧಿಯನ್ನು ಜಗನ್ನಿಯಾಮಕನಾದ ಪರಶಿವನು ಅನುಗ್ರಹಿ ಸಲೆಂದು ಹಾರೈಸುತ್ತೇವೆ.

## ಲೇಖಕನ ಬಿನ್ನಹ.

ಈ ದೀರ್ಘವಾದ ಲೇಖನವನ್ನು ಬರೆಯಲಿಕ್ಕೆ ಪ್ರಥಿತ ಯಶಸ್ಕರೂ ಸಾಹಿತ್ಯ ಸೇವಾಧುರಂಧರರೂ ಆದ ಶ್ರೀಮಾನ್ ರಾವಸಾಹೇಬ್ ಫ. ಗು. ಹಳಕಟ್ಟಿ ಬಿ. ಎ. ಎಲ್ ಎಲ್. ಬಿ. ಅವರು ವಿಶೇಷ ಪ್ರೋತ್ಸಾಹ ವಿತ್ತು ಅದನ್ನು ತಮ್ಮ 'ಶಿವಾನುಭವ'ದಲ್ಲಿ ಆದರದಿಂದ ಪ್ರಕಟಿಸಿದುದ ಕ್ಕಾಗಿ ಅವರಿಗೆ ಚಿರಋಣಿಯಾಗಿರುತ್ತೇನೆ. ಅಲ್ಲದೆ ಈ ದೀರ್ಘವಾದ ವಿಮರ್ಶೆಯಲ್ಲಿ ವಿಶೇಷವಾಗಿ ಇಂದು ಸಾಹಿತ್ಯದಲ್ಲಿ ಸಂಶಯಗ್ರಸ್ತವಾದ ಅನೇಕ ಸನ್ನಿವೇಶಗಳು ಉಪನಿಬದ್ಧವಾಗಿವೆ. ಆದರೆ ಅವುಗಳು ನಮಗೆ ಸದ್ಯಕ್ಕೆ ಗೋಚರವಾಗಿರುವ ಆಧಾರಗಳಮೇಲೆ ನಿರೂಪಿತಗಳಾಗಿವೆ ಯೆಂಬುದನ್ನು ವಾಚಕರು ಮನಸ್ಸಿನಲ್ಲಿಟ್ಟರೆ ಮಾತ್ರ ನಾವು ಕೃತಕೃ ತ್ಯರು. ಯಾವಾಗಲೂ ಸಾಹಿತ್ಯದಲ್ಲಿ ಮುಂದೆ ಶೋಧಿಸಲ್ಪಡುವ ಸಿದ್ಧಾಂ ತಗಳನ್ನು ಕುರಿತು ಇಂದಿನ ಸಿದ್ಧಾಂತಗಳು ವಿಕಲ್ಪಕಗಳೆಂಬುದು ಸಾಹಿ ತ್ಯಶೋಧಕರ ಅನುಭವವೇದ್ಯವು ಸತ್ಯವಾದ ಆಧಾರಗಳಿಂದ ಪರಿಶೋಧಿ ತವಾದ ಸಿದ್ಧಾಂತಕ್ಕೆ ಬರಲು ಸಹೃದಯರು ಹಿಂದೆಗೆಯಲಾರರು. ವಾಚಕರು ಈ ಸುದೀರ್ಘ ಲೇಖನವನ್ನು ನಿರಾಗ್ರಹದೃಷ್ಟಿಯಿಂದ ಪರಿ ಶೀಲಿಸಿದುದಕ್ಕಾಗಿ ಅವರನ್ನಭಿವಂದಿಸುತ್ತೇನೆ. §

**ಶಿವಂಭೂಯಾತ್.**

---

§ ಈ ಸಮಗ್ರ ಲೇಖನದ ಸರ್ವಾಧಿಕಾರವೂ ಲೇಖಕರ ಕಡೆಗಿದೆ. ಲೇ.

# ನೂತನ ಪಟ್ಟಾಧಿಕಾರ ಮಹೋತ್ಸವ.

## ಗೂಳೂರು, ಶ್ರೀ. ನಿಡುಮಾಡಿ ಸಂಸ್ಥಾನ.

(ಲೇಖಕರು--- ಶ್ರೀ ಮಹೋತ್ಸವಭಾಗಿ)

ಶ್ರೀಮದ್ವೀರಶೈವ ಮತ ಸ್ಥಾಪನಾಚಾರ್ಯ ಪಂಚಪೀಠಗಳಲ್ಲಿ ಒಂದಾದ ಶ್ರೀ ಜಗದ್ಗುರು ಪಂಡಿತಾರಾಧ್ಯಪೀಠ ಪರಂಪರೆಯ ಶ್ರೀ ಚಂದ್ರಗುಂಡ ದೇಶಿಕೇಂದ್ರ ಶಿವಾಚಾರ್ಯರವರ ಕಾಲದಿಂದ ಮುಖ್ಯ ಸ್ಥಾನವಾಗಿ ನಡೆದು ಬಂದಿರುವ ಮೈಸೂರು ಸೀಮೆಗೆ ಸೇರಿದ ಕೋಲಾರದ ಡಿಸ್ಟ್ರಿಕ್ಟ ಬಾಗೇನಹಳ್ಳಿ ತಾಲೂಕು ಗೂಳೂರು ಬಳಿಯಲ್ಲಿರುವ ಶ್ರೀಮನ್ನಿಡುಮಾಮಿಡಿ ಮಣಿಖಚಿತ ಕನಕ ಸೂರ್ಯಸಿಂಹಾಸನದ ಜಗದ್ಗುರು ಪೀಠಕ್ಕೆ ಅಡ್ವೈಜರಿ ಕಮೀಟಿಯವರ ಸಹಾಯದಿಂದ ಶ್ರೀಮನ್ಮಹಾರಾಜರವರ ಸರಕಾರದವರು ಚುನಾಯಿಸಿರುವ ಶ್ರೀ ಶಿವಯೋಗ ಮಂದಿರದಲ್ಲಿ ವಿದ್ಯಾಭ್ಯಾಸ ಮಾಡಿದವರಾಗಿ ಕಲಕತ್ತಾ ಯುನಿವ್ಹರ್ಸಿಟಿಯಿಂದ ಸಂಸ್ಕೃತ ವಿದ್ಯಾ ಪ್ರಶಸ್ತಿಗಳನ್ನು ಪಡೆದವರಾಗಿಯೂ, ಕನ್ನಡ ಭಾಷೆಯಲ್ಲಿ ಪ್ರಸಿದ್ಧ ಸಾಹಸಿಗಳಾಗಿಯೂ, ಶಿವಯೋಗಸಿದ್ಧ ಸಮರ್ಥರಾದ ನೈಷ್ಠಿಕ ಬ್ರಹ್ಮಚಾರಿಗಳಾಗಿಯೂ, ಇರುವ ಬೆಳಗಾಂ ಜಿಲ್ಲಾ ಅಂಬಡಗಟ್ಟಿ ಮಠದ ಅಡ್ನೂರು ಶ್ರೀ. ಚಂದ್ರಶೇಖರದೇವರೆಂಬವರಿಗೆ ಇದೇ ಜೇಷ್ಠ ಬಹುಳ ದಶಮಿ (ತಾ. ೧೨-೬-೧೯೩೯) ಸೋಮವಾರದ ದಿವಸ ಪ್ರಾತಃಕಾಲ ಪಟ್ಟಾಭಿಷೇಕ ಮಹೋತ್ಸವವು ಶಾಸ್ತ್ರೀಯವಾಗಿ ನಡೆಸಲ್ಪಟ್ಟಿತು. ಇವರಿಗೆ ಸಕ್ಕರಾಯಪಟ್ಟಣ ಮಠದ ಶ್ರೀ ಸದಾಶಿವ ಪಟ್ಟಾಧ್ಯಕ್ಷ ಶಿವಾಚಾರ್ಯರವರಿಂದ ಪಂಚಮುದ್ರಾಂಕನನೊಡನೆ ಅಧಿಕಾರ ಸೂತ್ರ ಕೊಡುವಿಕೆಯೂ, ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧೀಶರಾದ ಶ್ರೀಮನ್ನಿರಂಜನ ಮಹದೇವ ಸ್ವಾಮಿಗಳವರಿಂದ ಆಶ್ರಮೋಪದೇಶವೂ ಅನುಗ್ರಹಿಸಲ್ಪಟ್ಟವು. ಈ ಪೀಠ ಪರಂಪರೆಯ ಪ್ರಾಚೀನ ಪದ್ಧತಿಯನ್ನನುಸರಿಸಿ ಈ ನೂತನ ಗುರುಗಳವರಿಗೆ ಪಟ್ಟದ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಸ್ವಾಮಿಗಳೆಂದು ನಾಮಕರಣ ಮಾಡಲಾಯಿತು. ತಿಬಟೂರಿನ ವೇ|| ವಿರುಪಾಕ್ಷ ಶಾಸ್ತ್ರಿಗಳೂ ಶ್ರೀ ಶರಣಪ್ಪ ಶಾಸ್ತ್ರಿಗಳೂ ಆಗಮಿಸಿ ಕಾರ್ಯ ನೆರವೇರಿಸಿದರು.

ಸೂರ್ಯೋದಯಕ್ಕೆ ಸರಿಯಾಗಿ ಜಗದ್ಗುರು ಸಿಂಹಾಸನಾರೋಹಣವು ಸಕಲ ಮರ್ಯಾದೆಗಳೊಡನೆ ನೆರವೇರಿತು. ಕೋಲಾರದ ಡಿಸ್ಟ್ರಿಕ್ಟ ಡೆಪ್ಯುಟಿ ಕಮೀಷನರವರಾದ ಶ್ರೀ ಜಿ. ಸುಂದರರಾಯರವರೂ, ಚಿಕ್ಕಬಳ್ಳಾಪುರದ ಸಬ್ ಡಿವಿಜನ ಆಫೀಸರವರಾದ ಶ್ರೀ ಆರ್. ಪಿ. ಮಲ್ಲಪ್ಪನವರೂ, ಬಾಗೇನಹಳ್ಳಿ ತಾಲ್ಲೂಕು ಅಮಲ್ದಾರವರಾದ ಶ್ರೀ ಜಿ. ನರಸಿಂಹಯ್ಯನವರೂ, ಪೋಲೀಸ ಅಧಿಕಾರಿಗಳೂ, ಸ್ಥಳ ಪರಸ್ಥಳಗಳ ಶೆಟ್ಟರು ಯಜಮಾನರೂ, ರಡ್ಡಿಗಳು ಕರಣೀಕರುಗಳೂ, ೧೮ ಫಣದ ಮುಖಂಡರುಗಳೂ, ಅಡ್ವೈಜರಿ ಕಮಿಟಿ ಮೆಂಬರುಗಳೂ ಸಭೆಯಲ್ಲಿ ಹಾಜರಿದ್ದರು.

ಸಿಂಹಾಸನದ ಉಭಯ ಪಾರ್ಶ್ವಗಳಲ್ಲಿ ಶ್ರೀಮನ್ನಿರಂಜನ ಮಹದೇವ ಸ್ವಾಮಿಗಳೂ, ಸಕ್ಕರಾಯ ಪಟ್ಟಣದ ಶ್ರೀ ಸದಾಶಿವ ಪಟ್ಟಾಧ್ಯಕ್ಷರೂ, ಶ್ರೀ ಶಿವಯೋಗ ಮಂದಿರದ ಅಧ್ಯಕ್ಷರಾದ ನವಲಗುಂದ ಗವೀಮಠದ ಶ್ರೀ ಬಸವಲಿಂಗ ಸ್ವಾಮಿಗಳೂ, ಬೆಂಗಳೂರು ಕರಿಸಿದ್ಧೇಶ್ವರ ಮಠದ ಬ್ಯಾಡಿಗೀ ಶ್ರೀಮನ್ನಿರಂಜನ ಚನ್ನಬಸವ ಸ್ವಾಮಿಗಳೂ, ಬಾಗಲಕೋಟಿ ಶ್ರೀಮನ್ನಿರಂಜನ ಮಹದೇವ ದೇಶಿಕರೂ, ಸುಂಕೇನಹಳ್ಳಿ ಮಠಾಧೀಶ ಶ್ರೀಮನ್ನಿರಂಜನ ನಿಜಗುಣ ಸ್ವಾಮಿಗಳೂ, ಬೆಳಗಾಂ ಜಿಲ್ಲಾ ಬೈಲಹೊಂಗಲ ಮಠದ ಶ್ರೀ ನೀಲಕಂಠ ದೇಶಿಕರೂ, ಹುಬ್ಬಳ್ಳಿಯ ಶ್ರೀ ಸಿದ್ಧರದೇವರವರೂ, ಎತ್ತರವಾದ ಪೀಠಗಳನ್ನಲಂಕರಿಸಿದ್ದರು. ಬೆಂಗಳೂರು, ಕೋಲಾರ, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಗೋರೀಬಿದನೂರು, ಗುಡಿಬಂಡೆ, ಬಾಗೇನಹಳ್ಳಿ, ತುಮಕೂರು, ಚನ್ನರಾಯಪಟ್ಟಣ, ತಿಪಟೂರು ವಗೈರೆ ತಾಲೂಕುಗಳ ಅನೇಕ ಗ್ರಾಮಗಳಿಂದಲೂ, ಹಿಂದೂಪುರ, ಪೆನಗೊಂಡ, ಧರ್ಮಾವರ ತಾಲೂಕುಗಳಿಗೆ ಸೇರಿದ ತೊಡಿತೊಂಡ ಬೂದಿಲಿ, ಚಿಲಮುತ್ತೂರು, ಗೋಡಪಲ್ಲಿ, ಕೊತ್ತಚರುವು, ನಿಡುಮಾಮಿಡಿ ಮುಂತಾದ ಅನೇಕ ಗ್ರಾಮಗಳಿಂದಲೂ ಧಾರವಾಡ, ಗದಗ, ಬ್ಯಾಡಿಗಿ-ಹಾವೇರಿ, ಬಾಗಲಕೋಟಿ, ನವಲಗುಂದ, ಹುಬ್ಬಳ್ಳಿ ಮುಂತಾದ ಪ್ರಾಂತಗಳಿಂದಲೂ ಅನೇಕ ಮಂದಿ ಭಕ್ತಮಾಹೇಶ್ವರ ಮಂಡಲಿಯು ಸ್ತ್ರೀ ಪುರುಷರಾದಿಯಾಗಿ ಸುಮಾರು (೩೦೦೦) ಮೂರು ಸಾವಿರ ಮಂದಿ ಆಗಮಿಸಿದ್ದು ದರ್ಬಾರು ಚಪ್ಪರದಲ್ಲಿ ಸೇರಿದ್ದರು. ಬಾಜಾ ಭಜಂತ್ರಿಗಳೂ, ನಗಾರಿ ನವಬತ್ತುಗಳೂ, ಕರಡೀವಾದ್ಯ, ಸಮ್ಮೇಳನ ವಾದ್ಯಗಳೂ, ಕಹಳೆಗಳೂ ಭೋರ್ಗರೆಯುತ್ತಿರುವಲ್ಲಿ ಭಟ್ಟರಾಜುಗಳು ಶ್ರೀ ಪೀಠದ ಪವಾಡಗಳನ್ನು ಹೊಗಳುತ್ತಿರಲು, ನಂದೀಧ್ವಜವು ಕುಣಿಸುತ್ತ

ಲಿಂಗಧೀರರಿಂದ ಮಹಾ ಪವಾಡಗಳ ವಿವರಗಳೂ, ವೈದಿಕ ಮಂಡಲಿಯವರಿಂದ ವೇದಘೋಷಗಳೂ, ನಡೆಯುತ್ತಿರುವಲ್ಲಿ ಮಹಾಸಭೆಯ ದೃಶ್ಯವು ಕೈಲಾಸದ ಶ್ರೀ ಶಿವಸಭೆಯನ್ನು ಜ್ಞಾಪಕಕ್ಕೆ ತರುವಂತಾಗಿದ್ದಿತು. ಇಂತಃ ದೃಶ್ಯವನ್ನು ತಾವು ಇದುವರಿವಿಗೆ ಇಲ್ಲಿ ಎಂದೂ ಕಂಡಿರಲಿಲ್ಲವೆಂದು ಈ ಪ್ರಾಂತದ ವೃದ್ಧರು ಹೇಳಿಕೊಳ್ಳುತ್ತಿದ್ದರು.

ದರ್ಬಾರಿನ ಸಮಯದಲ್ಲಿ ಚಿತ್ರದುರ್ಗಸಂಸ್ಥಾನದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರಿಂದ ಅನುಗ್ರಹದ ಆನಂದಸೂಚಕಪತ್ರವು ಓದಲ್ಪಟ್ಟಿತು. ವೇ॥ ಯಂ. ಜಿ. ನಂಜುಂಡಾರಾಧ್ಯರಿಂದ ರಚಿತವಾಗಿದ್ದ ಸಂಸ್ಕೃತಪದ್ಯ ಮಾಲಿಕೆಯು ಶ್ರೀ ಶಿವಸ್ವಾಮಿಯವರಿಂದ ರಚಿಸಲ್ಪಟ್ಟು ಅರ್ಪಿಸಲ್ಪಟ್ಟಿತು. ನೂತನ ಗುರುಗಳವರು ತಮ್ಮ ಅಮೃತ ವಾಣಿಯಿಂದ ಈ ರೀತಿ ಅಪ್ಪಣೆ ಕೊಡಿಸಿದರು. ಶ್ರೀಮನ್ ಮಹಾರಾಜರವರ ಸರಕಾರದ ಕೃಪಾಶ್ರಯದಿಂದಲೂ, ವೀರಶೈವ ಸಮಾಜದ ಪ್ರಾರ್ಥನೆಯಿಂದಲೂ, ಬಹು ಪುರಾತನಕಾಲದ ಈ ಧರ್ಮ ಪೀಠದಲ್ಲಿ ಮಂಡಿಸಿರುವ ನಾವು ನಮ್ಮ ಪೂರ್ವಾಚಾರ್ಯರಾದ ಶ್ರೀ ಪಂಡಿತಾರಾಧ್ಯರು ಶ್ರೀ ವಿರುಪಾಕ್ಷ ದೇಶಿಕೇಂದ್ರರು ಶ್ರೀ ಚಂದ್ರಗುಂಡ ದೇಶಿಕೇಂದ್ರರು, ಶ್ರೀ ಕರಿಬಸವ ದೇಶಿಕೇಂದ್ರರು ಮೊದಲಾದ ಮಹಾತ್ಮರ ಬೋಧೆ ಮತ್ತು ಮಾರ್ಗಗಳನ್ನನುಸರಿಸಿ ದೇಶಸೇವೆ ಧರ್ಮ ಪ್ರಚಾರಗಳಲ್ಲಿ ನಮ್ಮ ಜೀವಿತವನ್ನು ಕಳೆಯಬೇಕೆಂದು ಸಂಕಲ್ಪಿಸಿರುತ್ತೇವೆ. ಗುರುವೆಂಬ ಹೆಮ್ಮೆಯು ಅಭಿಮಾನವು ನಮಗಿಲ್ಲ. ನಾವೊಬ್ಬ ಧರ್ಮ ಪ್ರಚಾರಕರೆಂದೂ, ದೇಶ ಸೇವಕರೆಂದೂ ಕಾರ್ಯ ಮಾಡಲಿಚ್ಛಿಸುತ್ತೇವೆ. ಮಹಿಮಾ ಪುರುಷರಾದ ನಮ್ಮ ಪೂರ್ವಾಚಾರ್ಯರುಗಳ ಆಶೀರ್ವಾದ ಬಲದಿಂದ ಇನ್ನು ಮುಂದೆ ಇಲ್ಲಿ ನಾವು ಮಾಡುವ ನಮ್ಮ ಶಿವಪೂಜಾ ತಪಃ ಪ್ರಭಾವದ ಬಲವನ್ನು ನಮ್ಮ ಶ್ರೀಮನ್ಮಹಾರಾಜರವರ ಆಯುರಾರೋಗ್ಯಾಭಿವೃದ್ಧಿಯಲ್ಲಿ ವಿನಿಯೋಗಿಸಬೇಕೆಂದು ಸಂಕಲ್ಪಿಸಿರುತ್ತೇವೆ. ಈ ದಿವಸ ಕೋಲಾರ ಜಿಲ್ಲಾಧಿಕಾರಿಗಳಾದ ಶ್ರೀಮಾನ್ ಜಿ. ಸುಂದರರಾಯರು ರಾಜಪ್ರತಿನಿಧಿಗಳಾಗಿ ಇಲ್ಲಿ ನಿಂತು ಇವರ ಸಹಾಯಕ ಅಧಿಕಾರಿ ಮಂಡಲಿಯೊಡನೆ ಈ ಮಹೋತ್ಸವವನ್ನು ಯಶಸ್ವಿಯಾಗಿ ನಡೆಸಿರುವದು ನಮಗೆ ಆನಂದವಾಗಿದೆ. ಇತ್ಯಾದಿ ಅಪ್ಪಣೆಕೊಡಿಸಿದ ನಂತರ ಜಿಲ್ಲಾಧಿಕಾರಿಗಳು ಈ ಮುಂದೆ ಹೇಳುವ ರೀತಿ ಭಾಷಣ ಮಾಡಿದರು:—

ಕೋಲಾರ ಜಿಲ್ಲೆಯಲ್ಲಿ ಅತ್ಯಂತ ಪ್ರಾಚೀನವೂ, ಪ್ರಾಮುಖ್ಯವೂ, ಎನಿಸಿರುವ ಈ ಶ್ರೀ ನಿಡುಮಾಮಿಡಿ ಪೀಠಕ್ಕೆ ಉತ್ತಮರಾದ ಒಬ್ಬ ಸ್ವಾಮಿಗಳನ್ನು ನಿಯಮಿಸಬೇಕೆಂದು ನಮ್ಮ ಸರಕಾರದವರ ಆಲೋಚನೆಯಲ್ಲಿದ್ದಿತು. ಇಂದು ಅದು ಕಾರ್ಯರೂಪಕ್ಕೆ ಬಂದುದಕ್ಕಾಗಿ ನಮಗೆ ಆನಂದವಾಗಿದೆ. ಅವರ ಚುನಾವಣೆಯ ಸಮಯದಲ್ಲಿ ನಾವು ನಿರೀಕ್ಷಿಸಿದ್ದಂತೆಯೇ ಇಂದು ಶ್ರೀಗಳವರ ಮುಖದಿಂದ ಸರ್ವ ಸಮ್ಮತವಾದ ವಾಕ್ಯಗಳು ಹೊರಪಟ್ಟಿದ್ದಕ್ಕಾಗಿ ನಮಗೆ ಅತ್ಯಾನಂದವೆನಿಸಿದೆ. ಹಿಂದೂ ಧರ್ಮದ ಎಲ್ಲ ಮಠಾಧಿಪತಿಗಳಿಗೂ ಈ ಮಾತುಗಳು ಗಮನಾರ್ಹವಾಗಿವೆ. ಲೋಕಸೇವೆ ಮಾಡುವ ಸ್ವಾಮಿಗಳು ನಮ್ಮ ಸಮಾಜಕ್ಕೆ ಬೇಕಾಗಿದ್ದಾರೆ. ಪ್ರಕೃತ ಸ್ವಾಮಿಗಳು ಅಂತಃ ಧ್ಯೇಯವುಳ್ಳವರೆಂದೂ, ಈ ಮಠವನ್ನು ಅತ್ಯಂತ ಉನ್ನತ ಸ್ಥಿತಿಗೆ ತರಲು ಅರ್ಹರೆಂದೂ ನಮ್ಮ ನಂಬಿಕೆ. ಸರಕಾರದವರು ತಮ್ಮ ಕೈಲಾದ ಸಹಾಯಗಳನ್ನೆಲ್ಲ ಇಂತಃ ಧರ್ಮ ಪೀಠಗಳಿಗೆ ಮಾಡಲು ಸಿದ್ಧರಾಗಿದ್ದಾರೆ. ಶ್ರೀಮನ್ ಮಹಾರಾಜರವರ ಲೋಕೋತ್ತರವಾದ ಉದ್ದಿಶ್ಯ ಸಾಧನೆಗೆ ಇಂತಃ ಮಠಗಳು ಸಾಧಕವಾಗಲೆಂದು ಹಾರೈಸುತ್ತೇವೆ. ವೀರಶೈವ ಮಂಡಲಿಯವರು ಈ ಮಹೋತ್ಸವವನ್ನು ಯಶಸ್ವಿಯಾದ ರೀತಿಯಲ್ಲಿ ಆಗಮಾಡಿದ್ದು ನಮಗೆ ಅತ್ಯಂತ ಸಂತೋಷ. ಅಡ್ವೈಜರಿ ಕಮಿಟಿಯವರ ಸೇವೆಯು ಅಮೂಲ್ಯವಾದದ್ದು. ಈ ರೀತಿಯಲ್ಲಿ ಭಾಷಣವಾದ ಮೇಲೆ ಶ್ರೀ. ವೇ. ಬಿ. ಶಿವಮೂರ್ತಿ ಶಾಸ್ತ್ರಿಗಳು ಉಪನ್ಯಾಸ ಮಾಡಿದರು. ವೇ. ಯಂ. ಜಿ. ನಂಜುಂಡಾರಾಧ್ಯರು ಈ ಪಟ್ಟಾಧಿಕಾರಕ್ಕಾಗಿ ರಚಿಸಿದ ಸಂಸ್ಕೃತ ಪದ್ಯಮಾಲಿಕೆಯು ತಲಕಾಡಿನ ಶ್ರೀ ಶಿವಸ್ವಾಮಿಯೆಂಬವರಿಂದ ಪಠಿಸಲ್ಪಟ್ಟು ಶ್ರೀಗಳವರಿಗೆ ಅರ್ಪಿಸಲ್ಪಟ್ಟಿತು. ಈ ಮಠದ ಸ್ವತ್ತಾಗಿ ಹೊಸಕೆರೆ ಕೆ. ಸಂಗಪ್ಪನವರು ಭದ್ರಪಡಿಸಿದ್ದ ಸುಮಾರು ೧೬ ತೊಲೆಯಷ್ಟು ತೂಕವಿರುವ ಪುರಾತನ ಕಾಲದ ಚಿನ್ನದ ತಗಡುಗಳೂ ಸುಮಾರು ೧೦ ಶೇರಿನಷ್ಟಿರುವ ಬೆಳ್ಳಿಯ ಪಾತ್ರೆಗಳೂ ಈ ಸಮಯದಲ್ಲಿ ಶ್ರೀಗಳವರಲ್ಲಿ ಒಪ್ಪಿಸಲ್ಪಟ್ಟವು. ಬೆಂಗಳೂರಿನ ವೀರಶೈವ ಸಮಾಜ ಸೇವಕ ಸಂಘದವರ ಪ್ರತಿನಿಧಿಯಿಂದಲೂ, ಶ್ರೀ ಅಕ್ಕಮಹಾದೇವಿಯ ಸಮಾಜದ ಪ್ರತಿನಿಧಿಯಿಂದಲೂ ಭಾಷಣಗಳಾದವು. ಅಡ್ವೈಜರಿ ಕಮಿಟಿ ಮೆಂಬರು ಎಸ್. ಹಂಪಯ್ಯನವರು ಈ ಪೀಠದ ಸಂಕ್ಷೇಪ ಚರಿತ್ರೆಯನ್ನು ವಿವರಿಸಿ ತಿಳಿಸಿ

ದರು. ಕಪ್ಪ ಕಾಣಿಕೆಗಳು ಅರ್ಪಿಸಲ್ಪಟ್ಟ ಮೇಲೆ ಈ ಪೀಠದ ಪೂರ್ವ ಪದ್ಧತಿಯಂತೆ ನಜರು ಮುಜುರೆಗಳೂ, ದೀವಟಿಗೆ ಸಲಾಮುಗಳೂ ನಡೆ ಸಲ್ಪಟ್ಟವು. ಶ್ರೀ ಶರಣಸಾಹಿತ್ಯ ಪತ್ರಿಕೆಯ ಸಹಾಯಕ್ಕೂ, ಶ್ರೀ ವೀರ ಶೈವ ಸೇವಾ ಸಮಾಜಕ್ಕೂ, ಶ್ರೀ ಅಕ್ಕಮಹಾದೇವಿಯ ಸಮಾಜಕ್ಕೂ, ಶ್ರೀ ಸ್ವಾಮಿಗಳವರಿಂದ ಬಹುಮಾನಗಳು ಆಶೀರ್ವದಿಸಲಾಯಿತು. ಮಹಾ ಸಭೆಗೆಲ್ಲ ಗಂಧ ಪುಷ್ಪ ಫಲ ತಾಂಬೂಲಗಳು ವಿನಿಯೋಗಿಸಲ್ಪಟ್ಟ ಮೇಲೆ ಶ್ರೀ ಜಗದ್ಗುರುಗಳವರ ಮತ್ತು ಶ್ರೀಮನ್ಮಹಾರಾಜರವರ ಹೆಸರಿನ ಜಯ ಘೋಷಗಳೊಡನೆ ದರ್ಬಾರು ಪೂರೈಸಲಾಯಿತು.

ಅನಂತರ ಬೆಳ್ಳಿಯ ಸಾಮಾನುಗಳಿಂದ ಅಲಂಕೃತವಾಗಿದ್ದ ಪಲ್ಲಕ್ಕಿ ಯಲ್ಲಿ ಶ್ರೀಗಳವರು ಬಿಜಯ ಮಾಡಿಸಲಾಗಿ ಸಮಸ್ತ ಬಿರುದಾವಳಿ ಗಳೊಡನೆಯೂ, ಶಾಸ್ತ್ರಿವರ್ಗದವರ ವೇದಘೋಷದಿಂದಲೂ ಮೆರವಣಿ ಗೆಯು ಅತ್ಯಂತ ವೈಭವದಿಂದ ನಡೆಯಿತು. ದೂರದಿಂದ ಬಸ್ಸುಗಳ ಲ್ಲಿಯೂ ಸ್ಪೆಶಲ್ ಕಾರುಗಳಲ್ಲಿಯೂ, ಎತ್ತಿನ ಗಾಡಿಗಳಲ್ಲಿಯೂ ೩ ದಿನ ಗಳು ವಿರಾಮವಿಲ್ಲದೆ ಆಗಮಿಸಿದ್ದ ಜನ ಸಮೂಹವು ಇಲ್ಲಿ ಒಂದು ಜಾತ್ರೆ ಯಂತೆ ಸೇರಿದ್ದು ಈ ಮಹೋತ್ಸವವು ನ ಭೂತೋ ನ ಭವಿಷ್ಯತಿಯೆಂಬ ರೀತಿಯಲ್ಲಿ ನೆರವೇರಿತು. ಮೆರವಣಿಗೆಯು ಮಠವನ್ನು ತಲುಪಿದ ನಂತರ ಜಮಾಯಿಸಿದ್ದ ಮಂದಿಗೆಲ್ಲಾ ಊಟದ ವ್ಯವಸ್ಥೆಯು ತೃಪ್ತಿಕರವಾಗಿ ನಡೆಯಿತು. ೧೨ನೇ ತಾರೀಖಿನ ರಾತ್ರಿಯೂ ೧೩ನೇ ತಾರೀಖಿನ ದಿವ ಸವೂ ಪದ್ಧತಿಯಂತೆ ದರ್ಬಾರು ನಡೆದು ಧಾರ್ಮಿಕ ಸಂಬಂಧವಾದ ಉಪ ನ್ಯಾಸಗಳು ಶ್ರೀಮನ್ನಿರಂಜನ ಮಹಾದೇವ ಸ್ವಾಮಿಗಳೂ, ನವಲಗುಂದ ಗವಿಮಠದ ಶ್ರೀಮನ್ನಿರಂಜನ ಬಸವಲಿಂಗಸ್ವಾಮಿಗಳೂ, ಶ್ರೀ ಪಟ್ಟದ ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರೂ ನಡೆಸಿದರು. ಇದರಿಂದ ಭಕ್ತ ಮಂಡಲಿಯು ಈ ಸ್ಥಳವನ್ನು ಬಿಟ್ಟು ಅಗಲುವದಕ್ಕೆ ಮನಸ್ಸಿಲ್ಲದೆ ಸಂತೋಷಮಗ್ನವಾಗಿದ್ದಿತು. ೩ ದಿನಗಳು ಗಣಾರಾಧನೆಯು ಇಲ್ಲಿ ಜಮಾಯಿಸಿದ್ದವರಿಗೆಲ್ಲಾ ತೃಪ್ತಿಕರವಾಗಿ ನಡೆಯಿತು.

ಬೆಂಗಳೂರಿಂದ ನೂರಾರು ಮಂದಿ ಮಹನೀಯರೂ, ಮಹಿಳೆ ಯರೂ, ಉತ್ತರದೇಶದಿಂದ ಅನೇಕ ಮಹನೀಯರೂ ಸಕುಟುಂಬ ಸಹಪರಿವಾರರಾಗಿ ಆಗಮಿಸಿದ್ದರಲ್ಲದೆ ಗುರುವರ್ಗದ ಮಠಾಧೀಶರುಗಳು ತಮ್ಮ ಶಿಬ್ಬಂದಿ ಸಹಿತ ದಯಮಾಡಿಸಿ, ಈ ಮಹೋತ್ಸವವನ್ನು ವಿಜೃಂ

ಭಣೆಯಿಂದ ನೆರವೇರಿಸಿದ್ದು ಈ ಮಠಕ್ಕೆ ಚರಿತ್ರಾರ್ಹವಾಗಿದೆ. ಈ ಸುತ್ತಣ ಶಿಷ್ಯಮಂಡಲಿಯವರು ಸಾವಿರಾರುಮಂದಿ ತಮ್ಮ ಪತ್ನೀಪುತ್ರಾದಿ ಬಂಧು ಬಾಂಧವರೊಡನೆ ಆಗಮಿಸಿ, ಶ್ರೀ ಜಗದ್ಗುರು ಸೇವೆಯನ್ನೆಸಗಿ ಕೃಪಾಶೀರ್ವಾದಕ್ಕೆ ಪಾತ್ರರಾಗಿರುವದು ಸಹ ಮುಂದಿನ ಅಭಿವೃದ್ಧಿ ಸೂಚಕವಾಗಿದೆ. ಮಠದ ಆವರಣದಲ್ಲಿ ಪಾಠಶಾಲೆಯ ಮುಂದೆ ಶೀನೀರಿನ ಭಾವಿಯನ್ನು ಸ್ವಂತ ವೆಚ್ಚದಿಂದ ಮಾಡಿಸಿಕೊಡುವ ಪ್ರಯತ್ನವನ್ನು ಬೆಂಗಳೂರು ಚಿಕ್ಕಪೇಟೆ ಯಜಮಾನ್ ಆ್ಯಂಡ ಸನ್ ಮಾಲೀಕರಾದ ಶ್ರೀಮಾನ್ ಯಜಮಾನ್ ಮಾದಪ್ಪನವರು ಆರಂಭಿಸಿರುವಂತೆ ಭಾವಿಯನ್ನು ತೋಡುವ ಕಾರ್ಯವು ನಡೆಯುತ್ತಿದೆ. ದಿನಕ್ರಮವಾಗಿ ಮಹನೀಯರನೇಕರ ಗುರು ಸೇವಾಕಾರ್ಯಗಳು ನಡೆಯುವ ಶುಭ ಸೂಚನೆಯೂ ಕಂಡು ಬರುತ್ತಿದೆ.

ಪೂರ್ವ ಕಾಲದಲ್ಲಿ ಮಹೋನ್ನತ ಸ್ಥಿತಿಯಲ್ಲಿದ್ದ ಈ ಮಠವು ಕಾಲ ಚಕ್ರಗತಿಯಿಂದ ಕೆಲವು ಕಾಲದಿಂದೀಚೆಗೆ ಹೀನಸ್ಥಿತಿಗೊಳಗಾಗಿ ನಾಮಾವಶೇಷವಾಗುವ ರೀತಿಯಲ್ಲಿದ್ದುದನ್ನು ಲಕ್ಷಿಸಿ, ಇದರ ಜೀರ್ಣೋದ್ಧಾರಕ್ಕಾಗಿ ೨-೩ ವರ್ಷಗಳಿಂದಲೂ ಅವಿಶ್ರಾಂತ ಶ್ರಮವನ್ನು ವಹಿಸಿ ಕೆಲಸ ಮಾಡಿದ ಅಡ್ವೈಜರೀ ಕಮಿಟಿ ಮೆಂಬರುಗಳಾದ ಬೆಂಗಳೂರು ಗಾಂಧೀನಗರದ ಶ್ರೀ. ಯಂ. ನಾಗಪ್ಪನವರೂ, ಚಿಕ್ಕಪೇಟೆ ಯಜಮಾನ್ ಆ್ಯಂಡ ಸನ್ ಮಾಲೀಕರಾದ ಶ್ರೀ. ಮಾದಪ್ಪನವರೂ, ಶಿಡ್ಲಘಟ್ಟದ ಮುನಿಸಿಪಲ್ ಕೌನ್ಶಿಲರು ಶ್ರೀ. ಎಸ್. ಹಂಪಯ್ಯನವರೂ ಈ ಮಹತ್ಕಾರ್ಯವನ್ನೆಸಗಿ ಕೃತಕೃತ್ಯರಾದರು. ಈ ಮಹತ್ವಪೀಠಾಧೀಶರಾಗಿರುವ ಶ್ರೀ. ಶ್ರೀಗಳವರು ಈ ಒಳಕ್ಕೆ ಪ್ರಸಿದ್ಧ ಸಾಹಿತಿಗಳಾಗಿದ್ದು ಕರ್ನಾಟಕದ ಅನೇಕ ಪ್ರಸಿದ್ಧ ಪುರುಷರಿಗೆ ಪರಿಚಯಸ್ಥರೇ ಆಗಿರುವದರಿಂದ ಇವರ ನಿರ್ಮಲವಾದ ಸಮಾಜೋದ್ಧಾರ ಪ್ರಯತ್ನವು ಬಹಳ ಪ್ರಕಾಶಕ್ಕೆ ಬರುವದೆಂದು ನಿರೀಕ್ಷಿಸುತ್ತಿರುವೆವು.

---

# ಸಂಗೀತ ವಚನಗಳು.

ಲೇಖಕ—ಪಿ. ವ್ಹಿ. ಪಾಟೀಲ ಸಂಗೀತ ಶಿಕ್ಷಕ
ಶ್ರೀಸಿದ್ಧೇಶ್ವರ ಹೈಸ್ಕೂಲ ವಿಜಾಪುರ.

(೧೯೩೯ ಮಾರ್ಚ ಸಂಚಿಕೆಯಿಂದ ಮುಂದೆ ಸಾಗಿದ್ದು)



೫೨

ರಾಗಃ— ಪಹಾಡಿ ತಾಲಃ— ಕವಾಲಿ

(ಲೋಟುನಕೊ ಮುಜದೂರ ಕನ್ಹಯ್ಯಾ...ಎಂಬಂತೆ)

ಎನ್ನೊಳಗೆ ನೋಡಿದರೆ। ಎಳ್ಳನಿತು ಹುರುಡಿಲ್ಲವಯ್ಯಾದೇವಾ।
ಹೊನ್ನು ಹೆಣ್ಣು ಮಣ್ಣು ನನ್ನದು ॥ಪ॥

ಪುತ್ರ ಮಿತ್ರ ಕಳತ್ರಾದಿಗಳು ನನ್ನದು। ಧನ ಧಾನ್ಯ ಆನೆ ಕುದುರೆ ಎತ್ತು ತೊತ್ತು।
ಮಂದಿ ಮಕ್ಕಳು ಅಷ್ಟೈಶ್ವರ್ಯದಲ್ಲಿ। ನಾ ಬಲ್ಲಿದೆನೆಂದು ಬಲು ಹಮ್ಮಿನಿಂದ ॥೧॥

ಗುರುಹಿರಿಯರ ಕಂಡರೆ ತಲೆವಾಗದಯ್ಯ ಎನ್ನ ಚಿತ್ತವು। ಇಂಥ ಚಿತ್ತದಿಂದೆ ನುಗ್ಗುನುರಿಯಾದೆನಯ್ಯ। ನಿಃಕಳಂಕ ಮೂರ್ತಿ ಸಚ್ಚಿದಾನಂದ ಎನ್ನಪರಾಧವ। ನೋಡದೆ ಕಾಯಯ್ಯ ಶ್ರೀಗುರುಲಿಂಗ ಜಂಗಮವೇ ॥೨॥

೫೩

ರಾಗಃ—ತಿಲಕಕಾಮೋದ ತಾಲಃ—ಏಕತಾಲ

(ನುರಲೀಮಾನಸ...ಎಂಬಂತೆ)

ಹಗಲು ಹಸಿವೆಗೆ ಕುದಿದು।
ಇರುಳು ನಿದ್ರೆಗೆ ಕುದಿದು।
ಉಳಿದಾದ ಹೊತ್ತೆಲ್ಲ ॥ಪ॥

ಅಶನ ವ್ಯಸನಕ್ಕೆ ಕುದಿದು।
ಅಯ್ಯ ನಿಮ್ಮನರಿಯದ ಪಾಪಿ ನಾನಯ್ಯ
ಅಯ್ಯ ನಿಮ್ಮನರಿಯದ ಕರ್ಮಿ ನಾನಯ್ಯ ॥೧॥

ಮಹಾಲಿಂಗ ಕಲ್ಲೇಶ್ವರಾ ।
ಅಸಗ ನೀರಡಿಸಿ ಸತ್ತ ತೆರ ।
ನಂತಾಯಿತ್ತೆನ್ನಯುಕ್ತಿ ॥೨॥

[ಹಾವಿನಹಾಳ ಕಲ್ಲಿದೇವ]

೫೪

ರಾಗಃ—ಅಸಾವೇರಿ ತಾಲಃ—ಆದಿತಾಲ
(ಮನುಜ ಶರೀರವಿದೇನುಸುಖ...)

ನೀರ ಕಂಡಲ್ಲಿ । ಮುಳುಗುವರಯ್ಯ ॥ಪ॥
ಮರನ ಕಂಡಲ್ಲಿ । ಸುತ್ತುವರಯ್ಯ ।
ಬತ್ತುವ ಜಲವ । ಒಣಗುವ ಮರನ ।
ನೆಚ್ಚಿದವರು । ನಿಮ್ಮನೆತ್ತಬಲ್ಲರು ।
ಕೂಡಲಸಂಗಮ । ದೇವಾ ॥೧॥ [ಬಸವಣ್ಣ]

೫೫

ರಾಗಃ—ಕಾಫಿ ತಾಲಃ—ತ್ರಿತಾಲ
(ವಸಂತ ಆಲಾ...ಎಂಬಂತೆ)

ಉಟ್ಟುದ ತೊರೆದವಗೆ । ಊರೇನು ಕಾಡೇನು ॥
ನಷ್ಟ ಸಂತಾನಕ್ಕೆ । ಕುಲವೇನು ಫಲವೇನು ॥ಪ॥
ಹುಟ್ಟುಗೆಟ್ಟಾತಂಗೆ । ಪುಣ್ಯವೇನು ಪಾಪವೇನು ।
ಅದು ಕೆಟ್ಟುದು । ಕೆಟ್ಟುದು ॥೧॥
ತನ್ನ ತಾನರಿಯದೆ । ಬಟ್ಟಬಯಲಲ್ಲಿ
ಬಿದ್ದನವ್ವ । ಅಜಗಣ್ಣತಂದೆ ॥೨॥ [ಮುಕ್ತಾಯಕ್ಕ]

೫೬

ರಾಗಃ— ಮಿಶ್ರಪಹಾಡಿ ತಾಲಃ— ಕವಾಲಿ
(ಯಮುನಾಜಳಿ ಖೇಳೂ ಖೇಳ...ಎಂಬಂತೆ)

ಅತ್ತಲಿತ್ತ ಸಾರದಂತೆ ಹೆಳವನ ಮಾಡಯ್ಯ ತಂದೆಯೇ ।
ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ ।
ಮತ್ತೊಂದ ಕೇಳದಂತೆ । ಕಿವುಡನ ಮಾಡಯ್ಯ ತಂದೆ ।
ಅನ್ಯ । ವಿಷಯಕ್ಕೆಳಸದಂತೆ ಇರಿಸು ಕೂಡಲ । ಸಂಗಮದೇವಾ ॥ ೧॥

[ಬಸವಣ್ಣ]

# ಬಸವನು ಮೊದಲು ಹೋದದ್ದು ಕಲ್ಯಾಣಕ್ಕೋ ಮಂಗಳವಾಡಕ್ಕೋ?

(ಲೇಖಕ:— ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.)

ರೇವಣಸಿದ್ಧ, ಬಸವೇಶ್ವರ ಮತ್ತು ರುದ್ರಮುನಿ ಈ ಮಹಾನುಭಾವರು ವೀರಶೈವ ಸಮಾಜೇತಿಹಾಸದಲ್ಲಿ ಮಹತ್ತರ ಕಾರ್ಯಗಳನ್ನು ಮಾಡಿ ಅತ್ಯಂತ ಪ್ರಸಿದ್ಧರಾಗಿದ್ದಾರೆ. ಅವರು ಮಾಡಿದ ಕಾರ್ಯಗಳು ಪ್ರಕಾಶಕ್ಕೆ ಬಂದದ್ದಾದರೆ, ಅವರು ಕೇವಲ ವೀರಶೈವ ಸಮಾಜೇತಿಹಾಸದಲ್ಲಷ್ಟೇ ಅಲ್ಲ, ಕರ್ನಾಟಕದ ರಾಜಕೀಯ ಇತಿಹಾಸದಲ್ಲಿಯೂ ಕೂಡ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಬಹುದಾಗಿದೆ. ಆದರೆ ಅವರ ಚರಿತ್ರೆಗಳು ಇನ್ನೂ ಗೊತ್ತಾಗದೆ ಇರುವದು ಬಹು ವಿಷಾದಕರವಾದ ಸಂಗತಿಯು. ಇವರಲ್ಲಿ ಬಸವೇಶ್ವರನ ಚರಿತ್ರೆಯಲ್ಲಿ ಅನೇಕ ವಿಷಯಗಳು ಇನ್ನೂ ಚರ್ಚಾಸ್ಪದವಾಗಿವೆಂಬದು ಖೇದಕರವಾಗಿರುತ್ತದೆ. ಅವನ ಜನ್ಮಸ್ಥಳವಾವುದು, ಅವನು ತನ್ನ ಬಾಲ್ಯವನ್ನು ಹೇಗೆ, ಮತ್ತು ಎಲ್ಲಿ ಕಳೆದನು, ಅವನು ಮಂತ್ರಿಪದದಲ್ಲಿ ಹೇಗೆ ಆರೂಢನಾದನು, ಅವನು ವೀರಶೈವ ಧರ್ಮೋಜ್ಜೀವನ ಕಾರ್ಯವನ್ನು ಯಾವ ರೀತಿಯಿಂದ ಸಾಗಿಸಿದನು, ಇವೇ ಮೊದಲಾದ ವಿಷಯಗಳ ಮೇಲೆ ಇನ್ನೂ ಪೂರ್ಣ ಪ್ರಕಾಶವು ಬಿದ್ದಿರುವದಿಲ್ಲ. ಆದರೆ ಮುಂದೆ ವೀರಶೈವ ಗ್ರಂಥಗಳು ಪ್ರಕಾಶ ಪಟ್ಟ ಹಾಗೆ ಮತ್ತು ಶಿಲಾಶಾಸನಗಳ ಸಂಶೋಧನೆಯು ಹೆಚ್ಚಿಗೆ ಆದಹಾಗೆ ಅವನ ಮಹತ್ವದ ಚರಿತ್ರೆಯು ಹೊರಬೀಳಬಹುದು. ಮತ್ತು ಆಗ ಅವನು ಮಾಡಿದ ಕ್ರಾಂತಿಕಾರಕ ಚಟುವಟಿಕೆಗಳ ನಿಜಸ್ಥಿತಿಯು ಗೊತ್ತಾಗಬಹುದು.

ಬಸವೇಶ್ವರನ ಜನ್ಮಸ್ಥಾನವಾವುದೆಂಬದನ್ನು ಕುರಿತು ನಾನು ಶಿವಾನುಭವದ ಹೋದ ಮೇ–ಜೂನ ಸಂಚಿಕೆಯಲ್ಲಿ ಒಂದು ಲೇಖವನ್ನು ಬರೆದಿದ್ದೇನೆ. ಅದರಿಂದ ಅವನು ಬಾಗೇವಾಡಿಯಲ್ಲಿಯೇ ಜನಿಸಿದನೆಂದು ಕಂಡು ಬರುವದು. ಅಲ್ಲಿ ಅವನು ಜನ್ಮವನ್ನು ತಾಳಿದ ಬಳಿಕ ಕೆಲವು ವರ್ಷಗಳಾದಮೇಲೆ ಕಪ್ಪಡಿ ಸಂಗಮೇಶನಸ್ಥಾನಕ್ಕೆ ಹೋಗಿ ಅಲ್ಲಿ ವಾಸಿ

ಸಿದ್ದು ನಿರ್ವಿವಾದವಾದ ಸಂಗತಿಯು. ಆದರೆ ಅಲ್ಲಿ ಕೆಲವು ಕಾಲವಿದ್ದ ಬಳಿಕ ಅವನು ಮುಂದೆ ಕಲ್ಯಾಣಕ್ಕೆ ಹೋಗಿ ತನ್ನ ಸೋದರಮಾವನಾದ ಬಲದೇವನನ್ನು ಕಂಡು ಅಲ್ಲಿಯೇ ಇರಹತ್ತಿದನೆಂದೂ, ಮುಂದೆ ಬಲದೇವನ ಮಗಳ ಲಗ್ನವಾಗಿ ಆಡಳಿತೆಯಲ್ಲಿ ಮುಖ್ಯ ಸ್ಥಾನವನ್ನು ಪಡೆದನೆಂದೂ ಈಗ ಎಲ್ಲರ ನಂಬಿಕೆಯು ಇರುತ್ತದೆ. ಈ ಪ್ರಕಾರ ಭೀಮಕವಿ ಮತ್ತು ಅವನ ತರುವಾಯದ ಬಹುತರ ಎಲ್ಲ ವೀರಶೈವ ಗ್ರಂಥಕಾರರು ವರ್ಣಿಸಿದ್ದಾರೆ. ಆದರೆ ಬಸವೇಶ್ವರನು ಸಂಗಮನಾಥನಲ್ಲಿಂದ ಕಲ್ಯಾಣಕ್ಕೆ ತೆರಳದೆ, ಮಂಗಳವಾಡಕ್ಕೆ ಮೊದಲು ಹೋಗಿ ಅಲ್ಲಿ ಬಿಜ್ಜಳನೊಡನೆ ಉಳಿದನೋ ಹೇಗೆ ಎಂಬುದೊಂದು ಹೊಸ ವಿಷಯವಾಗಿದೆ. ಇದನ್ನು ಚರ್ಚಿಸುವದೇ ಪ್ರಸ್ತುತಲೇಖದ ಮುಖ್ಯೋದ್ದೇಶವಾಗಿದೆ. ಬಸವೇಶ್ವರನು ಮಂಗಳವಾಡಕ್ಕೆ ಮೊದಲು ಹೋದನೆಂಬುದರಲ್ಲಿ ಸತ್ಯಾಂಶವಿದೆಂದು ನನಗೆ ತೋರುತ್ತದೆ.

ಇದಕ್ಕೆ ಬಲವಾದ ಪ್ರಮಾಣವು ಹರಿಹರ ಕವಿಯು ರಚಿಸಿರುವ "ಬಸವರಾಜ ರಗಳೆ" ಈ ಗ್ರಂಥವೇ ಇದೆ. ಇದರಲ್ಲಿ ಬಸವನು ಮಂಗಳವಾಡಕ್ಕೆ ಹೋಗಿ ಅಲ್ಲಿ ಬಿಜ್ಜಳನನ್ನು ಕಂಡು ಅವನ ಆಸ್ಥಾನದಲ್ಲಿ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿದನೆಂದು ಅದರಲ್ಲಿ ಸವಿಸ್ತಾರವಾಗಿ ವರ್ಣಿಸಲ್ಪಟ್ಟಿರುತ್ತದೆ. ಆದರೆ ಮಂಗಳವಾಡ ಮತ್ತು ಕಲ್ಯಾಣ ಇವು ಪರ್ಯಾಯ ನಾಮಗಳೆಂದು ಬಹು ಜನರು ತಿಳಿದುಕೊಂಡು ಬಸವನು ಮೊದಲು ಕಲ್ಯಾಣಕ್ಕೆ ಹೋದನೆಂದು ನಂಬಿದ ಹಾಗೆ ನನಗೆ ತೋರುತ್ತದೆ ಆದರೆ ಈ ತಿಳುವಳಿಕೆಯು ತಪ್ಪು ಇರುತ್ತದೆ. ಹರಿಹರನ ಗ್ರಂಥಗಳನ್ನು ಪರಿಶೀಲಿಸಿದಲ್ಲಿ ಅವನು ಮಂಗಳವಾಡವು ಬೇರೆ, ಕಲ್ಯಾಣವು ಬೇರೆ ಒಂದು ಭಾವಿಸಿ ತನ್ನ ರಗಳೆಗಳನ್ನು ಬರೆದಿರುವನೆಂಬದು ಸ್ಪಷ್ಟವಾಗಿ ಕಂಡುಬರುತ್ತದೆ. ಉದಾ: — ರೇವಣಸಿದ್ಧೇಶ್ವರನ ರಗಳೆ (ಹರಿಹರನ ರಗಳೆಗಳು ಭಾಗ ೨ ಪುಟ ೨೫) ಇದರಲ್ಲಿ ಕಲ್ಯಾಣನಗರದ ಬೇರೆ ಉಲ್ಲೇಖವಿದೆ. ಮತ್ತು ಈ ರಗಳೆಯಲ್ಲಿ ಬಹು ಕಡೆಗೆ ಮಂಗಳವಾಡ ಈ ಹೆಸರಿನ ಪಟ್ಟಣದ ಬಗ್ಗೆ ಬೇರೆ ಉಲ್ಲೇಖಗಳೂ ಇವೆ. ಶಂಕರದಾಸಿಮಯ್ಯನ ರಗಳೆ (ಹರಿಹರನ ರಗಳೆಗಳು ಭಾಗ ೩) ಯಲ್ಲಿ ಶಂಕರದಾಸನು ಕಲ್ಯಾಣಕ್ಕೆ ಹೋದಂತೆ ಹೇಳಲ್ಪಟ್ಟಿದೆ. ಇದರಿಂದ ಬಸವನು ಮಂಗಳವಾಡಕ್ಕೆ ಹೋದನೆಂದು ಹರಿಹರನು ಬರೆದಿದ್ದರಲ್ಲಿ ಅವನು

ಮಂಗಳವಾಡ ಮತ್ತು ಕಲ್ಯಾಣ ಇವೆರಡೂ ಒಂದೇ ಎಂದು ಭಾವಿಸದ, ಅವನು ತರ್ದೇವಾಡಿ ನಾಡಿನಲ್ಲಿ ಆಗ ಬಹು ವಿಖ್ಯಾತವಾದ ಮಂಗಳವಾಡ ಈ ಪಟ್ಟಣವನ್ನುದ್ದೇಶಿಸಿಯೇ ಬರೆದಿದ್ದಾನೆಂಬದು ಗೊತ್ತಾಗುತ್ತದೆ. ಬಸವನು ಸಂಗಮೇಶ್ವರ ದೇವಸ್ಥಾನದಿಂದ ಮೊದಲು ಕಲ್ಯಾಣಕ್ಕೆ ಹೋಗದೆ ಮಂಗಳವಾಡಕ್ಕೆ ಹೋಗಿ ಬಿಜ್ಜಳನ ಆಡಳಿತೆಯಲ್ಲಿ ಒಂದು ಅಧಿಕಾರ ಸ್ಥಾನವನ್ನು ಪಡೆದನೆಂಬುದೇ ಹೆಚ್ಚಿಗೆ ಸಂಭವನೀಯವಾಗಿರುತ್ತದೆ. ಈ ವಿಷಯದಲ್ಲಿ ತರ್ದೇವಾಡಿ ನಾಡು ಅಂದರೆ ಈಗಿನ ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿ ಆಕಾಲಕ್ಕೆ ಯಾರು ಯಾರು ಯಾವ ಕಾಲಕ್ಕೆ ಆಳಿದರೆಂಬುದನ್ನು ಅರಿತಲ್ಲಿ ಈ ಮೇಲ್ಕಂಡ ಸಂಗತಿ ಮೇಲೆ ಹೆಚ್ಚಿಗೆ ಪ್ರಕಾಶವು ಬೀಳುವಂತಿದೆ. ಈ ವಿಷಯದ ನಿರೂಪಣೆಯು ಶಿವಾನುಭವ ಸಂಪುಟ ೧೩ ಸಂಚಿಕೆ ೫ ಪುಟ ೧೬೧ ಇದರಲ್ಲಿ ಮಾಡಲ್ಪಟ್ಟಿದೆ. ಆದರಲ್ಲಿ ನಾನು ನಿರೂಪಿಸಿದ್ದು ಏನೆಂದರೆಃ— ಚಾಲುಕ್ಯ ಸಾರ್ವಭೌಮನೂ ಚಾಲುಕ್ಯರಾಜ್ಯದಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಹೊಂದಿದವನೂ ಆದ ವಿಕ್ರಮಾದಿತ್ಯನು ಕ್ರಿ. ಶ. ೧೦೬೮ರಲ್ಲಿ ಮರಣ ಹೊಂದಿದನು. ಆ ಕಾಲಕ್ಕೆ ಬಿಜ್ಜಳನ ತಂದೆಯಾದ ಪೆರ್ಮಾಡಿರಾಯನು ತರ್ದೇವಾಡಿ ನಾಡಿನಲ್ಲಿ ಮಾಂಡಲಿಕನಾಗಿ ಆಳುತ್ತಿದ್ದನು (ಇಂಗಳೇಶ್ವರ ಶಾಸನ) ತರುವಾಯ ಈ ಭಾಗದಲ್ಲಿ ಭರ್ಮದೇವನು ೧೧೩೮ ರಲ್ಲಿ ಆಳುತ್ತಿದ್ದದ್ದು ಕಂಡು ಬರುತ್ತಿದೆ. ಮುಂದೆ ಅವನ ತರುವಾಯ ಬಿಜ್ಜಳನು ಇಲ್ಲಿ ೧೧೫೧ ರಲ್ಲಿ ಮಾಂಡಲಿಕನಾಗಿ ಆಳಹತ್ತಿದನು. (ವಿಜಾಪುರ ಶಿಲಾಶಾಸನ) ಮುಂದೆ ೧೧೫೫ ರಲ್ಲಿ ಅವನು ಚಾಲುಕ್ಯ ರಾಜ್ಯಕ್ಕೆ ಸರ್ವಾಧಿಪತಿಯಾಗಿ ಚಾಲುಕ್ಯ ನೂರ್ಮಡಿ ತೈಲನನ್ನು ಹೆಸರಿಗೆ ಅರಸನನ್ನಾಗಿ ಮಾಡಿ ಆಳಹತ್ತಿದನು. ಈ ಪ್ರಕಾರ ಅವನು ೧೧೫೫ರಿಂದ ೧೧೬೨ ವರೆಗೆ ಆಳುತ್ತ ೧೧೬೨ ರಲ್ಲಿ ಸಾರ್ವಭೌಮ ರಾಜನಾಗಿ ಕಲ್ಯಾಣದಲ್ಲಿ ರಾಜ್ಯಗೈಯ್ಯಹತ್ತಿದನು. ಮುಂದೆ ಅವನು ೧೧೬೭ ರ ವರೆಗೂ ಅವನು ಅರಸನಾಗಿ ರಾಜ್ಯವಾಳಿದನು. ಈ ಪ್ರಕಾರ ತರ್ದೇವಾಡಿನಾಡಿನ ಇತಿಹಾಸವಿರುತ್ತದೆ.

ಈ ಸಂಗತಿಗಳು ಈಚೆಗೆ ದೊರೆದ ಆಧಾರಗಳಿಂದ ಹೆಚ್ಚಿಗೆ ದೃಢಪಡುತ್ತವೆ. ಹೋದ ಸಂಚಿಕೆಯಲ್ಲಿ ನಾವು ಮನಗೋಳಿಯ ಶಿಲಾಶಾಸನವನ್ನು ಪೂರ್ಣವಾಗಿ ಅಚ್ಚುಹಾಕಿದ್ದೇವಷ್ಟೇ. ಆ ಶಾಸನದ ೩೭ ನೇ

ಓಳಿಯಲ್ಲಿ ಈ ತರ್ದೆವಾಡಿನಾಡಿನಲ್ಲಿ "ಮಾಂಡಲಿಕ ಮಹಾ ಪ್ರಚಂಡ ದಂಡನಾಯಕ ಬಮ್ಮಣಯ್ಯನು" ಆಳುತ್ತಿದ್ದಂತೆಯೂ ಅವನು ದುಂದುಭಿ ಸಂವತ್ಸರ ಅಂದರೆ ಕ್ರಿ. ಶ. ೧೧೪೨ ರಲ್ಲಿ ಮನಗೋಳಿಯು "ಶ್ರೀಸಿದ್ಧಲಿಂಗ ಕಲಿದೇವೇಶ್ವರ ದೇವರ್ಗೆ" ಭೂಮಿಯನ್ನು ದಾನ ಕೊಟ್ಟಂತೆಯೂ ಉಲ್ಲೇಖವಿರುತ್ತವೆ. ಆದುದರಿಂದ ಇಲ್ಲಿ ಮೊದಲು ಬರ್ಮ ದೇವನು ಆಳುತ್ತಿದ್ದನೆಂದು ನಾವು ಬರೆದದ್ದು ದೃಢಪಡುತ್ತದಲ್ಲದೆ ಅವನು ೧೧೪೨ರ ವರೆಗೂ ಸಹ ಇಲ್ಲಿ ಮಾಂಡಲಿಕನಾಗಿ ಆಳುತ್ತಿದ್ದನೆಂತಲೂ ಸ್ಪಷ್ಟವಾಗುತ್ತದೆ.

ನಾವು ನಮ್ಮ ಹಿಂದಿನ ಲೇಖದಲ್ಲಿ ಬಿಜ್ಜಳನು ಇಲ್ಲಿ ೧೧೫೧ ರಲ್ಲಿ ಇದ್ದನೆಂದು ಉಲ್ಲೇಖಿಸಿದ್ದೇವಷ್ಟೇ. ಆದರೆ ಪ್ರೊ॥ ಕುಂದಣಗಾರ ಕನ್ನಡ ಪ್ರೋಫೆಸರ ರಾಜಾರಾಮಕಾಲೇಜ ಕೊಲ್ಲಾಪುರ ಇವರು ತಮ್ಮ "ಹರಿಹರದೇವ" ಎಂಬ ಗ್ರಂಥದ ಪುಟ ೪೪ರಲ್ಲಿ ಶಕ ೧೦೬೯ ಅಂದರೆ ಕ್ರಿಸ್ತಶಕ ೧೧೪೭ರಲ್ಲಿ "ಮಂಗಳವೇಡವು ಬಿಜ್ಜಳನ ಸ್ಥಿರಶಿಬಿರವಾಗಿತ್ತೆಂದು ಮ್ಹಸವಡದ ಶಿಲಾಶಾಸನದಿಂದ ತಿಳಿಯುತ್ತಿದೆಂದು ಬರೆದಿದ್ದಾರೆ. ಇದರ ಮೇಲಿಂದ ಬಿಜ್ಜಳನು ಮಂಗಳವಾಡದಲ್ಲಿ ಮಹಾಮಾಂಡಲಿಕನಾಗಿ ಈ ನಾಡನ್ನು ಆಳಹತ್ತಿದನೆಂಬುದೂ ೧೧೪೨ ಮತ್ತು ೧೧೪೭ ಈ ವರ್ಷಗಳ ಮಧ್ಯದಲ್ಲಿ ಆವುದೋ ಒಂದು ವರ್ಷದಿಂದ ಅಲ್ಲಿ ಆಳಹತ್ತಿದ್ದನೆಂದೂ ಅನುಮಾನ ಮಾಡಲಿಕ್ಕೆ ಆವ ಪ್ರತ್ಯವಾಯವೂ ಇರುವದಿಲ್ಲ. ಬಿಜ್ಜಳನು ಅಂದಿನಿಂದ ೧೧೫೫ ವರೆಗೆ ಅಂದರೆ ಸುಮಾರು ೮—೧೦ ವರ್ಷ ಇಲ್ಲಿ ಚಾಲುಕ್ಯ ರಾಜನಿಗೆ ಅಂಕಿತನಾಗಿ ಮತ್ತು ಅದರ ತರುವಾಯ ೧೨ ವರ್ಷಗಳಲ್ಲಿ ಕೆಲವು ಕಾಲ ಸರ್ವಾಧಿಕಾರಿಯಾಗಿ, ಕೆಲವು ಕಾಲ ರಾಜನಾಗಿ ಚಾಲುಕ್ಯರಾಜ್ಯವನ್ನಾಳಿದನೆಂಬದು ದೃಢಪಡುತ್ತದೆ. ಮುಂದಿನ ವಿವೇಚನೆಯಲ್ಲಿ ಮೇಲಿನ ಸಂಗತಿಗಳನ್ನು ವಾಚಕರು ಲಕ್ಷದಲ್ಲಿಡಬೇಕೆಂದು ನನ್ನ ಸವಿನಯ ಸೂಚನೆ ಇದೆ.

ಈ ಪ್ರಕಾರ ಬಿಜ್ಜಳನು ಮಂಗಳವಾಡದಲ್ಲಿ ಆಳುತ್ತಿದ್ದಾಗ ರೇವಣಸಿದ್ಧೇಶ್ವರನು ಅವನನ್ನು ಕಂಡು ಮಂಗಳವಾಡದಲ್ಲಿಯೇ ವಾಸವಾಗಿದ್ದನೆಂದು ರೇವಣಸಿದ್ಧೇಶ್ವರನ ಚರಿತ್ರೆಯಿಂದ ತಿಳಿದುಬರುತ್ತದೆ. ಈ ವಿಷಯವನ್ನು ಕುರಿತು ನಾನು ಶಿವಾನುಭವ ಸಂಪುಟ ೧೩ ಸಂಚಿಕೆ ೬ ಇದರಲ್ಲಿ ಸವಿಸ್ತಾರವಾಗಿ ವಿವೇಚಿಸಿದ್ದೇನೆ. ರೇವಣಸಿದ್ಧೇಶ್ವರನು ಬಿಜ್ಜಳನ ಆರಂಭದ ಆಳಿಕೆಯಲ್ಲಿ ಅಂದರೆ ೧೧೪೨ ರಿಂದ ಸುಮಾರು ೧೧೫೫ರ

ವರೆಗಿನ ಕಾಲದಲ್ಲಿ ಇಲ್ಲಿ ಇರಬಹುದೆಂದು ನಾವು ಅನುಮಾನ ಮಾಡಬಹುದಾಗಿದೆ. ಈ ೧೧೫೫ ರಲ್ಲಿ ದೇಶದಲ್ಲಿ ಒಂದು ರಾಜ್ಯಕ್ರಾಂತಿಯುಂಟಾಯಿತು. ಆಗ ಬಿಜ್ಜಳನು ಸಿಂಹಾಸನಾಭಿಷಕ್ತನಾಗದಿದ್ದರೂ ಚಾಲುಕ್ಯ ರಾಜ್ಯದ ಸರ್ವಾಧಿಪತಿಯಾದನು. ಕೆಲವು ಶಿಲಾಶಾಸನಗಳು ಅಂದಿನಿಂದಲೇ ಅಂದರೆ ೧೧೫೫ರಿಂದಲೇ ಅವನು ರಾಜನಾದನೆಂದು ಗಣನೆ ಮಾಡುತ್ತವೆ. (ಮನಗೋಳಿ ಶಿಲಾಶಾಸನ ಓಳಿಗಳು ೫೯ ಮತ್ತು ೬೦ ನೋಡಿರಿ) ಈ ಅವಧಿಯಲ್ಲಿ ರೇವಣಸಿದ್ಧನು ಬಹುಶಃ ಜೀವಿಸಿದ್ದು, ಅವನು ಬಿಜ್ಜಳನ ರಾಜಕಾರಣದಲ್ಲಿ ಅವನಿಗೆ ಸಹಾಯ ಮಾಡಿರಬಹುದು. ಯಾಕಂದರೆ ಬಸವನು ತನ್ನ ಒಂದು ವಚನದಲ್ಲಿ—"ಒಬ್ಬ ಜಂಗಮದ ಅಭಿಮಾನದಿಂದ ಚಾಳುಕ್ಯರಾಜನ ಆಳಿಕೆ ತೆಗೆಯಿತ್ತು, ಸಂದಿತ್ತು" ಎಂದು ಹೇಳಿದ್ದಾನೆ. ಈ ಜಂಗಮನು ರೇವಣಸಿದ್ಧೇಶ್ವರನಾಗಿರಬಹುದು. ಯಾಕಂದರೆ ಅವನೇ ಈ ಕಾಲಕ್ಕೆ ಈ ಭಾಗದಲ್ಲಿ ಮತ್ತು ಬಿಜ್ಜಳನ ಆಸ್ಥಾನದಲ್ಲಿ ಮಹತ್ವದ ಸ್ಥಾನವನ್ನು ಅಲಂಕರಿಸಿದ್ದನು.

ಈ ಸಮಯದಲ್ಲಿಯೇ ಅಂದರೆ ರೇವಣಸಿದ್ಧೇಶ್ವರನ ಕಾಲದ ಕೊನೆಯಲ್ಲಿ ಬಸವನು ಸಂಗಮೇಶ್ವರ ದೇವಸ್ಥಾನದಿಂದ ಮಂಗಳವಾಡಕ್ಕೆ ಬಂದಿರಬೇಕು. ಅವನು ಅಲ್ಲಿಗೆ ಬಂದು ಸಿದ್ದಣ್ಣ ಮಂತ್ರಿಯ ಸಹಾಯದಿಂದ ಒಂದು ಸಣ್ಣ ನೌಕರಿಯನ್ನು ಬಿಜ್ಜಳ ಆಸ್ಥಾನದಲ್ಲಿ ದೊರಕಿಸಿದನು. ಹರಿಹರನು ಈ ವಿಷಯವನ್ನು ಕುರಿತು ತನ್ನ ರಗಳೆಯಲ್ಲಿ ಬಹು ವಿಸ್ತಾರವಾಗಿ ನಿರೂಪಿಸಿದ್ದಾನೆ. (ಹರಿಹರ ಕವಿಯ ಬಸವರಾಜ ರಗಳೆ ೧ನೇ ಆವೃತ್ತಿ ಪುಟ ೨೧ ಮತ್ತು ೨೫ರಿಂದ ೩೩ ಈ ವರೆಗಿನ ಪುಟಗಳನ್ನು ನೋಡಿರಿ.) ಹರಿಹರನು ಉಲ್ಲೇಖಿಸಿದ ಈ ಮಂಗಳವಾಡವು ಕಲ್ಯಾಣವಲ್ಲವೆಂಬುದನ್ನು ನಾನು ಹಿಂದೆಯೇ ಹೇಳಿದ್ದೇನೆ.

ಬಿಜ್ಜಳನು ತರ್ದೇವಾಡಿ ನಾಡಿನಲ್ಲಿ ಮಂಗಳವಾಡದಲ್ಲಿಯೇ ಸುಮಾರು ೮-೧೦ ವರ್ಷ ಮಾಂಡಲಿಕನಾಗಿಯೂ ಮುಂದೆ ೪-೫ ವರ್ಷ ಸರ್ವಾಧಿಪತಿಯಾಗಿಯೂ ರಾಜ್ಯವಾಳಿದನು. ಈ ಕಾಲಕ್ಕೆ ಬಸವನು ಇಲ್ಲಿಗೆ ಬಂದಿರಬೇಕು. ಆಗ ಅವನು ಚಿಕ್ಕವನು. ಹರಿಹರನ ಅಭಿಪ್ರಾಯದ ಪ್ರಕಾರ ಅವನು ೧೬ ವರ್ಷದವನಿದ್ದಾಗಳೇ ಬಾಗೇವಾಡಿಯನ್ನು ಬಿಟ್ಟು ಸಂಗಮೇಶ್ವರನಲ್ಲಿಗೆ ಹೋದನು. ಅಲ್ಲಿ ಅವನು ೮ ವರ್ಷ ಕಾಲ ಕಳೆದಿರಬಹುದು. ಯಾಕಂದರೆ ಅವನು ತೀರಿಕೊಂಡಾಗ್ಗೆ

೩೬ ವರ್ಷದವನಿದ್ದು ಬಿಜ್ಜಳನ ಆಸ್ಥಾನದಲ್ಲಿದ್ದುದು ೧೨ ವರ್ಷ ಕಳೆಯಲಾಗಿ ಅವನ ೨೪ನೇ ವರ್ಷದಲ್ಲಿ ಬಿಜ್ಜಳನಲ್ಲಿ ನೌಕರಿಗೆ ನಿಂತಿರಬಹುದೆಂಬ ಅನುಮಾನ ಉಂಟಾಗುತ್ತದೆ. ಬಸವನು ಬಾಗೇವಾಡಿಯನ್ನು ಬಿಟ್ಟಿದ್ದು ಅವನ ೧೬ನೇ ವರ್ಷದಲ್ಲಿ. (ಹರಿಹರನ ಪ್ರಕಾರ)ಆದುದರಿಂದ ೮ ವರ್ಷ ಸಂಗಮೇಶ್ವರನಲ್ಲಿ ಕಳೆದಿರಬೇಕು.

ರೇವಣಸಿದ್ಧೇಶ್ವರನ ಪ್ರಾಬಲ್ಯವು ೧೧೫೫ರ ವರೆಗೆ ಇದ್ದುದರಿಂದ ಮತ್ತು ಅವನ ಕಾಲದಲ್ಲಿ ಬಸವೇಶ್ವರನ ಮಹತ್ವಗಳು ತೋರಿಬರುವದಿಲ್ಲಾದ್ದರಿಂದ ರೇವಣಸಿದ್ಧೇಶ್ವರನ ತರುವಾಯ ಅಥವಾ ಅವನ ಕಾಲದಲ್ಲಿ ಬಹಳ ಸ್ವಲ್ಪ ಅವಧಿಯಲ್ಲಿ ಮಾತ್ರ ಬಸವನು ಬಿಜ್ಜಳನಲ್ಲಿ ಇರಬಹುದು. ಇದು ಕ್ರಿ ಶ ೧೧೫೨-೫೫ರ ಮಧ್ಯ ಆಗುತ್ತಿದೆ. ಆಗ ಬಸವನು ರೇವಣಸಿದ್ಧೇಶ್ವರನನ್ನು ಬಹುಶಃ ಕಂಡಿರಬಹುದು. ಕಂಡಿದ್ದರೂ ಆ ಕಾಲಕ್ಕೆ ಅವನು ಬಹಳ ಚಿಕ್ಕವನು ಮತ್ತು ಬಿಜ್ಜಳನ ಆಸ್ಥಾನದಲ್ಲಿ ಮಹತ್ವದ ಸ್ಥಾನವನ್ನು ಇನ್ನೂ ಹೊಂದದೆ ಇದ್ದವನು. ಆದ್ದರಿಂದ ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಬಸವನ ವರ್ಣನೆಗಳಿಲ್ಲ. ಮತ್ತು ಬಸವನ ಚರಿತ್ರೆಯಲ್ಲಿ ರೇವಣಸಿದ್ಧೇಶ್ವರನ ಉಲ್ಲೇಖವಿಲ್ಲ. ಆದರೆ ಮುಂದೆ ಬಸವನು ಅಲ್ಲಿ ತನ್ನ ಯೋಗ್ಯತೆಯನ್ನು ತೋರಿಸುತ್ತ ಅಧಿಕಾರದಲ್ಲಿ ಮುಂದುವರಿಯುತ್ತ ಹೋಗಿ ಬಿಜ್ಜಳನು ೧೧೬೨ರಲ್ಲಿ ರಾಜ್ಯಾಧಿಪತಿಯಾಗಿ ಕಲ್ಯಾಣದಲ್ಲಿ ಆಳಹತ್ತಿದ ಬಳಿಕ ಬಸವನು ಅವನಲ್ಲಿ ಮಂತ್ರಿಪದಾರೂಢನಾಗಿರಬೇಕೆಂದು ತೋರುತ್ತದೆ.

ಬಸವನು ಮಂಗಳವಾಡದಲ್ಲಿ ಇದ್ದ ಈ ೭-೮ ವರ್ಷ ಕಾಲದಲ್ಲಿ ಅವನು ದೇಶದಲ್ಲಿ ಬಹು ಪ್ರಸಿದ್ಧನಾದನು. ಯಾಕಂದರೆ ಅನೇಕ ಶಿವಶರಣರು ಬಸವನಲ್ಲಿ ಮಂಗಳವಾಡಕ್ಕೆ ಬಂದಿದ್ದನ್ನು ಹರಿಹರನು ತನ್ನ ರಗಳೆಯಲ್ಲಿ ಉಲ್ಲೇಖಿಸಿದ್ದಾನೆ. ರೇವಣಸಿದ್ಧೇಶ್ವರನು ಈ ಭಾಗದಲ್ಲಿ ಈ ಮೊದಲಿಗೆ ಇದ್ದು ವೀರಶೈವ ಧರ್ಮದ ಜಾಗ್ರತಿಯ ಕಾರ್ಯಗಳನ್ನು ನಡಿಸಿದ್ದನು. ಬಿಜ್ಜಳನ ತಂದೆಯಾದ ಪೆರ್ಮಾಡಿರಾಯನಾದರೂ ಶಿವಶರಣರನ್ನು ತನ್ನ ರಾಜ್ಯದಲ್ಲಿ ಆದರಿಸುತ್ತ ಬಂದನು. (ಶಿವಾನುಭವ ಸಂಪುಟ ೧೩ ಸಂಚಿಕೆ ೩ ಪುಟ ೧೨೬ ನೋಡಿರಿ.) ಅವನ ಕಾಲದಲ್ಲಿ ಕೊಂಡುಗುಳಿಯ ಕೇಶಿರಾಜ, ತೆಲುಗು ಜೊಮ್ಮಯ್ಯ ಮೊದಲಾದ ಶಿವಶರಣರು ದೇಶದಲ್ಲಿ ತಲೆದೋರಿದರು. ಮುಂದೆ ಶೈವಧರ್ಮ ಪಕ್ಷಪಾತಿ

ಯಾದ ಬರ್ಮದೇವನು ಈ ತರ್ದೇವಾಡಿ ಭಾಗದಲ್ಲಿ ಮಾಂಡಲಿಕನಾಗಿ ಆಳಹತ್ತಿದನು. ಆವನ ತರುವಾಯ ಬಿಜ್ಜಳನು ಈ ಭಾಗದಲ್ಲಿ ಬರಲು ಆವನ ಕಾಲದಲ್ಲಿ ರೇವಣಸಿದ್ಧೇಶ್ವರನ ಸಾಹಸದಿಂದ ವೀರಶೈವ ಧರ್ಮವು ಮತ್ತಿಷ್ಟು ಪ್ರಬಲಗೊಂಡಿತು. ಮುಂದೆ ರೇವಣಸಿದ್ಧೇಶ್ವರನು ತನ್ನ ಮಗನಾದ ರುದ್ರಮುನಿಗೆ ಈ ನಾಡಿನಲ್ಲಿ ತನ್ನ ಆಚಾರ್ಯಪಟ್ಟವನ್ನು ಕಟ್ಟಿ ಆಮೇಲೆ ತನ್ನ ಮೂಲಗ್ರಾಮವಾದ ಪಾಲ್ಕುರಿಕೆಗೆ ತೆರಳಿದನು. ಈ ರುದ್ರಮುನಿಯ ಕಾಲದಲ್ಲಿಯೇ ಅಥವಾ ರೇವಣಸಿದ್ಧೇಶ್ವರನು ತರ್ದೇವಾಡಿ ನಾಡನ್ನು ಬಿಟ್ಟುಹೋಗುವ ಸಮಯದಲ್ಲಿಯೇ ಬಸವೇಶ್ವರನು ಮಂಗಳವಾಡಕ್ಕೆ ಬಂದಿರಬೇಕೆಂದು ತೋರುತ್ತದೆ.

ಬಿಜ್ಜಳನು ತರ್ದೇವಾಡಿ ನಾಡಿಗೆ ಅಧಿಪತಿಯಾಗಿ ಬರುವ ಪೂರ್ವದಲ್ಲಿ ಆವನು ಬನವಾಸಿ ನಾಡಿನಲ್ಲಿ ಮಹಾಮಂಡಲೇಶ್ವರನಾಗಿ ಆಳುತ್ತಿದ್ದನೆಂದು ಅನೇಕ ಶಿಲಾಶಾಸನಗಳು ಹೇಳುತ್ತಿವೆ. ಶಿವಮೊಗ್ಗಾ ಪ್ರಾಂತದಲ್ಲಿ ಬಿಜ್ಜಳನ ಅನೇಕ ಶಿಲಾಶಾಸನಗಳು ಈಗಳೂ ಉಪಲಬ್ಧವಿವೆ. ಆದರೆ ಬಸವನು ಈ ಬನವಸೆ ನಾಡಿಗೆ ಬಿಜ್ಜಳನಲ್ಲಿಗೆ ಹೋದದ್ದು ಎಲ್ಲಿಯೂ ಉಲ್ಲೇಖವಿಲ್ಲ. ಆದರೆ ಹರಿಹರನು ಬಸವನು ಮಂಗಳವಾಡಕ್ಕೆ ಬಿಜ್ಜಳನಲ್ಲಿಗೆ ಹೋದನೆಂದು ಮಾತ್ರ ಸ್ಪಷ್ಟವಾಗಿ ಹೇಳುತ್ತಾನೆ. ಮತ್ತು ಬಿಜ್ಜಳನು ಆಗ ಇಲ್ಲಿ ಇದ್ದದ್ದೂ ನಿಜವು. ಆದುದರಿಂದ ಬಸವನು ಸಂಗಮನಾಥ ದೇವಾಲಯದಿಂದ ಕಲ್ಯಾಣಕ್ಕೆ ಮೊದಲು ಹೋದನೆಂದು ತಿಳಿಯುವದಕ್ಕಿಂತ ಮಂಗಳವಾಡಕ್ಕೆ ಮೊದಲು ಹೋದನೆಂದು ತಿಳಿಯುವದು ಹೆಚ್ಚಿಗೆ ಸಂಭವನೀಯವಾಗಿ ತೋರುತ್ತದೆ. ಅಂದರೆ ಹರಿಹರನ ವರ್ಣನೆಯಲ್ಲಿ ಸತ್ಯಾಂಶವಿದೆಂದು ನಾವು ನಂಬಬೇಕಾಗುತ್ತದೆ.

ಮಂಗಳವಾಡದಲ್ಲಿ ಆಗ ಸಿದ್ದಣ್ಣಮಂತ್ರಿಯು ಬಿಜ್ಜಳನ ಆಸ್ಥಾನದಲ್ಲಿ ಮುಖ್ಯ ಸ್ಥಾನವನ್ನು ಅಲಂಕರಿಸಿದ್ದನು. ಈ ಸಿದ್ದಣ್ಣಮಂತ್ರಿಯು ಬಲದೇವ ಮಂತ್ರಿಯ ತಮ್ಮನು (ಬಸವೇಶ್ವರ ಷಟ್‌ಸ್ಥಲವಚನದ ಕಥಾಸಾರ ಪುಟ ೯ಳ ನೋಡಿರಿ) ಅಂದರೆ ಬಸವನ ತಾಯಿಯಾದ ಮಾದಲಾಂಬಿಕೆಯ ಸಹೋದರನು. ಹೀಗೆ ತನಗೆ ತೀರ ಸಮೀಪದವನಾದ ಸಿದ್ದಣ್ಣಮಂತ್ರಿಯು ರಾಜ್ಯದಲ್ಲಿ ಶ್ರೇಷ್ಠಸ್ಥಾನದಲ್ಲಿದ್ದುದರಿಂದ ಆವನ ಆಶ್ರಯವನ್ನು ಬಯಸಿ ಬಸವನು ಮಂಗಳವಾಡಕ್ಕೆ ಹೋಗುವದು ಸ್ವಾಭಾವಿಕವಾಗಿದೆ. ಮಂಗಳವಾಡವು ಬಾಗೇವಾಡಿಯಿಂದ ದೂರವಲ್ಲ. ಅದು ವಿಜಾಪುರ

ಪಟ್ಟಣದಿಂದ ವಾಯುವ್ಯಕ್ಕೆ ೪೦ ಮೈಲು ಮತ್ತು ಬಾಗೇವಾಡಿಯು ವಿಜಾಪುರದಿಂದ ಆಗ್ನೇಯಕ್ಕೆ ೩೫ ಮೈಲು ಅಂತು ಒಟ್ಟು ೭೫ ಮೈಲು ಮಾತ್ರ ದೂರವಿದೆ. ತದ್ದೇವಾಡಿಯು ಈ ಪ್ರದೇಶದ ರಾಜಧಾನಿಯು. ಮಂಗಳವಾಡವು ಅದರ ಮುಖ್ಯ ನಗರವು. ಆದುದರಿಂದ ಬಾಗೇವಾಡಿಯಿಂದ ಮಂಗಳವಾಡಕ್ಕೆ ಮೇಲಿಂದಮೇಲೆ ಜನರು ಹೋಗಿಬರುವದು ಸ್ವಾಭಾವಿಕವು. ಅಲ್ಲದೆ ಚಿಕ್ಕಂದಿನಲ್ಲಿಯೇ ಬಸವನು ತಂದೆತಾಯಿಗಳಿಂದ ದೂರಾಗಿಹೋದವನು. ಇವನಿಗೆ ಆಶ್ರಯವು ಬೇಕಾಗಿರಬೇಕು. ಅಲ್ಲದೆ ವೀರಶೈವ ಧರ್ಮದ ಚಳವಳಿಯು ತದ್ದೇವಾಡಿ ಸಮೀಪದಲ್ಲಿಯೇ ಆಗ ಬಹು ಬಲವಾಗಿ ನಡೆದಿತ್ತು. ಧರ್ಮಾಭಿಮಾನಿಯಾದ ಬಸವನು ಈ ಚಳವಳಿಯನ್ನು ಅಪೇಕ್ಷಿಸಿ ಅತ್ತಕಡೆಗೆ ಹೋಗುವ ಸಂಭವವೂ ಹೆಚ್ಚು. ಅಲ್ಲದೆ ಬಿಜ್ಜಳನ ರಾಜ್ಯದಲ್ಲಿ ಅನೇಕ ವೀರಶೈವರು ಮುಖ್ಯಸ್ಥಾನಗಳನ್ನು ಕೈಕೊಂಡವರಾಗಿದ್ದರು. ಹೀಗೆ ಅನೇಕ ಅನುಕೂಲ ಪರಿಸ್ಥಿತಿಗಳಿದ್ದುದರಿಂದ ಬಸವನು ಮಂಗಳವಾಡಕ್ಕೆ ಮೊದಲು ಹೋದದ್ದೇ ಹೆಚ್ಚಿಗೆ ಸಂಭವನೀಯವಾಗಿ ತೋರುತ್ತದೆ ಹರಿಹರನ ವೃತ್ತಾಂತದಲ್ಲಿ ಹೆಚ್ಚಿಗೆ ಸತ್ಯಾಂಶವಿದೆಂದು ನನಗೆ ತೋರುತ್ತದೆ.

ಈ ಎಲ್ಲ ವೃತ್ತಾಂತವನ್ನು ನಾವು ಮನದಟ್ಟು ಮಾಡಿಕೊಂಡಲ್ಲಿ ಬಸವನು ಯಾವಯಾವ ಕಾರಣಗಳ ಮೂಲಕ ಒಂದು ಮಹತ್ವದ ಧಾರ್ಮಿಕ ಕ್ರಾಂತಿಯನ್ನು ಮಾಡಲು ಶಕ್ತನಾದನೆಂಬುದು ವಾಚಕರ ಲಕ್ಷದಲ್ಲಿ ಬಾರದೆ ಇರದು. ಬಸವನು ಸಂಗಮೇಶ್ವರನಿಂದ ಕಲ್ಯಾಣಕ್ಕೆಯೇ ಮೊದಲು ಹೋದನು, ಅಲ್ಲಿಗೆ ಹೋದಕೂಡಲೆ ಮಂತ್ರಿಪದವನ್ನು ಹೊಂದಿದನು, ಹೀಗೆ ಮಂತ್ರಿಪದಾರೂಢನಾದ ಕೂಡಲೆ ಅಂದರೆ ೫ ವರ್ಷಗಳಲ್ಲಿಯೇ ಇಡೀ ಕರ್ನಾಟಕದಲ್ಲೆಲ್ಲ ಒಂದು ಮಹತ್ತರವಾದ ಧಾರ್ಮಿಕ ಕ್ರಾಂತಿಯನ್ನು ಮಾಡಿದನು ಎಂಬ ಸಂಗತಿಗಳು ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡಿದಲ್ಲಿ ಅಸಂಭಾವ್ಯವಾಗಿ ತೋರುತ್ತವೆ. ಬಸವನು ಒಂದು ಮಹತ್ತರವಾದ ಧಾರ್ಮಿಕ ಕ್ರಾಂತಿಯನ್ನು ಮಾಡಿದನೆಂಬುದು ನಿಃಸಂದೇಹವಾದದ್ದು. ಆದರೆ ಅದಕ್ಕೆ ಒಂದು ಹಿಂದಿನ ಇತಿಹಾಸವಿದೆಂಬುದನ್ನು ನಾವು ಲಕ್ಷಿಸತಕ್ಕದ್ದು.

---

# ನನ್ನ ಕನಸು!

## ( ವಿಜಯನಗರ ರಾಜ್ಯದ ವರ್ಣನೆ. )

ಲೇಖಕಃ— ಈಶ್ವರ ಸಣಕಲ್ಲ

---

ಮಲಗಿದ್ದೆ !

ದಿಟ್ಟಿಗಳು ಮೇಲ್ವರಿದು ಬಾನ ನಿರುಕಿಸುತಿಹವು !
ಯಾವದೋ ಸೌಂದರ್ಯ— ಕವಿಕಲ್ಪನೆಯ ಮೀರಿ
ನವ್ಯವಹ ಭವ್ಯವಹ ದಿವ್ಯವಹ ಸೌಂದರ್ಯ—
ಶತಪತ್ರಶ್ರೀಯಂತೆ ತುಂಬ ವಿಕಸಿತಗೊಂಡು,
ವಿದ್ಯುಲ್ಲತೆಯ ಧರಿಸಿ, ಗ್ರಹತಾರೆಗಳ ಮುಡಿದು,
ಇಂದ್ರಚಾಪದ ವಿವಿಧ ರಮಣೀಯತೆಯ ಪಡೆದು,
ನರ್ತನಾ-ಮಗ್ನ-ನಿರ್ಜರ-ಲೋಕದಪ್ಸರಾ-
ವನಿತೆಯರ ಪದಕಮಲನೂಪುರಕ್ವಣಿತದಲಿ
ಉಯ್ಯಾಲೆಯಾಡುತಲಿ, ರಸವತಿ ಸರಸ್ವತಿಯ
ವೀಣೆಯ ಸುಮಂಜುಳಾಲಾಪದಲಿ ಕಂಪಿಸುತೆ,
ಗಂಧರ್ವಕಿನ್ನರರ ಗಾನದಲಿ ಪದವಿಡುತೆ,
ವಿಶ್ವಾಂತರಾಳದಲಿ, ಅದೃಶ್ಯರೂಪದಲಿ,
ತಾನೆ ತಾನಾಗಿ ಸಂಭ್ರಮಿಸುತಿಹ, ಭ್ರಮಿಸುತಿಹ—
ಸ್ವರ್ಗೀಯ ಸೌಂದರ್ಯವಂದು ಆ ಸತ್ಕ್ರಿಯಾ-
ಶಕ್ತಿಯನು ಸ್ಪರ್ಶಿಸಿತು ! ಸುವಿದ್ಯಾತೀರ್ಥದಲಿ
ವರ್ಷಿಸಿತು ! ಹರ್ಷಿಸಿತು ! ವಿದ್ಯಾರಣ್ಯದಲಿ
ಉಗ್ರತಪದಲಿ ನಿಂದ ಅಕಲಂಕ ಹೃದಯವದು
ಅಧರ್ಮದ, ವಿಧರ್ಮದ ಹಿಂಸ್ರತಾಜ್ವಾಲೆಯಲಿ
ಕುದಿಕುದಿಯುತಾವಿಯೊಲು ಮೇಲೇಳೆ, ಅದರೊಡನೆ
ಬೆರೆಯಿತ್ತು ! ಕಾಮಾಂಬುಸಂಗವದಿ ರಾಜತೇ-
ಜವು ಜನಿಸಲದರೊಡನೆ ನೆರೆಯಿತ್ತು ! ಇಂತು ಪ್ರ-
ತ್ಯಾಘಾತವೆದುರಿಸಲು, ತುಂಗಭದ್ರಾತೀರ—

ದಲಿ ಮೆರೆವ ಪಂಪಾಪತಿಯ ಕರುಣಾವಲೋ-
ಕನದಿಂದೆ, ಮೆಲ್ಲನೇ ಭುವಿಗಿಳಿದು, ಕಮನೀಯ
ರಮಣೀಯ ವಿಮಲಪುರವಾಯ್ತು ಲೋಕೋತ್ತರಂ!
ವಿದ್ಯಾನಗರವೆಂಬ ಪೆಸರಾಯ್ತಲಾ! ವರಂ!

ಹಳಚದೆಮೆಯನು ಹಾಗೆ ನೋಡಿದೆನು! ಆಹ!
ಬೆಳೆಬೆಳೆದು ಎಡಬಲದ ಕಡಲುಗಳ ಮುಟ್ಟಿತ್ತು!
ಕೆಳಕೆಳಗೆ ಸರಿಸರಿದು ಶರಧಿಯನು ಮೆಟ್ಟಿತ್ತು!
ಮೇಲಕದೊ, ಅದೊ ನೋಡು, ಎಂಥ ಘೋರಾರಣ್ಯ!
ದುರ್ಗಮವು! ದುಸ್ತರವು! ದುರ್ಭೇದ್ಯವಾಗಿಹುದು!
—— ನೋಡಲ್ಲಿ, ಅದೊ ಮತ್ತೆ—
ನವರಸಗಳೇ ಈ ಪ್ರದೇಶದಲಿ ಹರಿಯುವವೊ!
ಚಲುವೆ ಸಾಸಿರ ಮೊಗದಿ ನಿಂತು ತಾ ಮೆರೆಯುವದೊ!
ಏನ್ ದೃಶ್ಯ! ಏನ್ ದೃಶ್ಯ! ದೇಶದೇಶದ ಜನರು
ನಿಂತು ನೋಡುತಲಿಹರು! ಬಾಯ್ಬಿಟ್ಟು ಕಣ್ಬಿಟ್ಟು
ಬೆರಗಿನಲಿ ನಿಂತಿಹರು! ಮೈಮರೆತು ನಿಂತಿಹರು!
ಜಡರು ಚೇತನಗೊಳ್ವ ದೃಶ್ಯಗಳು ಇಲ್ಲಿಹವು!
ಕಸವ ರಸವನು ಗೈವ ದೃಶ್ಯಗಳು ಇಲ್ಲಿಹವು!
ಮೂಕಂಗೆ ಮಾತು ಬಹ ದೃಶ್ಯಂಗಳಿಹವಿಲ್ಲಿ!
ಮಾತಾಳಿ ಮೌನಿಯುಹ ದೃಶ್ಯಂಗಳಿಹವಿಲ್ಲಿ!
ಕಾವ್ಯಗಳ ಸಾಗರಂ! ಸೌಂದರ್ಯದಾಗರಂ!
ಔದಾರ್ಯದಾ ಗೊತ್ತು! ಮಾಧುರ್ಯದಾ ಬಿತ್ತು!
ಸೌಕರ್ಯದಾ ನಿಲಯ! ಗಾಂಭೀರ್ಯದಾ ವಲಯ!
ಸದ್ಧೈರ್ಯದಾ ನಾಡು! ಸಚ್ಛೌರ್ಯದಾ ಬೀಡು!
ಪ್ರಾಮಾಣಿಕತೆಯ ನೆಲೆ! ಕಲೆಕಲೆಯ ಚಲುವ ಬಲೆ!
ಮಣಿ ಮಣಿಗಳಾ ಮಾಲೆ! ಕಡಲಣುಗಿಯಾ ಶಾಲೆ!
ಸುಕೃತರಂಗದ ಲೀಲೆ! ವೈಭವಾಂಬುಧಿವೇಲೆ!
—— ನಿಂತವರು ಸೋಲಿರದೆ
ಇಂತು ಬಣ್ಣಿಸುತಿರಲು! ಮುಮ್ಮುಂದೆ ಸಾಗಿದೆನು!
ಸೃಷ್ಟಿದೇವಿಯ ಬಾಲಕ್ರೀಡೆಯಾ ಕುರುಹಿನೊಲು,
ಅಲ್ಲೊಂದು ಇಲ್ಲೊಂದು ಗಿರಿಗಳೆದ್ದಿರುತಿಹವು!

ಅವುಗಳಲಿ ಮೆರೆಯುತಿಹ ಬಂಡೆಗಳೊ,—ಶ್ರಾವಣದ
ಜಲಭಾರದಿಂ ಕಳಚಿ ಭುವಿಗಿಳಿದ ಜಲದ ಕುಲ-
ದೊಲು ಶೋಭೆಯಾಂತಿಹವು! ಪಥಪಥದೊಳಲ್ಲಲ್ಲಿ
ಕ್ರೋಶಕ್ರೋಶದ ವರೆಗೆ ಹಲಸುಗಳು ಮಾವುಗಳು
ಹುಣಶೆಗಳು ಕಿಕ್ಕಿರಿದು ಬೆಳೆದಿಹವು! ಹಗಲೆ ಇರು-
ಳಿನ ಭ್ರಮೆಯನೊದವಿಸುವ ಶೀತಳಚ್ಛಾಯೆಯಲಿ
ದಾರಿಗರನಾಯಸದಿ ಮಾರ್ಗಕ್ರಮಿಸುತಲಿಹರು!
ತಣ್ಪೀರ್ದ ಸುಳಿಗಾಳಿ! ಝೇಂಕರಿಪ ಮತ್ತಾಳಿ!
ಪಣ್ಗಾರ್ಚ ಹಿಗ್ಗಿನಲಿ ಪಟ್ಟನೇ ಪಾರುತಲಿ
ಸರಗೈವ ಹಕ್ಕಿಗಳು! ಹಕ್ಕಿಗಳ ನೋಡಿ ಮೈ-
ಮರೆತು ನಿಲ್ಲುವ ಪಾಮರಿಯರೋಳಿ! ಬಗ್ಗಿಸುವ
ಪಿಕಂಗಳು! ತೀರ್ಕೈಸಿ ನೆಗೆಯುತಿಹ ಶುಕಂಗಳು!
ಏಕಾಂತದಲಿ ಕುಳಿತು ಗುಟುಕು ಹಾಕುವ ಪಾರಿ-
ವಂಗಳದೊ! ಹಳೆಯ ಹೆಮ್ಮರಗಳಲಿ ಕುಳಿತು ಕ-
ಣ್ದೊಳಸಿನಲಿ ಗೂಗುಡುವ ಗೂಬೆಗಳು! ಗರಿಗೆದರಿ
ಕುಣಿಕುಣಿದು ಕೇಕೆಯಲಿ ಕ್ರೀಡಿಪ ಮಯೂರಗಳು!
ಇರ್ಕೆಲದ ಹೊಲಗಳಲಿ ನಲಿನಲಿದು ನೆಲಕೊಲೆವ
ನಳನಳಿಸಿ ಬೆಳೆದಿರ್ದ ಶಾಳಿಗಳು! ಪಾಳಿಗಳು!
ಅಲ್ಲಲ್ಲಿ ಮಡುಗಟ್ಟಿ ನಿಂತ ನೀರಿನ ಬಳಿಯೊ-
ಳಾಡುತಿಹ ಬಕಗಣವು! ಏಂ ಸೊಗವೊ! ಏಂ ಸೊಗಸೊ!
ಭೂಶ್ರೀಯ ದರ್ಪಣದೊಲೆಸೆಯುತಿಹ ಬೆಂಚೆಗಳು!
ಕೊಳಂಗಳು! ಅವುಗಳಲಿ ತೇಲುವರಸಂಚೆಗಳು!
ಕಿಲಕಿಲ ಧ್ವನಿಗೈವ ಕಲಹಂಸ ಸಮುದಾಯ!
ಕ್ರೌಂಚ ಚಾತಕ ಚಕ್ರವಾಕಗಳ ಸಮವಾಯ!
ವಿವಿಧ ಬಗೆಗಳ ಕೂಜಿತವು ಸುಳಿಯುವೆಲರಿನಲಿ
ಅಲೆಯಲೆಗಳಾಗುತಲಿ ತೇಲುತಲಿ ಬರುತಿಹುದೊ!
ಸಹಸ್ರಾನುಸಹಸ್ರ ಕಂಠಗಳನ್ನು ಸರಿಪಡಿಸಿ
ಏಕಕಾಲದಿ ವಿವಿಧ ರಾಗದಲಿ, ತಾಳದಲಿ
ಗಾನದೇವತೆ ಮಂಜುಳಸ್ವನದಿ ಗಾಯನವ
ಗೈಯುವಳೊ!

ಮರುಳಾಗಿ ಮುಗ್ಧನೊಲು ನಿಂತಿದೆ!
ನೋಡಿದನಿತೂ ಕಣ್ಣ ಹಸಿವು ಹೆಚ್ಚುತ್ತಿತ್ತು!
ಕೇಳಿದನಿತೂ ಕಿವಿಯ ತೃಷೆಯು ಹೆಚ್ಚುತ್ತಿತ್ತು!
ಇಂತು,

ಸ್ವರ್ಗೀಯ ದೃಶ್ಯದಲಿ ತೇಲುತಲಿ
ಮೆಲ್ಲಮೆಲ್ಲನೆ ಎಲ್ಲಿಗೋ ವಿಹರಿಸುತಲಿದ್ದೆ!
ಮಾತಂಗ-ವೃಷಶೃಂಗ-ಹೇಮಕೂಟ-ಖ್ಯಾತಿ
ಯುತ-ಮಾಲ್ಯವಂತ-ಕಿಷ್ಕಿಂಧಾಚಲಾವಲಿಯು
ಚಕ್ರಪ್ರಕಾರ ಪ್ರಾಕಾರದಂತೆಸೆಯಿತ್ತು!
ಪರಿಖೆಯಲಿ ತುಂಗಭದ್ರೆಯು ಮುಂದೆ ಪರಿದಿತ್ತು!
ಸಪ್ತಶೈಲಗಳಂತೆ, ಸಪ್ತತಟಿನಿಗಳಂತೆ,
ಜ್ವಾಲೆಯಾ ಸಪ್ತ ಜಿಹ್ವೆಗಳಂತೆ, ಸಪ್ತವಾ-
ರ್ಧಿಗಳಂತೆ, ಸಪ್ತರ್ಷಿ ಮಂಡಲದೊಲಾ ಸಪ್ತ
ಗ್ರಹಗಳೊಲು, ಸಪ್ತ ಸ್ವರ್ಗಂಗಳೊಲು, ದಿನಮಣಿಯ
ಸಪ್ತ ತೇಜಿಗಳಂತೆ, ಏಳು ಸುತ್ತಿನ ದುರ್ಗ
ಉತ್ತುಂಗತೆಯನಾಂತು, ಭವ್ಯತೆಯನಾಳ್ದಿತ್ತು!
ಭದ್ರವಹ ಭಿತ್ತಿಗಳು! ಪ್ರಳಯ ಪ್ರಕ್ಷುಬ್ಧತೆಗು
ಹಣಿಯದಿಹ ದ್ವಾರಗಳು! ಹೇಮಮಣಿಕಾಂತಿಯಲಿ
ಮೇರು ಶೃಂಗಗಳಂತೆ ಹೊಳೆಹೊಳೆವ ಗೋಪುರಂ
ಗಳು! ದುರ್ಗರಕ್ಷಣೆಗೆ ಸಂತತಂ ನಿಂತಿರುವ
ಸಮರ ಮಂಡಲ ಭೈರವನ ಭೀಕರಾಕೃತಿಯು!
——ನಡುಗಿದೆನು! ಕಣ್ಮುಚ್ಚಿ ಹಿಂದೆಗೆದೆ!
ವಿವಿಧ ತರುರಾಜಿಗಳು ಮೂರ್ತಿವೆತ್ತುಪಕಾರ-
ದಂತಿಹವು! ಕೋಮಲತೆ ಪರ್ಬಿದೊಲು ಬಳ್ಳಿಗಳು
ಹರಡಿಹವು! ಗುಲ್ಮಗಳು ನಿಂತಿಹವು! ಚಲುವಿನಲಿ
ನಲವಿನಲಿ ನವಿರೇರ್ದ ಭೂಲಕ್ಷ್ಮಿಯೆಂತೆಸೆವ-
ವಲ್ಲಲ್ಲಿ ಹಸಿರ ಹುಲ್ಗದ್ದೆಗಳು! ಪುಲ್ತಿಂದು
ಸ್ವೇಚ್ಛೆಯಲಿ ವಿಹರಿಸುವ ತುರುಕರುಗಳದೊ! ಹರಿಣ-

ಗಣವೆಂತು ಬೆದರುಗಣ್ಣಳಲತ್ತಲಿತ್ತ ದಿ-
ಟ್ಟಿಸುತಿಹುದು! ಮಹಿಷ ಸಂಘಾತವದೊ ಮಡುವಿನಲಿ
ಮಲಗಿಹುದು! ಕುರಿಗಳವು ಮೇಯುತಿರೆ, ನಿಂತು ಸಂ-
ತಸದಿಂದಲೂದುತಿಹ ಕುರುಬರಾ ಕೊಳಲದನಿ
ಸವಿಯೆನಿತು! ದನಗಾಹಿಗಳ ಹಾಡು ಸುತ್ತಲೂ
ತೇಲುತಲಿ, ಇಂಪಾಗಿ ಕೇಳುತಿದೆ! ಜುಳುಜುಳು-ನಿ-
ನಾದದೊಳಗಲ್ಲಲ್ಲಿ ಕಾಲುವೆಗಳೆಂತು ಪರಿಯುತ್ತಿಹವು!
ಬಗೆಬಗೆಯ ಪೈರುಗಳು ಭೂಮಾತೆಗೆರಗುತ ಕೃ-
ತಜ್ಞತೆಯ ತೋರುವೊಲು, ಸುಳಿಗಾಳಿಗೆಂತು ನೆಲ-
ಕೊಲೆಯುತಿವೆ! ವಿಹಗಗಳ ಕಲಕಲಧ್ವಾನದಲಿ
ನೆಲಮುಗಿಲು ತೇಲುತಿವೆ! ಸೂರ್ಯನದೊ ಗೋಪುರದಿ
ತಡೆದು, ಪುರಸಿರಿಯನೀಕ್ಷಿಸುತಿರಲು, ಸೌವರ್ಣ-
ಕಲಶದೊಲು ತೋರುವನು!—
—ಬೆರಗಾದೆ! ದುರ್ಗವನು
ಒಳಹೊಕ್ಕು ಪ್ರಥಮದ್ವಾರವ ದಾಂಟಿ ಇರ್ಕೆಲದಿ
ನೋಡಿದೆನು!—

[ಮುಂದುವರಿಯುವದು]

## ಶ್ರೀ ಸಿದ್ಧರಾಮಪ್ಪ ಪಾವಟೆ ಇವರ ನಿಧನವು.

ಶ್ರೀ. ಸಿದ್ಧರಾಮಪ್ಪ ಪಾವಟೆಯವರು ಹುಬ್ಬಳ್ಳಿಯಲ್ಲಿ ನಿಧನ ಹೊಂದಿದ್ದಕ್ಕೆ ನಾವು ಅತ್ಯಂತ ವಿಷಾದಿಸುತ್ತೇವೆ. ಇವರು ವೀರಶೈವ ಸಮಾಜದಲ್ಲಿ ದೊಡ್ಡ ವಿದ್ವಾಂಸರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಚನ್ನಾಗಿ ಬಲ್ಲವರು. ಅವರು ಅನೇಕ ಕನ್ನಡ ಮತ್ತು ಇಂಗ್ಲೀಷ ಗ್ರಂಥಗಳನ್ನು ಬರೆದಿದ್ದಾರೆ. ಶಿವಶರಣರ ನಡೆಯುಳ್ಳವರು. ಅವರ ವಿಚಾರಗಳನ್ನು ಪ್ರಸಾರಪಡಿಸಲು ಅವರು ಬಹಳ ಯತ್ನಮಾಡಿದರು. ಇವರ ನಿಧನದಿಂದ ವೀರಶೈವ ಸಮಾಜಕ್ಕೆ ಅಪಾರ ಹಾನಿಯುಂಟಾಗಿದೆ. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ.

# ಸ್ಫುಟವಿಷಯುಗಳು.

ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧಃ— ನಾವು ವಚನಶಾಸ್ತ್ರ ಸಾರ ಭಾಗ ೨ ಈ ಗ್ರಂಥವನ್ನು "ವೀರಶೈವಸಿದ್ಧಾಂತ" ಎಂಬ ಹೆಸರಿನಿಂದ ಹೋದ ವರುಷ ಪ್ರಕಟಪಡಿಸಿದೆವಷ್ಟೇ. ಈಗ ಅದರ ೩ ನೇ ಭಾಗವನ್ನು ಅಚ್ಚುಹಾಕುವ ಕಾರ್ಯವನ್ನು ಕೈಕೊಂಡಿದ್ದು ಇದು ಇದೇ ಸಪ್ಟೆಂಬರ ತಿಂಗಳಿನಲ್ಲಿ ಪೂರ್ಣಗೊಳಿಸಲ್ಪಡುವದು. ಇದರಲ್ಲಿ ವೀರಶೈವಾಚಾರ ವಿಷಯುಗಳು ನಿರೂಪಿಸಲ್ಪಡುವವು. ಈ ಆಚಾರಗಳು ಅಷ್ಟಾವರಣಗಳ ಮೇಲೆ ಮುಖ್ಯವಾಗಿ ಅವಲಂಬಿಸಿರುತ್ತವೆ. ಆದ್ದರಿಂದ ಈ ಗ್ರಂಥವು ಅಷ್ಟಾವರಣ ಗ್ರಂಥವೆಂದೇ ಹೇಳಬಹುದಾಗಿದೆ. ಇದರಲ್ಲಿ ವೀರಶೈವ ಕ್ರಿಯೆಗಳು, ಪಂಚಾಚಾರ ಸಪ್ತಾಚಾರಗಳು, ಅಷ್ಟಾವರಣ ಇವೇ ಮೊದಲಾದ ವಿಷಯುಗಳು ವಿವೇಚಿಸಲ್ಪಡುವವು. ಆದರೆ ಈವಿಷಯುಗಳ ಕೇವಲ ಮಹತ್ವ ವರ್ಣನೆ ಅಥವಾ ಸ್ತೋತ್ರಗಳು ಇಂಥವುಗಳನ್ನು ಲಕ್ಷಿಸದೆ ಅವುಗಳ ವಿಶೇಷ ತಾತ್ವಿಕಾರ್ಥಗಳು ಶಿವಶರಣರ ವಚನಗಳ ದ್ವಾರಾ ಕೊಡಲ್ಪಡುವವು. ಇದಕ್ಕೆ ಮುಂಬಯಿ ಸರಕಾರದವರು ಈಚೆಗೆ ಸ್ಥಾಪಿಸಿರುವ ಕನ್ನಡ ಸಂಶೋಧನ ಸಮಿತಿಯುವರ ಶಿಫಾರಸಿನಿಂದ ಮುದ್ರಣದ ಹಣವನ್ನು ಸರಕಾರದವರು ಕೊಡಲು ಒಪ್ಪಿದ್ದಾರೆ. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಆದರೆ ಈ ಗ್ರಂಥದ ಆರಂಭದ ೨೦೦ ಪುಟಗಳನ್ನು ಮಾತ್ರ ಅಚ್ಚುಹಾಕುವದಕ್ಕೋಸ್ಕರ ಅವರು ಸಹಾಯ ಮಾಡಲು ಒಪ್ಪಿದ್ದರಿಂದ ಇದರಲ್ಲಿ ಪೂರ್ವಾರ್ಧ, ಉತ್ತರಾರ್ಧಗಳೆಂದು ಎರಡು ಭಾಗಗಳು ಮಾಡಲ್ಪಟ್ಟಿವೆ. ಪೂರ್ವಾರ್ಧದಲ್ಲಿ ಗುರು, ಲಿಂಗ, ಜಂಗಮ ಈ ವಿಷಯುಗಳ ಪೂರ್ಣ ವಿವೇಚನೆಯು ಮಾಡಲ್ಪಡುವದು. ಇದರ ಪುಟಗಳು ೨೦೦ ರಿಂದ ೨೫೦ ರ ವರೆಗೂ ಹೋಗಬಹುದಾಗಿ ತೋರುತ್ತದೆ. ಮುಂದಿನ ಐದು ಆವರಣಗಳ ವಿಷಯುಗಳು ಉತ್ತರಾರ್ಧದಲ್ಲಿ ಬರುವವು.

ವೀರಶೈವ ಸಂಸ್ಕೃತಿ ಸಂಶೋಧನಃ— ವೀರಶೈವ ಧರ್ಮದಲ್ಲಿ ಸಂಶೋಧಿಸಲ್ಪಡತಕ್ಕ ವಿಷಯುಗಳು ಅನೇಕವಿರುತ್ತವೆಂಬದು ವಾಚಕರ ನಿದರ್ಶನಕ್ಕೆ ಬಂದಿರಬಹುದು. ಆದರೆ ಈ ಕಾರ್ಯವು ಸಮಾಧಾನ

ಪೂರ್ವಕವಾಗಿ ಈ ವರೆಗೂ ನಡೆದಿರುವದಿಲ್ಲ. ನಮ್ಮಲ್ಲಿ ಅನೇಕ ವಿದ್ಯಾವಂತರೂ ಸಂಸ್ಕೃತಜ್ಞರೂ ಇದ್ದಾರೆ. ಅವರು ಇತ್ತ ಕಡೆಗೆ ಅವಶ್ಯವಾಗಿ ಲಕ್ಷಹಾಕಬೇಕು. ವೀರಶೈವ ಸಂಸ್ಕೃತಿಯು ನಿಜಸ್ಥಿತಿಯನ್ನು ಹಿಂದುಸ್ತಾನದಲ್ಲಿಯು ಮಹಾಜನರ ಮುಂದೆ ಇಡುವ ಸಮಯವು ಪ್ರಾಪ್ತವಾಗಿರುತ್ತದೆ. ಇದಕ್ಕೋಸ್ಕರ ದೊಡ್ಡ ಪುಸ್ತಕಾಲಯಗಳ ಸಹಾಯವು ಬೇಕೆಂಬುದು ನಿರ್ವಿವಾದವು. ಆದರೆ ಧಾರವಾಡ, ಬೆಂಗಳೂರು, ಮೈಸೂರು ಪಟ್ಟಣಗಳಲ್ಲಿ ಪುರಾತನ ಗ್ರಂಥಗಳೂ ಶಿಲಾಶಾಸನಗಳ ಸಂಶೋಧನೆಗಳುಳ್ಳ ಅನೇಕ ತರದ ಇತಿಹಾಸಗಳೂ ಇರುವಂಥ ದೊಡ್ಡ ಗ್ರಂಥ ಸಂಗ್ರಹಾಲಯಗಳಿವೆ. ಈ ಪಟ್ಟಣಗಳಲ್ಲಿ ಅನೇಕ ವೀರಶೈವ ವಿದ್ಯಾವಂತರೂ ಇದ್ದಾರೆ. ಅವರು ಈ ಗ್ರಂಥಗಳನ್ನು ಪರಿಶೀಲಿಸಿ ತಮಗೆ ತೋರಿದ ಸಂಗತಿಗಳನ್ನು ಪ್ರಕಟಿಸುತ್ತ ಹೋದಲ್ಲಿ ವೀರಶೈವೇತಿಹಾಸದ ಮೇಲೆ ಮಹತ್ವದ ಪ್ರಕಾಶವು ಬೀಳಬಹುದಾಗಿವೆ ಇತ್ತ ಕಡೆಗೆ ಅವರು ಲಕ್ಷಹಾಕಬೇಕೆಂದು ನಮ್ಮ ನಮ್ರ ಸೂಚನೆ ಇದೆ.

ವೀರಶೈವೇತಿಹಾಸ ಗ್ರಂಥಃ— ನಾವು ವಚನಶಾಸ್ತ್ರಸಾರ ಭಾಗ ೩ ಈ ಗ್ರಂಥವನ್ನು ಪೂರ್ತಿಗೊಳಿಸಿದ ಕೂಡಲೆ, ವೀರಶೈವೇತಿಹಾಸ ವಿಷಯವನ್ನು ಕೈಕೊಳ್ಳಲು ಅಪೇಕ್ಷಿಸಿದ್ದೇವೆ. ಆದರಲ್ಲಿ ವೀರಶೈವ ಧರ್ಮದ ಇತಿಹಾಸವೂ ಪುರಾತನ ಕಾಲದಿಂದ ಈ ವರೆಗೆ ನಡೆದು ಬಂದ ವೀರಶೈವರ ರಾಜಕೀಯ ಮತ್ತು ಸಾಮಾಜಿಕ ಚಟುವಟಿಕೆಗಳೂ ಅವರ ವಿಧವಿಧದ ವಾಙ್ಮಯ ಪ್ರಯತ್ನಗಳೂ ನಿರೂಪಿಸಲ್ಪಡುವವು. ವೀರಶೈವ ಸಮಾಜೇತಿಹಾಸವು ಬಹು ಮಹತ್ವದ್ದಿದ್ದು ಅದರ ವಿಷಯವಾಗಿ ನಮ್ಮ ವಿಚಾರಗಳನ್ನು ಈಚೆಗೆ ನಾವು ಕಾಲ ಕಾಲಕ್ಕೆ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸುತ್ತಲಿದ್ದೇವೆ. ಈ "ಗ್ರಂಥದಲ್ಲಿ ದೇವರದಾಸಿಮಯ್ಯ, ಶಂಕರದಾಸಿಮಯ್ಯನವರ ಕಾಲ, ರೇವಣಸಿದ್ಧ ಬಸವಾದಿಗಳ ಕಾಲ, ಪಂಚಾಚಾರ್ಯರ ಕಾಲ, ವಿಜಯನಗರದ ಕಾಲ, ಕೆಳದೀರಾಜರ ಕಾಲ ಈ ಮೊದಲಾದ ಕಾಲಗಳಲ್ಲಿ ವೀರಶೈವಸಮಾಜದಲ್ಲಿ ಉಂಟಾದ ಮಹತ್ವದ ಸಾಮಾಜಿಕ ಮಾರ್ಪಾಡುಗಳೂ, ಅವರ ಮಹತ್ಪ್ರಯತ್ನಗಳೂ ಸವಿಸ್ತಾರವಾಗಿ ನಿರೂಪಿಸಲ್ಪಡುವವು. ಈ ಗ್ರಂಥವು ಐತಿಹಾಸಿಕ ದೃಷ್ಟಿಯಿಂದ ಬಹು ಮಹತ್ವವಾದದ್ದು. ಆದರೆ ಈ ಬಗ್ಗೆ ವೀರಶೈವ ಸಮಾಜದಲ್ಲಿ ಮತಭೇದಗಳಾಗುವ ಸಂಭವವದೆ. ಆದುದ

ರಿಂದ ಈಗಳೇ ನಾವು ಶಿವಾನುಭವ ಪತ್ರಿಕೆಯಲ್ಲಿ ನಮ್ಮ ವಿಚಾರಗಳನ್ನು ಬಹಿರಂಗಗೊಳಿಸಹತ್ತಿದ್ದೇವೆ. ಯಾರಿಗಾದರೂ ಅವುಗಳ ಬಗ್ಗೆ ಆಕ್ಷೇಪಗಳಿದ್ದರೆ ಅವುಗಳನ್ನು ಈಗಳೇ ಅವಶ್ಯವಾಗಿ ನಮಗೆ ತಿಳಿಸಬೇಕೆಂದು ವಿನಂತಿ ಇದೆ. ನಮ್ಮ ತಪ್ಪು ತಿಳುವಳಿಕೆಗಳನ್ನು ಸಮಪಡಿಸಿಕೊಳ್ಳಲಿಕ್ಕೆ ನಾವು ಯಾವಾಗಲೂ ಸಿದ್ಧರಿದ್ದೇವೆ. ಈಗ ದೇಶದಲ್ಲಿ ವಿರಕ್ತ, ಪಂಚಾಚಾರ್ಯ ಈ ಮೊದಲಾದ ಪಕ್ಷಗಳಿರುವದರಿಂದ ನಾವು ಈ ರೀತಿ ಸೂಚನೆಯನ್ನು ಮಾಡಬೇಕಾಗಿ ಬಂದಿದೆ.

ಹರಿಹರನ ರಗಳೆಗಳು ಭಾಗ ೭ಃ—ನಾವು ಈ ವರೆಗೆ ೬ ಭಾಗಗಳನ್ನು ಪ್ರಕಟಿಸಿದ್ದು ಅವುಗಳಿಂದ ಹರಿಹರಕವಿಯು ಎಂಥ ಹೆಚ್ಚಿನ ತರಗತಿಯ ಕವಿ ಎಂಬುದು ಸ್ಪಷ್ಟವಾಗಿದೆ. ಈ ೭ ನೇ ಭಾಗದಲ್ಲಿ ಅವನ ಚಿಕ್ಕ ಚಿಕ್ಕ ಕವನಗಳನ್ನು ಮಾತ್ರ ಅಚ್ಚು ಹಾಕುತ್ತಾ ಬಂದಿದ್ದೇವೆ. ಅವುಗಳಾದರೂ ಬಹು ಭಾವಪೂರಿತವಾದವುಗಳಿವೆ. ಈ ಸಾರೆ ನಾವು ಹಂಪಾಕ್ಷೇತ್ರದ ರಗಳೆಯನ್ನು ಅಚ್ಚು ಹಾಕಿದ್ದೇವೆ. ವಿಜಯನಗರದ ಪೂರ್ವದ ಮೊದಲನೆಯ ವರ್ಣನೆ ಎಂದರೆ ಇದೇ ಇರುತ್ತದೆ. ಈ ರಗಳೆಯ ಮೂಲಕ ಹರಿಹರನ ಕಾಲದಲ್ಲಿ ವಿಜಯನಗರವು ಹೇಗಿತ್ತೆಂಬುದನ್ನು ತಿಳಿಯಬಹುದಾಗಿದೆ. ಅಲ್ಲಿ ಆಗ ಅನೇಕ ದೇವಾಲಯಗಳೂ, ತೀರ್ಥಗಳೂ ಇದ್ದು ಕರ್ನಾಟಕದಲ್ಲಿ ಅದೊಂದು ಪುಣ್ಯಭೂಮಿಯಾಗಿತ್ತೆಂದು ತಿಳಿಯುತ್ತದೆ. ಅದರಲ್ಲಿ ವರ್ಣಿಸಿದ ಸ್ಥಾನಗಳು ಈಗ ಅಲ್ಲಿ ಆಯಾ ಸ್ಥಳಗಳಲ್ಲಿ ಇವೆಯೋ ಹೇಗೆಂಬುದನ್ನು ನಾವು ಕಂಡುಹಿಡಿಯಬೇಕಾಗಿದೆ. ಹರಿಹರನು ವರ್ಣಿಸಿದ ಸ್ಥಳಗಳಲ್ಲಿ ಅನೇಕ ವೀರಶೈವ ಶರಣರ ಉಲ್ಲೇಖಗಳೂ ಬಂದಿವೆ. ನಾವು ಈ ರಗಳೆಯನ್ನು ಎತ್ತಿಬರೆದ ತಾಡವೋಲೆಯ ಗ್ರಂಥವು ಬಹಳೇ ಜೀರ್ಣವಾದದ್ದೂ ಅಲ್ಲಲ್ಲಿ ಪುಡಿಪುಡಿಯಾದದ್ದೂ ಇದೆ. ಇದು ನಷ್ಟವಾಗಬಹುದೆಂದು ತಿಳಿದು ಅದನ್ನು ನಾವು ಇದ್ದಕ್ಕಿದ್ದ ಹಾಗೆ ಎತ್ತಿ ಪ್ರಸಿದ್ಧಿಸಿದ್ದೇವೆ. ಇದರಂತೆಯೇ ಸಂಸಾರ ವ್ಯಾಮೋಹ ನಿರಸನರಗಳೆಯಾದರೂ ಒಂದೇ ಒಂದು ಪ್ರತಿಯಿಂದ ಎತ್ತಿ ಪ್ರಕಟಿಸಿದ್ದೇವೆ. ಇದರಿಂದ ಈ ರಗಳೆಗಳಲ್ಲಿ ಕೆಲವೆಡೆಗಳಲ್ಲಿ ಅರ್ಥಬೋಧವಾಗದ ಓಳಿಗಳಿವೆ. ಕೆಲವು ಅಶುದ್ಧವೂ ಇವೆ. ಇವುಗಳ ಇನ್ನೊಂದು ಪ್ರತಿಯನ್ನು ದೊರಕಿಸಿಕೊಂಡು ಮುಂದಿನ ಆವೃತ್ತಿಯಲ್ಲಿ ಇವುಗಳನ್ನು ಶುದ್ಧವಾಗಿ ಪ್ರಕಟಿಸಲು ಪ್ರಯತ್ನಿಸುವೆವು.

ಅಭಿನಂದನಃ—ಶ್ರೀನಿಡುಮಾಮಿಡಿ ಮಠವು ಕರ್ನಾಟಕದಲ್ಲಿ ಬಹು ಪ್ರಸಿದ್ಧವಾದ ಮಠವಾಗಿದೆ. ಇದರ ಅಧಿಕಾರಿಗಳು ಬಹು ಪುರಾತನಕಾಲದಿಂದಲೂ ಅನೇಕ ರಾಜರುಗಳಿಂದ ಮನ್ನಣೆಯನ್ನು ಹೊಂದಿ, ವೀರಶೈವೋದ್ಧಾರಪ್ರಯತ್ನಗಳನ್ನು ಘನತರವಾಗಿ ಮಾಡುತ್ತಬಂದಿದ್ದಾರೆ. ಇವುಗಳ ಪೂರ್ಣ ನಿರೂಪಣೆಯನ್ನು ಶಿವಾನುಭವ ಪತ್ರಿಕೆಯಲ್ಲಿ ವೇ. ಮೂ. ಎಮ್. ಜಿ. ನಂಜುಂಡಾರಾಧ್ಯರು ಮಾಡುತ್ತ ಬಂದಿದ್ದು, ಅವರ ಲೇಖಗಳು ಈ ಸಂಚಿಕೆಯಲ್ಲಿ ಮುಗಿಸಲ್ಪಟ್ಟವೆ. ಅವು ಬಹು ಹೆಚ್ಚಿನ ತರಗತಿಯವಿದ್ದು ಈ ಪ್ರಯತ್ನವನ್ನು ಮಾಡಿದ್ದಕ್ಕೋಸ್ಕರ ವೀರಶೈವ ಸಮಾಜವು ಅವರಿಗೆ ಋಣಿಯಾಗಿದೆ. ಆದರೆ ಈ ಶ್ರೀಮಠದ ಪಟ್ಟಾರೂಢಮಹೋತ್ಸವವು ಈಚೆಗೆ ಜರಿಗಿದೆ. ಶಿವಾನುಭವದ ವಾಚಕರಿಗೆ ಚನ್ನಾಗಿ ಪರಿಚಿತರಾದ ಶ್ರೀ. ಚಂದ್ರಶೇಖರದೇಶಿಕರು ಶ್ರೀಚನ್ನಬಸವರಾಜ ದೇಶಿಕೇಂದ್ರಮಹಾಸ್ವಾಮಿಗಳೆಂಬ ಅಭಿಧಾನದಿಂದ ಈ ಮಠಕ್ಕೆ ಪಟ್ಟಾಧ್ಯಕ್ಷರಾಗಿ ಈಗ ನಿಯೋಜಿಸಲ್ಪಟ್ಟಿದ್ದಾರೆ. ಇದಕ್ಕೋಸ್ಕರ ನಾವು ಅವರನ್ನು ಹೃತ್ಪೂರ್ವಕನಾಗಿ ಅಭಿನಂದಿಸುತ್ತೇವೆ. ಶ್ರೀಸ್ವಾಮಿಗಳವರು ಬಹು ವಿದ್ವಾಂಸರೂ ಸಂಶೋಧನಕಾರ್ಯವನ್ನು ಚನ್ನಾಗಿ ಬಲ್ಲವರೂ ಆಗಿದ್ದು ಅವರಿಂದ ಸಮಾಜಾಭಿವೃದ್ಧಿಯ ಮಹತ್ತರ ಕಾರ್ಯಗಳು ಜರಗುವವೆಂದು ನಾವು ಭರವಸೆಯನ್ನು ತಾಳಿದ್ದೇವೆ.

ಶಿವಾನುಭವಕ್ಕೆ ಸಹಾಯಃ— ಶಿವಾನುಭವಕ್ಕೋಸ್ಕರ ವೀರಶೈವ ಸಮಾಜದ ಮಹಾ ಜನರು ಸಹಾನುಭೂತಿಯನ್ನು ಹೊಂದಿ ಅದಕ್ಕೆ ಸಹಾಯ ಮಾಡುತ್ತಿರಬೇಕೆಂದು ನಮ್ಮ ಸವಿನಯ ವಿನಂತಿ ಇದೆ. ಈ ಪತ್ರಿಕೆಯು ಯಾವ ಪಕ್ಷವನ್ನು ವಹಿಸದೆ ಸ್ವತಂತ್ರವಾದ ರೀತಿಯನ್ನು ತಾಳಿ ತನ್ನ ವಿಚಾರಗಳನ್ನು ಪ್ರಕಟಮಾಡುತ್ತಬಂದಿದೆ. ಈ ಸ್ಥಿತಿಯಲ್ಲಿ ವೀರಶೈವ ಸಮಾಜದಲ್ಲಿಯ ಉದಾರ ಮನಸ್ಕರು ಅದಕ್ಕೋಸ್ಕರ ಎಲ್ಲ ರೀತಿಯಿಂದ ತಮಗೆ ಶಕ್ಯವಿದ್ದಷ್ಟು ಸಹಾಯವನ್ನು ನೀಡಬೇಕೆಂದು ನಮ್ಮ ಪ್ರಾರ್ಥನೆ ಇದೆ.

---

# ಪ್ರಸ್ತಾವನೆ.

ಹಾವಿನಹಾಳ ಕಲ್ಲಿದೇವನ ವಚನಗಳು ಸ್ವತಂತ್ರವಾಗಿ ಒತ್ತಟ್ಟಿಗೆ ನಮಗೆ ದೊರೆತಿಲ್ಲ ನಮಗೆ ೬೦ ವಚನಗಳು ಮಾತ್ರ ದೊರೆತಿದ್ದು ಅವುಗಳನ್ನು ವಿಷಯಾನುಗುಣವಾಗಿ ಹೊಂದಿಸಿ ಈ ಗ್ರಂಥದಲ್ಲಿ ಅಚ್ಚು ಹಾಕಿದ್ದೇವೆ. ಅವು ಹಿಂದಿನಕಾಲದ ವಚನಗಳಂತೆ ಅರ್ಥಬೋಧಕವೂ ಮನೋಹರವೂ ಆಗಿರುತ್ತವೆ. ಅವನ ವಿಚಾರ್ರಗಳು ಬಸವಾದಿ ಪ್ರಮಥರ ವಿಚಾರಗಳಂತೆಯೇ ಉದಾರವಾದವುಗಳೂ ಪೂರ್ಣ ಭಕ್ತಿಯುಳ್ಳವೂ ಇರುತ್ತವೆ. ವೇದಗಳು ವಿಶಿಷ್ಟ ವರ್ಣದವರಿಗೋಸ್ಕರ ಇರದೆ, ಬೇಕಾದ ಪಂಗಡದವರು ಅವುಗಳ ಪಠನ ಮಾಡಬಹುದೆಂಬದನ್ನು ತೋರಿಸುವಕ್ಕೋಸ್ಕರ ಹಾವಿನಹಾಳ ಕಲ್ಲಯ್ಯನ ಚರಿತ್ರೆಯನ್ನು ಅನೇಕ ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಉದಹರಿಸುವದುಂಟು ಒಂದು ನಾಯಿಯ ಕಡೆಯಿಂದ ಹಾವಿನಹಾಳ ಕಲ್ಲಯ್ಯನು ವೇದಗಳನ್ನು ಉದ್ಘೋಷಿಸಿದನೆಂಬುದು ಅವನ ಚರಿತ್ರೆಯಲ್ಲಿ ಬರುವ ಮುಖ್ಯ ವಿಷಯವಾಗಿದೆ. ಈತನ ಚರಿತ್ರೆಯನ್ನು ಹರಿಹರಕವಿಯು ತನ್ನ ರಗಳೆಯಲ್ಲಿ ಬಹು ಸುಂದರವಾಗಿ ಹೇಳಿದ್ದಾನೆ. ಈ ಬಗ್ಗೆ ಹರಿಹರನ ರಗಳೆಗಳು ಭಾಗ ೬ ಪುಟ ೭೦ ಇದನ್ನು ವಾಚಕರು ನೋಡಬೇಕು.

ಹಾವಿನಹಾಳ ಕಲ್ಲಯ್ಯನು ಹಾವಿನಹಾಳ ಎಂಬ ಗ್ರಾಮದವನು. ಇದು ವಿಜಾಪುರ ಪಟ್ಟಣದಿಂದ ವಾಯುವ್ಯಕ್ಕೆ ೩೬ ಮೈಲುಗಳ ಮೇಲೆ ಇದೆ. ಮಂಗಳವೇಡೆಗ್ರಾಮವು ಇಲ್ಲಿಂದ ೧೫ ಮೈಲು ಮಾತ್ರ ದೂರವಿದೆ. ಮಂಗಳವೇಡೆಯಲ್ಲಿ ಬಿಜ್ಜಳನು ರಾಜ್ಯವಾಳುತ್ತಿದ್ದಾಗ ಅವನು ಕೆಲವೊಂದು ಆಭರಣವನ್ನು ಮಾಡಿಸಲಿಕ್ಕೆ ಬಂಗಾರವನ್ನು ತನ್ನ ಸೇವಕನೊಂದಿಗೆ ಕೊಟ್ಟು ಕಲ್ಲಯ್ಯನ ತಂದೆಯಾದ ಶಿವನಯ್ಯನ ಕಡೆಗೆ ಕಳಿಸಿ ಕೊಟ್ಟನು. ಶಿವನಯ್ಯನು ಅಕ್ಕಸಾಲಿಗನಾಗಿದ್ದನು. ಆದರೆ ಅವನು ಆ ಆಭರಣವನ್ನು ಮಾಡಲು ಶಕ್ತನಾಗದ್ದರಿಂದ ಅದನ್ನು ಮಾಡಲಿಕ್ಕೆ ಅವನು ತನ್ನ ಮಗನಿಗೆ ಆ ಬಂಗಾರವನ್ನು ಕೊಟ್ಟನು. ಶಿವಪೂಜೆಯಲ್ಲಿಯೇ ಯಾವಾಗಲೂ ಮಗ್ನನಾದ ಕಲ್ಲಯ್ಯನು ಅದನ್ನು ಮಾಡಲು ಒಪ್ಪಲಿಲ್ಲ. ಆಗ ತಂದೆಯು ಅವನನ್ನು ಶಿಕ್ಷಿಸಲು ಅವನು ಕಲ್ಲಿನಾಥನ ಗುಡಿಗೆ ಹೋಗಿ ಕಠಾರಿಯಿಂದ ತನ್ನ ಹೊಟ್ಟೆಯನ್ನು ಬಗಿದುಕೊಂಡು ನೆಲಕ್ಕೆ ಬೀಳಲು ಕಲ್ಲಿನಾಥನು ಪ್ರತ್ಯಕ್ಷನಾಗಿ ಅವನ ಜೀವವನ್ನು ಉಳಿ

ಸಿದನು. ಮುಂದೆ ಕೆಲವು ದಿವಸಗಳ ತರುವಾಯ ರೇವಣಸಿದ್ಧನು ಹಾವಿನಹಾಳಕ್ಕೆ ಬಂದಿರಲು ಅವನಿಗೆ ತನಗೊಬ್ಬ ಗುರುವನ್ನು ದಯಪಾಲಿಸಲು ಕಲ್ಲಯ್ಯನು ಕೇಳಿಕೊಳ್ಳಲು ಅವನು ರುದ್ರಮುನಿಯನ್ನು ತೋರಿಸಲು ಕಲ್ಲಯ್ಯನು ಅವನಿಂದ ಶೈವಧರ್ಮೋಪದೇಶವನ್ನು ಹೊಂದಿದನು. ಮುಂದೆ ಸೊಲ್ಲಾಪುರದಲ್ಲಿ ಸಿದ್ಧರಾಮೇಶ್ವರನ ಕೀರ್ತಿಯು ಹೆಚ್ಚಿದ್ದನ್ನು ತಿಳಿದು ಕಲ್ಲಯ್ಯನು ಅಷ್ಟಲ್ಲಿಗೆ ಹೋಗಿ ಅವನೊಡನೆ ಧರ್ಮಕಾರ್ಯಗಳಲ್ಲಿ ನಿರತನಾಗಿ ಅಲ್ಲಿಯೇ ವಾಸಿಸಹತ್ತಿದನು. ಅಲ್ಲಿ ಅವನು ಒಬ್ಬ ಸ್ತ್ರೀಯಳನ್ನು ಮದುವೆಯಾಗಿ ಅವಳಿಂದ ಕಲ್ಲವ್ವೆ ಎಂಬ ಮಗಳನ್ನು ಪಡೆದನು. ಈ ಕಲ್ಲವ್ವೆಯು ಒಂದು ದಿನ ನೀರು ತರಲು ಹೋದಾಗ್ಗೆ ಅಲ್ಲಿಯ ಒಬ್ಬ ಬಾಹ್ಮಣನು ಆಕೆಯನ್ನು ಸೋಂಕಲು ಅವಳು ತನ್ನ ನೀರಿನ ಹರಿವೆಯನ್ನು ಅಲ್ಲಿಯೇ ಚೆಲ್ಲಿಬಿಟ್ಟಳು. ಇದಕ್ಕೆ ಬ್ರಾಹ್ಮಣರು ಸಿಟ್ಟಾಗಿ ಕಲ್ಲಯ್ಯನಿಗೆ ದೂರಿಡಲು ಕಲ್ಲಯ್ಯನು ಬರೀ ವೇದವನ್ನು ಓದಿದ ಮಾತ್ರಕ್ಕೆ ಬ್ರಾಹ್ಮಣರು ಶ್ರೇಷ್ಠರಾಗರೆಂದು ಹೇಳಿ ಅಲ್ಲಿದ್ದ ಒಂದು ಶುನಕನಿಂದ ವೇದಪಠನವನ್ನು ಮಾಡಿಸಿದನು. ಮುಂದೆ ಕೆಲವು ದಿವಸಗಳಾದ ಮೇಲೆ ಕಲ್ಲಯ್ಯನು ಸಿದ್ಧರಾಮೇಶ್ವರನ ಸ್ಥಾನದಲ್ಲಿಯೇ ಸಮಾಧಿಸ್ಥನಾದನು. ಅವನ ಸಮಾಧಿಯು ಈಗಲೂ ಸೊಲ್ಲಾಪುರದಲ್ಲಿ ಸಿದ್ಧರಾಮೇಶ್ವರನ ಗದ್ದುಗೆಯ ಸಮೀಪದಲ್ಲಿಯೇ ಇರುತ್ತದೆ.

ಹಾವಿನಹಾಳದಲ್ಲಿ ಕಲ್ಮೇಶ್ವರನ ದೇವಸ್ಥಾನವೆಂದು ಈಗಲೂ ಅಸ್ತಿತ್ವದಲ್ಲಿ ಅದೆ. ಈ ದೇವಾಲಯವು ಈಗ ನಿಕೃಷ್ಟಸ್ಥಿತಿಯಲ್ಲಿರುತ್ತದೆ. ಕಲ್ಲಯ್ಯನು ರೇವಣಸಿದ್ಧೇಶ್ವರನ ಸಮಕಾಲೀನನಾದ್ದರಿಂದ ಅವನು ಬಸವೇಶ್ವರನಕ್ಕಿಂತಲೂ ಸ್ವಲ್ಪ ಮೊದಲಿನವನು. ಅವನು ಕಲ್ಯಾಣಕ್ಕೆ ಹೋಗಿ ಅಲ್ಲಿಯ ಶಿವಾನುಭವ ಮಂಟಪದ ಚರ್ಚೆಗಳಲ್ಲಿ ಅಂಗವನ್ನು ವಹಿಸಿಲ್ಲೆಂದು ತೋರುತ್ತದೆ. ಆದ್ದರಿಂದ ಬಸವೇಶ್ವರನು ಮಂಗಳವಾಡದಿಂದ ಕಲ್ಯಾಣಕ್ಕೆ ಬಿಜ್ಜಳನೊಡನೆ ಹೋಗುವ ಪೂರ್ವದಲ್ಲಿಯೇ ಹಾವಿನಹಾಳ ಕಲ್ಲಯ್ಯನು ಪ್ರಸಿದ್ಧಿಯನ್ನು ಹೊಂದಿರಬೇಕು.

ಹಾವಿನಹಾಳ ಕಲ್ಲಯ್ಯನು ಪುರಾತನ ವಚನಕಾರರಲ್ಲಿ ಒಬ್ಬನಾದ್ದರಿಂದ ಅವನ ವಚನಗಳಿಗೆ ನಾವು ಮಹತ್ವವನ್ನು ಕೊಡುವದು ಅವಶ್ಯವದೆ.

ವಿಜಾಪುರ
ತಾ. ೧೫-೭-೧೯೬೯

ಫ. ಗು. ಹಳಕಟ್ಟಿ
ಸಂಪಾದಕ

# ಪಂಪಾಕ್ಷೇತ್ರದ ರಗಳೆ.

ಕಂ॥ ನೇತ್ರತ್ರಯನತ್ಯನುಪಮ
ಗಾತ್ರಂ ಪಡೆದೆಮಗೆ ಕುಡುಗೆ ಪಂಪಾನಾಥಂ।
ಧಾತ್ರೀತಳದೊಳು ಪಂಪಾಕ್ಷೇತ್ರ
ಸ್ತೋತ್ರವನೆ ಮಾಳ್ಪ ಎನ್ನಯ ಮತಿಗುನ್ನತಿಯಂ॥

**ರಗಳೆ.**

ಎಂತೆನೆ ಸಮುದ್ರಮುದ್ರಿತ ಧರಾಮಧ್ಯದೊಳು
ಸಂತತಂ ಮೇರುವಿನ ದಕ್ಷಿಣ ವಿಭಾಗದೊಳು
ಮೆರೆವುದದು ಹೇಮಕೂಟವ್ರಾತ ಶಿವಪುರಂ
ಹೆರೆಸೂಡಿದಂ ನೆಲಿಸಿ ನಿಂದ ಪಂಪಾಪುರಂ
ಹಿರಿಯಜರು ಸೊಗಸಿನಿಂ ಪೊಗಳ್ವ ಪಂಪಾಪುರಂ
ಶರಣರೊಲವಿಂದನರಿದಿರ್ಪ ಪಂಪಾಪುರಂ

ಆ ಪುರದೊಳುಂ ನಾಲ್ಕು ಬಾಗಿಲುಗಳುಂ ನೋಡೆ
ಪಾಪಹರ ಸುತ್ತ ಯೋಜನ ಪ್ರಮಾಣಂ ಕೂಡೆ
ಅಲ್ಲಿ ಮೂಡಣ ಬಾಗಿಲೊಳಗಿರ್ಪನುನ್ನತಂ
ಸಲ್ಲಲಿತ ಗುಣಕಿನ್ನರೇಶ್ವರಂ ಶಾಶ್ವತಂ
ಅಲ್ಲಿ ತೆಂಕಣ ಬಾಗಿಲೊಳಗಿರ್ಪನಚಳಿತಂ
ಬಲ್ಲ ಶರಣರ ಜಂಬುಕೇಶ್ವರಂ ಶಾಶ್ವತಂ
ಪಶ್ಚಿಮ ದ್ವಾರದೊಳು ನೆಲಸಿರ್ಪನೊಪ್ಪದಿಂ
ನಿಶ್ಚಯ ದಿಟಂ ಸೋಮನಾಥನತಿಪ್ರೇಮದಿಂ
ಉತ್ತರದ್ವಾರದೊಳು ನೆಲಸಿರ್ಪನೀಶ್ವರಂ
ಉತ್ತಮ ಗುಣ ಸ್ಥಾಣು ವಾಣಿಭದ್ರೇಶ್ವರಂ
ಇಂತೆನಿಸಿ ಮೆರೆವ ನಾಲ್ಕುಬಾಗಿಲುಗಳೊಳಗೆ
ತಿಂಥಿಣಿಪ ಶಿವಲಿಂಗವಿಪ್ಪುವಾ ಪುರದೊಳಗೆ

ಪಂಪಾವಿರೂಪಾಕ್ಷನಲ್ಲಿಂದನಂತರಂ
ಹೆಂಪಿಂದ ಹನುಮಂತೇಶ್ವರನಿಪ್ಪನುರುತರಂ

ರಂಭೇಶ್ವರಂ ನಳೇಶ್ವರರಿರ್ಪರಂತಲ್ಲಿ
ಶಂಭುಮುಕ್ತೇಶ್ವರಂ ಮಲ್ಲಿಕಾರ್ಜುನರಲ್ಲಿ
ಮಂಗಳಾಸ್ಪದ ರಾಮಲಕ್ಷ್ಮಣೇಶ್ವರರಲ್ಲಿ
ಹಿಂಗದೆ ಮಹಾಕಾಳದೇವರೊಪ್ಪುವರಲ್ಲಿ
ವರದ ಮಾರ್ಕಂಡೇಶ್ವರಂ ನಿಂದನೊಲವಿಂದೆ
ಸುರರಾಜನಪ್ಪಿಂದ್ರೇಶ್ವರಂ ಮುಂದೆ
ಗುರುಸೋಮನಾಥನಿಪ್ಪಂ ಪುರದೊಳಲವಿಂದೆ
ಹಿರಿಯ ಹಂಪಾದೇವಿ ಚಿಕ್ಕ ಹಂಪಾದೇವಿ
ನಲವಿಂದೆಯೊಪ್ಪುತಿರೆ ನಿಂದನಜ್ಞೇಶ್ವರಂ
ನೆಲಸಿಹಂ ಮುಂದೆ ಪರಮಜ್ಞಾನಿ ಶಂಕರಂ
ತಾನಘೋರೇಶ್ವರಂ ದಾನಿ ನಾಗೇಶ್ವರಂ
ಶ್ರೀನಿಧಿಯುದಾರ ಕೇದಾರ ದೇವೇಶ್ವರಂ
ಕರಮೆಸೆವ ಲಿಂಗಛಾಯಾಮಲ್ಲಿಕಾರ್ಜುನಂ
ವರುಣೇಶ್ವರಂ ವಾಯುವೇಶ್ವರಂ ಪಾವನಂ
ತರದಿಂ ಕುಬೇರೇಶ್ವರಂ ರಂಜಿಸುವರಲ್ಲಿ
ಕರುಣಾದ್ರಿ ಈಶಾನ್ಯದೇವರೊಪ್ಪುವರಲ್ಲಿ
ಬ್ರಹ್ಮೇಶ್ವರಂ ದಯಾಪರನಗಸ್ತ್ರೇಶ್ವರಂ
ಬ್ರಹ್ಮಂಗಭೇದ್ಯಕೋಣೆಯ ಶಂಕರೇಶ್ವರಂ

ಕ್ರಮದಿಂದೆ ಜಡೆಯ ಶಂಕರದೇವನೊಪ್ಪಿರಲು
ವಿಮಳ ಪಾತಾಳಗಂಗೆಯ ಸೋಮನೊಪ್ಪಿರಲು
ಲೋಕಪಾವನದೇವರುಂ ಕ್ಷೋಜಶಂಕರಂ
ಲೋಕಕ್ಕೆ ರಂಜಿಪೇಕಾಂತರಾಮೇಶ್ವರಂ
ಇನ್ನು ನಾನರಿಯದನೇಕಲಿಂಗಂ ಕೂಡೆ
ಸನ್ನಿಹಿತವಿಪ್ಪವಾ ಪುರದ ಸುತ್ತಂ ನೋಡೆ
ಎಣಿಸಲಿನ್ನಳವೆ ಪಂಪಾಪುರದ ಮಹಿಮೆಯಂ
ತ್ರಿಣಯನುಂ ಲಿಂಗಮಯವಾದ ನಿಸ್ಸೀಮೆಯಂ

ಇನ್ನಿರ್ದ ತೀರ್ಥಸಂತಾನ × × × ಳ್ದಪೆಂ
ಸನ್ನುತದಿ ಶಿವನ ಕಾರುಣ್ಯದಿಂ ಪೊಗಳ್ದಪೆಂ

ಆರರೆ ಮನ್ಮಥತೀರ್ಥವಿಪ್ಪುದನುರಾಗದಿಂ
ವರಸೋಮತೀರ್ಥದಿಂ ಮಹಾಕಾಳತೀರ್ಥದಿಂ
ಎಸೆವ ತಾರಕ ತೀರ್ಥದಿಂ ಸೂರ್ಯತೀರ್ಥದಿಂ
ಪಸರಿಸುವ ವತ್ಸತೀರ್ಥಂ ರೈಭ್ಯತೀರ್ಥದಿಂ
ನಾಗಮಾರ್ಕಂಡೇಯ ಗಜಾಶ್ವತೀರ್ಥಂಗಳಿಂ
ಮೇಗೆ ಕಾದಂಬರೀ ಬ್ರಹ್ಮತೀರ್ಥಂಗಳಿಂ
ಇಂತೆನಿಸಿ ಮೆರೆವ ಹನ್ನೊಂದು ತೀರ್ಥಂಗಳವು
ಕಂಡುಮುದಹರನಶ್ವದಾನಮೆಂದೆನಿಪವವು

ಮತ್ತಂ ಮಹಾನದೀಶ್ವರೀ ತುಂಗಭದ್ರೆಯೊಳು
ಉತ್ತಮ ವಶಿಷ್ಠನಾಶ್ರಮವಿಪ್ಪುದೊಲುಮೆಯೊಳು
ಅಲ್ಲಿ ಪಾಪವಿನಾಶಿ ಎಂಬ ನಾಮದ ತೀರ್ಥ
ಅಲ್ಲಿಂ ದಶಾಶ್ವಮೇಧಾ ವಿಧಾನದ ತೀರ್ಥ
ಅದರೊಳಗೆ ಬದರಿಕಾಶ್ರಮವುಂ ಕೋಟಿತೀರ್ಥ
ವದರೊಳಗೆ ಶಬರಿಕಾಶ್ರಮವುಂ ಕೋಟಿತೀರ್ಥ
ಮಿಗೆ ದೇವಪೂತ ಪಂಪಾಸರೋವರ ಮುಂದೆ
ಸೊಗಯಿಸುವ ಕಾಮದಹನದ ಭಸಿತವದು ಮುಂದೆ
ಅಲ್ಲಿಂದ ಮಾಲ್ಯವಂತಾಚಳಮದೊಪ್ಪುವುದು
ಸಲ್ಲಲಿತ ಋಣವಿಮೋಚನ ತೀರ್ಥ ಒಪ್ಪುವುದು
ಉಲಿಯಕ್ಷತೀರ್ಥಂ ಗದಾತೀರ್ಥ ಧನುತೀರ್ಥ
ವರಶಂಖಚಕ್ರತೀರ್ಥಂ ಪದ್ಮದಳತೀರ್ಥ
ಹೇಮಕೂಟದ ಮೇಲೆ ವತ್ಸನಾಭಿಯ ತೀರ್ಥ
ಆ ಮಹಾಕ್ಷೇತ್ರದೊಳಗಗ್ನಿತೀರ್ಥಂ ಸ್ವಾರ್ಥ
ರಾಮತೀರ್ಥಂ ಸಂದ ಪಿತೃತೀರ್ಥವಂತಲ್ಲಿ
ಏಮಾತು ಮಾಂಗಲ್ಯತೀರ್ಥ ಒಪ್ಪುವುದಲ್ಲಿ
ಶ್ರೀರುದ್ರಪಾದವಿಪ್ಪುದು ಧರಾರಾಜನದು
ನಾರಾಯಣಾದಿ ದೇವರ್ಕಳಿಗಭೇದ್ಯವದು
ಇನ್ನುಳ್ಳ ತೀರ್ಥಮಂ ಪೆಸಗೊಳಲೆನ್ನಳವೆ
ಪನ್ನಗರ್ ಗರುಡಗಂಧರ್ವ ಸಂಕುಳರಳವೆ
ಹರಿಯುಲ್ಲಿಯುವಗಾಹವಿರ್ದು ಹರಿಪದವಿಯಂ
ಸರಸಿಜಭವಂ ಹರುಷದಿಂದಲಜಪದವಿಯಂ

ಸುರರಾಜನನುರಾಗದಿಂದಿಂದ್ರಪದವಿಯುಂ
ಪರಮ ಕಾರಣಿಕರೆಲ್ಲರು ಪರಮ ಪದವಿಯುಂ
ಪಡೆದರೆನೆ ತೀರ್ಥಮಹಿಮೆಯನೇನನೆಂದಪೆಂ
ವೃಡನ ಘನತರ ಸಕಳ ಸಾಮರ್ಥ್ಯವೆಂದಪೆಂ

ಇಂತಪ್ಪ ಲಿಂಗ ತೀರ್ಥಂಗಳಿಂದಂ ತೀವಿ
ಸಂತತಂ ಶಿವಭಕ್ತಕುಲವನೊಲವಿಂದೋವಿ
ಇಪ್ಪದೀ ಧರೆಗೆ ತೊಡವೆನಿಸಿ ಪಂಪಾಪುರಂ
ಸರ್ಪಭೂಷಣನ ಭಾವಭರಿತ ಪಂಪಾಪುರಂ
ಪೆಸರ್ಗೊಂಡರಘವನೊಣಗಿಸುವ ಪಂಪಾಪುರಂ
ಅಸಮಾಕ್ಷನಲ್ಲಿ ಕೂಡಿಸುವ ಪಂಪಾಪುರಂ
ಬಂದು ಮರೆಹೊಕ್ಕರಂ ಕಾವ ಪಂಪಾಪುರಂ
ಸಂದಣಿಸಿ ಬೇಡಿದುದನೀವ ಪಂಪಾಪುರಂ
ವಾರಣಾಸಿಗೆಯು ಮಿಗಿಲಾದ ಪಂಪಾಪುರಂ
ಮಾರಾರಿಗಂದು ಪುಗಲಾದ ಪಂಪಾಪುರಂ
ಭವದ ಭಯುವಂ ನಿವಾರಿಸುವ ಪಂಪಾಪುರಂ
ತವೆ × ದುರಿತವಂ ನಿದಾರಿಸುವ ಪಂಪಾಪುರಂ
ಶಿವಪುರಗಳೊಳಗೆ ಮಿಗಿಲಾದ ಪಂಪಾಪುರಂ
ಶಿವನ ಮನದೊಳಗೆ ಸಲೆ ನಲಿವ ಪಂಪಾಪುರಂ
ಸಕಳ ಪುಣ್ಯಂಗಳೋಲಗಿಪ ಪಂಪಾಪುರಂ
ಸಕಳ ಮುಕ್ತಿಗಳಲಂಕರಿಪ ಪಂಪಾಪುರಂ
ಅಣಿಮಾದಿಗು × × ಣವಗಲಗಿರ್ಪ ಪಂಪಾಪುರಂ
ತ್ರಿಣಯುನಂಗ × × ಂತಪ್ಪ ಪಂಪಾಪುರಂ
ಪುರಹರಂ ಕಾಮನಂ ಸುಟ್ಟ ಪಂಪಾಪುರಂ
ಗಿರಿಜೆ ರತಿಗಭಯುವಂ ಕೊಟ್ಟ ಪಂಪಾಪುರಂ
ಆ ಪುರದೊಳೊಪ್ಪುವಂ ಶಶಿಧರಂ ವಿಷಧರಂ
ಕಾಪಾಲಿ × ನದ್ಧರಹರಂ ಪುರಹರಂ
ದುರಿತ ತಿಮಿರ × × ದಿವಾಕರಂ ಭೀಕರಂ
ವರವೀವ ವಿತತ ಕರುಣಾಕರಂ ಶಂಕರಂ

ಸಕಳ ಚೈತನ್ಯ ವಿಸ್ತಾರಕಂ ಪ್ರೇರಕಂ
ಸುಕೃತ ಸುಕರೈಕ ನಿಸ್ಸಾರಕಂ ಪ್ರೇರಕಂ
ಕಾಲ ಮನ್ಮಥ ಗರ್ವ ಶೋಷಣಂ ಭೀಷಣಂ
ಬಾಲಚಂದ್ರನು ಕಳಾಪೋಷಣಂ ಭೂಷಣಂ
ಹರಿಸುರಪ ಕಮಳ ರಾಜಿತಂ ಭಾವಿತಂ
ಶರಣ ನಿಕರಸ್ತೋತ್ರ ಪೂಜಿತಂ ಯೋಜಿತಂ
ಅಖಿಳ ಲೋಕಾಗಮಂ ಖಂಡಿತಂ ಮಂಡಿತಂ
ನಿಖಿಳೈಕ ಶಾಶ್ವತ ಮಹೋನ್ನತಂ ಸ × × ನುತಂ
ನೆಲಸಿಪ್ಪನಖಿಳ ಗುರುಪಂಪಾ ವಿರೂಪಾಕ್ಷ
ಒಲವಿಂದ ಶಾಂತಗುರು ಪಂಪಾವಿರೂಪಾಕ್ಷ
ಅಸಮಗುರು ವಿಷಮಗುರು ಪಂಪಾವಿರೂಪಾಕ್ಷ
ಎಸೆವ ಗುರು ವಿಶ್ವಗುರು ಪಂಪಾವಿರೂಪಾಕ್ಷ
ಎನ್ನ ಗುರು ಚೆನ್ನಗುರು ಪಂಪಾವಿರೂಪಾಕ್ಷ
ಉನ್ನತ ಸದೈಕಗುರು ಪಂಪಾವಿರೂಪಾಕ್ಷ
ಇಂತು ಪಂಪಾವಿರೂಪಾಕ್ಷನಂ ಕೆಳೆಗೊಂಡು
ಸಂತತಂ ಶಿವಭಕ್ತಿ ನವರಸದ ಸವಿಗಂಡು
ಉರುತರಾವಳಿಯೊಳೊಪ್ಪಿತ್ತು ಪಂಪಾಪುರಂ
ಪರಮೇಶ್ವರನ ಸೆಜ್ಜೆ ಎನಿಪ ಪಂಪಾಪುರಂ

**ಕಂ||** ಪಂಪಾಕ್ಷೇತ್ರದ ಮಹಿಮೆಯ
ನಿಂಪಿಂದಿಂ ಪೇಳ್ವ ಕೇಳ್ವ ಭಕ್ತರ್ಗೆಲ್ಲಂ ।
ಸೊಂಪಿಂದ ಪರಮ ಸುಖಮನ
ಲಂಪಿಂದಂ ಕುಡುಗೆ ಹಂಪೆಯ ವಿರೂಪಾಕ್ಷಂ ॥

# ಸಂಸಾರ ವ್ಯಾಮೋಹ ನಿರಸನ ರಗಳೆ.

## ರಗಳೆ.

ಶ್ರೀ ವಿರೂಪಾಕ್ಷಲಿಂಗಪ್ರಭುವೆ ನೀನಿಂತು
ಭಾವಿಸುತೆ ಕಟ್ಟಿದ ಮಹಾ ಕಲ್ಪನೆಯನಾಂತು
ತಿರುಗುತ್ತಿರ್ದಪೆನಖಿಳಘೋರ ಸಂಸಾರದೊಳು
ಪುರಹರನೆ ನಿನ್ನನರಿಯದೆ ಜನ್ಮ ಶರಧಿಯೊಳು
ಎಂತೆಂತು ನೀನೆ ಕಟ್ಟಿದ ಪಟ್ಟ ಕಲ್ಪನೆಗೆ
ಅಂತಂತೆ ವೈಯ್ಯೊಡ್ಡಿಕೊಂಡೆನಾ ಯಾತನೆಗೆ
ಕಲ್ಲಾಗಿ ಮಣ್ಣಾಗಿ ಕುಳಿಯಾಗಿ ತೆವರಾಗಿ
ಹುಲ್ಲಾಗಿ ಲತೆಯಾಗಿ ಗಿಡುವಾಗಿ ಮರನಾಗಿ
ಪುಳುವಾಗಿ ಖಗವಾಗಿ ಕಪಿಯಾಗಿ ಮೃಗವಾಗಿ
ಬಳಸಿ ಬಂದಾವಾವ ಯೋನಿಗಂ ತನುವಾಗಿ
ಬೇಳಾಗಿ ಬೆಂಡಾಗಿ ಹಾಳಾಗಿ ಕಾಳಾಗಿ
ಗೋಳುಂಡೆಗೊಂಡು ಬಂದೆಂತಕ್ಕೆ ಪಶುವಾಗಿ
ಕುರುಡನೆಂತಕ್ಕೆ ಲಾವಗೆ ವಿಡಿದ ತೆರನಾಗೆ
ಧರೆಯೊಳಗೆ ಕಾತ ಕಾಳಿನ ನ್ಯಾಯದಂತಾಗೆ
ಎಂತಕ್ಕೆ ಮನುಜ ಜನ್ಮಕ್ಕೆ ಬರಲನುವಾಗೆ

ತಾಯಿ ತಂದೆಯ ಶುಕ್ಲ ಶೋಣಿತಂ ನೆನವಾಗೆ
ಆಯುವಿಂದವಯವಂ ಬಲಿವುತ್ತೊಂದಾಗೆ
ತಾಯ ಪೊಟ್ಟೆಯ ಕರುಳ್ಸುತ್ತಿ ಮಿಗೆ ಸೆಡೆಯುತಂ
ತಾಯೆತ್ತ ಮಗ್ಗುಲಾದತ್ತತ್ತ ಕೆಡೆಯುತಂ
ಉದರಗತ ಶಿಖಿಯ ಸೆಕೆ ತಾಗೆ ಮಿಗೆ ಕುಂದುತಂ
ಪುದಿದ ಮಾಸು ಮುಸುಂಕಲುಬ್ಬಸದೊಳೊಂದುತಂ
ಕ್ರಿಮಿ ಕೀಟಕ ಕ್ಷುದ್ರ ಜಂತುಪ್ಪೋಲ್ಬಳಿವುತಂ
ಶ್ರಮದಿಂದ ತಾಯಿ ಬಳಲೊಡನೊಡನೆ ಬಳಲುತಂ
ಕೀವು ನೆತ್ತರ್ನೆಣಂದೊದಹು ಮಿದುಳಂ ಮುತ್ತಿ
ಆವಾವ ಹೇಯಮುಂಟವರವರೊಳುಂ ಸುತ್ತಿ

ಇಂತು ನರಕದ ಬೇರವೆನಿಸಿದುದರದ ನಡುವೆ
ಸಂತವೊತ್ತು ಮಾಸಂ ಪೇಸಿಕೆಯ ನಡುವೆ
ಕತ್ತಲೆಯ ಕರುಳೊಳಗೆ ಮರುಳಂದದಿಂ ಬೆಳೆದು
ಒರ್ತಲೆಯ ಪುಳುವಿನಂತೆಂತಕ್ಕೆ ಬೆಳೆಬೆಳೆದು
ಅಲ್ಲಿ ಕಣ್ಬಲಿಯದಿರೆ ಕುರುಡನಾಗುತೆ ಬಂದು
ಅಲ್ಲಿ ಕಿವಿ ಬಲಿಯದಿರೆ ಕಿವುಡನಾಗುತೆ ಬಂದು
ಅಲ್ಲಿ ನಾಲಿಗೆ ಬೀಳೆ ಮೂಗನಾಗುತೆ ಬಂದು
ಅಲ್ಲಿ ಕೈ ಬಲಿಯದಿರೆ ಮುಡುಬನಾಗುತೆ ಬಂದು
ಅಲ್ಲಿ ಕಾಲ್ಬಲಿಯದಿರೆ ಹೆಳವನಾಗುತೆ ಬಂದು
ಅಲ್ಲಿ ತನು ಬಲಿಯದಿರೆ ಮುದುಡೆಯಾಗುತೆ ಬಂದು
ಜೀವಂ ಬಲಿಯದಿರಲ್ಪಸುರಿಳಿವುತಂ ಬಂದು
ಆವಾವ ಕಂಟಕಂಗಳ ನಡುವೆ ಸಲೆ ಬೆಂದು

ಬರುತ ಬರುತಡ್ಡವಾಯ್ದೊಡೆ ನೋವು ನೆರೆ ಮಿಕ್ಕು
ಉರವಣಿಸುತಲ್ಲಿ ಕತ್ತರಿ ಕಾರದೊಳು ಪೊಕ್ಕು
ಸರ್ವಾಂಗಮಂ ಕಡಿಯೆ ಮಿಡುಮಿಡನೆ ಮಿಡುಕುತ್ತ
ದುರ್ವಹಾವಸ್ಥೆಯಿಂ ತಾಯಿ ನೊಂದು ಬಳಲುತ್ತ
ತಾಯದೇಹಕ್ಕಲ್ಲಿ ದುಡುದುಡುಕೆಯಾಗುತ್ತಿರೆ
ಬಾಯುಳಿವುತೆನ್ನಸುಗೆ ಸಂದೇಹಮಾಗುತ್ತಿರೆ
ಇಂತು ನಾನಾ ವಿಧದ ಕಂಟಕಮುಮಂ ಕಳೆದು
ಮುಂತಿರ್ದ ಮಲಮೂತ್ರ ಹೇಸಿಕೆಂದಲೆಯಿಳಿದು
ಸೂಲಗಿತ್ತಿಯ ಕೆಯ್ಯ ಮೊರದೋಳ್ಮುದುಡಿ ಬೀಳ್ದು
ಮೇಲೆ ಮುಸುಕಿರ್ದ ಮಾಂಸಂ ಸುಲಿಯೆ ಹೊಲಸೇಳ್ದು
ನಡನಡನೆ ನಡುಗಿ ಬೆಚ್ಚಂಬಲಮುಮಂ ಪೊಯ್ದು
ಮಿಡಮಿಡನೆ ಮಿಡುಕೆ ಪೊಕ್ಕುಳ ಬಳ್ಳಿಯಂ ಕೊಯ್ದು
ಆರಾರಾರದೇನ ಮಾಳ್ಪರಂ ತದಕ್ಕೊಳಗಾಗಿ
ಬಾರದ ಭವಂ ಬರಿಸಲಂತದಕ್ಕೊಳಗಾಗಿ

ಏರಾದವುಣ್ಣೊಡಲ ಮೊಲೆಯ ಕೀವಂ ಪೀರ್ದು
ಮಾರಾಗಿ ಮಾಯೆ ಇಚ್ಚೆಗೆ ಬೆಚ್ಚುತೊಳಸಾರ್ದು

ತೊಟ್ಟಿಲೊಳ್ಮಲಮೂತ್ರದೊಂದುಂಡೆಯಾಗುತಂ
ಪಟ್ಟಿರ್ದು ಮೊಲೆಗೆ ನಾಲಿಗೆ ಗೀಳ್ತು ನೋವುತಂ
ಆಂಬಳಿಕೆ ಉಚ್ಛಿಷ್ಟವಿಳಿಯೆ ನೆರೆ ಜಾರಿಸುತೆ
ಬೆಂಬಳಿಯೊಳಿಳಿವ ಮೂತ್ರವನಲ್ಲಿ ಜಾರಿಸುತೆ
ಕೆರಕಾಗಿ ಕೆರೆಕೆರೆದು ಕಿವಿಯುನೊಳಗೊಂದುತಂ
ಪರಿದೊಗವ ಸಿಂಬುಳಂ ಶ್ಲೇಷ್ಮದೋಳ್ಮುಳುಗುತಂ
ಮಲವೆಂದು ತಾನರಿಯದೆಲ್ಲವುಂ ತಿನುತಿರ್ದು
ಪುಳುವೆಂಬುದೇನರಿಯದೆಲ್ಲವುಂ ತಿನುತಿರ್ದು
ನಡುವೆ ಬಾಲಗ್ರಹಂ ಪೊಡೆಯೆ ವಿಕೃತಿಗೊಂಡು
ನಡುವೆ ರೋಗಗಳಾಗೆ ಬೆದಬೆದನೆ ಬೆಂದು
ಇಂತು ಬಾಲ್ಯದ ನರಕದೊಳಗಾಳುತಿರ್ಪಲ್ಲಿ
ಸಂತತಂ ಘೋರದೊಳ್ತಿರುಗಿ ಬರುತಿರ್ಪಲ್ಲಿ
ನಿನ್ನ ನಾಮಂದದಿಂ ನೆನೆಯಲುಂಟೇ ದೇವ
ನಿನ್ನನಿಂತೆಂದರಿಯಲುಂಟೇ ಮಹಾದೇವ

ಬಳಿಕ ಯೌವ್ವನಮಾಗೆ ತಾಯ್ತಂದೆಗಳ್ಕಂಡು
ತಿಳಿದೊಂದು ಮದುವೆಯಂ ಮಾಡಲ್ಕನಂದಂದು
ಹಾಳೂರ ಕೋಳವಂ ಕೊರಲೊಳಿಕ್ಕುವ ತೆರದಿ
ಕೇಳ ಹೆಳವಂಗೆ ಸಂಕಲೆಯ ಬಂಧಿಪ ತೆರದಿ
ಪಶುವಿನ ಕೊರಲೊಳೊಂದು ಪಾಶವಂ ಬಿಗಿವಂತೆ
ಮಿಸುಕದಂತಲ್ಲೊಂದು ಎಳೆ ಮರವ ಬಿಗಿವಂತೆ
ದೈತೆಯಂ ತಂದೂರ್ಬಳಂ ಮದುವೆಯಂ ಮಾಡಿ
ಸ್ಥೈತಿಕ್ಕಿ ಬಿಡಬಾರದಂತೆ ನೇಹಂಗೂಡಿ
ಆ ಯೌವ್ವನದ ಗರ್ವದಿಂ ಧನದ ಗರ್ವದಿಂ
ತಾಯುಳ್ಳ ಪಿತರುಳ್ಳ ರೂಪುಳ್ಳ ಗರ್ವದಿಂ
ದುರ್ವಿಕಾರಂ ಮನವನೆತ್ತಿಕ್ಕೆ ಪರಿಪರಿದು
ದುರ್ಬೋಧರಂ ಕೂಡಿಕೊಂಡು ಸುತ್ತಂ ಸುಳಿದು
ಮದ್ದುಕುಣಿಕೆಯ ಕಾಯುನಾವಗಂ ನಲಿಯುತ್ತೆ
ಹೆಡ್ಡತನದಿಂ ಪರಿದು ನಾಯ್ಬಾಲನುಂಬಂತೆ
ಒತ್ತರಿಸಿ ಪಿತ್ಥವದು ತಲೆಗೇರಿತೆಂಬಂತೆ
ಒತ್ತಂಬದಿಂ ಗ್ರಹ ವಿಕಾರವೆಡೆಗೊಂಡಂತೆ

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

---

ರಾ॥ ಸಾ॥ **ಫ. ಗು. ಹಳಕಟ್ಟಿಯವರು** ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನೆಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ ರೂ. ೪—೮—೦**

ಪುಸ್ತಕ ದೊರೆಯುವ ಸ್ಥಳಃ—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**
ವಿಜಾಪುರ.

---

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ **"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೩ ]  ಅಗಸ್ಟ ೧೯೩೯.  [ ಸಂಚಿಕೆ ೧೧

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೩]                ಅಗಸ್ಟ ೧೯೩೯                [ಸಂಚಿಕೆ ೧೧

## ಬಸವೇಶ್ವರನು ಯಾವ ಬಿಜ್ಜಳನ ಕಾಲದಲ್ಲಿ ಇದ್ದನು.

(ಲೇಖಕಃ--- ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ)

ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ಸಂಪುಟ ೧೩ ಸಂಚಿಕೆ ೪ ೧೯೩೮ ಅಕ್ಟೋಬರ-ಡಿಸೆಂಬರ ಈ ಸಂಚಿಕೆಯಲ್ಲಿ ಶ್ರೀಯುತ ಶ್ರೀಕಂಠ ಶಾಸ್ತ್ರಿಗಳು ಎಮ್. ಏ. ಮೈಸೂರ ಇವರು ಬಸವೇಶ್ವರನ ವಿಷಯವಾಗಿ ಒಂದು ಲೇಖವನ್ನು ಬರೆದಿದ್ದಾರೆ. ಅದರಲ್ಲಿ ಅವರು ಬಸವೇಶ್ವರನು ಕಲಚೂರ್ಯ ಬಿಜ್ಜಳನಲ್ಲಿ ಇರದೆ ಎರೆಯಂಬರಾಗೆ ಎಂಬಲ್ಲಿ ಆಳುತ್ತಿದ್ದ ಸಿಂದ ವಂಶದವನಾದ ಬಿಜ್ಜರಸನ ಆಸ್ಥಾನದಲ್ಲಿ ಇದ್ದನೆಂದು ಸಿದ್ಧಮಾಡಲು ಪ್ರಯತ್ನಿಸಿದ್ದಾರೆ. 'ಎರೆಯಂಬರಾಗೆ' ಇದು ರಾಯಚೂರ ಜಿಲ್ಲೆಯಲ್ಲಿ ಇರುವ ಈಗಿನ ಎಲಬುರ್ಗಿ ಎಂಬ ಗ್ರಾಮವಿದ್ದು ಸಿಂದವಂಶದ ರಾಜರು ಇಲ್ಲಿ ಚಾಲುಕ್ಯರ ಮಾಂಡಲಿಕರಾಗಿ ಈಗಿನ ರೋಣ, ಬದಾಮಿ, ಲಿಂಗಸೂರ ಈ ತಾಲೂಕುಗಳಲ್ಲಿ ಆಳುತ್ತಿದ್ದರು. ಬಸವನು ಈ ಅರಸನ ಆಸ್ಥಾನದಲ್ಲಿರಲು ಶ್ರೀ ಶ್ರೀಕಂಠ ಶಾಸ್ತ್ರಿಗಳು ಕೆಲವು ಕಾರಣಗಳನ್ನು ಕೊಟ್ಟಿದ್ದು ಅವುಗಳನ್ನು ಪರೀಕ್ಷಿಸುವದೇ ಈ ಲೇಖದ ಮುಖ್ಯ ಉದ್ದೇಶವಾಗಿದೆ. ಸಿಂದವಂಶದ ಬಿಜ್ಜರಸನು ಕಲಚೂರ್ಯ ವಂಶದ ಬಿಜ್ಜಳನ ಮಗನಾದ ಸೋಮೇಶ್ವರನ ಮಾಂಡಲಿಕನಾಗಿ ೧೧೬೯-೭೦ ಈ ಇಸ್ವಿಯ ಸುಮಾರಿನಲ್ಲಿ ಈ ಭಾಗದಲ್ಲಿ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ.

ಶ್ರೀಮಾನ್ ಶ್ರೀಕಂಠಶಾಸ್ತ್ರಿಗಳು ತಮ್ಮ ಲೇಖದ ಆರಂಭದಲ್ಲಿ ಬಸವೇಶ್ವರನು ಐತಿಹಾಸಿಕ ಪುರುಷನೆಂದು ತಿಳಿಯಲು ಕೆಲವು ಶಿಲಾ

ಶಾಸನಗಳ ಆಧಾರಗಳನ್ನು ಕೊಟ್ಟಿದ್ದಾರೆ. ಅವು ಹಿರಿಯೂರ ಶಾಸನ, ಅರ್ಜುನವಾಡ ಶಾಸನ, ಚೌಡದಾನಪುರ ಶಾಸನ, ಕಲ್ಲೇದೇವರಪುರ ಶಾಸನ, ಮರಡಿಪುರ ಶಾಸನ ಇವುಗಳು ಇರುತ್ತವೆ. ಇವುಗಳಲ್ಲಿ ಕೆಲವು ಶಿವಶರಣರೊಂದಿಗೆ ಬಸವೇಶ್ವರನ ಬಗ್ಗೆ ಉಲ್ಲೇಖಗಳಿರುತ್ತವೆ. ಬಸವೇಶ್ವರನು ನಿಜವಾಗಿ ಐತಿಹಾಸಿಕ ಪುರುಷನೆಂದು ಹೇಳಲು ಈಗ ಸಾಕಷ್ಟು ಆಧಾರಗಳು ದೊರೆತಿರುತ್ತವೆ. ವಿಜಾಪುರ ಮತ್ತು ಕಲಬುರ್ಗಿ ಜಿಲ್ಲೆಗಳಲ್ಲಿರುವ ಶಿಲಾಶಾಸನಗಳನ್ನು ನಾವು ಇನ್ನೂ ಹೆಚ್ಚಿಗೆ ಸಂಶೋಧಿಸಿದಲ್ಲಿ ಬಸವೇಶ್ವರನ ಉಲ್ಲೇಖಗಳಿದ್ದ ಅನೇಕ ಶಿಲಾಶಾಸನಗಳು ದೊರೆಯಬಹುದೆಂದು ನಮಗೆ ತೋರುತ್ತದೆ. ಮುಂಬಯಿ ಸರಕಾರದವರು ಈಚೆಗೆ ಸ್ಥಾಪಿಸಿದ ಕನ್ನಡ ಸಂಸ್ಕೃತಿ ಸಂಶೋಧನ ಮಂಡಲದವರು ಈ ಶಾಸನಗಳ ಅಚ್ಚುಗಳನ್ನು ತೆಗೆದುಕೊಳ್ಳುವ ಕಾರ್ಯವನ್ನು ಬೇಗನೆ ಕೈಕೊಂಡರೆ ಈ ಸಂಶೊಧನ ಕಾರ್ಯಕ್ಕೆ ಬಹಳ ಸಹಾಯ ಮಾಡಿದಂತಾಗುತ್ತದೆ.

ಶ್ರೀ ಶ್ರೀಕಂಠ ಶಾಸ್ತ್ರಿಗಳು ಕೆಳಗೆ ಕಾಣಿಸಿದ ಬಸವೇಶ್ವರನ ವಚನದಿಂದ ಚಾಲುಕ್ಯ ರಾಜ್ಯವು ಪೂರ್ಣವಾಗಿ ಹಾಳಾದ ಬಳಿಕ ಅಂದರೆ೧೧೮೩ರ ತರುವಾಯ ಬಸವೇಶ್ವರನು ಜೀವಿಸಿದ್ದನೆಂದು ತೋರುತ್ತದೆಂತಲೂ ಆದ ಕಾರಣ ಅದಕ್ಕೂ ಮೊದಲು ಆಳಿದ ಕಲಚೂರ್ಯ ಬಿಜ್ಜಳನ ಕಾಲದಲ್ಲಿ ಅವನು ಇರುವದು ಅಸಂಭವವೆಂತಲೂ ಅಭಿಪ್ರಾಯಪಡುತ್ತಾರೆ. ಆ ವಚನವು ಯಾವದೆಂದರೆ "ಅರಸು ವಿಚಾರ ಸಿರಿಯು ಸಿಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು. ಕಲ್ಯಾಣ ಹಾಳಾಯಿತ್ತು ನೋಡಾ. ಒಬ್ಬ ಜಂಗಮದ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು, ಕೂಡಲಸಂಗಮದೇವ ನಿಮ್ಮ ಕವಳಿಕೆಗೆ" ಎಂದು ಇರುತ್ತದೆ.

ಆದರೆ ಅವರ ಅಭಿಪ್ರಾಯವು ತಪ್ಪೆಂದು ನಮಗೆ ತೋರುತ್ತದೆ. ಯಾಕಂದರೆ ಕಲಚೂರ್ಯ ಬಿಜ್ಜಳನು ೧೧೫೬ರಲ್ಲಿ ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿ ಮುಂದೆ ಅವನೂ ಅವನ ವಂಶಜರೂ ೧೧೮೩ರ ವರೆಗೆ ರಾಜ್ಯವಾಳಿದರು. ಆಮೇಲೆ ಚಾಲುಕ್ಯರು ಪುನಃ ತಮ್ಮ ರಾಜ್ಯವನ್ನು ಸಂಪಾದಿಸಿಕೊಂಡು ೧೧೮೯ರ ವರೆಗೆ ಆಳಿದರು. ಆದುದರಿಂದ ಬಸವೇಶ್ವರನು ತನ್ನ ವಚನದಲ್ಲಿ ಚಾಲುಕ್ಯರಾಯನ ಆಳಿಕೆ ತೆಗೆಯಿತ್ತು ಎಂದು ಹೇಳುವಲ್ಲಿ ೧೧೫೬ರಲ್ಲಿ ಅದು ಲಯವಾದದ್ದನ್ನು ಅವನು ಉಲ್ಲೇಖಿಸುತ್ತಿರ

ಬಹುದು. ಆದರೆ ಲೇಖಕರು ಈ ಸಂಗತಿಯನ್ನು ಲಕ್ಷಿಸದೆ ೧೧೮೭ರಲ್ಲಿ ಲಯವಾದ ಸಂಗತಿಯನ್ನು ಬಸವೇಶ್ವರನು ಈ ವಚನದಲ್ಲಿ ಉಲ್ಲೇಖಿಸುತ್ತಿರಬಹುದೆಂದು ಭಾವಿಸಿ ತಮ್ಮ ವಿಧಾನವನ್ನು ಅವರು ಮಾಡಿದ ಹಾಗೆ ನಮಗೆ ತೋರುತ್ತದೆ. ಆದರೆ ಹೀಗೆ ಭಾವಿಸಲು ಕಾರಣವಿರುವದಿಲ್ಲ.

ಹರೀಶ್ವರನು ಬಸವನು ಮಂಗಳವಾಡಕ್ಕೆ ಹೋದನೆಂದು ತನ್ನ ರಗಳೆಯಲ್ಲಿ ಬರೆದಿದ್ದು ಈ ಮಂಗಳವಾಡವು 'ತಾರಿಕಾಡು ನಾಡಿನ ಮಂಗಳವೇಡೆ' ಎಂತಲೂ ಇದು ಸಿಂದ ಬಿಜ್ಜರಸನ ಮೇಲಾಳಿಕೆಯಲ್ಲಿದ್ದಿತೆಂತಲೂ ಈ ಕಾರಣದಿಂದ ಬಸವನು ಈ ತರಿಕಾಡು ನಾಡನ್ನು ಆಳಿದ ಈ ಬಿಜ್ಜರಸನ ಆಸ್ಥಾನದಲ್ಲಿರಬಹುದೆಂತಲೂ ಅವರು ಊಹಿಸಿರುತ್ತಾರೆ.

ಆದರೆ ನಾವು ಬಸವೇಶ್ವರನು ಸಂಗಮೇಶ್ವರನ ಸ್ಥಾನದಿಂದ ಮಂಗಳವಾಡಕ್ಕೆ ಮೊದಲು ಹೋದನೆಂತಲೂ ಆಮೇಲೆ ಅವನು ಅಲ್ಲಿ ಕೆಲವು ವರ್ಷವಿದ್ದು ಬಿಜ್ಜಳನು ಚಾಲುಕ್ಯ ರಾಜ್ಯವನ್ನು ಸಂಪೂರ್ಣವಾಗಿ ಆಕ್ರಮಿಸಿದ ಬಳಿಕ ಕಲ್ಯಾಣಕ್ಕೆ ಹೋದನೆಂತಲೂ ಶಿವಾನುಭವ ಸಂಪುಟ ೧೩ ಜೂನ-ಜುಲೈ ಸಂಚಿಕೆಯಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಬಿಜ್ಜಳನು ಮಂಗಳವಾಡದಲ್ಲಿ ಇದ್ದದ್ದು ಶಿಲಾಲೇಖಗಳಿಂದ ಸಿದ್ಧವಾಗುತ್ತದೆ. ಈ ವಿಷಯವು ಶ್ರೀ ಶ್ರೀಕಂಠ ಶಾಸ್ತ್ರಿಗಳ ಲಕ್ಷಕ್ಕೆ ಬಾರದೆ ಬಸವನು ಕಲ್ಯಾಣದಲ್ಲಿಯೇ ಯಾವಾಗಲೂ ಇರಬಹುದೆಂದು ಭಾವಿಸಿ ಅವರು ಈ ವಿಧಾನವನ್ನು ಮಾಡಿದ ಹಾಗೆ ನಮಗೆ ತೋರುತ್ತದೆ.

ಶ್ರೀ ಶ್ರೀಕಂಠ ಶಾಸ್ತ್ರಿಗಳು ಇಲ್ಲಿ 'ತರಿಕಾಡುನಾಡ ಮಂಗಳವೇಡೆ' ಎಂದು ತಮ್ಮ ಲೇಖದಲ್ಲಿ ಬರೆದಿದ್ದಾರೆ. ಆದರೆ ಇದರಲ್ಲಿ ಕೆಲವೊಂದು ಹಸ್ತದೋಷವಿರಬಹುದೆಂದು ನಮಗೆ ತೋರುತ್ತದೆ. ಇದು 'ತರ್ದೇವಾಡಿ ನಾಡಿನ ಮಂಗಳವೇಡೆ' ಎಂದು ಇರಬಹುದು. ಹೀಗಿದ್ದರೆ ಸಿಂದ ಅರಸರ ಅಧೀನದಲ್ಲಿ ಈ ನಾಡು ಇದ್ದಿದ್ದಿಲ್ಲ. ಈ ವಿಷಯದಲ್ಲಿ ಅವರು ತಮಗೆ ದೊರೆತ ಆಧಾರವನ್ನು ಕೊಟ್ಟಿರುವದಿಲ್ಲ. ಜತ್ತಸಂಸ್ಥಾನದಲ್ಲಿ ಈಗಿರುವ ಮಡಿಗಿಹಾಳ ಶಾಸನದಲ್ಲಿ ಹೀಗೆ ಉಲ್ಲೇಖವಿದ್ದರೆ ಅದು ಸಿಂದರಾಜನಾದ ಬಿಜ್ಜಳನಿಗೆ ಸಂಬಂಧಿಸದೆ ಬಿಜ್ಜೆಯನಾಯಕನೆಂಬ ಇನ್ನೊಬ್ಬ ನಾಯಕನಿಗೆ ಸಂಬಂಧಪಟ್ಟಿರುತ್ತದೆ. ಈತನು ಈ ಭಾಗದಲ್ಲಿ ಒಬ್ಬ ಚಿಕ್ಕನಾಯಕನಿದ್ದು ಮಂಗಳವೇಡೆಯಲ್ಲಿ ಅವನು ಒಂದು ವೇಳೆ ಆಳುತ್ತಿರಬಹುದು. ಆದರೆ ಈ ನಾಯಕನಿಗೂ ಬಸವನಿಗೂ ಏನೂ ಸಂಬಂಧವಿರುವದಿಲ್ಲ.

ಪಾಲ್ಕುರಿಕೆ ಸೋಮ, ಭೀಮಕವಿ ಈ ಮೊದಲಾದವರು ಬಿಜ್ಜಳನು ಕಲಚೂರ್ಯನೆಂದು ಹೇಳುವದಿಲ್ಲಾದ್ದರಿಂದ ಬಸವೇಶ್ವರನು ಇದ್ದ ಬಿಜ್ಜಳನು ಈ ಕಲಚೂರ್ಯನಿರದೆ ಬೇರೊಬ್ಬ ರಾಜನಿರಬಹುದೆಂದು ಲೇಖಕರ ಅಭಿಪ್ರಾಯವಿದೆ. ಆದರೆ ನೂರಿನ್ನೂರು ವರ್ಷಗಳು ಗತಿಸಿದ ಬಳಿಕ ಈ ಕವಿಗಳು ಗ್ರಂಥಗಳನ್ನು ಬರೆದಿದ್ದಾರೆ. ಈ ಅವಧಿಯಲ್ಲಿ ಜನರಲ್ಲಿ ಪೂರ್ವದ ರಾಜರ ವಂಶಾವಳಿಗಳ ಸ್ಮರಣೆಯು ಉಳಿಯುವ ಸಂಭವವಿಲ್ಲ. ಆದ್ದರಿಂದ ಇಂಥ ದೋಷಗಳುಂಟಾದಲ್ಲಿ ಆಶ್ಚರ್ಯವಲ್ಲ. ಹೀಗಾಗುವದು ಆಗಿಂದಾಗ್ಗೆ ಕಂಡುಬರುತ್ತಿದೆ. ಆದ್ದರಿಂದ ಇಷ್ಟರಿಂದಲೇ ಬಸವನು ಬಿಜ್ಜಳನಲ್ಲಿ ಇದ್ದಿಲ್ಲವೆಂದು ಅನುಮಾನವನ್ನು ಮಾಡಲಿಕ್ಕೆ ಬರಲಾರದು.

ಕಲಚೂರ್ಯ ಬಿಜ್ಜಳನು ಶೈವನಾಗಿದ್ದನು. ಆದರೆ ಜೈನ ಮತ್ತು ವೀರಶೈವರು ಹೇಳುವ ಬಿಜ್ಜಳನು ಜೈನನು. ಆದುದರಿಂದ ಬಸವನು ಶೈವನಾದ ಕಲಚೂರ್ಯ ಬಿಜ್ಜಳನಲ್ಲಿ ಇರಲಿಕ್ಕಿಲ್ಲೆಂದು ಇನ್ನೊಂದು ಕಾರಣವು ತೋರಿಸಲ್ಪಟ್ಟಿದೆ. ಆದರೆ ಆಗಿನ ರಾಜರು ಎಲ್ಲ ಸಮಾಜದ ದೇವಾಲಯಗಳಿಗೂ ದಾನ ಕೊಟ್ಟದ್ದು ಕಂಡುಬರುತ್ತದೆ. ಬಿಜ್ಜಳನು ಅನೇಕ ಶಿವ ದೇವಾಲಯಗಳಿಗೂ ಜೈನ ದೇವಾಲಯಗಳಿಗೂ ದಾನ ಕೊಟ್ಟಿರುವದು ಶಿಲಾಶಾಸನಗಳಿಂದ ಕಂಡುಬರುತ್ತದೆ. ಆದ್ದರಿಂದ ಈ ವಿಧಾನದಿಂದಲೂ ಆವ ನಿರ್ಣಯವನ್ನು ಮಾಡಲಿಕ್ಕೆ ಬರುವದಿಲ್ಲ.

ಕಲಚೂರ್ಯ ಬಿಜ್ಜಳನು ರಾಜ್ಯ ಪರಿತ್ಯಾಗ ಮಾಡಿದನು. ಆದರೆ ವೀರಶೈವ ಗ್ರಂಥಕಾರರು ಹೇಳುವ ಬಿಜ್ಜಳನು ಘಾತಿಸಲ್ಪಟ್ಟನು. ಆದುದರಿಂದ ಅವರು ಬೇರೆ ಬೇರೆ ಎಂದು ಇನ್ನೊಂದು ಕಾರಣವು ತೋರಿಸಲ್ಪಟ್ಟಿದೆ. ಆದರೆ ಫ್ಲೀಟ ಸಾಹೇಬರು ಒಂದು ಶಿಲಾಶಾಸನದ ಆಧಾರದಿಂದ ಬಿಜ್ಜಳನು ರಾಜ್ಯ ಪರಿತ್ಯಾಗ ಮಾಡಿದನೆಂದು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ. ಆದರೆ ಆ ಶಿಲಾಶಾಸನದ ಮೂಲವನ್ನು ನಾವು ನೋಡುವದು ಬಹು ಅವಶ್ಯವದೆ. ಯಾಕಂದರೆ ಕೆಲವು ವರ್ಷಗಳ ಹಿಂದೆ ಒಬ್ಬ ಮಹನೀಯರು ನನಗೆ ಭೆಟ್ಟಿಯಾಗಿ ಅವರು ಈ ಶಿಲಾಶಾಸನವನ್ನು ಸ್ವತಃ ತಾವು ನೋಡಿ ಓದಿದ್ದನ್ನೂ ಆದರಲ್ಲಿ ಹಾಗೆ ಬರೆದಿಲ್ಲೆಂಬದನ್ನೂ ನನಗೆ ತಿಳಿಸಿದ್ದಾರೆ. (ಅವರು ನನ್ನನ್ನು ಕಂಡಾಗ್ಗೆ ನಾನು ಬಹಳ ಅಸ್ವಸ್ಥ ಸ್ಥಿತಿಯಲ್ಲಿ ಇದ್ದುದರಿಂದ ಅವರ ಹೆಸರು ನನ್ನ ಸ್ಮರಣೆಯಲ್ಲಿ ಇಲ್ಲದ್ದಕ್ಕೆ

ನಾನು ಬಹಳ ವಿಷಾದಿಸುತ್ತೇನೆ.) ಈ ವಿಷಯವು ಬಹಳ ಮಹತ್ವದ್ದಿರುವದರಿಂದ ಈ ಶಿಲಾಶಾಸನವನ್ನು ವಾಚಕರಲ್ಲಾರಾದರೂ ನೋಡಿ ನಿಜ ಸ್ಥಿತಿಯನ್ನು ಪ್ರಸಿದ್ಧಿಸಬೇಕೆಂದು ನನ್ನ ವಿನಂತಿ ಇದೆ. ಈ ಶಿಲಾಶಾಸನವು ಅರಸೀಕೆರೆಯಲ್ಲಿರುತ್ತದೆಂದು ತಿಳಿಯುತ್ತಿದೆ. ಬಿಜ್ಜಳನು ರಾಜ್ಯಪರಿತ್ಯಾಗ ಮಾಡಿದ್ದೇ ನಿಜವಾದರೆ ಬಸವೇಶ್ವರನ ಇತಿಹಾಸವನ್ನೇ ಬದಲು ಮಾಡುವ ಪ್ರಸಂಗವು ಬರುವದು.

ಲಕ್ಕಣ್ಣದಂಡೇಶನು ಬರೆದ ಶಿವತತ್ವ ಚಿಂತಾಮಣಿಯಲ್ಲಿ ಬಸವೇಶ್ವರನು ಸಿದ್ಧಾರ್ಥಿ ಸಂವತ್ಸರದಲ್ಲಿ ಹುಟ್ಟಿದನೆಂದು ಬರೆದಿರುತ್ತಾನೆ. ಈ ಸಂವತ್ಸರವು ೧೨ ನೇ ಶತಮಾನದಲ್ಲಿ ೧೧೩೯ ರಲ್ಲಿ ಬರುತ್ತದೆ. ಈ ವರ್ಷವನ್ನು ಗ್ರಹಿಸಿದಲ್ಲಿ ಬಸವೇಶ್ವರನು ಸಾಯುವ ಕಾಲಕ್ಕೆ ಕೇವಲ ೨೮ ವರ್ಷದವನಾಗಿದ್ದನು. ಇಷ್ಟು ಚಿಕ್ಕ ವಯಸ್ಸಿನಲ್ಲಿ ಒಂದು ಮಹತ್ವದ ಧಾರ್ಮಿಕ ಕ್ರಾಂತಿಯನ್ನು ಅವನು ಮಾಡುವದು ಅಸಂಭವವೆಂದು ಮತ್ತೊಂದು ಕಾರಣವು ತೋರಿಸಲ್ಪಟ್ಟಿದೆ. ಆದರೆ ಲಕ್ಕಣ್ಣದಂಡೇಶನು ಜೀವಿಸಿದ್ದು ೧೫ ನೇ ಶತಮಾನದಲ್ಲಿ. ಆದುದರಿಂದ ಅವನು ಹೇಳುವ ಜನ್ಮಸಂವತ್ಸರವು ಎಷ್ಟರ ಮಟ್ಟಿಗೆ ಗ್ರಾಹ್ಯವೆಂಬದನ್ನು ಹೇಳಲಿಕ್ಕೆ ಬರಲಾರದು. ಬಸವೇಶ್ವರನ ಜನ್ಮಸಂವತ್ಸರಗಳು ಅನೇಕವಾಗಿ ಹೇಳಲ್ಪಡುತ್ತವೆ. (ಶಿವಾನುಭವ ಸಂಪುಟ ೧ ಸಂಚಿಕೆ ೨ ನೋಡಿರಿ.) ಒಂದು ವೇಳೆ ಬಸವನು ಸಾಯುವ ಕಾಲಕ್ಕೆ ೨೮ ಅಥವಾ ೩೬ ವರ್ಷದವನಿದ್ದನೆಂದು ಭಾವಿಸಿದರೂ ಕೂಡ ಇಷ್ಟು ಚಿಕ್ಕ ವಯಸ್ಸಿನಲ್ಲಿ ಅವನು ಧಾರ್ಮಿಕ ಚಳವಳಿಯನ್ನು ಮಾಡಿರಲಿಕ್ಕಿಲ್ಲೆಂಬ ಅನುಮಾನವಾದರೂ ಸರಿಯಾದುದಲ್ಲ. ಇಂಥ ಚಿಕ್ಕ ವಯಸ್ಸಿನಲ್ಲಿಯೇ ಬಹುಜನರು ಮಹತ್ವದ ರಾಜಕೀಯ, ವಾಙ್ಮಯಾತ್ಮಕ, ಮತ್ತು ಧಾರ್ಮಿಕ ಕಾರ್ಯಗಳನ್ನು ಮಾಡಿದವರಿದ್ದಾರೆ. ಆದರೆ ಬಸವೇಶ್ವರನ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ಒಂದು ಮಹತ್ವದ ಧಾರ್ಮಿಕ ಚಳವಳಿಯು ಉತ್ಪನ್ನವಾಗಿತ್ತೆಂಬದನ್ನು ನಾವು ಲಕ್ಷಿಸಬೇಕು. (ಶಿವಾನುಭವ ಸಂಪುಟ ೧೩ ಸಂಚಿಕೆ ೬, ೭ ಇವುಗಳಲ್ಲಿಯ ಲೇಖಗಳನ್ನು ನೋಡಬೇಕು.) ಆದುದರಿಂದ ಬಸವೇಶ್ವರನ ಚಳವಳಿಗೆ ಈ ಹಿಂದಿನ ಚಳವಳಿಗಳು ಸಹಾಯವಾಗಿರಬೇಕು. ಮತ್ತು ಅವುಗಳಿಂದ ಅವನ ಕಾರ್ಯಗಳು ತೀವ್ರ ಫಲಕಾರಿಯಾಗಿರಬೇಕು. ಆದ್ದರಿಂದ ಈ ಕಾರಣವಾದರೂ ಸಯುಕ್ತಿಕವಾದುದಲ್ಲ.

ಅಲ್ಲದೆ ಬಸವೇಶ್ವರನ ಕುರುಹುಗಳು ಎಲಬುರ್ಗಿಯಲ್ಲಿ ಏನೂ ದೊರೆಯುವದಿಲ್ಲ. ಅವನು ಈ ಗ್ರಾಮದವನೆಂದು ವೀರಶೈವ ಅಥವಾ ಜೈನ ಪುರಾಣಗಳಲ್ಲಿ ಎಲ್ಲಿಯೂ ಹೇಳಿಲ್ಲ. ಅವನು ಮಂಗಳವೇಡೆ ಅಥವಾ ಕಲ್ಯಾಣಪಟ್ಟಣದಲ್ಲಿಯೇ ಇದ್ದನೆಂದು ಎಲ್ಲ ಗ್ರಂಥಗಳಲ್ಲಿ ಹೇಳಲ್ಪಡುತ್ತಿದೆ. ಮತ್ತು ಅವನ ಕುರುಹುಗಳು ಕಲ್ಯಾಣದಲ್ಲಿ ಈಗಲೂ ಅನೇಕ ದೊರೆಯುತ್ತವೆ.

ಶ್ರೀ. ಶ್ರೀಕಂಠಶಾಸ್ತ್ರಿಗಳು ತೋರಿಸುವ ಕಾರಣಗಳು ಪೂರ್ಣ ಬಲವಾದುವಲ್ಲ. ಪೂರ್ಣ ಆಧಾರಗಳು ದೊರೆಯದ ಹೊರ್ತು ಇಂಥ ಊಹೆ ಅಥವಾ ತರ್ಕಗಳಿಗೆ ಆಸ್ಪದ ಕೊಡಬಾರದೆಂದು ನನ್ನ ಸವಿನಯ ಸೂಚನೆ ಇದೆ.

---

ಅವರು ಪೂರ್ಣವಾಗಿ ಶಿವನ ಅಧೀನದಲ್ಲಿರುತ್ತಾರೆ. ಶಿವನ ಅಸ್ತಿತ್ವವನ್ನು ನಿಶ್ಚಿತವಾಗಿ ಸಿದ್ಧ ಮಾಡುವದರ ಸಲುವಾಗಿ ಈ ದರ್ಶನದಲ್ಲಿ ಸ್ವಲ್ಪ ಪ್ರಮಾಣದಿಂದ ತರ್ಕದ ಉಪಯೋಗ ಮಾಡಲ್ಪಟ್ಟಿದೆ. ಅದು ಎಲ್ಲರಿಗೂ ಗೊತ್ತೇ ಇದೆ. ಸೃಷ್ಟಿಯಲ್ಲಿ ಯಾವುದೋ ಒಂದು ಕ್ರಮ, ವ್ಯವಸ್ಥೆ, ತಾಳ ಕಾಣಿಸುತ್ತದೆ ಇದರ ಮೇಲಿಂದ ಇವೆಲ್ಲವುಗಳ ಹಿಂದೆ ಬುದ್ಧಿ ಮಾನ್ ಯಾವನೊಬ್ಬ ಕರ್ತೃ ಅಥವಾ ನಿಯಾಮಕನು ಇರಲೇಬೇಕು ಎಂದು ಅನ್ನುವದು ತರ್ಕವು. ಜೀವನ ದೃಷ್ಟಿಯಿಂದ ಶಿವನ ಕರ್ತೃತ್ವವು ಎಷ್ಟರ ಮಟ್ಟಿಗೆ ಪರಿಣಾಮಕಾರಕವೆಂಬುದೊಂದು ಪ್ರಶ್ನೆ. ಆದರಸಂಬಂಧ ಶೈವವು ಪ್ರಾಣಿಕರ್ಮಸಾಪೇಕ್ಷವೆಂದು ಮೇಲೆ ಹೇಳಿದೆ. ಅವರ ಮತದ ಪ್ರಕಾರ ಹೀಗೆ ಇದ್ದರೂ ಈಶ್ವರನ ಸ್ವಾತಂತ್ರ್ಯಕ್ಕೆ ಬಾಧೆ ಬರುವದಿಲ್ಲ. ಕರ್ತೃವಿಗೆ ಸಾಧನದ ಅವಶ್ಯಕತೆ ಇರುತ್ತದೆ. ಕಾರಣ ಅವನ ಕರ್ತೃತ್ವ ಕಡಿಮೆಯಾಗುವದೆಂದು ನಾವು ತಿಳಿದಿರುವೆವೊ ? ಮತ್ತೊಂದು. ದೇವರು ಸರ್ವವ್ಯಾಪಿಯಾದುದರಿಂದ ಸರ್ವಜ್ಞನು; ಇದರ ಹೊರತು ಅವನು ಒಂದು ವೇಳೆ ಕರ್ತಾ ಇದ್ದರೆ ಸರ್ವಜ್ಞನಿರಲೇಬೇಕು. ಕಾರಣ ಸಾಧನ ಗಳು, ಅಂಗಗಳು, ಫಲಗಳು ಇತ್ಯಾದಿ ಎಲ್ಲ ಪ್ರಕಾರದ ಜ್ಞಾನ ಇಲ್ಲದ ಹೊರತು ಕರ್ತೃವಿಗೆ ವಸ್ತುಗಳನ್ನು ನಿರ್ಮಿಸಲು ಶಕ್ಯವಿಲ್ಲ. ಈಶ್ವರನು ಸ್ವತಂತ್ರ ಕರ್ತೃ ಇರುತ್ತಾನೆಂದು ಭಾವಿಸಿದರೂ ಅವನಿಗೆ ದೇಹವಿಲ್ಲ ಎಂಬ ದೊಂದು ಆತಂಕವು ಬರುತ್ತದೆ—ಈ ಪ್ರಕಾರದ ಆಕ್ಷೇಪಗಳನ್ನೆತ್ತಲು ಈಗ ಬರುವದು. ಕಾರಣ ಘಟ (ಕೊಡ) ಮೊದಲಾದ ಕಾರ್ಯಕಾರಣನಾದ ಕರ್ತೃವು ಯಾವಾಗಲೂ ದೇಹ ಯುಕ್ತನೆಂದು ನಾವು ಅನ್ನುತ್ತೇವೆ. ಹೌದು, ಅವನು ಶರೀರವಾನ್ ಇರುವನೆಂದು ಭಾವಿಸಿದರೆ ಅವನು ನಮ್ಮಂತೆ ಕ್ಲೇಶಯುಕ್ತ, ಅಸರ್ವಜ್ಞ ಮತ್ತು ಪರಿಮಿತ ಶಕ್ತಿಯುವನಾ ಗುವನು—ಹೀಗೆ ತಿಳಿದುಕೊಳ್ಳುವ ಕಾರಣವಿಲ್ಲವೆಂದು ಇದಕ್ಕೆ ಶೈವರ ಉತ್ತರ. ಒಂದೇ ಅಶರೀರ ಆತ್ಮವು ನಿಜಶರೀರದಲ್ಲಿ ಚಲನವಲನಾದಿ ಕ್ರಿಯೆಗಳನ್ನು ಉತ್ಪನ್ನಮಾಡಲು ಶಕ್ಯವಾಗುತ್ತದೆ. ಇದಲ್ಲದೆ, ಈಶ್ವ ರನು ಸಶರೀರನೆಂದು ಒಂದು ವೇಳೆ ವಿಚಾರಿಸಿದರೂ ನೀವು ಅವನ ಮೇಲೆ ಆರೋಪಿಸುವ ದೋಷವು ಅಸಂಭವ. ಪರಮೇಶ್ವರನು ಮಲ, ಕರ್ಮ, ಮೊದಲಾದ ಪಾಶಗಳಿಂದ ಬದ್ಧನಿಲ್ಲ. ಕಾರಣ ಅವನ ಶರೀರವು ನಮ್ಮಂತೆ ಜಡವಿರಲು ಶಕ್ಯವಿಲ್ಲ. ಅದು ಕೇವಲ ಶಕ್ತಿರೂಪವು. ಅಂತೆಯೇ ಅವನು ಪಂಚ ಮಂತ್ರ ಸ್ವರೂಪನೆಂದು ವರ್ಣಿಸಲ್ಪಟ್ಟಿದ್ದಾನೆ.

'ಈಶಾನ'ವು ಅವನ ಮಸ್ತಕವು, 'ತತ್ಪುರುಷ'ವು ಮುಖವು, 'ಅಘೋರ'ವು ಹೃದಯು, 'ವಾಮದೇವ' ಗುಹ್ಯ, ಮತ್ತು 'ಸದ್ಯೋಜಾತ'ವು ಅವನ ಕಾಲು. ಸ್ವಂತ ಇಚ್ಛೆಯಿಂದ ನಿರ್ಮಿಸಿದ ಅವನ ದೇಹವು ನಮ್ಮಂತೆ ಇಲ್ಲ. ಅನುಗ್ರಹ, ತಿರೋಭಾವ (ಅಪ್ರಕಟಿತ), ಆದಾನ (ನಾಶ), ಸ್ಥಿತಿ (ರಕ್ಷಣ), ಮತ್ತು ಉದ್ಭವ (ಉತ್ಪತ್ತಿ) ಈ ಐದರ ಕಾರಣವು ಅವನು. ಪಂಚಮುಖ ಮೊದಲಾದ ಅವಯುವಗಳನ್ನು ತೋರಿಸುವ ಅವನ ಶರೀರದ ವೇದಾಂತವರ್ಣನೆಯುಂಟು. ಅವುಗಳ ವ್ಯವಸ್ಥೆಯೇನೆಂದು ವಿಚಾರಿಸಲು: ಭಕ್ತರಮೇಲೆ ಅನುಗ್ರಹ ತೋರಿಸಿದ ಆಕಾರವೆಂದು ಉತ್ತರ. ಕಾರಣ ನಿರಾಕಾರ ವಿಷಯದಲ್ಲಿ ಧ್ಯಾನ, ಪೂಜೆ, ಇತ್ಯಾದಿ ಮಾಡಬೇಕು. ಇಲ್ಲಿಯ ವರೆಗೆ ಪತಿಯ ಸಂಬಂಧವಾಯಿತು. ಇನ್ನು ಪಶು (ಜೀವ) ಇದರ ಕಡೆಗೆ ತಿರುಗೋಣ.

ಜೀವನ ಸ್ವರೂಪ ಸಂಬಂಧ ಶೈವ ಮತ್ತು ಉಳಿದ ಎಲ್ಲ ಮತಗಳಲ್ಲಿ ಭೇದ ಉಂಟು. ಅದನ್ನೇ ಅವರು ಅನಣು, ಕ್ಷೇತ್ರಜ್ಞ ಮೊದಲಾದ ಶಬ್ದಗಳಿಂದ ಕರೆಯುತ್ತಾರೆ. ಅವರ ಮತದ ಪ್ರಕಾರ ಜೀವನು ೧ ಚಾರ್ವಾಕ ಮತದಲ್ಲಿದ್ದಂತೆ ದೇಹರೂಪನಲ್ಲ. ಕಾರಣ ಹಾಗೆ ತಿಳಿದಲ್ಲಿ ಸ್ಮೃತಿಯು ಉಪಪತ್ತಿಯು ಅನ್ವಯಿಸುವದಿಲ್ಲ. ೨ ನೈಯಾಯಿಕರಂತೆ ಪ್ರಕಾಶ್ಯ (ಬುದ್ಧಿಗಮ್ಯ) ನಿಲ್ಲ. ೩ ಜೈನರ ಪ್ರಕಾರ ಅವ್ಯಾಪಕನಲ್ಲ. ೪ ಬೌದ್ಧರ ಪ್ರಕಾರ ಕ್ಷಣಿಕನಲ್ಲ. ಕಾರಣ ಅವನು ದೇಶಕಾಲದಿಂದ ಅನವಚ್ಛಿನ್ನ. ೫ ವೇದಾಂತದ ಪ್ರಕಾರ ಏಕಮೇವಾದ್ವಿತೀಯಮ್ ಅಲ್ಲ. ಕಾರಣ ಬೇರೆ ಬೇರೆ ಜೀವರಿಗೆ ಬೇರೆ ಬೇರ ಫಲಪ್ರಾಪ್ತಿ, ಇದರ ಮೇಲಿಂದ ಜೀವರ ಭಿನ್ನತೆಯು ಸಿದ್ಧವಾಗುವದು. ೬ ಮತ್ತು ಸಾಂಖ್ಯರ ಪ್ರಕಾರ 'ಅಕರ್ತಾ' ಅಲ್ಲ. ಕಾರಣ ಮುಕ್ತನಾದ ಮೇಲೆಯೂ ಕೂಡಾ ಅವನು ಸಕಲೈಶ್ವರ್ಯಸಂಪನ್ನನಾಗಿ ಶಿವಸಾಮೀಪ್ಯದಲ್ಲಿರುವನು.

ಪಶು ಮೂರು ಪ್ರಕಾರ:— ೧ ವಿಜ್ಞಾನಾಕಲ. ವಿಜ್ಞಾನದಿಂದ ಅಕಲವಾದದ್ದು. ಅಕಲನೆಂದರೆ ಭೋಗದ ಸಲುವಾಗಿ ಕಲಾ ಅಥವಾ ಸೂಕ್ಷ್ಮ ಶರೀರವಿಲ್ಲದವನು. ಅವನಿಗೆ ಮಲ ಒಂದೇ ಬಂಧನವು. ೨ ಪ್ರಲಯಾಕಲ—ಇವನು ಮಾತ್ರ ಮಲ ಮತ್ತು ಕರ್ಮ ಇವೆರಡರಿಂದ ಬದ್ಧ. ೩ ಸಕಲ—ಮಲ, ಮಾಯಾ, ಮತ್ತು ಕರ್ಮ ಈ ಮೂರರಿಂದ ಬಂಧಿಸಲ್ಪಡತಕ್ಕದ್ದು ಸಕಲ. ಇವುಗಳೊಳಗೆ ಮೊದಲನೆಯುದರಲ್ಲಿ ಎರಡು

ಪ್ರಕಾರಃ-೧ ಸಮಾಪ್ತ ಕಲುಷ-ಸರ್ವದೋಷ ರಹಿತನಾದವನಿಗೆ ಆನಂದ ಮೊದಲಾದ ಎಂಟು ಪ್ರಕಾರದ ವಿದ್ಯೆಗಳಿಂದ ಈಶ್ವರನ ಪದವು ಸಿಗುವದು. (ಎಂಟು ಪ್ರಕಾರದ ವಿದ್ಯೇಶ್ವರ-೧ ಅನಂತ ೨ ಸೂಕ್ಷ್ಮ ೩ ಶಿವೋತ್ತಮ ೪ ಏಕನೇತ್ರ ೫ ಏಕರುದ್ರ ೬ ತ್ರಿಮೂರ್ತಿಕ ೭ ಶ್ರೀಕಂಠ ೮ ಶಿಖಂಡಿ)

೨ ಅಸಮಾಪ್ತ ಕಲುಷಃ— ಇವನಿಗೆ ಏಳು ಕೋಟಿ ಮಂತ್ರದ ರೂಪವು ಸಿಗುವದು.

ಪ್ರಲಯಾಕಲಗಳು ಕೂಡ ಎರಡು ಪ್ರಕಾರ— ೧ ಪಕ್ವಪಾಶದ್ವಯ. ಇಲ್ಲಿ ಉಳಿದ ಎರಡು ಪಾಶಗಳು ಪಕ್ವವಾಗಿರುತ್ತವೆ. ಇವನಿಗೆ ಮೋಕ್ಷ ಪ್ರಾಪ್ತಿಯಾಗುವದು. ೨ ಇತರ ಕರ್ಮಪ್ರಕಾರ ವಿವಿಧ ಜನ್ಮಗಳನ್ನು ಧರಿಸುವನು. ಕಾರಣ ಇವನಿಗೆ ಪರ್ಯಷ್ಟಕವೆಂಬ ಸೂಕ್ಷ್ಮದೇಹವು ಲಭಿಸುವದು. ಇದು ಉತ್ಪತ್ತಿಯಿಂದ ಪ್ರಳಯದ ವರೆಗೆ ಅಥವಾ ಮೋಕ್ಷದ ವರೆಗೆ ಇರುವದು. ಈ ಪೃಥ್ವಿಯು ಮೊದಲು ೩೦ ತತ್ವಗಳಿಂದ ನಿರ್ಮಿಸಲ್ಪಟ್ಟಿರುತ್ತದೆ.

ಸಕಲದಲ್ಲಿಯೂ ಎರಡು ವಿಧಃ— ೧ ಪಕ್ವಕಲುಷ ೨ ಅಪಕ್ವಕಲುಷ. ಇವುಗಳಲ್ಲಿ ಮೊದಲನೆಯು ಪರಿಪಾಕ ಪ್ರಮಾಣದಲ್ಲಿ ತಮ್ಮ ಶಕ್ತಿಯನ್ನು ಅವನಿಗೆ ಅನುಕೂಲಮಾಡಿ ಪರಮೇಶ್ವರನು ಅವನಿಗೆ ೧೧೮ ಮಂತ್ರೇಶ್ವರ ಪದವನ್ನು ಕೊಡುವನು. ಎಂಟು ಮಂಡಲಿ, ಎಂಟು ಕ್ರೋಧ ಇತ್ಯಾದಿ ವೀರೇಶ, ಶ್ರೀಕಂಠ ಮತ್ತು ೧೦೦ ರುದ್ರ ಕೂಡಿ ೧೧೮. ಆಮೇಲೆ ಪುನಃ ಅವನು ಸ್ವತಃ ಗುರು ಆಗಿ ಅವನ ಅಧಿಕಾರಕ್ಕನುಗುಣವಾಗಿ ಅವನಿಗೆ ದೀಕ್ಷೆಯನ್ನು ಕೊಟ್ಟು ಪರಮೇಶ್ವರನು ಮೋಕ್ಷ ಪದವಿಯನ್ನು ಕೊಡುತ್ತಾನೆ.

ಅಪಕ್ವಕಲುಷ ಸಕಲ ಜೀವರಿಗೆ ಮಾತ್ರ ಅವರವರ ಕರ್ಮಾನುಸಾರವಾಗಿ ಜನ್ಮಧರಿಸಿ ಫಲೋಪಭೋಗ ಮಾಡಲು ಪರಮೇಶ್ವರನು ಕಳಿಸುವನು.

ಇನ್ನು ಮೂರನೆಯ ಪದಾರ್ಥ ಪಶು. ಇದರಲ್ಲಿ ನಾಲ್ಕು ವಿಧ ಮುಖ್ಯ. ೧ ಮಲ ೨ ಕರ್ಮ ೩ ಮಾಯಾ ೪ ರೋಧ ಶಕ್ತಿ.

೧ ಮಲಃ— ಇದು ಆತ್ಮದ ದೃಕ್ ಕ್ರಿಯಾಶಕ್ತಿಯನ್ನು ಆಚ್ಛಾದಿಸಿರುತ್ತದೆ.

೨ ಕರ್ಮಃ— ಫಲಾರ್ಥವಾಗಿ ಮಾಡಿದ ಕರ್ಮವು ಬೀಜಾಂಕುರ ನ್ಯಾಯದಿಂದ ಬಂಧಿಸಲ್ಪಡುವದು.

೩ ಮಾಯಾಃ— ಪ್ರಲಯದ ವೇಳೆಯಲ್ಲಿ ಇದರಲ್ಲಿ ಎಲ್ಲವೂ ಅಂತರ್ಗತವಾಗುವದು; ಉತ್ಪತ್ತಿ ಕಾಲದಲ್ಲಿ ಎಲ್ಲವೂ ಬಹಿರ್ಗತವಾಗುವದು. ಕಾರಣ ಈ ಶಕ್ತಿಗೆ ಮಾಯೆಯೆಂಬ ಹೆಸರು.

೪ ರೋಧಶಕ್ತಿಃ— ಈ ಈಶ್ವರ ಶಕ್ತಿಯು ಪಾಶದಂತೆ ಪುರುಷನ ಮೇಲೆ ಸತ್ತೆಯನ್ನು ನಡೆಯಿಸುವದು. ಕಾರಣ ಇದಕ್ಕೆ ಅಲಂಕಾರಿಕ ಭಾಷೆಯಿಂದ ಪಾಶವೆನ್ನುವರು.

ಮುಖ್ಯವಾಗಿ ಹೇಳುವದೇನಂದರೆಃ— ನಕುಲೀಶ ಪಾಶುಪತ ಮತದ ಪ್ರಕಾರ ಈಶ್ವರನಿರುತ್ತಾನೆ, ಅವನೇ ಕರ್ಮಫಲ ಕೊಡುತ್ತಾನೆ, ಆದರೆ ಕರ್ಮದ ಮೇಲೆ ಅವಲಂಬಿಸಿರುವದಿಲ್ಲ. ಕರ್ಮವು ನಿಮಿತ್ತ ಕಾರಣ ಮಾತ್ರ. ಆದರೆ ಶೈವರ ಪ್ರಕಾರ ಈಶ್ವರನ ಕರ್ತೃತ್ವವು ಕರ್ಮಸಾಪೇಕ್ಷವು. ಸಾಂಖ್ಯ, ಪಾತಂಜಲ, ವೇದಾಂತಿಗಳ ಮತದಂತೆ ಶೈವಮತದಲ್ಲಿಯೂ ಕೂಡಾ ಆತ್ಮನು ಕೇವಲ ಜ್ಞಾನರೂಪನು, ಅಂತಿಮ ಸತ್ಯವು ಶಿವನು. ಅವನು ಅನಾದಿ, ಅನಿರ್ಮಿತ, ದೋಷರಹಿತ, ಸರ್ವಶಕ್ತ, ಮತ್ತು ಸರ್ವಜ್ಞ. ಜೀವರನ್ನು ಶೃಂಖಲೆಗಳಿಂದ ಮುಕ್ತಮಾಡುವನು. ಕೊಡವನ್ನು ಮಾಡುವಾಗ ಅದಕ್ಕೆ ಮೂಲಕಾರಣನು ಕುಂಭಾರನು, ಬಡಿಗೆ ಮತ್ತು ತಿಗರಿಯು ನಿಮಿತ್ತಕಾರಣ, ಮಣ್ಣು ಸಮವಾಯಿ ಕಾರಣ. ಇದರಂತೆ ಜಗತ್ತಿನ ಮೂಲಕಾರಣ ಶಿವ, ನಿಮಿತ್ತಕಾರಣ ಶಕ್ತಿ, ಸಮವಾಯಿಕಾರಣ ಮಾಯೆ. ಹಣ್ಣಿನಲ್ಲಿಯ ರುಚಿಯು ಹಣ್ಣಿನ ತುಂಬ ಪಸರಿಸಿರುತ್ತದೆ. ಆ ರುಚಿಯು ಹಣ್ಣಿನಲ್ಲಿದ್ದರೂ ಬೇರೆಯಾಗಿ ಕಾಣುವದಿಲ್ಲ. ಅದರಂತೆ ಶಿವನು ಸರ್ವವ್ಯಾಪಿ. ಜಗತ್ತಿನಿಂದ ಭಿನ್ನವಿದ್ದರೂ ಭಿನ್ನವಾಗಿ ತೋರುವದಿಲ್ಲ. ಶಕ್ತಿಯು ಶುದ್ಧ ಜ್ಞಾನಸ್ವರೂಪನಾದ ಶಿವ ಮತ್ತು ಅಜ್ಞಾನ ಪ್ರಕೃತಿ ಇವೆರಡರ ಮಧ್ಯವರ್ತಿ ಬಂಧನವು. ಎಷ್ಟೋ ಸಲ ಉಮಾ ಎಂದು ಕರೆಯಲ್ಪಡುವ ಶಕ್ತಿಯು, ಶಿವನ ಪ್ರತಿಬಿಂಬ ಮಾತ್ರ; ಅದು ಸ್ವತಂತ್ರ ಅಸ್ತಿತ್ವವುಳ್ಳದ್ದಲ್ಲ. ಅಖಂಡ ವಸ್ತು ತನ್ನಷ್ಟಕ್ಕೆ ತಾನೇ ಇದ್ದರೆ ಶಿವ ಎಂದೆನ್ನುವರು; ಆದರೆ ವಸ್ತುಗಳ ಸಂಬಂಧದಲ್ಲಿರುವ ಅಖಂಡ ವಸ್ತುವಿಗೆ 'ಶಕ್ತಿ' ಎಂದೆನ್ನುವರು.

'ಸಿದ್ಧಾಂತ'ದಲ್ಲಿ ಶಿವನು ಆತ್ಮವಿದ್ಯಾಶಾಸ್ತ್ರದ ಅಖಂಡ ವಸ್ತು ಮಾತ್ರವಲ್ಲ, ಆದರೆ ಧರ್ಮದೇವನು. ಅವನು ಉದ್ಧಾರಕನು ಮತ್ತು ಗುರು; ಮಾನವಕೋಟಿಯ ಮೇಲೆ ಇದ್ದ ಅತ್ಯಂತ ಪ್ರೇಮದಿಂದ ಈ ರೂಪವನ್ನು ಧಾರಣಮಾಡುತ್ತಾನೆ. ಅವನು ಪ್ರೇಮಾತ್ಮಕ ದೇವರು.

ಬೀಜದಲ್ಲಿ ಬೊಡ್ಡಿ, ಟೊಂಗೆ, ಎಲೆಗಳು ಬೀಜದಿಂದ ಬೆಳೆಯುವ ಹಾಗೆ ಕಲದಿಂದ ಕ್ಷಿತಿ (ಭೂಮಿ) ಯ ವರೆಗಿನ ಈ ಜಗತ್ತು ಮಾಯೆಯಿಂದ ಉದ್ಭವಿಸುತ್ತದೆ.

ಮೋಕ್ಷಮಾರ್ಗದಲ್ಲಿ ಗುರುವಿಗೆ ಹೆಚ್ಚಿನ ಪ್ರಾಶಸ್ತ್ಯ. ಶಿವನು ಈ ಗುರುವಿನಲ್ಲಿದ್ದು, ಗುರುವಿನ ದೃಷ್ಟಿಪಥದಿಂದ ಶಿಷ್ಯನನ್ನು ನೋಡುತ್ತಾನೆ. ಶಿವನು ಮೇಲಿಂದ ಮೇಲೆ ಉಪಾಸಕರ ಭಕ್ತಿಯನ್ನು ಪರೀಕ್ಷಿಸಲು ಕಾಣಿಸುತ್ತಿದ್ದರೂ, ಅವನಿಗೆ ಅವತಾರಗಳಿಲ್ಲ. ಶಿವನಿಗೆ ಜನ್ಮವಿಲ್ಲ.

ಈ ದರ್ಶನದಲ್ಲಿ ನೈತಿಕ ಗುಣಗಳಿಗೆ ಹೆಚ್ಚು ಬೆಲೆ. ಸಿದ್ಧಿಯರನು ಹೇಳುವದೇನಂದರೆ:— ಸರ್ವ ಮಾನವ ಕುಲವನ್ನು ಪ್ರೀತಿಸಲಾರದವರಲ್ಲಿ ದೇವರಲ್ಲಿ ಪ್ರೀತಿಯಿರುವದಿಲ್ಲ. (ಬೈಬಲ್‌ದಲ್ಲಿಯಾದರೂ ಇದನ್ನೇ ಬೋಧಿಸಿದೆ. ಕಣ್ಣಿಗೆ ಕಾಣುವ ಬಂಧುಗಳನ್ನು ಪ್ರೀತಿಸದಿದ್ದರೆ, ಕಣ್ಣಿಗೆ ಕಾಣದ ದೇವರನ್ನು ಹೇಗೆ ಪ್ರೀತಿಸುವಿ ? )

ಕರ್ಮವನ್ನು ತಪ್ಪಿಸಲಶಕ್ಯವಾದರೂ, ಕಾರ್ಯ ಮಾಡಲೇಬೇಕು. ಮಾನವನ ಕಾರ್ಯಕ್ಕೆ ಯಾವಾಗಲೂ ಶಿವನ ಬೆಂಬಲವಿದೆ. ಕರ್ಮ ಮತ್ತು ಜ್ಞಾನ ಇವೆರಡರ ಕೂಡುವಿಕೆಯಿಂದ ಉದ್ಭವಿಸುವದು ಮುಕ್ತಿ. ಪ್ರತಿಯೊಂದು ನಿಜವಾದ ಈಶ್ವರ ವಾದದಲ್ಲಿ ಜಾತಿ ನಿರ್ಬಂಧಗಳ ಉಗ್ರತೆಯು ಮಾಯವಾಗುತ್ತಾ ಇದೆ. ಮಾಣಿಕ್ಯವಾಸಗರನು ಜಾತಿಪಂಥಗಳ ನಿಯಮ ನಿಬಂಧನೆಗಳನ್ನು ಉತ್ಪಾಟನ ಮಾಡಬೇಕೆಂಬ ಮನೋವೃತ್ತಿಯುಳ್ಳವನಿರದಿದ್ದರೂ, ಅವನಿಂದೀಚೆಯ ಶೈವರು, ಪಟ್ಟಣಧುಪಿಳ್ಳೈ, ಕಪಿಲರ, ಮತ್ತು ತೆಲಗು ಕವಿಯಾದ ವೇಮನ ಇವರು ಜಾತಿ ನಿರ್ಬಂಧಗಳ ವಿಷಯವಾಗಿ ವಿಮರ್ಶಾತ್ಮಕ ದೃಷ್ಟಿಯುಳ್ಳವರಾಗಿರುತ್ತಾರೆ. ತಿರುಮೂಲರನು ಒಬ್ಬನೇ ದೇವರಿದ್ದಂತೆ ಒಂದೇ ಜಾತಿ ಎಂದು ಗ್ರಹಿಸಿದ್ದನು. "ಒನ್ರೆ ಕುಲಮುಮ್ ಒರುವನೆ ದೇವನುಮ್". ೧೨ನೆಯ ಶತಮಾನದಲ್ಲಿ ಬಸವೇಶ್ವರರು ಒಂದು ಕ್ರಾಂತಿಕಾರಕ ಚಳವಳಿಯನ್ನು

ಪ್ರಾರಂಭಿಸಿದರು. ಬ್ರಾಹ್ಮಣರ ಜಾತಿ-ನಿರ್ಬಂಧಗಳ ವಿರುದ್ಧವಾಗಿ ಈ ಚಳವಳಿಯು ಪ್ರಾರಂಭಿಸಲ್ಪಟ್ಟಿತು. ಬಸವೇಶ್ವರರು ಸ್ವತಃ ಬ್ರಾಹ್ಮಣರು.

ಪಾಶ ಕಳಚಿ ಹೋದ ಮೇಲೆ ಜೀವವು ಶಿವಪದವಿಯನ್ನು ಪಡೆಯುತ್ತದೆ. ಅಂದರೆ ಶಿವನ ಪೂರ್ಣ ಹೋಲಿಕೆಯನ್ನು ಹೊಂದುತ್ತದೆ. ಮೋಕ್ಷವೆಂದರೆ ದೇವರೊಡನೆ ಒಂದಾಗುವದಲ್ಲ, ಆದರೆ ಈಶ್ವರ ಸಾಮೀಪ್ಯ ಪದವಿಯನ್ನು ಅನುಭವಿಸುವದು. ಸೇವಕ ಭಾವದಿಂದ ಅವನಲ್ಲಿ ಒಂದಾಗಿ ಅವನ ಪಾದದಲ್ಲಿ ಸೇವಕನಂತೆ ಇದ್ದು ಒಂದಾಗುವದು. ಶಿವನ ಸಂಬಂಧದ ಮೂಲಕ ಮೋಕ್ಷಸಮಯದಲ್ಲಿ ದೇಹವು ಲಿಂಗಮಯವಾಗುತ್ತದೆಂದು ವೀರಶೈವರು ನಂಬುವರು. ಉಳಿದವರು ಅತ್ಯದ್ಭುತ ಶಕ್ತಿಯು ಆತ್ಮಗಳಿಗೆ ಪ್ರಾಪ್ತವಾಗುವದೆಂದು ಪರಮಾತ್ಮನ ಕೂಡ ಐಕ್ಯತೆಯನ್ನು ಹೊಂದುವ ಪೂರ್ವ ಪ್ರತಿಯೊಬ್ಬ ಆತ್ಮನು ತನ್ನ ಕರ್ಮ-ಫಲವನ್ನು ಅನುಭೋಗಿಸಲೇಬೇಕು.

"ತಿಳಿಯಲನುಭವಸಾರವಿದು ಸಾಧಕರ್ಗೆ ನಿ।
ರ್ಮಳವಪ್ಪ ಕೈವಲ್ಯವನೆ ಮಾಳ್ಪುದು ॥"

— ನಿಜಗುಣ ಶಿವಯೋಗಿಗಳು.

# ವೀರಶೈವರ ಪೂರ್ವದ ಹೆಸರು ಆವುದು ?

(ಲೇಖಕ:— ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)

ವೀರಶೈವರ ಪೂರ್ವದ ಹೆಸರು ಆವುದು" ಎಂಬ ಶಿರೋಲೇಖದಕೆಳಗೆ ಶಿವಾನುಭವ ಪತ್ರಿಕೆಯ ಸಂಪುಟ ೧೩ ಸಂಚಿಕೆ ೭ ಪುಟ ೨೬೯ ಮತ್ತು ಆದರ ಮುಂದಿನ ಸಂಚಿಕೆಯ ಪುಟ ೨೯೪ ಇವುಗಳಲ್ಲಿ ಎರಡು ಲೇಖಗಳನ್ನು ನಾವು ಬರೆದಿದ್ದೇವೆ. ಈ ಲೇಖಗಳಲ್ಲಿ ವೀರಶೈವ ಮತ ಸೂಚಕ ಶಬ್ದಗಳನ್ನೂ ವಿಚಾರಗಳನ್ನೂ ಹೆಸರುಗಳನ್ನೂ ವಿವರಿಸಿ ಈ ವಿಷಯದ ಸಂಬಂಧವಾಗಿ ನಮಗೆ ಕಂಡುಬಂದ ಸಂಗತಿಗಳನ್ನು ಅವುಗಳಲ್ಲಿ ವಿವರಿಸಿದ್ದೇವೆ. ನಾವು ೭ ನೇ ಸಂಚಿಕೆಯಲ್ಲಿ ಶಿವಶರಣರಾದ ಅಮುಗಿದೇವ ಮತ್ತು ಏಕಾಂತದ ರಾಮಯ್ಯ ಮತ್ತು ೮-೯ ನೇ ಸಂಚಿಕೆಯಲ್ಲಿ ಬಸವೇಶ್ವರ ಮತ್ತು ಶಿವದೇವ ಇವರ ಶಿಲಾಶಾಸನಗಳನ್ನು ಪರೀಕ್ಷಿಸಿ ವೀರಶೈವರಿಗೆ ಈ೧೨ನೇ ಮತ್ತು ೧೩ನೇ ಶತಮಾನಗಳಲ್ಲಿ ಯಾವ ಹೆಸರುಗಳಿದ್ದವೆಂಬದನ್ನು ಕುರಿತು ನಮಗೆ ತೋರಿದ ವಿಚಾರಗಳನ್ನು ನಿವೇದಿಸಿದ್ದೇವೆ. ೭ ನೇ ಸಂಚಿಕೆ ಪುಟ ೨೭೫ ರಲ್ಲಿ ನಾವು ಹೇಳಿರುವದೇನೆಂದರೆ:-

"ವೀರಶೈವರು ಈ ಕಾಲಕ್ಕೆ ಭಕ್ತರು, ಶಿವಾಚಾರವುಳ್ಳವರು, ಮಹೇಶ್ವರರು, ಶರಣರು, ಲಿಂಗೈಕ್ಯರು, ಲಿಂಗವೇದಕರು, ಶಿವಯೋಗಿಗಳು, ಶಿವಸಮಯದವರು, ಶಿವಭಕ್ತರು ಎಂದು ಸಾಮಾನ್ಯ ಶಬ್ದಗಳಿಂದ ಕರೆಯಲ್ಪಡುತ್ತಿದ್ದರೆಂಬ ಅನುಮಾನವು ಉಂಟಾಗುತ್ತದೆ. ಅವರಲ್ಲಿ ವಿಶೇಷ ಜ್ಞಾನವುಳ್ಳವರಿಗೆ ಶಿವಯೋಗಿಗಳು, ಮಾಹೇಶ್ವರರು, ಸಿದ್ಧರು, ಶರಣರು, ಯತಿಗಳು, ಮುನಿಗಳು ಎಂಬ ಹೆಸರುಗಳು ಇದ್ದವೆಂದು ತೋರುತ್ತದೆ. ಪೂರ್ವದ ಶಿಲಾಶಾಸನಗಳಲ್ಲಿ 'ವೀರಶೈವ' ಎಂಬ ಶಬ್ದವು ಉಪಲಬ್ಧವಾಗುವದಿಲ್ಲ. ನನಗಂತೂ ಸಿಕ್ಕಿರುವದಿಲ್ಲ. ಯಾರಿಗಾದರೂ ಸಿಕ್ಕಿದ್ದರೆ ಅವಶ್ಯವಾಗಿ ತಿಳಿಸಬೇಕು. ಅದೇಮೇರೆಗೆ, 'ಲಿಂಗಾಯತ' ಈ ಶಬ್ದವೂ ಇರುವದಿಲ್ಲ. ಈ ಸಂಗತಿಯನ್ನು ನಾವು ಲಕ್ಷಿಸದಿದ್ದರೆ ಪುರಾತನ ಶಿಲಾಸಂಶೋಧನೆಯಲ್ಲಿ ವೀರಶೈವ ಇತಿಹಾಸವನ್ನು ಕಂಡುಹಿಡಿಯುವಲ್ಲಿ ನಾವು ತಪ್ಪುದಾರಿಯನ್ನು ಹಿಡಿಯುವ ಸಂಭವವದೆ" ಈಪ್ರಕಾರ ನಾವು ಅಭಿ

ಪ್ರಾಯಪಟ್ಟಿದ್ದೇವೆ. ಮುಂದೆ ಸಂಚಿಕೆ ೮-೯ ಪುಟ ೩೦೭ ಇದರಲ್ಲಿ ನಾವು ಪಟ್ಟ ಅಭಿಪ್ರಾಯವೇನಂದರೆ:—

"ಇವೆಲ್ಲವೂ (ಶಿಲಾಶಾಸನಗಳು) ಬಸವೇಶ್ವರನ ತರುವಾಯ ಒಂದು ನೂರು ವರ್ಷಗಳ ಒಳಗೆ ಹುಟ್ಟಿದವು ಇರುತ್ತವೆ. ಆಗ್ಗೆ ವೀರಶೈವ ಮಾರ್ಗವು ದೇಶದಲ್ಲೆಲ್ಲ ಪ್ರಸಾರ ಹೊಂದಿರಲಿಕ್ಕೆಬೇಕು. ಆಗ ಅನೇಕ ಪುಣ್ಯಪುರುಷರು ಉದ್ಭವಿಸಿ ಆಗಿನ ರಾಜರಾದ ಯಾದವ ಭೂಮಿಪರಿಂದಲೂ ಅವರ ಮಾಂಡಲಿಕರಿಂದಲೂ ವಿಶೇಷ ಮನ್ನಣೆಯನ್ನು ಹೊಂದಿ ಅನೇಕ ಭೂದಾನಗಳನ್ನು ಅವರು ಪಡೆದಿದ್ದಾರೆ. ಅವರೆಲ್ಲರೂ ವೀರ ಶೈವ ಮತತತ್ವ ಬೋಧಕ ಶಬ್ದಗಳಿಂದ ಈ ಶಿಲಾಶಾಸನಗಳಲ್ಲಿ ವರ್ಣಿಸಲ್ಪಟ್ಟಿದ್ದಾರೆ. ಹೀಗಿದ್ದರೂ ಕೂಡ 'ವೀರಶೈವ' ಎಂಬ ಹೆಸರು ಮಾತ್ರ ಎಲ್ಲಿಯೂ ಬಂದಿಲ್ಲ. ಇದರ ಮೇಲಿಂದ ಈ ಕಾಲದಲ್ಲಿ ವೀರಶೈವರು "ವೀರಶೈವ" ಒಂಬ ಹೆಸರಿನಿಂದ ಕರೆಯಲ್ಪಡದೆ ಕೇವಲ ಶಿವಬೋಧಕವಾದ ಶಬ್ದಗಳಿಂದ ಎಂದರೆ ಶಿವಸಮುಯದವರು, ಶಿವಭಕ್ತರು, ಶೈವರು, ಎಂಬ ಶಬ್ದಗಳಿಂದ ಕರೆಯಲ್ಪಡುತ್ತಿದ್ದರೆಂದು ತೋರುತ್ತದೆ" ಎಂಬದಾಗಿ ನಾವು ಅಲ್ಲಿ ಉಲ್ಲೇಖಿಸಿದ್ದೇವೆ.

ಇನ್ನುಮೇಲೆ ಈಗಿನ ಲೇಖದಲ್ಲಿ ನಾವು ಬಸವಣ್ಣನವರ ವಚನ ಗ್ರಂಥವನ್ನು ತೆಗೆದುಕೊಂಡು ಅದರಲ್ಲಿ ವೀರಶೈವರು ಹೇಗೆ ಕರೆಯಲ್ಪಟ್ಟಿದ್ದಾರೆಂಬದನ್ನು ವಿವೇಚಿಸಲು ಯತ್ನಿಸುತ್ತೇವೆ. ಇಲ್ಲಿಯೂ ಕೂಡ ಶಿಲಾಶಾಸನಗಳ ಆಧಾರದ ಮೇಲಿಂದ ಯಾವ ಅಭಿಪ್ರಾಯವನ್ನು ಹೊಂದಿರುವೆವೋ ಅದೇ ಅಭಿಪ್ರಾಯವು ದೃಢಪಡುತ್ತದೆ. ಬಸವನ ವಚನಗಳಲ್ಲಿ ಎಲ್ಲಿಯೂ 'ವೀರಶೈವ' ಅಥವಾ 'ಲಿಂಗಾಯತ' ಎಂಬ ಹೆಸರು ಬಂದಿಲ್ಲ. ಇದು ವಾಚಕರಿಗೆ ಆಶ್ಚರ್ಯವನ್ನುಂಟುಮಾಡದಿರಲಾರದು. ಆದರೆ ನಿಜ ಸ್ಥಿತಿಯನ್ನು ನಾವು ಒಪ್ಪಲೇಬೇಕಾಗುತ್ತಿದೆ.

ಈ ದೃಷ್ಟಿಯಿಂದ ನಾವು ಈ ವಚನ ಗ್ರಂಥವನ್ನು ಪರಿಶೀಲಿಸಿ ಕೆಳಗೆ ಕಾಣಿಸಿದ ವಚನಗಳು ಮಹತ್ವದವೆಂದು ನಮಗೆ ತೋರುತ್ತದೆ. ಈ ವಚನಗಳ ಸಮಗ್ರ ಭಾಗಗಳನ್ನು ನಾವು ಲೇಖ ವಿಸ್ತಾರಭಯಕ್ಕಾಗಿ ಕೆಳಗೆ ಕೊಡದೆ ಅವುಗಳ ಆವಶ್ಯಕ ಭಾಗಗಳನ್ನು ಮಾತ್ರ ಕೊಟ್ಟಿದ್ದೇವೆ. ಇಡೀ ಮೂಲ ವಚನವನ್ನು ನೋಡಲಪೇಕ್ಷೆಯುಳ್ಳವರು ಅಚ್ಚುಹಾಕಿದ ಬಸವೇಶ್ವರನ ೩ನೇ ಆವೃತ್ತಿಯನ್ನು ನೋಡಬೇಕೆಂದು ನಮ್ಮ ವಿನಂತಿ ಇದೆ.

ಪುಟ ೨೩-೩೮ಃ— 'ಗಿರಿಗಳ ಮೇಲೆ ಹಲವು ತರುಮರಾದಿಗಳಿದ್ದು ಶ್ರೀಗಂಧದ ಸನ್ನಿಧಿಯುಲು ಪರಿಮಳವಾಗವೇ ? ಲಿಂಗವಂತನ ಸನ್ನಿಧಿ ಯಿಂದ ಹಿಂದಣ ದುಸ್ಸಂಗ ಕೆಡುವುದು" ಎಂಬ ವಚನವಿದೆ. ಇದರಲ್ಲಿ ಲಿಂಗವಂತ ಎಂಬ ಶಬ್ದವು ಉಪಯೋಗಿಸಲ್ಪಟ್ಟಿದೆ.

ಪುಟ ೨೯-೭೯ಃ— ಇಲ್ಲಿ "ಲಾಂಛನ ಹೊರಗೆ ಬಂದಿರಲು ಒಳಗೆ ಲಿಂಗಾರ್ಚನೆ ಎಂತಯ್ಯ ? ಮುಖದಲ್ಲಿ ಕಟ್ಟಿದ ಕನ್ನಡಿ ಮೂಗಿನ ಮೇಲಣ ಕತ್ತಿ ಸಮಯಾಚಾರವೆಂತಯ್ಯ ?" ಇಲ್ಲಿ ಸಮಯಾಚಾರ ಈ ಶಬ್ದವು ಬಂದಿದೆ.

ಪುಟ ೩೩-೧೦೩ಃ— "ಅರ್ಥ ಪ್ರಾಣಾಭಿಮಾನದಲ್ಲಿ ವಂಚನೆ ಇಲ್ಲದ ಭಕ್ತಿ ಸಮಯಾಚಾರ" ಎಂದು ಇದೆ. ಇಲ್ಲಿ ಸಮಯಾಚಾರ ಎಂಬ ಶಬ್ದವು ಉಪಯೋಗಿಸಲ್ಪಟ್ಟಿದೆ.

ಪುಟ ೫೭-೧೩೫ಃ— "ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತನೆಂಬರು ಎನ್ನ ಸಮಯಾಚಾರಿ ಎಂಬರು". ಸಮಯಾಚಾರಿ ಎಂದು ಬಸವಣ್ಣನು ಕರೆಯಲ್ಪಟ್ಟಿದ್ದಾನೆ.

ಪುಟ ೬೩-೧೭೭ಃ— ಇಲ್ಲಿ "ಯತ್ರ ಮಾಹೇಶ್ವರಸ್ತತ್ರ ಸನ್ನಿಹಿತನಾಗಿ" ಇಲ್ಲಿ 'ಮಾಹೇಶ್ವರ' ಈ ಶಬ್ದವು ಉಪಯೋಗಿಸಲ್ಪಟ್ಟಿದೆ. ಮಾಹೇಶ್ವರ ಮತ್ತು ಜಂಗಮ ಈ ಶಬ್ದಗಳು ಗ್ರಂಥದ ತುಂಬೆಲ್ಲ ಬಂದಿವೆ. ಆದ್ದರಿಂದ ಈ ಶಬ್ದಗಳಿದ್ದ ವಚನಗಳನ್ನು ನಾನು ಇಲ್ಲಿ ಉಲ್ಲೇಖಿಸುವದಿಲ್ಲ.

ಪುಟ ೬೪-೧೭೮ಃ— ಇಲ್ಲಿ "ಹೋಯಿತ್ತೆಂಬ ಗುಣ ಉಳ್ಳನ್ನಕ್ಕ ನಿಮಗೆ ದೂರ, ನಿಮ್ಮವರಿಗೆ ಮುನ್ನವೇ ದೂರ, ಶಿವಾಚಾರಕ್ಕೆ ಅಲ್ಲಿಂದತ್ತತ್ತ ದೂರ'' ಎಂದು ಇದೆ. 'ಶಿವಾಚಾರ' ಈ ಶಬ್ದದಿಂದ ವೀರಶೈವ ಮತವು ಇಲ್ಲಿ ಸಂಬೋಧಿಸಲ್ಪಟ್ಟಿದೆ.

ಪುಟ ೬೭-೧೯ಃ— "ಅಂದೇಕೆ ಬಾರರು ? ನೀರಿಗೆ ನೇಣಿಂಗೆ ಹೊರಗಾದಂದು ಸಮಯಾಚಾರಕ್ಕೆ ಒಳಗಾದಂದು'' ಎಂದು ಇದ್ದು ಇಲ್ಲಿ ವೀರಶೈವಾಚಾರಕ್ಕೆ ಸಮಯಾಚಾರವೆಂದು ಹೇಳಿದೆ.

ಪುಟ ೧೦೧-೧೨೬ಃ— ಇಲ್ಲಿ "ಲಿಂಗವಂತನು ಲಿಂಗವಂತನಿಗೆ ಬುದ್ಧಿಯ ಹೇಳುವಲ್ಲಿ ಅವರ ಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ. ಲಿಂಗಭಕ್ತನು ಲಿಂಗಪಥವ ಹೇಳಿದರೆ ಮಚ್ಚರಿಸುವರ ಮೆಚ್ಚ

ಕೂಡಲಸಂಗಮದೇವ" ಇಲ್ಲಿ ಲಿಂಗವಂತ, ಲಿಂಗಭಕ್ತ, ಲಿಂಗ ಪಥ ಈ ಶಬ್ದಗಳು ಬಂದಿವೆ.

ಪುಟ ೧೦೫-೧೫೨ಃ— ಇಲ್ಲಿ "ಮುನ್ನಿನ ಪುರಾತನರು ಪುರುಷ ಪ್ರತಿಯರು ಆಲಿಸಿದ ಆಯತವ" ಎಂದು ಇದ್ದು ಪ್ರತಿಗಳು ಎಂಬ ಶಬ್ದವಿದೆ.

ಪುಟ ೧೦೬-೧೫೮ಃ— "ಲಿಂಗ ವಶದಿಂ ಬಂದ ನಡೆಗಳು ಲಿಂಗ ವಶದಿಂ ಬಂದ ನುಡಿಗಳು ಲಿಂಗವಂತರು ತಾವು ಅಂಜಲೇಕೆ?" ಲಿಂಗವಂತ ಎಂದು ಈಗ ಸಹ ಪ್ರಚಲಿತವಿರುವ ಶಬ್ದವೇ ಬಂದಿದೆ.

ಪುಟ ೧೧೦-೯ಃ— 'ಆದಿಯಲಾಗಲಿ, ಶಾಸ್ತ್ರದಲಾಗಲಿ, ಸಮಯದಲಾಗಲಿ ಎನ್ನವರೆನ್ನನು ಎನ್ನವರೆನ್ನನು" ಎಂದು ಇದ್ದು 'ಸಮಯ' ಈ ಶಬ್ದವು ವೀರಶೈವ ಮತಕ್ಕೆ ಉಪಯೋಗಿಸಲ್ಪಟ್ಟಿದೆ.

ಪುಟ ೧೧೭-೨ಃ — "ಜಂಗಮ ಭಕ್ತಿಯ ಮಾಡಬಹುದಲ್ಲದೆ ಸಮಯ ಭಕ್ತಿಯ ಮಾಡಬಾರದು. ಸಮಯ ಭಕ್ತಿಯ ಮಾಡಬಹುದಲ್ಲದೆ ಸಮಯ ಸಂತೋಷವ ಮಾಡಬಾರದು." ಎಂದಿದೆ.

ಪುಟ ೧೧೮-೩ಃ — ಇಲ್ಲಿ "ಆಚಾರವ ಶಿವಾಚಾರವ ಮಾಡುವೆ" ಎಂದು ಇದೆ. ಇಲ್ಲಿ ವೀರಶೈವವನ್ನು ಶಿವಾಚಾರವೆಂದು ಬಸವಣ್ಣನವರು ಕರೆದಿದ್ದಾರೆ.

ಪುಟ ೧೨೩-೪ಃ — ಇಲ್ಲಿ "ಶಿವಾಚಾರವೆಂಬುದೊಂದು ಬಾಳಭಾಯಿಧಾರೆ" ಎಂದು ಇದೆ.

ಪುಟ ೧೨೭-೮ಃ— "ಆಚಾರ ಶಿವಾಚಾರವೆಂದರಿದ ಕಾರಣ, ಷಡ್ದರ್ಶನಂಗಳೆಲ್ಲ ತಮತಮಗೆ ಶರಣೆನುತಿರ್ದವು. ಮಹತ್ವದ ಸಮಯಾದಿ ಶೈವಂಗಳೆಂಬವೆಲ್ಲ ಶರಣು ಶರಣು ಎನುತಿರ್ದವು" ಎಂದು ಇದೆ. ಇಲ್ಲಿ ಶಿವಾಚಾರ, ಸಮಯ ಈ ಶಬ್ದಗಳು ಬಂದಿವೆ.

ಪುಟ ೧೨೭-೧೦ಃ— "ಜಂಗಮದಲ್ಲನುಭಾವ ಸಮಯಾಚಾರ ಲಿಂಗದನುದಿನ ವೇಳೆ...ಲಿಂಗ ಜಂಗಮದಲ್ಲಿ ಲೀಯ್ಯವಾದ ಸಮಯಾಚಾರ" ಎಂದು ಇದೆ.

ಪುಟ ೧೩೩-೨ಃ— "ಶರಣ ಸಜ್ಜನಿಕೆ, ಸಮಯಾಚಾರ, ನಿಜವ್ರತವು ದುರಾಚಾರಿಗಳಿಗಳವಡದು" ಎಂದು ಇದ್ದು ಇಲ್ಲಿ ಶರಣ, ಸಮಯಾಚಾರ, ನಿಜ ವ್ರತ ಎಂಬ ಶಬ್ದಗಳು ಉಪಯೋಗಿಸಲ್ಪಟ್ಟಿವೆ.

ಪುಟ ೧೩೪೬:— "ಮರುಳ ಕಂಡ ಕನಸಿನ ಪರಿಯಂತೆ ಶಿವಾಚಾರ". ಇಲ್ಲಿ 'ಶಿವಾಚಾರ' ಎಂಬ ಶಬ್ದವು ಇದೆ.

ಪುಟ ೧೪.೭-೧:— "ಎನಗೆ ಗುರುವಿನ ಪ್ರಸಾದ. ನಿನಗೆ ಚನ್ನನ ಪ್ರಸಾದ. ಎನಗೆಯೂ ನಿನಗೆಯೂ ಸಮಯಾಚಾರ ಸರಿ" ಎಂದು ಹೇಳಿದೆ.

ಈ ಉಕ್ತಿಗಳನ್ನು ನೋಡಿದಲ್ಲಿ ವೀರಶೈವ, ಲಿಂಗಾಯತ ಎಂಬ ಶಬ್ದಗಳು ಅವುಗಳಲ್ಲಿ ಬರಬೇಕಾಗಿತ್ತು. ಆದರೆ ಅವುಗಳ ಬದಲು ಲಿಂಗವಂತ, ಸಮಯಾಚಾರಿ, ಭಕ್ತ, ಮಾಹೇಶ್ವರ, ಜಂಗಮ, ಶಿವಾಚಾರ, ಲಿಂಗಪಥ, ಲಿಂಗಭಕ್ತ, ವ್ರತಿ, ಶರಣ, ನಿಜವ್ರತ ಈ ಶಬ್ದಗಳು ಹೇರಳವಾಗಿ ಬಸವೇಶ್ವರನ ವಚನಗಳಲ್ಲಿ ಬಂದಿರುತ್ತವೆ. ವಚನಗಳು ಸಾಮಾನ್ಯ ಜನರ ತಿಳುವಳಿಕೆಗೋಸ್ಕರ ಬರೆದವುಗಳು. ಆದುದರಿಂದ ವೀರಶೈವ ಈ ಶಬ್ದವು ಜನರಲ್ಲಿ ಪ್ರಚಲಿತವಿಲ್ಲದ್ದರಿಂದಲೇ ಅದು ಇವುಗಳಲ್ಲಿ ಉಪಯೋಗಿಸಲ್ಪಟ್ಟಿರಲಿಕ್ಕಿಲ್ಲ. ಬಸವೇಶ್ವರನ ಕಾಲದಲ್ಲಿ ಲಿಂಗವಂತ, ಶಿವಭಕ್ತ, ಭಕ್ತ, ಸಮಯಾಚಾರಿ ಎಂಬ ಶಬ್ದಗಳಿಂದ ವೀರಶೈವರು ಕರೆಯಲ್ಪಡುತ್ತಿರಬೇಕು. ಮತ್ತು ವೀರಶೈವ ಧರ್ಮದ ಬಗ್ಗೆ ವಿಶೇಷ ಜ್ಞಾನ ಹೊಂದಿದವರು ಮಾತ್ರ ಶರಣರು, ಜಂಗಮರು, ವ್ರತಿಗಳು, ಮಾಹೇರರು ಎಂದು ಕರೆಯಲ್ಪಡುತ್ತಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ಹಿಂದಿನ ಘಂಟಿಕೆಗಳಲ್ಲಿ ಉಲ್ಲೇಖಿಸಲ್ಪಟ್ಟ ಶಿಲಾಶಾಸನಗಳನ್ನು ನೋಡಿದರೂ ಇದೇ ಅನುಮಾನವು ಹೊರಪಡುತ್ತದೆ.

ಆದರೆ ಈ ವಚನಗಳಲ್ಲಿ ಮುನಿ, ಮುನಿಪ ಎಂಬ ಹೆಸರುಗಳು ಬಂದಿರುವದಿಲ್ಲ. ಆದರೆ ಆ ಕಾಲದಲ್ಲಿ ಪ್ರಚಲಿತವಿರುವ 'ರುದ್ರಮುನಿ', 'ಮುಕ್ತಿಮುನಿ' ಎಂಬ ಹೆಸರುಗಳನ್ನು ನೋಡಿದಲ್ಲಿ ವಿಶೇಷತರದ ಧರ್ಮಜ್ಞಾನವನ್ನು ಹೊಂದಿದವರು ಈ ರೀತಿಯಾಗಿ ಕರೆಯಲ್ಪಡುತ್ತಿದ್ದ ಹಾಗೆ ತೋರುತ್ತದೆ.

ಆದರೆ ಈ ವಿಷಯದ ಮಹತ್ವವಾವುದೆಂದು ಅನೇಕರು ಪ್ರಶ್ನೆಮಾಡಬಹುದು. ಆದರೆ ಇದರಿಂದ ಅನುಮಾನಗಳು ಬಹಳ ದೂರದ ವರೆಗೆ ಹೋಗಬಹುದಾಗಿದೆ. ಉದಾಹರಣಾರ್ಥವಾಗಿ, ಈ ವಿಷಯವು ದೃಢಪಟ್ಟಲ್ಲಿ

ಒಂದು ಗ್ರಂಥದ ಕಾಲ ಮತ್ತು ಅದು ಬರೆಯಲ್ಪಟ್ಟ ಸ್ಥಳ ಇದನ್ನು ನಿರ್ಧರಿಸಬಹುದಾಗಿದೆ.

ವೀರಶೈವ ಈ ಶಬ್ದವು ೧೪ನೇ ಶತಮಾನದ ತರುವಾಯ ರಚಿತವಾದ ಗ್ರಂಥಗಳಲ್ಲಿ ಹೇರಳವಾಗಿ ದೊರೆಯುತ್ತದೆ. ಆದರೆ ಅದಕ್ಕೂ ಪೂರ್ವದಲ್ಲಿ ರಚಿತವಾದ ಗ್ರಂಥಗಳಲ್ಲಿ ಅದು ಬರುವದಿಲ್ಲೆಂದು ಗೊತ್ತಾದ ಪಕ್ಷದಲ್ಲಿ ಯಾವ ಗ್ರಂಥದಲ್ಲಿ ಈ ಶಬ್ದವು ಸಾಮಾನ್ಯವಾಗಿ ಉಪಯೋಗಿಸಲ್ಪಟ್ಟಿದೆಯೋ, ಆ ಗ್ರಂಥವು ಬಸವನ ಕಾಲದ ತರುವಾಯ ರಚಿತವಾದುದೆಂದು ಹೇಳಬೇಕಾಗುತ್ತದೆ. ಒಂದು ವೇಳೆ ಆ ಗ್ರಂಥವು ಪುರಾತನ ಕಾಲದ್ದೇ ಎಂದು ದೃಢಪಟ್ಟಲ್ಲಿ, 'ವೀರಶೈವ' ಈ ಶಬ್ದವಿದ್ದ ಶ್ಲೋಕವು ಅಥವಾ ಉಕ್ತಿಯು ಹಿಂದಿನಿಂದ ಆ ಗ್ರಂಥದಲ್ಲಿ ಸೇರಿಸಲ್ಪಟ್ಟದ್ದೆಂದು ತಿಳಿಯಬೇಕಾಗುತ್ತದೆ. ಉದಾಹರಣಾರ್ಥವಾಗಿ ವೀರಶೈವ ಶಬ್ದವು ವೀರಶೈವ ಆಗಮಗಳೆಂದು ತಿಳಿಯಲ್ಪಡುವ ಕೆಲವು ಗ್ರಂಥಗಳಲ್ಲಿ ಮೇಲಿಂದ ಮೇಲೆ ಬರುತ್ತದೆ. ಒಂದು ವೇಳೆ ಅವು ಪುರಾತನ ಗ್ರಂಥಗಳಿದ್ದರೆ ಅವುಗಳಲ್ಲಿ ಈ ಶಬ್ದವು ಬರತಕ್ಕದ್ದಲ್ಲ. ಆದ್ದರಿಂದ ಅವು ಬಸವನ ಕಾಲದ ತರುವಾಯ ರಚಿಸಲ್ಪಟ್ಟವೆಂತಲೂ ನಿಜವಾದ ಆಗಮಗಳು ಬೇರೆ ಇರುತ್ತವೆಂತಲೂ ತಿಳಿಯಬೇಕಾಗುತ್ತದೆ. ಅಥವಾ 'ವೀರಶೈವ' ಈ ಹೆಸರು ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರದಿದ್ದರೆ, ಬೇರೆ ಭಾಗಗಳಲ್ಲಿ ಅದು ಪ್ರಚಲಿತವಾಗಿದ್ದಿತೋ ಹೇಗೆ ಎಂಬದನ್ನು ಗೊತ್ತುಪಡಿಸಿದಲ್ಲಿ ಆ ಸ್ಥಳದಲ್ಲಿ ಮತ್ತು ಆ ಕಾಲದಲ್ಲಿ ಆ ಗ್ರಂಥಗಳು ಬರೆಯಲ್ಪಟ್ಟವಿರಬೇಕೆಂದು ಊಹಿಸಬೇಕಾಗುವದು. ಈ ಒಂದು ಸಂಗತಿಯಿಂದ ಧಾರ್ಮಿಕ ಇತಿಹಾಸ ಸಂಶೋಧನೆಯಲ್ಲಿ ಈ ವಿಷಯದ ಮಹತ್ವವು ಎಷ್ಟಿದೆಂಬುದು ವಾಚಕರಿಗೆ ಅರಿಕೆಯಾಗದೆ ಇರದು.

---

# ನನ್ನ ಕನಸು.

## ( ವಿಜಯನಗರ ರಾಜ್ಯದ ವರ್ಣನೆ. )

(ಲೇಖಕ:— ಈಶ್ವರ ಸಣಕಲ್ಲ)

---

(೧೦ ನೆಯ ಸಂಚಿಕೆಯಿಂದ ಮುಂದುವರಿದದ್ದು)

ಬಗೆಬಗೆಯ ಹೊಲಗಳಿವೆ! ಹರಿವ ತಿಳಿಯಾದ ಜಳ!
ನೋಡುತಲಿ ಮಗುದೊಂದು ದ್ವಾರವನು ಒಳಹೊಕ್ಕೆ!
ಬಗೆಬಗೆಯ ತೋಟಗಳು! ಬಗೆಬಗೆಯ ಬೇಟಗಳು!
ಮೂರು ಕಣ್ಗಳ ಪಡೆದು, ಪುರಸಿರಿಯ ನಿರುಕಿಸಲು
ಔನ್ನತ್ಯವನ್ನಾಂತ ತೆಂಗುಗಳು! ಕೌಂಗುಗಳು!
ಫಲಭಾರದಲಿ ನಮ್ರವಾಗಿರುವ ವೃಕ್ಷಗಳು!
ಮಲ್ಲಿಗೆ ಗುಲಾಬಿ ಸಂಪಿಗೆಯಾದಿ ಸುಮಗಳಿಂ
ಮೆರೆವ ಕುಸುಮೋದ್ಯಾನ! ವನಲಕ್ಷ್ಮಿ ಸುಖವಾಗಿ
ಪವಡಿಸಲು, ಸಜ್ಜುಗೊಳಿಸಿದ ಕುಸುಮ ಶಯ್ಯೆಯೊಲು,
ಎತ್ತೆತ್ತಲೂ ಪೂಗಳುದುರುದುರಿ ಬಿದ್ದಿಹವು!
ಭುವಿಗೆ ತಾರೆಗಳಿಳಿದು ಕಂಪಿನಲಿ ಬೆರೆತಿಹವೊ!
ಪಣ್ಗಡಿದ್ದು ಚಿಣ್ಣಾಟವಾಡುತಿಹ ಮಂಗಗಳು!
ಮಕರಂದದಾಸೆಯಲಿ ಭ್ರಮಿಸುತಿಹ ಭೃಂಗಾಳಿ!
ಪೂಗಳಿಂ ಕೆದರಿರುವ ಧೂಳಿಯುದೊ ನೆಲದಲ್ಲಿ
ರಂಗವಲ್ಲಿಯ ತೆರದೊಳ್ಪುದುರಿಹುದು! ಏಂ ತಂಪೊ!
ಏಂ ಕಂಪೊ! ಹಿಗ್ಗುತೊಳಹೊಕ್ಕೆ ನಾ ಮೂರನೆಯ
ದ್ವಾರವನು! ಸೌಖ್ಯ ಸಂತೋಷಗಳ ಆಸ್ತಿವಾ-
ರದ ಮೇಲೆ ನಿಲಿಸಿದ ಪ್ರಪಂಚದೊಲು, ಸಾಲ್ಸಾಲು
ಸಾಲಿನಲಿ, ಸತತವೂ ಕಣ್ಗೆ ಹಬ್ಬವ ಮಾಳ್ಪ
ಗೃಹಂಗಳು! ಇಂತೆಯೇ ಒಂದೊಂದು ದ್ವಾರವನು
ದಾಂಟುತಲಿ ಒಳಹೊಕ್ಕು ನೋಡಿದೆನು! ವಿಸ್ತೀರ್ಣ
ದೀರ್ಘವಾಗಿಹ ಪಣ್ಯವೀಥಿಕೆಗಳೆತ್ತೆತ್ತ-

ಲೂ ದೃಷ್ಟಿಗಳ ಬಂಧಿಸುತ್ತಿಹವು ! ಒಂದೊಂದ
ರೊಳಿ ದೇವ, ಅಂಗಡಿಗಳಿನಿತೆಸಿತೊ ! ಹೂಹಣ್ಣ
ಮಾರುವರು, ಧಾನ್ಯಗಳ ಮಾರುವರು, ವಸ್ತ್ರಗಳ
ಮಾರುವರು ತುಂಬಿಹರು ! ತುಂಬಿಹರು ! ನೋಡಲ್ಲಿ,
ಬಗೆಬಗೆಯು ಪಾತ್ರೆಗಳ, ಚಿತ್ರಶಸ್ತ್ರಾಸ್ತ್ರಗಳ
ವಿವಿಧ ವ್ಯಾಪಾರಿಗಳು ತುಂಬಿಹರು ! ತುಂಬಿಹರು !
ಬೆಳ್ಳಿ ಬಂಗಾರ ನವರತ್ನಗಳ ಮಾರುವರು
ತುಂಬಿಹರು ! ತುಂಬಿಹರು ! ಎಣ್ಣೆ ಬೆಣ್ಣೆಗಳನ್ನು
ಮಾರುವವರು ನೋಡು, ತುಂಬಿಹರು ! ತುಂಬಿಹರು!
ದೇಶ-ದೇಶ-ವಿದೇಶ-ವ್ಯಾಪಾರಿಗಳು ಬಂದು
ನಿಂತಿಹರು ! ನಿಂತಿಹರು !
ನಿಂತೆ ನಾ ಬೆಪ್ಪಾಗಿ !
ಆ ದೃಶ್ಯ ಮರೆಯಾಯ್ತು !—......
ಪಗಡಿ ಪಟದಂತಿರುವ ಪೇಟೆಗಳ ಸೊಬಗದೋ !
ದೇದೀಪ್ಯಸ್ವಪ್ನದೊಲು ಶೋಭಿಸುವ ರಮ್ಯ ಹ-
ರ್ಮ್ಯಂಗಳಿವೆ ! ಸತ್ಯವನೆ ಪ್ರತಿಬಿಂಬಿಸುವ ಶುಭ್ರ-
ದರ್ಪಣದೊಲೆಸೆಯುತಿವೆ ನ್ಯಾಯಾಲಯಂಗಳದೊ !
ನೈರ್ಮಲ್ಯದಚ್ಚಿನೊಲು, ಜೀವನದ ಮೂಲದೊಲು,
ಪದ್ಮಾಕರಂಗಳಿವೆ ! ಪಲ್ವಲಗಳಿವೆ ! ಜಲಾ-
ಶಯಗಳಿವೆ ! ಗಜಶಾಲೆ, ಹಯಶಾಲೆ, ವ್ಯಾಯಾಮ-
ಶಾಲೆಗಳು ಶೋಭೆಯಲಿ ನಿಂದಿಹವು ! ಭಕ್ತಿಯಾ-
ಗರದಂತೆ ದೇಗುಲಗಳೊಪ್ಪಿಹವು ! ವೈಭವ ವಿ-
ಲಾಸದೊಳು ಸೌಧಂಗಳಿದ್ದಿಹವು ! ವಾದ್ಯ ವೀ-
ಣಾಮುರಜ ತಾಳಲಯದಲಿ ‹ ಬೆರೆತ ಸಂಗೀತ
ವದೊ ಕೇಳು, ಮಂಜುಳಂ ! ಮಂಜುಳಂ ! ಮುರಲೀಸ್ವ-
ರದಿ ತೇಲಿ ಶ್ರೀಕೃಷ್ಣಸಹಿತ ದ್ವಾರಕೆ ಇಲ್ಲಿ
ಬಂದಿಹುದೊ ! ಏಂ ಸವಿಯೊ ಕೊಳಲದನಿ ! ಸುರಲೋಕ-
ದಪ್ಸರೆಯರಿಲ್ಲೇಕೆ ಹಾಡುವರೊ ! ಹಾಡಿನಲಿ
ಆವುದನು ಸೆರೆವಿಡಿಯಲಿರುವರೋ ! ರೂಪದಲಿ,
ವಿಭ್ರಮವಿಲಾಸದಲಿ, ಮೋಹದಲಿ, ಆವುದನು
ಸೆಳೆವರೋ ! ಅವರ ಮುಖಕಾಂತಿಯಲಿ ಸೌಧಂಗ-

ಇದೊ ನೋಡು, ಚಂದ್ರಶಾಲೆಗಳಂತೆ ಲೀಲೆಯನು
ಬೀರುತಿವೆ! ಸ್ವರ್ಲೋಕದೇವಿಯರು ಈ ಪುರ-
ಸ್ತ್ರೀಯರಿಗೆ ನಾಚಿ ಮರೆಯಾದರೋ!
ಭ್ರಾಂತನೊಲು
ನಿಂತಿದ್ದೆ!—
ನಿಂತಿದ್ದೆ—
ಅದೊ ಯಾರು? ರಾಜಮಾ-
ರ್ಗದಿ ಬಹರು ಸಂಭ್ರಮದಿ! ರಥದಲ್ಲಿ ಕುಳಿತಿಹರು!
ಮಾನ್ಯಾಧಿಕಾರಿಯೊಲು ಕಾಣುವರು! ರಥದ ಎಡ
ಬಲಗಳಲಿ ತೇಜಗಳು ಪಂಕ್ತಿಯಲಿ ಸಾಗಿಹವು!
ನೂತ್ನನಯವಸನ ಭೂಷಣಗಳನು ತಳೆದಿಹವು!
ಶಿಖಿಯ ಶಿಖೆಯಂತೆ ಶಿರದಲಿ ಕುಸುಮಗುಚ್ಛವದು
ಶೋಭಿಪುದು! ಕಂಠದಲಿ ಕಂಪಿಡಿದ ಪೂಮಾಲೆ
ಚಲುವಿನಲಿ ಜೋಲುತಿದೆ! ಹೊಳೆಹೊಳೆವ ಕಡಿವಾಣ-
ವನು ಹಿಡಿದ ರಾಹುತರು ಮೇಲೆಂತು ಮೆರೆದಿಹರು!
ನೃಪನ ಛತ್ರದ್ವಯದಿ ರಂಜಿಸುವ ತೇಜಿಯೊಂ-
ದಿವುಗಳೆಲ್ಲವ ಮಿಕ್ಕಿ ಮಧ್ಯದಲಿ ಮಿನುಗುವದು!
ಕಡಿವಾಣವನು ಪಿಡಿದ ಅಶ್ವಪಾಲಕನೋರ್ವ-
ನದರ ಮುಂತೆಸೆದಿಹನು! ಮುಂದೊಂದು ಕುದುರೆಯದು
ಕುಣಿಕುಣಿದು ಹೇಕರಿಸಿ, ಹೇಕರಿಸಿ ಕುಣಿಕುಣಿಯು-
ತಲಿ ಹಾಗೆ ಸಾಗಿಹುದು!
ಆ ದೃಶ್ಯ ಮರೆಯಾಯ್ತು!
ಡೋಲೆಗಳ ಶಿಬಿಕೆಗಳ ಹೊತ್ತು ಬಹ ಬೋಯಿಗಳ
ನೋಡಲ್ಲಿ! ಲಾವಣ್ಯಸಾರವನೆ ಸೆರೆವಿಡಿದು
ಸಾಗಿಹರೊ! ವೈಭವವಿಲಾಸವನೆ ಮರೆ ಮಾಡು
ತೊಯ್ಯುವರೊ! ಸೆಳೆಮಿಂಚ ಕುಳ್ಳಿರಿಸಿ ಮುಮ್ಮುಂದೆ
ನಡೆದಿಹರೊ! ಒಂದೊಂದರಲಿ ರೂಪವತಿಯರೆಸೆ-
ಯುತ್ತಿಹರು! ರಜತ ಭೂಷಣಗಳು ಮೆರೆವ ಶಿಬಿ-
ಕೆಗಳಲ್ಲಿ ರಾಜರಮಣಿಯರೊಪ್ಪಿ ಕುಳಿತಿಹರು!
ಪಟ್ಟಮಹಿಷಿಯು ಕುಳಿತ ಹೇಮ ಭೂಷಿತ ಶಿಬಿಕೆ

ಯಾರಕ್ತವಸ್ತ್ರದಾವರಣದಲಿ ರಾಜಿಪುದು !
ಆ ವಸ್ತ್ರದಂಚಂಚುಗಳಲಿ ಹಾ ! ಮೌಕ್ತಿಕದ
ಜಲ್ಲರಿಯು ಜೋಲುತಿದೆ ! ಗೊಂಡೆಗಳು ತೂಗುತಿವೆ !
ನೃಪತಿ ಮಂಡಿಸಿದ ಸೌವರ್ಣ ಶಿಬಿಕೆಯು ಅದರ
ಬಲಬದಿಯೊಳೊಪ್ಪಿಹುದು ! ನೃಪಪುತ್ರ ಪುತ್ರಿಯರು
ಹಸ್ತಿದಂತದ ಮಂಚಗಳನಲಂಕರಿಸಿಹರು !
ಡೋಲೆಗಳು, ಶಿಬಿಕೆಗಳು, ಮಂಚಗಳು, ಎಲ್ಲವೂ
ಸಾಲಾಗಿ ಸಾಗಿಹವು ! ಮುಮ್ಮುಂದೆ ಸಾಗಿಹವು !
ಕಣ್ಬಿಟ್ಟು ನಿಂತಿದ್ದೆ !—
ಮರೆಯಾಯಿತಾ ನೋಟ !
ಸ್ವರ್ಗದೊಳಗತ್ತಿತ್ತ ತಿರುಗುವೊಲು ತಿರುಗಿದೆನು !
ಕಣ್ಸೆಳೆವ ನೋಟಗಳ ನೋಡಿಯೇ ನೋಡಿದೆನು !
ಕಿವಿ ಸೆಳೆವ ಗೀತೆಗಳ ಕೇಳಿಯೇ ಕೇಳಿದೆನು !
ಬಗೆ ಸೆಳೆವ ಭಾವಗಳ ಹೀರಿಯೇ ಹೀರಿದೆನು !
ಇಂತು, ಕಡೆಯಲಿ ವಿಜಯವಿಠ್ಠಲನ ಬಳಿ ಸಾರ್ದು
ಕಣ್ದಣಿಯೆ ನಿರುಕಿಸಿದೆ ! ಮನದಣಿಯೆ ಪ್ರಾರ್ಥಿಸಿದೆ !
ಭಕ್ತಿಯಲಿ ವೈಯಿಕ್ಕಿ "ವಿಜಯನಗರವಿದಹುದು !"
"ಗೆಲುವ ಹೊಳಲೇ ಸರಿಯು !" ಎಂದೆನುತ ಹೊರಬಿದ್ದೆ !
ಹೊರಬಿದ್ದು ಅಲೆಯಲೆಯುತೆಲ್ಲಿಗೋ ನಾ ಬಂದೆ !
ಆವುದೋ ಗಿರಿಶಿಖರವನು ಹತ್ತಿ ನೋಡಿದೆನು:—
ದೂರದೂರದ ದೃಶ್ಯಗಳು ಬಗೆಯ ಸೆಳೆಯುತಿವೆ !
ಆನೆಗಳ ಮೇಲೆನಿತೊ ಪಥಿಕರದೆ ಸಾಗಿಹರು !
ಒಂಟೆ ಕುದುರೆತ್ತುಗಳಮೇಲೆ ಸ್ಸರಕುಗಳಿರಿಸಿ
ಬೇಹಾರಿಗಳು, ನೋಡು, ದೆಸೆದೆಸೆಗೆ ಸಾಗಿಹರು !
ಅದೊ ಅಲ್ಲಿ, ಬೋಯಿಗಳು ಆವ ಧನಿಕರನೇನೊ
ಮೇಣೆಯಲಿ ಒಯ್ಯುವರು ! ನೋಡತ್ತ, ತುಂಗಭ-
ದ್ರೆಯಮೇಲೆ ತೇಲ್ವ ಹರಗೋಲಗಳು ಕಣ್ಗೆನಿತು
ಸೊಬಗ ಬೀರುತಲಿಹವು ! ದೇಶದೇಶ ವಿದೇಶ-
ವ್ಯಾಪಾರಿಗಳು ಸರಕಿನೊಡನಲ್ಲಿ ಕುಳಿತಂತೆ
ಕಾಣುತಿದೆ ! ಅಂಬಿಗರು ಹುಟ್ಟು ಗಡೆಯುತಲಿಹರು !

ಅಲ್ಲಲ್ಲಿ ತೆಪ್ಪೆಗಳು ಎಂತು ತೇಲುತಲಿಹವು !
ನೀಲ ಗಗನದಿ ಕಾಂಬ ಮಸಕಾದ ತಾರೆಯೊಲು !
ದೂರದೂರದಿ ತೇಲ್ವ ಹರಿಗೋಲುಗಳು ಶೋಭೆ-
ಯಾಂತಿಹವು ! ಕಾಲ್ನಡಿಗೆಯಲ್ಲಿ ನಡೆವ ಪಥಿಕರೆನ್ನಿ-
ತೋ ಏನೊ ! ನೋಡತ್ತ, ಪಂಪಾವಿರೂಪಾಕ್ಷ
ದೇವಾಲಯದ ಸೊಬಗ ! ಎಂತು ಪೂಜೆಯ ಕೊಳ್ವ !
ಪಂಪಾಶತಕದಿಂದೆ ಪಂಪಾಧಿನಾಥಂಗೆ
ಭಕ್ತಿಯನು ಸಲ್ಲಿಸಿದ ಹರಿಹರನು ಇಲ್ಲಿಯೇ
ಜಸವಾಂತು ಬಾಳಿದನು ! ರಾಘವಾಂಕನು ಕೂಡ
ಇಲ್ಲಿಯೇ ಕಾವ್ಯಗಳನೊರೆದಿಹನು ! ಮೇಣೆನಿತೊ
ಕಬ್ಬಿಗರು ವಿಧವಿಧದಿ ಪಂಪಾಧಿಪತಿಯಿವಗೆ
ಭಕ್ತಿಯಲಿ ಕಾಣ್ಕೆಗಳ ಸಲಿಸಿದರು ! ದುಷ್ಟರನು
ಸದೆಬಡೆದು, ಶಿಷ್ಟಜನರಕ್ಷಣೆಗೆ ಬದ್ಧಪರಿ-
ಕರನಂತೆ, ದೀರ್ಘಕಾಯದ ವೀರಭದ್ರನದೊ
ನಿಂತಿಹನು ! ಬೃಹದ್ದೇಹಗಳಿಂದೆ ವಿಸ್ಮಯಾ-
ಸ್ಪದರಾದ ಕಡಲೆಸಾಸಿವೆ ಬೆನಕರನು ನೋಡು !
ಅದೊ ಅತ್ತ, ಅಕ್ಕತಂಗಿಯರಂತೆ ನಿಂತಿರುವ
ಶಿಲೆಗಳನು ! ಇದೊ ಇದೋ ಇತ್ತ ದಸರೆಯ ದಿಬ್ಬ
ದಾ ನೋಟ ಒಸಗೆಯನು ಬೀರುತಿದೆ ! ಅಚ್ಯುತಸ-
ಹಸ್ರರಾಮರ ದೇಗುಲಂಗಳು ವಿರಾಜಿಸುತ
ನಿಂದಿಹವು. ಆ ನಿಟ್ಟಿನಲಿ ನೋಡು ! ಪಂಪಾಸ-
ರೋವರದ ರಮಣೀಯ ದೃಶ್ಯಮದೊ ಕಣ್ಮನವ
ಸೆಳೆಯುತಿದೆ ! ಭೂತಕಾಲದ ಸ್ಮೃತಿಯು ಹೊಯ್ದಾಡು-
ವಂತಲ್ಲಿ ಗಾಳಿಹೊಡೆತಕೆ ಜಲವದೆಂತು ಕಂ-
ಪಿಸುತಿಹುದು ! ವನವಾಸದಲಿ ಬಂದ ರಾಮಲ-
ಕ್ಷ್ಮಣರೆನಿತು ಸಲವಿಲ್ಲಿ ಮಿಂದಿಹರೊ ! ಸತಿ ಸೀತೆ
ಗೇಸು ಸಲವಿಲ್ಲಿಂದ ಕಮಲಗಳ, ಕುಸುಮಗಳ
ನೆತ್ತಿಹರೊ ! ಆನಾವ ಯತಿವರರು ಇಲ್ಲಿ ತಪ-
ಗೈದಿಹರೊ ! ಅಯ್ಯೋ ! ಕಣ್ಣೇಕೆ ಹನಿಯುತಿವೆ !
ಆವ ಭಾವನೆಗೆ ಹಾ ! ಹೃದಯವಿದು ಮಿಡಿಯುತಿದೆ !

ಕಣ್ಣೊರೆಸಿಕೊಂಡು ನಾ ಮಗುದೊಮ್ಮೆ ನಿರುಕಿಸಿದೆ!
ಆ ನೋಟ ಕರಗಿತ್ತು!
ನಿಡುಸುಯ್ದು ನೋಡಿದೆನು!—
ದಾರಿಯನು ನಡೆನಡೆದು ಹಸಿವಿನಲಿ ತೃಷೆಯಲ್ಲಿ
ಕಂಗೆಟ್ಟ ಪಥಿಕರಿಗೆ ವಿಶ್ರಾಂತಿಭುವನದೊಲು,
ಅಲ್ಲಲ್ಲಿ ಅನ್ನದಾ ಛತ್ರಂಗಳೆಸೆದಿಹವು!
ನೀರಿನವರಡುಗೆಯವರ್ಬರುವವರು ಬಂದವರು
ಉಣುವವರು, ಉಂಡವರು, ಉಂಡು ವಿಶ್ರಾಂತಿಯಲಿ
ಮಲಗುವರು, ಮಲಗೆದ್ದು ತೆರಳುವರು, ತೊಳೆವವರು
ಬಳಿವವರು ಗುಂಪುಗುಂಪಾಗಿ ಆ ಛತ್ರಗಳ-
ಲೊಪ್ಪಿಹರು! ನೋಡಿದೆನು,—
ನೋಡುತಲಿ ಮುಂಬಂದೆ!
ಅಲ್ಲಲ್ಲಿ ವೈಭವದಿ ನಿಂತಿರುವ ಪಟ್ಟಣಂ
ಗಳ ವಿವಿಧ ದೃಶ್ಯಗಳು ಬಗೆಯನಪಹರಿಸಿಹವು!
ವಿಜಯನಗರದ ಸಿರಿಯ ಮುಕುಟದಲಿ ಕರವೆತ್ತಿ
ನಿಂತ ಹಸ್ತಿಯ ಕುಂಭದೋಲಾನೆಗುಂದಿಯಿದೆ!
ಕಳವೆಗಳ ಪೈರಿನಿಂ ಸೌಖ್ಯಕರ ವಾಯುವಿಂ
ದೀರ್ಘ ದೇಹಿಗಳಿಂದೆ ಚೆಲುವ ಹೊನ್ನಾವರಂ
ರಂಜಿಸಿತು! ವಿಪುಳೋಪವನಗಳಿಂ ವಿಪುಳ ಸ-
ಜ್ಜನಗಳಿಂ ಕಡಲ ತಡಿಯಲಿ ನಿಂತು ರಾಜಿಸಿತು
ಭಟ್ಕಳಂ! ದಟ್ಟ ಹಳುವುಗಳಿಂದೆ ದೀರ್ಘ ತಾ-
ಳೆಗಳಿಂದೆ ಶೋಭಿಸುವ ನೇತ್ರವತಿ ತೀರದಲಿ,
ಭವ್ಯ ಕಟ್ಟಡಗಳಿಂ, ಪ್ರಾರ್ಥನಾ ಗೃಹಗಳಿಂ
ಮೋಹ್ ಮಸೀದೆಗಳಿಂದೆ ಮಂಗಲಂ ಮಂಗಳೂ-
ರೆಸೆಯಿತ್ತು! ಗೆರೆಸೊಪ್ಪೆ ರಾಣಿಯೊಲು ಅಂಕೋಲೆ
ಮೆರೆದತ್ತು! ಯೋಗಿಗಳ, ಯತಿವರರ, ಕವಿವರರ,
ಗುರು ಜನರ, ಪಂಡಿತರ, ದಾನಿಗಳು ದಾರಿಗಳ
ಗಡಣದಿಂ, ಚೈತ್ಯಗೃಹ ಪಂಚಕದಿ, ಮೆರೆವ ಹ-
ರ್ಮ್ಯಂಗಳಿಂ, ಹೊಳೆವ ಗೋಪುರಗಳಿಂ ಕಣ್ಗೆಡ್ಡ
ಮಾದತ್ತು ಆ ಕ್ಷೇಮಪುರವರಂ! ಧೀಮಂತ-

ಶ್ರೀಮಂತ ನ್ಯಾಯವಂತರ ಪುರಂ ಭಾರಂಗಿ
ಭಾಗ್ಯಲಕ್ಷ್ಮಿಯ ಭವನದಂತೆ ಕಂಗೊಳಿಸಿತ್ತು!
ಆ ಕಲಾ ದೇವತೆಯು ಕ್ರೀಡಿಸಿದ ರಂಗವಿದೊ!
ಸೃಷ್ಟಿ ಸೌಂದರ್ಯವದು ನಲಿನಲಿದ ತಾಣವಿದೊ!
ಸ್ವರ್ಗೀಯ ರಾಮಣೀಕತೆಯಾಳ್ದ ರಾಜ್ಯವಿದೊ!
ಉತ್ತುಂಗತೆಯೆ ಮೂರ್ತಿಗೊಂಡಿಲ್ಲಿ ನಿಂತಿಹುದೊ!
ಎಂಬ ಬೆಮೆಯುಳವಡಿಪ ದಿವ್ಯ ದೇವಾಲಯದಿ
ಬಿದರೂರ್ವಿರಾಜಿಸಿತು! ಪ್ರಳಯ ರುದ್ರನ ಮೀರ್ವ
ಪಡೆಯಿಂದೆ, ಗಿಂಜದುರ್ಗವು ಭದ್ರವಾಗಿ ಗೋ-
ಚರಿಸಿತ್ತು! ಚೈತ್ಯಾಲಯಗಳಿಂದೆ, ಸುರಸುಂದ-
ರಿಯ ಮಿಗುವ ಸ್ತ್ರೀಯರಿಂ, ಸಂಗೀತಪುರವಹಾ!
ಸಂಗೀತದಂತೆ ತಾನಿಂಪಾಗಿ ಸೊಂಪಾಗಿ
ಪೆಂಪಿನಲಿ ಕಾಣಿಸಿತು! ಮಹಾ ವೈಭವದಿಂದೆ
ಮೆರೆವ ದೇಗುಲಗಳಿಂ ಮಾಧುರ್ಯವನು ಬೀರಿ
ಮುದುರೆಯದು ಮೋಹಿಸಿತು! ಅದ್ಭುತ ವಿ-
ಚಿತ್ರ ಘಟನೆಗಳಿಂದೆ, ಲಾಸ್ಯದಲಿ ರಮಣೀಯ
ಮಾಗಿಹ ಮಯೂರದೊಲು, ಅಹಹ! ಮೈಲಾಪುರಂ!
ತನ್ನೊಂದು ಮೋಹಕತೆಯಿಂ ಮುಂದೆ ನಿಂದಿತ್ತು!
ಬಗೆಬಗೆಯ ಚಿತ್ರಗಳು ಸುಳಿದು ಮರೆಯಪ್ಪವೊಲು,
ಬಣ್ಣಬಣ್ಣದ ತೆರೆಗಳೆದ್ದು ಮತ್ತಳಿಯುವೊಲು,
ನಾನಾ ಪುರಂಗಳನು ನೋಡುತಲಿ ನಡೆದಿದ್ದೆ!
ಅಯ್ಯೋ ss......

o

ಅದು ಎಂಥ ಭೀಕರ ಕರಾಳ ದೃ-
ಶ್ಯವು! ನೋಡು! ಘೋರ ಕಾಂತಾರವಿದೆ! ಪ್ರಳಯವೇ
ರೂಹುಗೊಂಡಿಲ್ಲಿ ತಾ ನಿಂತಿಹುದೊ! ವನ್ಯಮೃಗ-
ಗಳ ವಿಕಟ ಗರ್ಜನೆಗೆ ಬಿರಿವುದೆದೆ! ಮೃತ್ಯುವಿನ
ನೆಳಲಿನೊಲು ಗಾಢಾಂಧಕಾರವಿದೊ ಸುತ್ತಲೂ
ಕವಿದಿಹುದು! ಒಳಸಂಚು ಕೂಗುವೊಲು, ನರಿಯೂಳು-
ತಿವೆ, ಕೇಳು! ಕ್ರೌರ್ಯವೇ ತಿರುಗುವೊಲು ವ್ಯಾಘ್ರಂಗ-

ಳಲೆಯುತಿವೆ! ಹೊಂಚಿ ವೈದೋರಿದೊಲು ಚಿರತೆಗಳು
ಸಾಗಿಹವು! ಉನ್ಮತ್ತತೆಯ ತೆರದಿ ವನ್ಯಮಹಿ-
ಷಂಗಳಿವೆ! ಕಾಡ ಹಂದಿಗಳಿಹವು! ಕರಡಿಗಳು
ತುಂಬಿಹವು! ಸೊಕ್ಕಿನೊಲು ಕಾಡಾನೆಗಳ ಹಿಂಡು
ಬರುತಲಿದೆ! ದುಸ್ಸಾಧ್ಯತೆಯ ತೆರದಿ ನೀಲ ಧೇ-
ನುಗಳಿಹವು! ಅದೊ ಅತ್ತ ಪಕ್ಷಯುತ ಸರ್ಪಗಳು
ಬುಸುಗುಡುತಲುಡ್ಡಾಣಗೈಯುತಿವೆ! ಶ್ವಾಸದಲಿ
ತೀಕ್ಷ್ಣ ಹಾಲಾಹಲವ ಬೀರುತಿವೆ! ಕಣ್ಣಳಲಿ
ರೌದ್ರಮೃತ್ಯುವು ನೃತ್ಯವಾಡುತಿದೆ! ಸರಳತೆಯೆ
ಧಾವಿಪೊಲು ಧೀಂಕಿಟ್ಟು ಹರಿಣಗಣವೋಡುತಿದೆ!
ಭೀತಿವಿಸ್ಮಿತನಾಗಿ ನಿಂತಿದ್ದೆ!

ಕಾರ್ಮೋಡ

ಗಳು ತೇಲಿ ಮುಗಿಲು ಕಪ್ಪಿಟ್ಟಿತ್ತು! ಬಿರುಗಾಳಿ-
ಯುರುಬಿನಲಿ ಧರೆಯೆ ಹೊಯ್ದಾಡಿತ್ತು! ಕೋಲ್ಮಿಂಚು
ತೋರಿತ್ತು! ಸಿಡಿಲಿನಾರ್ಬಟೆಯಲ್ಲಿ ಪೊಡವಿ ತಾ
ನಡುಗಿತ್ತು! ಗುಡುಗು! ಕೋಲಾಹಲಂ! ಅದೊ ಏನು?
ಯಾವ ಪಡೆ? ಪ್ರಕ್ಷುಬ್ಧವಾರ್ಧಿಪೊಲು, ಅವ್ಯವ-
ಸ್ಥಿತವೇಕೆ? ಯುವನರೋ? ಯಮದೂತರೋ? ಯಾರು?
ಅಯ್ಯೋ—ಅಯ್ಯೋ— ರಾಮ ಶೌರ್ಯವು ಇಲ್ಲಿ
ನಿಷ್ಫಲವೆ? ನಿಷ್ಫಲವೆ? ಏನು? ಶಿರ ಹರಿದರೇ?
ಯಾರದದು? ದಿಟವೆ? ಓ. ಓ ಅಲ್ಲಿ ಬಸಿವ ನೆ-
ತ್ತರ ನೋಡು! ಖಡ್ಗ– ತುದಿ– ಶಿರ– ಬಿತ್ತು– ಪಡೆ- ಚದರಿ-
ತೋಡೋಡು! ಅದೊ ಬಂತು ಹಗೆಯ ಪಡೆ! ಹಿಡಿಯುತಿದೆ!
ಓಡೋಡು! ತಡೆಯದಿರು! ನಡೆ! ಓಡು! ಹಿರಿದರದೊ
ಕತ್ತಿಯನು! ಇರಿಯುವರೊ? ಇರಿದರೋ? ಹಾ! ಸತ್ತೆ!
ಅಯ್ಯಯ್ಯೊ!— ಅಯ್ಯೋ— ಅಯ್ಯೋ— ಅ— 
ಯ್ಯೋ—

ಚೀರುತಲಿ ಕಣ್ದೆರೆದೆ!
ಎದೆಯು ಕಂಪಿಸುತಿತ್ತು! ಬೆಮರಿನಲಿ ಮುಳುಗಿದ್ದೆ!

ಕತ್ತಲೆಯು ಮುಸುಗಿತ್ತು! ಬಾಗಿಲುಗಳನು ತೆರೆದೆ!
ಹೊರಬಿದ್ದು ನೋಡಿದೆನು—
—ನಸುಕು ತಾ ಹರಿದಿತ್ತು!
ಹಕ್ಕಿಗಳು ಹಾಡುತಿವೆ! ಹೂವುಗಳು ಅರಳಿಹವು!
ಪ್ರಕೃತಿಯಲಿ ನವಚೇತನವು ಮತ್ತೆ ಮೂಡಿಹುದು!
ಹಳತಿನಲಿ ಹೊಸತೊಗೆದು ನಗುತ ನರ್ತಿಸುತಿಹುದು!
ಅದೊ ಅತ್ತ ಮೂಡಣದಿ ಎಂತು ರಂಜಿಸುತಿಹುದು
ಅಹಹ!
ಅರುಣೋದಯಂ!

---

# ಗೀತೆಯಲ್ಲಿ ಮುಪ್ಪುರಿ.

(ಸಿಂಪಿ ಲಿಂಗಣ್ಣನಿಂದ)

೧

"ಭಗವದ್ಗೀತೆಯೆಂದರೆ ಶ್ರೀಕೃಷ್ಣನುಸುರಿದ ಉಪದೇಶಾಮೃತ. ಅರ್ಜುನನು ಸವಿದ ದಿವ್ಯ ಸಂಜೀವಿನಿ. ವ್ಯಾಸಮಹರ್ಷಿಗಳು ರಚಿಸಿದ ಅಮರಸಾಹಿತ್ಯ. ವೀರಾಗ್ರಮಣಿಯಾದ ಅರ್ಜುನನಿಗೆ ಯುದ್ಧರಂಗದಲ್ಲಿ ಕಾಳಗಕ್ಕೆ ಅನುವಾದಾಗ ಬಂದ ವಿಷಾದದ ಕಗ್ಗತ್ತಲೆಯನ್ನು ಕಿತ್ತೋಡಿಸಲು ಹೊಂಬಣ್ಣವನ್ನು ಹೊರಸೂಸುತ್ತ ಬಂದ ಸಹಸ್ರ ಕಿರಣನಾದ ಜ್ಞಾನರವಿ. ಸಾವಿರಗಟ್ಟಳೆ ವರುಷಗಳಿಂದ ತಾಳಿಬಾಳಿ, ಇನ್ನೂ ಲಕ್ಷಾವಧಿ ವರುಷ ಬಾಳಿಯುಳಿಯುವ ಸನಾತನ ಧರ್ಮಬೀಜದ ತೆನೆಯಿದು. ಜಗತ್ತಿನ ಮುಖ್ಯ ಭಾಷೆಗಳಲ್ಲೆಲ್ಲಾ ರೂಪಾಂತರ ಹೊಂದಿ, ಸಾಮ್ರಾಟ ಭಾಷೆಗಳ ಮುಗುಟವನ್ನು ಮೆರುಗುಗೊಳಿಸುತ್ತಿರುವ ಮಹಾಮಣಿ. ಲೋಕದ ಮಹಾಪುರುಷರಿಗೆಲ್ಲ ಜೀವನಸಮುದ್ರದಲ್ಲಿ ಕಡೆಗಾಣಿಸಿದ ಹುಟ್ಟು." ಎಂದು ಮುಂತಾಗಿ ಗೀತೆಯ ಬಗೆಗೆ ಇನ್ನೆಷ್ಟೊ ಹೇಳಬಹುದು. ಆದರೆ ಇಷ್ಟು ಮಹತ್ತು ಅದಕ್ಕೇತರಿಂದ ಬಂತು ?

ಗೀತೆಯನ್ನು ಮೊದಲು ಆಲಿಸಿದವನು ಸಂಜಯ. ಅವನು ಅದರ ಬಗ್ಗೆ ಹೇಳಿದ ಮಾತು ಹೆಚ್ಚು ಮಹತ್ವದ್ದಷ್ಟೇ ? ಸಂಜಯನು ಇಂತೆಂದನೆಂದು ಗೀತೆಯನ್ನು ಉಪಸಂಹರಿಸಿ, ಶ್ರೀವ್ಯಾಸಮಹರ್ಷಿಗಳು ಅದಕ್ಕೆ ತಮ್ಮ ಒಪ್ಪಿಗೆಯನ್ನಿತ್ತಿದ್ದಾರೆ. ಅದಾವ ಮಾತದು ?

—"ಎಲ್ಲಿ ಯೋಗೇಶ್ವರ ಕೃಷ್ಣನಿರುವನೋ, ಎಲ್ಲಿ ಧನುರ್ಧಾರಿಯಾದ ಪಾರ್ಥನಿರುವನೋ ಅಲ್ಲಿಯೇ ಸಿರಿಯುಂಟು, ವಿಜಯವುಂಟು, ವೈಭವವುಂಟು. ಮತ್ತು ಅಚಲವಾದ ನೀತಿಯುಂಟೆಂದು ನನ್ನ ಅಭಿಪ್ರಾಯ."

ಸಿರಿ, ವಿಜಯ, ವೈಭವ, ಅವಿಚಲವಾದ ನೀತಿ ಇವು ಯಾರಿಗೆ ಬೇಡ ? ಯಾವ ಮಹಾಪುರುಷನಾದರೂ ಇವುಗಳ ಬಗ್ಗೆ ಅನಾಸಕ್ತಿಯಿಂದ ಇರಬಲ್ಲನೇ ಹೊರತು, ತಿರಸ್ಕಾರದಿಂದ ಇವನ್ನು ಕಾಣಲಾರನು. ಹಾಗೆ ಕಂಡವನು ಮಹಾಪುರುಷನಾಗಿಲ್ಲ. ಯೋಗೇಶ್ವರ ಕೃಷ್ಣ, ಧನುರ್ಧಾರಿಯಾದ ಅರ್ಜುನ ಇವರನ್ನು ನಮ್ಮಲ್ಲಿ ಅಳವಡಿಸಿಕೊಂಡರೆ, ಮೇಲೆ

ಕಾಣಿಸಿದ ದಿವ್ಯವಸ್ತುಗಳು ನಮ್ಮ ವೈಗೂಡುತ್ತವೆಂದಾಯಿತು. ಕೃಷ್ಣ-ಅರ್ಜುನ ಅಂದರೆ ಶುದ್ಧಜ್ಞಾನ ಮತ್ತು ತದನುಸಾರವಾದ ಕ್ರಿಯೆ. ಒಂದು ಒಳಗಿನದು, ಇನ್ನೊಂದು ಹೊರಗಿನದು. ಇವೆರಡು ಶಕ್ತಿಗಳನ್ನು ಗಳಿಸಿದ ಪುರುಷೋತ್ತಮನು ಪುರುಷೋತ್ತಮನೇ ಸರಿ. ಮಳೆ ನೀರು ಎಲ್ಲಿ ಬಿದ್ದರೂ, ಹೇಗೆ ಹರಿದರೂ ಸಮುದ್ರನಾಥನನ್ನು ಸೇರುವುದೇ ಅದಕ್ಕೆ ಕೊನೆಯ ಗುರಿಯಾಗಿರುವಂತೆ ಈ ನರನು ಆ ನರೋತ್ತಮನಾದ ನಾರಾಯಣನಲ್ಲಿ ಒಂದುಗೂಡಿ ಹೋಗುವುದೇ ಈ ವಿಶ್ವಲೀಲೆಯ ಉದ್ದೇಶ. ಮಳೆಯದೂ ನೀರು, ಸಮುದ್ರದ್ದೂ ಮಹಾಜಲ; ಒಂದಕ್ಕೊಂದು ಬೆರೆತುಹೊಯಿತು. ಆದರೆ ದೇವ ಮಾನವರೆಲ್ಲಾ ಒಂದೇಯೇ? ಹೌದು, ನಿಶ್ಚಯವಾಗಿ ಒಂದೇ. ಒರೆಯಲ್ಲಿ ಕತ್ತಿ ಹಾಕಿಟ್ಟಹಾಗೆ. ಈ ಮನುಷ್ಯಶರೀರಗಳೆಲ್ಲಾ ಅಂಥ ಒರೆಗಳು. ಒಳಗಿನ ಆತ್ಮವು ಇಟ್ಟ ಕತ್ತಿ. ಬರೀ ಒರೆ ನೋಡಿದರೆ ಕತ್ತಿ ಕಾಣಿಸದು. ಶರೀರ ನೋಡಿದರೆ ಆತ್ಮ ಕಾಣಿಸದು. ಆದರೆ ನಿಜ ವಾಗಿಯೂ ಒಳಗಿದೆ. ಪ್ರತಿ ಒಬ್ಬನ ವಿಚಿತ್ರ ಸ್ವಭಾವ, ಆಶ್ಚರ್ಯಕರವಾದ ಕೃತಿ, ಮನೋಹರವಾದ ರೂಪ, ಮಧುರವಾದ ಕಂಠ ಮುಂತಾದವುಗಳೆಲ್ಲಾ ಬೈತಿಟ್ಟ ಆತ್ಮನ ಕಿರಣಾಂಶಗಳ ಬೆಳಕೇ. ಅಂತೂ ಪ್ರತಿ ಒಬ್ಬ-ಪ್ರತಿ ಒಂದು ದೈವಾಂಶವೇ. “ಯಾವಯಾವದು ವಿಭೂತಿಯುಳ್ಳದ್ದಾಗಿಯೂ, ಸಿರಿಯುಳ್ಳದ್ದಾಗಿಯೂ, ಪ್ರಭಾವವುಳ್ಳದ್ದಾಗಿಯೂ ಇದೆಯೊ ಅದೆಲ್ಲವೂ ನನ್ನ ತೇಜಸ್ಸಿನ ಅಂಶದಿಂದಲೆ ಉಂಟಾದುದೆಂದು ತಿಳಿ.”

ಎಂಥದೇ ಆಗಲಿ ಸಿರಿ-ಪ್ರಭಾವಗಳು ಯಾರಿಗೆ ಇಲ್ಲ? ಅಂತೂ ಎಲ್ಲವೂ ದೇವನ ಅಂಶ; ಅದರಂತೆ ಮನುಷ್ಯನೂ. ಆದರೆ ಮನುಷ್ಯನ ಆತ್ಮದ ಆವರಣವು ಹರಿದಾಗ ಅದರ ಬೆಳಕು ಕಳೆಗೊಳ್ಳುವದು. ಆಗ ಆತ್ಮದ ಅಣುವು ಪರಮಾತ್ಮನನ್ನು ಬೆರೆಯಲು ತಕ್ಕದಾಗುವದು. ವಿಶ್ವ ವೀರನಿಗೆ ಮನಸ್ಸಾದಾಗ, ಸಮರ ಕೋಲಾಹಲದ ಇಚ್ಛೆಯಾದಾಗ ಆತನು ಕತ್ತಿಯನ್ನು ಹಿರಿದು ಹೊರದೆಗೆಯುವನು. ಆವರಣವನ್ನು ಹರಿದುಕೊಳ್ಳಲು ಯಾವ ಆತ್ಮವು ಒದೆದಾಡುವದೋ ಅದನ್ನು ಎತ್ತಿ ಹಿಡಿದು ಪರಾಮರಿಸದಿರುವದೇ ಪರಮ ಆತ್ಮವು! ಕೆಸರಿನಲ್ಲಿ ಸಿಕ್ಕು ಒದೆದಾಡುವುದನ್ನು ಕಂಡ ಮೀನಿನ ಮರಿಯನ್ನು ಬದುಕಿಸಲೆಳಸುವದಿಲ್ಲವೇ ತಾಯಿ ಮೀನು? ಪೂರಾ ಕೆಸರಲ್ಲಿಯೇ ಮುಚ್ಚಿ ಹೋಗಿ ವೈಮರೆಸಿಕೊಂಡರೆ ಸದ್ಯಕ್ಕೆ ಉಪಾಯವೇ ಇಲ್ಲ. ಅಂತು ವಿಲಿವಿಲಿ

ಒದೆದಾಡಬೇಕು. "ಹೇಡಿತನದಿಂದ ನನ್ನ ವೃತ್ತಿಯು ಕಂದಿಹೋಗಿದೆ. ನಾನು ಕರ್ತವ್ಯ ಮೂಢನಾಗಿ ಬಿಟ್ಟಿದ್ದೇನೆ. ಆದುದರಿಂದ ಏತರಲ್ಲಿ ನನಗೆ ಹಿತವುಂಟೆಂಬದನ್ನು ನಿಶ್ಚಯ ಪೂರ್ವಕವಾಗಿ ಹೇಳಬೇಕೆಂದು ಪ್ರಾರ್ಥಿಸುತ್ತೇನೆ. ನಾನು ನಿನ್ನ ಶಿಷ್ಯನಾಗಿದ್ದೇನೆ. ನಿನ್ನನ್ನು ಶರಣು ಹೊಕ್ಕಿದ್ದೇನೆ. ನನಗೆ ದಾರಿ ತೋರಿಸು." ಎಂದು ಮೊರೆಯಿಡಬೇಕು. ಹೀಗೆ ಮೊರೆ ಇಟ್ಟಾಗಲೇ, ಯುದ್ಧರಂಗವಿದ್ದರೂ ಇರಲೆಂದು ಶ್ರೀಕೃಷ್ಣ ಪರಮಾತ್ಮನು ಸಮಸ್ತ ಜ್ಞಾನ ಭಾಂಡಾರವನ್ನೇ ಅವನ ಮುಂದೆ ತೆರೆದಿಟ್ಟು, ತಾನು ಗಾರುಡಿಗನಾಗಿರದೆ— "ಜ್ಞಾನ ನಿಧಿ-ಸರ್ವ ಶಕ್ತಿಮಂತ" ನೆಂಬುದನ್ನು ತೋರಿಸಲಿಕ್ಕೆ ವಿಶ್ವರೂಪ ಧಾರಣಮಾಡಿ ಕ್ಷಣಹೊತ್ತು ಭಕ್ತನ ಮುಂದೆ ಕುಣಿದನು. "ಚರ್ಮಚಕ್ಷುಗಳಿಂದ ನೀನು ನನ್ನನ್ನು ನೋಡಲಾರಿ. ನಿನಗೆ ದಿವ್ಯ ಚಕ್ಷುಗಳನ್ನು ಕೊಡುವೆನು" ಎಂದು, ಕೇಳದೆ ಇದ್ದರೂ ತನ್ನನರಿಯುವಂತೆ ದಿವ್ಯ ಚಕ್ಷುಗಳನ್ನಿತ್ತನು. ಏಕೆ? ಅರ್ಜುನನು ಬೀಗನೆಂದೋ, ಗೆಳೆಯನೆಂದೋ? ಅಲ್ಲ. "ದೇವತೆಗಳಿಗೂ, ತಪಸ್ವಿಗಳಿಗೂ, ಮಹಾದಾನಿಗಳಿಗೂ ಅಸಾಧ್ಯವಾದ ಇಂಥ ಜ್ಞಾನವು, ಈ ದರ್ಶನವು ಅನನ್ಯ ಭಕ್ತಿಯಿಂದಲೇ ಸಂಭವಿಸುವದು." ಅನನ್ಯ ಭಕ್ತಿಯೆಂದರೆ— "ನನ್ನೊಡನೆ ಸೇರಿದವನಾಗು. ನನ್ನ ಭಕ್ತನಾಗು. ನನಗೋಸ್ಕರ ಯಜ್ಞಮಾಡು. ನನಗೆ ವಂದನೆ ಮಾಡು. ನೀನು ನನ್ನನ್ನೆ ಪಡೆಯುವೆ. ಇದು ನನ್ನ ಸತ್ಯ ಪ್ರತಿಜ್ಞೆ. ನೀನು ನನಗೆ ಪ್ರಿಯನು.

ಇಂತು ಭಗವಂತನು ಸತ್ಯಪ್ರತಿಜ್ಞೆಯನ್ನು ಮಾಡಿ ಭಕ್ತಿಯ ದ್ವಾರವನ್ನು ಸರ್ವರಿಗೂ ಮುಕ್ತದ್ವಾರವೆಂದು ಹೇಳಿರುವನು.

೨

ಭಕ್ತಿಭರಿತವಾದ ಹೃದಯ ರಥವನ್ನೇರಿ ಪರಮಾತ್ಮನು ಆಂತರಿಕ ಮತ್ತು ಬಾಹ್ಯಿಕ ಶಕ್ತಿಗಳೆರಡನ್ನೂ ಬೆಳೆಸಲನುವಾಗಿ, ಜ್ಞಾನವನ್ನು ಬೆಳಗುತ್ತ, ಕರ್ಮ ಕೌಶಲ್ಯವನ್ನಿಳಿಸುತ್ತ ಅಂತರಾತ್ಮನನ್ನು ಎಚ್ಚರಿಸುವನು. ಈಗ ಜ್ಞಾನದ ವಿಷಯವನ್ನು ತೆಗೆದುಕೊಂಡರೆ, ಜ್ಞಾನಕ್ಕೂ ದೇವನಿಗೂ ಸಂಬಂಧವಿದೆಯೋ?—

"ಜ್ಞಾನವೆಂಬ ತಪಸ್ಸಿನಿಂದ ಪವಿತ್ರರಾದ ಅನೇಕರು ನನ್ನ ಸ್ವರೂಪವನ್ನು ಹೊಂದುವರು. ಸೂರ್ಯನಿಗೆ ಸಮನಾಗಿ ಪ್ರಕಾಶಮಾನವಾದ ಜ್ಞಾನವು ಪರಮತತ್ವದ ದರ್ಶನವನ್ನು ಮಾಡಿಸುತ್ತದೆ. ನಾನು ಜ್ಞಾನಿಗೆ

ಅತ್ಯಂತ ಪ್ರಿಯನು. ಮತ್ತು ಜ್ಞಾನಿಯು ನನಗೆ ಪ್ರಿಯನು. ಜ್ಞಾನಿಯಾದರೋ ನನ್ನ ಆತ್ಮವೇ ಆಗಿದ್ದಾನೆಂದು ನನ್ನ ಮತ.''

ಜ್ಞಾನಸ್ವರೂಪನಾಗುವದಕ್ಕೂ, ಪರಮಾತ್ಮನಲ್ಲಿ ವಿಲೀನನಾಗುವದಕ್ಕೂ ಭೇದವಿಲ್ಲ. ಆದರೆ ಜ್ಞಾನಸ್ವರೂಪನಾಗುವದೆಂತು? ಈಗ ಜ್ಞಾನದ ಅವಸ್ಥೆ ಹೇಗಿದೆ? ಮುಂತಾದವುಗಳನ್ನು ಅರಿಯುವದು ಆವಶ್ಯಕವಾಗಿದೆ.

"ಯಾವ ರೀತಿಯಲ್ಲಿ ಹೊಗೆಯಿಂದ ಬೆಂಕಿಯೂ, ಕೊಳೆಯಿಂದ ಕನ್ನಡಿಯೂ, ಚರ್ಮದ ಪರೆಯಿಂದ ಗರ್ಭವೂ ಮುಚ್ಚಿರುತ್ತದೆಯೋ ಅದೇ ರೂಪದಲ್ಲಿ ಕಾಮಾದಿರೂಪ ಶತ್ರುಗಳಿಂದ ಈ ಜ್ಞಾನವು ಮುಚ್ಚಿರುತ್ತದೆ. ಎಲೈ ಕೌಂತೇಯನೇ, ಇಂತಹ ತೃಪ್ತಿಪಡಿಸಲು ಶಕ್ಯವಲ್ಲದ ಈ ಕಾಮರೂಪ ಅಗ್ನಿಯು ನಿತ್ಯದ ಶತ್ರುವು. ಅದರಿಂದ ಜ್ಞಾನಿಯ ಜ್ಞಾನವು ಮುಚ್ಚಿರುತ್ತದೆ. ಇಂದ್ರಿಯಗಳು, ಮನಸ್ಸು, ಮತ್ತು ಬುದ್ಧಿ ಇವು ಶತ್ರುವಿನ ನಿವಾಸ ಸ್ಥಾನವಾಗಿವೆ. ಇವುಗಳ ಮೂಲಕ ಜ್ಞಾನವನ್ನು ಮುಚ್ಚಿ ಈ ಶತ್ರುವು ದೇಹಧಾರಿಯನ್ನು ಮೂರ್ಛೆಗೊಳಿಸುತ್ತದೆ. ಮಾಯೆಯ ಮೂಲಕ ಅವರ ಜ್ಞಾನವು ಆವರಿಸಲ್ಪಟ್ಟಿರುತ್ತದೆ. ಆದ್ದರಿಂದ ಜ್ಞಾನ ಮತ್ತು ಅನುಭವವನ್ನು ನಾಶಗೊಳಿಸತಕ್ಕ ಈ ಪಾಪಿಯನ್ನು ಅವಶ್ಯವಾಗಿ ತ್ಯಜಿಸು." ಆದರೆ ಮುಚ್ಚಿ ಮುಸುಕಿದ ಕಾಮಾದಿ ರೂಪಗಳನ್ನು ಹೇಗೆ ತ್ಯಜಿಸುವುದು? "ಯೋಗದಲ್ಲಿ-ಸಮತೆಯಲ್ಲಿ ಪೂರ್ಣತೆ ಹೊಂದಿದ ಮನುಷ್ಯನು ಕಾಲಾಂತರದಲ್ಲಿ ತನ್ನಲ್ಲಿಂ ತಾನೇ ಆ ಜ್ಞಾನವನ್ನು ಪಡೆಯುತ್ತಾನೆ. ಶ್ರದ್ಧೆಯುಳ್ಳವನೂ ಈಶ್ವರ ಪರಾಯಣನೂ ಜಿತೇಂದ್ರಿಯನೂ ಆದ ಪುರುಷನು ಜ್ಞಾನವನ್ನು ಪಡೆಯುತ್ತಾನೆ. ನನ್ನಲ್ಲಿ ತನ್ಮಯರಾಗಿ ನನ್ನನ್ನು ಪ್ರೇಮಪೂರ್ವಕ ಭಜಿಸುವವರಿಗೆ ನಾನು ಜ್ಞಾನವನ್ನು ಕೊಡುತ್ತೇನೆ ...ಅವರಮೇಲೆ ದಯೆಗೈದು ಅವರ ಹೃದಯದಲ್ಲಿ ಸ್ಥಿತನಾಗಿ ಜ್ಞಾನವೆಂಬ ಪ್ರಕಾಶಮಯ ದೀಪದಿಂದ ಅವರ ಅಜ್ಞಾನರೂಪ ಅಂಧಕಾರವನ್ನು ನಾಶಗೊಳಿಸುತ್ತೇನೆ. ನನ್ನನ್ನೇ ಶರಣು ಹೋಗುವವರು ಈ ಮಾಯೆಯನ್ನು ದಾಟಿಬಿಡುತ್ತಾರೆ."

ಸಮತೆಯಲ್ಲಿ ಪೂರ್ಣತೆ ಹೊಂದಿ, ಶ್ರದ್ಧೆಯಿಟ್ಟು, ಈಶ್ವರ ಪರಾಯಣನೂ ಜಿತೇಂದ್ರಿಯನೂ ಆಗಿ ತನ್ನಲ್ಲಿ ತನ್ಮಯನಾದವನ ಹೃದಯದಲ್ಲಿ ದೇವನು ಸ್ಥಿತನಾಗುವನು. ಆತನು ಆತ್ಮ ನಾಶಗೊಳಿಸುವ ನರಕದ ಮೂರು ಬಾಗಿಲುಗಳನ್ನು ಮುಚ್ಚಿ, ಅಜ್ಞಾನದ ಕತ್ತಲೆಯನ್ನು

ಕತ್ತರಿಸಿ ಜ್ಞಾನ ಜ್ಯೋತಿಯನ್ನು ಬಿತ್ತರಿಸುವನು. "ನಹಿ ಕಲ್ಯಾಣ ಕೃತ್ಕ ಶ್ಚಿದ್ದುರ್ಗತಿಂ ತಾತಗಚ್ಛತಿ" ಎಂಬ ದೃಢ ವಿಶ್ವಾಸವಿರಲಿ.

೩

ಧನುರ್ಧಾರಿಯಾದ ಅರ್ಜುನನಂತೆ ಬಾಹ್ಯ ಶಕ್ತಿಯನ್ನು ಸಂಪಾದಿಸಬೇಕಾದರೆ ಕರ್ಮವಿಲ್ಲದೆ ಗತಿಯಿಲ್ಲ. ಕರ್ಮಾನುಸರಣೆಯೇ ನಮ್ಮ ಮಾರ್ಗವೆಂದರೆ ಅದು ಯೋಗಯುಕ್ತವಾಗಿರಲೇಬೇಕು. ಅದು ಕರ್ಮ ಯೋಗದಿಂದಲೆ ಸಾಧ್ಯ. "ಕರ್ಮ ಸನ್ಯಾಸಕ್ಕಿಂತ ಕರ್ಮ ಯೋಗವು ಹೆಚ್ಚಿನದು.

ರಹಸ್ಯವನ್ನರಿತು ಮಾಡಿದ ಕರ್ಮವು ದಿವ್ಯತೆಯನ್ನುಂಟು ಮಾಡಿ ಪಾಪದಿಂದ ವಿಮುಕ್ತಗೊಳಿಸುವದು. "ಸ್ವಭಾವಕ್ಕನುರೂಪವಾದ ಕರ್ಮ ಗೈವ ಮನುಷ್ಯನಿಗೆ ಪಾಪ ತಟ್ಟುವದಿಲ್ಲ."

ಜ್ಞಾನಯೋಗದಿಂದ ಪರಮಾತ್ಮಸ್ವರೂಪವನ್ನು ಹೊಂದುವಂತೆ ಕರ್ಮಯೋಗವೂ ಬ್ರಹ್ಮವನ್ನು ಪ್ರಾಪ್ತಮಾಡಿಕೊಳ್ಳುವದು.—

"ಅರ್ಪಣವು ಬ್ರಹ್ಮ, ಹವಿಸ್ಸು ಬ್ರಹ್ಮ, ಬ್ರಹ್ಮರೂಪೀ ಅಗ್ನಿಯಲ್ಲಿ ಹವನ ಮಾಡುವವನೂ ಬ್ರಹ್ಮವು. ಈ ಪ್ರಕಾರ ಕರ್ಮದೊಡನೆ ಯಾರು ಬ್ರಹ್ಮವನ್ನು ಸೇರಿದ್ದಾನೋ ಅವನು ಬ್ರಹ್ಮವನ್ನೇ ಪಡೆಯುತ್ತಾನೆ.

"ಯಜ್ಞಶೇಷವಾದ ಅಮೃತವನ್ನು ಸೇವಿಸುವ ಜನರು ಸನಾತನವಾದ ಬ್ರಹ್ಮವನ್ನು ಪಡೆಯುತ್ತಾರೆ.

"ಸಮತೆಯುಳ್ಳ ಮುನಿಯು ಶೀಘ್ರವಾಗಿ ಮೋಕ್ಷವನ್ನು ಹೊಂದುತ್ತಾನೆ."

ತಂತಮ್ಮ ಕರ್ಮಗಳಲ್ಲಿ ನಿರತರಾದ ಜನರು ಮೋಕ್ಷವನ್ನು ಪಡೆಯುತ್ತಾರೆ. ಸಮತ್ವವೇ ಯೋಗ. ಅದೇ ಕಾರ್ಯಕುಶಲತೆ. ಕರ್ಮ ಯೋಗಕ್ಕೆ ಸಮತೆಯೇ ಜೀವ. ಅಂತೇ-"ನೀನು ಸಮತಾಬುದ್ಧಿಯನ್ನು ಆಶ್ರಯಿಸು. ಫಲವನ್ನು ಉದ್ದೇಶವನ್ನಾಗಿ ಮಾಡಿಕೊಳ್ಳುವ ಮನುಷ್ಯನು ಕರುಣಾಪಾತ್ರನು" ಎಂದು ಸಾರಿಹೇಳಿದೆ.

ಸಮತೆಯೆಂದರೆ ಕರ್ಮಕ್ಕೆ ಪ್ರತಿಫಲವು ಬಂದರೂ ಬಾರದಿದ್ದರೂ ಸರಿಯೇ ಎಂಬ ಭಾವನೆಯು ಮೈಗೂಡಿ ಮನಗೂಡಿ ಹೋಗುವುದು. ಈ

ಬುದ್ಧಿಯುಂಟಾದರೆ—"ಸಮತಾ ಬುದ್ಧಿಯುಳ್ಳ ಜನರು ಕರ್ಮದಿಂದ ಹುಟ್ಟುವ ಫಲವನ್ನು ತ್ಯಜಿಸಿ ಜನ್ಮಬಂಧನದಿಂದ ಮುಕ್ತರಾಗಿಬಿಡುತ್ತಾರೆ. ಮತ್ತು ನಿಷ್ಕಳಂಕ ಗತಿಯನ್ನು ಮೋಕ್ಷವನ್ನು ಪಡೆಯುತ್ತಾರೆ."

ಅದಿಲ್ಲದಿದ್ದರೆ—"ಸಮತಾಬುದ್ಧಿಯಿಲ್ಲದವನಿಗೆ ವಿವೇಕವಿಲ್ಲ, ಭಕ್ತಿಯಿಲ್ಲ."

ಸಮತೆ, ಅನಾಸಕ್ತಿ, ಕರ್ಮಫಲಸಮರ್ಪಣ ಇವೆಲ್ಲಾ ಕರ್ಮಯೋಗರಹಸ್ಯದ ನುಡಿಗಳೇ. ಸಮತೆಯಿಲ್ಲದಿದ್ದರೆ ವಿವೇಕಭಕ್ತಿಗಳ ವಿನಾಶವಾಗುವಂತೆ, ಅನಾಸಕ್ತಿಯಿಲ್ಲದಿದ್ದರೆ ಅಂದರೆ "ಆಸಕ್ತಿಯಿಂದ ಕಾಮವೂ, ಕಾಮದಿಂದ ಕ್ರೋಧವೂ, ಕ್ರೋಧದಿಂದ ಮೌಢ್ಯವೂ ಹುಟ್ಟಿ, ಮೌಢ್ಯದಿಂದ ಎಚ್ಚರ ತಪ್ಪುವದು. ಅದರಿಂದ ಜ್ಞಾನವು ನಾಶವಾಗುವದು." ಜ್ಞಾನವಿನಾಶದಿಂದ ದಿವ್ಯಶಕ್ತಿಯು ಮುಗಿಲುಮಲ್ಲಿಗೆಯಾಗುವಂತೆ ಆಸಕ್ತಿಯಿಂದ ಅದೇಹಾಡು ಆಗುತ್ತದೆಂದಾಯಿತು.

"ಯಜ್ಞಾರ್ಥವಾಗಿ ಮಾಡಿದ ಕರ್ಮಗಳನ್ನು ಬಿಟ್ಟು ಉಳಿದ ಕರ್ಮಗಳಿಂದ ಈ ಲೋಕದಲ್ಲಿ ಬಂಧನ ಹುಟ್ಟುತ್ತದೆ." ಆದ್ದರಿಂದ ಸಂಗರಹಿತನಾಗಿ ನಿರಂತರವೂ ಕರ್ತವ್ಯಕರ್ಮ ಮಾಡೆಂದು ಭಗವಂತನ ಆಜ್ಞೆ. ಅಂತು ಅನಾಸಕ್ತಿ, ಯಜ್ಞ, ಕರ್ಮಫಲತ್ಯಾಗ, ಸಮತೆ ಮುಂತಾದ ಶಬ್ದಗಳಲ್ಲಿ ಗರ್ಭಿತವಾದ ತತ್ವವನ್ನು ಸಂಪಾದಿಸುವ ಬಗೆ ಹೇಗೆ ? ಮಗನಿಗೆ ಮನೆಯನ್ನೆಲ್ಲಾ ಒಪ್ಪಿಸಿಕೊಡುವ ತಂದೆ ಆದರ ಕೀಲಿಯನ್ನು ಕೊಡದಿರುವನೇ ?—

"ನನ್ನ ವಿಭೂತಿಯನ್ನು, ಶಕ್ತಿಯನ್ನು ಯಥಾರ್ಥವಾಗಿ ಅರಿತವನು ಅವಿಚಲವಾದ ಸಮತೆಯನ್ನು ಹೊಂದುವನೆಂಬುದರಲ್ಲಿ ಸಂಶಯವಿಲ್ಲ."

೪

ಗೀತೆ ಕಲ್ಪತರುವಿನ ಒಂದು ಮೊಳಕೆಯೆಂದರೆ, ಜ್ಞಾನ-ಕರ್ಮಗಳು ಆದರ ಎರಡು ಎಲೆಗಳು. ಅವಕ್ಕೆ ಭಕ್ತಿಯೆ ದೇಟು. ಜ್ಞಾನಕರ್ಮಗಳ ಅನಿವಾರ್ಯ ಐಕ್ಯವು ಭಕ್ತಿಯಲ್ಲಿ. ಗೀತೆಯಲ್ಲೆಲ್ಲ ಒಡೆದು ಕಾಣಿಸುವುದೆಂದರೆ—ಜ್ಞಾನಪೂರಿತ ಕರ್ಮ ಹಾಗೂ ಕರ್ಮ ಪ್ರೇರಿತ ಜ್ಞಾನ. ಯೋಗೇಶ್ವರ ಕೃಷ್ಣ ಮತ್ತು ಧನುರ್ಧಾರಿ ಅರ್ಜುನ. ಸಾಂಖ್ಯ ಹಾಗೂ ಯೋಗ. ಜ್ಞಾನ ಕರ್ಮಗಳ ಹೊಂದಿಕೆಯೂ, ಕೃಷ್ಣಾರ್ಜುನರ ಸಖ್ಯವೂ, ಸಾಂಖ್ಯ

ಯೋಗಗಳ ಸಮ್ಮೇಲನವೂ ಭಕ್ತಿಯ ಬಹಿರಂಗಗಳು. ಅರ್ಜುನನ ಸವ್ಯ ಸಾಚಿತ್ವಕ್ಕೆ ಮೆಚ್ಚಿ ಶ್ರೀಕೃಷ್ಣನು ಅವನನ್ನು ರಣರಂಗದಲ್ಲಿ ತಂದು ನಿಲ್ಲಿಸಿದನು. ಆದರೆ ಕೃಷ್ಣಾರ್ಜುನರನ್ನು ಅಂದರೆ ಜ್ಞಾನಕರ್ಮಗಳನ್ನು ಒಂದಿಸಿದ್ದು ಭಕ್ತಿ. ಭಕ್ತಿ ಹಸಿವೆ; ಜ್ಞಾನ ಅಮೃತ; ಕರ್ಮ ತೃಪ್ತಿ.

ಎಲ್ಲಕ್ಕೂ ಮೊದಲಿಗೆ ಅರ್ಜುನನ ಸ್ವಾಭಾವಿಕ ವೃತ್ತಿಯು ಹೇಡಿತನದಿಂದ ಕುಂದಿ, ಆತನು ಕರ್ತವ್ಯಮೂಢನಾಗಿ—"ನಾನು ನಿನ್ನ ಶಿಷ್ಯನು. ನಿನಗೆ ಶರಣಾಗತನಾಗಿರುವೆನು. ಮಾರ್ಗ ತೋರಿಸು." ಎಂದು ಮೊರೆ ಇಡುವನು. ಅರ್ಜುನನ ಹೃದಯಪಾತ್ರೆಯು ಹೀಗೊಮ್ಮೆ ಬರಿದಾಗಿ ಬಿಟ್ಟಾಗಲೆ, ಜ್ಞಾನಪೀಯೂಷವು ಹನಿಯಲಿಕ್ಕೆ ಆರಂಭವಾಯಿತು. ಅಂತೇ ಆ ಅವಿನಾಶಿಯಾದ ಪುರಾತನ ಯೋಗವನ್ನು—ಭಗವಂತನು ಆ ಮುಂಚೆ ಸೂರ್ಯನಿಗೆ ಮಾತ್ರ ಉಸುರಿದ್ದನ್ನು ಅಂದು ಅರ್ಜುನನಿಗೆ 'ನೀನು ನನ್ನ ಭಕ್ತನಾದ್ದರಿಂದ' ಉಸುರುವೆನೆಂದನು.

"ನನ್ನ ಮರೆಹೊಕ್ಕವರು, ನನ್ನ ಸ್ವರೂಪವನ್ನು ಹೊಂದುವರು"

"ನನಗೆ ಶರಣಾಗತರಾದವರು ದುಸ್ತರವಾದ ತ್ರಿಗುಣಮಯ ದೈವೀ ಮಾಯೆಯಿಂದ ಪಾರಾಗುವರು."

ನನ್ನ ಸ್ಮರಣೆಮಾಡು; ಮತ್ತು ಯುದ್ಧ ಮಾಡು. ನೀನು ಸಂದೇಹವಿಲ್ಲದೆ ನನ್ನನ್ನು ಹೊಂದುವಿ."

"ದಿವ್ಯವಾದ ಪರಮಪುರುಷನನ್ನೈದುವರೆ ಭಕ್ತಿಯಿಂದ ಆದ್ರ್ರನಾಗಿರು."

"ನಿತ್ಯದಲ್ಲಿಯೂ ಸತತವಾಗಿ ನನ್ನ ಸ್ಮರಣೆಮಾಡುವ ನಿತ್ಯಯೋಗಿಯು ನನ್ನನ್ನು ಸಹಜವಾಗಿ ಹೊಂದುವನು."

"ಉತ್ತಮಪುರುಷನ ದರ್ಶನವು ಅನನ್ಯಭಕ್ತಿಯಿಂದ ಲಭಿಸುವದು."

"ಅನನ್ಯಭಾವದಿಂದ ನನ್ನನ್ನು ಚಿಂತಿಸುತ್ತ ನನ್ನನ್ನೇ ಭಜಿಸುವವರ ಯೋಗಕ್ಷೇಮವನ್ನು ನಾನು ಯಾವಾಗಲೂ ವಹಿಸಿಕೊಳ್ಳುವೆನು."

"ಅನ್ಯ ದೇವತೆಗಳನ್ನಾದರೂ ಶ್ರದ್ಧಾಪೂರ್ವಕವಾಗಿ ಪೂಜಿಸುವವರು ನನ್ನನ್ನೇ ಪೂಜಿಸುವರು."

"ಭಕ್ತಿಪೂರ್ವಕವಾಗಿ ಇತ್ತ ಎಲೆ, ಹೂ, ಹಣ್ಣು, ಏನೇ ಇರಲಿ ನಾನು ಸೇವಿಸುವೆ."

"ಕರ್ಮಬಂಧನದಿಂದ ಬಿಡುಗಡೆ ಹೊಂದಿ ಜನನಮರಣಗಳಿಂದ ಮುಕ್ತನಾಗಿ ನನ್ನನ್ನೇ ಸೇರಬೇಕಾದರೆ, ನೀನು ಮಾಡುವುದೆಲ್ಲವನ್ನೂ ನನಗೆ ಅರ್ಪಣ ಮಾಡಿಯೇ ಮಾಡು."

"ಭಕ್ತಿಪೂರ್ವಕವಾಗಿ ನನ್ನ ಭಜನೆ ಮಾಡುವವರು ನನ್ನಲ್ಲಿರುವರು"

"ಅನನ್ಯಭಾವದಿಂದ ನನ್ನ ಭಜಿಸಿದ ದುರಾಚಾರಿಯು ಕೂಡ ಸಾಧುವಾಗಿರುವನೆಂತಲೇ ತಿಳಿಯಬೇಕು."

ನನ್ನ ಭಕ್ತನು ಎಂದಿಗೂ ನಷ್ಟವನ್ನೈದುವದಿಲ್ಲ."

"ಸ್ತ್ರೀ-ವೈಶ್ಯ-ಶೂದ್ರರೂಕೂಡ ನನಗೆ ಶರಣು ಬಂದರೆ ಪರಮಗತಿಯನ್ನು ಹೊಂದುವರು."

ವೇದಾಭ್ಯಾಸದಿಂದ, ಯಜ್ಞದಿಂದ, ಬೇರೆ ಶಾಸ್ತ್ರಾಭ್ಯಾಸದಿಂದ, ದಾನದಿಂದ, ಕ್ರಿಯೆಗಳಿಂದ, ಉಗ್ರತಪಸ್ಸಿನಿಂದ ಸಾಧ್ಯವಾಗದ ತನ್ನ ರೂಪವನ್ನು ನೋಡುವುದಕ್ಕೆ ಅರ್ಜುನನು ಹೇಗೆ ಸಮರ್ಥನಾದನು ?

"ಅಂಥ ದರ್ಶನವೂ ಜ್ಞಾನವೂ ನನ್ನಲ್ಲಿ ನಿಜವಾದ ಪ್ರವೇಶವೂ ಕೇವಲ ಅನನ್ಯ ಭಕ್ತಿಯಿಂದ ಸಾಧ್ಯ.

"ಏಕನಿಷ್ಠಭಕ್ತಿಯೋಗದಿಂದ ನನ್ನ ಸೇವೆ ಮಾಡುವವನು ತ್ರಿಗುಣಾತೀತನಾಗಿ ಬ್ರಹ್ಮರೂಪವನ್ನೈದಲು ಯೋಗ್ಯನಾಗುತ್ತಾನೆ."

"ನಾನಾರು, ನಾನು ಹ್ಯಾಗಿರುವೆನು ಎಂಬದನ್ನು ಚೆನ್ನಾಗಿ ಅರಿಯುವುದು ಭಕ್ತಿಯಿಂದ."

"ನೀನು ಪರಮ ಶಾಂತಿಮಯವೂ ಅಮರವೂ ಆದ ಪದವನ್ನು ಹೊಂದುವೆ-ಶರಣಾಗತನಾಗು."

"ಸಕಲ ಧರ್ಮಗಳನ್ನೂ ತ್ಯಜಿಸಿ ನೀನು ನನಗೊಬ್ಬನಿಗೇ ಶರಣಾಗತನಾಗು. ನಾನು ಸಕಲ ಪಾಪಗಳಿಂದ ನಿನ್ನನ್ನು ಬಿಡುಗಡೆ ಮಾಡುವೆನು. ನೀನು ಶೋಕಿಸಬೇಡ."

"ನನ್ನಲ್ಲಿಯೇ ಮನಸ್ಸಿಡು. ನನ್ನ ಭಕ್ತನಾಗು. ನನಗೋಸ್ಕರ ಯಜ್ಞ ಮಾಡು. ನನಗೇ ನಮಸ್ಕರಿಸುತ್ತಿರು. ನೀನು ನನ್ನನ್ನೆ ಹೊಂದುವೆ. ಇದು ನನ್ನ ಸತ್ಯಪ್ರತಿಜ್ಞೆ."

ಹೀಗೆ ಗೀತೆಯ ತುಂಬ ಅರ್ಪಣ, ಅನನ್ಯಭಕ್ತಿ, ಶರಣಾಗತಿ, ಶ್ರದ್ಧೆ ಇವು ಹಂದರವೇರಿದ ಬಳ್ಳಿಯ ಹೂ-ಕಾಯಿಗಳಂತೆ ಸೂರೆಗೊಂಡಿವೆ.

ಜ್ಞಾನಿಯಾದರೊ ತನ್ನ ಆತ್ಮವೆಂದುಸುರಿದ ಭಗವಂತನು, ಅನನ್ಯ ಭಾವದಿಂದ ಭಜಿಸುವ ಜ್ಞಾನಿಯೇ ಶ್ರೇಷ್ಠ (೭-೧೫) ನೆಂದೂ, ಈ ಪವಿತ್ರ ಅಮೃತರೂಪದ ಜ್ಞಾನವನ್ನು ನನ್ನಲ್ಲಿ ಪರಾಯಣರಾಗಿ ಶ್ರದ್ಧೆಯಿಂದ ಸೇವನೆ ಮಾಡುವವರು ನನಗೆ ಅತ್ಯಂತ ಪ್ರಿಯಭಕ್ತರೆಂದೂ (೧೨-೨೦) ಸಾರಿದ್ದಾನೆ. ಜ್ಞಾನದ ಗುರುತುಗಳನ್ನು ಹೇಳುವುದರಲ್ಲಿ "ಅನನ್ಯ ಧ್ಯಾನಪೂರ್ವಕ ಏಕನಿಷ್ಠಾಭಕ್ತಿ" (೧೩-೯) ಯನ್ನು ಮರೆತಿಲ್ಲ. ಜನನ ಮರಣಗಳ ಚಕ್ರದಲ್ಲಿ ಬೀಳಿಸದಿರುವಂಥ ಪದವನ್ನು ಹುಡುಕಲೆತ್ನಿಸುವ ಮುಂಚೆ--"ಸನಾತನ ಪ್ರವೃತ್ತಿಮಾಯೆಯನ್ನು ಹರಡಿದ ಆ ಆದಿಪುರುಷ ನಿಗೆ ನಾನು ಶರಣು ಹೊಗುವೆನು" ಎಂದು ಪ್ರಾರ್ಥಿಸಲಿಕ್ಕೆ ತಿಳಿ ಸಿದ್ದಾನೆ. (೧೫-೪)

ದೇವತೆಗಳಿಗೂ ವೇದಾಭ್ಯಾಸಿಗಳಿಗೂ ದುರ್ಲಭನಾದ ವಿಶ್ವರೂಪ ದರ್ಶನವೂ ಅದಕ್ಕೆ ಬೇಕಾಗುವ ದಿವ್ಯ ಚಕ್ಷುಗಳೂ ಭಕ್ತರಿಗೆ ಮಾತ್ರ ಲಭಿ ಸುವವು. ಜನ್ಮ-ಮೃತ್ಯು ಜಗತ್ತಿನ ದುಃಖಗಳಿಂದ ಬಿಡುಗಡೆ ಹೊಂದಲು, ತ್ರಿಗುಣಾತೀತನಾಗೆಂದು ಹೇಳಿ ಅಷ್ಟಕ್ಕೆ ಬಿಡದೆ 'ಏಕನಿಷ್ಠಭಕ್ತಿಯೋಗ'ದ ತತ್ವವನ್ನು ಹೇಳುವ ಕಾರಣವೇನು ? ಕೊನೆಗೆ 'ಸರ್ವಗುಹ್ಯತಮ'ವಾದ ರಹಸ್ಯದಲ್ಲಿ "ನನ್ನನ್ನು ಹೊಂದುವೆ. ಆಣೆಮಾಡಿ ಹೇಳುತ್ತೇನೆ" ಎಂದುದು ಏತಕ್ಕಾಗಿ ? ಭಕ್ತನು ದೇವನ ಸೇವಕ, ದೇವನು ಭಕ್ತನ ದಾಸ ಎಂದ ಲ್ಲವೇ ? ಆದರೆ ಈ ಭಕ್ತಿಯು ಹೇಗೆ ಸಾಧ್ಯವೆಂಬುದನ್ನು ಹೇಳಲಿಕ್ಕೂ ಭಗವಂತನಿಗೆ ಮರವೆಯಾಗಿಲ್ಲ. ಬೊಕ್ಕಸದ ಕೀಲಿ ಒಪ್ಪಿಸಿದವನು ಅದನ್ನು ತೆರೆಯುವ ಯುಕ್ತಿಯನ್ನು ತಿಳಿಸದಿರುವನೇ ?--

"ನಿನ್ನ ಮನಸ್ಸನ್ನು ನನ್ನಲ್ಲಿ ನೆಲೆಯಾಗಿಡು. ನಿನ್ನ ಬುದ್ಧಿಯನ್ನು ನನ್ನಲ್ಲಿಡು."

ಇದಕ್ಕೆ ಅಸಮರ್ಥರಾದವರು --"ಅಭ್ಯಾಸಯೋಗದ ಮೂಲಕ ನನ್ನನ್ನು ಹೊಂದುವ ಇಚ್ಛೆ ತಳೆಯಬೇಕು."

ಈ ಅಭ್ಯಾಸವೂ ಬಿಗಿಯೆನಿಸಿದರೆ--"ಸಕಲ ಕರ್ಮಗಳನ್ನೂ ನನಗ ರ್ಪಿಸು" ಅದಾಗದಿದ್ದರೆ--"ಕರ್ಮಫಲಗಳನ್ನು ತ್ಯಾಗಮಾಡು."

ಒಟ್ಟಿಗೆ ಕರ್ಮಫಲ ತ್ಯಾಗವು ಸರಳವೂ, ತತ್ಕಾಲಕ್ಕೆ ಶಾಂತಿದಾ ಯಕವೂ ಆಗಿದೆ. ಅದಕ್ಕೂ ಮೊದಲು ನಮ್ಮ ಸಂಪೂರ್ಣ ಜೀವನವು ಭಗವಂತನಿಗೆ ನೈವೇದ್ಯ ಹಾಗೂ ಬಲಿದಾನವೆಂದು ನಿರ್ಧಾರವಾಗಬೇಕು.

ಈ ನಿರ್ಧಾರದ ನೆನಪು, ನಮ್ಮ ಮುಂದಿನ ಹೆಜ್ಜೆಗಳಿಗೆ ಬೆಳಕನ್ನೀಯುತ್ತ ಹೋಗುವುದರಲ್ಲಿ ಸಂಶಯವಿಲ್ಲ.

೫

ಇಂತು ಅಂತರ್ಬಾಹ್ಯಸಾಧನೆಗಳಿಂದ ಪೂರ್ಣತೆಯನ್ನು ಹೊಂದಿದ ಆತ್ಮವು ತಾನಾಗಿಯೇ ಪರಮಾತ್ಮವಿಲೀನವಾಗಿ ಬಿಡಬಲ್ಲದು. ಆಗ ಜಗತ್ತಿನೊಳಗಿನ ಕಷ್ಟ, ಸಂಕಟ, ಸಾವು, ನೋವು, ಮುಪ್ಪು, ದುಃಖ ಇವುಗಳಿಂದ ಯಾವ ತೊಂದರೆಯೂ ಉಂಟಾಗದು. ಮೀನು ಮೊಸಳೆಗಳೇ ಮುಟ್ಟದಿರುವಂತೆ ಔಷಧಿಯನ್ನು ಬಳಿದುಕೊಂಡು ಸಮುದ್ರದಲ್ಲಿ ಈಸು ಬೀಳಲಿಕ್ಕೆ ಸಂಕಟವೇನು ? ಅಲ್ಲಿ ಮುಳುಗಿದರೆ ಮುತ್ತು-ಹವಳಗಳ ರಾಸಿ ಕೈವಶವಾಗುವ ಸಂಭವವಿದೆ. ಕಟ್ಟಿಟ್ಟ ಸ್ವರ್ಗವನ್ನು ಅರಸುತ್ತ ಅಲೆಯುವದಕ್ಕಿಂತ ಕುಳಿತಲ್ಲಿಯೇ ಅದನ್ನು ನಿರ್ಮಿಸಿಕೊಂಡವನು ಮುಕ್ತಿಯನ್ನು ಪಡೆದಂತಲ್ಲವೇ ? ಅಂಥವರಿಗೆ ಮೋಕ್ಷವಾದರೂ ಏತಕ್ಕೆ ಬೇಕಾದೀತು ? ಅವನು ತನ್ನ ವಿಮುಕ್ತ ಸ್ಥಿತಿಯನ್ನೇ ಜೀವಜೀವರುಗಳಿಗೆ ತಂದೊದಗಿಸುವ ಅಜೇಯ ಶಕ್ತಿವಂತನು, ಮೋಕ್ಷದ ರಾಣೀವಾಸವನು ಸೇರಿಕೊಂಡು ಕುಳ್ಳಿರಲೆಳಸುವನೇ ? ಮನೆಯ ಯಜಮಾನನಾದವನ್ನು ಬಂದ ಅತಿಥಿ ಅಭ್ಯಾಗತರನ್ನು ಮೊದಲು ಉಣಬಡಿಸಿ, ಹಿಂದಿನಿಂದ ತಾನು ಊಟ ಮಾಡಬೇಕಂತೆ! ಸ್ವರ್ಗದಲ್ಲಿರುವ ದೇವನ ವಿಭೂತಿ-ಶಕ್ತಿಗಳು ಇಲ್ಲಿಯೂ ಇರಲೇಬೇಕು. ಅವುಗಳನ್ನರಿತುಕೊಂಡು, ಕುಡಿ ಬಂದು ಕಣ್ಣು ಮುಚ್ಚಿದ ಸುತ್ತಲಿನ ಆತ್ಮದೀಪಗಳನ್ನು ಬೆಳಗಿಸುತ್ತ ಪರಮಾತ್ಮನ ಲೀಲಾರಂಗದಲ್ಲಿ ಸ್ವರಗೂಡಿಸುವ ಸೌಭಾಗ್ಯಕ್ಕಿಂತ ಸ್ವರ್ಗವೇನು ಮಿಗಿಲೇ?

ಪಾರ್ಥಸಾರಥಿಯು ನಮ್ಮ ಹೃದಯರಥವನ್ನೇರಿ, ನಮ್ಮನ್ನು ಯುದ್ಧರಂಗಕ್ಕೆಳತಂದು ನಿಲ್ಲಿಸದಿದ್ದರೆ, ಕರ್ಮಕೌಶಲವೂ, ಜ್ಞಾನಪ್ರಾಪ್ತಿಯೂ ಉಂಟಾಗಲಾರವು. ಆದ್ದರಿಂದ ಹೃದಯವನ್ನು ತೆರವು ಮಾಡಿಟ್ಟುಕೊಂಡು ಆತನನ್ನು ಬರಮಾಡೆಂದು ಪ್ರಾರ್ಥಿಸುವಾ.—

“ಹೇ! ಸರ್ವ! ನಿನಗೆ ಮುಂದೆ ಹಿಂದೆ ಎಲ್ಲಕಡೆಯಿಂದಲೂ ನಮಸ್ಕಾರ. ನಿನ್ನ ವೀರ್ಯವು ಅನಂತವಾದುದು. ನಿನ್ನ ಶಕ್ತಿ ಅಪಾರವಾದುದು. ಎಲ್ಲವನ್ನೂ ನೀನೇ ರಕ್ಷಿಸುವೆ. ಆದ್ದರಿಂದ ಸರ್ವವೂ ನೀನೇ ”

# ಹರಿಶ್ಚಂದ್ರ ಚರಿತ್ರೆಯ ಮರ್ಮ.

(ಲೇಖಕ:— ಶ್ರೀ ಬಸವಪ್ಪ ಚೆನ್ನಪ್ಪ ಪಟ್ಟೇದ ಬಂಟನೂರಿ)

---

ಜಗತ್ತಿನಲ್ಲಿ ಸತ್ಯವೆಂಬುದು ಒಂದೇ ಒಂದಾದ ವಸ್ತುವಿರುವದು. ಅದನ್ನೇ ವೇದಾಂತಿಗಳು ಪರಬ್ರಹ್ಮವೆಂದೂ, ಸಾಮಾನ್ಯರು ದೇವರು-ಪರಮೇಶ್ವರ (ಪರಮಾತ್ಮ) ನೆಂದೂ, ವೀರಶೈವರು ಪರಶಿವ ಇಲ್ಲವೆ ಮಹಾ ಲಿಂಗವೆಂದೂ ಕರೆಯುತ್ತಿರುವರು. ಈ ದೃಶ್ಯ ವಿಶ್ವವೆಲ್ಲ ಆ ಪರಮಾತ್ಮನ ಶಕ್ತಿಯಿಂದಲೇ ಲೀಲಾ ಮಾತ್ರವಾಗಿ ಉತ್ಪತ್ತಿ ಸ್ಥಿತಿ ಲಯಗಳನ್ನು ಹೊಂದುತ್ತಿರುವದು. ದೃಷ್ಟಿಗೋಚರವಾಗುವ ಪ್ರತಿಯೊಂದು ವಸ್ತುವಿನಲ್ಲಿ ಅವನು ಚೈತನ್ಯರೂಪದಿಂದ ವಾಸಿಸಿ, ಸರ್ವ ಸೂತ್ರಧಾರಿಯಾಗಿ, ತನ್ನ ಸಾಕ್ಷಿತ್ವದಲ್ಲಿಯೇ ಸಕಲ ಕಾರ್ಯಗಳನ್ನು ಸಾಗಿಸುತ್ತಿರುವನು. ಹೀಗೆ ನಮ್ಮ ಭಾರತೀಯ ತತ್ವಜ್ಞಾನವು ಸಾರುತ್ತದೆ. ಈ ದೃಷ್ಟಿಯಿಂದ ಆಲೋಚಿಸಿದರೆ, ಜಗತ್ತು ತೋರಿಕೆಯಲ್ಲಿ ಮಾಯಾರೂಪವಿದ್ದು (ಅಂದರೆ ಸತ್ಯವನ್ನು ಮರೆಯಿಸಿ "ಜಗವು ಸತ್ಯರೂಪವಲ್ಲ-ಬೇರೊಂದು ವಿಧವಾಗಿರುವದು" ಎಂಬ ಭ್ರಾಂತಿಯನ್ನು ಹುಟ್ಟಿಸುವ ಸ್ವರೂಪದ್ದಿದ್ದು). ನಿಜವಾಗಿ ಎಲ್ಲೆಲ್ಲಿಯೂ ಆ ಸತ್ಯ ವಸ್ತುವಾದ ಪರಮಾತ್ಮ ತತ್ವವೇ ವ್ಯಾಪಿಸಿ ನಿಂತಿರುತ್ತದೆಂಬದು ಮನವರಿಕೆಯಾಗದಿರದು.

ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳಲ್ಲಿ ಮನುಷ್ಯಪ್ರಾಣಿಗೆ ಅತ್ಯಂತ ಶ್ರೇಷ್ಠಸ್ಥಾನವಿರುತ್ತದೆ. ಇದಕ್ಕೆ ಅವನಲ್ಲಿರುವ ಜ್ಞಾನವೇ ಕಾರಣವು! ಆ ಜ್ಞಾನದ ಯೋಗದಿಂದ ಆತನು "ನಾನು ಯಾರು? ಈ ಜಗತ್ತಿನ ನಿಜಸ್ವರೂಪವೇನು? ಪರಮಾತ್ಮನೆಂದರೆ ಯಾರು? ಇತ್ಯಾದಿ ಪ್ರಶ್ನೆಗಳನ್ನು ಬಲು ಜಾಣತನದಿಂದ ಶೋಧಿಸಿ ಸಿದ್ಧಾಂತಗೊಳಿಸಿದ್ದಾನೆ. ಸರ್ವ ಸಾಮಾನ್ಯವಾಗಿ ಜನರು ಅಜ್ಞಾನ (ಮರವೆಯು) ವಶದಿಂದ ಇವುಗಳ ಬಗ್ಗೆ ತಪ್ಪು ತಿಳುವಳಿಕೆಯನ್ನು ಹೊಂದಿ, ಬಹು ಭ್ರಾಂತಿಗೆ ಈಡಾಗಿರುವರು. ಆದರೆ ನಿಜವಾದ ಜ್ಞಾನಿಗಳು ಮಾತ್ರ ಎಚ್ಚರದಿಂದ ನಡೆದು, ಪ್ರಪಂಚದ ಜಾಲಕ್ಕೆ ಒಳಗಾಗದೆ ಸ್ವತಂತ್ರರಾಗಿ, ಆ ಪರಶಿವನ ಸತ್ಯ ಸ್ವರೂಪವನ್ನರಿದು, ಅದರಲ್ಲಿ ಬೆರೆದು ಪರಮ ಸುಖಿಗಳಾಗುವರು. ಇಂತಹರ ಬಾಳೇ ಬಾಳು! ಇತರರದು ಗೋಳು!! ಎಲ್ಲವೂ ಹಾಳು!!!

"ಜಗವೆಲ್ಲವೂ ಪರಮಾತ್ಮನ ಸ್ವರೂಪವೆಂದು ಒಮ್ಮೆ ಸಿದ್ಧಾಂತವಾದ ಮೇಲೆ ("ವಿಶ್ವರೂಪಾಯ ವೈ ನಮಃ" ಎಂದು ಶ್ರುತಿ), ಅದರ ಅಂಗವಾದ ಮಾನವನು ಕೂಡ ಪರಮಾತ್ಮನ ಅಂಶವೇ-ಅವನ ಸ್ವರೂಪವೇ- ಎಂಬುದು ಸಹಜವು. ಹೀಗೆ ಮನುಜನು ಮತ್ತು ಜಗತ್ತು ಇವೆರಡೂ ಪರಮಾತ್ಮನ ಸ್ವರೂಪವಾದ ಬಳಿಕ "ನಾನು, ನೀನು, ಅವನು, ಅವಳು, ಅದು," ಇತ್ಯಾದಿ ಭೇದಭಾವವೇನೂ ತಾತ್ವಿಕ ರೀತಿಯಿಂದ ಉಳಿಯಲೇ ಇಲ್ಲ. ಆದರೆ ವ್ಯವಹಾರದಲ್ಲಿ ನೋಡಿದರೆ ಪ್ರತಿಯೊಬ್ಬನು ಭೇದ ಬುದ್ಧಿಯುಳ್ಳವನಾಗಿ "ನಾನು, ನನ್ನದು" ಎಂದು ಯಾವಾಗಲೂ ಪರಿಶ್ರಮಗೊಳ್ಳುತ್ತಿರುವದೇ ಕಂಡು ಬರುತ್ತದೆ. ಇದು ವಸ್ತುಸ್ಥಿತಿಗೆ ತೀರ ವಿರುದ್ಧವಾಗಿರುವದು. ಹೀಗೆ ತಪ್ಪು ತಿಳಿದು ಆಚರಿಸುತ್ತಿರುವದರಿಂದಲೇ, ಮನುಷ್ಯನು ದುಃಖಕ್ಕೆ ಗುರಿಯಾಗಿದ್ದಾನೆ. ದುಃಖದ ಲವಲೇಶವೂ ಇಲ್ಲದೆ ಸರ್ವದಾ ಸುಖಿಯಾಗಿರಬೇಕಾದರೆ, ಸಚ್ಚಿದಾನಂದ ನಿತ್ಯ ಪರಿಪೂರ್ಣವೆಂಬ ಪಂಚಲಕ್ಷಣಯುಕ್ತ ಪರಮಾತ್ಮ ಸ್ವರೂಪವೇ ತಾನೆಂದು ದೃಢವಾಗಿ ನಂಬಿ, ಆ ಮೇರೆಗೆ ತಪ್ಪದೆ ಆಚರಿಸುವದೊಂದೇ ಮಾರ್ಗವಿರುತ್ತದೆ. ಇದೇ ಹಾದಿಯನ್ನು ಸರ್ವರೂ ಹಿಡಿಯುವದು ಯುಕ್ತವೂ ಅವಶ್ಯವೂ ಉಂಟು. ಇದೇ ಮಾತನ್ನು ಹರಿಶ್ಚಂದ್ರನ ಚರಿತೆಯ ರೂಪದಿಂದ ಮಹಾ ಭಾರತವು ಜಗತ್ತಿನ ಮುಂದಿಟ್ಟಿರುತ್ತದೆ. ಅದು ಹೇಗೆಂದರೆ-

ಹರಿಶ್ಚಂದ್ರನು ನಿಃಸೀಮನಾದ ಸತ್ಯಾವಲಂಬಿಯು, ಜಗತ್ತಿನ ನಿಜಸ್ವರೂಪವನ್ನು ಪೂರಾ ಬಲ್ಲವನು. ತನಗೂ ಜಗತ್ತಿಗೂ ದೇವರಿಗೂ ಇರುವ ನಿಕಟ (ಐಕ್ಯ) ಸಂಬಂಧವನ್ನು ಮನಗಂಡವನು. ಅಂತೆಯೇ ಕನಸಿನಲ್ಲಿ ವಿಶ್ವಾಮಿತ್ರನಿಗೆ ಮಾಡಿದ ರಾಜ್ಯಾದಿ ಸಿರಿ ಸಂಪತ್ತಿಲ್ಲದರ ದಾನವನ್ನು ಎಚ್ಚರದಲ್ಲಿ ಬಳಿಕೆಗೆ ತಂದು ಕೃತಾರ್ಥನಾದನು. ಈ ಸಂಗತಿಯ ಮರ್ಮವನ್ನು ವಿಶದವಾಗಿ ವಾಚಕರ ಮುಂದಿಡಬೇಕೆಂಬುದೇ ಈ ಬರಹದ ಉದ್ದೇಶವು. ಇಲ್ಲಿ ಹರಿಶ್ಚಂದ್ರನೆಂದರೆ, ಸಾಮಾನ್ಯವಾಗಿ ಮಾನವನು (ಜೀವನು). ವಿಶ್ವಾಮಿತ್ರನೆಂದರೆ, ವಿಶ್ವದ ಮಿತ್ರನು ಅಥವಾ ನಾಥನು.--ಅರ್ಥಾತ್ ದೇವರು. ಈ ದೇವರು "ಅಣೋರಣೀಯಾನ್ (ಸೂಕ್ಷ್ಮ ಇಲ್ಲವೆ ನಿರಾಕಾರ ರೂಪು) ಮಹತೋ ಮಹೀಯಾನ್ (ಸ್ಥೂಲ ಅಥವಾ ಸಾಕಾರ ರೂಪು)" ಎಂಬೆರಡು ರೂಪದವನೆಂದು ವೇದದಲ್ಲಿ ವರ್ಣಿಸಲ್ಪಟ್ಟಿರುವನು. ಆತನ ಸ್ಥೂಲರೂಪವೇ ಈ ದೃಶ್ಯಸೃಷ್ಟಿಯು.

ಹಾಗು ಸೃಷ್ಟಿಯಲ್ಲಿ ಮಾನವ ಪ್ರಾಣಿಯೇ ಅತ್ಯಂತ ಮಿಗಿಲು. ಆದು ದರಿಂದ ಕ್ಷಣ ಹೊತ್ತು, ಇಲ್ಲಿ ಮನುಜ ಕೋಟಿಯೇ ದೇವರ ಸ್ಥೂಲ ರೂಪವೆಂದು ಗ್ರಹಿಸಿದರೂ, ಅದು ನಿಜಸ್ಥಿತಿಗೆ ಹೆಚ್ಚು ಒಪ್ಪನ್ನೂ ಪ್ರಾಶಸ್ತ್ಯವನ್ನೂ ಕೊಡುವದಲ್ಲದೆ, ಎನಿತೆನಿತೂ ಬಾಧಿಸಲಾರದು. ಆ ನಿರಾಕಾರ ಪರಮಾತ್ಮನನ್ನು ಜಡ ದೃಕ್ಕಿನಿಂದ ಕಾಣುವದು ಶಕ್ಯವಿರದಿದ್ದರೂ ಸ್ಥೂಲ ಪರಮಾತ್ಮ ಸ್ವರೂಪನಾದ ಈ ಜನತಾರೂಪ ಜಗದೀಶನನ್ನು ಬೇಕಾದವರು ಸಹಜವಾಗಿ ಕಾಣಬಲ್ಲರು. ಆದಕಾರಣ ಮನುಷ್ಯ ಪ್ರಾಣಿಯೇ ಪ್ರತ್ಯಕ್ಷ ದೇವರು! ವಿಶ್ವಾಮಿತ್ರನು ಮನುಜನೂ ಅದರೊಳಗೆ ಋಷಿಯೂ ಆಗಿದ್ದುದರಿಂದ, ಅವನು ಮತ್ತಿಷ್ಟು ಪೂಜ್ಯನಾದನು. ಇಲ್ಲಿ ಅವನನ್ನು ವ್ಯಷ್ಟಿರೂಪದಿಂದ ಭಾವಿಸದೆ ಸಮಷ್ಟಿರೂಪವಾಗಿ ಗ್ರಹಿಸುವದೇ ಹೆಚ್ಚು ಯೋಗ್ಯವು.

ಈ ನರಜನ್ಮವು ಒಂದು ದೀರ್ಘ ಕಾಲದ ಕನಸೇ ಸರಿ! ಯಾಕೆಂದರೆ– ಎಚ್ಚತ್ತ ಕೂಡಲೆ ಸ್ವಪ್ನದಲ್ಲಿ ಇದ್ದುದೆಲ್ಲ ಪೂರ್ಣವಾಯವಾಗಿ ಹೋಗುವಂತೆ, ಜ್ಞಾನೋದಯವಾದ ಕೂಡಲೆ (ಇಲ್ಲವೆ ಮರಣೋತ್ತರ) ಈ ಪ್ರಪಂಚವೆಲ್ಲ ಪೂರ್ಣ ಅಡಗಿಬಿಡುತ್ತದೆ. ಆದುದರಿಂದ ನಾವು ಜಾಗ್ರದಲ್ಲೆಂದು ನಡಿಸುವ ಕಾರ್ಯಗಳೆಲ್ಲ, ಜ್ಞಾನಿಗಳ ದೃಷ್ಟಿಯಲ್ಲಿ ಸ್ವಪ್ನಪ್ರಾಯವೇ ಆಗಿರುವವು. ಹರಿಶ್ಚಂದ್ರನು ಕನಸಿನಲ್ಲಿ ದಾನಮಾಡಿದನೆಂದರೆ, ಎಚ್ಚರಿದ್ದಾಗಲೇ ತಿಳಿದೂ ಹೊಳೆದೂ ಮಾಡಿದನೆಂದೇ ಸ್ವಿಕರಿಸತಕ್ಕದ್ದು. ಎಚ್ಚರೆಂದರೆ, ಅಜ್ಞಾನರೂಪದ ಮರವೆಯು ಹರಿದುಹೋಗಿ, ಸುಜ್ಞಾನಾವಸ್ಥೆಯು ಪ್ರಾಪ್ತವಾಗುವದೇ ಹೊರತು, ಮತ್ತೇನೂ ಅಲ್ಲ! "ನಾನು, ನನ್ನದು" ಎಂಬುದೇ ಅಜ್ಞಾನ! ನಿಜವಾಗಿ ಪರಮಾತ್ಮನೇ ಜಗದ್ರೂಪವಾಗಿದ್ದಾನೆ. "ಸರ್ವಂ ಖಲ್ವಿದಂ ಬ್ರಹ್ಮ" ಎಂಬುದು ಶ್ರುತಿ. "ಲಿಂಗರೂಪಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ" ಎಂಬುದು ಆಗಮ. ಆದಕಾರಣ ಎಲ್ಲವೂ ಪರಮಾತ್ಮನೇ–ಪರಮಾತ್ಮನದೇ! ಅಂತೇ ಶ್ರೀ ಬಸವಣ್ಣನವರು "ಶಿವನ ಸೊಮ್ಮು ಶಿವನಿಗೆ ಸಲ್ಲಿಸಿ ಬಿಡಬೇಕು" ಎಂದು ವಚನ ರೂಪವಾಗಿ ಉದ್ಘೋಷಿಸಿದ್ದಾರೆ. ಶಿವಭಕ್ತನು ಪರಿಪೂರ್ಣ ಸರ್ವಾರ್ಪಣ ಮಾಡಿದಾಗಲೇ ಮುಕ್ತನಾಗುವನೆಂದು ವೀರಶೈವ ಮತವು ಘಂಟಾಘೋಷವಾಗಿ ಸಾರುತ್ತದೆ. ಈಮೊದಲಾದ ಪ್ರಮಾಣ ವಾಕ್ಯಗಳನ್ನು ನೋಡಿದರೆ, ನಾವು ಮನುಜರು "ನಾನು-ನನ್ನದು-ನನ್ನದು" ಎಂದು

ಅತಿ ತೃಷ್ಣಾಪೂರ್ವಕವಾಗಿ ಈ ವಿಷಯಗಳ ಪ್ರಾಪ್ತಿ ಹಾಗು ಸಂಗ್ರಹ ಕ್ಕಾಗಿ ಹೆಣಗಾಡುವದು, ಎಷ್ಟು ಅಜ್ಞಾನವೂ ಘಾತಕವೂ ಹಾಸ್ಯಾಸ್ಪ ದವೂ ಆಗಿರುವದೆಂಬದು ಬಹು ಸೋಜಿಗವೂ, ಅವಶ್ಯ ಲಕ್ಷಿಸತಕ್ಕ ಸಂಗ ತಿಯೂ ಆಗಿರುವದು. ಹೀಗಿರಲು, ಗಳಿಸಿ ಭದ್ರವಾಗಿ ಇಟ್ಟದ್ದೆಲ್ಲ ನಮ್ಮ ಸ್ವತ್ತಾಗುವದೇ? ಇಲ್ಲ, ಎಂದೂ ಇಲ್ಲ! ಅದೆಲ್ಲ ಕಡೆಗೆ ಇಲ್ಲೇ (ಸ್ಥೂಲ ಪರಮಾತ್ಮನಲ್ಲೇ) ಉಳಿದು, ನಾವು ಮಾತ್ರ ಇಹಲೋಕ ಯಾತ್ರೆಯನ್ನು ಮುಗಿಸಿ ಹೊರಟು ಹೋಗುತ್ತೇವೆ. ಅಷ್ಟು ದೂರವಾದರೂ ಏಕೆ! ನಾವು ಜೀವಂತ ಇದ್ದಾಗ ಸಹ, ಆ ಗಳಿಸಿ ಕಾಯ್ದಿಟ್ಟ ಸಂಪತ್ತು ನಮ್ಮ ಕಣ್ಮುಂದೆಯೇ, ಅನೇಕ ರೂಪಗಳಿಂದ ಹೊರಟು ಹೋಗುತ್ತದೆ. ಇಂತಹ ಅನೇಕ ನಿದರ್ಶನಗಳನ್ನು ನಾವು ನಿತ್ಯಶಃ ಅನುಭವಿಸುತ್ತೇವೆ. ಹೀಗೆ ಆ ಚಂಚಲೆಯಾದ ಲಕ್ಷ್ಮಿಯು ಎಷ್ಟೇ ಸ್ಥಲಾಂತರ ಮಾಡಿದರೂ ಈ ಜಗತ್ತಿನಲ್ಲಿಯೇ ಅರ್ಥಾತ್ ಸ್ಥೂಲ ರೂಪಿ ಪರಮಾತ್ಮನಲ್ಲಿಯೇ ಉಳಿಯುವದು. ಆದುದರಿಂದ ಅದು ಯಾವಾಗಲೂ ಶಿವನ ಸೊಮ್ಮೇ ಸರಿ! ಸಂಗ್ರಹಿಸಿಡುವ ಜೀವನದೆಂದಿಗೂ ಆಗಲಾರದು!! "ತಾ ಕುಡಿವ ಗುಟುಕು ನೀರಿಗಾಗಿ ಮಡುವನ್ನೇ ಕಲಕಿದಂತೆ" ಕುನ್ನಿ ಮಾನವನು ಗನ್ನಗತಕದಿಂದ ಅಪಾರ ಹೊನ್ನ ರಾಶಿಯನ್ನು ಕೈವಶಮಾಡಿಕೊಂಡು, ತನ್ನೊಬ್ಬನಿಗೇ ಅಷ್ಟೆಲ್ಲ ಬೇಕೆಂಬ ದುರಾಶೆಯಿಂದ, ಜನಸಮುದಾಯದ ಹೊಟ್ಟೆಯ ಮೇಲೆ ಬಡೆದು, ಅಕಾರಣವಾಗಿ ತನ್ನ ಬುಡದಲ್ಲಿಟ್ಟು ಕೊಂಡು ಕುಳಿತು, ಅಲ್ಲಿಯೇ ಅದನ್ನು ಬಿಟ್ಟು, ಕಡೆಗೆ ಮಡಿದು ಹೋಗು ವದು, ಅದೆಷ್ಟು ಮೂಢತನವೆಂಬುದು ಇದರಿಂದ ಚನ್ನಾಗಿ ವ್ಯಕ್ತವಾ ಗುವದಿಲ್ಲವೇ?

ಈ ಸಂಪತ್ತು, ಹೇಗೋ ಶಿವನದೇ ಆಗಿ ಒಮ್ಮೆ ಕೈಬಿಡುವದು ನಿಶ್ಚಿತವೇ ಆದ ಮೇಲೆ, ಜೀವನು ತಾನಾಗಿಯೇ ವಿವೇಕ ಪರನಾಗಿ ಸಂತೋಷದಿಂದ ಜನತಾ ಜನಾರ್ದನನಿಗೆ ಅರ್ಪಿಸುವದು, ಸಮಂಜಸವೂ ಹಿತಪ್ರದವೂ ಶ್ರೇಯಸ್ಕರವೂ ಆದುದಲ್ಲವೇನು? ಜ್ಞಾನಿಯಾದವನು ಎಂದಾದರೂ ಇದಕ್ಕೆ ವಿಪರೀತವಾಗಿ ವರ್ತಿಸುವದು ಶಕ್ಯವೇ? ಆದು ದರಿಂದ ಧನವನ್ನು ಜಂಗಮಕ್ಕೆ (ಜ್ಞಾನ ವಿಶಿಷ್ಟವಾದ ಮನುಷ್ಯ ಪ್ರಾಣಿಗೆ) ಸಲ್ಲಿಸಬೇಕೆಂಬ ಉಕ್ತಿಯು, ಎಷ್ಟು ದೂರದೃಷ್ಟಿಯಿಂದ ಮಾಡಿದ ಉಪ ದೇಶವಾಗಿದೆ, ನೋಡಿರಿ! ಅಹಹ, ಲಿಂಗ (ಪರಮಾತ್ಮ) ತೃಪ್ತಿಗೆ

ಜಂಗಮವೇ ಮುಖವಾಗಿರುವದೆಂದು ಹೇಳಿದ್ದು, ಎಷ್ಟು ಸ್ವಾರಸ್ಯಪೂರ್ಣವಾಗಿದೆಯಯ್ಯಾ!! ಶ್ರೀ ಬಸವೇಶ ಮಹಾತ್ಮನ ಈ ಸದುಪದೇಶವನ್ನು ಎಲ್ಲ ಲಿಂಗಾಂಗಿಗಳು ಒಳಿತಾಗಿ ಪರ್ಯಾಲೋಚಿಸಿ, ತದನುಸಾರ ವರ್ತಿಸುವದು, ಅತ್ಯಂತ ಅವಶ್ಯವಾಗಿಲ್ಲವೇ? ಅಂತೇ ಜ್ಞಾನಿಯಾದ ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಸಂಪೂರ್ಣ ಸರ್ವಾರ್ಪಣಮಾಡಿ ಈ ಲೋಕವನ್ನು (ನವಖಂಡ ಪೃಥ್ವಿಯನ್ನು-ನವರಂಧ್ರಯುಕ್ತ ದೇಹವನ್ನು) ತ್ಯಜಿಸಿ, ದಶಖಂಡ ಕಾಶಿಯನ್ನು (ಬ್ರಹ್ಮರಂಧ್ರದ್ವಾರ ಪರಶಿವ ಸನ್ನಿಧಿಯನ್ನು) ಹೊಂದಿ, ಅಲ್ಲಿಯೂ ಕೂಡ ಸಮರಸ ಭಕ್ತಿಯನ್ನೇ ಪ್ರಖರವಾಗಿ ಆಚರಿಸಿ, ವಿಶ್ವಾಮಿತ್ರನನ್ನು ಒಲಿಸಿದನು. (ಅಂದರೆ ಶಿವ ಸಾಯುಜ್ಯವನ್ನು ಪಡೆದನು.)

ಇದೇ ಮಾರ್ಗವನ್ನು ಬಹು ಜನ ಮಹಾತ್ಮರು ಅನಾದಿ ಕಾಲದಿಂದಲೂ ಅನುಸರಿಸುತ್ತ ಬಂದಿದ್ದಾರೆ. ಹಿಂದೆಯೂ (ವೇದ, ಪೌರಾಣಿಕ, ಐತಿಹಾಸಿಕ ಕಾಲದಲ್ಲಿಯೂ) ಈಗಲೂ ಇಂತಹ ಮಹಾ ಪುರುಷರು ಆಗಿದ್ದಾರೆ. ಆಗುತ್ತಾರೆ. ಮುಂದೆಯೂ ಆಗುವರು. ಋಷಿಗಳೇ ವೇದ ಕಾಲೀನರು. ಹರಿಶ್ಚಂದ್ರಾದಿಗಳು ಪೌರಾಣಿಕ ಕಾಲದವರು. ಶಿಲಾದಿತ್ಯಾದಿಗಳು ಐತಿಹಾಸಿಕ ಕಾಲದವರು. ಈ ಶಿಲಾದಿತ್ಯನು ಪ್ರತಿ ಐದು ವರ್ಷಕ್ಕೊಮ್ಮೆ ತನ್ನಲ್ಲಿದ್ದುದನ್ನೆಲ್ಲ ದಾನಮಾಡಿ, ಭಿಕ್ಷು ವೇಷವನ್ನು ಧರಿಸುತ್ತಿದ್ದನೆಂಬದು ಸುಪ್ರಸಿದ್ಧವು. ಮ. ಗೌತುಮಬುದ್ಧ, ಬಸವೇಶ್ವರ, ಭರ್ತೃಹರಿ, ನಿಜಗುಣ ಶಿವಯೋಗಿ, ಮೋಳಿಗೆ ಮ್ಮಾರಯ್ಯ (ಈತನು ಕಾಶ್ಮೀರ ರಾಜನಂತೆ) ಮೊದಲಾದವರು ತಮ್ಮ ತಮ್ಮ ರಾಜ್ಯವನ್ನೆಲ್ಲ ತ್ಯಾಗಮಾಡಿ, ತ್ರಿಕರಣ ಪೂರ್ವಕವಾಗಿ ಜಗತ್ತಿನ ಸೇವೆಗೆ ಅಣಿಯಾಗಿ ಧನ್ಯರಾದರು. ವೀರಶೈವ ಪುರಾತನರೆಲ್ಲರೂ ಇಂತಹರೇ ಆಗಿರುವರು. ಆದ್ದರಿಂದ ಎಲ್ಲ ಜನರು ಮುಖ್ಯವಾಗಿ ಸಿರಿವಂತರು, ಬರೇ ಧನ ಸಂಚಯದ ಮಬ್ಬಿನೊಳಗಾಗಿ, ಇದ್ದುದೆಲ್ಲ ಅವುಚಿಕೊಂಡು ಕೂಡುವ ಒಣ ಭ್ರಮೆಯನ್ನು ನಿರಸನ ಮಾಡಿ, ವಿವೇಕಶಾಲಿಗಳಾಗಿ, ಜನತಾ ಜಗದೀಶನ ಸೇವೆಗೆ ಕಟಿಬದ್ಧರಾಗಿ ಸಿದ್ಧರಾಗುವುದು ಬಹು ಸ್ವಾರಸ್ಯವಾದುದೆಂದು, ಹರಿಶ್ಚಂದ್ರ ಚರಿತ್ರ ಮುಖದಿಂದ ಬಿನ್ನವಿಸಿ ಈ ಲೇಖವನ್ನು ಮುಗಿಸುವೆನು.

---

# ವರದಾನಿಗುಡ್ಡವ್ವೆಯ ಶಿಲಾಶಾಸನ.

(ಲೇಖಕ:--- ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ)

ಪ್ರೊ॥ ಕೆ. ಜಿ. ಕುಂದಣಗಾರ ಎಮ್. ಏ. ಇವರು ಉತ್ತರ ಕರ್ನಾಟಕದ ಮತ್ತು ಕೊಲ್ಹಾಪುರ ಸಂಸ್ಥಾನದೊಳಗಿನ ಶಿಲಾಶಾಸನಗಳು (*Inscriptions in Northern Karnataka and the Kolhapur State*) ಎಂಬ ಹೆಸರಿನ ಒಂದು ಗ್ರಂಥವನ್ನು ಪ್ರಸಿದ್ಧಿಸಿರುತ್ತಾರೆ. ಅವರು ಈ ಪ್ರಾಂತದಲ್ಲಿಯ ೪೩ ಶಿಲಾಶಾಸನಗಳನ್ನು ಕಂಡುಹಿಡಿದು ಅವುಗಳನ್ನು ಸಮಗ್ರವಾಗಿ ತಮ್ಮ ಟಿಪ್ಪಣಿಗಳೊಡನೆ ಅಚ್ಚುಹಾಕಿಸಿರುತ್ತಾರೆ. ಇದಕ್ಕೋಸ್ಕರ ನಾವು ಅವರನ್ನು ಬಹಳ ಅಭಿನಂದಿಸುತ್ತೇವೆ. ಉತ್ತರಕರ್ನಾಟಕದ ಶಿಲಾಶಾಸನಗಳಲ್ಲಿ ಕರ್ನಾಟಕದಲ್ಲಿ ಆಗಿಹೋದ ಮಹತ್ವದರಾಜ್ಯಗಳಾದ ಚಾಲುಕ್ಯ, ರಾಷ್ಟ್ರಕೂಟ, ಕದಂಬರಾಜರ ವೃತ್ತಾಂತಗಳು ಇನ್ನೂ ದೊರೆಯುಬಹುದಾಗಿವೆ. ಇವುಗಳನ್ನು ಪ್ರಕಾಶ ಪಡಿಸುವ ಕಾರ್ಯವು ಬಹು ಮಹತ್ವದ್ದಿದ್ದು ಪ್ರೊ॥ ಕುಂದಣಗಾರ ಇವರು ಈ ಪ್ರಯತ್ನ ಮಾಡಿದ್ದಕ್ಕೋಸ್ಕರ ಕರ್ನಾಟಕಸ್ತರು ಅವರಿಗೆ ಬಹಳ ಋಣಿಯಾಗಿದ್ದಾರೆ. ಅವರು ಪ್ರಸಿದ್ಧಿಸಿದ ಈ ಗ್ರಂಥದಲ್ಲಿ ಕೆಲವು ವೀರಶೈವರಿಗೆ ಸಂಬಂಧಪಟ್ಟ ಶಾಸನಗಳಿರುತ್ತವೆ. ಅವುಗಳಲ್ಲಿ ೨೧ನೇ ಶಾಸನವು ಈಗ ವಿಜಾಪುರ ಮುಜಿಯಮದ ಮುಂದೆ ಇದ್ದು ಇದರಲ್ಲಿ ವೀರಶೈವ ಶರಣರಲ್ಲಿ ಬಹು ಮಹತ್ವದ ಸ್ಥಾನವನ್ನು ಹೊಂದಿದ ವರದಾನಿಗುಡ್ಡವ್ವೆಯ ಉಲ್ಲೇಖವು ಬಂದಿದೆ. ಅದರ ವಿವರಣೆಯನ್ನು ನಾವು ಕೆಳಗೆ ಕೊಡುತ್ತೇವೆ. ಈ ಶಿಲಾಶಾಸನವನ್ನು ಓದಬೇಕೆನ್ನುವವರು ಮೂಲಗ್ರಂಥವನ್ನೇ ನೋಡಬೇಕೆಂದು ನಮ್ಮ ವಿನಂತಿ ಇದೆ.

ಈ ಶಿಲಾಶಾಸನದ ಕಾಲವು ಶಕೆ ೧೨೦೦ನೆಯ ಬಹುಧಾನ್ಯ ಸಂವತ್ಸರ ವೈಶಾಖಶುದ್ಧ ೧೫ ಇರುತ್ತದೆಂದು ಅದರ ೨೬ನೇ ಓಳಿಯಲ್ಲಿ ಹೇಳಲ್ಪಟ್ಟಿದೆ. ಅಂದರೆ ಕ್ರಿಸ್ತಶಕ ೧೨೭೮ ಆಗುತ್ತಿದ್ದು, ಬಸವೇಶ್ವರನ ತರುವಾಯ ಸುಮಾರು ೧೦೦ ವರ್ಷದ ಮೇಲೆ ಈ ಶಾಸನವು ಆಗಿರುತ್ತದೆ.

ಈ ಕಾಲದಲ್ಲಿ ದೇವಗಿರಿಯ ಯಾದವವಂಶದವನಾದ ಮಹಾದೇರಸನು ಆಳುತ್ತಿದ್ದು ಅವನ ಮಾಂಡಲಿಕನಾದ ಸಾಯಿದೇವನು ವಿಜಾ

ಪುರ ಜಿಲ್ಲೆಯ ಉತ್ತರ ಭಾಗವನ್ನು ಆಳುತ್ತಿದ್ದನೆಂದು ತೋರುತ್ತದೆ. ಅವನು ವಾತಾಖ್ಯಪುರ ಎಂಬಲ್ಲಿ ವರದಾನಿಯ ಹೆಸರಿನಿಂದ ಒಂದು ದೇವಾಲಯವನ್ನು ಕಟ್ಟಿಸಿ ಅದಕ್ಕೆ ಉಂಬಳಿಯನ್ನು ಹಾಕಿಕೊಟ್ಟದ್ದು ಈ ಶಿಲಾಶಾಸನದಲ್ಲಿ ಹೇಳಲ್ಪಟ್ಟಿದೆ.

ವರದಾನಿಗುಡ್ಡವ್ವೆಯ ವೃತ್ತಾಂತವನ್ನು ೧೫ ನೇ ಶತಮಾನದ ಮಧ್ಯಭಾಗದಲ್ಲಿದ್ದ ಲಕ್ಕಣ್ಣದಂಡೇಶನು ಪಾರ್ಥಿಕಷಟ್ಪದಿಯಲ್ಲಿ ಬರೆದಿದ್ದು ಅದನ್ನು ನಾವು ೧೯೩೬ನೇ ಇಸ್ವಿಯಲ್ಲಿ ಶಿವಾನುಭವ ಪತ್ರಿಕೆಯಲ್ಲಿ ಮೊದಲು ಪ್ರಸಿದ್ಧಿಸಿದೆವು. ಅದರಲ್ಲಿ ವರದಾನಿಯು ಅಲಂಪುರ ಎಂಬಲ್ಲಿ ಒಂದು ಶೈವದೇವಾಲಯವು ಭಗ್ನವಾದುದನ್ನು ಕೇಳಿ ದಂಡೆತ್ತಿ ಹೋಗಿ ಯುದ್ಧದಲ್ಲಿ ಪರವಾದಿಗಳನ್ನು ಗೆದ್ದು ಪುನಃ ಆ ಸ್ಥಾನದಲ್ಲಿ ಶಿವಾಲಯವನ್ನು ನೆಲೆಗೊಳಿಸಿದಳೆಂದು ಹೇಳಿದೆ. ಮುಂದೆ ಆಕೆಯ ಪುರಾಣವೊಂದು ನಮಗೆ ದೊರೆಯಲು ಅದರ ಸಾರವನ್ನು ನಾವು ಶಿವಾನುಭವ ಪತ್ರಿಕೆಯ ೧೨ನೇ ಸಂಪುಟ ೬ ನೇ ಸಂಚಿಕೆಯಲ್ಲಿ ಪ್ರಸಿದ್ಧಿಸಿದೆವು. ಅದರಲ್ಲಿ ಆಕೆಯ ಮೂಲ ಗ್ರಾಮ, ತಾಯಿತಂದೆಗಳ ಹೆಸರುಗಳಿದ್ದು ಅವಳು ಕಲ್ಯಾಣಕ್ಕೆ ಹೋಗಿ ಬಸವೇಶ್ವರನಿಂದ ಸನ್ಮಾನವನ್ನು ಹೊಂದಿ ಅಲ್ಲಿ ದಾನ ಮಾಡುತ್ತ ಕಾಲ ಕಳೆಯುಹತ್ತಿದಳು. ಆದರಿಂದ ಆಕೆಗೆ ವರದಾನಿ ಅಥವಾ ದಾನವ್ವ ಎಂಬ ಹೆಸರುಗಳು ಪ್ರಾಪ್ತವಾದವು. ಮುಂದೆ ಕಲ್ಯಾಣದಲ್ಲಿ ಅನಾಹುತಗಳು ಉಂಟಾಗಲು ಆಕೆಯು ಪುನಃ ತನ್ನ ಜನ್ಮಸ್ಥಾನವಾದ ಉಮರಾಣಿ ಗ್ರಾಮಕ್ಕೆ ಬಂದು ಸಂಕ ಎಂಬಲ್ಲಿ ಲಗ್ನವಾಗಿ ತನ್ನ ಪತಿಯೊಡನೆ ಆದವಾನಿಗೆ, ತರುವಾಯ ಕಪಿಲಾ ಕಾವೇರಿ ಸಂಗಮಸ್ಥಳ, ಮೊದಲಾದ ಕಡೆಗೆ ಸಂಚರಿಸಿ ಪುನಃ ಮನಗೋಳಿ, ಬಾಗೇವಾಡಿ ಈ ಸ್ಥಳಗಳಿಗೆ ಬಂದು ಅಲ್ಲಿ ಅನೇಕರಿಗೆ ವೀರಶೈವ ಧರ್ಮದ ದೀಕ್ಷೆಯನ್ನು ಕೊಟ್ಟು ಪುನಃ ಗುಡ್ಡಾಪುರಕ್ಕೆ ಬಂದು ಅಲ್ಲಿ ಸಮಾಧಿಸ್ಥಳಾದಳು. ಇವಳು ಬಸವೇಶ್ವರನ ತರುವಾಯ ಒದಗಿದ ಆಂದೋಲನಗಳಲ್ಲಿ ಭಾಗವಹಿಸಿ ಧರ್ಮಜಾಗ್ರತಿಯ ಕಾರ್ಯಗಳನ್ನು ಮಾಡಿದಹಾಗೆ ಕಂಡು ಬರುತ್ತದೆ. ಆಕೆಯು ಬಹು ಶೂರಳೆಂದು ಅನೇಕ ವೀರಶೈವ ಗ್ರಂಥಕಾರರು ಹೊಗಳುತ್ತಾರೆ. ಬಸವೇಶ್ವರನ ತರುವಾಯ ಉಂಟಾದ ಕ್ರಾಂತಿಯ ಕಾಲದಲ್ಲಿ ವೀರಶೈವರು ತಮ್ಮ ಅಸ್ತಿತ್ವಕ್ಕಾಗಿ ಹೆಣಗಾಡುವ ಪ್ರಸಂಗವು ಒದಗಲು ಆಗ ವರದಾನಿ ಗುಡ್ಡವ್ವೆಯು ವಿಶೇಷ ಸಾಹಸ ಮಾಡಿದವಳಾಗಿದ್ದಾಳೆ. ಈಕೆಯ ಸಮಾ

ಧಿಯು ಇದ್ದ ಸ್ಥಳವು ಅತ್ಯಂತ ಜಾಗ್ರತವಾದುದೆಂದು ಕರ್ನಾಟಕ ಮತ್ತು ಮಹಾರಾಷ್ಟ್ರದಲ್ಲಿಯ ಈ ಭಾಗಗಳ ಜನರು ಈಗಲೂ ಈ ದೇವಸ್ಥಾನಕ್ಕೆ ಬಂದು ತಮ್ಮ ಪೂಜ್ಯಭಾವವನ್ನು ವ್ಯಕ್ತಮಾಡಿ ತೋರಿಸುತ್ತಿದ್ದುದು ನಿದರ್ಶನಕ್ಕೆ ಬರುತ್ತದೆ. ಗುಡ್ಡಾಪುರವು ಒಂದು ಗುಡ್ಡದ ಒಂದು ಬಿಕ್ಕಟ್ಟಿನ ಸ್ಥಳದಲ್ಲಿ ಇರುವದರಿಂದ ಗುಡ್ಡಾಪುರದ ದಾನಮ್ಮ, ವರದಾನಿಗುಡ್ಡಮ್ಮ ಎಂಬ ಹೆಸರುಗಳು ಈಕೆಗೆ ಪ್ರಾಪ್ತವಾಗಿರುತ್ತವೆ. ಉಮರಾಣಿ, ಸಂಕೆ, ಗುಡ್ಡಾಪುರ ಈ ಎಲ್ಲ ಸ್ಥಳಗಳು ವಿಜಾಪುರ ಪಟ್ಟಣದ ಪಶ್ಚಿಮಕ್ಕೆ ೩೦-೪೦ ಮೈಲುಗಳ ಅಂತರದ ಮೇಲೆ ಜತ್ತ ಸಂಸ್ಥಾನದಲ್ಲಿ ಇರುತ್ತವೆ.

ವರದಾನಿಗುಡ್ಡಮ್ಮೆಯು ಕೇವಲ ಕಾಲ್ಪನಿಕ ಸ್ತ್ರೀಯಾಗಿರದೆ ಅವಳು ಐತಿಹಾಸಿಕ ಸ್ತ್ರೀಯಾಗಿದ್ದಾಳೆಂತಲೂ ಹಿಂದಿನ ಕಾಲದಲ್ಲಿ ಆಕೆಯು ವಿಷಯವಾಗಿ ರಾಜರೂ ಮಾಂಡಲಿಕರೂ ಬಹು ಪೂಜ್ಯ ಭಾವವನ್ನು ತಾಳಿದ್ದರೆಂತಲೂ ಈ ಶಿಲಾಶಾಸನದಿಂದ ತಿಳಿಯುತ್ತಿದೆ. ಈ ಶಿಲಾಶಾಸನದ ಕಾಲವು ಬಸವನ ಕಾಲದ ತರುವಾಯ ೧೦೦ ವರ್ಷದ್ದು ಇದ್ದು ಆಗ ಆಕೆಯು ಜೀವದಿಂದಿರಲಿಲ್ಲ. ಆದರೂ ಆಕೆಯ ಸ್ಮರಣಾರ್ಥವಾಗಿ ಸಾವಿದೇವನೆಂಬ ಮಾಂಡಲಿಕನು ಭೀಮಾತೀರದಲ್ಲಿ ಒಂದು ಗ್ರಾಮವನ್ನು ನಿರ್ಮಿಸಿ ಅಲ್ಲಿ ಆಕೆಯ ದೇವಾಲಯವನ್ನು ಸ್ಥಾಪಿಸಿ, ಈ ದೇವಾಲಯಕ್ಕೆ ರಾಜನ ಸಮ್ಮತಿಯಿಂದ ಕೆಲವು ಗ್ರಾಮುಗಳಲ್ಲಿಯ ಭೂಮಿಗಳನ್ನು ಉಂಬಳಿ ಹಾಕಿ ಕೊಟ್ಟದ್ದು ಇದರಲ್ಲಿ ವರ್ಣಿಸಲ್ಪಟ್ಟಿದ್ದರಿಂದ ಇದಕ್ಕೂ ಹಲವು ವರ್ಷ ಪೂರ್ವದಲ್ಲಿಯೇ ವರದಾನಿಗುಡ್ಡಮ್ಮೆಯು ಅಸ್ತಿತ್ವದಲ್ಲಿ ಇರಬೇಕೆಂದು ಊಹಿಸಬಹುದಾಗಿದೆ. ಅಂದರೆ ಬಸವೇಶ್ವರನಿದ್ದ ಕಾಲಕ್ಕೆಯೇ ಅಥವಾ ಅದರ ಸಮೀಪಕ್ಕೆಯೇ ವರದಾನಿಗುಡ್ಡಮ್ಮೆಯು ಇದ್ದಳೆಂದು ಈ ಶಿಲಾಲೇಖದಿಂದ ಅನುಮಾನ ಮಾಡಬಹುದಾಗಿದೆ.

ಈ ಶಿಲಾಶಾಸನವು ಬಹುಕಡೆಗೆ ಒಡೆದುಹೋಗಿದೆ. ಆದರೂ ಅವಶಿಷ್ಟಭಾಗಗಳಲ್ಲಿ ವರ್ಣಿತವಾದ ವಿಷಯುಗಳಿಂದ ಅನೇಕ ಮಹತ್ವದ ಸಂಗತಿಗಳು ಹೊರಪಡುತ್ತವೆ.

ಶಾಸನದ ಆರಂಭದಲ್ಲಿ ೪ನೇ ಓಳಿಯಲ್ಲಿ ಮಹಾದೇವ ಭೂಮಿಪನು "ಊರ್ಜಿತರಾಜ್ಯಪ್ರಶೋಭಿತ ಯಾದವಾನ್ವಯ" ನೆಂತಲೂ ೭ ನೇ ಓಳಿಯಲ್ಲಿ "ವಿಕ್ರಮಾಕ್ರಾಂತಭೂಚಕ್ರ" ನೆಂತಲೂ ಹೊಗಳಲ್ಪಟ್ಟಿದ್ದಾನೆ.

೧೧ನೇ ಓಳಿಯಲ್ಲಿ ಅವನ ಮಿತ್ರನೂ ಮಂತ್ರಿಮುಖ್ಯನೂ ಸಾಮಂತನೂ ಎಂದು ಸಾಯಿದೇವನು ವರ್ಣಿಸಲ್ಪಟ್ಟಿದ್ದಾನೆ.

ಈ ಸಾಯಿದೇವ ಮಂತ್ರಿಯು ಮಹತ್ತರವಾದ ಧರ್ಮವನ್ನು ಮಾಡಬೇಕೆಂದು ಚಿಂತಿಸಿ ಲಿಂಗ ಸ್ಥಾಪನೆ ಮಾಡಬೇಕೆಂದು ಬಯಸಿದನು. (೧೩ನೇ ಓಳಿ) ಈತನು ನಾದದಲ್ಲಿ ವಾದದಲ್ಲಿ ವಿವಾದದಲ್ಲಿ ಶಸ್ತ್ರವಿದ್ಯೆಯಲ್ಲಿ ಶಾಸ್ತ್ರದಲ್ಲಿ ಶಿವಾಗಮದಲ್ಲಿ ಸಿಗವುದಲ್ಲಿ ಚತುರನಾಗಿ ರಾಜಿಸುತ್ತಿದ್ದನು (೧೮ನೇ ಓಳಿ). ಇವನು ದ್ವಿವಾತಾಖ್ಯಪುರದಲ್ಲಿದ್ದು (೧೯ನೇ ಓಳಿ) ಒಂದು ದಿನ ಶಿವಸದ್ಭಕ್ತಿಭಾವನೆಯುಳ್ಳವನಾಗಿ ವರದಾನಿಯ ಹೆಸರಿನಿಂದ ಲಿಂಗಪ್ರತಿಷ್ಠೆಯನ್ನು ಮಾಡಿದನು (೨೦ನೇ ಓಳಿ)

ಆದನ್ನು ಮಹಾದೇವ ಮಹೇಶ್ವರನು ನೋಡಿ ಹರ್ಷಿತನಾಗಿ ಆದಕ್ಕೆ ಒಂದು ಗ್ರಾಮವನ್ನು ಧರ್ಮ ಮಾಡಿದನು (೨೧ನೇ ಓಳಿ) ಆ ದೇವರ ಭೋಗಾರ್ಥಕ್ಕೋಸ್ಕರ (ಓಳಿ ೨೨) ಸಾಯಿದೇವನು ಪೂಜ್ಯಪುರದಲ್ಲಿರುವ (ಓಳಿ ೨೪) ನಗರಶ್ರೇಷ್ಠಿಗಳನ್ನೂ ವಣಿಗ್ಜನರನ್ನೂ ಸಭೆ ಸೇರಿಸಿ (ಓಳಿ ೨೩) ಅವರ ಸಮ್ಮುಖದಲ್ಲಿ ಕೆಲವು ಗ್ರಾಮುಗಳಲ್ಲಿಯ ಭೂಮಿಗಳನ್ನು ದಾನ ಮಾಡಿದನು. ಈ ಕಾರ್ಯವು ಶಕ ವರ್ಷ ೧೨೦೦ (ಕ್ರಿ. ಶ. ೧೨೭೮) ನೆಯ ವೈಶಾಖ ಶು॥ ೧೫ ಆದಿತ್ಯವಾರ ಜರಗಿತು. ಸಾಯಿದೇವನು ಶ್ರೀತೇಜೇಶ್ವರ, ಶ್ರೀವರದಾನಿ, ಶ್ರೀಪುರುಷೇಶ್ವರ ಈ ದೇವರುಗಳ ಪ್ರತಿಷ್ಠೆಯನ್ನು ಮಾಡಿ ಪುರವನ್ನು ರಚಿಸಿ ಆ ದೇವರುಗಳ ಅಂಗಭೋಗ ರಂಗಭೋಗಕ್ಕೆ (೨೭ನೇ ಓಳಿ) ಕೆಲವು ಗ್ರಾಮುಗಳಲ್ಲಿಯ ಭೂಮಿಯನ್ನು ದಾನಮಾಡಿದ್ದಾನೆ. ಇವುಗಳ ವಿವರವು ವಿಸ್ತಾರವಾಗಿ ಶಾಸನದಲ್ಲಿ ಹೇಳಲ್ಪಟ್ಟಿದೆ. ಅವುಗಳನ್ನೆಲ್ಲ ನಾನು ಇಲ್ಲಿ ಸಮಗ್ರವಾಗಿ ವಿವರಿಸದೆ ಅವುಗಳ ಸಾರವನ್ನು ಮಾತ್ರ ಇಲ್ಲಿ ಕೊಡುತ್ತೇನೆ.

ಕೊಂಡಿರನಗರದಲ್ಲಿ ಒಂದು ಭೂಮಿ. ನಾಲ್ವತ್ತುಬಾಡದಲ್ಲಿ ಆಲೂರಕ್ಕೆ ಹೋಗುವ ಮಾರ್ಗದ ಉತ್ತರಕ್ಕಿರುವ ಜೋಯಿಸರ ಹೊಲದ ಪೂರ್ವಕ್ಕೆ ಒಂದು ಭೂಮಿ. ಬೊಂಬಳ್ಳದಿಂದ ದಕ್ಷಿಣಕ್ಕೆ ಇರುವ ಕರುಸಗೆಯಲ್ಲಿಯ ಒಂದು ಜಮೀನು. ರಟ್ಟಗೆರೆಯ ಊರಿನ ಪಶ್ಚಿಮಕ್ಕೆ ಇರುವ ಒಂದು ಹೊಲ. ಗೌಡಗೆರೆಯಲ್ಲಿ ಒಂದು ಹೊಲ. ತಂಬಿದಡಿಯಲ್ಲಿ ಒಂದು ಹೊಲ. ಕೂಟಜಿಯಲ್ಲಿ ಒಂದು ಹೊಲ. ದೇಹೂರಲ್ಲಿ ಒಂದು

ಹೊಲ. ಈ ಪ್ರಕಾರ ಜಮೀನುಗಳು ದಾನ ಮಾಡಲ್ಪಟ್ಟಿವೆ. ಶಾಸನದ ಇದರ ಮುಂದಿನ ಭಾಗವು ಒಡೆದುಹೋಗಿರುತ್ತದೆ.

ಈ ಶಾಸನದಲ್ಲಿ ನಾವು ಲಕ್ಷಿಸತಕ್ಕ ವಿಷಯಗಳೇನಂದರೆ:— ಇದು ವರದಾನಿಗೋಸ್ಕರವಾಗಿಯೇ ಕೊಟ್ಟಿದ್ದು ಇರುತ್ತದೆಂಬದು ಮೊದಲನೆಯ ವಿಷಯ. ಇದು ೨೦ ನೇ ಓಳಿಯಿಂದ ಗೊತ್ತಾಗುತ್ತದೆ. ಮುಂದೆ ೩೦ ರಿಂದ ೩೩ವರೆಗೆ ಇರುವ ಓಳಿಗಳಿಂದಲೂ ಇದು ದೃಢಪಡುತ್ತಿದೆ. ಇವುಗಳಲ್ಲಿ ಹೇಳಿರುವದೇನಂದರೆ ೨೫ ಹೇರಿನ ಎತ್ತುಗಳಮೇಲಿನ ಬತ್ತ, ಬೆಳೆದ ಮೀಕ್ಷದ ಎಲೆಗಳ ಕೆಲವು ಭಾಗ, ಗಾಣದಿಂದಾದ ಎಣ್ಣೆಯ ಕೆಲವೊಂದು ಭಾಗ, ಪೇಟೆಯಲ್ಲಿ ಮಾರಿದ ಉಪ್ಪಿನ ಒಂದು ಬುಟ್ಟಿಗೆ ಒಂದು ಹಿಡಿ ಉಪ್ಪು, ಇಡೀ ಗ್ರಾಮದಲ್ಲಿ ಮಾರಿದ ಉಪ್ಪಿನಿಂದ ಬಂದ ಲಾಭದಲ್ಲಿ ಅರ್ಧ ಭಾಗ, ಎರಡು ಎಣ್ಣೆಯ ಗಾಣಗಳು ದೇವಿಗೆ ಕೊಡಲ್ಪಟ್ಟಿವೆಂದು ಹೇಳಿದೆ. ಈ ಗ್ರಾಮದಲ್ಲಿ ನೆಯ್ದ ಬಟ್ಟೆಯಮೇಲೆ ಸುಂಕವಿಲ್ಲ. ಹಾಗೆಯೇ 'ಸರ್ವಮಾನ್ಯದೇವಿ'ಯ ಕಮ್ಮತದ ಛತ್ತ ಮತ್ತು ದೇವಧನ ಮಾರಿದರೆ ಅದರ ಮೇಲೆ ಸುಂಕವಿಲ್ಲ. ಮಾನ್ಯ ದೇವಿಯ ಹಬ್ಬದೊಳಗೆ ಏನು ಮಾರಿದರೂ ಅದರಮೇಲೆ ಸುಂಕವಿಲ್ಲ ಪುರದೊಳಗೆ ಅನ್ಯಾಯವಾಗಬಾರದು. ನಿಪುತ್ರಿಕತನವಿರಬಾರದು. ಪಟ್ಟಣದಲ್ಲಿ ಏನಾದರೂ ಅನಾಹುತಗಳು ಮತ್ತು ಕೆಡಕುಗಳು ಸಂಭವಿಸಿದರೆ 'ಅರಸರು, ಮನ್ನೆಯರು, ಹಿರಿಯರು, ಪಟ್ಟಣದ ಹಲವರು' ಸರ್ವ ಬಾಧೆ ಪರಿಹಾರವಾಗಿ ಪುರವನ್ನು ಪಾಲಿಸುವುದು. ಹೀಗೆ ೩೦ನೇ ಓಳಿಯಿಂದ ೩೫ ಓಳಿಯವರೆಗೆ ಹೇಳಲ್ಪಟ್ಟಿವೆ. ಇದರಲ್ಲಿ ವರ್ಣಿಸಲ್ಪಟ್ಟ ಸಂಗತಿಗಳು ವರದಾನಿಗೆ ಮಾತ್ರ ಸಂಬಂಧಿಸಿದ್ದು ಇದರ ಮೇಲಿಂದ ಅವಳ ಬಗ್ಗೆ ಜನರಲ್ಲಿ ಎಷ್ಟು ಪೂಜ್ಯ ಭಾವವು ವಾಸಿಸುತ್ತಿತ್ತೆಂಬದು ತಿಳಿಯುತ್ತಿದೆ. ೨೮ನೇ ಓಳಿಯಲ್ಲಿ ಮಾತ್ರ ಶ್ರೀವರದಾನಿಯೊಡನೆ ಶ್ರೀತೇಜೇಶ್ವರ ಮತ್ತು ಶ್ರೀಪುರುಷೇಶ್ವರ ಈ ದೇವರುಗಳೂ ಸಹ ಉಲ್ಲೇಖಿಸಲ್ಪಟ್ಟಿದ್ದರೂ ಇವುಗಳು ಮುಖ್ಯ ದೇವತೆಗಳಲ್ಲವೆಂದು ಈ ಮೇಲಿನ ವರ್ಣನೆಯಿಂದ ಕಂಡುಬರುತ್ತದೆ.

ಈ ಶಾಸನವು ವೀರಶೈವ ಶಾಸನವಿರುವದೆಂಬದು ಎರಡನೆಯ ವಿಷಯವು. ಆದರೆ ಇದು ಕಾಳಾಮುಖರ ಶಾಸನವಲ್ಲವೆಂಬುದು ಇದರಲ್ಲಿ ಅಯ್ಯಾಹೊಳೆಯ ಐನೂರು ಸ್ವಾಮಿಗಳು, ಭಗವತೀ ಲಬ್ಧಪ್ರಸಾದರು ಈ ತರದ ಉಲ್ಲೇಖಗಳು ಮತ್ತು ಆಚಾರ್ಯರ ಹೆಸರುಗಳು ಕ್ರಿಯಾಶಕ್ತಿ

ದೇವ, ಜ್ಞಾನಶಕ್ತಿದೇವ ಈ ಬಗೆಯವು ಇರುವದಿಲ್ಲಾದ್ದರಿಂದ, ಗೊತ್ತಾಗುತ್ತದೆ. ಸಾಯಿದೇವನು ಶಿವಾಗಮವನ್ನು ಬಲ್ಲವನು ಶಿವಸದ್ಭಕ್ತಿಭಾವನೆಯುಳ್ಳವನು ಎಂದು ಹೇಳಲ್ಪಟ್ಟಿದ್ದಲ್ಲದೆ ಅವನು ಕೇವಲ ವೀರಶೈವಳಾದ ವರದಾನಿಗೆ ದಾನವನ್ನು ಗೊಟ್ಟಿದ್ದಾನೆ. ಅಲ್ಲದೆ ಇದು ಬಸವೇಶ್ವರನ ತರುವಾಯ ನೂರು ವರ್ಷದ ಮೇಲೆ ಹುಟ್ಟಿದ್ದು. ಆಗ ವೀರಶೈವ ಸಮಾಜವು ಈ ಭಾಗದಲ್ಲಿ ಸಂಖ್ಯೆಯಲ್ಲಿ ಹೆಚ್ಚಾಗಿತ್ತು. ಆದ್ದರಿಂದ ಈ ಶಾಸನವು ವೀರಶೈವ ಶಾಸನವೆಂದು ತಿಳಿಯಲು ಯಾವ ಪ್ರತ್ಯವಾಯವೂ ತೋರುವದಿಲ್ಲ.

ಇದರಲ್ಲಿ ಹೇಳಲ್ಪಟ್ಟ ಗ್ರಾಮುಗಳು ಎಲ್ಲಿವೆಂಬದನ್ನು ಗೊತ್ತುಪಡಿಸುವದು ೩ ನೇ ವಿಷಯವು ಇವು ಗುಡ್ಡಾಪುರ ಗ್ರಾಮದ ಸಮೀಪದಲ್ಲಿ ಯಾವವೂ ತೋರುವದಿಲ್ಲ. ಆದರೆ ತರ್ದೇವಾಡಿ ಗ್ರಾಮದ ಸಮೀಪವಾಗಿ ಭೀಮಾನದೀತೀರದಲ್ಲಿ ವಾಡಪುರ ಎಂಬ ಗ್ರಾಮದ ಸುತ್ತುಮುತ್ತು ಈ ಗ್ರಾಮುಗಳ ಹೆಸರುಗಳಂತೆಯೇ ಅನೇಕ ಗ್ರಾಮಗಳು ದೊರೆಯುತ್ತವೆ. ಆದ್ದರಿಂದ ಸಾಯಿದೇವನು ಈ ಭಾಗದಲ್ಲಿದ್ದುಕೊಂಡು ಯಾದವ ರಾಜನ ಮಾಂಡಲಿಕನಾಗಿ ರಾಜ್ಯವಾಳುತ್ತಿರಬಹುದು. ಈ ಪ್ರದೇಶವು ರೇವಣಸಿದ್ಧ ಬಸವಾದಿಗಳಿದ್ದ ಮಂಗಳವಾಡದ ನೆರೆಯಲ್ಲಿಯೇ ಇದೆ. ವರದಾನಿಯು ಜನ್ಮಸ್ಥಳವಾದ ಉಮರಾಣಿ, ಆಕೆಯು ಸಮಾಧಿಸ್ಥಳವಾದ ಗುಡ್ಡಾಪುರ ಈ ಗ್ರಾಮುಗಳಾದರೂ ಇಲ್ಲಿಂದ ೩೦-೩೫ ಮೈಲುಗಳಮೇಲೆ ಇವೆ. ಆದ್ದರಿಂದ ಈ ಸೀಮೆಯಲ್ಲಿ ವರದಾನಿಯು ಕೀರ್ತಿಯು ಹಬ್ಬಿದ್ದು ಸ್ವಾಭಾವಿಕವಾಗಿರುತ್ತದೆ.

ವಾತಾಖ್ಯಪುರ ಇದು ತರ್ದೇವಾಡಿಯಿಂದ ಪಶ್ಚಿಮಕ್ಕೆ ೧೨ ಮೈಲು ದೂರವಿರುವ ವಾಡಪುರಿ ಎಂಬ ಗ್ರಾಮವಿರಬಹುದು. ಕೊಂಡಿರಿ ನಗರ ಇದು ವಾಡಪುರಿಯಿಂದ ಉತ್ತರಕ್ಕೆ ೫ ಮೈಲುಗಳ ಮೇಲಿರುವ ಕಂದಲಗಾವ ಇರಬಹುದು. ತಂಬಿವಡಿ ಇದು ವಾಡಪುರಿಯಿಂದ ಪಶ್ಚಿಮಕ್ಕೆ ೬ ಮೈಲಿನ ಮೇಲಿರುವ ತಮದರ್ಡೀ ಇರಬಹುದು. ಗೌಡಗೆರೆ ಇದು ವಾಡಪುರಿಯಿಂದ ಪಶ್ಚಿಮಕ್ಕೆ ೭ ಮೈಲಿನ ಮೇಲಿರುವ ಘೋಡೇಶ್ವರ ಇರಬಹುದು. ಕಾರಕೂರು ಇದು ತರ್ದೇವಾಡಿಯಿಂದ ಉತ್ತರಕ್ಕೆ ೪ ಮೈಲಿನ ಮೇಲಿದ್ದ ಕಾರಕಲ್ಲು ಇರಬಹುದು. ದೇಹೂರು ಇದು ವಾಡಪುರಿಯಿಂದ ದಕ್ಷಿಣಕ್ಕೆ ೫ ಮೈಲಿನ ಮೇಲೆ ಇರುವ ದಸೂರ ಅಥವಾ

ತರ್ದೇವಾಡಿ ದಕ್ಷಿಣಕ್ಕೆ ೭ ಮೈಲಿನ ಮೇಲಿರುವ ಜೇವೂರ ಇರಬಹುದು. ಕೂಟಜ ಇದು ವಾಡಪುರಿಗೆ ೫-೬ ಮೈಲು ದೂರವಿರುವ ಕೂಡಿಗಿ ಮತ್ತು ಕರುಸಗೆ ಇದು ಕರ್ಜಗಿ ಅಥವಾ ಕರಂಜಾಳ ಇರಬಹುದು. ಕರಂಜಾಳ ಇದು ವಾಡಪುರಿಯ ದಕ್ಷಿಣಕ್ಕೆ ೧೦ ಮೈಲಿನ ಮೇಲೆ ಇದೆ. ಈ ಗ್ರಾಮಗಳಲ್ಲಿ ಘೋಡೇಶ್ವರ, ಕೂಡಿಗಿ, ವಾಡಪುರಿ, ದಸೂರ, ಕಾರಕಳ ಇವೆಲ್ಲವೂ ಭೀಮಾ ತೀರದಲ್ಲಿ ಇವೆ. ಉಳಿದ ಗ್ರಾಮಗಳೂ ಸಹ ಇವುಗಳ ಸಮೀಪದಲ್ಲಿಯೇ ಇರುತ್ತವೆ. ಆದರೆ ನಮಗೆ ಪೂಜ್ಯಪುರ, ಆಲೂರು, ಲಟ್ಟಿಗೆರೆ ಇವು ನಕಾಶದಲ್ಲಿ ದೊರೆಯುವದಿಲ್ಲ. ಆದರೆ ನಾವು ಮಾಡಿದ ಈ ಊಹೆಗಳು ಇನ್ನೂ ನಿರ್ಧರಿಸಲ್ಪಟ್ಟಿಲ್ಲ. ಈ ಗ್ರಾಮಗಳಲ್ಲಿ ಮರವಾನಿ ಗುಡ್ಡಮ್ಮಯ ಕುರುಹುಗಳು ಇವೆಯೋ ಹೇಗೆಂಬದನ್ನು ಸಂಶೋಧಿಸುವದು ಬಹು ಅವಶ್ಯವಿದೆ ಈ ಸಂಗತಿಯನ್ನು ನಾನು ಅಲ್ಲಿಯ ನನ್ನ ಮಿತ್ರರಿಗೆ ತಿಳಿಸಿದ್ದೇನೆ. ನಿಶ್ಚಿತ ಸಂಗತಿಗಳು ದೊರೆತ ಕೂಡಲೆ ಅವುಗಳನ್ನು ನಾನು ಪ್ರಸಿದ್ಧಿಸುವೆನು.

---

## ಶ್ರೀ ರೇವಣಸಿದ್ಧೇಶ್ವರ.

( ಸಂಪಾದಕ )

ರೇವಣಸಿದ್ಧೇಶ್ವರನ ವಿಷಯವಾಗಿ ಶಿವಾನುಭವ ಪತ್ರಿಕೆಯಲ್ಲಿ ಬರೆದ ವೃತ್ತಾಂತವನ್ನು ಶ್ರೀ ಶಂ. ಗೋ. ಸಾಖರ್ಪೇಕರ ಬಡೋದೆ ಇವರು ಸುದರ್ಶನ ಪತ್ರಿಕೆಯ ಅಗಸ್ಟ ೭ನೇ ತಾರೀಖಿನ ಸಂಚಿಕೆಯಲ್ಲಿ ಒಂದು ಲೇಖವನ್ನು ಬರೆದಿದ್ದಾರೆ. ರೇಣುಕನು ಕೊಲ್ಲಿಪಾಕಿಯಲ್ಲಿ ಹುಟ್ಟಿದನೆಂತಲೂ ಅವನು ಅಗಸ್ತ್ಯ ಮುನಿಗೆ ಲಿಂಗಧಾರಣಮಾಡಿದನೆಂತಲೂ ಸಿಂಹಲದ್ವೀಪಕ್ಕೆ ಹೋದನೆಂತಲೂ ಮುಂದೆ ಹದಿಮೂರು ನೂರು ವರ್ಷ ಜೀವಿಸಿ ರೇವಣಸಿದ್ಧೇಶ್ವರನೆಂಬ ಹೆಸರಿನಿಂದ ಮಂಗಳವಾಡದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಅನೇಕ ಮಹತ್ವಗಳನ್ನು ಮಾಡಿದನೆಂತಲೂ ಪುರಾಣದಲ್ಲಿ ಉಲ್ಲೇಖಗಳಿರುತ್ತವೆ. ಇವುಗಳಲ್ಲಿ ಕೆಲವು ವಿಷಯಗಳನ್ನು ನಾವು ನಮ್ಮ ಲೇಖಗಳಲ್ಲಿ ಉದಹರಿಸಿರುತ್ತೇವೆ. ಇಷ್ಟರಿಂದಲೇ ಶ್ರೀಯುತ ಸಾಖರ್ಪೇಕರ ಇವರು ತರ್ದೇವಾಡಿಯಲ್ಲಿ ಇದ್ದ ರೇವಣಸಿದ್ಧೇಶ್ವರನೇ ಲಂಕೆಗೆ ಹೋದನೆಂದು ನಾವು ಗ್ರಹಿಸಿರುವೆವೆಂದು ತಿಳಿದು ಈ ವಿಷಯವನ್ನು

ಪುನಃ ನಾವು ವಿಚಾರಮಾಡಬೇಕೆಂದು ಅವರು ಸೂಚಿಸಿರುತ್ತಾರೆ. ರೇವಣಸಿದ್ಧೇಶ್ವರನ ಪುರಾಣದಲ್ಲಿ ದಂತಕಥೆಗಳೊಡನೆ ನಿಜವಾದ ಚರಿತ್ರೆಗಳೂ ಕೂಡಿರುತ್ತವೆಂದು ನಮಗೆ ತೋರುತ್ತವೆ. ತರ್ದವಾಡಿ ಪ್ರದೇಶವಲ್ಲಿ ಒಸವನಕಿಂತ ಸ್ವಲ್ಪ ಪೂರ್ವದಲ್ಲಿ ರೇವಣಸಿದ್ಧೇಶ್ವರನು ವಾಸಿಸುತ್ತಿದ್ದು ಅಲ್ಲಿ ಆವನು ಅನೇಕ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದ್ದು ನಿಜವೆಂದು ತೋರಿಸುವದಷ್ಟೇ ನಮ್ಮ ಲೇಖಗಳಲ್ಲಿಯ ಮುಖ್ಯ ಅಭಿಪ್ರಾಯವಾಗಿದ್ದಿತು. ಆದರೆ ಅವನು ಎಲ್ಲಿ ಜನಿಸಿದನು, ಅವನ ತಾಯಿ ತಂದೆಗಳಾರು, ಮತ್ತು ಕಡೆಗೆ ಎಲ್ಲಿ ಐಕ್ಯಹೊಂದಿದನು, ಎಂಬಿವೇ ಮೊದಲಾದ ವಿಷಯಗಳು ಐತಿಹಾಸಿಕ ದೃಷ್ಟಿಯಿಂದ ಇನ್ನೂ ಸಂಶೋಧಿಸಲ್ಪಟ್ಟಿರುವದಿಲ್ಲ. ಈ ವಿಷಯವಾಗಿ ನಾವು ಯಾವ ವಿಧಾನವನ್ನೂ ಮಾಡಿರುವದಿಲ್ಲ.

ರೇವಣಸಿದ್ಧೇಶ್ವರನಕಿಂತ ಮೊದಲು ರೇಣುಕರೆಂಬವರು ಪ್ರಾಲಸ್ತ್ಯರಿಕೆಯಲ್ಲಿ ಜನಿಸಿ ಮುಂದೆ ಅಗಸ್ತ್ಯಋಷಿಯೊಡನೆ ಅನೇಕ ಮಹತ್ವಗಳನ್ನು ಮಾಡಿ ಕಡೆಗೆ ಕೊಲ್ಲಿಪಾಕಿಯಲ್ಲಿಯೇ ಐಕ್ಯಹೊಂದಿದರೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿರುತ್ತದೆ. ಈ ರೇಣುಕರು ಮಾಡಿದ ಕಾರ್ಯಗಳು ಐತಿಹಾಸಿಕ ದೃಷ್ಟಿಯಿಂದ ಎಷ್ಟರಮಟ್ಟಿಗೆ ಗ್ರಾಹ್ಯವೆಂಬುದು ಇನ್ನೂ ಸಂಶೋಧಿಸತಕ್ಕ ವಿಷಯವಾಗಿದೆ. ಆದರೂ ಅವುಗಳಲ್ಲಿಯ ಐತಿಹಾಸಿಕ ಭಾಗಗಳನ್ನು ಶಿವಾನುಭವ ಸಂಪುಟ ೨ ಸಂಚಿಕೆ ೫ ಪುಟ ೭೯ ಇದರಲ್ಲಿ ನಾವು ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಅದನ್ನು ಅವರು ಅವಲೋಕಿಸಬೇಕೆಂದು ನಮ್ಮ ಸೂಚನೆ ಇದೆ. ಇದರಲ್ಲಿ ನಾವು ರೇಣುಕರು ರೇವಣಸಿದ್ಧೇಶ್ವರನಕಿಂತ ಭಿನ್ನನೆಂತಲೂ ಅವರಿಬ್ಬರು ಬೇರೆಬೇರೆ ಕಾಲಗಳಲ್ಲಿದ್ದರೆಂತಲೂ ವಿವರಿಸಿದ್ದೇವೆ. ಅವರಲ್ಲಿ ರೇಣುಕರು ಅಗಸ್ತ್ಯನೊಡನೆ ದಕ್ಷಿಣ ಹಿಂದುಸ್ತಾನ ಮತ್ತು ಲಂಕಾದ್ವೀಪ ಇವುಗಳಲ್ಲಿ ಮತ್ತು ಅಗಸ್ತ್ಯರು ಜಾವಾ ದ್ವೀಪದಲ್ಲಿ ಪುರಾತನ ಕಾಲದಲ್ಲಿ ಒಂದು ಮಹತ್ತರ ಶೈವಧರ್ಮ ಜಾಗ್ರತಿಯನ್ನು ಮಾಡಿದರೆಂತಲೂ ಅದರಲ್ಲಿ ತೋರಿಸಿದ್ದೇವೆ. ಆದರೆ ಈ ರೇಣುಕರ ತರುವಾಯ ಅನೇಕ ಶತಮಾನಗಳು ಹೋದಮೇಲೆ ರೇವಣಸಿದ್ಧೇಶ್ವರರು ಉಗಮಿಸಿ ತರ್ದವಾಡಿ ಸೀಮೆಯಲ್ಲಿ ಬಿಜ್ಜಳನ ಕಾಲದಲ್ಲಿ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದ್ದನ್ನು ತೋರಿಸುವದೇ ನಮ್ಮ ಈವರೆಗಿನ ಲೇಖಗಳ ಉದ್ದೇಶವಾಗಿರುತ್ತದೆ.

# ಮಧುವರಸನ ವಚನಗಳು.

## ವಚನಗಳು.

೧. ಮೂವರು ಸಮಗಾರರ ಬಾಗಿಲಲ್ಲಿ ಐವರು ಹಾರುವರು ಹಾರೈಸುತ್ತಿದ್ದಾರೆ. ಒಬ್ಬನಿಗೆ ಕೊಂಬ ಕೊಟ್ಟು ಒಬ್ಬನಿಗೆ ಕೊಳಗ ಕೊಟ್ಟು ಒಬ್ಬನಿಗೆ ಕರುಳ ಕೊಟ್ಟು ಒಬ್ಬನಿಗೆ ಗರ್ಭವ ಕೊಟ್ಟು ಒಬ್ಬನಿಗೆ ಏನೂ ಇಲ್ಲದೆ ತಬ್ಬಿಬ್ಬಿಯಾಯಿತ್ತು. ಮಾದಿಗನ ಮನೆಯ ಹೊಕ್ಕ ಮಾದಗಿತ್ತಿಯರ ತಿಂದ ಅರ್ಕೇಶ್ವರ ಲಿಂಗವನರಿತ ಕಾರಣ.

ಟೀಕು:— ಮಯಾ ದುರ್ವಾಸನೆಯಲ್ಲಿರ್ಪ ಜೀವತ್ರಯಂಗಳೆಂಬುದೀಗ ಮೂವರು ಸಮಗಾರರು ಎಂಬ ಶಬ್ದಕ್ಕರ್ಥ. ಆ ಜೀವತ್ರಯಂಗಳು ವರ್ತಿಸುವ ಪಂಚೇಂದ್ರಿಯ ದ್ವಾರಂಗಳಲ್ಲಿ ಎಂಬುದೀಗ ಮೂವರು ಸಮಗಾರರ ಬಾಗಿಲಲ್ಲಿ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯ ದ್ವಾರಂಗಳಲ್ಲಿ ಪಂಚಕರಣಂಗಳು ನಿಂದು ಪಂಚ ವಿಷಯ ಪದಾರ್ಥಂಗಳನಿಚ್ಛೈಸುತ್ತಿಹರೆಂಬುದೀಗ ಐವರು ಹಾರುವರು ಹಾರೈಸುತ್ತಿದ್ದಾರೆ. ಒಬ್ಬನಿಗೆ ಕೊಂಬ ಕೊಟ್ಟು ಒಬ್ಬನಿಗೆ ಕೊಳಗ ಕೊಟ್ಟು ಒಬ್ಬನಿಗೆ ಕರುಳ ಕೊಟ್ಟು ಒಬ್ಬನಿಗೆ ಗರ್ಭವ ಕೊಟ್ಟು ಎಂಬ ಶಬ್ದಕ್ಕರ್ಥ. ಆ ನಾಲ್ಕು ಕರಂಗಳಲ್ಲಿ ನಾಲ್ಕು ವಿಷಯ ಸಂಬಂಧವಾಗಲು ಜ್ಞಾನ ಕರಣ ಸ್ವರೂಪಿ ಆತ್ಮನಾಗಿ ಅಂತಪ್ಪ ಆತ್ಮನಿಗೆ ಸುಜ್ಞಾನೋದಯವಾದಲ್ಲಿ ಸಕಲ ವಿಷಯ ಪ್ರಪಂಚ ನಷ್ಟನಾಯಿತ್ತೆಂಬುದೀಗ ಒಬ್ಬನಿಗೆ ಏನು ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಜೀವನ ಸಕಲ ಪ್ರಪಂಚಿನ ದುರ್ವರ್ತನೆಯುಳಿದು ಶ್ರೀಗುರು ಕಾರುಣ್ಯದಿಂ ಸದ್ವರ್ತನೆಯಾಯಿತ್ತೆಂಬುದೀಗ ತಬ್ಬಿಬ್ಬಿಯಾಯಿತ್ತೆಂಬ ಶಬ್ದಕ್ಕರ್ಥ. ಸರ್ವ ಸೂತಕ ರಹಿತವಾಗಿರ್ಪ ನಿಷ್ಕಲ ಪರಶಿವನ ಚಿದಾಲಯವೆಂಬುದೀಗ ಮಾದಿಗನ ಮನೆ ಎಂಬ ಶಬ್ದಕ್ಕರ್ಥ. ಆ ಚಿದಾಲಯಕ್ಕೆ ಶರಣ ತನ್ನ ಸುಜ್ಞಾನ ಮುಖದಿಂದೆಯ್ದಿದನೆಂಬುದೀಗ ಆ ಮಾದಿಗನ ಮನೆಯ ಹೊಕ್ಕು ಎಂಬ ಶಬ್ದಕ್ಕರ್ಥ. ಸರ್ವ ಸೂತಕ ರಹಿತವಾದ ನಿಷ್ಕಲ ಚಿಚ್ಛಕ್ತಿಯ ನಿಜ ಸುಮುತ್ತಿಯ ಜ್ಞಾನ

ದಲ್ಲಿರ್ಪ ಪರವಸ್ತುವನವಗ್ರಹಿಸಿದನೆಂಬುದೀಗ ಮಾದಗಿತ್ತಿಯುರ ಿಂದ ಅರ್ಕೇಶ್ವರ ಲಿಂಗವನರಿತ ಕಾರಣ ಎಂಬ ಶಬ್ದಕ್ಕರ್ಥ.

೨. ಕಂಗಳ ಸೂತಕವ ಯೋನಿ ತಡೆದು ಬಾಯಿ ಬಸುರಾಗಿ ಕೈ ಬೆಸಲಾಯಿತ್ತು. ಕೈ ಶಿಶುವ ಕಂಗಳ ತಾಯಿ ಎತ್ತಿ ಭಾವದಾದಿಯು ಕೈಯಲ್ಲಿ ಕೊಟ್ಟು ಅರ್ಕೇಶ್ವರ ಲಿಂಗವು ಕೊಟ್ಟಲ್ಲಿ ಬೆಳೆವುತ್ತಿದೆ.

ಟೀಕುಃ— ಕಂಗಳೆಂದೊಡೆ ಸುಜ್ಞಾನ ದೃಷ್ಟಿ ಎಂಬುದರ್ಥ. ಆ ಸುಜ್ಞಾನ ಪ್ರಕಾಶದಿಂ ಪರಶಿವ ತತ್ವದಲ್ಲಿ ಕೂಡಬೇಕೆಂಬ ನೆನಹುದೋರಿ ಆ ನೆನಹು ತನ್ನ ನಿಜ ಸುಷುಪ್ತಿಯಲ್ಲಿ ನಿರ್ಧರವಾಯಿತ್ತೆಂಬುದೀಗ ಕಂಗಳ ಸೂತಕವ ಯೋನಿ ತಡೆದು ಎಂಬ ಶಬ್ದಕ್ಕರ್ಥ. ಆ ನೆನಹು ನಿರ್ಧರ ವಾದ ಶರಣನು ಶಿವಾಪೇಕ್ಷೆಯು ಮುಂದುಗೊಂಡಲ್ಲಿ ಮಹಾಲಿಂಗದ ನಿಜ ಸ್ವರೂಪವನೊಳಕೊಂಡು ಅಂತರಂಗದಲ್ಲಿ ಚಿದ್ಗರ್ಭವಾಯಿತ್ತೆಂಬು ದೀಗ ಬಾಯಿ ಬಸುರಾಗಿ ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪನಾದ ಶರಣನ ನಿಜಾಂತರಂಗದಲ್ಲಿರ್ಪ ಪರಮ ಚಿತ್ಕಲಾ ಲಿಂಗವೇ ಶ್ರೀಗುರು ಮುಖದಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗವಾಗಿ ಬಂದಿತ್ತೆಂಬುದೀಗ ಕೈ ಬೆಸಲಾಯಿತ್ತೆಂಬ ಶಬ್ದಕ್ಕರ್ಥ ಆ ಶರಣನ ಕರಸ್ಥಲದಲ್ಲಿರ್ಪ ಸತ್ಕ್ರಿಯಾ ಲಿಂಗವನು ಸುಜ್ಞಾನಕ್ಕೆ ಮಾತೃಸ್ಥಾನವಾದ ಶರಣನು ತನ್ನ ನಿಜಾಂ ತರಂಗಕ್ಕೆ ವೇಧಿಸಿ ಪ್ರಾಣಲಿಂಗ ಸಾಹಿತ್ಯವ ಮಾಡಿಕೊಂಡನೆಂಬುದೀಗ ಕೈ ಶಿಸುವ ಕಂಗಳ ತಾಯಿ ಎತ್ತಿ ಎಂಬ ಶಬ್ದಕ್ಕರ್ಥ. ಆ ಮನೋ ಮಧ್ಯದಲ್ಲಿ ಸಂಬಂಧವಾದ ಪ್ರಾಣಲಿಂಗವನು ಶರಣ ಇಚ್ಛಾಶಕ್ತಿ ಸ್ವರೂ ಪವಾದ ಸದ್ಭಾವ ಹಸ್ತದಲ್ಲಿ ತೃಪ್ತಿಲಿಂಗವ ಸಂಬಂಧವ ಮಾಡಿದನೆಂಬು ದೀಗ ಭಾವದಾಡಿಯು ಕೈಯ್ಯಲ್ಲಿ ಕೊಟ್ಟು ಎಂಬ ಶಬ್ದಕ್ಕರ್ಥ. ಆ ಒಂದೇ ಮಹಾಘನ ಲಿಂಗವು ತ್ರಿವಿಧಲಿಂಗ ಸ್ವರೂಪವಾಗಿ ಶರಣನಾಚಾ ರಂಗಳನೊಳಕೊಂಡು ಪ್ರಕಾಶಿಸುತ್ತಿಹುದೆಂಬುದೀಗ ಅರ್ಕೇಶ್ವರಲಿಂಗವು ಕೊಟ್ಟಲ್ಲಿ ಬೆಳವುತ್ತಿದೆ ಎಂಬ ಶಬ್ದಕ್ಕರ್ಥ.

೩. ಅಂಗೈಯಲ್ಲಿ ಬೇರು ಹುಟ್ಟಿ ಮುಂಗೈಯಲ್ಲಿ ಮೊಳೆದೋರಿ ಹಿಂಗಾಲಲ್ಲಿ ಮರ ಬಲಿಯಿತ್ತು. ಮುಂಗಾಲಲ್ಲಿ ಫಲ ಮೂಡಿ ಅಂಗೈಯ್ಯಲ್ಲಿ ಹಣ್ಣಾಯಿತ್ತು. ಕಂಗಳ ಕೂಸು ಹಣ್ಣ ಮೆದ್ದಿತ್ತು. ಕೂಸಿನ ಅಂಗವನರಿ ಅರ್ಕೇಶ್ವರ ಲಿಂಗಸಂಗವ ಮಾಡು.

ಟೀಕು:— ಚಿದ್ರೂಪನಾದ ಶರಣನ ಸದ್ಭಾವ ಹಸ್ತದಲ್ಲಿ ಮೂಲ ಜ್ಞಾನವು ಉದಯವಾಯಿತ್ತೆಂಬುದೀಗ ಅಂಗೈಯಲ್ಲಿ ಬೇರು ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಮೂಲಜ್ಞಾನ ಮನೋಹಸ್ತದಲ್ಲಿ ಅಂಕುರಿಸಿತ್ತೆಂಬುದೀಗ ಮುಂಗೈಯಲ್ಲಿ ಮಳೆದೋರಿ ಎಂಬ ಶಬ್ದಕ್ಕರ್ಥ. ಆ ಮನೋಮಧ್ಯ ದಲಂಕುರಿಸಿದ ಮೂಲ ಜ್ಞಾನವು ಶರಣನ ಚರ್ಯಾಪಾದದಲ್ಲಿ ಸದ್ವಿವೇಕ ವೃಕ್ಷಸ್ವರೂಪಿನಿಂ ನಿರ್ಧರವಾಯಿತ್ತೆಂಬುದೀಗ ಹಿಂಗಾಲಲ್ಲಿ ಮರ ಬಲಿಯಿತ್ತೆಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷದಲ್ಲಿ ತೋರದ ಮುಕ್ತಿ ಫಲಸ್ವರೂಪವಾದ ಚಿದ್ಘನಲಿಂಗವು ಶ್ರೀಗುರುಕಾರುಣ್ಯದಿಂ ಪ್ರತ್ಯಕ್ಷವಾಗಿ ಶರಣನ ಕ್ರಿಯಾಪಾದದಲ್ಲಿ ಸಂಬಂಧವಾಯಿತ್ತೆಂಬುದೀಗ ಮುಂಗಾಲಲ್ಲಿ ಫಲ ಮೂಡಿ ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾಚಾರದಲ್ಲಿ ಸಂಬಂಧ ವಾದ ಮುಕ್ತಿಫಳಸ್ವರೂಪವಾದ ಚಿದ್ಘನಲಿಂಗವೇ ಶರಣನ ಕರಸ್ಥಲದಲ್ಲಿ ಚಿದಮೃತ ಚಿತ್ಫಲಸ್ವರೂಪಿನಿಂ ಪ್ರಸನ್ನವಾಗಿ ಇಷ್ಟಲಿಂಗ ಮೂರ್ತಿಗೊಂ ಡಿತ್ತೆಂಬುದೀಗ ಅಂಗೈಯ್ಯಲ್ಲಿ ಹಣ್ಣಾಯಿತ್ತು ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪಿನಿಂದ ಶರಣನು ಮುಕ್ತಾಫಳಸ್ವರೂಪವಾದ ಪರಬ್ರಹ್ಮವ ಸರ್ವಾಂಗದಲವಗ್ರಹಿಸಿ ಲಿಂಗಾಂಗ ಸಮರಸಾನಂದ ಸುಖವ ಸ್ವೀಕರಿಸು ತ್ತಿಹನೆಂಬುದೀಗ ಕಂಗಳ ಕೂಸು ಹಣ್ಣ ಮೆದ್ದಿತ್ತು, ಕೂಸಿನ ಅಂಗವ ನರಿ, ಅರ್ಕೇಶ್ವರಲಿಂಗವ ಸಂಗವ ಮಾಡು ಎಂಬ ಶಬ್ದಕ್ಕರ್ಥ.

೪. ಸೂನೆಗಾರನ ಮನೆಯಲ್ಲಿ ಮೂರು ಹಂದೆಗಳು ಹೊಕ್ಕು ಹೇಳಹೆಸರಿಲ್ಲದೆ ಕೊಂದರಲ್ಲ ಸೂನೆಗಾರ ಏನೂ ಎನ್ನದಿರ್ದ. ಕೇಳುವ ಬಸ್ನಿ ಅರ್ಕೇಶ್ವರಲಿಂಗವ.

ಟೀಕು:— ಸಕಲ ಪ್ರಾಣಿಗಳ ಸಂಹರಿಸುತ್ತಿಹ ಜೀವನೆಂಬುದೀಗ ಸೂನೆಗಾರನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸಂಬಂಧವಾದ ದೇಹ ವೆಂಬುದೀಗ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಪಿಂಡದಲ್ಲಿ ಸುಜ್ಞಾನೋದಯವಾಗಿ ಶ್ರೀಗುರೂಪಾವಸ್ಥೆಯ ಮಾಡಲು ಗುರುತ್ರಯವು ಕರುಣಿಸಿ ದೀಕ್ಷಾತ್ರಯಂಗಳಿಂ ಬೆರಸಿ ಲಿಂಗತ್ರಯಸಂಬಂಧವ ಮಾಡಿ ಸಕಲ ಪ್ರಪಂಚೆಲ್ಲವ ನಷ್ಟನ ಮಾಡಿದರೆಂಬುದೀಗ ಮೂರು ಹಂದೆಗಳು ಹೊಕ್ಕು ಹೇಳಹೆಸರಿಲ್ಲದೆ ಕೊಂದರಲ್ಲ ಎಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚು ನಷ್ಟವಾಗಲು ಶಬ್ದಜಾಲಂಗಳಳಿದು ಆ ಸಜ್ಜೀವನು ಚಿದ್ಘನ

ಲಿಂಗದಲ್ಲಿ ಶಬ್ದಮುಗ್ಧವಾಗಿರ್ದನೆಂಬುದೀಗ ಸೂಕ್ಷಿಗಾರ ಏನು ಎನ್ನದಿರ್ದ ಕೇಳುವ ಬನ್ನಿ ಅರ್ಕೇಶ್ವರಲಿಂಗವ ಎಂಬ ಶಬ್ದಕ್ಕರ್ಥ.

೫. ಹಾವನು ಹದ್ದನು ಕೂಡೆ ಮೆದ್ದು ಬೇವನು ಬೆಲ್ಲವನು ಕೂಡೆ ಕಲಿಸಿ ಸಾಗರದಲ್ಲಿ ಸಾಧನೆಯ ಮಾಡುವರ ಬೇಗ ನೋಡಿ ಅರ್ಕೇಶ್ವರ ಲಿಂಗವನರಿವುದಕ್ಕೆ.

ಟೀಕು:— ಸಮ್ಯಜ್ಞಾನೋದಯವಾದ ಶರಣನು ಜೀವ ಪರಮರೆಂಬುಭಯವನು ಜ್ಞಾನಾಗ್ನಿಯಲ್ಲಿ ಸಮರಸ ಪಾಕವ ಮಾಡಿ ಭಕ್ತಿಯಿಂ ಪ್ರಾಣಲಿಂಗಾರ್ಪಿತವ ಮಾಡಿ ಪ್ರಸಾದವ ಸ್ವೀಕರಿಸುತ್ತಿಹನೆಂಬುದೀಗ ಹಾವನು ಹದ್ದನು ಕೂಡೆ ಮೆದ್ದು ಎಂಬ ಶಬ್ದಕ್ಕರ್ಥ. ಆ ಜೀವಪರಮರ ಪ್ರಾಣಲಿಂಗದಲ್ಲಿ ಏಕಾರ್ಥವ ಮಾಡಿದ ಶರಣನ ಪಂಚವಿಷಯಂಗಳಲ್ಲಿ ಪರಬ್ರಹ್ಮವೇ ಪಂಚವಿಧವಾಗಿ ಸಮರಸವಾಗಿಹುದೆಂಬುದೀಗ ಬೇವನು ಬೆಲ್ಲವನು ಕೂಡೆ ಕಲಿಸಿ ಎಂಬ ಶಬ್ದಕ್ಕರ್ಥ. ಆ ಲಿಂಗಸಂಬಂಧವಾದ ಶರಣನ ಸಂಸಾರಸಾಗರದಲ್ಲಿ ದೇಹವಿಡಿದಿರ್ದ ಆ ದೇಹ ಸಂಸಾರವ ಹೊದ್ದದೆ ಜ್ಞಾನಕ್ರಿವಿಡಿದಾಚರಿಸಿ ಪರವಸ್ತುವ ಸಾಧಿಸುತ್ತಿಹ ತ್ರಿವಿಧಲಿಂಗಾನುಭಾವಿಗಳ ಕಂಡವರೆಲ್ಲಾ ಕೃತಾರ್ಥಜೀವಿಗಳೆಂಬುದೀಗ ಸಾಗರದಲ್ಲಿ ಸಾಧನೆಯ ಮಾಡುವರ ಬೇಗ ನೋಡಿ ಅರ್ಕೇಶ್ವರಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೬. ನೆನಹು ನಿಜದಲ್ಲಿನಿಂದಲ್ಲಿ ಸುರಳಿನ ತೊಡಕು ಗಂಟುಂಟೇ ? ಅಂಬರವನಿರಿದಂಗೆ ಬೇರೊಂದು ಇಂಬು ಮಾಡಲುಂಟೇ ? ವಸ್ತುವಿನಂಗದಲ್ಲಿ ಸರ್ವವು ಹಿಂಗಿದಲ್ಲಿ ಅರ್ಕೇಶ್ವರಲಿಂಗವ ಕಟ್ಟುವುದಕ್ಕೆ ಬೇರೊಂದು ಠಾವುಂಟೇ ?

೭. ಬಂಧುಗಳ ಬೆಂಬಳಿಯ ಕಳ್ಳನ ಹೆಂಡತಿಗೆ ಭಗ ಮೂರು ಬಾಯಾರು ಕೃಷ್ಣ ಎಂಭತ್ತುನಾಲ್ಕು ಲಕ್ಷ ರೋಮ ಎಂಟು ಕೋಟಿ ಹಲ್ಲು ಹದಿನಾರು ನಾಲಿಗೆ ಏಳು ಕಿವಿ ಇಪ್ಪತ್ತೈದು ಮೂಗು ಮೂವತ್ತೇಳು ಕಾಲು ಎಂಟು ಭುಜ ಎರಡು ಕೈ ಒಂದೇ ಹಿಂದೆ ಮುಂದೆ ನೋಡುವ ಕಣ್ಣು ಅಭಿಸಂದಿಯೊಳಗೊಂದೇ ಇದೆ. ಅರ್ಕೇಶ್ವರಲಿಂಗವ ಕಾಣಬಾರದು.

ಟೀಕು:— ಸಕಲ ಕರಣಂಗಳ ವ್ಯವಹಾರದಲ್ಲಿ ಕೂಡಿರ್ಪ ಪಾರಮಾರ್ಥಕ್ಕೆ ವಂಚಕನಾದ ಜೀವನೆಂಬುದೀಗ ಬಂಧುಗಳ ಬೆಂಬಳಿಯ

ಕಳ್ಳನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಸತಿಯಾಗಿರ್ಪಳು ಮಾಯೆ ಎಂಬುದೀಗ ಹೆಂಡತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಗೆ ಮಲತ್ರಯಂಗಳೇ ಯೋನಿಗಳಾಗಿರುತ್ತಿಹವೆಂಬುದೀಗ ಭಗ ಮೂರು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಷಡಿಂದ್ರಿಯಂಗಳೇ ಬಾಯಾಗಿಹವೆಂಬುದೀಗ ಬಾಯಾರು ಎಂಬ ಶಬ್ದಕ್ಕರ್ಥ. ಆ ಮಾಯೆಯು ಎಂಭತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ಹುಟ್ಟಿ ಹುಟ್ಟಿ ಬರುತ್ತಿಹಳೆಂಬುದೀಗ ಪೃಷ್ಠ ಎಂಭತ್ತು ನಾಲ್ಕುಲಕ್ಷವೆಂಬ ಶಬ್ದಕ್ಕರ್ಥ. ಆ ಮಾಯಾ ಸಂಬಂಧವಾದ ದೇಹದಲ್ಲಿ ಎಂಟು ಕೋಟಿ ರೋಮಗಳಿರುತ್ತಿಹವೆಂಬುದೀಗ ರೋಮ ಎಂಟು ಕೋಟಿ ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಅಂತರಂಗ ಅಷ್ಟಮದ ಬಹಿರಂಗದ ಅಷ್ಟಮದಗಳೆಂಬ ಮಥನ ದಂತಗಳಾಗಿರುತ್ತಿಹವೆಂಬುದೀಗ ಹಲ್ಲು ಹದಿನಾರು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಸಪ್ತ ವ್ಯಸನಂಗಳೇ ವಿಷಯಂಗಳ ಸ್ವೀಕರಿಸುವದಕ್ಕೆ ನಾಲಿಗೆಯಾಗಿಹವೆಂಬುದೀಗ ನಾಲಿಗೆ ಏಳು ಎಂಬ ಶಬ್ದಕ್ಕರ್ಥ. ಇಪ್ಪತ್ತೈದು ತತ್ವಂಗಳೇ ಆ ಮಾಯೆಗೆ ಶೃತಕರಣಂಗಳಾಗಿಹವೆಂಬುದೀಗ ಕಿವಿ ಇಪ್ಪತ್ತೈದು ಎಂಬ ಶಬ್ದಕ್ಕರ್ಥ ಗುಣತ್ರಯ ಮೊದಲಾದ ತತ್ವ ಇಪ್ಪತ್ತೊಂಭತ್ತು ಅಷ್ಟತನುಗಳ ಮದವೆಂಟು ಈ ಮೂವತ್ತೇಳು ತತ್ವ ಮಾಯೆಗೆ ದುರ್ವಾಸನೆ ಸ್ವೀಕಾರವಾಗಿಹವೆಂಬುದೀಗ ಮೂಗು ಮೂವತ್ತೇಳು ಎಂಬ ಶಬ್ದಕ್ಕರ್ಥ ಆ ಮಾಯೆಗೆ ಅಷ್ಟತನುಗಳೇ ದುಶ್ಚರಿತ್ರಂಗಳೆಂಬ ಚರಣವಾಗಿಹವೆಂಬುದೀಗ ಕಾಲೆಂಟು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಅಹಂಕಾರ ಮಮಕಾರಂಗಳೇ ಭುಜಗಳಾಗಿಹವೆಂಬುದೀಗ ಭುಜವೆರಡು ಎಂಬ ಶಬ್ದಕ್ಕರ್ಥ. ಆ ಮಾಯೆಗೆ ಸಕಲ ಪ್ರಪಂಚ ಹಿಡಿವ ಕುಚಿತ್ತವೆಂಬ ಹಸ್ತ ಒಂದೇ ಎಂಬುದೀಗ ಕೈ ಒಂದೇ ಎಂಬ ಶಬ್ದಕ್ಕರ್ಥ. ಆ ಮಾಯೆ ದೇಹದೇಹಿಗಗಿದಿದಿರಿಟ್ಟುಕೊಂಡು ಆ ಜ್ಞಾನದೃಷ್ಟಿಯಿಂ ನೋಡುತ್ತಿಹಳೆಂಬುದೀಗ ಹಿಂದೆ ಮುಂದೆ ನೋಡುವ ಕಣ್ಣು ಎಂಬ ಶಬ್ದಕ್ಕರ್ಥ. ಆ ದೇಹ ಪ್ರಾಣಂಗಳ ಮಧ್ಯದಲ್ಲಿರ್ಪ ಆ ಜ್ಞಾನದೃಷ್ಟಿಯಿಂ ಮಹಾಲಿಂಗವು ಕಾಣಬಾರದೆಂಬುದೀಗ ಅಭಿಸಂಧಿಯೊಳಗೊಂದೇ ಇದೆ ಅರ್ಕೇಶ್ವರಲಿಂಗವ ಕಾಣಬಾರದು ಎಂಬ ಶಬ್ದಕ್ಕರ್ಥ.

೮. ಶುಕ್ಲಶೋಣಿತದ ಆಶ್ರಯದಲ್ಲಿ ಕುಕ್ಕುಟ ಮರೆದಿರಲಾಗಿ ಬೆಕ್ಕು ನುಂಗಬಂದಿತ್ತು. ಬೆಕ್ಕಿನ ಕುಕ್ಕಟನ ಕುಕ್ಕುರ ಖಂಡಿಸಿತ್ತು. ಆ ಕುಕ್ಕುರನ ಬೆಕ್ಕು ಕಾಲಜ್ಞಾನ ಎಚ್ಚತ್ತು ಅರ್ಕೇಶ್ವರಲಿಂಗವನರಿತ ಕಾರಣ.

ಟೀಕು:— ತಂದೆತಾಯಿಗಳ ಶುಕ್ಲಶೋಣಿತದಿಂದುದಯವಾದ ದೇಹದಲ್ಲಿ ಎಂಬುದೀಗ ಶುಕ್ಲಶೋಣಿತಾಶ್ರಯದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಪ್ರಣವಸ್ವರೂಪವಾದ ಚಿದಾತ್ಮನು ತನ್ನ ನಿಜವ ಮರೆದು ದೇಹಿಯಾಗಿರ್ದನೆಂಬುದೀಗ ಕುಕ್ಕುಟ ಮರೆದಿರಲಾಗಿ ಎಂಬ ಶಬ್ದಕ್ಕರ್ಥ. ಆ ದೇಹದ ಮರವೆಯಲ್ಲಿರ್ಪ ಚಿದಾತ್ಮನು ಮನೋಮಾರ್ಜಾಲದಿಂದವಗ್ರಹಿಸುತ್ತಿಹುದೆಂಬುದೀಗ ಕುಕ್ಕುಟ ಮರೆದಿರಲಾಗಿ ಬೆಕ್ಕು ನುಂಗಬಂದಿತ್ತೆಂಬ ಶಬ್ದಕ್ಕರ್ಥ. ಆ ಮನೋಮಾರ್ಜಾಲನ ಆ ಚಿದಾತ್ಮ ಇಂದ್ರಿಯಂಗಳವಗ್ರಹಿಸಿಕೊಂಡು ಘಾಸಿಮಾಡುತ್ತಿಹವೆಂಬುದೀಗ ಬೆಕ್ಕಿನ ಕುಕ್ಕುಟನ ಕುಕ್ಕುರ ಖಂಡಿಸಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡದಲ್ಲಿ ಶಿವಕೃಪೆಯಿಂ ಮೂಲ ಜ್ಞಾನ ಪ್ರಭಾವಿಸಲು ಆ ಸತ್ಪ್ರಣವ ಜ್ಞಾನ ಪ್ರಕಾಶದಿಂ ಇಂದ್ರಿಯಂಗಳ ಪ್ರವರ್ತನೆ ಮನೋವರ್ತನೆ ಎರಡು ಅಳಿದು ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗಸಂಬಂಧವಾಯಿತ್ತೆಂಬುದೀಗ ಕುಕ್ಕುರನ ಬೆಕ್ಕು ಕಾಲಜ್ಞಾನ ಎಚ್ಚತ್ತು ಅರ್ಕೇಶ್ವರಲಿಂಗವನರಿತಕಾರಣ ಎಂಬ ಶಬ್ದಕ್ಕರ್ಥ.

೯. ಮಧುರವಾಣಿಯ ಉದರದಲ್ಲಿ ಒಂದು ನಿಜ ಕುಕ್ಕುಟ ಕೂಗುತ್ತಿದೆ. ಮೂವರು ಮೊಲೆಯನುಂಡು ಮೊರದೊರಗಬೇಡಯೆಂದು ಬೆಳಗಾಯಿತ್ತು ಅರ್ಕೇಶ್ವರಲಿಂಗವ ನೋಡುವ ಬನ್ನಿಯೆಂದು ಕೂಗುತ್ತಿದ್ದಿತ್ತು.

ಟೀಕು:— ಭಕ್ತಿಯುಕ್ತವಾದ ಜ್ಞಾನಶಕ್ತಿಯ ನಿಜಾಂತರಂಗದಲ್ಲಿ ಎಂಬುದೀಗ ಮಧುರವಾಣಿಯ ಉದರದಲ್ಲಿ ಎಂಬ ಶಬ್ದಕ್ಕರ್ಥ. ಆ ನಿಜಾಂತರಂಗದಲ್ಲಿರ್ಪ ಸತ್ಪ್ರಣವಜ್ಞಾನವು ಉದಯವಾಗಿ ಶಿವೋಹಂ ಶಿವೋಹಂ ಎಂದು ಧ್ವನಿಗೈಯುತ್ತಿಹುದೆಂಬುದೀಗ ಒಂದು ನಿಜ ಕುಕ್ಕುಟ ಕೂಗುತ್ತಿದೆ ಎಂಬ ಶಬ್ದಕ್ಕರ್ಥ. ಇಚ್ಛಾ ಜ್ಞಾನ ಕ್ರಿಯೆಂಬ ತ್ರಿಶಕ್ತಿಗಳಿಂದುದಯವಾದ ಹೊನ್ನು ಮಣ್ಣು ಹೆಣ್ಣೆಂಬ ತ್ರಿವಿಧ ಸ್ಥಲವ ಸ್ವೀಕರಿಸಿ ನಿನ್ನ ನಿಜವ ಕೊಟ್ಟು ಮರೆದು ಮಾಯಾಪ್ರಪಂಚಿನಲ್ಲಿ ಮಗ್ನವಾಗಬೇಡೆಂದು ಎಚ್ಚರಿಸುತ್ತಿಹುದೆಂಬುದೀಗ ಮೂವರ ಮೊಲೆಯನುಂಡು ಮರೆದೊರಗಬೇಡಯೆಂದು ಎಂಬ ಶಬ್ದಕ್ಕರ್ಥ. ಆ ಶರಣನ ಅಂತರಂಗದಲ್ಲಿ ಶಿವಜ್ಞಾನ ಪ್ರಕಾಶವಾಗಲು ಆ ಸತ್ಪ್ರಣವವು ಲಿಂಗದ ನಿಜವನೆಚ್ಚರಿಸಿಕೊಟ್ಟು ಶಿವೋಹಂ ಭಾವದಿಂ ಧ್ವನಿಗೈಯ್ಯುತ್ತಿಹುದೆಂಬುದೀಗ ಬೆಳಗಾಯಿತ್ತು ಅರ್ಕೇಶ್ವರ ಲಿಂಗವ ನೋಡುವ ಬನ್ನಿ ಎಂದು ಕೂಗುತ್ತಿದ್ದಿತ್ತೆಂಬ ಶಬ್ದಕ್ಕರ್ಥ.

ಲಲನೆಯರ ಸವಿನುಡಿಯು ಕರ್ಣಕಿನಿದಾಗುತಂ
ತಲೆ ಪುಳಿತ ನಾಯಂತೆ ಇರದೆ ಬೇಳಾಗುತಂ
ಕಿವಿಯು ಒಳಗಿರುತಿರ್ಪ ಗುಗ್ಗೆಯಂ ನೋಡದಲೆ
ಅವರ ಹಲ್ಲಿನೊಳಿರ್ಪ ಕಿಸಿಚುವಂ ನೋಡದಲೆ
ನಾಸಿಕಂ ಸಿಂಬಳದ ಹಿರಿನಾಳವೆಂದಿರದೆ
ಪೇಸಿಕೆಯ ಮುಖವು ಬಚ್ಚಲ ನಾಳವೆಂದಿರದೆ
ನಳಿ ತೋಳ್ಗಳಸ್ಥಿಗಳ ದಂಡೆಗಳು ಯೆಂದಿರದೆ
ಲಲಿತ ಕಕ್ಷಂ ಬೆಮರ ದುರ್ಗಂಧವೆಂದಿರದೆ
ಒಟ್ಟಿ ಮೊಲೆಗಳ್ಮಾಂಸದೊಟ್ಟಿಲ್ಗಳೆಂದಿರದೆ
ಪೊಟ್ಟೆ ಎಂಬುದು ಕರುಳ ಮೊಟ್ಟೆ ತಾನೆಂದಿರದೆ
ನಡು ಜಿಗುಪ್ಸಾರಸದ ನಟ್ಟ ನಡುವೆಂದಿರದೆ
ಎಡಬಲದ ಬರಿಗಳೆಲ್ವಿನ ಕಟ್ಟಡೆಂದಿರದೆ
ಪೊರವಾರು ಮಲಮೂತ್ರದೊರತೆ ತಾನೆಂದಿರದೆ
ಎರಗಿದೇಂ ಪ್ರಾಯದೊಳು ಬೀಭತ್ಸವೆಂದಿರದೆ
ಒಂದು ಮೂತ್ರದ ಬಟ್ಟೆಯೊಂದಮೇಧ್ಯದ ಬಟ್ಟೆ
ಒಂದೆರಡರೊಳಗಲ್ಲಿ ಮತ್ತೆ ಕಷ್ಟದ ಬಟ್ಟೆ
ಪುಳುಗಳುಂ ರಸಿಕೆಯುಂ ಸುರಿತರ್ಪೋಡದು ಬಟ್ಟೆ
ಕಳೆದಿಂದ್ರಿಯಂ ಕೀವು ಸುರಿತರ್ಪೋಡದು ಬಟ್ಟೆ
ನರರ ನರಕದ ಬಟ್ಟೆಯೆಂದರಿಯದಾನಿದಂ
ಪರಿಕಿಸದೆ ಕೊಂಡಾಡುತಿರ್ದೆನರೆ ಮರುಳಿದಂ
ಪುಳಿತ ಪೆಣನಂ ಕಡಿದು ತಿನುತಿರ್ಪ ನಾಯಂತೆ
ಕಳಿತ ಮಾಂಸಕ್ಕಳುಪಿ ತಿಂಬ ಬಳ್ಳುವಿನಂತೆ
ಉಚ್ಛಿಷ್ಟದೊಳ್ಪೊಳ್ವಹಿ ಹಂದಿಯ ತೆರನಂತೆ
ಅಚ್ಚರಿಯ ಪೇಸಿಕೆಯೊಳಗೆ ಮುಳುಗುತಾನಿಂತೆ
ಸವೆದೆನೆಲೆ ಶಂಕರಾ ಶಶಿಧರಾ ಕರುಣಿಸಾ
ಶಿವನೆ ಸದಾಶಿವನೆ ಕಾಮಾರಿ ಕರುಣಿಸಾ
ಇಂತಪ್ಪ ಹೇಯದೊಳ್ನಿನ್ನ ನೆನೆಯಲುಂಟೆ
ಇಂತಪ್ಪ ಘೋರದೊಳಗಿರ್ದೆನಗೆ ನೀನುಂಟೆ
ಇಂತು ಸತಿಯರ ಮೋಹದೊಳಗೆ ಸಿಕ್ಕಿರುತಿರಲು
ಸಂತತಂ ಯೌವ್ವನದ ನರಕದೊಳು ಮುಳುಗಿರಲು

ಚಿನ್ನಂ ಚಿತ್ರಿಯುಂ ಕನ್ನೆಯರ್ಗಾಳಾಗಿ
ಹೊನ್ನಂ ವಿಳಾಸಮುಂ ವಿಷಯಕ್ಕೆ ಹಾಳಾಗಿ
ಸಂಗಮುಂ ಪ್ರಾಯಮುಂ ಹೇಯಕ್ಕೆ ಬರಿದಾಗಿ
ಅಂಗಂಗಳಧಟೆಲ್ಲವಂಗಂಗೆ ಮಾರಾಗಿ
ಬಳಿಕ ವನಿತೆಯರಲ್ಲಿ ಕಸವ ಬಿಸುಡುವಂತೆ
ಹಳಿದಾದ ಹರಿಣೆಯಂ ಪೇಸಿ ಪೊರಮಡಿಪಂತೆ
ನಡೆವೆಣನೆ ನುಡಿವೆಣನೆ ಬಾಳ್ವೆಣನೆ ಪೋಗೆಂದು
ಬಡಿಯದಿರ್ಬಾಲಮಂ ಸುಡು ನಾಯೆ ಛೀ ಎಂದು
ಇಂತು ಸತಿಯರ್ಬಿಡಲು ಬಡತನವದಡಿಯಿಡಲು
ಸಂತತಂ ಕೆಳೆಯರ್ಪರಿದು ಪೋಗೆ ಮತಿಗೆಡಲು

ತಂದೆ ತಾಯುಂ ಸತ್ತು ಬಂಧು ಬಳಗಂ ಬಿಟ್ಟು
ಸಂದ ಪುರಜನವಕ್ಕಟಾ ಯೆನಲ್ಕಣ್ಗೆಟ್ಟು
ಮರುಳಂತೆ ಮರನಂತೆ ಬರಿ ಮನೆಗೆ ನಡೆತಂದು
ಎರವಾದರಂತೆ ಸುತ್ರನೆ ಸುಯ್ದು ಮಿಗೆ ನೊಂದು
ಅರುವೆಗಪ್ಪಡವುಟ್ಟು ಪೆಂಡತಿ ಯಿರಲ್ಕಂಡು
ಮರುಗಿ ಮುದವಳಿದು ಮನದಲ್ಲಿ ಧಾವತಿಗೊಂಡು
ಜೀವನೋಪಾಯವಂದಂದಿಗೇ ಸಾಲದಿರೆ
ಆವಾವ ತೆರದೊಳುಂ ಮನೆವಾಳ್ತೆಗಿಲ್ಲದಿರೆ
ಏನ ಹೇಳಲಿ ಬಹಳವಾದವು ಸುತರ್ಸುತೆ
ತನಗೆಯುಂ ಸತಿಸುತಾದಿಗಳಿಗಂ ಚಿಂತಿಸುತೆ
ಆರಂಬದೊಳ್ ನೋಡೆ ಅಲ್ಲಿಯಾಗದೆ ಮರುಗಿ
ದೂರಿಸುತೆ ವ್ಯವಹಾರದಿಂದೆ ತಿಟ್ಟನೆ ತಿರುಗಿ
ಸೇವಕಾ ವೃತ್ತಿಯುಂ ಮಾಡಲ್ಕನಂದಂದು
ಆವಾವ ದುಃಸ್ಥಿತಿಗೆ ಲಜ್ಜಿಸದೆ ವೈಸಂದು
ಪತಿಯಪ್ಪ ನಿನ್ನನರಿಯದೆ ನರರ್ಗಾಳಾಗಿ
ಮತಿಗೆಟ್ಟು ಧೃತಿಗುಂದಿ ಮರ್ತ್ಯರ್ಗೆ ಆಳಾಗಿ
ನಡುವಿರುಳ್ಪೋಗೆ ನಾಲ್ನಾಲ್ಗಾವುದಂ ಪೋಗಿ
ಎಡವುತಂ ತಾಗುತಂ ಲಘುವಾಗಿ ಮರುಳಾಗಿ
ಅಲ್ಲಿಯುಂ ಪಡೆಯದೆ ಮರುಗಿ ಕೊಕ್ಕುಳ್ಕುದಿದು
ಬಲ್ಲಂತೆ ತಿರುಗಿ ನೊಡುವೆನೆಂದು ಬಸವಳಿದು

ಎಂಟು ಗೇಣಾದ್ದವಂ ಗೇಣಾದ್ದದೊಳ್ಕಿಲಿಸಿ
ಎಂಟು ಮಡಿ ಕಾರ್ಪಣ್ಯಮಂ ಮುಖದೊಳಳವಡಿಸಿ
ನಿಂದವರ್ಗಳಂ ಬೇಡಿ ನೆರೆದವರ್ಗಳಂ ಬೇಡಿ
ಬಂದವರ್ಗಳಂ ಬೇಡಿ ಬಲ್ಲವರ್ಗಳಂ ಬೇಡಿ
ತಾನುಳಿಯಲುಳಿದರೆಲ್ಲರನಾವಗಂ ಬೇಡಿ
ಏನೆಂಬೆನೆಲ್ಲಿಯುಂ ಪಡೆಯದೆ ಪೊಗಂ ಬಾಡಿ
ಕಳವಿನೊಳ್ಬಳಿಸಂದು ತಿರುಗಿ ತಳವೆಳಗಾಗಿ
ಅಳವಳಿಯುತ್ತಲ್ಲಿಯುಂ ಪಡೆಯದಾತುರನಾಗಿ
ಇಂತು ಮನೆವಾಳ್ತಿಗಂ ಕುದಿವ ಹರೆಯದಿ ದೇವ
ಎಂತುಮುಂ ನಿನ್ನಲೇಳ್ದಿರಗೆ ನಾಂ ಎಲೆ ದೇವ
ಎರಗದಂತಿರುತಮಿರೆ ಮುಪ್ಪು ಬಂದಡಸಲ್ಕೆ

ತೆರೆ ಪರಿದು ಕಾಯಮುಂ ಪರ್ಬಲನುವಾಗಲ್ಕೆ
ಅದನೇನನೆಂದಪೇಂ ಪೇಸಿಕೆಯ ಪಸರಮಂ
ಅದನೆಂತು ಬಣ್ಣಿಪೇಂ ದುರ್ಭಾವ ವಿಸರಮಂ
ತೆರೆ ನೆಗೆಯೆ ಯಮಪುರದ ಸೋಪಾನವೆಂಬಂತೆ
ನರ ಉಬ್ಬಿ ಮೆಯ್ಯೊಳಗೆ ಬೀಳಲ್ವರಿಯುತಂತಂತೆ
ಬಾಗೆ ಬೆಂಪೋಗೆ ಪಲ್ತೊಲಗೆ ತಲೆಯುಂತಲ್ಲಿ
ತೂಗೆ ನಮ್ರಯ್ಗೆ ಕೀವಿ ನೀಗೆ ಕೇಳ್ವುದನಲ್ಲಿ
ತೋಳತೊವಲುಗಳೇಳ್ದು ನೀಳದಿಂ ಜೋಲುತಿರೆ
ಜಾಳಿಸುತೆ ಕಾಲುಡುಗಿ ಕೋಲೂರಿ ನಿಲ್ಲುತಿರೆ
ಕೆಮ್ಮಿ ಗುಹೆಗಟ್ಟೆ ಘಲ್ಲಿಸಿ ಕುಸುರಿ ಕುಕ್ಕುರಿಸಿ
ಕುಮ್ಮಿ ಕುಕ್ಕೆಯೊಳಳ್ದು ನೆರೆ ಮುದುಡಿ ಹೊಡಕರಿಸಿ
ಕಿವಿಯೊಳಂ ಕಣ್ಣೊಳಂ ಬಾಯೊಳಂ ಘ್ರಾಣದೊಳು
ತವೆ ಸುರಿವ ಶ್ಲೇಷ್ಮದಿಂ ನಾಂದು ನಿತ್ರಾಣದೊಳು
ಪಜ್ಜೆ ಪಜ್ಜೆಗೆ ಮುದುಡಿ ಬೀಳ್ದು ಮೂಗೂರುತಂ
ಲಜ್ಜೆ ನಾಚಿಕೆಯೆಂಬುದನೆಲ್ಲವ ನೀಗುತಂ
ಬೈಯ್ದೊಡಂ ಕೇಳದೆಡಹಿದೊಡಂ ಕಾಣದಿರೆ
ಐಯ್ದು ಸರ್ವೇಂದ್ರಿಯಂ ಚೇತರಿಸಲಾರದಿರೆ

ಇದ್ದಲ್ಲಿ ನಿಮ್ಮುಮಂ ನೆನೆಯೆ ತೆರಹಿಲ್ಲಿಲ್ಲ
ನಿದ್ರೆಯಿಂದರ್ಧಾಯು ತೀರುತ್ತಮಿರಲಲ್ಲಿ

ಪಿಡಿವ ಪುಲಿಫಣಿಗಳಿಂ ಅತ್ಯಂತ ಕಂಪಿಸುತೆ
ನಡುವೆ ರೋಗಂಗಳೊಡಗಲು ಸತ್ತು ಪುಟ್ಟುತೆ
ಇರ್ಪಲ್ಲಿ ನಿಮ್ಮುವಂ ನೆನೆಯಲುಂಟೇ ದೇವ
ಸರ್ಪಭೂಷಣ ನಿನ್ನನರಿಯಲುಂಟೇ ದೇವ
ನೀನೆತ್ತ ನಾನೆತ್ತ ಸಂಸಾರದಿರಪೆತ್ತ
ನೀನೆಂದರಿವ ಶಿವಜ್ಞಾನಕ್ಕೆ ತೆರಪೆತ್ತ
ಮಾಯೆಯೊಳಗಿರ್ಪರಾರ್ನಿನ್ನನರ್ಚಿಸುವರಾ
ಕಾಯದಿಚ್ಛೆಗೆ ನಡೆದು ನರಕದೊಳು ಬೀಳ್ವರಾ
ಬೇಡದೆತ್ತಣ ಮಾತು ಕರುಣಿಸಾ ಶಂಕರಾ
ನೋಡಿ ಕೈವಿಡಿದು ನಿನ್ನುವನೆಸಿಸು ಶಂಕರಾ
ಆವ ತೆರದಿಂ ನಿನ್ನ ನೆನೆವ ಪ್ರೊತ್ತಂ ಕಾಣೆ
ನಾವುದುಂ ಗತಿಯಿಲ್ಲ ಪ್ರೊರ್ದಿದೇಂ ನಿನ್ನುವನೆ
ಕೇಳಯ್ಯ ಸಂಸಾರದಿರವು ಅತಿ ಭೀಕರಂ
ಕೇಳ್ವೈ ಮಹಾದೇವಾ ಮಾಯದೋಷಾಕರಂ

ಇಂತು ಮುಪ್ಪಿನೊಳಿರಲು ಯಮಕಿಂಕರರ್ಬರಲು
ಸಂತತಂ ಯಮನವರ ಭಯದಿ ನಡುಗುತ್ತಿರಲು
ಮುಪ್ಪು ಮೀರುತ್ತಾಯು ತೀರುತ್ತಮಿರಲಲ್ಲಿ
ಒಪ್ಪವಳಿಯುತ್ತೆ ಧರಣಿಗೆ ಬೀಳ್ದು ಕೆಡುವಲ್ಲಿ
ಮೇಲೆ ಪೇರ್ಗೂರಿಕ್ಕಿ ನುಡಿವ ನಾಲಿಗೆ ಬೀಳೆ
ಮೇಲೆಸುರ್ಸೇದುವಾಗಳ್ಪ್ರಾಣಮುರಿಯಾಳೆ
ನೆಲದೊಳಿಕ್ಕಿದ ಬಳಿಕ ನೆಂಟರೆಲ್ಲರ್ನೆರದು
ಕೆಲ ಬಲದೊಳಿಪ್ಪರುಂ ಬಂಧುವರ್ಗಂ ನೆರೆದು
ಅಕ್ಕಟಾ ಗುಣಿ ಮಾನಿ ಬುದ್ಧಿವಂತಂ ನೋಡ
ಅಕ್ಕಟಾ ಈತಂಗೆ ಸಾವು ಬಂದಿತು ನೋಡ
ಎನುತಮಿರುತಿರಲಲ್ಲಿ ಮರಣ ಶೂಲಿಗಳೆತ್ತಿ
ತನತನಗೆ ಮರುಗಿ ಕಣ್ಗಳ ನೀರನುಣ್ಮುತ್ತೆ
ಇರೆ ಕಾಲ ಕೈಯ್ಯಜೀವಂಗಳುಂ ಪೋಗುತಿರೆ
ಇರೆ ಮೆಲ್ಲಮೆಲ್ಲನೆಲ್ಲಂ ತಣ್ಣಗಾಗುತಿರೆ
ಮೇಲುಸುರ್ಮಿಕ್ಕೇಳೆ ನುಡಿವ ನಾಲಿಗೆ ಬೀಳೆ
ಕಾಲನವರಸುವಾಗೆ ಬಾಯೊಳ್ಸುರಿಯೆ ಲೋಳೆ

# ವಚನಶಾಸ್ತ್ರಸಾರ ಭಾಗ ೨.

## ( ವೀರಶೈವ ಸಿದ್ಧಾಂತ. )

ರಾ॥ ಸಾ॥ **ಫ. ಗು. ಹಳಕಟ್ಟಿ**ಯವರು ರಚಿಸಿದ ಈ ಹೊಸ ಗ್ರಂಥದಲ್ಲಿ ವೀರಶೈವ ಶಿವಶರಣರ ಷಟ್‌ಸ್ಥಲ ಸಿದ್ಧಾಂತದ ತತ್ವಗಳು ಸವಿಸ್ತಾರವಾಗಿ ವಚನಗಳ ಮೂಲಕವೇ ನಿರೂಪಿಸಲ್ಪಟ್ಟಿರುತ್ತವೆ

ಇದರಲ್ಲಿ ಸ್ಥಲ ವಿಭೇದಗಳು, ಏಕೋತ್ತರಶತಸ್ಥಲದ ವಿವೇಚನಗಳು, ಕರಣಹಸಿಗೆ, ಸಕೀಲಗಳು, ೩೬ ತತ್ವಗಳು, ಷಡಧ್ವಗಳು, ಸಾದಾಖ್ಯಗಳು ಮೊದಲಾದ ಮಹತ್ವದ ವಿಷಯಗಳು ವಚನಗಳ ಮೂಲಕ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿವೆ. ವೀರಶೈವ ಮತತತ್ವಗಳನ್ನು ತಿಳಿಯಲು ಇದು ಅತ್ಯಂತ ಸಹಾಯಕಾರಿಯಾದ ಗ್ರಂಥವಾಗಿದೆ.

ಪುಟಗಳ ಸಂಖ್ಯೆ ೬೩೨. **ಬೆಲೆ** ರೂ. ೪—೮—೦

ಪುಸ್ತಕ ದೊರೆಯುವ ಸ್ಥಳ:—

**ಹಿತಚಿಂತಕ ಪ್ರಿಂಟಿಂಗ ಪ್ರೆಸ್**

**ವಿಜಾಪುರ.**

೮

ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ "**ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ**" ನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೩ ] ಸಪ್ಟಂಬರ ೧೯೩೯. [ ಸಂಚಿಕೆ ೧೨

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೩] ಸಪ್ಟೆಂಬರ ೧೯೩೯ [ಸಂಚಿಕೆ ೧೨

## ಕರ್ನಾಟಕ ದೇಶವೂ, ವೀರಶೈವರೂ.

(ಲೇಖಕರು:- ಶ್ರೀ. ಬೆನಗಲ್ ರಾಮರಾವ್,
ಎಂ. ಎ. ಎಲ್ ಎಲ್ ಬಿ., ಮಲ್ಲೇಶ್ವರ, ಬೆಂಗಳೂರು.)

ಕರ್ನಾಟಕ ದೇಶದ ಜೀವಾಳವೆಂದರೆ ವೀರಶೈವರು; ಪ್ರಕೃತದಲ್ಲಿ ಕೇವಲ ಹೀನಾವಸ್ಥೆಗೆ ಇಳಿದಿರುವ ನಮ್ಮ ಕನ್ನಡನಾಡಿನ ಪುನರುದ್ಧಾರವಾಗಬೇಕಾದರೆ ಅವರಿಂದಲೇ ಆಗಬೇಕು---ಎಂಬ ಒಂದು ಭಾವನೆಯು ಹಲವು ವರ್ಷಗಳಿಂದ ನನ್ನ ಮನಸ್ಸಿನಲ್ಲಿ ಬಲವಾಗಿ ಬೇರೂರಿ ನಿಂತಿದೆ. ವೀರಶೈವರ ವಿಷಯದಲ್ಲಿ ನನಗೆ ಮೊದಲಿನಿಂದಲೂ ತುಂಬಾ ಗೌರವಾದರಗಳಿರುವುವೆಂಬುದೇನೋ ನಿಜ; ಆದರೆ ನನ್ನಲ್ಲಿ ರೂಢಮೂಲವಾಗಿರುವ ಈ ಭಾವನೆಯು ಬಲವಾದ ಕಾರಣಗಳಿಲ್ಲದೆ ಬರೀ ಒಂದು ಪಕ್ಷಪಾತ ಬುದ್ಧಿಯಿಂದ ಉಂಟಾದುದಲ್ಲ. ಲಿಂಗಾಯತರಿಂದ ಈ ಹಿಂದೆ ನಮ್ಮ ಮಾತೃಭೂಮಿಗೆ ಬಹು ಮುಖ್ಯವಾದ, ಅತ್ಯಧಿಕವಾದ ಉಪಕಾರವಾಗಿದೆ; ಮತ್ತು ಈ ಪಂಗಡದವರಲ್ಲಿ ತಕ್ಕಂತೆ, ವಿಸ್ತಾರವಾದ ಪ್ರಮಾಣದಲ್ಲಿ ಜಾಗ್ರತಿಯುಂಟಾದರೆ, ಈ ಮುಂದಾದರೂ ಅವರಿಂದ ಅಮೋಘವಾದ ಸೇವೆಯು ನಮ್ಮ ನಾಡಿಗೆ ಲಭಿಸುವುದೆಂದು ನಂಬಿರುವೆನು.

ವೀರಶೈವ ಧರ್ಮವು ಕ್ರಿ. ಶ. ೧೨ನೆಯ ಶತಮಾನದಲ್ಲಿ ನೂತನವಾಗಿ ಹುಟ್ಟಿತೆಂಬ ಒಂದು ತಪ್ಪು ಅಭಿಪ್ರಾಯವು ಈ ಹೊತ್ತಿಗೂ ಅನೇಕರಲ್ಲಿ ನೆಲಸಿರುವುದು ಕಂಡುಬರುತ್ತದೆ. ಆದರೆ ಈ ವಾದಕ್ಕೆ ಸ್ವಲ್ಪವೂ ಆಧಾರವಿಲ್ಲ. ಇದು ಬೌದ್ಧ, ಜೈನಧರ್ಮಗಳಂತೆ ವೇದವಿರುದ್ಧವಾದ

ವೇದಬಾಹಿರವಾದ, ಮತವೆಂಬ ಕುಕಲ್ಪನೆಯೂ ಕೆಲಕೆಲವರಲ್ಲಿದೆ. ಇದಂತೂ ಕೇವಲ ಅಜ್ಞಾನದ್ಯೋತಕವಾದ ಭಾವನೆಯೆಂಬುದು ಆ ಧರ್ಮದ ತತ್ವಗಳನ್ನು ಅಲ್ಪಸ್ವಲ್ಪವಾಗಿ ಬಲ್ಲವರಿಗೆ ಕೂಡ ಸಿರ್ವಿವಾದವಾಗಿ ತಿಳಿದ ವಿಷಯ. ಜೈನ ಬೌದ್ಧ ಧರ್ಮಗಳು ಕೂಡ ನಮ್ಮ ಭಾರತ ವರ್ಷದಲ್ಲಿ ಹುಟ್ಟಿದ ಸನಾತನಧರ್ಮಗಳೇ ಆದರೂ, ಅವು ನಮ್ಮ ವೇದ ಗಳ ಅಪೌರುಷೇಯುತೆಯನ್ನೂ, ಅವು ಈಶ್ವರಪ್ರಣೀತಗಳೆಂಬುದನ್ನೂ ಒಪ್ಪುವುದಿಲ್ಲವಾಗಿ ವೈದಿಕ ಧರ್ಮಾನುಯಾಯಿಗಳು ಅವೆರಡನ್ನೂ ವೇದ ಬಾಹ್ಯಗಳಾದ ನಾಸ್ತಿಕಧರ್ಮಗಳೆಂದು ತಿಳಿದಿದ್ದಾರೆ.+ ಅದು ಹೇಗಾದರೂ ಆಗಲಿ; ವೀರಶೈವ ಧರ್ಮವಾದರೋ, ಈ ಸಂಗಡಕ್ಕೆ ಸೇರಿದುದಲ್ಲ. ಅದು ಅನಾದಿಸಿದ್ಧವಾದುದು; ವೇದಾಗಮುಗಳ ಆಧಾರದ ಮೇಲೆಯೆ ನಿಂತಿರುವುದು; ವೇದಗಳಿಂದಲೇ ಪ್ರಚೋದಿತವಾದುದು; ಉಪನಿಷಚ್ಛ್ರುತಿಪ್ರತಿಪಾದಿತವಾದುದು ಎಂಬ ಅಂಶವು ಘನವಾದ ಪ್ರಾಚೀನ ಮತ್ತು ಅರ್ವಾಚೀನ ಗ್ರಂಥಗಳಿಂದ ತಿಳಿದುಬರುತ್ತಿದೆ.

ಯಾವ ಮಹಾವ್ಯಕ್ತಿಯ ಜಯಂತಿಯ ಸಂಬಂಧದಿಂದ 'ಶರಣಸಾಹಿತ್ಯ'ದ ವಿಶೇಷ ಸಂಚಿಕೆಯನ್ನು ಹೊರಡಿಸಲಾಗಿದೆಯೋ, ಆ ಪುಣ್ಯಮೂರ್ತಿಯಾದ ಬಸವೇಶ್ವರನು ಕ್ರಿ. ಶ ದ ಸುಮಾರು ೧೧೬೦ ನೇ ಸಂವತ್ಸರದಲ್ಲಿ ಬಿಜಾಪುರ ಜಿಲ್ಲೆಯಲ್ಲಿರುವ ಬಾಗೇವಾಡಿಯೆಂಬ ಊರಿನಲ್ಲಿ ಪ್ರಸಿದ್ಧವಾದ ಒಂದು ಆರಾಧ್ಯ ಬ್ರಾಹ್ಮಣಕುಟುಂಬದಲ್ಲಿ ಹುಟ್ಟಿದನು. ಈತನು ಅಚ್ಚಕನ್ನಡಿಗನು; ಕನ್ನಡನಾಡಿನಲ್ಲಿ ಹುಟ್ಟಿ ಕನ್ನಡವೇ ತಾಯ್ನುಡಿಯಾಗಿ, ಕರ್ಣಾಟಕ ದೇಶದ ಸೇವೆಯನ್ನೇ ಯಾವಜ್ಜನ್ಮವೂ ಮಾಡಿ, ಕನ್ನಡತಾಯಿಯ ಮಡಿಲಿನಲ್ಲಿಯೇ ತನ್ನ ದೇಹವನ್ನು ಇಟ್ಟು, ತನಗೆ ಜನ್ಮವಿತ್ತ ಬ್ರಾಹ್ಮಣರಲ್ಲಿ-ವಿಶೇಷತಃ ಆರಾಧ್ಯ ಬ್ರಾಹ್ಮಣರಲ್ಲಿ—ಆಗ ಪ್ರಚಾರದಲ್ಲಿದ್ದ ನಡೆನುಡಿಗಳಲ್ಲಿ, ಆಚಾರವ್ಯವಹಾರಗಳಲ್ಲಿ ತನಗೆ ಅಸಂಗತವೆಂದು ಕಂಡುಬಂದುವನ್ನು ನಿರ್ದಾಕ್ಷಿಣ್ಯವಾಗಿ ಅನುಪಯುಕ್ತವೆಂದು ಸಾರಿ; ಯುಕ್ತವೆಂದು ತೋರಿದ ಮಾರ್ಗಗಳನ್ನು ಬೋಧಿಸಿ, ನಡೆವಳಿಯಲ್ಲಿ ತಂದು; ಕರ್ಣಾಟಕದಲ್ಲಿಯೂ ನೆರೆಹೊರೆಯ ತೆಲಗು, ತಮಿಳು

---

+ ಈ ಅಭಿಪ್ರಾಯವು ಸರಿಯಾದುದೆಂದು ನನಗೆ ತೋರುವುದಿಲ್ಲ. ತಥಾಪಿ ಈ ಚರ್ಚೆಯು ಇಲ್ಲಿ ಅಪ್ರಕೃತವೆಂಬುದರಿಂದ ಈ ಕುರಿತು ಇನ್ನು ಹೆಚ್ಚಾಗಿ ಬರೆದು ಲೇಖನವನ್ನು ವಿಸ್ತಾರಗೊಳಿಸಲು ಇಷ್ಟಪಡುವುದಿಲ್ಲ.

ಮೊದಲಾದ ಪ್ರಾಂತಗಳಲ್ಲಿಯೂ ದೊಡ್ಡ ಕ್ರಾಂತಿಯನ್ನೇ ಉತ್ಪನ್ನಮಾಡಿ; ಕರ್ನಾಟಕದ ಕೀರ್ತಿಯನ್ನು ದಿಗಂತವಿಶ್ರಾಂತವನ್ನಾಗಿ ಮಾಡಿದನು. ನಮ್ಮ ತಾಯಿನಾಡಿನಲ್ಲಿ ಧಾರ್ಮಿಕ ಮತ್ತು ನೈತಿಕ ಉನ್ನತಿಗಾಗಿ ದುಡಿದ ಸರ್ವಸೃಷ್ಟಿಯಿಂದಲೂ ಅಚ್ಚಕನ್ನಡಿಗನೆಂದರೆ, ಅಂದಿನಿಂದ ಇಂದಿನವರೆಗೆ ಬಸವೇಶ್ವರನೊಬ್ಬನೇ ಆತನನ್ನು ಮೀರಿಸಿದ, ಕೊನೆಗೆ ಆತನಿಗೆ ಸರಿಸಮಾನನಾದರೂ ಆದ, ಮಹಾವಿಭೂತಿಯು ಬೇರೆ ಯಾರಾದರೂ ಇರುವನೆಂದು ನಾನು ಧೈರ್ಯವಾಗಿ ಹೇಳಲಾರೆ. ಇತರ ವೈದಿಕ ತ್ರಿಮತಸ್ಥಾಪನಾಚಾರ್ಯರುಗಳಿಂದ ಕೂಡ ಕರ್ನಾಟಕದಲ್ಲಿ ಒಂದಲ್ಲ ಒಂದುರೀತಿಯಿಂದ ಅತ್ಯುತ್ತಮವಾದ ಸೇವೆ ಸಂದಿದೆ ಮತ್ತು ಶಾಶ್ವತವಾದ ಕೀರ್ತಿಯೂ ಪ್ರಾಪ್ತವಾಗಿದೆ. ಆದರೆ ಶ್ರೀಮಚ್ಛಂಕರಾಚಾರ್ಯರು ನಂಬೂದಿರಿ (ಮಲೆಯಾಳ) ಬ್ರಾಹ್ಮಣ, ಶ್ರೀಮನ್ಮಧ್ವಾಚಾರ್ಯರು ಶಿವಳ್ಳಿ (ತುಳು) ಬ್ರಾಹ್ಮಣ ಮತ್ತು ಶ್ರೀಮದ್ರಾಮಾನುಜಾಚಾರ್ಯರು ದ್ರಾವಿಡ (ತಮಿಳು) ಬ್ರಾಹ್ಮಣಕುಲಕ್ಕೆ ಸೇರಿದವರಾದುದರಿಂದ ಇವರಾರೂ ಬಸವಣ್ಣನವರಂತೆ ಹದಿನಾರಾಣೆ ಕನ್ನಡಿಗರೆಂದು ಹೇಳಲು ಸಾಧ್ಯವಿಲ್ಲ.

ಪುಣ್ಯಭೂಮಿಯಾದ ನಮ್ಮ ಭರತಖಂಡದಲ್ಲಿ ಎರಡು ವಿಧವಾದ ಧಾರ್ಮಿಕ, ನೈತಿಕ ಪ್ರವಾಹಗಳು ಚಿರಕಾಲದಿಂದ ಹರಿಯುತ್ತ ಬಂದಿವೆ. "ಬ್ರಾಹ್ಮಣೋ ಮಮ ದೇವತಾ," "ವರ್ಣಾನಾಂ ಬ್ರಾಹ್ಮಣೋ ಗುರುಃ"— ಇತ್ಯಾದಿಯಾಗಿ ಸಾರಿ, ಚಾತುರ್ವರ್ಣ್ಯವನ್ನೂ, ಬ್ರಾಹ್ಮಣಕುಲದ ಪ್ರಧಾನ್ಯವನ್ನೂ, ಪೂರ್ವಾಚಾರಗಳನ್ನೂ ಶಾಶ್ವತವಾಗಿ ಇಟ್ಟುಕೊಳ್ಳಬೇಕೆಂದು ಪ್ರತಿಪಾದಿಸುವ ಜನರ ಪಂಗಡವೊಂದು; ಇವರನ್ನು ಪೂರ್ವಾಚಾರಶರಣರೆಂದೂ, ವೈದಿಕ (ಬ್ರಾಹ್ಮಣ) ಧರ್ಮ ಪರಿಪಾಲಕರೆಂದೂ ಕರೆಯಬಹುದು. ಇವರಲ್ಲಾದರೂ ಅಂದಿನಿಂದ ಇಂದಿನ ಪರ್ಯಂತ ಆಚಾರ ವ್ಯವಹಾರಗಳು ತಿದ್ದುಪಡಿಯಾಗದೆ ಅಚ್ಚಳಿಯದಂತೆ ನಿಂತಿವೆಯೆಂದು ನಾನು ಹೇಳಲಾರೆ! ಆದರೆ ಅವೆಲ್ಲ ಮೆಲ್ಲಮೆಲ್ಲನೆ ಕಳ್ಳತನದಿಂದೆಂಬಂತೆ ಮಂದಗತಿಯಿಂದ ಆಗಿವೆ. ಎರಡನೆಯದು; ಕಾಲಾಂತರದಲ್ಲಿ ಕಾರಣಾಂತರಗಳಿಂದ ಬಿಗಿಯಾಗಿ ಹೋಗಿರುವ ಧಾರ್ಮಿಕ ನೈತಿಕ ಆಚಾರ ವ್ಯವಹಾರಗಳಿಗೆ ವಿಸ್ತೃತವಾದ, ಉದಾರವಾದ ಅರ್ಥವಿವರಣೆಯನ್ನು ಕೊಟ್ಟು, ತಮ್ಮ ಅದ್ಭುತವಾದ ವ್ಯಕ್ತಿಪ್ರಾಬಲ್ಯದಿಂದ ಜನತೆಯಲ್ಲಿ ಕ್ರಾಂತಿಯುಂಟುಮಾಡಿ, ಆರ್ಯಧರ್ಮದಲ್ಲಿ ಸ್ವಲ್ಪ ಕಾಲದೊಳಗಾಗಿ ತುಂಬ ಸಂಸ್ಕ

ರಣಗಳನ್ನುಂಟುಮಾಡುವ ದೇಶಭಕ್ತರ ಮತ್ತು ಅವರ ಅನುಯಾಯಿಗಳ ಸಂಗಡವು. ರೋಗವು ಮಿತಿಮೀರಿಹೋದಾಗ, ತೀವ್ರವಾದ ಔಷಧವು ಬೇಕಾದಾಗ, ಜ್ವಾಲಾಮುಖಿಗಳಂತೆ ಹುಟ್ಟಿಬರುವವರಿವರು. ಇವರನ್ನು ಸಂಸ್ಕರಣವಾದಿಗಳೆಂದು ಕರೆಯಬಹುದು. ಐದು ಸಾವಿರ ವರ್ಷಗಳಿಂದ ಭಾರತವರ್ಷದ ಹಿಂದಿನ ಇತಿಹಾಸವನ್ನು ಪರಿಶೀಲಿಸಿದರೆ, ಶ್ರೀ ಕೃಷ್ಣಪರಮಾತ್ಮನಿಂದ ಹಿಡಿದು ಮಹಾತ್ಮಾ ಗಾಂಧಿಯವರ ಪರ್ಯಂತ ಹಲವೆಲ್ಲ ಮಾರ್ಗದರ್ಶಕರು ನಮ್ಮಲ್ಲಿ ಹುಟ್ಟಿ, ನಮ್ಮ ದೇಶವನ್ನು ಪ್ರಗತಿಮಾರ್ಗಕ್ಕೆ ಹಚ್ಚಿರುವರೆಂದು ಕಂಡುಬರುತ್ತಿದೆ. ಇವರಲ್ಲಿ ಶ್ರೀ ಬಸವೇಶ್ವರನೂ ಒಬ್ಬನೆಂದು ಧಾರಾಳವಾಗಿ ಹೇಳಬಹುದು. ಕಾರಣ ಪುರುಷರಾದ ಇವರೆಲ್ಲರೂ ನಮಗೆ ಪರಮಪೂಜ್ಯರು; ಚಿರಸ್ಮರಣೀಯರು.

ಬಸವೇಶ್ವರನ ಮತತತ್ವಗಳನ್ನು ವಿವರಿಸುವುದೂ, ಮಂಡಿಸುವುದೂ ಈ ಲೇಖನದ ಉದ್ದೇಶವಲ್ಲ. ಆದರೆ ಆತನ 'ವಚನ' ಗಳ ಪಠನದಿಂದ ಕಂಡುಬರುವ ಮೇರೆಗೆ ಆತನು ಬೋಧಿಸಿದ ಮತ್ತು ಮಾಡಿದ ಮಹತ್ತರವಾದ ಧಾರ್ಮಿಕ ಮತ್ತು ನೈತಿಕ ಸಂಸ್ಕರಣಗಳ* ಪ್ರಾಮುಖ್ಯತೆಯನ್ನು ಇಲ್ಲಿ ಹೇಳದೆ ಇರಲಾರೆನು. ಯಜ್ಞಯಾಗಾದಿ ಕರ್ಮಗಳು ಹಿಂಸಾತ್ಮಕವೆಂಬುದರಿಂದ ಅವನ್ನು ಅಪ್ಪಟ ಅಹಿಂಸಾವಾದಿಯಾದ ಆತನು ನಿರಾಕರಿಸಿ, ಪ್ರಾಣಿಮಾತ್ರಕ್ಕೆ ಅಭಯಪ್ರಧಾನಮಾಡಿ, ಭಕ್ತಿ ಜ್ಞಾನವೈರಾಗ್ಯ ಮಾರ್ಗಗಳಿಗೆ ಪ್ರಾಧಾನ್ಯವನ್ನು ಕೊಟ್ಟನು. ಲಿಂಗಪೂಜೆಗೆ ಸ್ತ್ರೀಪುರುಷರಾದ ಸರ್ವರೂ ಏಕಪ್ರಕಾರವಾಗಿ ಅರ್ಹರೆಂದು ಸಾರಿದನು. ಚಾತುರ್ವರ್ಣ್ಯವನ್ನು ಅಲ್ಲಗಳೆದನು. ಲಿಂಗಾಂಗಿಗಳಲ್ಲಿ ಕುಲಭೇದವಿಲ್ಲ; ಎಲ್ಲರೂ ಸಮಾನರೆಂದು ಹೇಳಿದನು. ಭಕ್ತರು ಪರಸ್ಪರ ಅನ್ನೋದಕ ಮತ್ತು ಲಗ್ನವ್ಯವಹಾರಮಾಡಲು ಬಿಡುಗಡೆ ಕೊಟ್ಟನು. ಪಂಚಸೂತಕಗಳ+ ಮತ್ತು ತೀರ್ಥಯಾತ್ರಾದಿಗಳ ಪೊಳ್ಳುತನವನ್ನು ತೋರಿಸಿಕೊಟ್ಟು ಮಾರಿ, ಮಸಣಿ, ಕನಸು, ಜ್ಯೋತಿಷಾದಿಗಳಲ್ಲಿ ವಿಶ್ವಾಸವನ್ನಿಡಬೇಡಿರೆಂದನು. ವೇದಶಾಸ್ತ್ರಾಗಮ ಪುರಾಣಗಳಲ್ಲಿ ಕೂಡ

---

* ಇದಕ್ಕೆ ಆಧಾರವಾಗಿರುವ ವಚನಗಳನ್ನು ಲೇಖನ ವಿಸ್ತಾರ ಭಯದಿಂದ ಇಲ್ಲಿ ಉದ್ಧರಿಸಿಲ್ಲ.

+ ಜನನ, ಜಾತಿ, ಪ್ರೇತ, ರಜೋದರ್ಶನ, ಉಚ್ಛಿಷ್ಟವೆಂಬುವು ಇತರ ಸನಾತನಧರ್ಮೀಯರಲ್ಲಿ ವಾಡಿಕೆಯಾಗಿರುವ ಪಂಚ ಸೂತಕಗಳು.

ಅಂಧಶ್ರದ್ಧೆಯನ್ನು ಹೋಗಗೊಳಿಸಲು ಹವಣಿಸಿದನು. ಕಾಯಕಗಳಿಗೆ ತುಂಬ ಮಹತ್ವವನ್ನು ಕೊಟ್ಟನು. ಕಷ್ಟಮಾಡಿ ಸಂಪಾದಿಸಬೇಕಲ್ಲದೆ ಯಾಚನೆಯಿಂದ ಜೀವಿಸಬಾರದೆಂದನು. ಕಳವು, ಜೀವಹಿಂಸೆ, ಸಿಟ್ಟು, ದುರಾಶೆ, ವ್ಯಭಿಚಾರ, ಲೋಭ, ಕಪಟ, ಅಹಂಕಾರ ಇತ್ಯಾದಿಗಳನ್ನು ತ್ಯಜಿಸಿರೆಂದು ಬೋಧಿಸಿದನು. ಸತ್ಯ, ಸಮತಾಭಾವ, ಸಮಾಧಾನ, ಜ್ಞಾನ, ಸೈರಣೆ, ಔದಾರ್ಯ, ದೈನ್ಯಭಾವ ಹಾಗೂ ಸ್ತ್ರೀಕುಲದ ಮತ್ತು ಶರಣರ ವಿಷಯದಲ್ಲಿ ಗೌರವಗಳನ್ನಿಟ್ಟುಕೊಂಡಿದ್ದು, ನಿಷ್ಕಾಮಕರ್ಮದಿಂದ ಸಂಸಾರವನ್ನು ಗೆಲ್ಲಬೇಕೆಂದನು. ಸ್ವರ್ಗದ ಎಲ್ಲ ದಾರಿಗಳನ್ನೂ ಎಲ್ಲರಿಗೂ ತೆರೆದಿಟ್ಟನು. ಒಟ್ಟಿನಲ್ಲಿ ಹೇಳುವುದಾದರೆ, ಪರಾವಲಂಬನ,, ಪುಕ್ಕತನ, ಮನಸ್ಸಿನ ಚಾಂಚಲ್ಯಗಳನ್ನು ಬಿಟ್ಟು, ನಿಷ್ಠಾವಂತರಾಗಿಯೂ, ನಿರ್ಭೀತರಾಗಿಯೂ, ಸತ್ಯಾಗ್ರಹಿಗಳಾಗಿಯೂ ಬಾಳಿರೆಂದು ಘಂಟಾಘೋಷವಾಗಿ ಸಾರಿದನು. ಭಗವಾನ್ ಬುದ್ಧದೇವನು ಸುಮಾರು ಎರಡೂವರೆಸಾವಿರ ವರ್ಷಗಳಿಗೆ ಹಿಂದೆ ಯಾವ ಸುಧಾರಿತ ಆರ್ಯಧರ್ಮವನ್ನು ಉಪದೇಶಿಸಿ ಪ್ರಪಂಚದಲ್ಲೆಲ್ಲ ನೂತನವಾದ ತನ್ನ ಉಪದೇಶದ ಮೂಲಕ ಒಂದು ಚೈತನ್ಯವನ್ನುಂಟುಮಾಡಿದನೋ ಅದೇ ವಿಧವಾದ ಬೆಳಕು, ಸ್ಫೂರ್ತಿ, ಧೀರೋದಾತ್ತ ಸ್ವಭಾವಗಳು ಜನತೆಯಲ್ಲಿ ಹಬ್ಬುವಂತೆ ಮಾಡಿ; ಒಂದು ವಿಧವಾದ ನಿರಾಶೆಗೆ, ಉದಾಸೀನತೆಗೆ, ಗುರಿಯಾಗಿದ್ದ ಸನಾತನಾರ್ಯಧರ್ಮದಲ್ಲಿ, ಮಹಾಜನಸಮುದಾಯದಲ್ಲಿ ಹೊಸಜೀವಕಳೆಯನ್ನೂ ತಡೆಬಿಡುಗಳಿಲ್ಲದೆ ಉಕ್ಕಿಬರುವ ವೀರ್ಯೋತ್ಸಾಹಗಳನ್ನೂ ಬಸವೇಶ್ವರನು ತುಂಬಿದನು. ಮತ್ತು ಅನ್ಯಧರ್ಮ ಪ್ರಾಬಲ್ಯದಿಂದ ದೀನಸ್ಥಿತಿಗೆ ಇಳಿದಿದ್ದ ತನ್ನ ದೇಶಬಂಧುಗಳನ್ನು ದೊಡ್ಡ ಪ್ರಮಾಣದಲ್ಲಿ ತನ್ನ ಬೋಧೆಗೆ ಒಲಿಸಿಕೊಂಡು, ಪುರುಷಸಿಂಹರನ್ನಾಗಿ ಮಾರ್ಪಡಿಸಿದನು. ಇಂತಹ ಈ ಪುರುಷಶ್ರೇಷ್ಠನನ್ನು ವೀರಶೈವರು ನಂದಿಕೇಶ್ವರನ ಅವತಾರವೆಂದು ತಿಳಿದು ಪೂಜಿಸುವುದೂ ಆತನ ಜಯಂತಿಯನ್ನು ಆಚರಿಸುತ್ತಿರುವುದೂ ಒಂದು ವಿಶೇಷವಲ್ಲ. ಈ ಜಯಂತಿಯನ್ನು ಜಾತಿ, ಕುಲ, ಗೋತ್ರ ಭೇದ ನೋಡದೆ, ಸಮಸ್ತ ಕನ್ನಡಿಗರೂ ಉತ್ಸಾಹದಿಂದ ನಡೆಯಿಸಬೇಕಾದುದೇ ಯುಕ್ತವೆಂದು ನನಗೆ ತೋರುತ್ತದೆ.

ಶ್ರೀ ಬಸವೇಶ್ವರನ ಉಪದೇಶದ ಪರಿಣಾಮವಾಗಿ ದಕ್ಷಿಣಹಿಂದೂಸ್ಥಾನದಲ್ಲಿ–ಮುಖ್ಯವಾಗಿ ಕರ್ಣಾಟಕ ದೇಶದಲ್ಲೆಲ್ಲ–ದೊಡ್ಡ ಕ್ರಾಂತಿಯುಂಟಾ

ಯಿತು. ಮಹಾಜನರು ಲಕ್ಷ್ಯಗಟ್ಟಲೆಯಾಗಿ ಈ ಹೊಸ ಮತವನ್ನು ಅಂಗೀಕರಿಸಿದರು. ಜನತೆಯಲ್ಲಿ ಹಿಂದೂ ವೈದಿಕ ಧರ್ಮದ ಪ್ರಚಾರವಾಗಬೇಕೆಂಬ ಹಂಬಲವು ತೀವ್ರವಾಯಿತು. ಈ ಹೊತ್ತಿನವರೆಗೂ ಆ ಮಹೋತ್ಸಾಹ ಜ್ಯೋತಿಯನ್ನು ಮಸುಳಿಸದಂತೆ ಬೆಳಗಿಸುತ್ತ ಧೈರ್ಯದಿಂದ ಮುಂದುವರಿದು ನುಗ್ಗುತ್ತಲಿರುವ, ಬೇಕಾದರೆ ಪ್ರಾಣವನ್ನೇ ಧರ್ಮಕ್ಕಾಗಿ ಅರ್ಪಿಸಲು ಸಿದ್ಧವಾಗಿರುವ, ಚಿರಯೌವನದಿಂದ ಮೆರೆಯುತ್ತಿರುವ ವೈದಿಕ ಧರ್ಮದ ಶಾಖೆಗಳೆಂದರೆ, ಉತ್ತರ ಭಾರತದಲ್ಲಿ ಸಿಖ್ ಮತ್ತು ಆರ್ಯ ಸಮಾಜ ಮತ್ತು ದಕ್ಷಿಣ ಹಿಂದೂಸ್ಥಾನದಲ್ಲಿ ವೀರಶೈವಮತವೆಂಬ ಈ ಮೂರು ಪಂಥಗಳೇ ಸರಿಯೆಂದು ನನಗೆ ತೋರುತ್ತಿದೆ; ಮತ್ತು ಆ 'ವೀರ' ವೆಂಬ ಅದ್ಭುತವಾದ ವಿಶೇಷಣದಲ್ಲಿ, ಕೇವಲ 'ಅನನ್ಯ' ವೆಂಬಿಷ್ಟೇ ಅಲ್ಲದೆ 'ಅಜಿಂಕ್ಯಪರಾಕ್ರಮಶಾಲಿಯಾದ' ಎಂಬ ಒಂದು ವಿಶೇಷಾರ್ಥವೂ ಅಡಗಿರಬಹುದೇ? ಎಂದೆನ್ನಿಸುತ್ತಿದೆ.

ಬಸವೇಶ್ವರನು ಮಾಡಿದ ಸಂಸ್ಕರಣಪ್ರಚುರವಾದ ಉಪದೇಶವು ಈ ಹೊತ್ತಿಗೂ ಚಾಚೂ ತಪ್ಪದೆ ಆತನ ಅನುಯಾಯಿಗಳಿಂದ ಕಾರ್ಯತಃ ಅನುಸರಿಸಲ್ಪಡುತ್ತಿದೆಯೇ? ಉಂಬ ಕೊಂಬ ವಿಚಾರದಲ್ಲಿ, ವಿಪ್ಲಬಾಂಧವ್ಯದ ಮತ್ತು ಇತರ ವಿಚಾರಗಳಲ್ಲಿ ಅವರು ಈಗಲೂ, ವೀರಶೈವರ ಮಟ್ಟಿಗಾದರೂ, ಎಲ್ಲರೂ ಸಮಾನರೆಂಬಂತೆ ವ್ಯವಹರಿಸುತ್ತಿರುವರೇ? ಎಂದು ಯಾರಾದರೂ ನನ್ನನ್ನು ಕೇಳಬಹುದು. ವೀರಶೈವನಲ್ಲದ ನನ್ನಂಥ ಲೇಖಕನು ಇದಕ್ಕೆ ನಿಶ್ಚಿತವಾದ ಪ್ರಮಾಣವನ್ನು, ಸಮಾಧಾನವನ್ನು ಹೇಳಲು ಸಾಧ್ಯವಿಲ್ಲ. ಆ ಕುಲದವರಲ್ಲಿಯೇ ಅಹುದೆನ್ನುವವರೂ ಇಲ್ಲವೆನ್ನುವವರೂ ಇರುವರಾಗಿ ವಿಚಾರಿಸಿದುದರಲ್ಲಿ ನನಗೆ ತಿಳಿದುಬಂದಿದೆ. ಅದು ಹೇಗಾದರೂ ಇರಲಿ; ಬಸವೇಶ್ವರನ ಅನುಯಾಯಿಗಳಲ್ಲಿ ಸಮಸ್ತ ಕಾಯಕಗಳ ಜನರೂ ಶಾಕಾಹಾರಿಗಳಾಗಿರುವುದರಿಂದ, ಯಾರೂ ಮಾಂಸಾಹಾರಿಗಳಲ್ಲವಾದುದರಿಂದ, ಚಾತುರ್ವರ್ಣ್ಯಕ್ಕೊಳಗಾದ ವೈದಿಕ ಧರ್ಮದಲ್ಲಿರುವಷ್ಟು ತೀವ್ರವಾದ ಭೇದವು ವೀರಶೈವರಲ್ಲಿರಬೇಕಾದ ಕಾರಣವೇನೂ ನನಗೆ ತೋರುವುದಿಲ್ಲ. ಹೀಗಾದುದರಿಂದ ವೀರಶೈವ ಸಮಾಜವು ಇತರರಿಗಿಂತ ಹೆಚ್ಚು ಬಿಗಿಯಾಗಿಯೂ ಸುಸಂಘಟಿತವಾಗಿಯೂ ಸರ್ವರೂ ಸಮಾನರೆಂಬ ಭಾವನೆಯಿಂದ ಕೂಡಿರಲು ಹೆಚ್ಚು ಸೌಕರ್ಯಗಳುಳ್ಳುದೂ ಆಗಿರುವುದೆಂದು ಎಣಿಸಿದರೆ, ಅಥವಾ ಉಳ್ಳುದಾಗಿರಬೇ

ಕೆಂದು ನಿರೀಕ್ಷಿಸಿದರೆ, ಅದು ಕೇವಲ ಆಕಾಶಪುರಾಣವಾಗಲಾರದೆಂದು ನಾನು ಅಭಿಪ್ರಾಯಪಡುವೆನು.

ಈ ವೀರಶೈವ ಕುಲದವರ ಸಂಖ್ಯೆಯು ಹಿಂದೂಸ್ಥಾನದಲ್ಲೆಲ್ಲ ಒಟ್ಟು ೪೦ ಲಕ್ಷವಿರುವುದೆಂದೂ, ಬ್ರಿಟಿಷ್ ಕರ್ಣಾಟಕದಲ್ಲಿ ೧೬ ಲಕ್ಷ, ದೇಶೀಯ ಸಂಸ್ಥಾನಗಳಲ್ಲಿ ೧೪ ಲಕ್ಷ ಸೇರಿ ಒಟ್ಟು ನಮ್ಮೀ ಕರ್ಣಾಟಕದಲ್ಲಿಯೇ ೩೦ ಲಕ್ಷವಿರುವುದೆಂದೂ ತಿಳಿದುಬರುತ್ತಿದೆ. ಈ ಜನರು ಕರ್ಣಾಟಕದ ಹೊರಗಿದ್ದರೂ ಒಳಗಿದ್ದರೂ ಇವರಿಗೆ ಮನೆಯು ಮಟ್ಟಿಗಾದರೂ ತಾಯ್ನುಡಿ ಕನ್ನಡವಾಗಿರುವುದರಿಂದ, ಇವರೆಲ್ಲ ಎಲ್ಲಿದ್ದರೂ ಕನ್ನಡಿಗರೆಂದೇ ನಾವು ತಿಳಿಯಲು ಅಡ್ಡಿಯಿಲ್ಲ. ನಮ್ಮ ಕರ್ಣಾಟಕಕ್ಕಂತೂ, ಇವರು ಬೆನ್ನುಹುರಿಯಂತೆ ಇರುವರು. ಪೂರ್ವದಲ್ಲಿ ಇವರಿಂದ ಕರ್ಣಾಟಕ ದೇಶಕ್ಕೆ ಅಪಾರವಾದ ಸೇವೆ ಸಂದಿದೆ. ಹಿಂದೆ ಇವರು ಚಿಕ್ಕ ದೊಡ್ಡ ರಾಜ್ಯಗಳನ್ನು ಸ್ಥಾಪಿಸಿ ಆಳಿದ್ದಾರೆ. ಕನ್ನಡ, ಸಂಸ್ಕೃತ, ಆಂಧ್ರ ಮುಂತಾದ ಭಾಷೆಗಳಲ್ಲಿ ಅಮೂಲ್ಯವಾದ ದೊಡ್ಡ ದೊಡ್ಡ ಶಾಸ್ತ್ರ ಹಾಗೂ ಕಾವ್ಯಗ್ರಂಥಗಳನ್ನು ಬರೆದೂ, ಬರೆಯಿಸಿಯೂ ವಾಙ್ಮಯಾಭಿವೃದ್ಧಿಗೆ ಸಹಾಯಮಾಡಿದ್ದಾರೆ. ಈ ಜನರಿಂದ ಬರೆಯಲ್ಪಟ್ಟ ಉಪನಿಷತ್ಸಾರವೆಂಬಂತಿರುವ "ವಚನಶಾಸ್ತ್ರ" ಸಾಹಿತ್ಯಕ್ಕೆ ಸಮಾನವಾದ, ಸಾಟಿಯೆನ್ನಿಸತಕ್ಕದಾದ ಗ್ರಂಥಸಮುದಾಯವು ಬೇರೆ ಯಾವ ಭಾಷೆಯಲ್ಲಾದರೂ ಇರುವುದೇ? ಎಂಬ ಬಗ್ಗೆ ಸಂದೇಹಿಸಬೇಕಾಗಿದೆ. ಅದ್ಭುತವಾದ ತಮ್ಮ ಪಾಂಡಿತ್ಯದಿಂದ ಪ್ರಪಂಚವನ್ನೇ ಬೆರಗು ಮಾಡಿದ್ದಾರೆ. ವಾಣಿಜ್ಯ ಹಾಗೂ ಇತರ ಕಾಯಕ, ಕಸಬು, ಕೈಗಾರಿಕೆಗಳನ್ನು ದೊಡ್ಡ ಪ್ರಮಾಣದಲ್ಲಿ ನಡೆಯಿಸಿ ಕರ್ಣಾಟಕದೇಶದ ಸಂಪದಭಿವೃದ್ಧಿಗೆ ಬಹಳವಾಗಿ ಸಹಾಯ ಮಾಡಿದ್ದಾರೆ. ಯಾವುದಕ್ಕಿಂತಲೂ ಅಧಿಕವಾಗಿ, ಕರ್ಣಾಟಕದ ಧನಲಕ್ಷ್ಮಿಯು ಇವರಲ್ಲಿ ಚಿರವಾಸಿನಿಯಾಗಿದ್ದಾಳೆ ಈ ಮೇರೆಗೆ ಜನಬಲ, ಧನಬಲ, ಬುದ್ಧಿಬಲ, ಸಂಘಶಕ್ತಿ, ಒಟ್ಟಾಗಿ ಹೇಳುವುದಾದರೆ, ದೊಡ್ಡ ಕಾರ್ಯವನ್ನು ದೊಡ್ಡ ಪ್ರಮಾಣದಲ್ಲಿ ಸಫಲವಾಗಿ ನೆರವೇರಿಸಿಕೊಳ್ಳಲು ಬೇಕಾಗತಕ್ಕ ಸಮಸ್ತ ವಿಧವಾದ ಬಲವೂ ಈ ಕುಲದವರಲ್ಲಿ ನಿಗೂಢವಾಗಿಯಾದರೂ ನೆಲಸಿಕೊಂಡಿದೆ.

ಇಷ್ಟಿದ್ದೂ ಕೂಡ, ಪೂರ್ವಸಂಸ್ಕೃತಿಯು ಹಿಂದೆ ಬಿದ್ದು, ನೂತನ ಪಾಶ್ಚಾತ್ಯ ಸಂಸ್ಕೃತಿಯೂ ಭಾಷೆಯೂ ಈ ದೇಶದಲ್ಲಿ ಪ್ರಬಲವಾಗಲು

ಮೊದಲಾದ ಕಾಲದಲ್ಲಿ ಈ ಜನರು (ಯಾವ ಕಾರಣದಿಂದಾದರೇನು?) ಹಲವು ದಿಕ್ಕುಗಳಿಂದಲೂ ಅವನತಿಗೆ ಬಂದರು. ಇವರ ರಾಜ್ಯಗಳೆಲ್ಲ ಮಣ್ಣುಪಾಲಾದುವು; ಮತ್ತು ಮಾರ್ಪುಗೊಂಡ ಪರಿಸ್ಥಿತಿಯನ್ನು ಇದಿರಿಸಿ ನಿಲ್ಲುವ ಶಕ್ತಿಯು ಇವರಲ್ಲಿ ಇಲ್ಲದೆ ಹೋಯಿತು. ಕರ್ನಾಟಕ ದೇಶವು ತುಂಡುತುಂಡಾಗಿ ಹಂಚಿ ಹೋಗಿ, ಮದ್ರಾಸು, ಬೊಂಬಾಯಿಗಳ ಪ್ರಾಬಲ್ಯವು ಹೆಚ್ಚುತ್ತ ಹೋಗಿ, ಲಿಂಗವಂತರ ಸ್ಥಾನವನ್ನು ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ ಸ್ವದೇಶೀಯರೂ, ವಿದೇಶೀಯರೂ ಆದ, ಕರ್ನಾಟಕಸ್ಥರಲ್ಲದ, ಇತರ ಪಂಗಡಗಳವರು ಆಕ್ರಮಿಸಿಕೊಂಡರು. ರಾಜ್ಯಾಧಿಕಾರ ಸ್ಥಾನಗಳಲ್ಲಿಯೂ, ವಿದ್ಯಾವಾಜ್ಮಯ ಕ್ಷೇತ್ರಗಳಲ್ಲಿಯೂ ಬ್ರಾಹ್ಮಣ ವರ್ಗದವರು ಇವರನ್ನು ಮೀರಿಸಿದರು. ವ್ಯಾಪಾರ ವಾಣಿಜ್ಯಾದಿಗಳಲ್ಲಿಯೂ ವಿದೇಶೀಯರಷ್ಟೇ ಅಲ್ಲದೆ ತಮಿಳರೂ, ತೆಲುಗರೂ, ಗುಜರಾಥಿಗಳೂ, ಮಾರವಾಡಿಗಳೂ, ಇವರ ಪ್ರಾಬಲ್ಯವನ್ನು ಕುಂದಿಸಿದರು. ಹೀಗೆ ಎಲ್ಲ ರೀತಿಯಿಂದಲೂ ಈ ಜನರು ಕಳೆಗೆಟ್ಟು ಬಹಳವಾಗಿ ಹಿಂದೆ ಬಿದ್ದರು.

ತಥಾಪಿ, ಇತ್ತೀಚೆಗೆ ಸುಮಾರು ೨೦-೩೦ ವರ್ಷಗಳಿಂದ ಇವರಲ್ಲಿ ಒಂದು ವಿಧವಾದ ನೂತನ ಜಾಗೃತಿಯುಂಟಾಗಿದೆ. ದೈನ್ಯಾವಸ್ಥೆಗೆ ಇಳಿದಿರುವ ತಮ್ಮ ಸ್ಥಿತಿಗತಿಗಳನ್ನು ಪರಿಶೀಲಿಸಿ ತಮ್ಮ ಪೂರ್ವದ ಗೌರವ ಸ್ಥಾನವನ್ನು ಎಲ್ಲ ಕ್ಷೇತ್ರಗಳಲ್ಲಿಯೂ ಪುನಃ ಸಂಪಾದಿಸಲು ಇವರು ಸರ್ವ ಪ್ರಯತ್ನಗಳನ್ನೂ ಮಾಡತೊಡಗಿದ್ದಾರೆ. ವಿದ್ಯಾಭ್ಯಾಸ, ವಾಜ್ಮಯ, ಮತ್ತು ಕೈಗಾರಿಕೆಗಳ ಉನ್ನತಿಯ ಕಡೆಗೂ ಇವರ ಗಮನವು ಹೋಗಿದೆ. ರಾಜಕೀಯ ರಂಗದಲ್ಲಿ ಹೆಚ್ಚುಹೆಚ್ಚಾಗಿ ಮುಡಿಯಬೇಕೆಂಬ ಕುತೂಹಲವು ಇವರಲ್ಲಿ ಉಂಟಾಗುತ್ತಲಿದೆ. ಆದರೆ ಏನು ಮಾಡಿದರೂ ಕರ್ನಾಟಕ ರಾಷ್ಟ್ರದ ಈಗಿನ ನಿರ್ಬಲತೆಯು, ಪರಾವಲಂಬನವು, ಪರಿಹಾರವಾಗುವ ಪರ್ಯಂತ ಇವರ ಯಾವ ಪ್ರಯತ್ನಗಳೂ ತಕ್ಕಂತೆ ಫಲಿಸಲಾಪವೆಂದು ನಾನು ಹೇಳಲಾರೆನು. ಕರ್ನಾಟಕವು ಛಿನ್ನವಿಚ್ಛಿನ್ನವಾಗಿ ಹತ್ತಿಪ್ಪತ್ತು ಆಡಳಿತಗಳಿಗೊಳಪಟ್ಟು, ಜನತೆಯೂ ಸಂಸ್ಕೃತಿಯೂ ಪರರ ನಿಂದೆಗೆ, ತಿರಸ್ಕಾರಕ್ಕೆ, ಗುರಿಯಾಗಿರುವ ಪರ್ಯಂತ ಕನ್ನಡಿಗರ ಹಾಗೂ ವೀರಶೈವರ ದೈನ್ಯಾವಸ್ಥೆಯು ತೊಲಗುವಂತಿಲ್ಲ; ನಮ್ಮ ದೇಶವು ತಲೆಯೆತ್ತುವಂತಿಲ್ಲ ಹೀಗಾದುದರಿಂದ ಇತರ ಯಾವ ಪಂಗಡಗಳಿಗೂ ಸುಲಭ

ಸಾಧ್ಯವಲ್ಲದ ಕರ್ನಾಟಕ ಏಕೀಕರಣ ಮತ್ತು ಸ್ವತಂತ್ರಪ್ರಾಂತ ನಿರ್ಮಾಣದ ಮಹತ್ಕಾರ್ಯದಲ್ಲಿ ವೀರಶೈವರು ತಾವೇ ಮುಂದಾಳುಗಳಾಗಿ ನಿಂತು ಇತರ ಕನ್ನಡಿಗರನ್ನೂ ಪ್ರೋತ್ಸಾಹಗೊಳಿಸಿ ಈ ನಮ್ಮ ಮಹೋದ್ದೇಶವು ಎಷ್ಟು ತ್ವರೆಯಾಗಿ ಸಾಧ್ಯವೋ ಅಷ್ಟು ತ್ವರೆಯಾಗಿ ಸಾಧಿಸಿಕೊಳ್ಳುವುದು ಅತ್ಯವಶ್ಯವೆಂಬುದಾಗಿ ನಾನು ಘಂಟಾಘೋಷವಾಗಿ ಹೇಳುತ್ತೇನೆ. ಇತ್ತೀಚಿಗೆ ವೀರಶೈವ ಮಹಾಸಭೆಗಳಲ್ಲಿ ಏಕೀಕರಣಪರವಾದ ಠರಾವುಗಳಾಗುತ್ತಲಿವೆ. ಅವರ ಪತ್ರಿಕೆಗಳಲ್ಲಿ ಆ ಸಂಬಂಧವಾದ ಲೇಖನಗಳು ಬರುತ್ತಲಿವೆ. ಅವರ ಸಮಾಜ ಮುಖಂಡರುಗಳು ಅಲ್ಲಲ್ಲಿ ಹೋಗಿ ಈ ಕುರಿತು ವ್ಯಾಖ್ಯಾನಗಳನ್ನು ಕೊಡುತ್ತಲಿದ್ದಾರೆ. ಹೀಗೆ ಕರ್ನಾಟಕ ಏಕೀಕರಣದ ಆವಶ್ಯಕತೆಯು ವೀರಶೈವರಲ್ಲಿ ಮೆಲ್ಲಮೆಲ್ಲನೆಯಾದರೂ ಮೂಡತೊಡಗಿದೆಯೆಂಬುದನ್ನು, ಕರ್ನಾಟಕದ ಮಹೋನ್ನತಿಯ ದಿನಗಳು ಸಮೀಪಿಸಿ ಬರುತ್ತಿವೆಯೆಂಬುದನ್ನು, ಕಂಡು ಉದಾರಮತಿಗಳಾದ, ದೂರದರ್ಶಿಗಳಾದ ಸಮಸ್ತ ಕನ್ನಡಿಗರೂ ಅತ್ಯಾನಂದ ಪಡಬೇಕಾಗಿದೆ.

ಆದರೆ ವೀರಶೈವರ ಉತ್ಕರ್ಷೆಯ ವಿಷಯದಲ್ಲಿರುವ ಅಸಹನೆಯಿಂದಲೋ, ಅಲ್ಲ, ದೀರ್ಘಕಾಲದ ಪರಾವಲಂಬನದ ಪರಿಣಾಮವಾಗಿಯೋ ಇಂಥ ಕರ್ನಾಟಕ ಏಕೀಕರಣವೂ ಸ್ವತಂತ್ರಪ್ರಾಂತ ನಿರ್ಮಾಣವೂ ಬೇಕಾಗಿರದ ಕೆಲಕೆಲವರು ಇದನ್ನು ಕಂಡು ದಿಗಿಲು ಬಿದ್ದಂತಿದೆ; ಮತ್ತು ಲಿಂಗಾಯತರ ಮನೋವೃತ್ತಿಯ ವಿಷಯದಲ್ಲಿ ಇತರ ಪಂಗಡಗಳನರಿಗೆ ದುರಭಿಪ್ರಾಯವುಂಟಾಗುವಂತೆ ಹೊಸ ಹೊಸ ಕಲ್ಪನೆಗಳನ್ನು ಹೊರಡಿಸುತ್ತಿರುವಂತಿದೆ. ಏಕೀಕರಣವೂ ಪ್ರತ್ಯೇಕ ಪ್ರಾಂತ ನಿರ್ಮಾಣವೂ ಆದರೆ ಲಿಂಗಾಯತರೇ ಸರ್ವತಂತ್ರ ಸ್ವತಂತ್ರರಾಗಿ ಉಳಿದವರನ್ನು ತುಳಿದುಬಿಡುವರೆಂಬ ಬೆದರಿಕೆಯುಂಟುಮಾಡುವ ಒಂದು ತಂಡವಿದೆ. ಇದು ಸಾಲದೆ, "ಲಿಂಗಾಯತರ ಪ್ರಮಾಣವು ಉತ್ತರಕರ್ನಾಟಕದಲ್ಲಿರುವಷ್ಟು ದೊಡ್ಡದಾಗಿ ದಕ್ಷಿಣ ಕರ್ನಾಟಕದಲ್ಲಿರುವುದಿಲ್ಲ. ಇವೆರಡನ್ನೂ ಒಟ್ಟುಗೂಡಿಸಿದರೆ ಆ ಪ್ರಮಾಣವೂ, ಅವರ ಪ್ರಾಬಲ್ಯವೂ ಕಡಿಮೆಯಾಗುತ್ತದೆ. ಹೀಗಾದುದರಿಂದ ಅವರಿಗೆ ಏಕೀಕರಣವು ಬೇಕಾಗಿಲ್ಲ" ವೆಂಬ ಅಪವಾದವನ್ನು ಇನ್ನೊಂದು ತಂಡದವರು ಹಬ್ಬಿಸುತ್ತಿರುವರೆಂದು ಕೂಡ ಇತ್ತೀಚಿಗೆ ನನ್ನ ತಿಳವಳಿಕೆಗೆ ತರಲಾಗಿದೆ.

ಮೊದಲನೆಯ ಆಕ್ಷೇಪಣೆಯನ್ನು ಖಂಡಿಸಿ ಹಿಂದೆ "ಶರಣಸಾಹಿತ್ಯ" ದಲ್ಲಿ ಪ್ರಚುರವಾದ ( ವರ್ಷ ೧, ಪುಟಗಳು ೬೩೪ರಿಂದ ೬೩೮ ) ನನ್ನ

ಲೇಖನದಲ್ಲಿ ವಿವರವಾಗಿ ಕಾರಣಗಳನ್ನು ಕೊಟ್ಟಿರುವೆನು. ಅದನ್ನು ಇಷ್ಟವುಳ್ಳ ನನ್ನ ದೇಶಬಂಧುಗಳು ಓದಿ ನೋಡಬೇಕೆಂದು ಪ್ರಾರ್ಥನೆ. ವಾಸ್ತವವಾಗಿ ಹೇಳುವುದಾದರೆ, ಸರಕಾರದ ನವುಕರಿಗಳು ಹೆಚ್ಚಾಗಿ ಒಂದೇ ಪಂಗಡದವರಿಗೆ ಲಭಿಸುವುದರ ಮೂಲಕ ಆ ಪಂಗಡದವರಿಗೆ ಆಗುವ ಲಾಭವೇ ಆಗಲಿ, ಉಳಿದ ಪಂಗಡಗಳಿಗೆ ಆಗುವ ನಷ್ಟವೇ ಆಗಲಿ, ಬಹಳ ಕಡಮೆ. ಈ ಒಂದು ವಿಚಾರವನ್ನು ಬಿಟ್ಟು ಉಳಿದ ಸಮಸ್ತ ವಿಷಯಗಳಲ್ಲಿಯೂ ಲಿಂಗಾಯತರ ಉತ್ಕರ್ಷವು ಸಮಸ್ತ ಕರ್ನಾಟಕದ ಉತ್ಕರ್ಷವೇ ಆಗಿರುವುದರಿಂದ ಇತರ ಕನ್ನಡಿಗರಿಗೂ ಅಷ್ಟೇ ಮಟ್ಟಿಗೆ ಉತ್ಕರ್ಷವಾಗಿ ಪರಿಣಮಿಸುತ್ತದೆಂದೂ, ಪಾರತಂತ್ರ್ಯಸ್ಥಿತಿಯಲ್ಲಿ ಇದು ಸಾಧ್ಯವಲ್ಲವೆಂದೂ ಸುಜ್ಞರಾದವರಿಗೆ ವಿವರಗಳನ್ನು ಕೊಟ್ಟು ಹೇಳಬೇಕಾದುದಿಲ್ಲವೆಂದು ನೆನಸುತ್ತೇನೆ. ಇದಕ್ಕೆ ಪೋಷಕವಾಗಿ ಇನ್ನೊಂದು ಕಾರಣವನ್ನು ಸಹ ಕೊಡಬಹುದು ಪಾರತಂತ್ರ್ಯದಲ್ಲಿ ಉಚ್ಚವಾದ, ಉದಾರವಾದ ಹಾಗೂ ಸ್ವತಂತ್ರ, ನಿರ್ಭಯ ಚರಿತವುಳ್ಳವರಿಗೆ ಮುಂದೆ ಬಂದು ತಮ್ಮ ಸಾಮರ್ಥ್ಯಕ್ಕೆ ಅನುರೂಪವಾದ ಗೌರವ ಸ್ಥಾನ ಪಡೆಯಲು ಅವಕಾಶವು ಕಡಮೆ. ಯಾರಲ್ಲಿ ಸ್ವಾಭಿಮಾನವಿಲ್ಲವೋ, ಯಾರು ತನ್ನ ಅಲ್ಪವಾದ ಲಾಭಕ್ಕಾಗಿ ದೇಶವನ್ನೇ ಬೇಕಾದರೂ ಮಾರಲು, ಮತ್ತು ದೇಶಬಂಧುಗಳನ್ನು ನಿಂದೆಗೆ ಗುರಿಪಡಿಸಲು ಸಿದ್ಧರೋ ಅಂತಹವರು ಮುಖಸ್ತುತಿ ಚಾಡಿಯೇ ಮೊದಲಾದ ಹೀನ ನಡತೆಯಿಂದ ಪರಕೀಯರನ್ನು ಒಲಿಸಿ ಅವರ ಸಹಾಯ ಪಡೆದು ಮುಂದೆ ಮುಂದೆ ಬರಲು ಅನುಕೂಲ ಹೆಚ್ಚು. ಈ ಅನುಭವವು ನನ್ನಂತೆಯೇ ಅಪರವಯಸ್ಕರಾದ ಇತರರಿಗೂ ಅನೇಕರಿಗೆ ಹಜ್ಜೆಹಜ್ಜೆಗೂ ಬಂದಿರಬಹುದೆಂದು ನಾನು ನೆನಸುತ್ತೇನೆ. ಈ ದುಃಸ್ಥಿತಿಯು ನಮ್ಮ ರಾಷ್ಟ್ರದ ಮತ್ತು ನಮ್ಮ ಜನತೆಯ ಸಾಮೂಹಿಕ ಹಿತದ ದೃಷ್ಟಿಯಿಂದ ಈ ಮುಂದೆ ಯಾದರೂ ಉಳಿಯತಕ್ಕುದಲ್ಲ; ಮತ್ತು ಯಾವ ಕಷ್ಟನಷ್ಟಗಳನ್ನಾದರೂ ಸಹಿಸಿ ಕರ್ನಾಟಕವನ್ನು ಸ್ವತಂತ್ರವನ್ನಾಗಿ ಮಾಡಬೇಕೆಂಬುದೇ ನಮ್ಮ ಹೆಗ್ಗುರಿಯಾಗಿರಬೇಕೆಂದು ನಾನು ತಿಳಿಯುತ್ತೇನೆ. ಬಸವಣ್ಣನವರು ತಮ್ಮ ವಚನಗಳ ಭಕ್ತಿಸ್ಥಲದಲ್ಲಿ '**ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯಾ**' ಎಂಬುದಾಗಿ ಅಪ್ಪಣೆ ಕೊಡಿಸಿರುವರು. ಈ ಅಮೃತವಾಣಿಯು ಅದ್ಭುತವಾದ ಅರ್ಥಾಭಿಪ್ರಾಯವನ್ನೊಳಗೊಂಡಿದೆ. ಅವರ ಪ್ರತಿಪಕ್ಷದವರು

( ನನ್ನ ಅಭಿಪ್ರಾಯದಲ್ಲಿ ದುರುದ್ದೇಶದಿಂದ ) ಹೇಳುವ ಹಾಗೆ ಒಂದು ಪಕ್ಷಕ್ಕೆ ಲಿಂಗಾಯತರೇ ಸರ್ವತಂತ್ರ ಸ್ವತಂತ್ರರಾಗಿ ಸರ್ವಾಧಿಕಾರವನ್ನು ಅಪಹರಿಸಿಕೊಂಡರಾದರೂ, ಪರರ ಅವಲಂಬನದಿಂದ, ಸಹಾಯದಿಂದ, ಪಡೆಯತಕ್ಕ ಬಲ್ಲಾಳ್ತನಕ್ಕಿಂತ, ಸ್ವತಂತ್ರಕರ್ನಾಟಕದಲ್ಲಿ ನನ್ನ ಸ್ವದೇಶ ಬಂಧುಗಳಾದ, ಕರ್ನಾಟಕದ ಸುಖದುಃಖಗಳಲ್ಲಿಯೇ ಸರ್ವದಾ ಭಾಗಿಗಳಾಗಿರತಕ್ಕ ವೀರಶೈವರ ಮನೆಯ ಕಾಲಾಳ್ತನ ದೊರೆಯುವುದೇ ಲೇಸೆಂದು, ಅದೇ ನನ್ನ ಮಹದ್ಭಾಗ್ಯವೆಂದು ನಾನು ತಿಳಿಯುವೆನು.

ಏಕೀಕರಣ ವಿಚಾರದಲ್ಲಿ ಲಿಂಗಾಯಿತರಿಗೆ ನಿಜವಾದ ಆಸ್ಥೆಯಿಲ್ಲವೆಂಬ ಎರಡನೆಯ ಅಪವಾದವಾದರೂ ಬುಡವಿಲ್ಲದುದೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಏಕೀಕರಣದಿಂದ ಲಿಂಗಾಯಿತರ ಒಟ್ಟು ಪ್ರಮಾಣವು ಕಡಿಮೆಯಾಗುವುದೆಂಬ ಮಾತನ್ನು ಒಂದುಪಕ್ಷ ಒಪ್ಪಿದರೂ ಅದು ಅವರ ಸ್ವಜಾತಿಯವರಿಗಾಗಿಯೇ ಆಗುತ್ತದೆಂಬುದನ್ನೂ ಅದರ ದೆಸೆಯಿಂದ ಕಡಮೆ ಪ್ರಮಾಣದಲ್ಲಿರುವ ಸ್ವಜನರಿಗೆ ನೇರಾಗಿ ಸಹಾಯ ಮಾಡಲು ಮತ್ತು ಅವರನ್ನು ಉನ್ನತಿಗೆ ತರಲು, ಅವರಿಗೆ ಅವಕಾಶ ದೊರೆಯುತ್ತದೆಂಬುದನ್ನೂ ವೀರಶೈವರು ಮರೆಯತಕ್ಕುದಲ್ಲ. ಇಷ್ಟೇ ಅಲ್ಲದೆ, ಯಾವ ಪಕ್ಷವಲ್ಲಿಯೂ ಈಗಳಿನ ಕಲಸುಮೇಲೋಗರದ ಏರ್ಪಾಡಿನಲ್ಲಿರುವ ಪ್ರಮಾಣಕ್ಕಿಂತ ಸ್ವತಂತ್ರ ಕರ್ನಾಟಕದಲ್ಲಿ ಅವರ ಪ್ರಮಾಣವು ಎಷ್ಟೋ ಹೆಚ್ಚಾಗಿ ಬೆಳೆಯುತ್ತದೆಂಬುದನ್ನು ಅವರು ತಪ್ಪದೆ ಗಮನಿಸಬೇಕಾಗಿದೆ.

ಭಾಷಾವಾರು ಪ್ರಾಂತ್ಯ ರಚನೆಯ ತತ್ವವು ಈಗ ಭರತಖಂಡದೊಳಗಣ ಎಲ್ಲ ಉಪಜನಾಂಗಗಳಿಗೂ ಮಾನ್ಯವಾಗಿದೆ. ಕನ್ನಡಿಗರೊಂದುವೇಳೆ ಉದಾಸೀನರಾದರೂ ನೆರೆಹೊರೆಯ ಇತರರು ಬಿಡುವಂತಿಲ್ಲ; ಆ ಉದಾಸೀನತೆಯ ಪ್ರಯೋಜನವನ್ನು ಪಡೆದು ಅವರು ಕರ್ನಾಟಕವನ್ನು ತುಂಡುತುಂಡಾಗಿ ನುಂಗಿಬಿಡುವುದು ಖಂಡಿತ. ಮತ್ತು ಹೀಗಾದುದೇ ಆದರೆ ಕನ್ನಡಿಗರ ಸ್ಥಿತಿಯು ನಾಯಕನರಕವಾಗಿ ಈಗಳಿನಕ್ಕಿಂತ ಅಧೋಗತಿಗಿಳಿಯುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಅಷ್ಟಕ್ಕೆ ಬರುವಮೊದಲೇ ಕನ್ನಡಿಗರೂ, ಕನ್ನಡಿಗರಲ್ಲಿ ಅಗ್ರಗಣ್ಯರಾದ ವೀರಶೈವರೂ ಎಚ್ಚತ್ತು ಕರ್ನಾಟಕದ ಸ್ವಾತಂತ್ರ್ಯವೇ ನಮ್ಮ ಮೊದಲನೆಯ ಕರ್ತವ್ಯ ಕರ್ಮವೆಂದು ತಿಳಿದು ವರ್ತಿಸಬೇಕಾದುದು ಅತ್ಯಗತ್ಯವು. ಈ ವಿಷಯದಲ್ಲಿ ವೀರ ಕರ್ನಾಟಕ ರಾಗಿ, ಕನ್ನಡಿಗರ

ಮುಂದಾಳುಗಳಾಗಿನಿಂತು " ವೀರ " ರೆಂಬ ತಮ್ಮ ಹೆಸರಿನ ವಿಶೇಷಣದ ಕೀರ್ತಿಯನ್ನು ವೀರಶೈವರು ಸಾರ್ಥಕಗೊಳಿಸಬೇಕೆಂದು ಹಾರೈಸುತ್ತೇನೆ. ಅವರು ಏಕೋಭಾವದಿಂದ ಇದನ್ನು ಕೈಕೊಂಡರಾದರೆ ನಮಗೆ ಜಯವು ಸಿದ್ಧವೆಂದು ನಾನು ದೃಢವಾಗಿ ನಂಬಿರುವೆನು. ಪೂಜ್ಯರಾದ ಬಸವಣ್ಣನವರೇ ಹೇಳಿರುವರಲ್ಲವೇ ?—

**ಯದ್ಭಾವಂ ತದ್ಭವತಿ ॥**
**ಯಥಾ ಭಕ್ತಿ ಸ್ತಥಾ ಸಿದ್ಧಿಃ ॥**
**ಸತ್ಯಂ ಸತ್ಯಂ ನಸಂಶಯಃ ॥**

---

# ಕೊಕಟನೂರ ಚಂದ್ರೇಶ್ವರದೇವಾಲಯದೊಳಗಿನ ಶಿಲಾಶಾಸನ.

(ಲೇಖಕರು-ಪ್ರೊ. ಕೆ. ಜಿ. ಕುಂದಣಗಾರ ಎಮ್. ಎ. ಪ್ರೊಫೆಸರ
ರಾಜಾರಾಮಕಾಲೇಜ ಕೊಲ್ಲಾಪುರ.)

ಇದು ನನ್ನ "ಉತ್ತರಕರ್ನಾಟಕ ಮತ್ತು ಕೊಲ್ಹಾಪುರ ಸಂಸ್ಥಾನಗಳೊಳಗಿನ ಶಾಸನಗಳು" ಎಂಬ ಪುಸ್ತಕದೊಳಗಿನ ೧೪ ನೆಯ ಶಾಸನವು. ಬೆಳಗಾವ ಜಿಲ್ಹಾ ಅಥಣೀ ತಾಲೂಕಿನೊಳಗಿನ ಕೊಕಟನೂರೊಳಗಿನ ಚಂದ್ರೇಶ್ವರನ ಗುಡಿಯಲ್ಲಿದೆ ಇದು. ದೇವಗಿರಿಯಾದವರಲ್ಲಿ ಬಹಳ ಪ್ರಸಿದ್ಧನಾದ ಸಿಂಘಣದೇವನ ಕಾಲದಲ್ಲಿ ಕೊರೆಯಿಸಲಾಗಿದೆ. ಆ ಸಿಂಘಣದೇವನಿಗೆ ಈ ಮುಂದಿನ ಬಿರುದುಗಳಿದ್ದಂತೆ ಈ ಶಾಸನದಿಂದ ತಿಳಿದುಬರುತ್ತದೆ.

"ಸಮಸ್ತ ಭುವನಾಶ್ರಯಂ, ಶ್ರೀಪೃಥ್ವೀವಲ್ಲಭಂ, ಮಹಾರಾಜಾಧಿರಾಜ ಪರಮೇಶ್ವರಂ, ದ್ವಾರಾವತೀ ಪುರವರಾಧೀಶ್ವರಂ, ಯಾದವಕುಳಕಮಳಕಳಿಕಾವಿಕಾಸಂ, ರಿಪುರಾಯುಗಳಗಾಳಪಾಸಂ, ಮಾಳವಮದಮಲ್ಲಂ, ಅಹಿತರಾಯಹೃತ್ಸೆಲ್ಲಂ, ಗೂರ್ಜರಭಯಜ್ವರಂ, ವೈರಿದಿಕ್ಕುಂಜರಂ, ಶರಣಾಗತ ವಜ್ರಪಂಜರಂ, ಯಾದವನಾರಾಯಣಂ, ಪ್ರತಾಪಚಕ್ರವರ್ತಿ."

ಇವುಗಳಲ್ಲಿ 'ಸಮಸ್ತಭುವನಾಶ್ರಯಂ, ಶ್ರೀಪೃಥ್ವೀವಲ್ಲಭಂ, ಮಹಾರಾಜಾಧಿರಾಜ ಪರಮೇಶ್ವರಂ, ಶರಣಾಗತವಜ್ರಪಂಜರಂ, ಪ್ರತಾಪಚಕ್ರವರ್ತಿ' ಎಂಬ ಬಿರುದುಗಳು ಬನವಾಸಿಯ ಕದಂಬರಿಂದ ಕಲ್ಯಾಣದ ಚಾಲುಕ್ಯರ ವರೆಗೆ ಕರ್ನಾಟಕದಲ್ಲಿ ಆಳಿದ ಎಲ್ಲ ರಾಜಮನೆತನದವರಿಗೂ ಇದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ.

ಸಿಂಘಣದೇವನ ಪಾದ-ಪದ್ಮೋಪಜೀವಿ ಸಹದೇವನ ಬಿರುದುಗಳಾದರೂ ಹೊಗಳುವಂಥವು. ಅವುಗಳನ್ನು ಈಕೆಳಗೆ ಕೊಡಲಾಗಿದೆ.

ಮಾಳವರಾಯ ರಾಜ್ಯಮಥನಂ, ಮಲೆವಾಳಮಹೀಸಜೂಬ ಬಲ್ಲಾಳನೃಪಾಳಮತ್ತಗಜಕೇಸರಿ, ಆಂಧ್ರಕುಭೃತ್ಸಮೂಹ ಕಾಪಾಲತ್ರಿಶೂಲಂ,

ಕೊಂಕಣಧರೆ ಸುಭುಜಂಗನುವೈನತೇಯಂ, ನೇಪಾಳತಮಃಪ್ರತಾಪ ಕರಂ'

ಈ ಬಿರುದುಗಳನ್ನು ನೋಡಿದರೆ ಸಹದೇವನು ಸಿಂಘಣನ ದಂಡ ನಾಥನಾಗಿರಬಹುದೆಂದು ತೋರುತ್ತದೆ. ( "ಕೊಂಕಣಧರೆಭುಜಂಗವು ವೈನತೇಯ" ಎಂಬ ಬಿರುದು ಬಹುತರವಾಗಿ ಕೊಂಕಣಶಿಲಾಹಾರರ ನ್ನುದ್ದೇಶಿಸಿರುವಂತೆ ತೋರುತ್ತದೆ. ಶಿಲಾಹಾರರಿಗೆ ಮರುವಂಕ (ಮರು ವಕ್ಕ ಎಂದೂ ಉಂಟು.) ಸರ್ಪ ಎಂಬ ಬಿರುದಿತ್ತು. ಅವರನ್ನೂ ಅವರ ಆಪ್ತರಾದ ಕೊಲ್ಹಾಪುರದ ಶಿಲಾಹಾರರನ್ನೂ ಸಿಂಘಣದೇವನು ಮುರಿಬಡಿದಂತೆ ತಿಳಿದುಬಂದಿದೆ. ಈ ಕಾರ್ಯದಲ್ಲಿ ಸಹದೇವನು ಆತ ನಿಗೆ ಸಹಾಯಕನಾಗಿರಬಹುದು. ಆದುದರಿಂದ ಈ ಬಿರುದು ಆತನಿಗೆ ದೊರೆತಿರಬಹುದು. )

ಈ ಸಹದೇವನು ಯಾರು; ಈತನ ಬೀಡು ಎಲ್ಲಿ; ಈತನಿಗೆ ಅಧೀ ನವಾದ ದೇಶದ ಭಾಗವಾವುದು; ಎಂಬ ಅಂಶಗಳು ಈ ಶಾಸನದಲ್ಲಿ ಹೇಳ ಲಾಗದೆ ಇರುವುದೊಂದು ಶೋಚನೀಯ ಸಂಗತಿ.

ಶಾಸನದ ಕಾಲವು ೪೧ ಮತ್ತು ೪೨ನೆಯ ಸಾಲುಗಳಲ್ಲಿ ಹೇಳ ಲಾಗಿದೆ. "ಶ್ರೀಸಿಂಘಣದೇವರ ವರ್ಷದ...ನೆಯ ಮನ್ಮಥಸಂವತ್ಸರದ ಕಾರ್ತಿಕ ಶುದ್ಧ ಬಿದಿಗೆ ಸೋಮವಾರದಂದು" ಎಂದು ಅದು ಸೂಚಿತ ವಾಗಿದೆ. ಸಿಂಘಣದೇವನ ಕಾಲದಲ್ಲಿ ಮನ್ಮಥಸಂವತ್ಸರವು ಕ್ರಿ. ಶ. ದ ೧೨೩೫ ಕ್ಕೆ ( ಸೋಮಸಿದ್ಧಾಂತದ ಮೇರೆಗೆ ) ಸರಿಯಾಗಿ ಬರುತ್ತದೆ. ಮಿತಿ ವಾರಗಳು ಸರಿಯಾಗಿ ಅಕ್ಟೋಬರ ೧೫ ಸೋಮವಾರವೆಂದು ಕಂಡು ಹಿಡಿಯಲಾಗುತ್ತದೆ. ಸಿಂಘಣದೇವನು ೧೨೧೦ರಲ್ಲಿ ಪಟ್ಟವೇರಿ ದಂತೆ ತಿಳಿದು ಬರುತ್ತದೆ. ಆದುದರಿಂಧ ಕ್ರಿ ಶ. ೧೨೩೫ ಆತನ ಆಳಿ ಕೆಯ ೨೫ನೆಯ ವರುಷವಾಗಿರಬೇಕು.

ಎರಡನೆಯ ಮಹತ್ವದ ಸಂಗತಿಯು ಈ ಶಾಸನದಲ್ಲಿ ಉಕ್ತವಾದು ದೆಂದರೆ ಶೈವಮಾರ್ಗ.' ಈ ಶಾಸನದ ೨೧--೨೬ ಸಾಲುಗಳಲ್ಲಿ ಭಾಯಿ ದೇವನ ವೃತ್ತಾಂತವು ಹೇಳಲಾಗಿದೆ. ಆತನು ಕಣಂಬಡೆ ಮೂನೂರ ರೊಳಗಿನ ಕೊಕ್ಕಟನಗ್ರಹಾರ ( ಕೊಕಟನೂರ ಅಗ್ರಹಾರ ) ದಲ್ಲಿ ಚಂದಿ ನಾಥನ ಭಕ್ತನಾಗಿದ್ದನು. ಒಂದು ತಿಂಗಳು ಆತನು "ಸದ್ಭಕ್ತಿಸಂಗದ ಗೋಷ್ಠಿಯೊಳಿರ್ದನು; ಮತ್ತೆರಡು ತಿಂಗಳು ತನ್ನನವೇಕಭಾವದಿಂದಂ

ಗವಿಸುತಿರ್ದಪುದು; ಮೂರನೆ ತಿಂಗಳೆ ಭಾಯ್ಯ ಭಾಗೆಯಿಂ ಡಂಗುರ ಹೊಯಿಸುತಂ...ಸುರಲೋಕವ ಮುತ್ತಿದ ಮೂರು ಕಂಗಳಲು; ಅಷ್ಟವಿಧಾರ್ಚನೆ, ನೇಮಂ, ನಿಷ್ಠೆಯಲಿಂಗಾನುಪ್ರೇಮ, ಭಯಭಕ್ತಿ, ಚಲಂ, ಸೃಷ್ಟಿಗತಿ ಹೊಸತು ಸಿವಪಥ, ದೃಷ್ಟಾಂತಂ ಕಂಡು ಭಾಯ್ಯ ಲಿಂಗನುಗೊಂಡಂ" ಎಂಬಂಶಗಳಿಂದ ಕೆಳಗಿನ ಸಂಗತಿಗಳು ತಿಳಿದು ಬರುತ್ತವೆ. ಶಿವಪಥವು ಶೈವಮಾರ್ಗವಾಗಿದೆ. 'ಚಲಂ' ಎಂದು ಹೇಳಿರುವುದರಿಂದ ಹಠಯೋಗವು ಸೂಚಿತವಾಗುತ್ತದೆ. 'ದೃಷ್ಟಾಂತಂ ಕಂಡು' ಎಂದಿರುವುದರಿಂದ ಆತನು ಅನುಭಾವಿಯಾಗಿದ್ದನು. 'ನೇಮ, ಲಿಂಗಾನುಪ್ರೇಮ, ಭಯಭಕ್ತಿ' ಮುಂತಾದ ಪದಗಳಿಂದ ಪರಮೇಶ್ವರನಲ್ಲಿ ಉತ್ಕಟವಾದ ಭಕ್ತಿಯೆಂದು ಹೇಳಲಾಗುತ್ತದೆ.

೨೬ನೆಯ ಸಾಲಿನಿಂದ ೩೦ನೆಯ ಸಾಲಿನ ವರೆಗೆ ಶಿವಗಣವು ವರ್ಣಿಸಲಾಗಿವೆ. ಶಿವಗಣಗಳಲ್ಲಿ ಕೆಲವರು ಅಣುವಿಗಿಂತಲೂ ಕಿರಿಯರು, ಕೆಲವರು ರಜತಾದ್ರಿಗಿಂತ ದೊಡ್ಡವರಾಗಿ ಬೆಳೆದವರು (ಅಣುಮಾತ್ರದಿಂ ಕಿರಿಯರುಂ ರಜತಾದ್ರಿಯಿಂ ಹಿರಿಯರುಂ). ಕೆಲವರು ಕಾಮನಂತೆ ಸುಂದರರೂ ಗಾಡಿಕಾರರೂ ಆದರೆ ಮತ್ತೆ ಕೆಲವರು ಕುರೂಪಿಗಳು (ಅಂಗಜಾಕೃತಿಗಳುಂ ವಿಕಟಾಂಗರುಂ). ಕೆಲವರು ಅಂಜಿಕೆಯನ್ನುಂಟು ಮಾಡುವ ಕರಾಳರೂಪಧಾರಿಗಳಾಗಿದ್ದರೆ ಕೆಲವರು ಸೌಮ್ಯರೂಪಧಾರಿಗಳಾಗಿ ದಯಾಪರರು (ಭಯಂಕರತರರುಂ ದಯಾಪರರುಂ). ಕೆಲವರು ಇಂದ್ರಿಯನಿಗ್ರಹಿಗಳಾಗಿದ್ದರೆ ಕೆಲವರು ರತಿಲೋಲರು (ಇಂದ್ರಿಯನಿಗ್ರಹಶೀಲರುಂ ನಿರಂತರ ರತಿಲೋಲರುಂ). ಈ ಗಣೇಶ್ವರರಲ್ಲಿ ಅಜಾಂಡಕೋಟಿಗಳನ್ನು ಹುಟ್ಟಿಸುವ ಸಾಮರ್ಥ್ಯವೂ ನಿಮಿಷಾರ್ಧದಲ್ಲಿ ಅವುಗಳನ್ನೆಲ್ಲ ನಾಶಗೊಳಿಸುವ ಸಾಮರ್ಥ್ಯವೂ ಇದೆ. (೩೦-೩೧ನೆಯ ಸಾಲುಗಳು). ಇವೆಲ್ಲವುಗಳ ಮೇಲೆ ವಿಶ್ವಾಸವಿಟ್ಟ ಭಾಯಿದೇವನು ಶೈವಾಗಮಗಳನ್ನು ಅನುಸರಿಸಿದ ಬ್ರಾಹ್ಮಣನಾಗಿರಬೇಕು. 'ಸ್ಥಾವರಜಂಗಮಂ ದ್ವಿವಿಧಲಿಂಗಮುಂ' ಎಂದು ಹೇಳುವಾಗ.

ಲಿಂಗಂ ಭವೇತ್ ಸ್ಥಿರಚರಂ ಯನ್ಮೃಥ್ಪಕ್ತತನೂಧೃತಂ ॥
ಪಾರಮೇಶ್ವರಾಗಮ । ೧೬ನೆಯ ಪಟಲ.

ಎಂಬ ಆಧಾರವು ನೆನಪಿಗೆ ಬರುತ್ತದೆ.

ಭಾಯ್ಯದೇವನ ಪಾದಪದ್ಮೋಪಜೀವಿ (ಶಿಷ್ಯ) ಮಲ್ಲಿದೇವನು ಶಿವೈಕ್ಯನು ( ೩೩ನೆಯ ಸಾಲು ) **ವಿಪ್ರರಾಜ ಕುಲದೀಪಕನು** ( ೩೪ನೆಯ ಸಾಲು ), ಪಾರ್ಬ್ಬರ ಬಲ್ಲಹ ( ಬ್ರಾಹ್ಮಣಶ್ರೇಷ್ಠ, ೩೫ನೆಯ ಸಾಲು ) ವಿಭುಗಣಾಗ್ರಣಿ ( ೩೭ನೆಯ ಸಾಲು ) ಎಂದು ಸಂಬೋಧಿ ಸಲಾಗಿದ್ದಾನೆ. ಅಲ್ಲದೆ ೪೮ನೆಯ ಶಾಸನದಲ್ಲಿ ಮಲ್ಲಿದೇವನು ಮಲ್ಲರ ಸಯ್ಯನೆಂದು ಸಂಭೋದಿತನು.

ಮೇಲಿನ ಸಂಗತಿಗಳ ಮೇಲಿಂದ ಕೊಗ್ಗಟನೂರಿನ ಅಗ್ರಹಾರದಲ್ಲಿ ಭಾಯ್ಯಿದೇವನೆಂಬ ಶೈವಬ್ರಾಹ್ಮಣನು ಪ್ರಸಿದ್ಧನಾಗಿದ್ದನು. ಆತನ ಶಿಷ್ಯ ರಲ್ಲಿ ಮಲ್ಲಿದೇವನು ಅಥವಾ ಮಲ್ಲರಸಯ್ಯನು ಬಹಳ ಪ್ರಸಿದ್ಧನಾದ ಬ್ರಾಹ್ಮಣನು. ಆತನು '**ಶಿವೈಕ್ಯನು**' 'ವಿಪ್ರರಾಜ ಕುಲದೀಪಕನು' ಎಂದು ಸಂಬೋಧಿಸಲಾಗಿರುವುದರಿಂದ ಈತನೂ ಶಿವಾಗಮಾನು ಯಾಯಿ ಬ್ರಾಹ್ಮಣನಾಗಿರಬೇಕು. ಈತನು 'ತಮ್ಮ ದೇವರಿಗೆ' ( ಸಾಲು ೪೩ ) ಮತ್ತು "ಭಾವಸುದ್ಧ ದೇವರಿಗೆ" ದತ್ತಿಗಳನ್ನು ಬಿಟ್ಟಿದ್ದಾರೆ. 'ತಮ್ಮದೇವರು' ಎಂದು ಹೇಳುವಲ್ಲಿ 'ಮನೆದೇವರು' ಎಂದು ಅರ್ಥ ಮಾಡಬೇಕೆಂದು ತೋರುತ್ತದೆ. ಆದರೆ ಯಾವ ದೇವರು ಎಂಬುದು ಮಾತ್ರ ಹೇಳಲಾಗಿಲ್ಲ.

ವಿಭು ಬಸವರಸ, ದಣ್ನಾಯಕ ನಾಗರಸ, ಗಾತ್ರಿಗರು, ಗವಱಿಗಳು ಮುಂತಾದವರು ಭಾವಸುದ್ಧದೇವರ ಅಂಗಭೋಗ, ರಂಗಭೋಗ, ಖಂಡಸ್ಫುಟಿತಜೀರ್ಣೋದ್ಧಾರ, ದೇವಕಾರ್ಯ, ಪೂಜೆ, ನಂದಾದೀವಿಗೆ, ವೀಳ್ಯ ಮುಂತಾದ ಕಾರ್ಯಗಳಿಗಾಗಿ ದತ್ತಿಗಳನ್ನು ಬಿಟ್ಟಿದ್ದಾರೆ.

ಬಸವರಸನು ಕೊಗ್ಗಟನೂರ್ವಿಭು ಬಸವಿದೇವನೆಂದು ( ೩೮ನೆಯ ಸಾಲಿನಲ್ಲಿ ) ಕರೆಯಲಾಗಿದೆ. ೫೨ನೆಯ ಸಾಲಿನಲ್ಲಿ ನಾಗರಸನು ದೇಶಿಯ ದಣ್ನಾಯಕನೆಂದೂ ಕಣಂಬಡೆ ಮುನ್ನೂರನ್ನು ಆಳುತ್ತಿದ್ದ ನೆಂದೂ ಹೇಳಲಾಗಿದೆ. 'ಗವರಿಗಳು' ಮೇದರು. ಮಲೆಯಾಳಿನಲ್ಲಿ ಅದು 'ಕವರಿ' ಎಂದೂ ತಮಿಳಿನಲ್ಲಿ 'ಕವರೈ' ಎಂದೂ ಇದೆ.

ಈ ಶಾಸನದಲ್ಲಿ ಹೇಳಿದ ಶೈವಬ್ರಾಹ್ಮಣರಿಗೂ ವೀರಶೈವರಿಗೂ ವ್ಯತ್ಯಾಸವಿದೆ. ಭಾಯಿದೇವನ ಗುರುಪರಂಪರೆಯು ಕೊಡಲಾಗಿಲ್ಲ. ಆತನ ಹೆಸರಿನ ಮೇಲಿಂದ ಮತ್ತು ಅಲ್ಲಲ್ಲಿ ಬಂದಿರುವ ಧಾರ್ಮಿಕ ಪಾರಿ

ಭಾಷೆಗಳ ಮೇಲಿಂದ ಆತನು ಕಾಳಾಮುಖನಲ್ಲವೆಂಬುದು ತಿಳಿದುಬರುತ್ತದೆ. ಈ ಶೈವಬ್ರಾಹ್ಮಣರಿಗೂ ವೀರಶೈವರಿಗೂ ಇರುವ ವ್ಯತ್ಯಾಸಗಳೇನು ? ಇವರಿಂದ ವೀರಶೈವರು ಹೇಗೆ ಮತ್ತು ಯಾವ ಕಾಲಕ್ಕೆ ಬೇರೆಯಾದರು ? (ಶೈವಾಗಮಗಳಲ್ಲಿ ವೀರಶೈವವು ಹೇಳಲಾಗಿದೆ.) ಪರಸ್ಪರರಲ್ಲಿ ಆಹಾರವಿಹಾರಗಳ ಸಂಬಂಧ ಬೆಳೆಯುತ್ತಿದ್ದಿತೋ ಇಲ್ಲವೋ? ಇವರಿಗೂ ಈಗಿರುವ ಸ್ಮಾರ್ತಬ್ರಾಹ್ಮಣರಿಗೂ ಇರುವ ಭೇದಗಳೇನು? ಇವೇ ಮುಂತಾದ ವಿಷಯಗಳ ಕಡೆಗೆ ಗಮನಕೊಡುವುದು ಸಂಶೋಧಕರ ಕಾರ್ಯವಾಗಿದೆ. ಇಷ್ಟು ವಿಧವಾಗಿ ನಮ್ಮ ವಿವೇಚನೆಯನ್ನು ಪ್ರಚೋದನಗೊಳಿಸುವ ಈ ಶಾಸನವು ಮಹತ್ವದಲ್ಲವೆಂದು ಯಾರು ಹೇಳಬೇಕು?

ಕೊನೆಯದಾಗಿ ಈ ಶಾಸನದಲ್ಲಿ ಬರುವ ಸಿರಹಟ್ಟಿ, ಕೆಂಚಿಕಚ್ಚೆ, ಕಣಂಬಡೆ, ಜಿಂಜಲವಾಡ, ಹಂಜಿಗೆವಡ್ಡೆ ಎಂಬ ಊರುಗಳ ಹೆಸರುಗಳು ಬರುತ್ತವೆ.

ಕಣಂಬಡೆಮೂನೂರು ಈಗಿನ ವಿಜಾಪುರ ತಾಲೂಕಿನೊಳಗಿನ 'ಕನಮಡಿ' ಎಂಬ ಗ್ರಾಮ. ಅದು ಆ ಕಾಲದಲ್ಲಿ ಕರಹಾಡು ಆರುಸಾವಿರದ ಜಿಲ್ಲೆಗೆ ಅಧೀನವಾಗಿದ್ದಂತೆ ಈ ಶಾಸನವು ತಿಳಿಸುತ್ತದೆ. (೧೮, ೧೯ನೆಯ ಸಾಲುಗಳು.) ಕಣಂಬಡೆಯೆಂದರೆ ಗವಳಿಗರ ಬೀಡು ಎಂದೂ ಅರ್ಥವಾಗಬಹುದು.

ಸಿರಹಟ್ಟಿ, ಜಿಂಜಲವಾಡ, ಹಂಜಿಗೆವಡೆ ಈ ಊರುಗಳು ಕೊಕಟನೂರಿನಿಂದ ಐದು ಮೈಲು ಸುತ್ತಳತೆಯೊಳಗಿವೆಯೆಂದು ಹೇಳುತ್ತಾರೆ.

ಹರದಗೇರಿ ಎಂಬ ಪ್ರಯೋಗವು ಈ ಶಾಸನದಲ್ಲಿ ಇದೆ. ಹರದಗೇರಿಯೆಂದರೆ ವ್ಯಾಪಾರಿಗಳ ಓಣಿ ಎಂದರ್ಥ. ಆದರೆ ಅದೇ ತಾಲೂಕಿನಲ್ಲಿರುವ ಹಾರುಗೇರಿ ಎಂಬ ಊರು ಯಾಕಾಗಬಾರದೆಂದು ಕೇಳಬಹುದು. ಈ ಎರಡೂ ಪದಗಳಲ್ಲಿರುವ ಅರ್ಥವ್ಯತ್ಯಾಸವು ಬಹಳ ದೊಡ್ಡದು. ಒಂದು ವರ್ತಕರನ್ನು ಸಂಬಂಧಿಸಿದರೆ ಮತ್ತೊಂದು ಬ್ರಾಹ್ಮಣರನ್ನು ಅನ್ವಯಿಸುತ್ತದೆ ಹಾರಿಗೇರಿಯು ಸಾಂಗಲಿ ಸಂಸ್ಥಾನಕ್ಕೆ ಸೇರಿದ ತೇರದಾಳಕ್ಕೆ ಸಮೀಪಿಸಿ, ಕೊಕಟನೂರಿನಿಂದ ಸುಮಾರು ಹನ್ನೆರಡು ಮೈಲಿಗಳ ಆಚೆಯಲ್ಲಿದೆ. ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಮತ್ತು ದತ್ತಿಗೆ ಅನ್ವಯಿಸುವ ಊರುಗಳು ಐದಾರು ಮೈಲಿಗಳಾಚೆಯಲ್ಲಿ ಇರುವುದಿಲ್ಲೆಂದು

ಪ್ರಾಚ್ಯವಿದ್ಯಾವಿಶಾರದರು ಕಂಡುಹಿಡಿದಿದ್ದಾರೆ. ಆದುದರಿಂದ ಹರದಗೇರಿಯು ಹಾರುಗೇರಿಯಾಗದು.

ಇಂಥ ಶಾಸನಗಳು ಕರ್ನಾಟಕದಲ್ಲಿ ಅನೇಕಾನೇಕವಾಗಿರುವುದು ಕಂಡುಬಂದಿದೆ. ಆದುದರಿಂದ ಸಂಶೋಧಕರು ಅವುಗಳನ್ನು ಸಂಗ್ರಹಿಸಿ ಆದಷ್ಟು ಬೇಗನೆ ಅವುಗಳನ್ನು ಪ್ರಕಟಿಸಿ ಕರ್ನಾಟಕದ ಇತಿಹಾಸ-ಸಂಸ್ಕೃತಿಗಳ ಮೇಲೆ ಹೊಸ ಪ್ರಕಾಶವನ್ನು ಕೆಡುಹಲಿ ಎಂಬುದು ನಮ್ಮ ಹೆಬ್ಬಯಕೆ.

---

# ಶ್ರೀ ಸಿದ್ಧಗಂಗಾಮಹಾಕ್ಷೇತ್ರದ ಇತಿಹಾಸ.

(ಲೇ।।— ಎಂ. ಜಿ. ನಂಜುಂಡಾರಾಧ್ಯ ರಾ. ಭಾ. ವಿಶಾರದ)



## ಪ್ರಸ್ತಾವನೆ.

ಪರಮಪವಿತ್ರವಾದ ಭರತಭೂಮಿಯಲ್ಲಿ ಅನಾದಿಕಾಲದಿಂದಲೂ ಪುಣ್ಯಕ್ಷೇತ್ರಗಳಿಗೆ ಅತ್ಯುತ್ತಮವಾದ ಮಹತ್ವವು ಕೊಡಲ್ಪಟ್ಟಿದೆ. ಪ್ರತಿಯೊಂದು ಧರ್ಮದ ಜನಾಂಗಗಳಲ್ಲಿಯೂ ಪುಣ್ಯಕ್ಷೇತ್ರಗಳು ಹೇರಳವಾಗಿವೆ. ಅವುಗಳಿಗಿಷ್ಟು ಪ್ರಾಧಾನ್ಯತೆಯು ಬಂದಿರುವುದು ಆಯಾ ಕ್ಷೇತ್ರಗಳಲ್ಲಿ ಉದಾತ್ತ ಕರ್ಮಗಳನ್ನೆಸಗಿದ ಮಹಾಪುರುಷರ ಆತ್ಮತೇಜಸ್ಸಿನಿಂದ ಅಥವ ಪುರಾಣಕಾಲದಿಂದ ಪ್ರಸಿದ್ಧಿಯನ್ನು ಪಡೆದಿರುವುದರಿಂದ ಇಲ್ಲವೆ ಭಕ್ತರ ಇಷ್ಟಾರ್ಥ ಸಿದ್ಧಿಯಾಗುವಂತಹ ಕುರುಹುಗಳು ಜನಮನದಲ್ಲಿ ಮೂಡಿ ಅವರನ್ನಾಕರ್ಷಿಸುತ್ತಿರುವುದರಿಂದ ಎನ್ನಬಹುದು. ಇದಕ್ಕೆ ಯಾವುದೋ ಒಂದು ಅನಿರ್ವಾಚ್ಯವಾದ ಅಲೌಕಿಕ ದಿವ್ಯಶಕ್ತಿಯ ಪ್ರಭಾವವೇ ಕಾರಣವೆಂದು ಹೇಳಬಹುದು. ಇದನ್ನು ದೈವಿಕಶಕ್ತಿ *Divine Power* ಎಂದು ಹೇಳುವರು.

ದೈವಿಕಶಕ್ತಿಯು ಜಗಜ್ಜಾಲದ ಸೂತ್ರವನ್ನು ಹಿಡಿದು ನಡೆಯಿಸುತ್ತಿದೆಯೆಂಬುದು ಸರ್ವಜನವೇದ್ಯವಾದುದು. ನಾವೆಷ್ಟೇ ವೈಜ್ಞಾನಿಕ ದೃಷ್ಟಿಯಿಂದ ಶೋಧನೆಗಳನ್ನು ನಡೆಯಿಸುತ್ತ ನಡೆದರೂ ಅವೆಲ್ಲವುಗಳ ಆಧಾರಭೂತವಾದ ಒಂದು ಮಹಾಶಕ್ತಿಯು ಇರುವುದೆಂಬುದು ನುರಿತ ವೈಜ್ಞಾನಿಕರ ಅಭಿಪ್ರಾಯವಾಗಿದೆ. ಒಬ್ಬ ಮಹಾಪುರುಷನ ಆತ್ಮಶಕ್ತಿಯ ಉಜ್ವಲ ಪ್ರಕಾಶವು ತನ್ನ ಸುತ್ತು ಅನಂತದೂರದ ವರೆಗೆ ವ್ಯಾಪಿಸಿರುತ್ತದೆ. ಗಗನಾಂಗಣದಲ್ಲಿ ಮಿರುಗುವ ಕಿರುತಾರೆಯಿಂದ ಹಿಡಿದು ಹಿರಿಯ ಗ್ರಹದ ವರೆಗೂ ಎಲ್ಲವೂ ಸ್ವಸದೃಶ್ಯವಾದ ಆಕರ್ಷಣಶಕ್ತಿ (*Attraction*) ಮತ್ತು ಪ್ರಕಾಶ (*Light*) ದಿಂದ ಕೂಡಿರುವಂತೆ ಪ್ರತಿಯೊಂದು ಜೀವಿಯೂ ಸ್ವಸದೃಶ್ಯವಾದ ಆತ್ಮಶಕ್ತಿಹಾಗೂ ತೇಜಸ್ಸಿನಿಂದ ಕೂಡಿರುತ್ತದೆ. ಮಾನವನ ಆತ್ಮವಿಕಾಸವಾದಂತೆಲ್ಲಾ ಆ ದಿವ್ಯ ತೇಜಸ್ಸು ಮತ್ತಷ್ಟು ಉಜ್ವಲವಾಗಿ ಕಡೆಗೆ ವಿಶ್ವವನ್ನೇ ವ್ಯಾಪಿಸುವುದು. ಧ್ರುವ

ಕುಮಾರನ ತಪೋಜ್ವಾಲೆಯು ಮೂರು ಲೋಕವನ್ನೂ ವ್ಯಾಪಿಸಿ ಸಗ್ಗಿಗರ ಕಣ್ಣು ಕೋರೈಸುವಂತೆ ಮಾಡಿತು. ಇಂತಹ ನೂರಾರು ನಿದರ್ಶನಗಳು ನಮಗೆ ಭಾರತೀಯ ಇತಿಹಾಸದಲ್ಲುಪಲಬ್ಧವಾಗುತ್ತವೆ. ಅಷ್ಟೇಕೆ, ಮಹಾತ್ಮಾಗಾಂಧಿಜಿಯವರಿಗೆ ಪ್ರತಿಕ್ಷಣದಲ್ಲಿಯೂ ಆಗುವ ಸುಖದುಃಖಗಳಿಗೆ ಇಡೀ ಭಾರತವೇ ಭಾಗಿಯಾಗಿರುವದೆಂದ ಮೇಲೆ ಮಹಾಮಹಾ ತಪಸ್ವಿಗಳೂ ಅವತಾರಪುರುಷರೂ ಆದ ವಿಶ್ವವಿಭೂತಿಗಳಿಗೆ ವಿಶ್ವವೇ ವಶವರ್ತಿಯಾಗುವುದರಲ್ಲಿ ಸಂದೇಹವೇನು?

ಸ್ವಾಮಿರಾಮಕೃಷ್ಣಪರಮಹಂಸರ ಆತ್ಮಶಕ್ತಿಯು ಈಶ್ವರ ಚಂದ್ರ ವಿದ್ಯಾಸಾಗರರಂತಹ ಮೇಧಾವಿಗಳನ್ನೂ ನಾಸ್ತಿಕಶಿರೋಮಣಿಯಾಗಿದ್ದ ನರೇಂದ್ರ (ವಿವೇಕಾನಂದ) ನನ್ನೂ ತನ್ನ ಅಡಿದಾವರೆಯಲ್ಲಿ ಮಣಿಯುವಂತೆ ಮಾಡಿ ದಿವ್ಯಜ್ಞಾನವನ್ನನುಗ್ರಹಿಸಿತು. ಆ ದಿವ್ಯಶಕ್ತಿಯು ಪ್ರಸರಿಸಿದ್ದ ಪರಿಧಿಯನ್ನು ಸ್ಪರ್ಶಿಸಿದೊಡನೆಯೇ ಒಂತೆರನಾದ ಆತ್ಮಶಾಂತಿಯೂ ಆಧ್ಯಾತ್ಮಿಕವಿವೇಕವೂ ಸ್ವಾಭಾವಿಕವಾಗಿಯೇ ಉದಯಿಸುವುದೆಂಬುದು ಅನುಭವ ವೇದ್ಯವದೆ. ರಾಮಕೃಷ್ಣಪರಮಹಂಸರು ನರೇಂದ್ರನ ಮಸ್ತಕದ ಮೇಲೆ ತಮ್ಮ ದಕ್ಷಿಣಪಾದವನ್ನಿಟ್ಟಾಗ ಅವನ ಹೃದಯದಲ್ಲಾದ ಪರಿವರ್ತನೆಯ ವಿಷಯದಲ್ಲಿ ವೈಜ್ಞಾನಿಕರು ಸ್ತಬ್ಧರಾಗಿದ್ದಾರೆ. ಪ್ರಾಚೀನ ಋಷ್ಯಾಶ್ರಮಗಳಲ್ಲಿ ಜನ್ಮವೈರಿಗಳಾದ ತಿರ್ಯಗ್ವರ್ಗವನ್ನು ಪ್ರೇಮಪಾಶದಿಂದಾಲಿಂಗಿಸುವಂತೆ ಮಾಡಿದ್ದುದು ಆತ್ಮಶಕ್ತಿಯ ಪವಿತ್ರ ಪ್ರಭಾವವಲ್ಲವೇ?

ಆ ದಿವ್ಯಶಕ್ತಿಯ ವಿಷಯದಲ್ಲಿ ೧೯೦೨ರಲ್ಲಿ ಇಂಗ್ಲೆಂಡಿನಲ್ಲಿಯ ರಾಯಲ್ ಇನ್‌ಸ್ಟಿಟ್ಯೂಟಿನಲ್ಲಿ ಭಾರತಕ್ಕೆ ಭೂಷಣ ಪ್ರಾಯರಾಗಿದ್ದ ದಿವಂಗತ ಸರ್ ಜಗದೀಶಚಂದ್ರ ಭೋಸರವರು§

"ಅಣುರೇಣುಗಳಿಂದ ಸೂರ್ಯಮಾಲೆಯ ವರೆಗೆ ನನಗೊಂದೇ ತತ್ವವು ತುಂಬಿದುದಾಗಿ ತೋರುತ್ತದೆ. ೩೦೦೦ ವರ್ಷಗಳಾಚೆ ಗಂಗಾತೀರವಾಸಿಗಳಾದ ನನ್ನ ಹಿರಿಯರು ಉಪನಿಷತ್ತುಗಳ ಮೂಲಕ ಹೊರಹೊಮ್ಮಿಸಿದ ಏಕತ್ವದ ಸಂದೇಶವು ಅಲ್ಪಸ್ವಲ್ಪವಾಗಿ ನನ್ನ ಅನುಭವಕ್ಕೆ ಗೋಚರವಾಗುತ್ತಿದೆ." ಎಂದು ಹೇಳಿದರು. ಆದ್ದರಿಂದಲೇ ೧೯೩೫ನೆಯ ಸಾಲಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪದವೀಪ್ರದಾನಮಹೋ

---

§ ಜಯಕರ್ನಾಟಕ ಸ. ೧೫. ಸ. ೬. (*Dec. 1937*) ಪು. ೪೯೦.

ತ್ಸವವನ್ನು ನೆರವೇರಿಸಿದ ಸುಪ್ರಸಿದ್ಧ ವಿದ್ವಾಂಸರೂ ಅನುಭವಿಗಳೂ ಆದ ಶ್ರೀಯುತ ಸಿ. ವೈ. ಚಿಂತಾಮಣಿಯವರು *Scientific investigations about supernatural Powers are useless,"* ಎಂದರೆ ದೈವಿಕ ಶಕ್ತಿಗಳ ವಿಷಯದಲ್ಲಿ 'ವೈಜ್ಞಾನಿಕ ಶೋಧನೆಗಳು ನಿರರ್ಥಕವಾದವು' ಎಂದು ಹೇಳಿದ್ದಾರೆ.

## ಆಧ್ಯಾತ್ಮಿಕವೂ ತೀರ್ಥಕ್ಷೇತ್ರಗಳೂ.

ಆಧ್ಯಾತ್ಮಿಕಸಾಗರದ ಪಾರವನ್ನರಿತವರೆಂಬ ಹಿರಿಮೆಯು ಭಾರತೀಯರನ್ನು ಸೇರಿದುದು. ಬ್ರಹ್ಮಜ್ಞಾನವೇ ಮಾನವನ ಆತ್ಯಂತಿಕ ಧ್ಯೇಯವೆಂದೂ, ಇದೊಂದೇ ಉಚ್ಚ ಆದರ್ಶವನ್ನು ಪೌರ್ವಾತ್ಯ ತತ್ವಶಾಸ್ತ್ರವು ಬೋಧಿಸಿದೆಯೆಂದೂ ಸ್ವಾಮಿವಿವೇಕಾನಂದರು ಉದ್ಘೋಷಿಸಿರುವರು. * ಈ ಜ್ಞಾನವನ್ನಾತ್ಮಗತಮಾಡಿಕೊಳ್ಳಲು ಭಾರತೀಯರೆಸಗುತ್ತಿದ್ದ ಪರಿಶ್ರಮಕ್ಷೇತ್ರಗಳೇ ಇಂದಿನ ಪವಿತ್ರ ಪುಣ್ಯ ಕ್ಷೇತ್ರಗಳು.

ಭರತಖಂಡದ ಸಂಸ್ಕೃತಿಯು ತನ್ನ ಸಂಪೂರ್ಣ ವೈಭವದಿಂದಿದ್ದ ಸಮಯದಲ್ಲಿ ಜಗತ್ತಿನಲ್ಲೆಲ್ಲಾ ತೀರ್ಥಕ್ಷೇತ್ರಗಳು ವ್ಯಾಪಿಸಿದ್ದವು. ಇಂದಿಗೂ ಅಮೇರಿಕಾ ಮುಂತಾದ ಕಡೆಗಳಲ್ಲಿ ಶಿವಾಲಯಗಳೂ ಶಿವಲಿಂಗಗಳೂ ದೊರೆಯುತ್ತಿರುವುದು ಇದಕ್ಕೆ ನಿದರ್ಶನವಾಗಿದೆ. ಭರತಖಂಡದ ಯಾವುದೇ ಶಾಂತಿಯ ತವರೂರಂತಿರುವ ಗಿರಿನದಿಗಳೆಡೆಯಲ್ಲಿ ನೋಡಿದರೂ ಜಗಸ್ನಿಯಾಮಕನ ನೆನಪು ಬರುವ ಒಂದು ಪ್ರತಿಕೃತಿಯು ನಮ್ಮ ದೃಷ್ಟಿಗೆ ಬೀಳುತ್ತದೆ. ಅಂತಹ ನಿರ್ಮಲವಾದ ನೆಲೆಯನ್ನು ಹೊಂದಿದೊಡನೆಯೇ ಆತ್ಮಜ್ಞಾನದ ಮಿಂಚೆಳಗು ಹೊರಹೊಮ್ಮಿ ಮತಿಯು ಮಂಜುಳವಾಗಿ ಸಂಸಾರಸಂತಪ್ತಾತ್ಮವು ಶಾಂತಿಯ ಹೊನಲಲ್ಲಿ ಮಿಂದು ಸುಖವನ್ನು ಹೊಂದಲನುವಾಗುತ್ತದೆ. ಇದೇ ಬ್ರಹ್ಮಜ್ಞಾನದ ಹಿನ್ನೆಲೆ ಅಥವಾ ಪ್ರಥಮ ಸೋಪಾನ. ಹೀಗಾಗಬೇಕೆಂಬುದೇ ಭರತಖಂಡದ ಉಚ್ಚ ಸಂಸ್ಕೃತಿಯ ಧ್ಯೇಯ. ಅಸ್ತು.

ಪ್ರಕೃತದಲ್ಲಿ ಇಂತಹ ಪವಿತ್ರ ಕ್ಷೇತ್ರಗಳಲ್ಲೊಂದಾಗಿರುವ ಶ್ರೀಸಿದ್ಧಗಂಗಾಕ್ಷೇತ್ರದ ಚರಿತ್ರೆಯು ಅತ್ಯಂತ ಮಹತ್ವದ್ದಾಗಿದೆ. ಇದರಲ್ಲಿ ಉದಾಹೃತವಾಗಿರುವ ಅನೇಕ ಪವಾಡಗಳು ಪ್ರಾಚೀನ ಸಿದ್ಧಪುರುಷರಿಂದ ನಡೆಯಿಸಲ್ಪಟ್ಟವುಗಳಾಗಿವೆ. ಅವುಗಳು 'ನಿರಂಜನವಂಶರತ್ನಾಕರ' ಮುಂತಾದ ಗ್ರಂಥಗಳಲ್ಲಿ ಉಪಲಬ್ಧವಾಗುವುದರಿಂದ ಅವುಗಳನ್ನು ಸಂಗ್ರಹಿಸಿ ವಾಚಕ

* ಕರ್ಮಯೋಗ (ವಿವೇಕಾನಂದ)

ವೃಂದದ ಮುಂದಿಡಲು ಪ್ರಯತ್ನಿಸಿರುತ್ತದೆ. ಪುರಾಣ ಭಾಷೆಯಲ್ಲಿದ್ದ ಅನೇಕ ಸಂಗತಿಗಳನ್ನು ಚಾರಿತ್ರಕ ಶೋಧನೆಗಳಿಂದ ಪರಿಷ್ಕರಿಸಿ ಆದಷ್ಟು ಇತಿಹಾಸ ರೂಪಕ್ಕೆ ಇಳಿಸಲುಜ್ಜುಗಿಸಿದೆ.

## ಶ್ರೀ ಸಿದ್ಧಗಂಗಾಕ್ಷೇತ್ರ.

ಭರತ ಖಂಡದಲ್ಲಿ ಕಾಶೀರಾಮೇಶ್ವರ ಮುಂತಾದ ಪುಣ್ಯಕ್ಷೇತ್ರಗಳು ಪುರಾಣಯುಗದಿಂದಲೂ ಪ್ರಸಿದ್ಧವಾಗಿವೆ. ದಕ್ಷಿಣಭಾರತದಲ್ಲಿ ವಿರಾಜಿಸುವ ಅನೇಕ ಕ್ಷೇತ್ರಗಳು ಚಾರಿತ್ರಕ ದೃಷ್ಟಿಯಿಂದಲೂ ಮಹತ್ವದ ಸ್ಥಾನಗಳಾಗಿವೆ ಕರ್ನಾಟಕದಲ್ಲಿ ಗೋಕರ್ಣ ಮಹಾಕೂಟ ಹಂಪೆ ನಂಜನಗೂಡು ಉಡುಪಿ ಮೊದಲಾದುವು ಪ್ರಸಿದ್ಧಿಯನ್ನು ಪಡೆದಿವೆ. ಸೌಂದರ್ಯದಿಂದಲೇ ಒಂದು ವಿಲಕ್ಷಣ ಶೋಭೆಯನ್ನು ಪಡೆದು ವಿರಾಜಿಸುವ ಕ್ಷೇತ್ರಗಳು ಕರುನಾಡಿನಲ್ಲಿ ಹೇರಳವಾಗಿವೆ. ಇವುಗಳಲ್ಲಿ ತುಮಕೂರಿಗೆ ಸಮೀಪದಲ್ಲಿರುವ 'ಸಿದ್ಧಗಂಗಾ' ಎಂಬ ಕ್ಷೇತ್ರವು ಅತ್ಯಂತ ಮಹತ್ವ ಉಳ್ಳದ್ದೂ ಇತಿಹಾಸ ಪ್ರಸಿದ್ಧವಾದುದೂ ಆಗಿದೆ.

### ಕ್ಷೇತ್ರಪರಿಚಯ.

ಇದು ದೇವರಾಯನ ದುರ್ಗದ ಬೆಟ್ಟಗಳ ಸಾಲಿನಲ್ಲಿ ಸೇರಿರುವದರಿಂದ ಇಲ್ಲಿಯ ಪ್ರಕೃತಿ ಸೌಂದರ್ಯವು ಮನೋಹರವಾಗಿದೆ. ಈ ಬೆಟ್ಟದ ಪಕ್ಕದಲ್ಲಿಯೇ 'ರಾಮಗಿರಿ' ಯೆಂಬ ಒಂದು ದುರ್ಗವೂ ಸುಮಾರು ೧೦–೧೨ ಮೈಲು ದೂರದಲ್ಲಿ ದಕ್ಷಿಣಕಾಶಿಯೆಂದು ಪ್ರಸಿದ್ಧವಾದ 'ಶಿವಗಂಗಾ' ಎಂಬುದೂ ಇರುವುದರಿಂದ ಈ ಪ್ರದೇಶವು ಪ್ರಾಚೀನಕಾಲದಿಂದಲೂ ಪವಿತ್ರ ಕ್ಷೇತ್ರವಾಗಿ ಪರಿಗಣಿಸಲ್ಪಟ್ಟಿದೆ. ಇದು ಹಿಂದೆ ಭಯಂಕರ ಅರಣ್ಯದಿಂದಾವೃತವಾಗಿದ್ದುದರಿಂದ ಅನೇಕ ತಪೋಧನರು ಇಲ್ಲಿ ತಪಸ್ಸನ್ನಾಚರಿಸಿ ಆತ್ಮೋದ್ಧಾರವನ್ನೂ ಲೋಕೋದ್ಧಾರವನ್ನೂ ಮಾಡಿದ ಬಗ್ಗೆ ಅನೇಕ ಕುರುಹುಗಳಿವೆ.

ಮುನಿ ಪುಂಗವರಾದ ಗೌತಮ ಮಹರ್ಷಿಗಳು ಈ ಕ್ಷೇತ್ರದಲ್ಲಿ ಅನೇಕ ಕಾಲ ತಪಸ್ಸನ್ನಾಚರಿಸಿ ತಮಗೆ ಪ್ರಾಪ್ತವಾಗಿದ್ದ ಗೋಹತ್ಯಾರೂಪವಾದ ದೋಷದಿಂದ ವಿಮುಕ್ತರಾದರೆಂಬ ಪ್ರತೀತಿಯಿದೆ. §

---

§ ಶ್ರೀಗೌತಮ ಮಹರ್ಷಿಗಳು ಈ ಕ್ಷೇತ್ರಕ್ಕೆ ಸು. ೨ ಮೈಲಿ ದೂರದಲ್ಲಿರುವ 'ಕೌಶುಮಾರ' ಹಳ್ಳಿ ಎಂಬಲ್ಲಿರುವ ಗುಡ್ಡದಲ್ಲಿ ವಾಸವಾಗಿದ್ದರೆಂದೂ ಅಲ್ಲಿಂದ ಇಲ್ಲಿಗೆ ದಯಮಾಡಿಸಿದರೆಂದೂ ಪ್ರತೀತಿಯಿದೆ. ಮತ್ತು 'ಗೌತಮಾರ' ಹಳ್ಳಿಯು ಈಗ 'ಕೌಶುವಾರ' ಹಳ್ಳಿಯೆಂದು ತದ್ಭವವಾಗಿ ಪ್ರಚಾರದಲ್ಲಿದೆ.

ಅದಕ್ಕೆ ನಿದರ್ಶನವಾಗಿ ಈ ಬೆಟ್ಟದಲ್ಲಿ ತಪೋನುಷ್ಠಾನಯೋಗ್ಯಗಳಾದ ಅನೇಕ ಗುಹೆಗಳಿವೆ. ಬೆಟ್ಟವು ದುರ್ಗದಂತೆ ಒಂದೇ ಬಂಡೆಯಾಗಿರುವುದರಿಂದ ಸ್ವಾಭಾವಿಕವಾಗಿಯೇ ಗುಹೆಗಳಾಗಿ ಪರಿಣಮಿಸಿದೆ. ಬೆಟ್ಟದ ದಕ್ಷಿಣ ಪಾರ್ಶ್ವದಲ್ಲಿನ ಒಂದು ಬಂಡೆಯಲ್ಲಿ 'ಗಂಗಾಚಿಲುಮೆ'ಯೂ 'ಶ್ರೀಸಿದ್ಧಲಿಂಗೇಶ್ವರ' ದೇವಾಲಯವೂ ಇವೆ. ಅಲ್ಲಿಗೆ ಹೋಗಲು ಸೋಪಾನ ಮಾರ್ಗವಿದೆ. 'ಗಂಗಾಚಿಲುಮೆ'ಯಿರುವ ಗುಹೆಯಲ್ಲಿ 'ಶ್ರೀಸಿದ್ಧೇಶ್ವರ', 'ಶಿದ್ಧಲಿಂಗೇಶ್ವರ' ಮುಂತಾದ ಅನೇಕ ಶಿವಯೋಗಿಗಳು ತಪಸ್ಸು ಮಾಡಿದ ಸ್ಥಳವೆಂದು ಹೇಳುತ್ತಾರೆ. ಈ ಬೆಟ್ಟದ ಉತ್ತರಭಾಗದಲ್ಲಿ 'ಬಿಲ್ವಸಾಗರದ ಗವಿ' ಎಂಬ ಒಂದು ಗುಹೆಯಿದೆ. ಅದು ವಿಶಾಲವಾಗಿಯೂ ಮನೋಹರವಾಗಿಯೂ ಇದೆ. ಗಂಗಾಚಲುಮೆಯ ಗುಹೆಗೂ ಈ ಬಿಲ್ವಸಾಗರದ ಗುಹೆಗೂ ಸಹ ಬೆಟ್ಟದ ಒಳಭಾಗದಲ್ಲಿಯೇ ಒಂದು ಮಾರ್ಗವಿದೆ. ಹಿಂದೆ ಗಂಗಾಗುಹೆಯಲ್ಲಿ ವಾಸವಾಗಿದ್ದ ಋಷಿಗಳು ಆ ಮಾರ್ಗವಾಗಿಯೇ ಬಿಲ್ವಸಾಗರದ ಗುಹೆಗೆ ಹೋಗಿ ಪತ್ರಪುಷ್ಪಾದಿಗಳನ್ನು ತರುತ್ತಿದ್ದರಂತೆ. ಮೊನ್ನಿನ ವರೆಗೂ ಕ್ರೂರ ಮೃಗಗಳು ಆ ಮಾರ್ಗವಾಗಿ ಗಂಗಾಗುಹೆಗೆ ಬರುತ್ತಿದ್ದುವಂತೆ. ಅದಕ್ಕಾಗಿಯೇ ಈಗಿನ ಸ್ವಾಮಿಗಳವರು ಅದರ ಬಾಗಿಲಿಗೆ ಗೋಡೆಯನ್ನಿಡಿಸಿದ್ದಾರೆ. ಆ ಮಾರ್ಗದಲ್ಲಿ ಒಳಗೆ ಪ್ರವೇಶ ಮಾಡಿದರೆ ವಿಶಾಲವಾದ ಪ್ರದೇಶವಿರುವುದೆಂದೂ ಅಲ್ಲಿ ಎಷ್ಟೋ ಜನ ತಪಸ್ವಿಗಳು ಅನೇಕ ವರ್ಷ ತಪಸ್ಸನ್ನಾಚರಿಸಿ ನಿರ್ವಯಲಾಗಿರುವರೆಂದೂ ಇದಕ್ಕೆ ನಿದರ್ಶನವಾಗಿ ಅಲ್ಲಿ ಅನೇಕ ಅಸ್ಥಿಪಂಜರಗಳಿವೆಯೆಂದೂ ಅನುಭವಿಗಳು ಹೇಳುತ್ತಿದ್ದಾರೆ. ಮತ್ತು ಮಳೆಗಾಲದಲ್ಲಿ ಗಂಗಾಚಲುಮೆಯು ಉಕ್ಕಿ ನೀರು ಹರಿಯಲಾರಂಭಿಸಿದರೆ ಆ ನೀರು ಬಿಲ್ವಸಾಗರದ ಗುಹೆಯಲ್ಲಿನ ಒಂದು ಸ್ಥಳದಲ್ಲಿ ಹರಿಯುವುದನ್ನು ನಾವಿಂದು ಕಾಣಬಹುದು.

ಎಂತಹ ದುರ್ಭಿಕ್ಷವಾದರೂ ಗಂಗಾಚಿಲುಮೆಯಲ್ಲಿ ಬಳಸಿದಷ್ಟೂ ಜಲವು ಅಕ್ಷಯವಾಗುತ್ತದೆಯೆಂದು ಜನರು ನಂಬಿದ್ದಾರೆ. ಇಂತಹ ಪವಿತ್ರ ಕ್ಷೇತ್ರದ ಸನ್ನಿವೇಶಕ್ಕನುಗುಣವಾಗಿ ಬೆಟ್ಟದ ಬುಡದಲ್ಲಿ ನಿರಂತರ ದಾಸೋಹ (ಅನ್ನದಾನ) ದಿಂದ ಆಶ್ಚರ್ಯಕರವಾದ 'ಸಿದ್ಧಗಂಗಾಮಠ' ಮತ್ತು 'ಗುರುಕುಲಾಶ್ರಮ' ಇವುಗಳಿವೆ. ಇದು ಭರತಖಂಡದ ಪ್ರಾಚೀನ ಸಂಸ್ಕೃತಿಯ ಆದರ್ಶವನ್ನೂ ಮಠಗಳ ಮಾದರಿಯನ್ನೂ ಪರಿಚಯ ಮಾಡಿಕೊಡುವ ಮನೋಹರ ದೃಶ್ಯವಾಗಿದೆ.

## 'ಸಿದ್ಧಗಂಗಾ' ನಾಮೋತ್ಪತ್ತಿ.

ಈ ಕ್ಷೇತ್ರಕ್ಕೆ 'ಸಿದ್ಧಗಂಗಾ' ಎಂಬ ಅಭಿಧಾನವುಂಟಾದುದು ಒಂದು ಮಹತ್ವವಾದ ಚಾರಿತ್ರಿಕ ವಿಷಯವಾಗಿದೆ. ವೀರಶೈವ ಮತದಲ್ಲಿ ಮುಖ್ಯವಾದ ಗುರುಪೀಠವು ಶ್ರೀನಿರಂಜನಶೂನ್ಯಸಿಂಹಾಸನವು. ಈ ಪೀಠದಲ್ಲಿ ೧೨ ನೆಯ ಅಧೀಶರಾಗಿದ್ದ ಶ್ರೀಗೋಸಲ ಸಿದ್ಧೇಶ್ವರ ಸ್ವಾಮಿಗಳ ಮಹಿಮಾಪ್ರಭಾವದಿಂದ ಇಲ್ಲಿ ತೀರ್ಥವು ಉಗಮಿಸಿದ್ದರಿಂದ ಈ ಕ್ಷೇತ್ರಕ್ಕೆ 'ಸಿದ್ಧಗಂಗಾ' ಎಂಬ ಅನ್ವರ್ಥನಾಮವು ಲಬ್ಧವಾದಂತೆ ತಿಳಿದುಬರುತ್ತದೆ. ಇದನ್ನರಿಯಲು ಶ್ರೀನಿರಂಜನಪೀಠದ ಇತಿವೃತ್ತವು ಸಾಧಕವೆನಿಸಿದ್ದರಿಂದ ಅದನ್ನಿಲ್ಲಿ ಸ್ವಲ್ಪಮಟ್ಟಿಗೆ ವಿವರಿಸುವುದು ಅನುಚಿತವೆನಿಸಲಾರದು.

ಈ ಪೀಠದಲ್ಲಿ ಮಂಡಿಸಿದ್ದ ಅನೇಕ ಮಹಿಮಾಮೂರ್ತಿಗಳು ಈ ಬೆಟ್ಟಕ್ಕೆ ದಯಮಾಡಿಸಿ ತಪಸ್ಸನ್ನಾಚರಿಸಿದರೆಂಬುದಕ್ಕೆ 'ನಿರಂಜನವಂಶ ರತ್ನಾಕರ' ಎಂಬ ಗ್ರಂಥದಲ್ಲಿ ವಿಸ್ತಾರವಾದ ಉಲ್ಲೇಖಗಳು ದೊರೆಯುತ್ತವೆ. ಈ ಗ್ರಂಥಕರ್ತನು+ ಒಳ್ಳೆಯ ಚಾರಿತ್ರಿಕ ಜ್ಞಾನವುಳ್ಳವನೆಂದು ಶ್ರೀಮಾನ್ ರಾ|| ಸಾ|| ಫ. ಗು. ಹಳಕಟ್ಟಿಯವರು ಅಭಿಪ್ರಾಯಪಟ್ಟಿರುವುದರಿಂದ ನಾವು ಇಲ್ಲಿ ತದನುಗುಣವಾಗಿ ಈ ವಿಷಯವನ್ನು ಪ್ರತಿಪಾದಿಸಲು ಪ್ರಯತ್ನಿಸಿದ್ದೇವೆ.

## ಶ್ರೀಮನ್ನಿರಂಜನ ಪೀಠ.

ಈ ಪೀಠದ ಬಗ್ಗೆ ವೀರಶೈವ ಗ್ರಂಥಗಳಲ್ಲಿ ಅನೇಕಉಲ್ಲೇಖಗಳಿವೆ. ಇದು ಯುಗಯುಗಾಂತರಗಳಿಂದ ನಡೆದು ಬಂದುದ್ದೆಂದು ಶಿವಾಗಮಗಳಲ್ಲಿ ಉಕ್ತವಾಗಿದೆ. ವಚನಕಾರರಲ್ಲಿ ಪ್ರಸಿದ್ಧರೂ ಮತ್ತು ಈ ಪೀಠದಲ್ಲಿ ಮಂಡಿಸಿದ್ದವರೂ ಆದ ಶ್ರೀ ತೋಂಟದ ಸಿದ್ಧಲಿಂಗಯತೀಂದ್ರರು ಈ ಪೀಠದ ಪರಂಪರೆಯ ವಿಷಯದಲ್ಲಿ ಹೀಗೆ ಹೇಳಿದ್ದಾರೆ.

"(೧) ಅನಾದಿ ಗಣೇಶ್ವರ (೨) ಆದಿ ಗಣೇಶ್ವರ (೩) ನಿರ್ವಾಣ ಗಣೇಶ್ವರ (೪) ನಿರಂಜನ ಗಣೇಶ್ವರ (೫) ಜ್ಞಾನಾನಂದ (೬) ಆತ್ಮಗಣೇಶ (೭) ಅಧ್ಯಾತ್ಮ ಗಣೇಶ (೮) ರುದ್ರ ಗಣೇಶ (೯) ಬಸವಪ್ರಭು (೧೦) ಆದಿ ಲಿಂಗೇಶ (೧೧) ಚನ್ನವೀರೇಶ (೧೨) ಹರದನಹಳ್ಳಿ ಗೋಸಲ ( ಸಿದ್ಧ ) ದೇವ (೧೩) ಶಂಕರದೇವ (೧೪) ದಿವ್ಯಲಿಂಗೇಶ (೧೫) ಗೋಸಲ ಚನ್ನಬಸವೇಶ (೧೬) ತೋಂಟದ ಸಿದ್ಧಲಿಂಗೇಶ" (ತೋಂ. ಸಿ. ವ. ೮)

+ (ಈತನ ಕಾಲ ಗೊತ್ತಿಲ್ಲ.) ನಿರಂಜನವಂಶರತ್ನಾಕರ ಪ್ರಸ್ತಾವನೆ.

ಈ ವಚನದಲ್ಲಿ ೧೨ನೆಯವರಾಗಿ ಉಲ್ಲಿಖಿತರಾಗಿರುವವರೇ ಗೋಸಲ ಸಿದ್ಧೇಶ್ವರ ಸ್ವಾಮಿಗಳೆಂಬುವರು. ಇವರ ಕಾಲದ ವಿಷಯದಲ್ಲಿ ಬಿನ್ನಾಭಿಪ್ರಾಯಗಳಿವೆ. ನಿರಂಜನ ಪೀಠವು ಬಸವೇಶ್ವರನ ಅನುಭವ ಮಂಟಪದಲ್ಲಿ ಶೂನ್ಯ ಸಿಂಹಾಸನಾರೂಢರಾಗಿದ್ದ ಪ್ರಭುದೇವರಿಂದ ಪಾರಂಭವಾಗಿರಬೇಕೆಂದು ಕೆಲವರು ಹೇಳುತ್ತಾರೆ. ಆದರೆ ವಂಶ ಕ್ರಮದ ವಿಷಯದಲ್ಲಿ ನಿರಂಜನವಂಶರತ್ನಾಕರಕ್ಕೂ ಮತ್ತು ತೋಂಟದ ಸಿದ್ಧೇಶ್ವರ ವಚನದಲ್ಲು ಕ್ತವಾದ ಕ್ರಮಕ್ಕೂ ಮತಭೇದವಿದೆ.

ಈ ವಿಷಯದಲ್ಲಿ ಕೂಲಂಕಷವಾಗಿ ವಿಮರ್ಶಿಸಿರುವ ವೇ॥ಬುದ್ಧಯ್ಯಾ ಪುರಾಣಿಕರು ' ನಿರಂಜನ ಪೀಠದ ವಂಶಕ್ರಮವು ಬಸಪ್ರಭು (೯) ವಿನಿಂದ ಆರಂಭವಾಗಿರಬೇಕು. ಅವರಿಗೆ ಹಿಂದೆ ಪರಿಗಣಿತವಾಗಿರುವ ಹೆಸರುಗಳು ಲೋಕದಲ್ಲಿ ರೂಢಿಗೆ ಬಂದವುಗಳಲ್ಲನಾದ್ದರಿಂದ ಅವು ಕೇವಲ ಕೈಲಾಸದಲ್ಲಿದ್ದ ಗಣವರರ ಹೆಸರುಗಳೇ ಇರಬೇಕು. ' § ಎಂದು ಅಭಿಪ್ರಾಯಪಟ್ಟಿದ್ದಾರೆ. ಶ್ರೀವರ್ಯ ಎಂ ಆರ್. ಶ್ರೀನಿವಾಸಮೂರ್ತಿ ಬಿ. ಎ. ಅವರು + " (೧) ಬಸವಪ್ರಭು (೨) ಚನ್ನವಿಭು (೩) ಮಗಿಪ್ರಭು ಎಂಬ ಉಪನಾಮಗಳು ಪ್ರಭುದೇವರಿಗುಂಟು " ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಈ ದೃಷ್ಟಿಯಿಂದ ಬಸವಪ್ರಭುವೇ ಬಸವೇಶ್ವರನ (೧೧೬೦) ಸಮಕಾಲಿಕರಿದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಇವರೇ 'ಪ್ರಭುದೇವ'ರೆಂಬ ಹೆಸರಿನಿಂದ ವೀರಶೈವ ಕವಿಗಳಿಂದ ವಿಶೇಷವಾಗಿ ವರ್ಣಿತರಾಗಿದ್ದಾರೆ. ಆದ್ದರಿಂದ ಪ್ರಭುದೇವರು ೧೨ನೆಯ ಶತಮಾನದಲ್ಲಿದ್ದರೆಂಬುದು ನಿರ್ವಿವಾದವಾಗಿದೆ. ಅವರ ಅನಂತರ (೧) ಆದಿಲಿಂಗೇಶ (೨) ಚನ್ನವೀರೇಶ (೩) ಹರದನಹಳ್ಳಿಯ ಗೋಸಲಸಿದ್ಧೇಶ್ವರ ಇವರು ಕ್ರಮವಾಗಿ ಆ ಪೀಠದ ಅಧಿಕಾರಿಗಳಾದಂತೆ ತಿಳಿದುಬರುತ್ತದೆ. ಆದುದರಿಂದ ಶ್ರೀಪ್ರಭುದೇವರ ನಂತರ ಮೂರನೆಯ ಪೀಠಾಧೀಶರಾದ ಶ್ರೀಸಿದ್ಧೇಶ್ವರ ಸ್ವಾಮಿಗಳು ೧೩ ನೆಯ ಶತಮಾನದ ಕಡೆಯ ಭಾಗದಲ್ಲಿದ್ದರೆಂದು ಹೇಳಬಹುದಾಗಿದೆ. ಕವಿಚರಿತೆಕಾರರು ಗೋಸಲ ಸಿದ್ಧೇಶ್ವರ ಸ್ವಾಮಿಗಳ ಅನಂತರ ಐದನೆಯ

---

§ ಶಿವಾನುಭವ ಡಿಸೆಂಬರ ೧೯೩೫ ಪು. ೩೦೫.

\+ ಪ್ರಬುದ್ಧ ಕರ್ನಾಟಕ ೧೯೩೧ ಕಾಮನ ಸಂಚಿಕೆಯ ಕಾವ್ಯಾವಲೋಕನ.

ಪೀಠಾಧಿಪತಿಗಳಾಗಿದ್ದ ಶ್ರೀತೋಂಟದ ಸಿದ್ಧಲಿಂಗೇಶ್ವರರು ಸನ್ ೧೪೭೦ ಎಂದು ಹೇಳಿರುವುದೂ ಸಮಂಜಸವೆನಿಸುತ್ತದೆ. ಈ ದೃಷ್ಟಿಯಿಂದ ಶ್ರೀಸಿದ್ಧೇಶ್ವರರ ನಂತರ ಪಟ್ಟಕ್ಕೆ ಬಂದ 'ಶ್ರೀಶಂಕರದೇವರು' ಸು. ೧೩೬೫ರಲ್ಲಿದ್ದರೆಂದು ಶ್ರೀವರ್ಗ ಶಿವಮೂರ್ತಿ ಬುದ್ಧಯ್ಯನವರು + ತಮ್ಮ ೩ ನೆಯ ಪುಷ್ಪದ ಪ್ರಸ್ತಾವನೆಯಲ್ಲಿ ಬರೆದಿರುವುದರಿಂದ ಅವರ ಗುರುವಾದ ಶ್ರೀಸಿದ್ಧೇಶ್ವರಸ್ವಾಮಿಗಳು ಸು. ೧೩೫೦ರ ನಂತರ ಪೀಠಾಸೀನರಾಗಿದ್ದರೆಂಬುದು ನಿರ್ವಿವಾದವಾದ ವಿಷಯವಾಗಿದೆ.

## ಶ್ರೀ ಗೋಸಲಸಿದ್ಧೇಶ್ವರಸ್ವಾಮಿಗಳು.

(ಸು. ೧೩೫೦)

ಇವರು ಅಯ್ಯನಹಳ್ಳಿಯ ಪುರವರಾಧೀಶ್ವರನಾದ ಪಂಚವಕ್ತ್ರಗಣೇಶ್ವರನಿಗೆ ಲಿಂಗಧಾರಣೆಯನ್ನು ಮಾಡಿದ್ದರಿಂದ ಅವನ ವಂಶೀಯರು ಶ್ರೀಯವರಿಗೆ ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿಕೊಟ್ಟರೆಂದೂ ಅದಕ್ಕೆ 'ವಾಣಿಜ್ಯಪುರ' ಅನಂತರ 'ಹರದನಹಳ್ಳಿ' ಎಂದು ಹೆಸರಾಯಿತೆಂತಲೂ ಮತ್ತು ಶ್ರೀಸಿದ್ಧೇಶ್ವರಸ್ವಾಮಿಗಳು ಪವಾಡಪುರುಷರಾಗಿದ್ದು ಅನೇಕ ಮಹಿಮೆಗಳನ್ನು ನಡೆಯಿಸಿದರೆಂತಲೂ ನಿರಂಜನವಂಶರತ್ನಾಕರದಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ.

ಶ್ರೀ ಸಿದ್ಧೇಶ್ವರ ಸ್ವಾಮಿಗಳು ತಮ್ಮ ಶಿಷ್ಯರಾಗಿದ್ದ 'ಶ್ರೀ ಶಂಕರದೇವ'ರಿಗೆ ಜರಂತಿಗೆಯ ಪಟ್ಟವನ್ನು ಕಟ್ಟಿ ನಾವು ಯಾವದೊಂದು ವಿರಕ್ತಮೂರ್ತಿಗಳೊಂದಿಗೆ ಶಿವಗಂಗಾಕ್ಕೆ ದಯಮಾಡಿಸಿ ಅಲ್ಲಿಂದ ಈ ಕ್ಷೇತ್ರಕ್ಕೆ ಬಿಜಯಂಗೈದು ಮನೋಹರವಾದ ಅರಣ್ಯದಿಂದಲೂ ತಪೋನುಷ್ಠಾನಗಳಿಗೆ ನಿಬಾ೯ಧಕವಾದ ಅನೇಕ ಗುಹೆಗಳಿಂದಲೂ ಅಲಂಕೃತವಾದ ಈ ಪ್ರದೇಶವನ್ನು ತಮ್ಮ ಶಿವಯೋಗಕ್ಕೆ ಯೋಗ್ಯವಾಗಿ ಭಾವಿಸಿ ತಮ್ಮ ಶಿಷ್ಯರಿಗೆ ನೂರೊಂದು ಗುಹೆಗಳನ್ನು ಏರ್ಪಡಿಸಿ ಶಿವಯೋಗಾನಂದದಲ್ಲಿರುತ್ತಿದ್ದರು.

ಹೀಗಿರಲೊಂದುದಿನ ಒಬ್ಬ ಮೂರ್ತಿಗಳಿಗೆ ಮಧ್ಯರಾತ್ರಿಯಲ್ಲಿ ಅಧಿಕವಾದ ತೃಷೆಯುಂಟಾಗಿ ಅವರು ವಯೋವೃದ್ಧರಾಗಿದ್ದರಿಂದ ಗಿರಿಯ

---

+ ಶಿವಾನುಭವ ೧೯೩೫ ಡಿಶಂಬರ ಪು. ೨೯೯

ನ್ನಿಳಿದು ಕೊಳಕ್ಕೆ ಹೋಗಿ ಬರಲು ಶಕ್ತಿ ಇಲ್ಲದೆ ತಮ್ಮ ಗುರುವಾದ ಶ್ರೀ ಸಿದ್ಧೇಶ್ವರನನ್ನು ಅನನ್ಯ ಭಕ್ತಿಯಿಂದ ಧ್ಯಾನಿಸಿದರು. ಅದನ್ನು ದಿವ್ಯ ಜ್ಞಾನದಿಂದ ಅರಿತ ಸಿದ್ಧೇಶ್ವರನು ತಮ್ಮ ಕೆಲವು ಶಿಷ್ಯರೊಂದಿಗೆ ಅಲ್ಲಿಗೆ ಚಿತ್ತೈಸಿದರು. ಆ ಮೂರ್ತಿಗಳ ಸ್ಥಿತಿಯು ತೀರಾ ಉತ್ಕಟಾವಸ್ಥೆಯಲ್ಲಿದ್ದು ದರಿಂದ ಅಲ್ಲಿಗೆ ದೂರದಲ್ಲಿರುವ ಕೊಳದಿಂದ ಉದಕವನ್ನು ತಂದು ಶಿವಾರ್ಚನೆಯಂಗೈಸಿ ಜಲಪಾನಮಾಡಿಸುವ ವರೆಗೂ ತಡೆಯಲಸದಳವಾ ದ್ದರಿಂದ ಆ ಮಹಾತ್ಮರು ಶಿವನ ಜಟಾಗಂಗೆಯಂ ನೆನೆದು ತಮ್ಮ ಮೊಣ ಕಾಲಿನಿಂದ ಆಗುಹೆಯಲ್ಲಿದ್ದ ಒಂದು ಬಂಡೆಯನ್ನು ಹೊಡೆದರು. ಆಗ ಅಲ್ಲಿ ಒಂದು ತಂಬಿಗೆ ಹಿಡಿಸುವಷ್ಟು ರಂಧ್ರವುಂಟಾಗಿ ಅದರೊಳಗಿಂದ ದೇವಗಂಗೆಗೆ ಸದೃಶವಾದ ನಿರ್ಮಲ ಪವಿತ್ರೋದಕವು ಚಿಮ್ಮಿ ಹರಿಯಲಾ ರಂಭಿಸಿತು. ಒಡನೆಯೇ ಶಿಷ್ಯವೃಂದವು ಆನಂದ ತುಂದಿಲವಾಗಿ ಗುರು ದೇವನ ಮಹಿಮೆಯನ್ನು ಗಾನಮಾಡುತ್ತ ಆ ಜಲದಿಂದ ಆ ಮೂರ್ತಿಗ ಳಿಗೆ ಲಿಂಗಾರ್ಚನೆಯನ್ನು ಮಾಡಿಸಿ ತೀರ್ಥ ಸೇವನೆಯನ್ನು ಮಾಡಿಸಿದರು. ಅಲ್ಪಹೊತ್ತಿನಲ್ಲಿಯೇ ಆ ವೃದ್ಧಶಿವಯೋಗಿಯು ಶಿವಮಂತ್ರವನ್ನು ಜಪಿ ಸುತ್ತ ಆನಂದ ಬಾಷ್ಪ ಪರಿಪ್ಲುತನಾಗಿ ಗುರುದೇವನಿಗೆ ಪ್ರಣಾಮವನ್ನು ಮಾಡಿದನು.

ಶ್ರೀ ಸಿದ್ಧೇಶ್ವರಯೋಗೀಂದ್ರ ಕೃಪಾಪ್ರಭಾವದಿಂದುದ್ಭವಿಸಿದ ಕಾರಣ ಈ ಚಿಲುಮೆಗೆ 'ಸಿದ್ಧಗಂಗಾ' ಎಂಬ ಅನ್ವರ್ಥನಾಮವುಂಟಾಯಿತು. ಶ್ರೀ ಸಿದ್ಧೇಶ್ವರಯೋಗೀಂದ್ರರು ಇಲ್ಲಿಯೇ ಅನೇಕ ಕಾಲ ತಪಸ್ಸನ್ನಾ ಚರಿಸಿ ಅನಂತರ ಇದೇ ಜಿಲ್ಲಾ ಕೊರಟಗೆರೆ ಮಾರ್ಗದಲ್ಲಿರುವ ಒಂದು ಬೆಟ್ಟದಲ್ಲಿಯೂ ಗಂಗೋದ್ಭವವನ್ನು ಮಾಡಿಸಿದರು. ಆದಕ್ಕೆ ಇಂದಿಗೂ 'ಸಿದ್ಧರಬೆಟ್ಟ' ಎಂಬ ಹೆಸರು ರೂಢಿಯಲ್ಲಿದೆ.

ಈ ಎರಡು ಸ್ಥಳಗಳಲ್ಲಿಯೂ ಇಂದಿಗೂ ಶ್ರೀಸಿದ್ಧೇಶ್ವರನ ಅನುಗ್ರಹ ದಿಂದ ಮತ್ತು ಗಂಗಾಭವಾನಿಯ ಕೃಪೆಯಿಂದ ಇಲ್ಲಿ ತೀರ್ಥಸ್ನಾನ ಮಾಡಿ ದವರಿಗೆ ಬ್ರಹ್ಮಹತ್ಯಾದಿ ಮಹಾಪಾತಕಗಳೂ ಗ್ರಹಪೀಡೆ, ಕುಷ್ಠಾದಿ ರೋಗಗಳೂ ದೂರವಾಗುವುವೆಂದು ನಿರಂಜನವಂಶರತ್ನಾಕರದಲ್ಲಿ ಹೇಳುವ ಹಾಗೆ ಅನೇಕ ಭಕ್ತಾಗ್ರಣಿಗಳ ಅನುಭವದಲ್ಲಿರುತ್ತದೆ. ದೇವಿಯ ಪ್ರಸಾದದಿಂದ ಇಷ್ಟಾರ್ಥವನ್ನು ಪಡೆದ ಸಾವಿರಾರು ಭಕ್ತರು ಶ್ರೀಕ್ಷೇ ತ್ರಕ್ಕೆ ನಾನಾ ಮುಖವಾಗಿ ಸೇವೆ ಮಾಡುತ್ತಿರುವುದು ಪ್ರತ್ಯಕ್ಷ ನಿದರ್ಶನ

ವಾಗಿದೆ. "ಅಶುಚಿಯು ನಡೆದಲ್ಲಿ ಇಂದಿಗೂ ಜಲವು ಬತ್ತುತ್ತದೆ. ಮತ್ತೆ ನಿಷ್ಠೆಯಿಂದ ಸಿದ್ಧೇಶ್ವರನ ಅರ್ಚನೆಯಾಗಿ ಗಣತೃಪ್ತಿಯಾದಡೆ ಜಲವು ಮೊದಲಿನಂತೆ ಬರುವುದೇ ಇದಕ್ಕೆ ನಿದರ್ಶನ" (ನಿ. ವಂ. ರ. ಪು. ೨೭)

## ಶ್ರೀಶಂಕರದೇವರು.

(ಸು. ೧೩೨೫)

ಶ್ರೀಸಿದ್ಧೇಶ್ವರ ಸ್ವಾಮಿಗಳ ಅನಂತರ ಅವರ ಕರಕಮಲಸಂಜಾತರಾದ ಶ್ರೀಶಂಕರದೇವಸ್ವಾಮಿಗಳು ದೇಶ ಸಂಚಾರಾರ್ಥವಾಗಿ ದಯಮಾಡಿಸಿದ್ದಾಗ್ಗೆ ಈ ಬೆಟ್ಟಕ್ಕೆ ದಯಮಾಡಿಸಿ, ತಮ್ಮ ಗುರುವರ್ಯರ ಮಹಿಮೆಯಂ ಕೊಂಡಾಡಿ, ಅನೇಕ ಕಾಲ ತಪಸ್ಸನ್ನಾಚರಿಸಿ, ಅನಂತರ ಸಿದ್ಧರ ಬೆಟ್ಟಕ್ಕೆ ದಯಮಾಡಿಸಿ ಅಲ್ಲಿಯೇ ನಿರ್ವಯಲಾದರು. ಇವರ ತೋರಗದ್ದಿಗೆಯು ಸಿದ್ಧರ ಬೆಟ್ಟದಲ್ಲಿದೆ. (ನಿ. ವ. ರ. ಪು. ೩೩)

## ಶ್ರೀಗೋಸಲ ಚನ್ನಬಸವೇಶ್ವರಸ್ವಾಮಿಗಳು.

(ಸು. ೧೪೨೫)

ಶ್ರೀಶಂಕರದೇವರ ನಂತರ ಈ ಪೀಠವನ್ನಲಂಕರಿಸಿದ ಶ್ರೀದಿವ್ಯಲಿಂಗೇಶ್ವರಸ್ವಾಮಿಗಳು (ಸು. ೧೩೫೦) ಇಲ್ಲಿಗೆ ಬಂದಿರುವಂತೆ ಕಾಣುವುದಿಲ್ಲ ಇವರ ಅನಂತರ ಶ್ರೀಪೀಠಾಧಿಪತಿಗಳಾದ ಶ್ರೀಗೋಸಲಚನ್ನಬಸವೇಶ್ವರ ಸ್ವಾಮಿಗಳು ಅನೇಕ ಮಹಿಮೆಗಳನ್ನು ನಡೆಯಿಸಿ ಹರದನಹಳ್ಳಿಯಲ್ಲಿರುವಾಗ್ಗೆ "ಕೈಲಾಸದಿಂದ ಶಿವನ ಅಪ್ಪಣೆಯಂ ಪಡೆದು ಏಳ್ನೂರು ಶಿಷ್ಯರೊಡಗೂಡಿ ನಿರಂಜನಗಣೇಶ್ವರನು ನಿರಾಭಾರಿ ದೀಕ್ಷೆಯನ್ನು ಪಡೆಯಲು ಶ್ರೀಚನ್ನಬಸವೇಶ್ವರ ಸ್ವಾಮಿಗಳವರಲ್ಲಿಗೆ ಬರಲು ಅವರು ಆ ಮೂರ್ತಿಯ ವರ್ಚಸ್ಸಿನಿಂದ ಎಲ್ಲವಂ ತಿಳಿದು 'ನಿರಾಭಾರಿ ದೀಕ್ಷೆಯನ್ನಿತ್ತು ಅನಾದಿ ಸಿದ್ಧಲಿಂಗೇಶ್ವರ'ನೆಂದು ಹೆಸರಿಟ್ಟರು. 'ಸಿದ್ಧಲಿಂಗದೇಶಿಕೇಂದ್ರರು ನಡೆಸುತ್ತಿದ್ದ ಅನುಪಮ ಮಹಿಮೆಗಳನ್ನು ನೋಡಿ ಈ ಮಹಾನುಭಾವರಿಂದ ಸೇವೆಯನ್ನು ಕೈಗೊಳ್ಳಕೂಡದೆಂದು ಚನ್ನಬಸವೇಶ್ವರರು ನಿಶ್ಚೈಸಿ ತಮ್ಮ ಪಟ್ಟವನ್ನು ಸಿದ್ಧಲಿಂಗಯತಿವರರಿಗೆ ಕೊಟ್ಟು ತಾವು ಸಿದ್ಧಗಂಗೆ ಬೆಟ್ಟಕ್ಕೆ ಚಿತ್ತೈಸಿದರು. ಅಲ್ಲಿ ಕೆಲವು ಕಾಲವಿದ್ದು ಅನಂತರ ಗುಬ್ಬಿಗೆ ದಯಮಾಡಿಸಿ ಅಲ್ಲಿಯೇ ನಿರ್ವಯಲಾದರು + ಎಂದು ರಾ॥ ಸಾ॥ ಫ. ಗು. ಹಳಕಟ್ಟಿಯವರು ಬರೆದಿರುತ್ತಾರೆ.

---

+ ತೋಂಟದಾರ್ಯರ ರಗಳೆಯ ಪ್ರಸ್ತಾವನೆ.

ಗೋಸಲೆಯ ಶ್ರೀ ಚನ್ನಬಸವೇಶ್ವರಸ್ವಾಮಿಗಳು ಸಿದ್ಧಗಂಗೆ ಬೆಟ್ಟದಲ್ಲಿರುವಾಗ್ಗೆ ಗುಬ್ಬಿಯ ಪ್ರಸಿದ್ಧ ಕವೀಶ್ವರನಾದ 'ಮಲ್ಲಣಾಚಾರ್ಯ'+ ನೆಂಬ ಗಣವರನು ಶ್ರೀಯವರನ್ನು ತಮ್ಮ ಗ್ರಾಮಕ್ಕೆ ಚಿತ್ತೈಸಲು ಪ್ರಾರ್ಥಿಸಿದನು. ಶ್ರೀಯವರು ಅವರ ಪ್ರಾರ್ಥನೆಯಂತೆ ಅಲ್ಲಿಗೆ ದಯಮಾಡಿಸಿ ಅಲ್ಲಿಯೇ ನಿರ್ವಯಲಾದರು ' [ ನಿ. ವ. ರ ]

## ಶ್ರೀ ತೋಂಟದ ಸಿದ್ಧಲಿಂಗಯತೀಂದ್ರರು.

( ಸು. ೧೪೭೦. )

ವೀರಶೈವ ಇತಿಹಾಸದಲ್ಲಿ ತೋಂಟದ ಸಿದ್ಧಲಿಂಗಸ್ವಾಮಿಗಳ ಚರಿತ್ರೆ ಹಾಗೂ ಅವರ ಮಹಿಮಾ ವಿಶೇಷಗಳು ಅತ್ಯಂತ ಮಾನ್ಯವಾದವುಗಳಾಗಿವೆ. ಇವರ ವಿಷಯವಾಗಿ ವಿರಕ್ತ ತೋಂಟದಾರ್ಯನ (೧೫೬೦) ಸಿದ್ಧೇಶ್ವರ ಪುರಾಣ, ಶಾಂತೇಶನ (೧೫೬೧) ತೋಂಟದ ಸಿದ್ಧೇಶ್ವರ ಪುರಾಣ ಮತ್ತು ತೋಂಟದಾರ್ಯರ ರಗಳೆ (ಸು. ೧೭೫೦. *) ಮುಂತಾದ ಗ್ರಂಥಗಳು ಹುಟ್ಟಿವೆ. ಇವರ ವಿಷಯದಲ್ಲಿ ಕವಿಚರಿತ್ರೆಕಾರರು ಈ ರೀತಿ ಬರೆಯುತ್ತಾರೆ.

---

+ ಭಾವಚಿಂತಾರತ್ನ, ವೀರಶೈವಾಮೃತ ಪುರಾಣ ಮುಂತಾದ ಗ್ರಂಥಕರ್ತನಾದ ಗುಬ್ಬಿಯ ಮಲ್ಲಣಾರ್ಯನು ಸು. ೧೫೧೩ ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿರುತ್ತಾರೆ. ಆದ್ದರಿಂದ ಇಲ್ಲಿ ಉಕ್ತನಾದ ಮಲ್ಲಣಾಚಾರ್ಯನ ಕಾಲಕ್ಕೂ ಈತನ ಕಾಲಕ್ಕೂ ವಿಶೇಷ ಅಂತರವಾಗುತ್ತದೆ. ಆದರೆ ನಿರಂಜನ ವಂಶರತ್ನಾಕರದಲ್ಲಿ ಉಕ್ತನಾದ ಕವೀಶ್ವರ 'ಮಲ್ಲಣಾಚಾರ್ಯನು' ಮೇಲೆ ಹೇಳಿದ 'ಮಲ್ಲಣಾರ್ಯನ' ಪಿತಾಮಹನಾದ 'ಗುಬ್ಬಿಯಮಲ್ಲಣ್ಣ'ನಿರಬೇಕೆಂದು ತಿಳಿದು ಬರುತ್ತದೆ. ಏಕೆಂದರೆ ಈತನಕಾಲವು ಸು. ೧೪೭೫ ಎಂದು ಕವಿಚರಿತೆಕಾರರು ಹೇಳಿರುವುದರಿಂದಲೂ ಮತ್ತು ಈತನೂ ಸಹ ಗಣಭಾಷ್ಯರತ್ನಮಾಲೆ ಮುಂತಾದ ಗ್ರಂಥಗಳನ್ನು ಬರೆದಿರುವುದರಿಂದಲೂ 'ಕವೀಶ್ವರ'ನೆಂದು ಹೇಳಿರುವ ನಿ. ವ. ರ. ಕರ್ತನ ಉಕ್ತಿಗಳು ಸಮಂಜಸವಾಗುತ್ತವೆ. ಈತನು ಚನ್ನಬಸವೇಶ್ವರರು ಗುಬ್ಬಿಯಲ್ಲಿ ನಿರ್ವಯಲಾದ ನಂತರ ತೋಂಟದ ಶ್ರೀಸಿದ್ಧಲಿಂಗಯತೀಂದ್ರರ ಶಿಷ್ಯನೂ ಆಗಿದ್ದಂತೆ ಶಾಂತೇಶನ ಸಿದ್ಧೇಶ್ವರ ಪುರಾಣದಿಂದ ತಿಳಿದುಬರುತ್ತದೆ.

* ೧೬೭೨-೧೭೦೪ರ ವರೆಗಿದ್ದ ಚಿಕ್ಕದೇವರಾಜ ಒಡೆಯರ ಕಾಲಕ್ಕೆ ಉಂಟಾದ 'ದೇವರಾಯ ಪಟ್ಟಣ' ಎಂಬ ಗ್ರಾಮವನ್ನುಲ್ಲೇಖಿಸಿರುವುದರಿಂದ ಈತನ ಕಾಲವು ಸು. ೧೭೫೦ ಆಗಬಹುದು.

* " ಈತನಿಗೆ ತೋಂಟದ ಸಿದ್ಧಲಿಂಗಯತಿ" ಎಂಬ ಹೆಸರಿದ್ದಂತೆ ಕಂಡು ಬರುತ್ತದೆ. ಕಗ್ಗೆರೆಯ ಸಮೀಪದಲ್ಲಿರುವ ನಾಗಿಣೀ ನದಿಯ ತೀರದಲ್ಲಿ ತೋಂಟದೊಳಗೆ ಬಹಳ ಕಾಲ (೧೨ ವರ್ಷ) ಶಿವಯೋಗದಲ್ಲಿದ್ದುದರಿಂದ ಈತನಿಗೆ ' ತೋಂಟದ 'ಎಂಬ ವಿಶೇಷಣವು ರೂಢಿಯಲ್ಲಿ ಬಂದಿದೆ. ಮತ್ತು ಕುಣಿಗಲಿಗೆ ಸಮೀಪದಲ್ಲಿರುವ ಎಡೆಯೂರಲ್ಲಿ ಸಮಾಧಿಯನ್ನು ಹೊಂದಿದನು. ಆ ಊರಿನಲ್ಲಿ ಇವನ ಜ್ಞಾಪಕಾರ್ಥವಾಗಿ ಕಟ್ಟಿಸಿದ 'ಸಿದ್ಧಲಿಂಗೇಶ್ವರ' ಎಂಬ ದೇವಾಲಯವು ಈಗಲೂ ಇದೆ. ಈತನು ವೀರಶೈವರಲ್ಲಿ ಬಹಳ ಪ್ರಸಿದ್ಧನಾದ ಗುರುವಾಗಿದ್ದನು. ಈತನ ಚರಿತ್ರೆಯನ್ನು ಕುರಿತು ಹಲವು ಗ್ರಂಥಗಳು ಹುಟ್ಟಿವೆ. ಇವುಗಳಲ್ಲಿ ಈತನು ' ನಿರಂಜನ ಗಣೇಶ್ವರನ ಅಪರಾವತಾರ ಎಂದು ಹೇಳಿದೆ. ಮೇಲೆ ಹೇಳಿದ ಸಿದ್ಧಲಿಂಗೇಶ್ವರ ದೇವಾಲಯದ ಪ್ರಕಾರದಲ್ಲಿ ಸು. ೧೫೦೦ರಲ್ಲಿ ಬರೆದ ಒಂದು ಶಿಲಾಶಾಸನವಿದೆ. ಇದರಲ್ಲಿ ಈತನ ಮಹಿಮೆಯನ್ನು ವಿಶೇಷವಾಗಿ ಕೊಂಡಾಡಿ ಈತನ ಶಿಷ್ಯರು ಈತನ ಹೆಸರಿನಲ್ಲಿ ಒಂದು ಕಲ್ಲು ಮಠವನ್ನು ಎಡೆಯೂರಲ್ಲಿ ಕಟ್ಟಿಸಿದಂತೆ ಹೇಳಿದೆ. ಅದರ ಸ್ವರೂಪವು ಹೀಗಿದೆ.

" ಇತಪ್ಪನಾದಿ ಜಂಗಮನೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮವೆಂತೆಂದಡೆಃ- ಜ್ಞಾನಕ್ರಿಯಾಸ್ವರೂಪನುಂ, ಸರ್ವಾಂಗಲಿಂಗಿ, ಷಟ್‌ಸ್ಥಲಜ್ಞಾನಿ, ಸರ್ವಾಚಾರ ಸಂಪನ್ನ, ಪಾದೋದಕಪ್ರಸಾದಪ್ರತಿಷ್ಠಾಪನಾಚಾರ್ಯನುಂ, ಅಷ್ಟಾವರಣಾಲಂಕರಣದ್ವೈತಾದ್ವೈತ ತಿಮಿರ ಮಾರ್ತಾಂಡನುಂ, ಇಂತಪ್ಪ ದಿವ್ಯ ಶಿವಯೋಗಿ ಸಿದ್ಧಲಿಂಗೇಶ್ವರಂಗೆ ಸಮ್ಯಕ್‌ಜ್ಞಾನೋದಯಮಾಗಿ ಸಂಸಾರಹೇಯಮಂ ಮಾಡಿ ಶರಣುಹೊಕ್ಕ ಶಿಷ್ಯ ಜನಂಗಳ ನಾಮ ಪರಿಕ್ರಮಗಳೆಂತೆಂದೊಡೆ..."ಎಂದಿದೆ.

ಇವರು ವಿಜಯನಗರದ ರಾಜನಾದ ವಿರೂಪಾಕ್ಷನ (೧೪೬೭-೧೪೭೮) ಕಾಲದಲ್ಲಿದ್ದಂತೆ ವಿರೂಪಾಕ್ಷಪಂಡಿತಾರಾಧ್ಯನ ( ೧೫೮೪ ) ಚನ್ನಬಸವ ಪುರಾಣದಿಂದ ಊಹಿಸಬಹುದಾಗಿದೆ. ಚನ್ನಬಸವ ಪುರಾಣದಲ್ಲಿ ಇವರ ವಿಷಯವಾಗಿ ಹೀಗೆ ಹೇಳಿದೆಃ—

"..............................ಈಶಂ ನಿರಂಜನ ಗಣೇಶನೊಡನೆ "
ವರಗಣೇಶ್ವರರೇಳ್ನೂರ್ವರಂ ಕೂಡಿಕೊಂ ।

* ಕ. ಚ. ೨ ಸಂಪುಟ.

ಡಿರದೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು ।
ಪರಮ ಷಟ್‌ಸ್ಥಲವನುದ್ಧರಿಸೆಂದು ಕಳುಪಲವರೊಡಗೂಡಿ
ಭೂಮಿಗಿಳಿದು ॥

ಪರಮ ಗೋಸಲ ಚನ್ನಬಸವೇಶ್ವರನ ಹಸ್ತ ।
ಸರಸಿರುಹದಿಂದಾ ನಿರಂಜನ ಗಣೇಶ್ವರಂ ।
ಹರುಷದಿಂದೊಗೆದು ಸಿದ್ಧೇಶವ ನಾಮನಾಂತು ಕಗ್ಗೆರೆಯ
ತೋಂಟಕೈದಿ ।

ಇರೆನಂಬಿಯಣ್ಣನೆಂಬಾತನ ಶಿವಭಕ್ತಿಯಿಂ ।
ಶರಣೆಂದು ಭಿಕ್ಷಕ್ಕೆ ಬಿನ್ನವಿಸಿಕೊಂಡೀಗ ।
ತಿರುಗಿ ಬಂದಾನೆ ಕರಕೊಂಡು ಪೋದಪೆನೆಂದು ಕಗ್ಗೆರೆಗೆ
ಪೋಗಲಾಗ ॥

ಜಗಳದಿಂದೂರೊಡೆದು ಪೋಗಿ ಕೆಲ ದಿವಸಕ್ಕೆ ।
ಸುಗುಳಿ ಬಪ್ಪನ್ನೆಗಂ ತೋಂಟದೊಳಗೇನುವಂ ।
ಬಗೆಯದೆ ಶಿವಧ್ಯಾನದಿಂದೆ ಪರವಶನೈದಿರೆ ಗೆದಲೆಹುತ್ತವಿಕ್ಕೆ ॥
ಜಗವೆಲ್ಲವತಿಚೋದ್ಯದಿಂ ನೋಡಿ ಹುತ್ತವಂ ।
ಬಗಿದು ಕಂಡಾಗ ತೋಂಟದ ಸಿದ್ಧಲಿಂಗನೆಂ ।
ಜಗಣಿತ ಮಹಾಪುರುಷನೆಂದು ಪೂಜಿಸುವರೆಲೆ ಸಿದ್ಧರಾಮ
ಕೇಳು ॥ ”

ತೋಂಟದ ಸಿದ್ಧಲಿಂಗಯತಿಗಳು ನಿರಂಜನ ಜಂಗಮದ ಅಪರಾವತಾರಿಗಳೆಂದೂ ಅವರು ತೋಂಟವೊಳಗೆ ಹೋಗಿ ತಪಸ್ಸಿಗೆ ಕುಳಿತುಕೊಂಡು ಶಿವನಧ್ಯಾನದಿಂದ ಪರವಶರಾಗಲು ಅವರ ಮೇಲೆ ಹುತ್ತವು ಬೆಳೆಯಲು ಜನರು ಆಶ್ಚರ್ಯಚಕಿತರಾಗಿ ಹುತ್ತವನ್ನಗೆದು ನೋಡಲು ಮಹಾ ಮಹಿಮನಾದ ಸಿದ್ಧಲಿಂಗಯತಿಯು ಒಳಗೆ ಇದ್ದುದನ್ನು ನೋಡಿ ಇವನು ಅಗಣಿತ ಮಹಿಮಾಶಾಲಿಯೆಂದು ಜನರು ಆರಾಧಿಸ ತೊಡಗಿದರು. ಎಂಬುದೇ ಮೇಲಿನ ಪದ್ಯಗಳ ತಾತ್ಪರ್ಯವು.

ಇವರು ನಿರೂಪಿಸಿದ ‘ ಷಟ್‌ಸ್ಥಲಜ್ಞಾನ ಸಾರಾಮೃತ ’ + ಎಂಬ ವಚನವು ಬಹಳ ಮಹತ್ವವಾದುದು. ಇದರಲ್ಲಿ ಅವರು ನಿರೂಪಿಸಿದ

---

+ ಇದನ್ನು ಜಗದ್ಗುರು ಮೂರು ಸಾವಿರ ಗ್ರಂಥಮಾಲೆಯ ಸಪ್ತಮವನ್ನಾಗಿ ಶ್ರೀಮಾನ್ ಚನ್ನಮಲ್ಲಿಕಾರ್ಜುನ ಅವರು ಪ್ರಕಟಿಸಿರುತ್ತಾರೆ.

ವೇದೋಪನಿಷತ್ತುಗಳ ಹಾಗೂ ಸ್ವಾನುಭವಜನ್ಯವಾದ ವಚನಗಳಿಂದ ಅವರ ಜ್ಞಾನ ಸಂಭವಗಳ ಪರಿಧಿಯು ಸೀಮಾತೀತವಾದುದೆಂದು ಅರಿಯದಿರದು.

ಸಿದ್ಧಲಿಂಗಯತೀಂದ್ರರು ಅನೇಕ ಸ್ಥಳಗಳಲ್ಲಿ ಮಹಿಮೆಗಳನ್ನು ನಡೆಯಿಸಿರುವಂತೆ ಬಹಳವಾಗಿ ಉಲ್ಲೇಖಗಳಿವೆ. ಆದರೆ ತಮ್ಮ ಹಿರಿಯರೆಲ್ಲರೂ ಬಂದು ಅನುಷ್ಠಾನವನ್ನಾಚರಿಸಿ ಜಗದುದ್ಧಾರಕರವಾದ ಮಹಿಮೆಗಳನ್ನು ನಡೆಯಿಸಿದ ಈ ಪವಿತ್ರ ಕ್ಷೇತ್ರಕ್ಕೆ ದಯಮಾಡಿಸಿದಂತೆ ಉಲ್ಲೇಖವಿಲ್ಲದಿರುವುದು ವಿಚಾರಣೀಯವೇ ಸರಿ. ಏಕೆಂದರೆ ಈ ಗಿರಿಯಲ್ಲಿ ಶ್ರೀಸಿದ್ಧಲಿಂಗಯತೀಂದ್ರರೆಂದು ಬಹು ಕಾಲದಿಂದಲೂ ಕರೆಯಲ್ಪಡುತ್ತಿರುವ ಮನೋಹರವಾದ ಮೂರ್ತಿಯಿದೆ. ಅಲ್ಲದೆ ಈ ಬೆಟ್ಟದ ಸುತ್ತುಮುತ್ತ ಕೇವಲ ಸಮೀಪದಲ್ಲಿರುವ ಗ್ರಾಮಗಳಲ್ಲಿಯೂ ಸಹ ಇವರು ಪವಾಡಗಳನ್ನು ನಡೆಯಿಸಿದಂತೆ ತೋಂಟದಾರ್ಯರ ರಗಳೆ, ಸಿದ್ಧೇಶ್ವರ ಪುರಾಣ ಮುಂತಾದ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

"...............ತುಮಕುರಿನಲ್ಲಿ ವೈಷ್ಣವನಿಗೆ ಲಿಂಗ ।
ವೆನಿಸಿಕೊಟ್ಟು ಭಕ್ತರೂಪ ಮಾಡಿ ಮೆರೆದ ಸಿದ್ಧಲಿಂಗ ॥೪೮॥
ತಿಗುಳಗೋರ್ವಗೊಲಿದ ರಾತ್ರೆ ದೇವರಾಯಪಟ್ಟಣದಲಿ ।
ಸೊಗಯಿಪಂತೆ ತೂಬನೆತ್ತಿಕೊಟ್ಟು ಮೆರೆದ ಸಿದ್ಧಲಿಂಗ ॥೬೦॥
ಅಳಿಗೆಯೊಂದು ಮೋದನವನ್ನೈನೂರಜಂಗಮಕ್ಕೆ ತೃಪ್ತಿ ।
ಗೊಳಿಸಿ ದೇವರಾಯ ಪತ್ತನದಲಿ ಮೆರೆದ ಸಿದ್ಧಲಿಂಗ ॥೬೩॥
ಮಳೆಯು ಬರಲು ದೇವರಾಯ ಪತ್ತನದಲಿ ಭಕ್ತಜನರು ।
ಸಲಿಸುವನ್ನನಿಲಿಸಿ ಮರಳಿ ಕರೆಸಿ ಮೆರೆದ ಸಿದ್ಧಲಿಂಗ ॥೬೪॥
(ತೋಂಟದಾರ್ಯರ ರಗಳೆ)

ಈ ರೀತಿಯಾಗಿ ತುಮಕೂರು, ದೇವರಾಯಪಟ್ಟಣ ಮತ್ತು ಗೂಳೂರು ಮುಂತಾದ ಇಲ್ಲಿಗೆ ಸಮೀಪದಲ್ಲಿರುವ ಗ್ರಾಮಗಳಲ್ಲಿ ಅವರು ಮಹಿಮೆಗಳನ್ನು ನಡೆಯಿಸಿರುವರೆಂದ ಮೇಲೆ ಅವರು ಇಲ್ಲಿಯೇ ಅನೇಕ ಕಾಲ ತಪಸ್ಸನ್ನಾಚರಿಸಿರಬೇಕೆಂಬುದು ವ್ಯಕ್ತವಾಗುತ್ತದೆ.

ಇದಕ್ಕೆ ನಿದರ್ಶನವಾಗಿ ರಗಳೆಯಲ್ಲಿನ ಉಲ್ಲೇಖಕ್ಕೆ ಸರಿಯಾದ ಆಧಾರಗಳೂ ಇಲ್ಲಿ ದೊರೆಯುತ್ತವೆ. ರಗಳೆಯಲ್ಲಿ ಉಕ್ತವಾದ 'ದೇವ

ರಾಯಪಟ್ಟಣ' ಎಂಬ ಗ್ರಾಮವು ಸಿದ್ಧಗಂಗೆ ಬೆಟ್ಟಕ್ಕೆ ನೈಋತ್ಯದಲ್ಲಿ ಸುಮಾರು ಒಂದೂವರೆ ಫರ್ಲಾಂಗು ದೂರದಲ್ಲಿದೆ. ಇದು ಹಿಂದೆ ಪ್ರಸಿದ್ಧವಾದ ಒಂದು ಪಾಳೆಯಗಾರರ ರಾಜಧಾನಿಯಾಗಿದ್ದಂತೆ ತಿಳಿದುಬರುತ್ತದೆ. ಇದಕ್ಕೆ ಸುಮಾರು ೯-೫ ಮೈಲು ದೂರದಲ್ಲಿರುವ ದೇವರಾಯನ ದುರ್ಗದಲ್ಲಿದ್ದ ಪಾಳೆಯಗಾರರನ್ನು ಮೈಸೂರಿನ ಚಿಕ್ಕದೇವರಾಜ ಒಡೆಯರವರು (*1673-1704*) ಸೋಲಿಸಿ ಆ ದುರ್ಗವನ್ನು ತಮ್ಮ ವಶಪಡಿಸಿಕೊಂಡರೆಂತಲೂ ಅಂದಿನಿಂದ ಅದಕ್ಕೆ 'ದೇವರಾಯನದುರ್ಗ' ಎಂಬ ಹೆಸರು ರೂಢಿಯಲ್ಲಿ ಬಂದಿತೆಂತಲೂ ಮೈಸೂರು ವಿದ್ಯಾ ಇಲಾಖೆಯವರು ಪ್ರಕಟಿಸಿರುತ್ತಾರೆ. § ಆದುದರಿಂದ ಈ ಗ್ರಾಮವೂ ಸಹ ಅದೇ ಪಾಳಯಗಾರರ ನಗರವಾಗಿದ್ದುದರಿಂದ ಇದೂ ಚಿಕ್ಕ ದೇವರಾಜ ಒಡೆಯರವರ ಪರವಾಗಿ ದೇವರಾಯಪಟ್ಟಣವೆಂಬ ಹೆಸರನ್ನು ಪಡೆದಿರಬೇಕೆಂದು ಸಿದ್ಧವಾಗುತ್ತದೆ. ಇಂದಿಗೂ ಆ ಗ್ರಾಮದಲ್ಲಿ 'ಅರಮನೆಯ ಗುಂಡು' ಎಂಬ ಸ್ಥಳವಿದೆ. ಇಲ್ಲಿ ಹಿಂದೆ ಪಾಳೆಯಗಾರರ ಕೋಟೆಯಿದ್ದು ವೈಭವನಗರವಾಗಿದ್ದಿತೆಂಬುವಕ್ಕೆ ಅಳಿದುಳಿದಿರುವ ಕೋಟೆ ಕೊತ್ತಲುಗಳ ಕುರುಹುಗಳು ಹೇರಳವಾಗಿ ದೊರೆಯುತ್ತವೆ. ಹಿಂದೆ ನಡೆದ ಈ ವಿಷಯವನ್ನು ಇತ್ತೀಚಿನ ಕವಿಯಾದ ರಗಳೆಯಗಾರನು ಇದನ್ನುಲ್ಲೇಖಿಸಿರುವುದು ಸಮಂಜಸವೆನಿಸುತ್ತದೆ.

ಈ ಗ್ರಾಮದ ಕೆರೆಯ ಹಿಂಗಡೆಯಲ್ಲಿ ಒಂದು ಮಠವಿದೆ. ಇದಕ್ಕೆ 'ಶಾಂತವೀರಸ್ವಾಮಿಮಠ' ವೆಂಬ ಹೆಸರಿದ್ದು ಅದರಲ್ಲಿದ್ದ ಮೂರ್ತಿಗಳು ಮಹಿಮಾಶಾಲಿಗಳಾಗಿದ್ದರೆಂದು ಹೇಳುತ್ತಾರೆ. ಈಗ ಅಲ್ಲಿ ಯಾರೂ ಇರುವುದಿಲ್ಲ. ಇವರ ವಿದ್ಯಮಾನವನ್ನು ಗಮನಿಸಿದಲ್ಲಿ ನಿಜವಾಗಿಯೂ ತೋಂಟದಾರ್ಯರ ರಗಳೆಯಲ್ಲಿ ವರ್ಣಿಸಿರುವಂತೆ ಸಿದ್ಧಲಿಂಗಯತೀಂದ್ರರು ಈ ಸ್ಥಳವಲ್ಲಿ ಅನುಷ್ಠಾನ ಮಾಡಿರಬೇಕೆಂದು ವ್ಯಕ್ತವಾಗುತ್ತದೆ.

ಈ ಮಠದ ಮಧ್ಯದಲ್ಲಿ ನಾಲ್ಕು ಸ್ತಂಭಗಳಿಂದ ನಿರ್ಮಿತವಾದ ಒಂದು ಮಂಟಪವಿದೆ ಅದರ ಮಧ್ಯದಲ್ಲಿ ಸುಮಾರು ಎರಡು ಅಡಿ ಚದರವುಳ್ಳ ಒಂದು ಕೂಪವಿದೆ. ಅದರಲ್ಲಿನ ಗಂಗೆಯು ಪರಿಶುದ್ಧವಾಗಿ ಆಪ್ಯಾಯಮಾನವಾಗಿದೆ. ಸ್ತಂಭಗಳಲ್ಲಿನ ಪ್ರತಿಮೆಗಳು ಅಮೂಲ್ಯವಾದ ಚಾರಿತ್ರಿಕ ವಿಷಯಗಳನ್ನು ನೆನಪಿಗೆ ತಂದುಕೊಡುತ್ತವೆ. ಆಜ್ಞೇಯಕ್ಕೆ

§ ಮೈಸೂರು ಕೈಪಿಡಿ ಪುಟ ೬೫

ರುವ ಸ್ತಂಭದಲ್ಲಿ ಶ್ರೀಸಿದ್ಧಲಿಂಗಯತೀಂದ್ರರು ಶಿವಾರ್ಚನೆಗೆ ಮುಹೂರ್ತ ಮಾಡಿಸಿದ್ದ ಪ್ರತಿಮೆಯಿದೆ. ಅದು ಎಡೆಯೂರಲ್ಲಿ ಸಮಾಧಿಯಲ್ಲಿ ಧ್ಯಾನ ಮಗ್ನರಾಗಿ ಮಂಡಿಸಿರುವ ಸಿದ್ಧಲಿಂಗೇಶ್ವರನ ಭಾವಚಿತ್ರವನ್ನು ಸಂಪೂರ್ಣ ಹೋಲುವಂತಿದೆ. ಅದರ ಕೆಳಗಡೆಯಲ್ಲಿ ಈರ್ವರು ದಂಪತಿಗಳು ವಂದನಾ ಮುದ್ರೆಯಿಂದ ನಿಂತಿರುವ ಪ್ರತಿಮೆಗಳಿವೆ. ಇವು ಆ ಸಮಯಕ್ಕೆ ಆ ಗ್ರಾಮದ ಅಧಿಪತಿಗಳಾಗಿದ್ದವರೆಂದು ಊಹಿಸಬಹುದಾಗಿದೆ. ಹಾಗೆಯೇ ಈಶಾನ್ಯದ ಸ್ತಂಭದಲ್ಲಿಯೂ ಸಿದ್ಧಲಿಂಗೇಶ್ವರನ ಪ್ರತಿಮೆಯು ಮನೋಹರ ವಾಗಿ ಕೆತ್ತಲ್ಪಟ್ಟಿದೆ. ಇವರ ಶಿಷ್ಯರಲ್ಲೊಬ್ಬರಾದ ಶಾಂತವೀರಸ್ವಾಮಿ ಗಳೇ ಈ ಮಠದಲ್ಲಿದ್ದು ನಿರ್ವಯಲಾಗಿರಬೇಕೆಂದು ಹೇಳಬಹುದಾಗಿದೆ.

ಶ್ರೀಸಿದ್ಧಲಿಂಗಯತೀಂದ್ರರ ನಂತರ ಅವರ ಶಿಷ್ಯರಾದ ಅನೇಕ ಶಿವ ಯೋಗಿಗಳು ಇಲ್ಲಿ ಅನುಷ್ಠಾನ ಮಾಡಿಕೊಂಡಿದ್ದಂತೆ ತಿಳಿದು ಬರುತ್ತದೆ. ಆದರೆ ಅವರ ಚರಿತ್ರೆಗಳು ಅಷ್ಟಾಗಿ ತಿಳಿದುಬಂದಿಲ್ಲ. ಸು. ೧೫೫೦ ರ ಆನೇಗೊಂದಿ ಸಂಸ್ಥಾನದಿಂದ 'ಶ್ರೀ ಹುಚ್ಚುವೀರಸ್ವಾಮಿ'ಗಳೆಂಬುವರು ಇಲ್ಲಿಗೆ ದಯಮಾಡಿಸಿ ಈ ಬೆಟ್ಟದಲ್ಲಿ ಅನುಷ್ಠಾನ ಮಾಡುತ್ತಿದ್ದಂತೆ ತಿಳಿ ದುಬರುತ್ತದೆ. ಅದಕ್ಕೆ ಇಂದಿಗೂ 'ಗವಿಮಠ' ಎಂದು ಹೆಸರಿದೆ. ಆಗ್ಗೆ ಅವರ ಶಿಷ್ಯರಾದ ಆನೇಗೊಂದಿ ಅರಸರು + ದರ್ಶನಾರ್ಥವಾಗಿ ಇಲ್ಲಿಗೆ ಬಂದಿದ್ದು ಇಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟಂತೆ ತಿಳಿದು ಬರುತ್ತದೆ. ಆ ಮಠವು 'ಹಳೆಯ ಮಠ'ವೆಂದು ಕರೆಯಲ್ಪಡುತ್ತಿದೆ. ಅಂದಿನಿಂದ ಸ್ವಾಮಿಗಳು ಈ ಮಠದಲ್ಲಿಯೇ ಇರತೊಡಗಿದರು.

## ಶ್ರೀಮಲ್ಲಿಕಾರ್ಜುನಸ್ವಾಮಿಗಳು.

(ಸು. ೧೬೭೫)

ಇವರ ನಂತರ ಶ್ರೀಮಲ್ಲಿಕಾರ್ಜುನಸ್ವಾಮಿಗಳೆಂಬುವರು ಇಲ್ಲಿ ಆಶ್ರ ಮವನ್ನು ಪಡೆದಿದ್ದಂತೆ ತಿಳಿದುಬರುತ್ತದೆ. ಇವರ ಕಾಲದಲ್ಲಿ ಮೈಸೂ ರಿನ ಚಿಕ್ಕದೇವರಾಜ ಒಡೆಯರವರು ಇಲ್ಲಿಗೆ ಸಮೀಪದಲ್ಲಿರುವ ದೇವರಾ ಯನ ದುರ್ಗಕ್ಕೆ ಬಂದಿದ್ದು ಆ ದುರ್ಗವನ್ನು ವಶಪಡಿಸಿಕೊಂಡು ದೇವ ರಾಯಪಟ್ಟಣದಲ್ಲಿರುವಾಗ್ಗೆ ಶ್ರೀಯವರನ್ನು ಸಂದರ್ಶಿಸಿ ಗಂಗಾದೇವಿಯ

+ ಆನೆಗುಂದಿ ಸಂಸ್ಥಾನದಲ್ಲಿ ವೀರಶೈವರಾಜರು ಬಹಳ ಕಾಲದಿಂದಲೂ ಆಳುತ್ತಿದ್ದರೆಂದು, ವಿಜಯನಗರದ ಕೃಷ್ಣದೇವರಾಯನು ಅವರನ್ನು ಜಯಿಸಿ ತನ್ನ ಸ್ವಾಧೀನಪಡಿಸಿಕೊಂಡಂತೆ ಆಂಧ್ರ ಚರಿತ್ರಕಾರರು ಬರೆಯುತ್ತಾರೆ.

ಅನುಗ್ರಹದಿಂದ ತಮ್ಮ ಇಷ್ಟಾರ್ಥ ಸಿದ್ಧಿಯಾದುದರ ಜ್ಞಾಪಕಾರ್ಥವಾಗಿ ಬೆಟ್ಟದಮೇಲೆ ದೇವಾಲಯವನ್ನು ಕಟ್ಟಿಸಿ ಶ್ರೀಸಿದ್ಧಲಿಂಗೇಶ್ವರ ಪ್ರತಿಷ್ಠೆಯನ್ನು ಮಾಡಿಸಿದರೆಂದೂ ಮತ್ತು ದೇವಿಯ ಅರಿಸಿನ ಕುಂಕುಮ ಅರ್ಚನೆಗಳಿಗಾಗಿ ಒಂದು ಜೋಡಿ ಗ್ರಾಮವನ್ನು ಸಹ ಕೊಟ್ಟದ್ದರೆಂದೂ ಪ್ರತೀತಿಯಿದೆ.

ಇವರ ಅನಂತರ ಅವರ ಶಿಷ್ಯರಾದ ೨ನೆಯ ಮಲ್ಲಿಕಾರ್ಜುನಸ್ವಾಮಿಗಳೆಂಬುವರು, ಗುರುಸಿದ್ಧಸ್ವಾಮಿಗಳು ರುದ್ರಸ್ವಾಮಿಗಳು ಮತ್ತು ಸಿದ್ಧಲಿಂಗಸ್ವಾಮಿಗಳು ಕ್ರಮವಾಗಿ ಇಲ್ಲಿ ಆಶ್ರಮವನ್ನು ಪಡೆದಿದ್ದಂತೆ ತಿಳಿದುಬರುತ್ತದೆ. ಇವರಲ್ಲಿ ಕೆಲವರು ಆತ್ಮಶಕ್ತಿಯಲ್ಲಿ ಸ್ವಲ್ಪ ಹಿಂದುಳಿದಿದ್ದುದರಿಂದ ಇಲ್ಲಿಗೆ ನಡೆಯುತ್ತಿದ್ದ ಮರ್ಯಾದೆಗಳು ಕ್ರಮವಾಗಿ ಲುಪ್ತವಾದಂತೆ ತಿಳಿದುಬರುತ್ತದೆ.

## ಅಟವೀ ಸ್ವಾಮಿಗಳು.

ಮೇಲ್ಕಂಡ ಸಿದ್ಧಲಿಂಗಸ್ವಾಮಿಗಳ ಕಾಲದಲ್ಲಿ ಅಟವೀಸ್ವಾಮಿ ಮತ್ತು ಮುಪ್ಪಿನ ಸ್ವಾಮಿಗಳೆಂಬ ಶಿವಯೋಗಿಗಳು ಸು. ೧೮೫೦ ರಲ್ಲಿ ಶ್ರೀಶೈಲದಿಂದ ಇಲ್ಲಿಗೆ ದಯಮಾಡಿಸಿದರು. ಅವರು ಮಹಾ ತಪಸ್ವಿಗಳಾಗಿದ್ದು ಇಲ್ಲಿಯೇ ಅನುಷ್ಠಾನ ಮಾಡಲಿಕ್ಕೆ ಆರಂಭಿಸಿದರು. ಅಟವೀಸ್ವಾಮಿಗಳ ಯೋಗಶಕ್ತಿಯ ಪ್ರಭಾವವು ಕ್ರಮಕ್ರಮವಾಗಿ ಜನಮನದಲ್ಲಿ ಮೂಡಿ ಮೊಳೆಯಲಾರಂಭಿಸಿತು. ಅದು ಭಕ್ತಿ ತ್ಯಾಗರೂಪವಾಗಿ ಪರಿಣಮಿಸಿ ಶ್ರೀಯವರಿಗೆ ನಾನಾ ಮುಖವಾಗಿ ಸಹಾಯ ಮಾಡಲನುವಾಯಿತು. ಶ್ರೀಯವರು ಸಿದ್ಧಲಿಂಗೇಶ್ವರ ಹಾಗೂ ಗಂಗಾದೇವಿಯ ಸೇವೆಗಾಗಿ ಬರತಕ್ಕ ಭಕ್ತಾದಿಗಳಿಗೆ 'ದಾಸೋಹ'ವನ್ನೇರ್ಪಡಿಸಿದ್ದರು. ಇವರ ಆದರ್ಶ ಜೀವನ ಮತ್ತು ಶಿವಯೋಗವನ್ನರಿತ ಭಕ್ತವೃಂದವು ತಂಡೋಪತಂಡವಾಗಿ ಆರಾಧಿಸತೊಡಗಿತು. ಗುಬ್ಬಿ ಮತ್ತು ತೊಟ್ಟಿಲಕೆರೆ ಮುಂತಾದ ಗ್ರಾಮಗಳಲ್ಲಿಯೂ ಇವರು ವಿಶೇಷಾನುಷ್ಠಾನ ಮಾಡಿದಂತೆ ತಿಳಿದುಬರುತ್ತದೆ.

ಭಕ್ತಾದಿಗಳ ಈ ತೆರನಾದ ಸಹಾಯದಿಂದ ಶ್ರೀಯವರು ದಾಸೋಹದ ಜೊತೆಗೆ ವಿದ್ಯಾದಾನವೂ ಶ್ರೇಯಸ್ಕರವೆಂದು ಭಾವಿಸಿ ಒಂದು **'ವೇದಪಾಠಶಾಲೆ'**ಯನ್ನು ಏರ್ಪಡಿಸಿದ್ದಂತೆ ತಿಳಿದುಬರುತ್ತದೆ. ಮತುಕೂರು ನಂಜುಂಡಶಿವಯೋಗಿಗಳು (೧೮೯೩) 'ಅಟವೀಶಭಕ್ತಿಸಾರ' ಮತ್ತು 'ಅಟವೀಶ ಚರಿತ್ರೆ' ಎಂಬ ಗ್ರಂಥಗಳನ್ನು ಬರೆದಿರುತ್ತಾರೆ. ಇವರು ಸ್ಥಾಪಿ

ಸಿದ್ಧ ವೇದಪಾಠಶಾಲೆಯು ಅಧ್ಯಾಪಕರ ಔದಾಸೀನ್ಯದಿಂದ ಕೆಲವು ವರ್ಷಗಳಲ್ಲಿಯೇ ನಿಂತುಹೋಯಿತು. ಶ್ರೀಯವರು ೧೯೦೩ ನೆಯ ವರ್ಷದಲ್ಲಿ ತೊಟ್ಟಿಲಕೆಯ ಮಠದಲ್ಲಿ ಲಿಂಗೈಕ್ಯರಾದರು.

## ಶ್ರೀ. ನಿ. ಉದ್ಧಾನಸ್ವಾಮಿಗಳು.

ಶ್ರೀ ಅಟವೀಸ್ವಾಮಿಗಳ ಅನಂತರ ಅವರ ಸೇವಾ ನಿರತರಾಗಿಯೂ ಮುಖ್ಯ ಶಿಷ್ಯರಾಗಿಯೂ ಇದ್ದ ಶ್ರೀ॥ ನಿ॥ ಉದ್ಧಾನಸ್ವಾಮಿಗಳವರು ಈ ಮಠದ ಆಧಿಪತ್ಯವನ್ನು ಸ್ವೀಕರಿಸಿದರು ಆ ಸಮಯದಲ್ಲಿ ಮಠವು ಬಹಳ ಕ್ಷೀಣಸ್ಥಿತಿಯಲ್ಲಿದ್ದಿತು. ಮಹಾ ಸ್ವಾಮಿಯವರ ಅವಿಶ್ರಾಂತ ಪರಿಶ್ರಮ, ಸರ್ವಸಮತಾ ಬುದ್ಧಿ, ಭೂತದಯ ಹಾಗೂ ಆತ್ಮಶಕ್ತಿಯ ಬಲದಿಂದ ಅನೇಕ ತೊಡರುಗಳೊದಗಿದರೂ ಮಠದ ಅಭಿವೃದ್ಧಿಯು ಕ್ರಮಕ್ರಮವಾಗಿ ಆಗತೊಡಗಿತು. ದಾಸೋಹದ ವ್ಯವಸ್ಥೆಯು ಮೊದಲಿಗಿಂತಲೂ ಅತಿಶಯವಾಗಿ ನಡೆಯಲಾರಂಭಿಸಿತು. ಶ್ರೀಯವರ ಪರೋಪಕಾರಶೀಲತೆಯು ಕೀರ್ತಿಲತೆಯು ನಾನಾ ಮುಖವಾಗಿ ವ್ಯಾಪಿಸಿತು. ಅವರು ಪ್ರತಿವರ್ಷವೂ ಮಹಾ ಶಿವರಾತ್ರಿಯ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ರಥೋತ್ಸವವನ್ನು ಏರ್ಪಡಿಸಿರುದಲ್ಲದೆ, ಆ ಸಮಯದಲ್ಲಿ ಒಂದು ದನಗಳ ಜಾತ್ರೆಯನ್ನೂ ಸಹ ನಡೆಯುವಂತೆ ಮಾಡಿದ್ದಾರೆ. ಆ ಸಮಯಕ್ಕೆ ಸೇರುವ ೨೦--೩೦ ಸಹಸ್ರ ಪ್ರಜೆಗಳಿಗೆ ಜಾತ್ರೆ ಮುಗಿಯುವ ವರೆಗೂ(೭-೮ ದಿನಗಳು) ಮಠದಿಂದಲೇ 'ದಾಸೋಹ' ನಡೆಯುವುದು. ಈದೃಶ್ಯವು ಆಶ್ಚರ್ಯಕರವಾಗಿದೆ.

ಇದಲ್ಲದೆ ಪ್ರತಿನಿತ್ಯವೂ ಗಂಗಾದೇವಿಗೆ ಬರತಕ್ಕ ಆರಾಧನೆಗೆ ನೂರಾರು ಭಕ್ತಾದಿಗಳೂ ಅನೇಕ ಅನಾಥರೂ ಶ್ರೀ ಮಠದಲ್ಲಿಯೇ ಪ್ರಸಾದ ಸ್ವೀಕಾರಮಾಡುವರೆಂಬುದು ಅವರ್ಣನೀಯವಾಗಿದೆ.

## ವಿದ್ಯಾಲಯ

ಹೀಗೆ ಕ್ಷೇತ್ರವು ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಿರಲು ಶ್ರೀಯವರು, ಅನೇಕ ತತ್ತ್ವದರ್ಶಿಗಳೂ ಭಾಷ್ಯಕಾರರೂ ಕವಿ ಶ್ರೇಷ್ಠರೂ ಅವತರಿಸಿ ಮಹೋನ್ನತಶಿಖರವನ್ನೇರಿದ್ದ ಈ ವೀರಶೈವ ಸಮಾಜದಲ್ಲಿ ಧಾರ್ಮಿಕ ವಿದ್ಯೆಯು ಲುಪ್ತವಾಗುತ್ತಿರುವುದನ್ನೂ ಸಮಾಜವು ನಾಗರಿಕ ಜನಾಂಗದೊಡನೆ ಧಾವಿಸಿ ಪ್ರತಿಷ್ಠಿತವಾಗಬೇಕಾದರೆ ಧಾರ್ಮಿಕ ವಿದ್ಯಾಭ್ಯಾ

ಸವು ಅತ್ಯವಶ್ಯವೆಂಬುದನ್ನೂ ಪರಾಂಬರಿಸಿ ಸನ್ ೧೯೧೭ರಲ್ಲಿ 'ಶ್ರೀಸಿದ್ಧ ಲಿಂಗೇಶ್ವರವೇದ ಮತ್ತು ಸಂಸ್ಕೃತಪಾಠಶಾಲೆಯನ್ನು ಸ್ಥಾಪಿಸಿದರು. ಮತ್ತು ಅನೇಕ ಬಡ ವಿದ್ಯಾರ್ಥಿಗಳಿಗೆ ಅಶನವಸನಾದಿ ಸೌಕರ್ಯಗಳನ್ನು ಏರ್ಪ ಡಿಸಿದರು.

ಅನಂತರ ಶ್ರೀಸ್ವಾಮಿಗಳವರು ಪಾಠಶಾಲೆಯು ಸುಸೂತ್ರವಾಗಿ ನಡೆಯಲು ಮೇಧಾವಿಗಳೂ, ನಿಷ್ಠಾಪರರೂ, ಸುಶೀಲರೂ ಆದ ಶ್ರೀ॥ ಮರುಳಾರಾಧ್ಯರೆಂಬ ಮೂರ್ತಿಗಳಿಗೆ ಆಶ್ರಮವನ್ನಿತ್ತು ಅವರಿಗೆ ಪಾಠಶಾ ಲೆಯ ವ್ಯವಸ್ಥೆಯನ್ನೊಪ್ಪಿಸಿದರು. ಶ್ರೀ॥ ಸಿ॥ ಮರುಳಾಚಾರ್ಯಸ್ವಾಮಿಗ ಳವರು ಇನ್ನೂ ಚಿಕ್ಕ ವಯಸ್ಸಿನಲ್ಲಿದ್ದರೂ ಅವರಲ್ಲಿದ್ದ ವಿದ್ಯಾಶಕ್ತಿ ಕವಿ ತಾಶಕ್ತಿ ಮುಂತಾದ ಸುಗುಣಗಳು ಅನ್ಯಾದೃಶವಾಗಿದ್ದವು. ಅವರ ನಿರಂ ತರ ಉದ್ಯಮದಿಂದ ಪಾಠಶಾಲೆಯು ಶುಕ್ಲಪಕ್ಷದ ಚಂದ್ರಮನಂತೆ ಬೆಳೆ ಯಲಾರಂಭಿಸಿತು. ಪಾಠಶಾಲೆಯ ಏಳ್ಗೆಯನ್ನು ಶ್ರೀಮನ್ಮಹಾರಾಜಾ ಸರ್ಕಾರದವರು ಪರಾಂಬರಿಸಿ ಮೊದಲು ೧೦ ರೂಪಾಯಿಗಳಂತೆ ಮಂಜೂರು ಮಾಡಿದ್ದ ಗ್ರ್ಯಾಂಟನ್ನು ಕ್ರಮಕ್ರಮವಾಗಿ ಹೆಚ್ಚಿಸಿದ್ದರು. ಆದರೆ ಇಷ್ಟರಲ್ಲೆ ದೈವಯೋಗದಿಂದ ಶ್ರೀ॥ ಸಿ॥ ಮರುಳಾಚಾರ್ಯ ಸ್ವಾಮಿ ಗಳು (೩೦-೧-೧೯೩೦) ರಲ್ಲಿ ವೃತ್ಯುವಿನ ಆಗ್ರಹದಿಂದ ಲಿಂಗೈಕ್ಯರಾ ದುದು ಈ ಸಂಸ್ಥೆಯ ಮತ್ತು ಸಮಾಜದ ದುರ್ದೈವವೇ ಸರಿ. ಅವರ ವಿದ್ಯಾವಿನಯ ಗುಣಶೀಲಸ್ವಭಾವಗಳು ಲೋಕೋತ್ತರಗಳಾಗಿದ್ದವು.

ಅನಂತರ ಶ್ರೀಗಳವರು ಬಾಲ್ಯದಿಂದಲೂ ವಿಲಕ್ಷಣ ತೇಜಸ್ಸಿನಿಂ ದಲೂ ವಿನಯಾದಿ ಸುಗುಣಗಳಿಂದಲೂ ಮಂಡಿತರಾಗಿದ್ದು ಆಗ ತಾನೆ *B. A.* ಪರೀಕ್ಷೆಗೆ ಕೂತಿದ್ದ ಶ್ರೀಶಿವಕುಮಾರಸ್ವಾಮಿಗಳವರಿಗೆ ೩-೩-೧೯೩೦ ಸೋಮವಾರದಲ್ಲಿ ಅತ್ಯಂತ ವೈಭವದಿಂದ ಆಶ್ರಮವನ್ನಿತ್ತರು.

ಆಶ್ರಮ ಸ್ವೀಕಾರ ಮಾಡಿದ ನಂತರ ಇವರು ಅಚಿರದಲ್ಲೆ ಸಂಸ್ಕೃತ ವನ್ನೂ ಅಭ್ಯಾಸ ಮಾಡಿ ಉಭಯ ಭಾಷಾ ತತ್ವವೇತ್ತರ ಅಮೂಲ್ಯತತ್ತ್ವ ಗಳನ್ನವಲೋಕಿಸುತ್ತ ಆದರ್ಶಜೀವನವನ್ನು ನಡೆಯಿಸತೊಡಗಿದ್ದಾರೆ. ಅವರು ಲೌಕಿಕ ಪ್ರಪಂಚದಲ್ಲಿ ಸ್ವತಂತ್ರವಾಗಿ ಉನ್ನತ ಸ್ಥಾನಮಾನಗ ಳನ್ನು ಪಡೆದು ಬಾಳುವ ಸುಯೋಗವಿದ್ದರೂ ಪವಿತ್ರವೂ ಪರೋಪಕಾರ ಪ್ರದವೂ ಪಾರಲೌಕಿಕಸುಖಪ್ರದವೂ ಆದ ಇಂತಹ ಲೋಕೋತ್ತರ ಕರ್ಮ

ವನ್ನೆಸಗಲು ಬದ್ಧಕಂಕಣರಾದರು. "*Karma-yoga therefore is a system of ethics and religion intended to attain freedom through unselfishness, and by good works*"

ಎಂದರೆ "ಕರ್ಮಯೋಗದಲ್ಲಿ ನೀತಿತತ್ವಗಳೂ ಧರ್ಮತತ್ವಗಳೂ ಸುಖಕರವಾಗಿ ಹೊಂದಿಕೊಂಡಿರುತ್ತವೆ. ನಿಸ್ವಾರ್ಥ ಬುದ್ಧಿಯಿಂದಲೂ ಸತ್ಕರ್ಮಗಳಿಂದಲೂ ಸ್ವಾತಂತ್ರ್ಯವನ್ನು ಸಂಪಾದಿಸಿಕೊಡುವುದೇ ಕರ್ಮಯೋಗದ ಉದ್ದೇಶವು" ಎಂಬ ವಿವೇಕಾನಂದ ಸ್ವಾಮಿಗಳ 'ಕರ್ಮಯೋಗ'ದ ರಹಸ್ಯವನ್ನು ಬಲ್ಲವರಲ್ಲವೆ ಇಂತಹ ಕಾರ್ಯದಲ್ಲಿ ತೊಡಗಬೇಕು! ಐಹಿಕಸುಖಗಳ ಬಲಿದಾನವನ್ನು ಮಾಡಿ ಅಜ್ಞಾನದಿಂದಲೂ ಅನಶನದಿಂದಲೂ ಸಂತಪ್ತರಾದ ಅಸಂಖ್ಯ ಜೀವಿಗಳನ್ನು ಉದ್ಧಾರಮಾಡುವ ಸುಯೋಗವು ಎಷ್ಟು ಜನರಿಗೆ ಲಭ್ಯವಾಗಬಹುದು! ವೈದಿಕ ಲೌಕಿಕ ಭಾಷಾಪ್ರವೀಣರೂ ಸರ್ವಸಮತಾವಾದಿಗಳೂ ಧರ್ಮನಿಷ್ಠರೂ ಕರ್ಮವಿದರೂ ಆದ ಸ್ವಾಮಿಗಳು ಭರತಖಂಡದಲ್ಲಿ ಅತ್ಯಲ್ಪವಾಗಿದ್ದಾರೆ. ನಮ್ಮ ನಾಡಿನ ಮಠಗಳು ಪ್ರಾಚೀನಕಾಲದ ವಿದ್ಯಾವೈಭವಶಿಖರವನ್ನಿಂದು ಪಡೆಯಬೇಕಾಗಿದ್ದರೆ ಇಂತಹ ಮಹನೀಯರ ಅನ್ಯಾದೃಶ ತ್ಯಾಗವು ಅತ್ಯವಶ್ಯಕ. ಇವರ ನಿರಂತರ ಪರಿಶ್ರಮದಿಂದ ಪಾಠಶಾಲೆಯು ಎಷ್ಟೋ ಉನ್ನತಿಯನ್ನು ಪಡೆದು (ಮೈಸೂರು ಗೌರ್ನಮೆಂಟಿನವರಿಂದ 'ಸಂಸ್ಕೃತ ಕಾಲೇಜ' ಎಂದು ಅಂಗೀಕೃತವಾಗಿದೆ.) ಕನ್ನಡಿಗರು ಒಮ್ಮೆಯಾದರೂ ಈ ಕ್ಷೇತ್ರದರ್ಶನಮಾಡಿ ಕೃತಾರ್ಥರಾಗಲಿ.

ಇತಿ ಶಿವಮ್

## ಶ್ರೀ ಸಿದ್ಧಗಂಗಾ ಕ್ಷೇತ್ರಮ್.

ದೇವಗಿರಿ ಮಹಾರಣ್ಯೇ ಶ್ರೀರಾಮಗಿರಿ ಸನ್ನಿಧೌ ।
ಕಕುದ್ಗಿರಿ ಪುರೋಭಾಗೇಽಸಿದ್ಧಗಂಗಾ ಮಹಾಗಿರಿಃ ॥ ೧ ॥
ಪುಣ್ಯಭೂರುಹ ಸಂತಾನೈರ್ಗಗನೋಲ್ಲೇಖಿ ಶಾಖಿಭಿಃ ।
ತಪೋನುಷ್ಠಾನಯೋಗ್ಯಾಭಿರ್ಗುಹಾಭಿಶ್ಚ ಮನೋಹರಃ ॥ ೨ ॥
ಗೌತಮೇನ ಮುನೀಂದ್ರೇಣ ಕೃತಾಶ್ರಮಸದೋಮಹಾ ।
ಗೋಹತ್ಯಾಪಾಪ ಶಾಂತ್ಯರ್ಥಂ ಶಿವಾರಾಧನ ಕಾಂಕ್ಷಿಣಾ ॥ ೩ ॥
ಗೋಸಲಾ ಸಿದ್ಧದೇವಾದಿ ಶಿವಯೋಗೀಂದ್ರಪುಂಗವೈಃ ।

ಶ್ರೀ ಚನ್ನಬಸವೇಂದ್ರೈಶ್ಚ ಪವಿತ್ರೀಕೃತಪಾನುವರ್ಾ ॥ ೪ ॥
ಭಕ್ತಾಭೀಷ್ಟಪ್ರದಾನೇನ ಪಾರಿವ್ರಾಜ್ಯಪಯೋಧಿನಾ ॥
ಸಿದ್ಧಲಿಂಗಾಭಿಧಾನೇನ ಯೋಗಿನಾನಿಲಯೀಕೃತಮ್ ॥ ೫ ॥
ಶ್ರೀ ಸಿದ್ಧೇಶ ಪ್ರಸಾದೇನ ಶಿಲಾಮಧ್ಯೇ ಶಿವಾಜ್ಞಯಾ ।
ಸಮುದ್ಭೂತಾಜಟಾ ಗಂಗಾ ಸಿದ್ಧಗಂಗೇತಿಸಂಜ್ಞಿತಾ ॥ ೬ ॥
ಶಿವಾಜ್ಞಾಂಶಿರಸಾಧೃತ್ವಾ ಗಂಗಾಚಾತ್ರವಿರಾಜತೇ ।
ಭಗೀರಥಪ್ರಯತ್ನೇನಸ್ವರ್ಗಾದ್ಭುವಮುಪಾಗತಾ ॥ ೭ ॥
ಅಭೀಪ್ಸಿತಾರ್ಥದಾದೇವೀ ಭಕ್ತ್ಯೈರ್ನಿತ್ಯಮುಪಾಸಿತಾ ।
ರಾಜತೇಮತ್ರ್ಯ ಲೋಕೇಸ್ಮಿನ್ ಕಾಮಧೇನುರಿತೀರಿತಾ ॥ ೮ ॥
ತಸ್ಯಾಪಾದ ಪ್ರದೇಶೇಸ್ಮಿನ್ ಪಾಠಶಾಲಾಮನೋಹರಾ ।
ಸಚ್ಛಾತ್ರನಿವಹೈರ್ನಿತ್ಯಂ ವಿದ್ವದ್ಭಿಶ್ಚವಿಭೂಷಿತಾ ॥ ೯ ॥
ತೋಂಟದಾರ್ಯ ಪ್ರಸಾದೇನ ಶ್ರೀ ವಿದ್ಯಾವರ್ಧಿನೀಸಭಾ ।
ವಿರಾಜತೇವಿಶಾಲೇಸ್ಮಿನ್ ಚಿರಂ ಗುರುಕುಲಾಶ್ರಮೇ ॥ ೧೦ ॥
ಅಟವೀಂದ್ರಾದಿಯೋಗೀಂದ್ರ ಪುಂಗವೈರ್ಜಂಗಮೋತ್ತಮೈಃ ।
ಅನುಷ್ಠಿತ ತಪೋಭೂಮೌ ವಿಭಾತಿ ಸದೃಶೋಮಠಃ ॥ ೧೧ ॥
ಯತ್ರಾನ್ನದಾಸೋಹಮಭೂತಪೂರ್ವಂ ।
ತತ್ತ್ವಾರ್ಥಚಿಂತಾ ಪರಿಭಾಷಣಂಚ ।
ಉದ್ಘೋಷ್ಯಮಾಣಾಧ್ಯಯನಂ ಚ ನಿತ್ಯಂ
ಸಿದ್ಧಾಶ್ರಮೋಽಯಂ ಮಧುರಂ ವಿಭಾತಿ ॥ ೧೨ ॥

## ಸುಭಾಶಂಸನಮ್

ಕಾಷಾಯಾಂಬರಧಾರಿಣಂ ಪುರಹರಪ್ರೇಮಾಸ್ಪದಂ ಯೋಗಿನಮ್ ।
ರುದ್ರಾಕ್ಷೈರ್ವಲಯೈರ್ವಿಭೂಷಿತತನುಂ ಭಸ್ಮತ್ರಿಪುಂಡ್ರಾಂಕಿತಮ್ ॥
ಮಾಯಾತೀತವಿರಾಗಿ ಪುಂಗವವಿಭುಂ ಶೈವಾಬ್ಧಿರಾಕಾವಿಧುಮ್ ।
ಉದ್ದಾನಾಭಿಧದೇಶಿಕಂಗುರುವರಂ ವಂದೇ ಮುದಾ ಸಂತತಮ್ ॥ ೧ ॥
ವಿದ್ಯಾದಾನಸಮಾನ ದಾನಮವನೌ ನಾಸ್ತೀತಿಕೇಚಿಜ್ಜನಾಃ ।
ವಿದ್ಯಾಭ್ಯಾಸಕೃತೇ ವಿಧಾಯನಿಲಯಾನ್ ಕುರ್ವಂತಿ ಸೇವಾಂ ಪರಮ್ ॥
ಕುರ್ವಂತಶ್ಚಪರೇನ್ನದಾನಮಧಿಕಂ ತೋಷಾವಹಂ ಪ್ರಾಣಿನಾಮ್ ।
ಯೋಗೀಂದ್ರಸ್ತು ಕರೋತಿ ದಾನಮುಭಯಂದಾಸೋಹಮಾ
ದಯಾ ॥ ೧೪ ॥

ಗೈರ್ವಾಣೀನಿಲಯಶ್ಚಕಾಸ್ತಿ ಚ ಮಹಾವಿದ್ವದ್ಗಣೈಃ ಶೋಭಿತಃ ।
ವೇದಾಭ್ಯಾಸ ರತೋಕ್ತಮಂತ್ರನಿನದೈಸ್ಸಂತೋಷತಃ ಶ್ರೋತ್ರಯೋಃ ॥
ತರ್ಕವ್ಯಾಕರಣೇತಿಹಾಸ ಕುಶಲೈಸ್ಸದ್ವಾದವೋದಾವಹಃ ।
ವಿದ್ಯಾಭ್ಯಾಸರತೈಸ್ಸಶಿಷ್ಯನಿವಹೈಸ್ಸಂಶೋಭಿತಸ್ಸಂತತಮ್ ॥ ೧೫ ॥
ಯೋಗೀಂದ್ರೈಶ್ಶಿವಸತ್ಕುಮಾರ ಗುರುಭಿಶ್ಚಾರ್ಯಾಂಗ್ಲಭಾಷಾವಿದ್ಯೈಃ ।
ಸಪ್ತಾಹೈಕದಿನೇಧಿ ಕೃತ್ಯವಿಷಯಂಕೂಲಂಕಷಂ ಬೋಧ್ಯತೇ ।
ಚರ್ಚಾಸಾಂಘಿಕಭಾಷಣಾನಿ ಬಹವಃ ಕುರ್ವಂತಿ ವಿದ್ಯಾರ್ಥಿನಃ ।
ಶ್ರೀ ಸಿದ್ಧೇಶಕೃಪಾಕರೋತುಮಹಿತಂ ವಿದ್ಯಾಮಹಾ ಮಂದಿರಮ್ ॥ ೧೬ ॥
ಭಕ್ತಾಸ್ಸಂತು ವಿಚಾರಪೂರ್ಣಮತಯಸ್ಸಂಪ್ರಾಪ್ತದಾನೇ ರತಾಃ ।
ಸಾಹಾಯ್ಯಾತಿಶಯೇನಭೂಪಧನಿಕಾಸ್ಸಂಪ್ರಾಪ್ತಪೂರ್ಣಾದರಾಃ ॥
ಪಾರಂ ಪ್ರಾಪ್ಯ ಸಮಾಜಕರ್ಮ ಕರಣೇಬದ್ಧಾದರಾಶ್ಛಾತ್ರಕಾಃ ।
ಗೈರ್ವಾಣೀನಿಲಯಶ್ಚಕಾಸ್ತುಸುಚಿರಂ ಶ್ರೀ ಸಿದ್ಧಲಿಂಗಾಜ್ಞಯಾ ॥ ೧೭ ॥
ಸಿದ್ಧಗಂಗಾಭಿಧಂ ಕ್ಷೇತ್ರಂ ವಿದುಷಾಮುಪಕಾರಕಮ್ ।
ಅಪರೋಕ್ತಾಕೃತಿಶ್ಚೈಷಾ ಚಿರಂ ವಿಜಯತೇತರಾಮ್ ॥ ೧೮ ॥

**ಶಿವಂ ಭೂಯಾತ್.**

---

# ಮನಗೋಳಿ ಶಿಲಾಶಾಸನದ ಬಸವನು ಕಲ್ಯಾಣದ ಬಸವನೇ ?

(ಶ್ರೀ. ೯— ಜೀರಗೆ ಕ. ಬಸವಪ್ಪ, ಬಿ. ಎ. ವೀರಶೈವೇತಿಹಾಸ ಸಂಶೋಧಕ ಸಮಿತಿ, ಶ್ರೀವೀರಶೈವ ಸಮಾಜಸೇವಾಸಂಘ, ಬೆಂಗಳೂರ ನಗರ.)

---

ಶಿವಾನುಭವದ ೧೯೩೯ನೇ ಜೂನ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ಮನಗೋಳಿ ಶಿಲಾಶಾಸನದ ಬಗ್ಗೆ ವಿಚಾರ ಮಾಡುತ್ತಾ ಈ ಮನಗೋಳಿ ಶಿಲಾಶಾಸನವು ಕಾಳಾಮುಖ ಶಾಸನವಿರುತ್ತದೆಂದೂ, ವೀರಶೈವ ಶಾಸನವಲ್ಲವೆಂದೂ, ಈ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬಸವನು ಕಲ್ಯಾಣದ ಬಸವನಲ್ಲವೆಂತಲೂ, ಮನಗೋಳಿಯ ಬಸವನು ಕಲ್ಯಾಣದ ಬಸವನಿಂದ ಬೇರೆ ಎಂತಲೂ, ಕೆಲವು ಕಾರಣಗಳನ್ನು ಕೊಟ್ಟು ಶ್ರೀಮಾನ್ ರಾ. ಸಾ. ಹಳಕಟ್ಟಿಯವರು ಒಂದು ವಿಮರ್ಶೆಯನ್ನು ಮಾಡಿದ್ದಾರೆ.

(೧) ಶ್ರೀಮಾನ್ ಹಳಕಟ್ಟಿಯವರು ಹೇಳುವಂತೆ ಈ ಶಾಸನವು ಕಾಳಾಮುಖರ ಶಾಸನವಾಗಿರುವುದು ನಿಜ. ಆದರೆ ಇದರಿಂದ ಕೊರತೆಯೇನೂ ಇಲ್ಲ. ಕಾಳಾಮುಖ ಪಂಥವು ಶೈವದ ಒಂದು ಪ್ರಭೇದವಾಗಿದೆ. ವೀರಶೈವವು ಶೈವದಿಂದ ಒಡೆದು ಮೂಡಿದ ಒಂದು ಶಾಖೆಯಾಗಿದೆ. ಅಂದಮೇಲೆ ಕಾಳಾಮುಖಾದಿ ಶೈವ ಪ್ರಭೇದಗಳಿಗೂ ವೀರಶೈವಕ್ಕೂ ನಿಕಟ ಸಂಬಂಧವಿದ್ದಂತಾಯಿತು. ಈ ಅಭಿಪ್ರಾಯವನ್ನು ಅನೇಕ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಚಾರಿತ್ರಶೋಧಕರು ಅನೇಕ ಆಧಾರಗಳಿಂದ ಸಮರ್ಥಿಸುತ್ತಾರೆ. ಡಾ. ಫ್ಲೀಟ್‌ಸಾಹೇಬರು ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನವನ್ನು ವಿಮರ್ಶೆ ಮಾಡುತ್ತ ಬಸವಾದಿಗಳ ಹಿಂದಕ್ಕೆ ಅನೇಕ ಶೈವಪಂಥಗಳು ಇದ್ದವೆಂದೂ, ಈ ಶೈವ ಪಂಥಗಳಲ್ಲಿ ಒಂದು ಕ್ರಾಂತಿಯು ನಡೆದು ಆ ಕ್ರಾಂತಿಯು ಬಸವಾದಿಗಳ ಕಾಲಕ್ಕೆ ಪರಮಾವಧಿಯನ್ನು ಮುಟ್ಟಿ ಬಸವಾದಿಗಳಿಂದ—ಅದರಲ್ಲೂ ಚನ್ನಬಸವಣ್ಣನವರಿಂದ—ಷಟ್ಸ್ಥಲಶಾಸ್ತ್ರವು ನಿರ್ಮಿಸಲ್ಪಟ್ಟು ವೀರಶೈವ ಧರ್ಮದ ತಳಹದಿಯು ಹಾಕಲ್ಪಟ್ಟಿತೆಂದೂ ಬರೆದಿದ್ದಾರೆ. ಅವರ ಮಾತುಗಳನ್ನೇ ಇಲ್ಲಿ ಉದಹರಿಸುತ್ತೇನೆ:—

The interest and importance of the record centre in the fact that it discloses the name of the person Ekantada Ramayya, who towards the close of the twelth century A. D. brought about a revival of the worship of Siva, or a fresh impetus to the Saiva faith with elaborated and improved rites and practices, which eventually culminated in the establishment of a new sect of Sivabhaktas or worshippeas of Siva, called technically Vira-Saivas i. e. "brave, fierce or strict Saivas or Saiva champions," and popularly Lingayats or Lingavantas, i. e. those who have the linga or phallic emblem.

In this account, there is nothing inconsistent with the possibility of others being concerned in the matter and helping the movement on, for instance, the Basava or Basavarasayya of the Managoli inscription of A. D. 1161, who was a contemporary of Ekantada Ramayya and in whom we may find the original of the Basava of the Lingayat Puranas. And very possibly the Lingayat or Virasaiva sect was actually established, in somewhat later times by a person named Channabasava"

(ಎಪಿಗ್ರಾಫಿಯಾ ಇಂಡಿಕಾ, ವಾಲ್ಯೂಂ ೫, ಪಾನು ೨೩೯ ಮತ್ತು ೨೪೪)

ಅರ್ಥಃ—"ಲಾಕ್ಷಣಿಕವಾಗಿ 'ವೀರಶೈವರು' ಅಂದರೆ 'ಧೀರ, ಉಗ್ರ ಅಥವಾ ಕಠಿಣ ಶೈವರು ಅಥವ ಶೈವ ಪಕ್ಷಪಾದಿಗಳು' ಎಂದೂ, ಜನವಾಡಿಕೆಯಾಗಿ 'ಲಿಂಗಾಯತರು' ಅಥವಾ 'ಲಿಂಗವಂತರು' ಅಂದರೆ ಲಿಂಗ ಚಿನ್ಹೆಯನ್ನು ಉಳ್ಳವರು ಎಂದೂ ಕರೆಯಲ್ಪಡುವ ಶಿವಭಕ್ತರ ಅಥವಾ ಶಿವೋಪಾಸಕರ ಒಂದು ಹೊಸ ಪಂಗಡದ ಸ್ಥಾಪನೆಯಲ್ಲಿ ಯಾವ ಶೈವವು ಕಟ್ಟಕಡೆಗೆ ಪರಿಣಾಮಗೊಂಡಿತೋ ಅಂಥ ಶೈವಕ್ಕೆ ವಿಸ್ತರಿಸಿದ ಮತ್ತು ಉತ್ತಮಗೊಳಿಸಿದ ಕರ್ಮಗಳನ್ನೂ ಮತ್ತು ಆಚರಣೆಗಳನ್ನೂ ತುಂಬಿ ಒಂದು ಹೊಸ ಹುರುಪನ್ನು ಕೊಟ್ಟ ಯಾವನು ಕ್ರಿ. ಶ. ಹನ್ನೆರಡನೆಯ ಶತಮಾನದ ಅಂತ್ಯಭಾಗದಲ್ಲಿ ಶೈವೋಪಾಸನೆಯನ್ನು ಪುನರುದ್ಧಾರ

ಮಾಡಿದನೋ ಅಂಥ ಒಬ್ಬ ಏಕಾಂತದರಾಮಯ್ಯನ ಹೆಸರನ್ನು ಹೊರಗೆಡ ಹುವುದರಲ್ಲಿ ಈ ಶಾಸನದ ಪ್ರಯೋಜನವೂ ಮತ್ತು ಪ್ರಾಮುಖ್ಯತೆಯೂ ಕೇಂದ್ರೀಕರಿಸಿವೆ. + + + (ಏಕಾಂತದ ರಾಮಯ್ಯನಲ್ಲದೆ) ಬೇರೆಯ ವರೂ ಈ ಚಳವಳಿಗೆ ಸಂಬಂಧಪಟ್ಟು ಈ ಚಳವಳಿಯನ್ನು ಮುಂದುವ ರಿಸಿದರೆಂಬುದರ ಸಾಧ್ಯತೆಗೆ ವಿರುದ್ಧವಾದ ಅಂಶಗಳಾವುವೂ ಈ ಉಲ್ಲೇ ಖದಲ್ಲಿಲ್ಲ. ಉದಾಹರಣೆಗೆ—ಏಕಾಂತದರಾಮಯ್ಯನ ಸಮಕಾಲೀನನೂ ಮತ್ತು ಲಿಂಗಾಯತ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟ ಬಸವನೇ ಇವನು ಎಂದು ಕಂಡುಹಿಡಿಯಬಹುದಾದವನೂ ಆದ ಕ್ರಿ. ಶ. ೧೧೬೧ ರ ಮನ ಗೋಳಿ ಶಾಸನದ, ಕಾಶ್ಯಪಗೋತ್ರದ ಬಸವ ಅಥವಾ ಬಸವರಸಯ್ಯ ಎಂಬವನು ಒಬ್ಬನಾಗಿದ್ದಾನೆ. ಅಲ್ಲದೆ ಲಿಂಗಾಯತ ಅಥವಾ ವೀರಶೈವ ಪಂಥವು ಸ್ವಲ್ಪ ಈಚೆಗೆ ಚನ್ನಬಸವನೆಂಬವನಿಂದ ಕ್ರಿಯಾತ್ಮಕವಾಗಿ ಸ್ಥಾಪಿಸಲ್ಪಟ್ಟಿತೆಂಬುದು ಬಹುಮಟ್ಟಿಗೆ ಸಾಧ್ಯವಾಗಿದೆ."

ಇನ್ನು ವೀರಶೈವವು ಹನ್ನೆರಡನೆಯ ಶತಮಾನಕ್ಕಿಂತಲೂ ಹಿಂದೆ ಅಂದರೆ ಬಸವಾದಿಗಳಿಗಿಂತಲೂ ಹಿಂದೆ ಇತ್ತೇ ಎಂಬ ವಿಚಾರವಿಮ ರ್ಶೆಯನ್ನು ಡಾ. ನಂದಿಮಠರವರು ಶಿವಾನುಭವದ ೧೯೩೧ನೇ ಡಿಶೆಂ ಬರ್ ತಿಂಗಳ ಸಂಚಿಕೆಯಲ್ಲಿ ಹೀಗೆ ನಡೆಸಿದ್ದಾರೆಃ—

"ವೀರಶೈವರ ಉಲ್ಲೇಖವು ಹನ್ನೊಂದನೆ ಶತಮಾನಕ್ಕೂ ಪೂರ್ವ ದಲ್ಲಿ ಹುಟ್ಟಿದ ಆವ ಭಾರತೀಯ ಗ್ರಂಥದಲ್ಲೂ ಇದ್ದುದು ನಮ್ಮ ದೃಷ್ಟಿಗೆ ಬಿದ್ದಿಲ್ಲವೆಂದು ಹೇಳಿದುದನ್ನು ವಾಚಕರು ಮರೆತಿರಲಿಕ್ಕಿಲ್ಲ. ನಿಸ್ಸಂದೇ ಹವಾಗಿ ಹನ್ನೆರಡನೆ ಶತಮಾನಕ್ಕೂ ಪೂರ್ವದಲ್ಲಿ ರಚಿತವಾದುದೆಂದು ನಿರ್ಣೀತವಾದ ಆವ ವೀರಶೈವ ಧರ್ಮಗ್ರಂಥಗಳೂ (ವೀರಶೈವ ಶಬ್ದ ಪ್ರಯೋಗಮಾತ್ರವಲ್ಲ.—ಶೋಧಕ) ಸಂಸ್ಕೃತ, ಕನ್ನಡ, ತಮಿಳು, ತೆಲುಗು ಮೊದಲಾದ ಆವ ಭಾಷೆಯಲ್ಲಾದರೂ ಉಪಲಬ್ಧವಿದ್ದಂತೆ ಕಂಡು ಬರು ವುದಿಲ್ಲ. + + + ಪುರಾತನರ ಕಾಲವು ೬ರಿಂದ ೯ ನೆಯ ಶತಮಾನ ವೆಂದು ನಿಶ್ಚಿತವಾಗಿ ಗೊತ್ತಾಗಿರುವುದು + + + ಆದರೂ ಪುರಾತನರು ಇಷ್ಟಲಿಂಗಧಾರಿಗಳಾದ ವೀರಶೈವರಿದ್ದರೆಂದು ತರ್ಕಿಸಲು ಸಾಕಷ್ಟು ಆಧಾರಗಳಿಲ್ಲ."

ಹೀಗೆ ಚಾರಿತ್ರಕರ ಶೋಧನೆಗಳನ್ನು ನೋಡುತ್ತಹೋದರೆ ವೀರ ಶೈವವು ಉದ್ಭವಿಸುವುದಕ್ಕೆ ಪೂರ್ವದಲ್ಲಿ ನಾಡಿನಲ್ಲಿ ಬೇರೆ ಬೇರೆ ವಿಧದ

ಶೈವಗಳು ವ್ಯಾಪಿಸಿದ್ದವೆಂದು ನಮಗೆ ಗೊತ್ತಾಗುತ್ತದೆ. ಶೈವ, ಪಾಶು ಪತ, ಸೋಮಸಿದ್ಧಾಂತ ಅಥವಾ ಕಾಪಾಲಿಕ, ಲಾಕುಲ ಅಥವಾ ಕಾಳಾ ಮುಖ ಎಂಬ ಶೈವಪಂಥಗಳು ೯ ರಿಂದ ಹಿಡಿದು ೧೨ನೆಯ ಶತಮಾನಗಳ ವರೆಗೂ ಪ್ರಬಲ ಸ್ಥಿತಿಯಲ್ಲಿದ್ದವೆಂದು ಗೊತ್ತಾಗುತ್ತದೆ. ಈ ಶೈವ ಪಂಥ ಗಳ ಪ್ರಚಾರದಲ್ಲಿ ಅನೇಕ ವೀರಪುರುಷರು ದುಡಿದರು. ಈ ವೀರರಲ್ಲಿ ಬಹುಮಂದಿ ಕಾಳಾಮುಖಪಂಥೀಯರಾಗಿದ್ದರು. ಇವರೇ ಮುಂದಕ್ಕೆ ವೀರಶೈವ ಧರ್ಮಸ್ಥಾಪನೆಗೆ ಕೈಹಾಕಿದಂತೆ ಊಹಿಸಬಹುದಾಗಿದೆ. ಶೈವ ವೀರಶೈವಗಳಿಗಿರುವ ಅದರಲ್ಲೂ ಕಾಳಾಮುಖ ವೀರಶೈವಗಳಿಗಿರುವ ಸಂಬಂಧವನ್ನು ಕುರಿತು ಶ್ರೀಮಾನ್ ರಾ. ಸಾ. ಹಳಕಟ್ಟಿಯವರು ಶಿವಾ ನುಭವದಲ್ಲಿ ಹೀಗೆ ಬರೆಯುತ್ತಾರೆ.—

"ವೀರಶೈವರು ಹೇಗೆ ಆಗಮಗಳನ್ನು ಮನ್ನಿಸುತ್ತಾರೋ ಹಾಗೆಯೇ ಈ ಕಾಳಾಮುಖರೂ ಅವುಗಳನ್ನು ಮನ್ನಿಸುತ್ತಿದ್ದ ಹಾಗೆ ಕಂಡು ಬರು ತ್ತದೆ. ಅವರು ಈ ಶಿಲಾಲಿಪಿಗಳಲ್ಲಿ 'ಶಿವಾಗಮ ನಿರತ' ರೆಂತಲೂ 'ಶಿವ ಧರ್ಮ ಪರಿಪಾಲಕ' ರೆಂತಲೂ ವರ್ಣಿಸಲ್ಪಟ್ಟಿರುವರು. ಅದರಂತೆಯೇ ಅವರು ಶಿವಾರಾಧನ ಶಿವಪೂಜಾದಿ ಕರ್ಮಗಳಲ್ಲಿ ಆಸಕ್ತರೆಂತಲೂ ಶಿವಕಥೆ ಗಳಲ್ಲಿ ಲಾಲಸೆಯುಳ್ಳವರೆಂತಲೂ ಶೈವರೆಂತಲೂ ಉಲ್ಲೇಖಿಸಲ್ಪಟ್ಟಿದ್ದಾರೆ. + + + ಹೇಗೆ ಇವರು ಆಗಮ ಧರ್ಮಿಗಳಾಗಿದ್ದರೂ ವೀರಶೈವರಂತೆ ಷಟ್ಸ್ಥಲಶಾಸ್ತ್ರವನ್ನು ಅವಲಂಬಿಸಿದಂತೆ ತೋರುವುದಿಲ್ಲ. ಅದರಂತೆ ಅವ ರಿಗೆ ಅಷ್ಟಾವರಣಗಳೂ ಪಂಚಾಚಾರಗಳೂ ಇರಲಿಲ್ಲ. + + + ವೀರಶೈವ ಸಮಾಜದಲ್ಲಿ ಈಗ ಅನೇಕ ಮಠಾಧಿಪತಿಗಳಿರುವರಷ್ಟೆ. ಹಾಗೆಯೇ ಈ ಕಾಳಾಮುಖ ಸಮಾಜದಲ್ಲೂ ಅನೇಕ ಮಠಾಧಿಪತಿಗಳು ಇದ್ದರು. + + + ಹ್ಯಾಗೆ ವೀರಶೈವರಲ್ಲಿ ಹಿರಿಯ ಮಠಗಳು ಉಂಟೋ ಹಾಗೆಯೇ ಈ ಕಾಳಾಮುಖರಲ್ಲಿಯೂ ಈ ಹಿರಿಯ ಮಠಗಳು ಇದ್ದವು. ಇವುಗಳ ಅಧಿಪತಿಗಳು 'ಹಿರಿಯ ಮಠದಾಚಾರ್ಯರ್'ಎಂದು ಕರೆಯಲ್ಪಟ್ಟಿರುತ್ತಾರೆ. ಇದಲ್ಲದೆ ಈ ಕಾಳಾಮುಖರು 'ಮಾಹೇಶ್ವರರೆಂ ತಲೂ 'ಅಸಂಖ್ಯಾತ ಮಹಾ ಗಣಂಗಳೆಂ'ತಲೂ ಅನೇಕ ಕಡೆಗಳಲ್ಲಿ ಕರೆಯಲ್ಪಟ್ಟಿರುತ್ತಾರೆ. ಆದರೆ ಇವೇ ಹೆಸರುಗಳಿಂದ ನಾವು ವೀರಶೈ ವರ ಜಂಗಮ ವರ್ಗವನ್ನು ಈಗ ಕರೆಯುವುದುಂಟು. ಈ ಯಾವತ್ತೂ ಸಂಗತಿಗಳ ಮೇಲಿಂದ ವೀರಶೈವ ಸಮಾಜಕ್ಕೂ ಕಾಳಾಮುಖ ಸಮಾ

ಜಕ್ಕೂ ಎಷ್ಟು ನಿಕಟ ಸಂಬಂಧವಿತ್ತೆಂಬುದು ಗೊತ್ತಾಗುತ್ತದೆ.'' (ಶಿವಾನುಭವ, ೧೯೩೦ನೇ ಅಕ್ಟೋಬರ ಸಂಚಿಕೆ, ಪಾನು ೨೨೦-೨೨೬)

ಈ ರೀತಿ ಚಾರಿತ್ರಕರ ಮತ್ತು ವಿಮರ್ಶಕರ ಅಭಿಪ್ರಾಯಗಳನ್ನು ವಿಚಾರ ಮಾಡಿ ನೋಡಿದರೆ ನಮಗೆ ಕಾಣುವುದೇನೆಂದರೆ ಹಿಂದೆ ಇದ್ದ ಕಾಳಾಮುಖಾದಿ ಶೈವ ಪ್ರಭೇದಗಳು ೧೨ನೆಯ ಶತಮಾನದ ಅಂತ್ಯ ಭಾಗಕ್ಕೆ ವೀರಶೈವವಾಗಿ ಮಾರ್ಪಾಟಾದವು. ಅನೇಕ ಕಾಳಾಮುಖ ಮಠಗಳು ವೀರಶೈವ ಮಠಗಳಾದವು. ಅನೇಕ ಕಾಳಾಮುಖಮುಖಂಡರು ವೀರಶೈವ ಮುಖಂಡರಾದರು. ಈ ಮುಖಂಡರೇ ಬಸವಾದಿಗಳೆಂದು ಧಾರಾಳವಾಗಿ ಹೇಳಬಹುದು.

ಅನಿಮಿಷಯ್ಯನಿಂದ ಲಿಂಗವನ್ನು ಪಡೆದು ವೀರಶೈವನಾಗುವುದಕ್ಕೆ ಮುಂಚೆ ಪ್ರಭುದೇವನು ಶೈವನಾಗಿದ್ದನು. ಬಸವಣ್ಣನಿಂದ ಲಿಂಗವನ್ನು ಪಡೆದು ವೀರಶೈವನಾಗುವುದಕ್ಕೆ ಮುಂಚೆ ಚನ್ನಬಸವಣ್ಣನು ಶೈವನಾಗಿದ್ದನು. ಚನ್ನಬಸವಣ್ಣನಿಂದ ಲಿಂಗವನ್ನು ಪಡೆದು ವೀರಶೈವನಾಗುವುದಕ್ಕಿಂತ ಮುಂಚೆ ಸಿದ್ಧರಾಮೇಶನು ಶೈವನಾಗಿದ್ದನು. ಹೀಗೆಯೇ ಏಕಾಂತದ ರಾಮಯ್ಯ ಮೊದಲಾದ ಶಿವಶರಣರು ಬಸವಣ್ಣನ ಶಿವಾನುಭವ ಮಂಟಪಕ್ಕೆ ಸೇರಿ ವೀರಶೈವ ದೀಕ್ಷೆಯನ್ನು ಅಂದರೆ ಲಿಂಗ ಧಾರಣವನ್ನು ಹೊಂದುವುದಕ್ಕೆ ಮುಂಚೆ ಶೈವರಾಗಿಯೇ ಇದ್ದರು. ಬಸವನ ಪಾಡೂ ಹೀಗೇ. ಸಮಾಜದಲ್ಲಿ ರೂಢಮೂಲವಾಗಿದ್ದ ಅನೇಕ ಕುಂದು ಕೊರತೆಗಳನ್ನು ನೋಡಿ ಬೇಸತ್ತು ಗೃಹವನ್ನೂ ಬಂಧುಗಳನ್ನೂ ತ್ಯಜಿಸಿ ಕೂಡಲಸಂಗಮಕ್ಕೆ ಹೋಗಿ ಅಲ್ಲಿ ಸಮಾಜೋದ್ಧರಣಾರ್ಥವಾಗಿ ಲಿಂಗ ಧಾರಣ ಪದ್ಧತಿಯನ್ನು ಕಂಡುಹಿಡಿದು ಆ ಪದ್ಧತಿಯನ್ನು ಲೋಕದಲ್ಲಿ ಪ್ರಚಾರ ಮಾಡುವುದಕ್ಕಿಂತ ಮುಂಚೆ ಬಸವನೂ ಶೈವನಾಗಿಯೇ ಇದ್ದನು. ಅಂದಮೇಲೆ ಬಸವಾದಿಗಳು ವೀರಶೈವ ಧರ್ಮಸ್ಥಾಪನೆಗೆ ತೊಡಗುವುದಕ್ಕೆ ಮುಂಚೆ ಶೈವದಲ್ಲಿ ಅನೇಕ ಮಹತ್ಕಾರ್ಯಗಳನ್ನು ಮಾಡಿದರೆಂದು ಗೊತ್ತಾಗುತ್ತದೆ. ಕಲ್ಯಾಣಕ್ಕೆ ಬರುವುದಕ್ಕೆ ಮುಂಚೆ ಸಿದ್ಧರಾಮೇಶನು ಸೊನ್ನಲಾಪುರದಲ್ಲಿ ಪ್ರಚಂಡವಾದ ಶೈವ ಚಳವಳಿಯನ್ನು ನಡೆಸಿದನು. ಹೀಗೆಯೇ ಪ್ರಭುದೇವ, ಮಡಿವಾಳ ಮಾಚಿದೇವ, ಏಕಾಂತದ ರಾಮಯ್ಯ ದೇವರದಾಸಿಮಯ್ಯ ಮೊದಲಾದ ಶರಣರು ವೀರಶೈವರಾಗುವುದಕ್ಕೆ ಮುಂಚೆ ಶೈವದಲ್ಲಿ ಕೆಲಸ ಮಾಡಿ ಹೆಸರುವಾಸಿಯಾದರು.

ಈ ರೀತಿಯಲ್ಲಿ ಬಸವಾದಿಗಳ ಜೀವನದ ಮೇಲೆ ಶೈವ ಮತ್ತು ವೀರಶೈವ ಈ ಎರಡು ಧರ್ಮಗಳ ಪ್ರಭಾವವನ್ನು ನಾವು ನೋಡಬಹುದಾಗಿದೆ. ಬಸವಾದಿಗಳ ಜೀವನವನ್ನು ಶೈವ ಜೀವನ ಮತ್ತು ವೀರಶೈವ ಜೀವನ ಎಂದು ಎರಡು ವಿಭಾಗ ಮಾಡಬಹುದಾಗಿದೆ. ಇದರಿಂದ ಶರಣರ ಬಗ್ಗೆ ಇರಬಹುದಾದ ಶಾಸನಗಳೂ ಮತ್ತು ಇತರ ಉಲ್ಲೇಖಗಳೂ ಶೈವ ಮತ್ತು ವೀರಶೈವ ಈ ಎರಡು ಧರ್ಮಗಳಿಗೂ ಸಂಬಂಧ ಪಟ್ಟವುಗಳಾಗಿರುವುದು ಅನಿವಾರ್ಯವಾಗಿದೆ. ವೀರಶೈವ ಸಂಬಂಧವಾದವುಗಳಾಗಿದ್ದರೆ ಅವು ಆ ಶರಣರು ವೀರಶೈವ ಮಾರ್ಗವನ್ನು ಸ್ವೀಕರಿಸಿದಮೇಲೆ ಹುಟ್ಟಿದವುಗಳೆಂದು ಭಾವಿಸಬೇಕು. ಶೈವಸಂಬಂಧವಾದವುಗಳಾಗಿದ್ದರೆ ಅವು ಆ ಶರಣರು ವೀರಶೈವವನ್ನು ಸ್ವೀಕರಿಸುವುದಕ್ಕೆ ಮುಂಚೆ ಶೈವದಲ್ಲಿ ನಡೆಸಿದ ಕಾರ್ಯಗಳನ್ನು ಕುರಿತು ಹುಟ್ಟಿದವುಗಳೆಂದು ಭಾವಿಸಬೇಕು. ಅಂದರೆ ನಾವು ಈಗ ಯಾರನ್ನು ವೀರಶೈವ ಶರಣರೆಂದು ಭಾವಿಸಿದ್ದೇವೆಯೋ ಅವರ ಬಗ್ಗೆ ಶೈವ ಮತ್ತು ವೀರಶೈವ ಈ ಎರಡು ಬಗೆಯ ಶಾಸನಗಳೂ ಉಲ್ಲೇಖಗಳೂ ಹುಟ್ಟಲಿಕ್ಕೆ ಕಾರಣವಿದೆ ಎಂದು ನಮ್ಮ ಅಭಿಪ್ರಾಯ.

ಹೀಗಿರುವಾಗ ಮನಗೋಳಿಯ ಶಾಸನವು ಕಾಳಾಮುಖರ ಶಾಸನವೆಂದು ಕಂಡ ಮಾತ್ರಕ್ಕೆ ಅದರಲ್ಲಿ ವರ್ಣಿತವಾಗಿರುವ ಬಸವನು ಮುಂದಕ್ಕೆ ವೀರಶೈವ ಧರ್ಮ ಸ್ಥಾಪನೆಯಲ್ಲಿ ತೊಡಗಿದನು ಎಂದು ಊಹಿಸಲಿಕ್ಕೆ ಯಾವ ಅಭ್ಯಂತರವೂ ಇರುವುದಿಲ್ಲ.

(೨) ಮನಗೋಳಿ ಬಸವನು ಮಾಣಿಕ್ಯವಳ್ಳಿಯವನಿರುವನು. ಆದರೆ ಧರ್ಮೋದ್ಧಾರಕನಾದ ಬಸವನು ಇಂಗಳೇಶ್ವರ ಬಾಗೇವಾಡಿಯಲ್ಲಿ ಜನಿಸಿದನೆಂದು ಇವನ ಚರಿತ್ರೆಗಳೆಲ್ಲವೂ ಹೇಳುತ್ತವೆ ಎಂಬುದು ಮತ್ತೊಂದು ಆಕ್ಷೇಪಣೆ. ಮನಗೋಳಿ ಶಾಸನದಲ್ಲಿ ಎಲ್ಲಿಯೂ ಬಸವನು ಹುಟ್ಟಿದ ಸ್ಥಳ ಇಂತಹುದೆಂದು ವರ್ಣಿಸಿಲ್ಲ. ಮಣಿಂಗವಳ್ಳಿಯ ಕಲಿದೇವೇಶ್ವರ ದೇವಸ್ಥಾನದ ಪೂರ್ವಚರಿತ್ರೆಯನ್ನು ಹೇಳುವ ಪ್ರಸಂಗವೊಂದು ಶಾಸನದಲ್ಲಿ ಬರುತ್ತದೆ. ಆಹವಮಲ್ಲನೆಂದು ಬಿರುದಾಂಕಿತನಾದ ಚಾಳುಕ್ಯರ ಎರಡನೇ ನೂರ್ಮಡಿತೈಲನು ಸಿಂಹಾಸನಾರೋಹಣ ಮಾಡಿದಾಗ್ಗೆ ಜಗದ್ಗುರುವಾದ ಹರೀತಗೋತ್ರದ ಈಶ್ವರಘಳಿಸಾಸ ಎಂಬವನಿಗೆ ಮಣಿಂಗವಳ್ಳಿಯನ್ನು ದಾನವಾಗಿ ಕೊಡುವನು. ಆ ಮಣಿಂಗವಳ್ಳಿಯನ್ನು ಈಶ್ವರಘಳಿಸಾಸನು ಐದು ನೂರು ಜನ ಬ್ರಾಹ್ಮಣರಿಗೆ ದಾನವಾಗಿ ಕೊಡು

ವನು. ಉತ್ಕರ್ಷಸಾಸನ ವಂಶದಲ್ಲಿ ಮಾಧವ ಅಥವಾ ಮಾದಿರಾಜ ಎಂಬವನು ಹುಟ್ಟಿ ಪ್ರಖ್ಯಾತನಾಗಿ ಮಾಣಿಕ್ಯವಳ್ಳಿಯ ಪ್ರಭುವಾಗುವನು. ಐದುನೂರು ಜನ ಬ್ರಾಹ್ಮಣರ ವಂಶದಲ್ಲಿ ಗೋವರ್ಧನನೆಂಬವನು ಹುಟ್ಟು ವನು. ಇವನಿಗೆ ದೇವದಾಸನೆಂಬೊಬ್ಬ ಮಗ ಹುಟ್ಟುವನು. ಈ ದೇವ ದಾಸನಿಗೆ ನಾಗದೇವ ವಿಷ್ಣು, ಗೊಯ್ಯರಸ, ಹುಳಿಧ ಎಂಬ ನಾಲ್ಕು ಜನ ಮಕ್ಕಳಾಗುವರು. ಇವರಲ್ಲಿ ಕೊನೆಯವನಾದ ಹುಳಿದನು ಚಂದಿ ರಾಜನೆಂದು ಪ್ರಖ್ಯಾತಿಗೆ ಬರುವನು. ಚಂದ್ರಾಂಬಿಕೆಯೇ ಇವನ ಭಾರ್ಯೆ. ಇವರ ಹೊಟ್ಟೆಯಲ್ಲಿ ಬಸವನು ಹುಟ್ಟುವನು. ಈ ಬಸವ ಅಥವಾ ಬಸವರಸನು ಬೆಳೆದು ದೊಡ್ಡವನಾಗಿ ಮಾಹೇಶ್ವರ ಪದಭಕ್ತಿಯಲ್ಲಿ ಪಾಸಟಿ ಇಲ್ಲದವನಾಗಿ ಲೋಕಕ್ಕೆ 'ಅಯ್ಯ' ನೆನಿಸಿ ಮಣಿಂಗವಳ್ಳಿಯ ಕಲಿ ದೇವೇಶನೆಂಬ ಸುಂದರಮೂರ್ತಿಗೆ ಒಂದು ದೇವಸ್ಥಾನನ್ನು ಕಟ್ಟಿಸು ವನು. ಹೀಗೆ ಶಾಸನವಲ್ಲಿ ಬಸವನ ಉಲ್ಲೇಖವಿದೆ. ಇದರಿಂದ ಬಸ ವನು ಮಣಿಂಗವಳ್ಳಿಯಲ್ಲಿಯೇ ಹುಟ್ಟಿದನೆಂದು ಹೇಳಲಿಕ್ಕೆ ಬರುವಂ ತಿಲ್ಲ. ಒಂದು ವೇಳೆ ಹುಟ್ಟಿದನೆಂದು ಹೇಳಿದರೂ ಮುಂದೆ ಹೇಳುವ ಕಾರಣಗಳಿಂದ ಅಭ್ಯಂತರವೂ ಇರುವುದಿಲ್ಲ. ಬಸವನು ಹುಟ್ಟಿದ ಸ್ಥಳ ವೆಂದು ಕೆಲವು ಗ್ರಂಥಗಳಲ್ಲಿ ಹೇಳುವ ಬಾಗೇವಾಡಿ ಗ್ರಾಮದ ವರ್ಣ ನೆಯನ್ನು ಮಾಡುತ್ತ ಶ್ರೀಮಾನ್ ಹಿಂಪಗಿ ಸಿದ್ದಪ್ಪನವರು ತಮ್ಮ ಬಸ ವೇಶ್ವರ ಚರಿತ್ರೆಯಲ್ಲಿ (ಪಾನು ೮೨ ಮತ್ತು ೮೩) ಹೀಗೆ ಹೇಳಿದ್ದಾರೆ:—

ಈ ಗ್ರಾಮವು ಅತಿ ಪ್ರಾಚೀನಕಾಲದಲ್ಲಿ ಭೋಗವತಿಯೆಂಬ ಹೆಸರಿ ನಿಂದ ಕರೆಯಲ್ಪಡುತ್ತಿತ್ತು. + + + ಈ ಗ್ರಾಮವು ಅತಿ ಪ್ರಾಚೀ ನಕಾಲದ್ದೆನ್ನುವುದಕ್ಕೆ ಈಗಲೂ ಅಕ್ಕ ಪಕ್ಕದಲ್ಲಿರುವ ಸುರಂಗಗಳೇ ಸಾಕ್ಷಿ ಭೂತಗಳಾಗಿವೆ. ಮತ್ತು ವಿಶಾಲವಾಗಿ ಭೋಗ್ಯಭಾಗ್ಯನಿಧಿಯಾಗಿತ್ತೆನ್ನು ವುದಕ್ಕೆ ಕರಿಬಂಟನಾಳು ನಾಗೋಡ ಗ್ರಾಮುಗನ್ನೊಳಕೊಂಡು ಪ್ರಾಚೀನ ಶಿಲ್ಪಕಲಾವಶೇಷಗಳುಳ್ಳದ್ದಾಗಿ ಹಾಳು ಬಿದ್ದಂತಿರುವದು × × × ಒಂದು ಕಾಲದಲ್ಲಿ ಈ ಗ್ರಾಮದ ಮೇರೆಯು ಡೋಣಿ ಹಳ್ಳದ ವರೆಗೂ ವ್ಯಾಪಿಸಿದುದರಿಂದ ಈ ಡೋಣಿ ಹಳ್ಳದ ಸಾಲು ಭೂಮಿಗಳು ವಿಶೇಷ ಫಲ ದಾಯಕವಾದುದಕ್ಕೆ ನವೀನ ಭಾಗೀರಥಿ ಎಂಬ ಹೆಸರನ್ನು ಪಡೆದಿದ್ದಂತೆ ವರ್ಣಿಸಿದ್ದಾರೆ.

ಮಣಿಂಗವಳ್ಳಿಯಾದರೋ ಈಗಿನ ಬಾಗೇವಾಡಿಗೆ ಸುಮಾರು ಹನ್ನೊಂದು ಮೈಲುಗಳ ದೂರದಲ್ಲಿರುವುದೆಂದು ಗೊತ್ತಾಗುತ್ತದೆ. (ಇಂಡಿಯನ್ ಭೂಪಟದಲ್ಲಿ ಮುನ್ಗೋಳಿ (*Mungolee*) ಯನ್ನು ನೋಡಿ.)

ಇದೆಲ್ಲವನ್ನೂ ನೋಡಿದರೆ ಬಾಗೇವಾಡಿಯು ಆಗಿನ ಕಾಲಕ್ಕೆ ಒಂದು ದೊಡ್ಡ ಪಟ್ಟಣವಾಗಿತ್ತೆಂದೂ, ಮಣಿಂಗವಳ್ಳಿಯು ಈ ಬಾಗೇವಾಡಿಗೆ ಸೇರಿದ ಒಂದು ಉಪಗ್ರಾಮವೋ ಇಲ್ಲವೇ ಅಗ್ರಹಾರವೋ ಆಗಿತ್ತೆಂದೂ ಊಹಿಸಲಿಕ್ಕೆ ಬರುತ್ತದೆ. ಅರ್ಜುನವಾಡದ ಶಾಸನದಲ್ಲಿ ಬಾಗವಾಡಿಯು 'ಮಧ್ಯಗ್ರಾಮ'ವೆಂದು ವರ್ಣಿಸಲ್ಪಟ್ಟಿದೆ. ಇದೂ ಮೇಲಿನ ನಮ್ಮ ಊಹೆಗೆ ಬಲವನ್ನು ಕೊಡುತ್ತದೆ. ಅಲ್ಲದೆ ಅಪ್ರಸಿದ್ಧವಾದ ಹಳ್ಳಿಯ ಹೆಸರನ್ನೂ ಹೇಳಲಾರದೆ ಸಮೀಪದ ಪ್ರಸಿದ್ಧವಾದ ಊರಿನ ಹೆಸರನ್ನೂ ಹೇಳುವುದು ಸರ್ವಸಾಮಾನ್ಯವಾಗಿದೆ. ಇದನ್ನು ನಾವು ಗಮನದಲ್ಲಿಡಬೇಕಾಗಿದೆ.

ಅರ್ಜುನವಾಡದ ಶಾಸನದಲ್ಲಿ ಮಾದಿರಾಜನಿಗೆ 'ಬಾಗವಾಡಿ ಪುರವರಾಧೀಶ್ವರ' ಎಂಬ ಸಂಬೋಧನವಿರುವುದು ನಿಜ. ಬಾಗವಾಡಿಪುರವು ಮಾದಿರಾಜನಿಗೆ ಉಂಬಳಿಯಾಗಿ ಕೊಡಲ್ಪಟ್ಟದ್ದರಿಂದ ಹೀಗೆ ಕರೆಯಲ್ಪಟ್ಟಿದ್ದರೂ ಇರಬಹುದು. ಈಶ್ವರಘಳಿಸಾಸನಿಗೆ ಹೇಗೆ ಮಣಿಂಗವಳ್ಳಿಯು ಚಾಳುಕ್ಯ ರಾಜನಿಂದ ಕೊಡಲ್ಪಟ್ಟಿತೋ ಹಾಗೆಯೇ ಇವನ ವಂಶಜನಾದ ಮಾದಿರಾಜನಿಗೆ ಬಾಗೇವಾಡಿಯು ಕಳಚೂರ್ಯ ರಾಜನಿಂದ ಕೊಡಲ್ಪಟ್ಟಿರಬಹುದು. 'ಬಾಗವಾಡಿಪುರ ವರಾಧೀಶ್ವರ'ನೆಂದ ಮಾತ್ರಕ್ಕೆ ಮಾದಿರಾಜನು ಬಾಗವಾಡಿಯವನೇ ಆಗಿರಬೇಕಾದ ಅವಶ್ಯಕತೆ ಇಲ್ಲ. ಒಂದು ವೇಳೆ ಬಾಗವಾಡಿಯವನೇ ಆಗಿದ್ದರೂ ಮಣಿಂಗವಳ್ಳಿಯ ಪ್ರಭುವಾಗಿರುವುದಕ್ಕೆ ಅಡ್ಡಿಯೇನು ಇಲ್ಲ. ಅಲ್ಲದೆ ಅರ್ಜುನವಾಡದ ಶಾಸನವು ಬಹು ಈಚನದು, ಅಂದರೆ ಕ್ರಿ. ಶ. ೧೨೬೦ನೆ ಇಸವಿಯದು. ಮುನಗೋಳಿ ಶಾಸನವು ಬಹು ಹಿಂದಿನದು, ಅಂದರೆ ಕ್ರಿ. ಶ. ೧೧೬೧ನೆ ಇಸವಿಯದು. ಇದರಿಂದ ಮುನಗೋಳಿ ಶಾಸನದ ಕಾಲಕ್ಕೆ ಮಾದಿರಾಜನಿಗೆ ಬಾಗವಾಡಿ ಪುರಾಧಿಪತ್ಯವು ದೊರೆತಿರಲಿಲ್ಲವೆಂದೂ ಈಚೆಗೆ ದೊರೆತಿರಬೇಕೆಂದೂ ಊಹಿಸಬಹುದಾಗಿದೆ. ಶ್ರೀಮಾನ್ ಆರ್. ಸಿ. ಅರ್ಟಾಲರು (ಅರಟಾಲ್ ರುದ್ರಗೌಡರು) ತಾವು ಬೆಳಗಾವಿಯ ಡಿಸ್ಟ್ರಿಕ್ಟ ಡೆಪ್ಯುಟಿ ಕಲೆಕ್ಟರ್ ಆಗಿದ್ದಾಗ್ಗೆ ಬರೆದ *A short account of the reformed Shaiva or*

*Veerashaiva faith*" "ಸುಧಾರಿಸಿದ ಶೈವಧರ್ಮದ ಸಂಕ್ಷಿಪ್ತ ವಿವರಣೆ ಎಂಬ ಪುಸ್ತಕವಲ್ಲಿ ಹೀಗೆ ಬರೆದಿರುತ್ತಾರೆ.

"The writer of this short account was in charge of this Taluka (Bagewadi) as Sub Divisional officer for about four years (from 1892 to 1896), and the local tradition says that his (Basava's) father Madhawarao was excommunicated by the Shaiva Brahmins of that locality in connection with a breach of some rules prescribed by Smriti writers. Owing to caste disputes the (मुंज) (Munja) ceremony of young Basavanna could not be performed and his father, therefore, was obliged to leave Bagewadi with his family and seek help from a relation of his named Baladeva who was then a chief executive officer at the court of the Chalukya kings at Kalyan.

ಅರ್ಥ:— "ಈ ಸಂಕ್ಷಿಪ್ತ ವಿವರಣೆಯ ಲೇಖಕನು ೧೮೯೨ ರಿಂದ ಹಿಡಿದು ೧೮೯೬ರ ವರೆಗೆ ಸುಮಾರು ನಾಲ್ಕು ವರ್ಷಗಳು ಈ (ಬಾಗೇವಾಡಿ) ತಾಲೂಕಿನ ಸಬ್ ಡಿವಿಜಿನಲ್ ಆಫೀಸರರಾಗಿದ್ದರು. ಇಲ್ಲಿಯ ಐತಿಹ್ಯವು ಹೇಳುವುದೇನೆಂದರೆ ಸ್ಮೃತಿಕಾರರು ವಿಧಿಸಿದ ಕೆಲವು ಕಟ್ಟಳೆಗಳನ್ನು ಮೀರಿದನೆಂದು (ಬಸವನ) ತಂದೆಯಾದ ಮಾಧವರಾಯನನ್ನು ಆ ಪ್ರಾಂತ್ಯದ ಶೈವಬ್ರಾಹ್ಮಣರು ಬಹಿಷ್ಕರಿಸಿದರು (ಈ) ಜಾತಿಕಲಹಗಳಿಂದ ಬಸವಣ್ಣನ ಮೌಂಜಿ ಸಂಸ್ಕಾರವನ್ನು (ಮುಂಜ) ನಡೆಸಲಿಕ್ಕಾಗಲಿಲ್ಲ. ಈ ಕಾರಣದಿಂದ (ಬಸವನ) ತಂದೆಯು ಕುಟುಂಬದೊಂದಿಗೆ ಬಾಗೇವಾಡಿಯನ್ನು ಬಿಟ್ಟು ಈಗಿನ ನಿಜಾಮ ಸಂಸ್ಥಾನದಲ್ಲಿರುವ ಕಲ್ಯಾಣದಲ್ಲಿ ಚಾಳುಕ್ಯ ಅರಸರ ಆಸ್ಥಾನದಲ್ಲಿ ದಂಡನಾಯಕನಾಗಿದ್ದ ಬಲದೇವನೆಂಬ ತನ್ನ ಬಂಧುವನ್ನು ಆಶ್ರಯಿಸಬೇಕಾಯಿತು."

ಈ ವಿಚಾರವೂ ಚಾರಿತ್ರಕಾರರ ದೃಷ್ಟಿಗೆ ಬೀಳಬೇಕಾಗಿದೆ.

(೩) ಬಾಗೇವಾಡಿ ಬಸವೇಶ್ವರನ ಇಷ್ಟ ದೇವತೆಯು ಸಂಗಮನಾಥನು. ಆದರೆ ಶಿಲಾಶಾಸನದಲ್ಲಿ ಹೇಳಿದ ಬಸವನ ಮುಖ್ಯ ದೇವತೆಯು ಕಲಿದೇವನು ಎಂಬುದು ಮತ್ತೊಂದು ಆಕ್ಷೇಪಣೆ ಈ ಆಕ್ಷೇ

ಪಣೆಯು ಸಹಜವಾದದ್ದಾದರೂ ಚಾರಿತ್ರಿಕ ದೃಷ್ಟಿಯಿಂದ ವಿಚಾರ ಮಾಡಿ ನೋಡಿದ್ದಾದರೆ ಈ ಆಕ್ಷೇಪಣೆಗೆ ಸ್ವಲ್ಪವೂ ಅವಕಾಶವಿರುವದಿಲ್ಲ. ಬೌದ್ಧಮತ ಸ್ಥಾಪಕನಾದ ಗೌತಮ ಬುದ್ಧನಿಗೆ ಮೊದಲು ಬುದ್ಧನೆಂಬ ಹೆಸರು ಇರಲಿಲ್ಲ. ಅವನನ್ನು ಬರಿಗೌತಮ ಅಥವಾ ಸಿದ್ಧಾರ್ಥ ಎಂದು ಕರೆಯುತ್ತಿದ್ದರು. ಲೋಕದ ವ್ಯವಹಾರಗಳನ್ನು ಕಂಡು ಜಿಗುಪ್ಸೆ ಹುಟ್ಟಿ ಕುಟುಂಬವನ್ನೂ ರಾಜ್ಯವನ್ನೂ ತ್ಯಜಿಸಿ ಲೋಕದ ಕಷ್ಟ ನಿವಾರಣೋಪಾಯವನ್ನು ಕಂಡು ಹಿಡಿಯುವದಕ್ಕೋಸ್ಕರ ದೇಶಾಟನ ಹೊರಟು ಸುತ್ತಿ ಸುತ್ತಿ ಕೊನೆಗೆ ಗಯೆಗೆ ಬಂದು ಒಂದು ಅಶ್ವತ್ಥವೃಕ್ಷದ ಅಡಿಯಲ್ಲಿ ಕೂತನು. ಅಲ್ಲಿ ಅವನಿಗೆ ಜ್ಞಾನೋದಯವಾಯಿತು. ಅಲ್ಲಿಂದಾಚೆಗೆ ಅವನಿಗೆ- "ಬುದ್ಧ" (ಜ್ಞಾನಿ) ಎಂಬ ಅಡ್ಡ ಹೆಸರು ಬಂದು ಮುಂದಕ್ಕೆ ಅವನು ಗೌತಮಬುದ್ಧನೆಂದು ಹೆಸರುವಾಸಿಯಾದನು. ಹಾಗೆಯೇ ಸಂಗನ ಬಸವನಿಗೆ ಮೊದಲು ಬರಿ ಬಸವ ಅಥವ ಬಸವರಸ ಎಂಬ ಹೆಸರಿದ್ದಂತೆ ಕಾಣುತ್ತದೆ. ಆಗಿನ ಕಾಲದಲ್ಲಿ ನಾಡಿನಲ್ಲಿ ಆವರಿಸಿದ್ದ ವರ್ಣಾಶ್ರಮ ಧರ್ಮದ ಕುಂದು ಕೊರತೆಗಳನ್ನು ನೋಡಿ ಮನನೊಂದು ಲೋಕಕ್ಕೆ ಕಲ್ಯಾಣವನ್ನುಂಟು ಮಾಡತಕ್ಕ ಒಂದು ಹೊಸ ಉತ್ಕೃಷ್ಟ ಧರ್ಮ ಮಾರ್ಗವನ್ನು ಕಂಡು ಹಿಡಿಯಬೇಕೆಂದು ಇಚ್ಛಿಸಿ ಬಸವನು ಗೃಹವನ್ನೂ ಬಂಧುಗಳನ್ನೂ ತ್ಯಜಿಸಿ ಕೂಡಲ ಸಂಗಮಕ್ಕೆ ಹೊರಟು ಹೋದನು. ಅಲ್ಲಿ ಅವನಿಗೆ ಜ್ಞಾನೋದಯವಾಯಿತು. ಅಲ್ಲಿಯೇ ಬಸವನು ಹಲವು ವರ್ಷಗಳಿದ್ದು ವೀರಶೈವ ಧರ್ಮದ ಚಳುವಳಿಯನ್ನು ಪ್ರಾರಂಭಿಸಿ ಹೆಸರುವಾಸಿಯಾದನು. ಅಲ್ಲಿಂದಾಚೆಗೆ ಅವನಿಗೆ ಸಂಗನಬಸವ ಎಂಬ ಹೆಸರು ಬಂದಂತೆ ಕಾಣುತ್ತದೆ. ಸಂಗಮಕ್ಕೆ ಹೋಗಿ ಸಂಗನಬಸವನೆಂಬ ಹೆಸರನ್ನು ಪಡೆದಮೇಲೆ ಅವನ ಬಗ್ಗೆ ಹುಟ್ಟಿರುವ ಶಾಸನಗಳಲ್ಲೂ, ಗ್ರಂಥಗಳಲ್ಲೂ ಸಂಗನಬಸವ ಎಂಬ ಪ್ರಯೋಗ ಕಾಣಲಿಕ್ಕೆ ಕಾರಣವಿದೆಯೇ ವಿನಹ ಸಂಗಮೇಶ್ವರಕ್ಕೆ ಹೋಗುವುದಕ್ಕೆ ಮುಂಚೆ ಅವನ ಬಗ್ಗೆ ಹುಟ್ಟಿರುವ ಶಾಸನಗಳಲ್ಲಿ ಸಂಗನಬಸವ ಎಂಬ ಹೆಸರು ಬರಲಿಕ್ಕೆ ಕಾರಣವಿಲ್ಲ. ಇದು ಯಾರಿಗಾದರೂ ಅರ್ಥವಾಗತಕ್ಕ ಮಾತಾಗಿದೆ. ಸಿದ್ಧರಾಮನ ಇಷ್ಟದೇವತೆ ಕಪಿಲಸಿದ್ಧ ಮಲ್ಲಿಕಾರ್ಜುನ. ಇದು ಅವನ ವಚನಗಳಿಂದ ಗೊತ್ತಾಗುತ್ತದೆ. ಆದರೆ ಕಲ್ಯಾಣಕ್ಕೆ ಬರುವುದಕ್ಕೆ ಮುಂಚೆ ಸಿದ್ಧರಾಮನು ಸೊಲ್ಲಾಪುರದಲ್ಲಿ ಅನೇಕ ಬೇರೆ ಬೇರೆ ದೇವಸ್ಥಾನಗ

ಳನ್ನು ಕಟ್ಟಿಸಲಿಲ್ಲವೇ ? ಹಾಗೆಯೇ ಬಸವನು ಸಂಗಮಕ್ಕೆ ಹೋಗುವುದಕ್ಕೆ ಮುಂಚೆ ಮನಗೋಳಿಯ ಕಲಿದೇವೇಶ್ವರ ದೇವರಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿದ್ದರೆ ತಪ್ಪೇನು ? ಬಸವಾದಿಗಳ ಜೊತೆಯಲ್ಲಿ ವೀರಶೈವ ಚಳುವಳಿಯಲ್ಲಿ ಬಹಳವಾಗಿ ದುಡಿದ ಮಡಿವಾಳ ಮಾಚಿದೇವನ ಇಷ್ಟದೇವತೆಯು ಕಲಿದೇವರ ದೇವನೆಂದು ಆತನ ವಚನಗಳಿಂದ ಗೊತ್ತಾಗುತ್ತದೆ. ಈ ಕಲಿದೇವರ ದೇವನಿಗೂ ಮಣಿಂಗವಳ್ಳಿಯ ಕಲಿದೇವೇಶ್ವರ ದೇವನಿಗೂ ಏನಾದರೂ ಸಂಬಂಧವಿದೆಯೋ ? ಶೋಧಿಸಬೇಕಾಗಿದೆ. ಅರ್ಜುನವಾಡದ ಶಿಲಾಶಾಸನದಲ್ಲಿ ಒಬ್ಬ ಕಲಿದೇವರಸನು ಬರುತ್ತಾನೆ. ಇವನು ಸಂಗನಬಸವನ ಮರಿಮಗನೆಂದು ಶಾಸನದಲ್ಲಿ ವರ್ಣಿಸಿ ಇದೆ ಇದನ್ನೂ ಚಾರಿತ್ರಶೋಧಕರು ಲಕ್ಷಿಸಿ ವಿಚಾರಮಾಡಬೇಕು.

(೪) ಮನಗೋಳಿ ಬಸವನ ತಂದೆತಾಯಿಗಳ ಹೆಸರು ಚಂದಿರಾಜ ಚಂದ್ರಾಂಬಿಕೆ ಎಂದು ಶಾಸನದಲ್ಲಿ ಹೇಳಲ್ಪಟ್ಟಿದೆ. ಆದರೆ ಬಾಗೇವಾಡಿ ಬಸವನ ತಂದೆತಾಯಿಗಳ ಹೆಸರು ಮಾದಿರಾಜ ಮಾದಲಾಂಬಿಕೆ ಎಂದಿವೆ ಎಂಬುದು ಮತ್ತೊಂದು ಆಕ್ಷೇಪಣೆ. ಕಲ್ಯಾಣದ ಬಸವನ ತಂದೆತಾಯಿಗಳ ಬಗ್ಗೆ ಗ್ರಂಥಕರ್ತೃಗಳಲ್ಲಿ ಭಿನ್ನಾಭಿಪ್ರಾಯವಿದ್ದಂತೆ ತೋರುತ್ತದೆ. ಷಡುಸಷ್ಟಿ ಪುರಾತನರ ಪುರಾಣವೆಂಬ ಒಂದು ಗ್ರಂಥದಲ್ಲಿ ಮಾದರಸನಿಗೆ ಸತ್ಯಪ್ಪ, ಅಪ್ಪಣ ಎಂಬ ಪುತ್ರರೂ ನಾಗಲಾಂಬಿಕೆ ಎಂಬ ಮಗಳೂ ಇದ್ದರೆಂದೂ, ಹೊಲದಲ್ಲಿ ಬಾಗಿದವೊಡೆಯಲ್ಲಿದ್ದ ಕೂಸನ್ನು ತಂದು ಬಸವನೆಂಬ ಹೆಸರಿಟ್ಟುಕೊಂಡರೆಂದೂ ಬರೆದಿದೆಯೆಂದು ಶ್ರೀ. ವೀರಪ್ಪ ಚನ್ನಪ್ಪ ಯುಗಟಿ ಇವರು ಶಿವಾನುಭವ ೧೯೩೮ ನೆ ಡಿಶೆಂಬರ ಸಂಚಿಕೆಯಲ್ಲಿ ೨೩ ನೇ ಪಾನಿನ ಅಡಿಟಿಪ್ಪಣಿಯಲ್ಲಿ ಹೇಳಿದ್ದಾರೆ. ಇದೇ ಮಾತನ್ನೇ ವೀರಸಂಗಾರ್ಯನೆಂಬ ಕವಿಯು ನಂದ್ಯಾಗಮ ವಚನದಲ್ಲಿ ಹೀಗೆ ಬರೆದಿದ್ದಾನೆ:--

"ಪಾರ್ವತೀಪತಿಯು ಹಸನ್ಮುಖನಾಗಿ ನಂದಿಯನ್ನು ಭೂಲೋಕದಲ್ಲಿ ಅವತರಿಸಿ ಅನೇಕ ಪವಾಡಗಳನ್ನು ತೋರಿ ಲೋಕವನ್ನುದ್ಧರಿಸಬೇಕೆಂದು ಹೇಳಿಕಳಿಸಿದನು. ಆ ವಾರ್ತೆಯನ್ನು ನಾರದನು ನಂದಿಯ ಮುಂದೆ ಬಂದು ತಿಳಿಸಿದನು. ನಂದಿಯು ಸಮ್ಮತಿಸಿ ತಾನು ಜನ್ಮಿಸುವುದಕ್ಕೆ ತಕ್ಕ ಸ್ಥಲವನ್ನು ಯೋಚಿಸುತ್ತಿದ್ದನು. ಇತ್ತ ನೀಲಗಿರಿಯೆಂಬ ಪಟ್ಟಣದಲ್ಲಿ ಮಾದರಸನೆಂಬ ಶಿವಬ್ರಾಹ್ಮಣನು ಮಾದಲಾಂಬೆಯೆಂಬ ಸತಿಯೊಡನೆ

ಕೂಡಿ ಸುಖದಿಂದಿದ್ದನು. ಅವರಿಗೆ ಸತ್ಯಣ್ಣ, ಅಪ್ಪಣ್ಣ, ನಾಗಲಿ ಎಂಬ ಮೂವರು ಮಕ್ಕಳಿದ್ದರು. ಅಲ್ಲಿಗೂ ತೃಪ್ತಿಯಿಲ್ಲದೆ ಶಿವಭಕ್ತಿಸಂಪನ್ನನಾದ ಮಗನನ್ನು ಪಡೆಯಬೇಕೆಂದು ಇಚ್ಛಿಸಿ ನಂದಿಯ ವ್ರತವನ್ನು ಮಾಡಿದರು. ಆ ವ್ರತಫಲದಿಂದ ನಂದಿಯು ಮೆಚ್ಚಿ ತನ್ನ ಉತ್ಪತ್ತಿಗೆ ತಕ್ಕ ಸ್ಥಾನವೆಂದರಿತು ಆ ದಂಪತಿಗಳಿಗೆ ಪುಷ್ಪವನ್ನು ಕೊಟ್ಟನು. ದಂಪತಿಗಳು ಸುಖದಿಂದಿರಲು ಮಾದಲಾಂಬೆಯು ಒಂದಾನೊಂದು ದಿನ ಚನ್ನಾಗಿ ಬೆಳೆದ ಹೊಲವನ್ನು ನೋಡಬೇಕೆಂದು ಅಪೇಕ್ಷಿಸಿ ಪಂಚ ಭಕ್ಷ್ಯ ಪರಮಾನ್ನಗಳನ್ನು ತೆಗೆದುಕೊಂಡುಹೋಗಿ ಭೂಲಕ್ಷ್ಮಿಯನ್ನು ಶಾಂತಪಡಿಸಿ ವಿಹರಿಸುತ್ತಿರಲು ಒಂದಾನೊಂದು ಜೋಳದ ದಂಟು ಒಂದು ಅರವಿಯಗಾತ್ರ ತೆನೆಯೊಡನೆ ಕೂಡಿರುವದಂ ಕಂಡು ಆಶ್ಚರ್ಯಪಟ್ಟರು. ಅಷ್ಟರೊಳಗೆ ಆ ಪೂಡೆಯೊಳಗಿಂದ ಶಿಶುಧ್ವನಿಯಾಯಿತು. ಅವರು ಆ ತೆನೆಯೊಳಗಣ ಕೂಸನ್ನು ತೆಗೆದುಕೊಂಡು ಸ್ನಾನವಂ ಮಾಡಿಸಿ ಎಣ್ಣೆ ಅರಿಸಿನವನ್ನು ಹಚ್ಚಿರಲು ಮಾದಲಾಂಬಿಕೆಗೆ ಸ್ತನದಲ್ಲಿ ಹಾಲು ಬಿದ್ದು ಮೋಹವು ಜನಿಸಿ ಪುತ್ರಭ್ರಾಂತಿಯಾಯಿತು. ಮಾದಲಾಂಬಿಕೆಯು ಮೊಲೆ ಕೊಟ್ಟು ರಕ್ಷಿಸುತ್ತಿದ್ದಳು. ಆ ಶಿಶುವು ದಿನದಿನಕ್ಕೆ ಬಿದಿಗಿಯ ಚಂದ್ರನಂತೆ ವೃದ್ಧಿಯಾಗುತ್ತಿದ್ದಿತು." (ಶ್ರೀನಂದಿಆಗಮ ಮತ್ತು ನಂದಿ ಆಗಮವಚನ ಪಾನು ೧೮೧)

ಇನ್ನು ವೀರಶೈವರಲ್ಲಿ ಆದಿಕವಿಯಾದ ಹರಿಹರನು ತನ್ನ ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣನವರು ಚಿಕ್ಕವರಾಗಿರುವಾಗಳೇ ತಾಯ್ತಂದೆಗಳನ್ನು ಕಳೆದುಕೊಂಡರೆಂದೂ ಅವರನ್ನು ಮುತ್ತಜ್ಜಿಯೊಬ್ಬಳು ಸಾಂದಳೆಂದೂ ಈ ರೀತಿಯಲ್ಲಿ ವರ್ಣಿಸಿದ್ದಾನೆ:—

"ನೆಲದಲಿ ಮೂಡಿದ ಸ್ವಯಂಭುಲಿಂಗಕ್ಕೆ ನೆಲಂ ತಾಯಾಗಲರಿಯದೆಂಬಂತೆ ಹರನ ಬೆಸನಂ ಹೊತ್ತು ಪಲವು ಕಾರಣದಿಂ ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನಪ್ಪ ಬಸವರಾಜಂಗೆ ತಾಯ್ತಂದೆಗಳಿಲ್ಲೆಂಬುದನರಿಪುವಂತೆ, ಶಿವಭಕ್ತನುಮಂ ಶಿವಭಕ್ತೆಯುಮಂ ಶಿವನಾಜ್ಞೆಯಿಂ ಕೈಲಾಸಕ್ಕೆ ಕೊಂಡೊಯ್ಯೆ;

ಬಸವರಾಜಂ ಪುಸಿಯ ತಾಯ್ತಂದೆಗಳ್ ಪೋದುದಂ ಕಂಡಾದರಂ ಮಿಕ್ಕು ಸಂಸಾರದ ಭಾರವಿಳಿದು ನಲಿನಲಿದಾಡೆ, ಶಿವಭಕ್ತಿ ಮುತ್ತಂ

ತಿದಗ ಮುತ್ತಜ್ಜಿಯು ಪಕ್ಷದೊಳು ಶಿವಪ್ರಸಾದ ಸಂತುಷ್ಟ ಹೃದಯನಾಗಿ ನಾಲ್ಕೆರಡು ವರುಷಂ ಸುಖದೊಳಿರೆ,"

ಹೀಗೆ ಗ್ರಂಥಕಾರರು ಬಸವನ ತಂದೆತಾಯಿಗಳ ಬಗ್ಗೆ ಬೇರೆ ಬೇರೆ ರೀತಿಯಲ್ಲಿ ಉಲ್ಲೇಖಿಸಿದ್ದಾರೆ. ಇವೆಲ್ಲವನ್ನೂ ನೋಡಿದರೆ ಬಸವನು ಮಾದಿರಾಜನ ಸಾಕುಮಗನಾಗಿರಬಹುದೇ ಎಂಬ ಅನುಮಾನವು ಬರುತ್ತದೆ. ಬಸವನು ಚಂದಿರಾಜ ಚಂದ್ರಾಂಬಿಕೆಯರ ಹೊಟ್ಟೆಯಲ್ಲಿ ಹುಟ್ಟಿದ್ದರೂ ಅವನನ್ನು ಮಣಿಂಗವಳ್ಳಿಯ ಪ್ರಭುವೂ ಮುಂದಕ್ಕೆ ಬಾಗವಾಡಿಯ ಪುರವರಾಧೀಶ್ವರನೂ ಆದಂಥ ಮತ್ತು ರಾಜಾಸ್ಥಾನದಲ್ಲಿ ಹೆಸರು ಪಡೆದಂಥ ಮಾದಿರಾಜನು ಸಾಕಿಕೊಂಡದ್ದರಿಂದ ಜನಗಳ ಬಾಯಲ್ಲಿ ಬಸವನು ಮಾದಿರಾಜನ ಮಗನೆಂದು ರೂಢಿಗೆ ಬಂದಿರಬಹುದೆಂದು ಊಹಿಸಲಿಕ್ಕೆ ಅವಕಾಶವಿದೆ.

ಈ ರೀತಿಯಲ್ಲಿ ಅನೇಕ ಕಾರಣಗಳಿಂದ ಮುನಗೋಳಿಯ ಬಸವನು ಕಲ್ಯಾಣದ ಬಸವನೆಂದು ಊಹಿಸಲಿಕ್ಕೆ ಅವಕಾಶವಿದೆ. ಒಂದು ವೇಳೆ ಮುನಗೋಳಿಯ ಬಸವನು ಕಲ್ಯಾಣದ ಬಸವನಿಂದ ಬೇರೆಯೆಂದು ಹೆಚ್ಚು ಪ್ರಮಾಣಗಳು ದೊರೆತಲ್ಲಿ ಅಗ್ಗೆ ಎಲ್ಲರೂ ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಆದರೆ ವೀರಶೈವಕ್ಕೆ ಶೈವವು ಹಿನ್ನೆಲೆಯಾಗಿದ್ದು ಶೈವದ ಮಹಾಪುರುಷರ ಚರಿತ್ರೆಗಳನ್ನು ತಿಳಿಯುವುದು ಅವಶ್ಯವಿರುವುದರಿಂದ ಈ ಮುನಗೋಳಿ ಶಾಸನದ ಬಸವನು ಯಾರೆಂಬುದನ್ನು ಕಂಡು ಹಿಡಿಯಲು ಮತ್ತೆ ಚರಿತ್ರಕಾರರು ಶ್ರಮಿಸಬೇಕಾಗುತ್ತದೆ.

•

---

# ರಾ॥ ಸಾ॥ ಪಿ. ಜಿ. ಹಳಕಟ್ಟಿಯವರ

# ಬೆಂಗಳೂರು ಸಾಹಿತ್ಯಪರಿಷನ್ಮಂದಿರದಲ್ಲಿ ಭಾಷಣ.

(ಕನ್ನಡನುಡಿ ಪತ್ರಿಕೆಯಿಂದ)

---

ಶ್ರೀಮಾನ್ ಪಿ. ಜಿ. ಹಳಕಟ್ಟಿಯವರು ೩೧-೮ ೩೯ ನೆಯ ತಾರೀಖು ಬೆಂಗಳೂರು ಕನ್ನಡ ಸಾಹಿತ್ಯಪರಿಷನ್ಮಂದಿರನಲ್ಲಿ "ಶರಣಸಾಹಿತ್ಯ"ವೆಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಶ್ರೀ. ಬೆಸಗಲ್ ರಾಮರಾಯರವರು ಅಧ್ಯಕ್ಷತೆಯನ್ನು ವಹಿಸಿದ್ದರು. ರಾವಸಾಹೇಬರವರು ಮಾಡಿದ ಭಾಷಣದ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.

ಶರಣಸಾಹಿತ್ಯದಲ್ಲಿ ಐತಿಹಾಸಿಕ ಮತ್ತು ಪಾರಿಭಾಷಿಕ ವಿಷಯಗಳು ಹೇರಳವಾಗಿವೆ. ಅವುಗಳ ಸಂಶೋಧನಾಕಾರ್ಯವು ಬಹಳ ಕಷ್ಟವಾದುದು. ಇದರಿಂದ ಅನೇಕರಿಗೆ ಈ ಸಾಹಿತ್ಯದ ಪರಿಚಯವಿಲ್ಲವಾಗಿ, ಅದು ಇನ್ನೂ ಅಜ್ಞಾತಾವಸ್ಥೆಯಲ್ಲೇ ಇದೆ. ಶರಣಸಾಹಿತ್ಯವು ಜನತೆಯ ಧಾರ್ಮಿಕ ಸಂಸ್ಕೃತಿಯಲ್ಲಿ ಸುಧಾರಣೆಯ ಬೆಳಕನ್ನು ಬೀರಲು ಸೃಷ್ಟಿಸಲ್ಪಟ್ಟಿತು. ಇದು ನದಿನದಗಳಿಂದ ಕೂಡಿ ಪ್ರವಾಹದಂತೆ ಹರಿದಿದೆ. ಈ ಮಹತ್ತರವಾದ ಸಾಹಿತ್ಯದಲ್ಲಿ ಶೈವ ಸಂಸ್ಕೃತಿಯ ಕಿಡ್ಡಿಗಳು ಹೊರಹೊಮ್ಮುತ್ತಿವೆ. ಶೈವ ಸಂಸ್ಕೃತಿಯ ವರ್ಚಸ್ಸು ವೈದಿಕ ಸಂಸ್ಕೃತಿಯ ಮೇಲೂ, ವೈದಿಕ ಸಂಸ್ಕೃತಿಯ ಪರಿಣಾಮವು ಶೈವ ಸಂಸ್ಕೃತಿಯ ಮೇಲೂ ಬೀಳುತ್ತಾ ಬಂದಿರುವುದು ಈ ಸಾಹಿತ್ಯದಿಂದ ಸ್ಪಷ್ಟಪಡುತ್ತದೆ.

ಐತಿಹಾಸಿಕ ದೃಷ್ಟಿಯಿಂದ ಮಹೇಂಜದಾರೋ ಮೊದಲಾದ ಸಂಶೋಧನೆಗಳ ಆಧಾರದಿಂದ ಶೈವ ಸಂಸ್ಕೃತಿಯು ಬಹಳ ಪುರಾತನವಾದುದೆಂದು ಗೊತ್ತಾಗುತ್ತದೆ. ಅಗಸ್ತ್ಯರು ಶೈವ ಸಂಸ್ಕೃತಿಯನ್ನು ಪಡೆದು ಅದನ್ನು ಹೆಚ್ಚಿಸಿದರೆಂದು ದಂತಕತೆಯೊಂದಿದೆ. ಅದು ಹೇಗಾದರೂ ಇರಲಿ. ಶೈವ ಸಂಸ್ಕೃತಿಯು ಇಂಡಿಯಾ ದೇಶದಿಂದಾಚೆಗೆ ಹರಿದು ಸಿಂಹಳ ಮತ್ತು ಜಾವಾ ದ್ವೀಪಗಳಿಗೂ ವ್ಯಾಪಿಸಿದ್ದಿತೆಂಬುದು ಅಲ್ಲಿ ಈಗಲೂ ಇರುವ ಭಗ್ನಾವಶೇಷಗಳಾದ ಶಿವದೇವಾಲಯಗಳಿಂದ ಕಂಡುಬರುತ್ತದೆ.

ಕರ್ನಾಟಕ ಇತಿಹಾಸವನ್ನು ಕೂಲಂಕಷವಾಗಿ ಇನ್ನೂ ಪರಿಶೋಧಿಸಿಲ್ಲ. ನಮಗೆ ಈಗ ಸಿಕ್ಕಿರುವ ಸಾಹಿತ್ಯಸಾಧನಗಳಿಂದ ೧೦-೧೧ನೆಯ ಶತಮಾನಗಳು ಕರ್ನಾಟಕದಲ್ಲಾದ ಮಹತ್ತರ ಸುಧಾರಣೆಗಳನ್ನು ತೋರಿಸುತ್ತವೆ. ಶರಣಸಾಹಿತ್ಯ ಬೆಳೆದದ್ದರ ಕಾಲ ೧೧೨೭ ರಿಂದ ೧೧೭೦ ರ ವರೆಗೆ. ಉತ್ತರ ಕರ್ನಾಟಕದ ಧಾರ್ಮಿಕ ಕ್ರಾಂತಿಯನ್ನು ಈ ಸಾಹಿತ್ಯವು ಚೆನ್ನಾಗಿ ಚಿತ್ರಿಸಿರುತ್ತದೆ. ವಚನಕಾರರೇ ಈ ಕ್ರಾಂತಿಯ ಉತ್ಪನ್ನಕಾರರು. ಧಾರ್ಮಿಕ ಪ್ರಭಾವವನ್ನು ಎಲ್ಲೆಡೆಯಲ್ಲಿಯೂ ಅವರು ಬೀರಿದರು.

ಈ ವಚನ ಸಾಹಿತ್ಯದ ಪ್ರಸ್ತಾಪ ಮಾಡುವಾಗ ಒಂದು ವಿಷಯವನ್ನು ಮುಖ್ಯವಾಗಿ ನಮ್ಮ ಗಮನದಲ್ಲಿಡಬೇಕು. ಎಲ್ಲ ತತ್ವಗಳ ಸಾರವನ್ನು ಜನರಲ್ಲಿ ಈ ವಚನಕಾರರು ಬೀರಿದ್ದಾರೆ. ಇವರ ಷಟ್‌ಸ್ಥಲ ಸಿದ್ಧಾಂತದಲ್ಲಿ ಸಾಂಖ್ಯ ಯೋಗ ಈ ಮುಂತಾದ ಸಿದ್ಧಾಂಗಗಳ ಗೆರೆಗಳಿವೆ. ನೀತಿಶಾಸ್ತ್ರವನ್ನೂ ಮನಸ್ ಶಾಸ್ತ್ರವನ್ನೂ ಇವರು ಪ್ರತಿಪಾದಿಸಿರುವುದಲ್ಲದೆ, ಯೋಗಶಾಸ್ತ್ರವೂ ಈ ವಾಙ್ಮಯದಲ್ಲಿ ಅಡಕವಾಗಿದೆ. ವಚನಕಾರರು ಆಗಮಗಳಲ್ಲಿಯ ಪೂಜಾಪದ್ಧತಿ, ಜೈನರ ಅಹಿಂಸಾ ತತ್ವ, ಇವುಗಳನ್ನು ಹೇಳಿದ್ದಾರೆ. ಆಗ ಪ್ರಬಲವಾಗಿದ್ದ ಆಗಮದ ತತ್ವದ ಜೊತೆಗೆ ನೈತಿಕ ಮಾರ್ಗವನ್ನು ಮಿಳಿತ ಮಾಡಿ ಈ ಷಟ್‌ಸ್ಥಲಗಳನ್ನು ರಚಿಸಿದ್ದಾರೆ. ಸಾಂಖ್ಯ ಸಿದ್ಧಾಂತದ ಇಪ್ಪತ್ತೈದು ತತ್ವಗಳನ್ನು, ಮನೋಧರ್ಮದ ಆಧಾರದ ಮೇಲೆ ನಿಲ್ಲಿಸಿದ್ದಾರೆ. ಪ್ರಗತಿಯನ್ನು ಶಾಸ್ತ್ರ ದೃಷ್ಟಿಯಿಂದ ರಚಿಸಿದ್ದಾರೆ. ಷಟ್‌ಸ್ಥಲಗಳು ಆರು ಮೆಟ್ಟಲುಗಳಂತಿವೆ. ಇದರಲ್ಲಿ ಮನುಷ್ಯನ ಗುರಿಯಾದ ಆನಂದವನ್ನೂ, ಸುಖವನ್ನೂ, ಧಾರ್ಮಿಕ ಮತ್ತು ಪಾರಮಾರ್ಥಿಕ ದೃಷ್ಟಿಯಿಂದ ಕಲ್ಪಿಸಿದ್ದಾರೆ.

ವಚನಕಾರರು ಶಿವಶರಣರು, ನುಡಿದುದನ್ನು ನಡೆದವರು. ಅವರ ಮನಸ್ಸಿನಲ್ಲಿ ಓಜಸ್ಸಿನ ಪ್ರಭೆಯಿದೆ. ಅವರ ಅಷ್ಟಾವರಣದಲ್ಲಿ ಆಂತರಂಗಿಕ ಆಚರಣೆಯ ಪ್ರಸ್ತಾಪವಿದೆ. ಮನುಷ್ಯನ ಮನೋವಿಕಾಸಕ್ಕೆ ಬೇಕಾದ ಬೆಳಕನ್ನು ಅದರ ಮೂಲಕ ನೀಡಿದ್ದಾರೆ.

ವಚನಕಾರರ ಸಂಖ್ಯೆ ೨೧೨ ಎಂದು ಭಾವಿಸಲಾಗಿದ್ದಿತು. ಅದು ಈಗ ೨೭೦ರ ವರೆಗೂ ಏರಿದೆ. ಇನ್ನೂ ಸಂಶೋಧನೆ ನಡೆದಲ್ಲಿ ಈ ಸಂಖ್ಯೆಯು ಇಮ್ಮಡಿಯಾಗುವದೆಂಬ ಭರವಸೆಯುಂಟು. ವಚನಕಾರರು

ಒಂದು ನಾಡಿನವರಲ್ಲ. ಉತ್ತರ ಕರ್ನಾಟಕ, ಮೈಸೂರು ಮತ್ತು ತೆಲಗು ರಾಷ್ಟ್ರಗಳಲ್ಲಿಯೂ ವಚನಕಾರರಿದ್ದರು. ಉರಿಲಿಂಗಪೆದ್ದಿ ತೆಲಗು ನಾಡಿನವನು. ಆತನು ಮೊದಲು ಕಳ್ಳನಾಗಿದ್ದು, ಉರಿಲಿಂಗ ಶಿವಯೋಗಿಗಳ ಕ್ರಿಯೆಗಳನ್ನು ನೋಡಿ ಪರಿವರ್ತನೆಯನ್ನು ಹೊಂದಿದನು. ಪ್ರಸಿದ್ಧ ವಚನಕಾರನಾದನು.

ವೀರಶೈವರು ಬ್ರಾಹ್ಮಣರಿಗೂ ಜೈನರಿಗೂ ವಿರೋಧಿಗಳಾಗಿ ಪ್ರಚಾರಕ್ಕೆ ನಿಂತರೆಂದು ಹೇಳುವದು ತಪ್ಪು. ಜೈನ ಕವಿಗಳನೇಕರು ವೀರಶೈವ ರಾಜ್ಯಗಳಲ್ಲಿದ್ದು ಅನೇಕ ಜೈನ ಗ್ರಂಥಗಳನ್ನು ಬರೆದಿದ್ದಾರೆ. ಜೈನ ಕ್ಷತ್ರಿಯರು ವೀರಶೈವ ವಧುಗಳನ್ನು ಮದುವೆಯಾಗುತ್ತಿದ್ದರು. ಪರಸ್ಪರ ಸ್ನೇಹ ಸೌಹಾರ್ದಗಳು ಇದ್ದವು. ಬ್ರಾಹ್ಮಣ, ಜೈನ, ವೀರಶೈವ ಸಂಸ್ಕೃತಿಗಳು ತ್ರಿವೇಣೀ ಪ್ರವಾಹಗಳಾಗಿ ಹರಿದು, ಒಂದಕ್ಕೊಂದಕ್ಕೆ ವಿಘಾತಮಾಡದೆ ನಾಡಿನ ಮೇಲ್ಮೆಗಾಗಿ ಕೆಲಸ ಮಾಡಿವೆ.

ಕೆಲವು ಗ್ರಂಥಗಳಲ್ಲಿ ಶಿವಭಕ್ತರಲ್ಲದವರ ವಿಷಯದಲ್ಲಿ ಕಠಿಣ ಮಾತುಗಳಿರಬಹುದು. ಶಿವಶರಣರು ಸಮಾಜ ಸುಧಾರಕರು. ಅವರು ಕೆಡುಕು ಬುದ್ಧಿಯ ಜನರನ್ನು ಬಹಳವಾಗಿ ಹಳಿದಿದ್ದಾರೆ. ಅವರಲ್ಲಿ ಬಲಾತ್ಕಾರದಿಂದ ಧರ್ಮಪರಿವರ್ತನೆ ಮಾಡಿರುವ ಸಂದರ್ಭಗಳಿಲ್ಲ.

ಶಿವಶರಣರು ಅಸೂಯೆ ದ್ವೇಷಗಳಿಗೆ ಯಾವಾಗಲೂ ಎಡೆಕೊಡಲಿಲ್ಲ. ಅವರ ಜೀವನವು ಪರಿಶುದ್ಧವಾಗಿದ್ದಿತು. ಉಚ್ಚ ಭಾವನೆಯೇ ನಿಜವಾದ ವಾಙ್ಮಯದ ಕಣ್ಣು ಮತ್ತು ಉಸಿರು. ಉಚ್ಚ ಸಿದ್ಧಾಂತವನ್ನು ನೆಲೆಗೊಳಿಸುವುದಕ್ಕಾಗಿ ಈ ವಚನಕಾರರು ದುಡಿದಿರುತ್ತಾರೆ. ಇವರು ಅರಸರ ಮನ್ನಣೆಗೆ ಅಪೇಕ್ಷೆಪಡಲಿಲ್ಲ. ಸಮಾಜದ ಸ್ತುತಿಯನ್ನು ಬಯಸಲಿಲ್ಲ. ನುಡಿಯಂತೆ ನಡೆದರು. ಉಚ್ಚತರದ ಧರ್ಮವನ್ನು ಬೋಧಿಸಿ ಕೃತಕೃತ್ಯರಾದರು.

---

೧೦. ಕಂಜನಾಭಿಯಲ್ಲಿ ಕುಂಜರ ಬಂದು ಮಂದಿರವರೆಲ್ಲರಕೊಂಡಿತ್ತು. ಕುಂಜರನ ಬೆಂಬಳಿಯುವರಲ್ಲದೆ ಕುಂಜರನ ಸಂದ ಮುರಿವರಿಲ್ಲ ಅರ್ಕೇಶ್ವರಲಿಂಗದ ಒಲುಮೆ ಇದ್ದವರಿಗಲ್ಲದೆ ಸಾಧ್ಯವಾಗದು.

ಟೀಕು :– ದಶದಳ ಪದ್ಮವನುಳ್ಳ ಮಣಿಪೂರಕ ಚಕ್ರದಲ್ಲಿ ಎಂಬುದೀಗ ಕಂಜನಾಭಿಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಣಿಪೂರಕ ಚಕ್ರದಲ್ಲಿ ಅಹಂಕಾರಸ್ಥಃರುದ್ರ ಎಂದುದಾಗಿ ಅಂತಪ್ಪ ರುದ್ರನಿಂದಹಂಕಾರ ಹುಟ್ಟಿತೆಂಬುದೀಗ ಕಂಜನಾಭಿಯಲ್ಲಿ ಕುಂಜರ ಬಂದು ಎಂಬ ಶಬ್ದಕ್ಕರ್ಥ ದೇಹಸಂಬಂಧಿಗಳಪ್ಪ ಸಕಲ ಜೀವರುಗಳನು ಆ ಅಹಂಕಾರವೇ ಅವಗ್ರಹಿಸಿಕೊಂಡು ಮರ್ದಿಸಿತ್ತೆಂಬುದೀಗ ಮಂದಿರದವರೆಲ್ಲರ ಕೊಂಡಿತ್ತೆಂಬ ಶಬ್ದಕ್ಕರ್ಥ. ಸಕಲಾತ್ಮರುಗಳು ಅಹಂಕಾರದಲ್ಲಿ ವರ್ತಿಸುತ್ತಿಹರಲ್ಲದೆ ಆ ಅಹಂಕಾರದ ನಿವೃತ್ತಿಯ ಮಾಡಲರಿಯರೆಂಬುದೀಗ ಕುಂಜರನ ಬೆಂಬಳಿಯುವರಲ್ಲದೆ ಕುಂಜರನಸಂದ ಮುರಿವವರಿಲ್ಲವೆಂಬ ಶಬ್ದಕ್ಕರ್ಥ. ಶಿವನಕೃಪೆಯುಳ್ಳ ಶಿವಶರಣರಿಗಲ್ಲದೆ ಅಹಂಕಾರವಳಿದು ನಿರಹಂಕಾರ ನೆಲೆಗೊಳ್ಳದೆಂಬುದೀಗ ಅರ್ಕೇಶ್ವರಲಿಂಗದ ಒಲುಮೆ ಇದ್ದವರಿಗಲ್ಲದೆ ಸಾಧ್ಯವಾಗದು ಎಂಬ ಶಬ್ದಕ್ಕರ್ಥ.

೧೧. ಕಾಳಾಡಿನ ಕಾಲುಕಡಿದು, ಕೋಡಗನ ಹಲ್ಲು ಕಿತ್ತು, ಓಡಾಡುವ ಎರಳೆಯ ತಿರುಳ ತಿಂದು, ಉಡುವಿನ ಕುಡಿ ನಾಲಗಿಯ ಕುಡಿವೆಡವರಿದು ತಿಂದು ದಿನವು ಕಳೆಮಳಿದಾತ ಎನ್ನ ಗುರುವು ಏತಕ್ಕೆಂದರೆ ಅರ್ಕೇಶ್ವರಲಿಂಗವನರಿವುದಕ್ಕೆ ತೆರನಾಗಿ ಇರಿರಣ್ಣಾ,

೧೨. ನಾಯಿಗೆ ಕಾಲ ಕೊಟ್ಟು ತೊಳೆಗೆ ಹೊಟ್ಟೆಯ ಕೊಟ್ಟು ಹುಲಿಗೆ ತಲೆಯ ಕೊಟ್ಟು, ಮೆಲಿಸಿಕೊಂಬವರೆಲ್ಲರು ಬಲವಂತತನವೆ ಅದರ ಸಲೆ ಒಲುಮೆ ಅರ್ಕೇಶ್ವರಲಿಂಗವನರಿವವರಿಗಲ್ಲದೆ ಆಗದು.

ಟೀಕು :– ನಾಯಿಯೆಂದೊಡೆ ಇಂದ್ರಿಯಂಗಳು, ಅಂತಪ್ಪ ಇಂದ್ರಿಯಂಗಳು ಪ್ರವರ್ತನೆಯಿಂ ಸತ್ಕ್ರಿಯೆಯ ನಷ್ಟವ ಮಾಡಿದನೆಂಬುದೀಗ ನಾಯಿಗೆ ಕಾಲ ಕೊಟ್ಟು ಎಂಬ ಶಬ್ದಕ್ಕರ್ಥ. ವ್ಯಾಧಿ ಒಂದು ಆತ್ಮನನವಗ್ರಹಿಸಿದಲ್ಲಿ ಅಂತರಂಗ ಸುಜ್ಞಾನ ನಷ್ಟವಾಯಿತ್ತೆಂಬುದೀಗ ತೊಳಗೆ ಹೊಟ್ಟೆಯಕೊಟ್ಟು ಎಂಬ ಶಬ್ದಕ್ಕರ್ಥ. ಕಾಲವ್ಯಾಘ್ರನ ಬಾಧೆಯಿಂದ ಆತ್ಮಂಗೆ ಶಿವಜ್ಞಾನ ನಷ್ಟವಾಗಿ ಹೋಯಿತ್ತೆಂಬುದೀಗ ಹುಲಿಗೆ ತಲೆಯ

ಕೊಟ್ಟು ಎಂಬ ಶಬ್ದಕ್ಕರ್ಥ. ಇಂದ್ರಿಯಂಗಳಿಂ ಸತ್ಕ್ರಿಯೆಯನು ವ್ಯಾಧಿಯಿಂ ತನ್ನ ನಿಜದರಿವನು ಕಾಲನಿಂ ಶಿವಜ್ಞಾನವ ಮಾಡುವವರೆಲ್ಲರಿಕ್ಕು ಜ್ಞಾನದ ಸಮರ್ಥಿಕೆ ಇಲ್ಲವೆಂಬುದೀಗ ಮೆಲಿಸಿಕೊಂಬುವರೆಲ್ಲಕ್ಕು ಬಲವಂತತನವೆಂಬ ಶಬ್ದಕ್ಕರ್ಥ ಇಂದ್ರಿಯಂಗಳು ಮೊದಲಾದ ಸಕಲಪ್ರಪಂಚ ಗೆಲುವುದು ಶಿವಕೃಪಾಪ್ರಸನ್ನತ್ವವುಳ್ಳ ಶರಣರಿಗಲ್ಲದೆ ಸಾಧ್ಯವಾಗದೆಂಬುದೀಗ ಅದರ ಸಲೆ ಬಲುಮೆ ಅರ್ಕೇಶ್ವರಲಿಂಗವನರಿದವರಿಗಲ್ಲದೆ ಆಗದು ಎಂಬ ಶಬ್ದಕ್ಕರ್ಥ.

೧೩. ನೊಣ ರಣವ ಹೊಕ್ಕು ಶೋಣಿತವ ಭುಂಜಿಸುವಾಗ ಕೇಣಸರದ ಭಟರೆಲ್ಲರು ನೊಣದ ರಾವಡಿಗಂಜಿ ಹೇಳದೆ ಹೋದರು ಅರ್ಕೇಶ್ವರಲಿಂಗವನರಿಯರಣ್ಣಾ.

ಟೀಕು:— ಜಿಗುಪ್ಸೆಮಯವಾದ ಮಾಯೆ ಎಂಬುದೀಗ ನೊಣವೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆ ಜೀವನ್ಮೃತವಾದ ಸಕಲ ಕರಣಂಗಳನವಗ್ರಹಿಸಿದಳೆಂಬುದೀಗ ನೊಣ ರಣವ ಹೊಕ್ಕು ಎಂಬ ಶಬ್ದಕ್ಕರ್ಥ. ಸಂಸಾರ ವಿಷಯರಸವ ಸೇವಿಸುತ್ತಿಹಳು ಮಾಯೆ ಎಂಬುದೀಗ ಶೋಣಿತವ ಭುಂಜಿಸುವಾಗ ಎಂಬ ಶಬ್ದಕ್ಕರ್ಥ. ನಾ ಘನ ತಾ ಘನವೆಂದು ಪಂಥ ಪರಾಕ್ರಮವ ನುಡಿವ ಅದ್ವೈತ ಜ್ಞಾನಿಗಳೆಲ್ಲರು ಎಂಬುದೀಗ ಕೇಣಸರದ ಭಟರೆಲ್ಲರು ಎಂಬ ಶಬ್ದಕ್ಕರ್ಥ. ಅಂತಪ್ಪ ಅದ್ವೈತ ಜ್ಞಾನಿಗಳು ಮಾಯಾಭಯಕ್ಕಂಜಿ ಶಿವೋಹಂ ಭಾವವಿಲ್ಲದೆ ಅಹಂಕಾರದಲ್ಲಿ ಲಯವಾಗಿ ಹೋದರೆಂಬುದೀಗ ನೊಣದ ರಾವಡಿಗಂಜಿ ಹೇಳದೆ ಹೋದರು ಅರ್ಕೇಶ್ವರಲಿಂಗವನರಿಯರಣ್ಣಾ ಎಂಬ ಶಬ್ದಕ್ಕರ್ಥ.

೧೪. ಆಕಾಶದ ಮಧ್ಯದಲ್ಲಿ ಒಬ್ಬದು ಭೇಕನುಡಿವುತ್ತದೆ ಅದು ಅನೇಕ ಗೀತ ವಾದ್ಯ ನೃತ್ಯಗಳಿಂದ ಆಡುತ್ತಿದ್ದಿತ್ತು. ಎನ್ನಾಟವ ನೋಡುವರಿಲ್ಲವೆಂದು ನೆಲೆಗೆಳೆಯುತ್ತ ತನ್ನಂಗವ ಅದು ನಿರ್ಜಾತನ ಒಲುಮೆ ಅರ್ಕೇಶ್ವರಲಿಂಗವ ನರಿವುದಕ್ಕೆ ತೆರವಾಗಿರಣ್ಣಾ.

ಟೀಕು:— ಬ್ರಹ್ಮರಂಧ್ರಸ್ಥಾನದಲ್ಲಿ ಎಂಬುದೀಗ ಆಕಾಶದ ಮಧ್ಯದಲ್ಲಿ ಒಂಬ ಶಬ್ದಕ್ಕರ್ಥ. ಅಂತಪ್ಪ ಬ್ರಹ್ಮರಂಧ್ರಸ್ಥಾನದಲ್ಲಿ ಪರಮಶಾಂತಿಸ್ವರೂಪವಾದ ಚಿದ್ಬಿಂದು ಶಿವೋಹಂ ಶಿವೋಹಂಮೆನುತ್ತಿರ್ದಿತ್ತೆಂಬುದೀಗ ಒಂದು ಭೇಕ ನುಡಿವುತ್ತದೆ ಎಂಬ ಶಬ್ದಕ್ಕರ್ಥ. ಅಂತಪ್ಪ

ಶಿವೋಽಹಂ ಭಾವದಲ್ಲಿರ್ಪ ಚಿತ್ಸ್ವರೂಪವಾದ ಶರಣನು ಪ್ರಾಣವನುಚ್ಚರಿಸು ತ್ತಿರ್ದನೆಂಬುದೀಗ ಅದು ಅನೇಕ ಗೀತವೆಂಬ ಶಬ್ದಕ್ಕರ್ಥ. ಆ ಪ್ರಣವವ ನುಚ್ಚರಿಸುತ್ತಿರ್ದ ಶರಣಂಗೆ ಪಂಚಬ್ರಹ್ಮವನೊಳಕೊಂಡು ಪಂಚಾಕ್ಷರಂ ಗಳು ತೋರುತ್ತಿಹವೆಂಬುದೀಗ ವಾದ್ಯವೆಂಬ ಶಬ್ದಕ್ಕರ್ಥ. ಆ ಶರಣನು ಅಭಿನ್ನಕ್ರಿಯಾಚಾರವಿಡಿದು ಆಚರಿಸುತ್ತಿರ್ದನೆಂಬುದೀಗ ನೃತ್ಯಂಗಳಿಂದ ಆಡುತ್ತಿರ್ದಿತ್ತೆಂಬ ಶಬ್ದಕ್ಕರ್ಥ. ಸರ್ವಾಂಗ ಲಿಂಗಿ ಸಂಬಂಧಿಯಾಗಿ ಅಭಿನ್ನಕ್ರಿಯೆವಿಡಿದಾಚರಿಸುತ್ತಿರ್ದ ಶರಣನ ಚರಿತ್ರವು ದ್ವೈತಾದ್ವೈತಗ ಳಿಗೆ ಸಾಧ್ಯವೆಂಬುದೀಗ ಎನ್ನಾಟವ ನೋಡುವರಿಲ್ಲವೆಂದು ಎಂಬ ಶಬ್ದ ಕ್ಕರ್ಥ. ಆ ಚಿತ್ಸ್ವರೂಪನಾದ ಶರಣ ತನ್ನ ದಿವ್ಯ ಕಾಯವನು ಚಿದ್ಘ ನಲಿಂಗ ಏಕಾರ್ಥವ ಮಾಡುವದು ಜನನ ಮರಣ ರಹಿತವಾದ ಶ್ರೀಗುರು ವಿನ ಕೃಪೆ ಎಂಬುದೀಗ ನೆಲೆಗಳೆಯಿತ್ತು ತನ್ನಂಗವ ಅದು ನಿಜಾರ್ ತನ ಒಲುಮೆ ಅರ್ಕೇಶ್ವರಲಿಂಗವನರಿವುದಕ್ಕೆ ತೆರವಾಗಿರಣ್ಣಾ ಎಂಬ ಶಬ್ದಕ್ಕರ್ಥ.

೧೫. ವನದ ಬಾಳೆಯ ಗೊನೆಯ ಕೊಯ್ದ ಕಳ್ಳನ ಅವಸ್ಥೆಯಲ್ಲಿ ಹೋಗಿ ಹೆಡಗುಡಿಯ ಕಟ್ಟಿ ಬಾಧಿಸಿ ಗೊನೆಯ ತೋರೆಂದಡೆ ಗೊನೆಮ ನೆಯೊಳಗದೆಯೆಂದೆ ಮನೆಯಾಕೆಯ ಕೇಳಿದೊಡೆ ಗೊನೆಯ ನಾ ತಿಂದೆ ಕಳ್ಳನ ತಲೆಯ ಕುಟ್ಟಿ ಎನ್ನದ ಕೊಯ್ದುಕೊಳ್ಳಿ ಎಂದಳು ಅರ್ಕೇಶ್ವರ ಲಿಂಗವ ಒಲ್ಲಡೆ.

ಟೀಕು :— ಚಿದರಣ್ಯಸ್ವರೂಪವಾದ ಷಡಾಧಾರ ಚಕ್ರಂಗಳೆಂಬು ದೀಗ ವನವೆಂಬ ಶಬ್ದಕ್ಕರ್ಥ. ಆ ಚಕ್ರಂಗಳಿಗೆ ಮಧ್ಯಸ್ಥಾನವಾದ ಹೃದ ಯಕಮಲವೆಂಬುದೀಗ ಬಾಳೆಯೆಂಬ ಶಬ್ದಕ್ಕರ್ಥ. ಆ ಹೃತ್ಕಮಲ ಕರ್ಣಿಕಾಮಧ್ಯದಲ್ಲಿ ಮುಕ್ತಿಫಲಸ್ವರೂಪವಾದ ಪರಮಾತ್ಮಲಿಂಗವಿರುತ್ತಿ ಹುದೆಂಬುದೀಗ ಗೊನೆಯ ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವನವಗ್ರ ಹಿಸಿ ಕೂಡಿರ್ಪಾತನೇ ಸಕಲ ಪ್ರಪಂಚಿಗೆ ವಿಲಕ್ಷಣವಾದ ಜ್ಞಾನಗುರುತ್ವ ವೆಂಬುದೀಗ ಗೊನೆಯ ಕೊಯ್ದು ಕಳ್ಳನ ಎಂಬ ಶಬ್ದಕ್ಕರ್ಥ. ಆ ಜ್ಞಾನ ಗುರು ಆಚರಿಸುತ್ತಿರ್ಪ ಸತ್ಪಥಮಾರ್ಗವಿಡಿದು ಶರಣನೆಯ್ದುತ್ತಿರ್ದನೆಂಬು ದೀಗ ಅವಸ್ಥೆಯಲ್ಲಿ ಹೋಗಿ ಎಂಬ ಶಬ್ದಕ್ಕರ್ಥ. ಆ ಗುರು ಮಾರ್ಗ ಆಚಾರವಿಡಿದಯ್ದುತ್ತಿರ್ದನೆಂಬುದೀಗ ಹೆಡಗುಡಿಯ ಕಟ್ಟಿ ಎಂಬ ಶಬ್ದ ಕ್ಕರ್ಥ. ತನ್ನ ಸ್ವಾನುಭಾವದಲ್ಲಿ ಸಂಬಂಧವಾದ ಜ್ಞಾನಗುರುವಿಂಗೆ

ಭಕ್ತಿಯಿಂದುಪಾವಸ್ಥೆಯ ಮಾಡಿ ತನ್ನ ನಿಜವಸ್ತು ಪರಬ್ರಹ್ಮವ ಬೆಸಗೊಳ್ಳುತ್ತಿರ್ದನೆಂಬುದೀಗ ಬಾಧಿಸಿ ಗೊನೆಯ ತೋರೆಂದೊಡೆ ಎಂಬ ಶಬ್ದಕ್ಕರ್ಥ. ಆ ಮುಕ್ತಿ ಫಲ ಸ್ವರೂಪವಾದ ಚಿನ್ಮಯಲಿಂಗವು ನಿನ್ನ ನಿಜಾಂತರಂಗದಲ್ಲಿದೆ ಎಂದು ಅರುಹಿಕೊಡುತಿರ್ದನೆಂಬುದೀಗ ಗೊನೆ ಮನೆಯೊಳಗದೆ ಎಂಬ ಶಬ್ದಕ್ಕರ್ಥ. ಆ ಜ್ಞಾನಗುರು ಮುಖದಿಂ ವಿಚಾರಿಸುತ್ತಿರಲು ಅಂತರಂಗದಲ್ಲಿರ್ಪ ಜ್ಞಾನಶಕ್ತಿ ತನ್ನ ನಿಜವಸ್ತು ಪರಬ್ರಹ್ಮವನವಗ್ರಹಿಸಿದ ಭೇದವ ಶರಣಂಗರುಹಿತ್ತಿರ್ದರೆಂಬುದೀಗ ಮನೆಯಾಕೆ ಕೇಳಿದೊಡೆ ಗೊನೆಯ ನಾ ತಿಂದೆನೆಂಬ ಶಬ್ದಕ್ಕರ್ಥ. ಆ ಜ್ಞಾನಗುರು ತತ್ವವ ತನ್ನಿಂ ಭಿನ್ನವಿಟ್ಟರಿಯಬೇಕೆಂಬ ವೃತ್ತಿ ಜ್ಞಾನವೆಂಬ ಶಿರಸ್ಸು ಛೇದಿಸಿದನೆಂಬುದೀಗ ಕಳ್ಳನ ತಲೆಯ ಕುಟ್ಟಿ ಎಂಬ ಶಬ್ದಕ್ಕರ್ಥ. ಆ ಜ್ಞಾನಶಕ್ತಿ ತನ್ನ ನಿಜ ಸುಷುಪ್ತಿ ಸ್ಥಾನದಲ್ಲಿರ್ಪ ನಿರವಯ ಪರಬ್ರಹ್ಮವ ಸಾಧ್ಯವ ಮಾಡಿಕೋ ಎಂದು ಅರುಹುತಿದ್ದಳು ಶರಣಂಗೆಂಬುದೀಗ ಎನ್ನದ ಕೊಯ್ದುಕೊಳ್ಳಿ ಎಂದಳು ಅರ್ಕೇಶ್ವರ ಲಿಂಗವ ಬಲ್ಲಡೆ ಎಂಬ ಶಬ್ದಕ್ಕರ್ಥ.

೧೬. ಮೂರು ಸುರೆಯ ಕುಡಿದು ಅಡಗಿಸಿದವನೆನ್ನ ಗುರು ಕಾಳಾದ ಕಣ್ಣ ಕಿತ್ತು ಎರಳೆಯ ತಿರುಳ ತಿಂದು ದಿನವ ಕಳೆದುಳಿದವನೆನ್ನ ಗುರು ಆತ ಅರ್ಕೇಶ್ವರ ಲಿಂಗಕ್ಕೆ ಸಿಕ್ಕಿದ.

ಟೀಕು:— ಮೂರು ಸುರೆಯೆಂದೊಡೆ ಅನ್ನಪಾನ ಐಶ್ವರ್ಯಪಾನ ಅಧರಪಾನವೆಂಬ ತ್ರಿವಿಧವನು ನಿವೃತ್ತಿಯ ಮಾಡಿದಾತ ಸುಜ್ಞಾನ ಸ್ವರೂಪನಾದ ಶ್ರೀಗುರುವೆಂಬುದೀಗ ಮೂರು ಸುರೆಯ ಕಡಿದು ಎಂಬ ಶಬ್ದಕ್ಕರ್ಥ. ಆ ಮೂರರನು ನಿವೃತ್ತಿಯ ಮಾಡಿದನೆಂಬ ಚಿದಹಂಕಾರವನು ಮಹಾಘನಲಿಂಗದ ನಿಷ್ಪತ್ತಿಯ ಮಾಡಿದಾತನೇ ಶ್ರೀಗುರುವೆಂಬುದೀಗ ಅಡಗಿಸಿದವನೆನ್ನ ಗುರು ಎಂಬ ಶಬ್ದಕ್ಕರ್ಥ. ಆ ಚಿದಹಂಕಾರವ ನಿಷ್ಪತ್ತಿಯ ಮಾಡಿದಾತನೆ ಶ್ರೀಗುರು ಅಜ್ಞಾನ ಸಂಬಂಧಿಯಪ್ಪ ಜೀವನ ವೃತ್ತಿಜ್ಞಾನವ ನಷ್ಟವ ಮಾಡಿದನೆಂಬುದೀಗ ಕಾಳಾದ ಕಣ್ಣ ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಜೀವನ ನಿವೃತ್ತಿಯಾದಲ್ಲಿ ಅಂತರಾತ್ಮನೊಳಗಿರ್ಪ ಸಕಲ ಕರಣಂಗಳ ಸುಜ್ಞಾನ ಮುಖದಿಂ ನಿವೃತ್ತಿಯ ಮಾಡಿದನೆಂಬುದೀಗ ಎರಳೆಯ ತಿರುಳ ತಿಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಶ್ರೀಗುರುವಿನ ಕಾಲಕಲ್ಪಿತಂಗಳ ಕಳೆದು ಅಂಗದಿಂದೊಪಗುವ

ಘಿನ್ನ ಫಲಪದಂಗಳ ನಿವೃತ್ತಿಮಾಡಿ ನಿತ್ಯ ಸ್ವರೂಪವಾಗಿರ್ದನೆಂಬುದೀಗ ದಿನವ ಕಳೆದುಳಿದವನೆನ್ನ ಗುರು ಆತ ಅರ್ಕೇಶ್ವರಲಿಂಗಕ್ಕೆ ಸಿಕ್ಕಿದಾತ ಎಂಬ ಶಬ್ದಕ್ಕರ್ಥ

೧೭. ಮತ್ಸ್ಯ ಹೊಳೆಯ ನುಂಗಿ ಮೊಸಳೆ ಮಡುವ ನುಂಗು ವಾಗ ಅಡಗಿರ್ದ ನೋಡಿ ಕಂಡೆ ಕೊಡಗೂಸ ಅಡಗುವ ಠಾವ ಒಡ ಗೂಡಿದಲ್ಲದೆ ಕಾಣಬಾರದು ಅರ್ಕೇಶ್ವರ ಲಿಂಗವನರಿವುದಕ್ಕೆ.

ಟೀಕು – ಜೀವಾತ್ಮನೆಂಬುದೀಗ ಮತ್ಸ್ಯ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಶಿವ ಕೃಪೆಯಿಂ ಸಮ್ಯಜ್ಞಾನೋದಯವಾಗಲು ಸಂಸಾರ ರಸಾಂಬುಧಿಯನವಗ್ರಹಿಸಿ ನಷ್ಟವ ಮಾಡಿದನೆಂಬುದೀಗ ಮತ್ಸ್ಯ ಹೊಳೆಯ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಂಸಾರ ನಷ್ಟವಾಗಲು ಶರಣ ತನ್ನ ಶಿವಭಾವದಿಂ ಸೂತಕವ ಕಾಣಬಾರದೆ ಇರ್ದ ಮಾಯಾ ಪ್ರಪಂಚವ ನಷ್ಟವ ಮಾಡಿದನೆಂಬುದೀಗ ಮೊಸಳೆ ಮಡುವ ನುಂಗು ವಾಗ ಎಂಬ ಶಬ್ದಕ್ಕರ್ಥ. ಆ ಪ್ರಪಂಚ ನಿವೃತ್ತಿಯಾಗಲು ಚಿತ್ಸ್ವ ರೂಪನಾದ ಶರಣ ತನಗೆ ಮಾತೃಸ್ಥಾನವಾದ ಜ್ಞಾನಶಕ್ತಿಯನು ಸುಜ್ಞಾನ ದೃಷ್ಟಿಯಿಂ ಕಂಡೆನೆಂಬುದೀಗ ಅಡಗಿರ್ದ ನೋಡಿ ಕಂಡೆ ಕೊಡಗೂಸ ಎಂಬ ಶಬ್ದಕ್ಕರ್ಥ. ಆ ಶರಣನಡಗುವ ಠಾವೆಂದೊಡೆ ಮಹಾಜ್ಞಾನ ಚಿತ್ತು. ಆ ಚಿತ್‌ಶಕ್ತಿಯಲ್ಲಿ ಸಮರಸವಾದಲ್ಲದೆ ತನ್ನ ನಿಜವಪ್ಪ ಪರ ಬ್ರಹ್ಮವನರಿಯಬಾರದೆಂಬುದೀಗ ಅಡಗುವ ಠಾವ ಒಡಗೂಡಿದಲ್ಲದೆ ಕಾಣಬಾರದು ಅರ್ಕೇಶ್ವರ ಲಿಂಗವನರಿವುದಕ್ಕೆ ಎಂಬ ಶಬ್ದಕ್ಕರ್ಥ.

೧೮. ಭವಸಾಗರವೆಂಬ ಸಮುದ್ರದಲ್ಲಿ ಸಾಕಾರವೆಂಬ ಹಡಗು ಚೇತನವೆಂಬ ಅಶ್ವ ಕಟ್ಟಿ ಬರುತ್ತಿರಲಾಗಿ ತ್ರಿವಿಧದ ಬಲುಗಿರಿಯ ಹಾಯ್ದು ಹಡಗೊಡೆಯಿತ್ತು ಲಾಯದ ಅಶ್ವ ನೀರನೊಡಗೂಡಿತ್ತು ಹಡಗಿನ ಸೆಟ್ಟಿ ಪರಪತಿಗೆಡಹಿಲ್ಲಾ ಎಂದು ಕುದುರೆಯನೊಡಗೂಡಿ ಅರ್ಕೇಶ್ವರಲಿಂಗವ ಕೇಳುವ ಬನ್ನಿ.

ಟೀಕು — ಭವಾಂಬುಧಿಯೆಂಬುದೀಗ ಭವಸಾಗರವೆಂಬ ಸಮುದ್ರದಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸಾಗರ ವಿಷಯ ರಸಾಂಬುಧಿಯ ಮಧ್ಯದಲ್ಲಿ ಪಂಚ ಭೌತಿಕ ಸಂಬಂಧವಾದ ದೇಹವಿರುತ್ತಿಹುದೆಂಬುದೀಗ ಸಾಕಾರ ವೆಂಬ ಹಡಗು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಜೀವಾತ್ಮ ನೆಂಬ ಕುದುರೆ ವಾಯು ಪಾಶದಿಂ ಬಿಗಿವಡೆದು ಭವಕ್ಕೆ ಬರುತ್ತಿಹ

ನೆಂಬುದೀಗ ಚೇತನವೆಂಬ ಅಪ್ಪ ಕಟ್ಟಿ ಬರುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪಾತ್ಮಂಗೆ ಸುಜ್ಞಾನೋದಯವಾಗಿ ಗುರೂಪಾವಸ್ಥೆಯ ಮಾಡಲು ಶ್ರೀಗುರು ಕಾರುಣ್ಯದಿಂದಂತರ್ಗತವಾಗಿರ್ಪ ಸಚ್ಚಿದಾನಂದ ಸ್ವರೂಪವಾದ ಗುರುಲಿಂಗ ಜಂಗಮವೇ ಪ್ರಭಾಪಿಸಿ ಅಂಗತ್ರಯಂಗಳ ನವಗ್ರಹಿಸಿದಲ್ಲಿ ದೇವಭಾವ ನಷ್ಟನಾಯಿತ್ತೆಂಬುದೀಗ ತ್ರಿವಿಧವ ಜಲುಗಿರಿಯ ಹಾಯ್ದು ಹಡಗೊಡೆಯಿತ್ತೆಂಬ ಶಬ್ದಕ್ಕರ್ಥ. ಆ ದೇಹಭಾವ ನಷ್ಟವಾದಲ್ಲಿ ಅಂತರಂಗದಲ್ಲಿರ್ಪ ಜೀವಾತ್ಮನು ಪರಮಾನಂದ ಸ್ವರೂಪವಾದ ಸದ್ವಿವೇಕ ಜಲದಲ್ಲಿ ಸಮರಸವಾದನೆಂಬುದೀಗ ಲಾಯದ ಅಶ್ವ ನೀರನೊಡಗೂಡಿತ್ತೆಂಬ ಶಬ್ದಕ್ಕರ್ಥ. ದೇಹಭಾವ ನಷ್ಟವಾಗಿ ಸರ್ವಾಂಗವು ಚಿದಂಗ ಸ್ವರೂಪವಾದ ಶರಣನು ಇದಿರಿಟ್ಟು ಬಾಹ್ಯ ಕ್ರಿಯೆಗಳ ಮಾಡಿ ಫಲಪದಂಗಳ ಪಡೆಯಲಿಲ್ಲವೆಂಬುದೀಗ ಹತಗಿನ ಸಿಟ್ಟ ಪರಸತಿಗಡಹಿಲ್ಲ ಎಂಬ ಶಬ್ದಕ್ಕರ್ಥ. ಅ ಭಿನ್ನಮುಕ್ತಿಯ ಕಾಮಿಸದೆ ಇರ್ಪ ಶರಣನು ತನ್ನಾತ್ಮ ಚೈತನ್ಯ ಸ್ವರೂಪವಾದ ಪ್ರಣವ ಮಧ್ಯದಲ್ಲಿ ಏಕಾರ್ಥವಾಗಿ ಲಿಂಗವ ಬೆಸಗೊಳುತಿರ್ದನೆಂಬುದೀಗ ಕುದುರೆಯನೊಡಗೂಡಿ ಅರ್ಕೇಶ್ವರ ಲಿಂಗವ ಕೇಳುವ ಬನ್ನಿ ಎಂಬ ಶಬ್ದಕ್ಕರ್ಥ.

೧೯. ಊರೊಳಗಣ ದೇವಾಲಯದಲ್ಲಿ ಐವರು ಹೊಲೆಯರು ಹೊಕ್ಕು ದೇವರು ಪೂಜಿಸುತ್ತೈದಾರೆ. ಹೊಲೆಯರು ಮುಟ್ಟಿ ದೇವಾಲಯ ಹೊರಗಾಯಿತ್ತು. ದೇವರೊಳಗದೆ ಕುಲಜರು ಹೊಲಬುದಪ್ಪಿ ಹೊಲೆಗೊಳಗಾಯಿತ್ತು ಅರ್ಕೇಶ್ವರಲಿಂಗವನರಿತ ಕಾರಣ.

ಟೀಕು:—ಪಂಚಭೂತಯುಕ್ತವಾದ ದೇಹವೆಂಬ ಗ್ರಾಮವೆಂಬುದೀಗ ಊರೆಂಬ ಶಬ್ದಕ್ಕರ್ಥ. ಆ ದೇಹಮಧ್ಯದಲ್ಲಿ ನಿಜಾಂತರಂಗ ಚಿದಾಲಯವಿರುತ್ತಿಹುದೆಂಬುದೀಗ ಊರೊಳಗಣ ದೇವಾಲಯವೆಂಬ ಶಬ್ದಕ್ಕರ್ಥ. ಆ ಚಿದಾಲಯದಲ್ಲಿರ್ಪ ಚಿದ್ಘನಲಿಂಗವ ಕೊಡಬೇಕೆಂದು ಪಂಚಕರಣಂಗಳು ಸುಜ್ಞಾನ ಮಾರ್ಗವಿಡಿದಯ್ದಿ ಹೃದಯಕಮಲವೆಂಬ ಸದ್ವಾಸನಾ ಪುಷ್ಪವನು ಸುಜ್ಞಾನಹಸ್ತದಿಂ ಕೊಯ್ದು ಪೂಜಿಸುತ್ತಿಹರೆಂಬುದೀಗ ಐವರು ಹೊಲೆಯರು ಹೊಕ್ಕು ದೇವರ ಪೂಜಿಸುತ್ತಿದ್ದಾರೆ ಎಂಬ ಶಬ್ದಕ್ಕರ್ಥ. ಆ ಪಂಚಕರಣಂಗಳು ಪ್ರಾಣಲಿಂಗದಲ್ಲಿ ಸಮರಸವಾಗಲು ಶರಣನ ಚಿದಾಲಯವು ಬಹಿರಂಗದ ಭಿನ್ನಕ್ರಿಯಾಚಾರದಲ್ಲಿ ಸಂಬಂಧವಾಯಿತ್ತೆಂಬುದೀಗ ಹೊಲೆಯರು ಮುಟ್ಟಿ ದೇವಾಲಯ ಹೊರಗಾಯಿತ್ತೆಂಬ ಶಬ್ದ

ಕ್ಕರ್ಥ. ತನ್ನ ನಿಜವಪ್ಪ ಪರಬ್ರಹ್ಮವು ಶರಣನಂತರಂಗದಲ್ಲಿ ಸಾಹಿತ್ಯವಾಗಿಹುದೆಂಬುದೀಗ ದೇವರೊಳಗದೆ ಎಂಬ ಶಬ್ದಕ್ಕರ್ಥ. ಶಿವಸತ್ಕುಲಜರಪ್ಪ ಸಕಲ ಕರಣಂಗಳ ಖಂಡಿತ ಹೊಲಬು ತಪ್ಪಿ ಸರ್ವಸೂತಕರಹಿತವಾದ ಪರವಸ್ತುವಿನಲ್ಲಿ ಏಕಾರ್ಥವಾದ ಎಂಬುದೀಗ ಕುಲಜರು ಹೊಲಬುದಪ್ಪಿ ಹೊಲೆಗೊಳಗಾಯಿತ್ತು ಅರ್ಕೇಶ್ವರಲಿಂಗವನರಿತಕಾರಣ ಎಂಬ ಶಬ್ದಕ್ಕರ್ಥ.

೨೦. ಆಡಿದ ಕಾಲಕಡಿದು ಕೋಡಗದ ಹಲ್ಲು ಕಿತ್ತು ಉಡುವಿನ ಕುಡಿನಾಲಿಗೆಯು ಒಡಗೂಡಿ ತಿಂದು ಮತ್ತೊಡೆಯುನನರಿಯಬೇಕು ಅರ್ಕೇಶ್ವರಲಿಂಗವ.

ಟೀಕು — ರಜೋಗುಣಸಂಬಂಧವಾದ ಸ್ಥೂಲತನುವಿನಲ್ಲಿರ್ಪ ಜೀವನ ದುಶ್ಚರಿತ್ರವೆಂಬ ಚರಣವ ಸುಜ್ಞಾನದಿಂ ಛೇದಿಸಿದನೆಂಬುದೀಗ ಆಡಿನ ಕಾಲ ಕಡಿದು ಎಂಬ ಶಬ್ದಕ್ಕರ್ಥ. ಆ ಜೀವನ ದುಶ್ಚರಿತ್ರ ನಷ್ಟವಾಗಲು ಮನಸ್ಸಿನ ಸಂಕಲ್ಪ ವಿಕಲ್ಪವೆಂಬ ದಂತಭಗ್ನವ ಮಾಡಿದನೆಂಬುದೀಗ ಕೋಡಗನ ಹಲ್ಲು ಕಿತ್ತು ಎಂಬ ಶಬ್ದಕ್ಕರ್ಥ. ಅಂತು ಮನಸ್ಸಿನ ಸಂಕಲ್ಪ ವಿಕಲ್ಪ ನಷ್ಟವಾಗಲು ತಮೋಗುಣ ಸಂಬಂಧವಾದ ಕಾರಣ ತನುವಿನ ಭಿನ್ನಾಪೇಕ್ಷೆಯ ಮಹಾಜ್ಞಾನದಲ್ಲಿ ಅವಗ್ರಹಿಸಿದನೆಂಬುದೀಗ ಉಡುವಿನ ಕುಡಿನಾಲಿಗೆಯು ಒಡಗೂಡಿ ತಿಂದು ಎಂಬ ಶಬ್ದಕ್ಕರ್ಥ. ಅಂತು ತತ್ವಂಗಳು ನಿವೃತ್ತಿಯಾದಲ್ಲಿ ತನ್ನ ನಿಜವಪ್ಪ ಪರಬ್ರಹ್ಮವ ಕೂಡಬೇಕೆಂದು ಭಕ್ತಿಯಿಂದುಪಾವಸ್ಥೆಯ ಮಾಡುತಿರ್ದನೆಂಬುದೀಗ ಮತ್ತೊಡೆಯುನ ನರಿಯಬೇಕು ಅರ್ಕೇಶ್ವರಲಿಂಗವ ಎಂಬ ಶಬ್ದಕ್ಕರ್ಥ.

೨೧. ಸತ್ತವನ ಮನೆಯಲ್ಲಿ ಹೊತ್ತವರೆಲ್ಲರು ಅಳುತಿರ್ದರು. ಮತ್ತೊಬ್ಬನ ಮದುವೆಗೆ ನಿಬ್ಬಣಕ್ಕೆ ಬಂದು ಮದುಮಗನ ಕಾಣದೆ ಮನೆಮನೆಯ ಹೊಕ್ಕು ಸುತ್ತುತ್ತೈದಾರೆ ಕೇಳುವ ಬನ್ನಿ ಅರ್ಕೇಶ್ವರ ಲಿಂಗವ.

ಟೀಕು:— ಶಿವಜ್ಞಾನ ನಷ್ಟವಾಗಿರ್ಪ ಜೀವಂಗಾಶ್ರಯವಾದ ದೇಹವೆಂಬುದೀಗ ಸತ್ತವನ ಮನೆಯಲ್ಲಿ ಎಂಬ ಶಬ್ದಕ್ಕರ್ಥ ಅಂತಪ್ಪ ದೇಹದಲ್ಲಿ ಸಾಕಾರವಾದ ಇಷ್ಟಲಿಂಗವ ಭಿನ್ನವಿಟ್ಟು ಧರಿಸಿಕೊಂಡು ಭಿನ್ನಕ್ರಿಯೆವಿಡಿದಾಚರಿಸಿ ಭಿನ್ನಫಲ ಪದಂಗಳ ಭೋಗಂಗಳ ಪಡೆದು

ಸಂಸಾರದಲ್ಲಿ ದುಃಖಜೀವಿಗಳಾಗಿರುತ್ತಿಹರು ದ್ವೈತಿಗಳೆಂಬುದೀಗ ಹೊತ್ತವರೆಲ್ಲರು ಅಳುತಿರ್ದರೆಂಬ ಶಬ್ದಕ್ಕರ್ಥ ಮತ್ತೊಬ್ಬನೆಂದೊಡೆ ಚೈತನ್ಯಸ್ವರೂಪನಾದ ಪ್ರಾಣಲಿಂಗವು ಅಂತಪ್ಪ ಪ್ರಾಣಲಿಂಗದಲ್ಲಿ ಸಮರಸವನೆಯ್ದಬೇಕೆನುತ್ತಿಹರು ಅದ್ವೈತಿಗಳೆಂಬುದೀಗ ಮತ್ತೊಬ್ಬನ ಮದುವೆಗೆ ನಿಬ್ಬಣಕ್ಕೆ ಬಂದು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅದ್ವೈತ ಜ್ಞಾನಕ್ಕೆ ಅಸಾಧ್ಯವಾಯಿತ್ತೆಂಬುದೀಗ ಮದುವಳಿಗನ ಕಾಣದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಅಸಾಧ್ಯವಾದ ಪರಬ್ರಹ್ಮವ ಷಡಾಧಾರ ಚಕ್ರದಲ್ಲಿ ಷಟ್‌ಸೋಪಾನವಿಟ್ಟರಿಸುತ್ತಿಹರೆಂಬುದೀಗ ಮನೆಮನೆಯ ಹೊಕ್ಕು ಸುತ್ತುತ್ತೈದಾರೆ ಎಂಬ ಶಬ್ದಕ್ಕರ್ಥ. ಇಂತಪ್ಪ ದ್ವೈತಕ್ರಿಯೆ ಅದ್ವೈತಜ್ಞಾನವ ಶಿವಾದ್ವೈತ ಭಕ್ತಿಯಿಂ ಕಡೆಮೆಟ್ಟಿ ಶ್ರೀಗುರು ಕರುಣದಿಂ ಸರ್ವಾಂಗಲಿಂಗ ಸಂಬಂಧವಾಗಿ ಶಿವತತ್ವದಲೈಯ್ದುವ ಮೋಕ್ಷ ಮಾರ್ಗವ ಜ್ಞಾನಗುರು ಮುಖದಿಂ ಬೆಸಗೊಳುತಿರ್ದನೆಂಬುದೀಗ ಕೇಳುವ ಬನ್ನಿ ಅರ್ಕೇಶ್ವರ ಲಿಂಗವ ಎಂಬ ಶಬ್ದಕ್ಕರ್ಥ

೨೨. ಬೆಲ್ಲವ ಮೆಲುವಾತನ ಹಲ್ಲು ಕಡಿಯಾಗಿ ಹುಲ್ಲು ಕಲ್ಲಿನೊಳಗಾಗಿ ಅಲ್ಲಿಯೇ ಅಡಗಿ ನೋಡುತ್ತದೆ. ಅದನ್ನು ನಾವು ನೀವು ಅರಿವ ಬನ್ನಿ ಅರ್ಕೇಶ್ವರ ಲಿಂಗವ ಬಲ್ಲವರಹರೆ.

ಟೀಕು:— ಅಖಂಡ ಪರಿಪೂರ್ಣ ಜ್ಞಾನವಪ್ಪ ಚಿದ್ಘನಲಿಂಗವೆಂಬುದೀಗ ಬಲ್ಲವ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದ್ಘನಲಿಂಗವ ಭಿನ್ನವಿಟ್ಟರ್ಚಿಸಿ ಪೂಜಿಸಿ ಫಲಪದಂಗಳ ಪಡೆದು ಭೋಗಿಸುತ್ತಿಹರು ದ್ವೈತಿಗಳೆಂಬುದೀಗ ಬೆಲ್ಲವ ಮೆಲುವಾತನ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಸಕಲ ಕರಣಂಗಳೆಲ್ಲವು ವಿಷಯ ಪ್ರಪಂಚಿನಲ್ಲಿ ಮಗ್ನವಾಗಿಹರೆಂಬುದೀಗ ಹಲ್ಲು ಕಡಿಯಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ವಿಷಯರೂಪವಾದ ಕರುಣಂಗಳೆಲ್ಲ ಅಹಂವೆಂಬ ಅಹಂಕಾರಕ್ಕೀಡಾಗಿರುತ್ತಿಹವೆಂಬುದೀಗ ಹಲ್ಲು ಕಲ್ಲಿನೊಳಗಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರದಲ್ಲಿ ಲಯವಾದ ಜೀವನು ಭಿನ್ನಜ್ಞಾನದಿಂದ ಲಿಂಗವ ನೆರಡಿಟ್ಟು ನೋಡುತ್ತಿಹನೆಂಬುದೀಗ ಅಲ್ಲಿಯೇ ಅಡಗಿ ನೋಡುತ್ತದೆ ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಎರಡಿಟ್ಟಾಚರಿಸುವ ಭಿನ್ನಕ್ರಿಯಾಚಾರವ ನಷ್ಟವ ಮಾಡಿ ಶ್ರೀಗುರು ಕಾರುಣ್ಯದಿಂ